ಶ್ರೀ ಶಾರ್ಙ್ಗದೇವ ವಿರಚಿತ

# ಸಂಗೀತ ರತ್ನಾಕರ

## " ನಿಃಶಂಕಹೃದಯ " ವೆಂಬ ಕನ್ನಡ ವ್ಯಾಖ್ಯಾನ ಸಮೇತ

ಸಂಪುಟ ೧, ಭಾಗ ೧

## ಸ್ವರಗತಾಧ್ಯಾಯ (ಪ್ರಕರಣಗಳು 1-3)


ಅನುವಾದ ಮತ್ತು ವ್ಯಾಖ್ಯಾನ :

**ರಾ. ಸತ್ಯನಾರಾಯಣ,** ಎಂ.ಎಸ್ಸಿ.,

(ಮೈಸೂರು ಸಹೋದರರು)

ಗೌ॥ ಸಂಗೀತಶಾಸ್ತ್ರ ಪ್ರಾಧ್ಯಾಪಕ,

ಶ್ರೀ ವರಲಕ್ಷ್ಮೀ ಅಕಾಡಮಿ ಆಫ್ ಫೈನ್ ಆರ್ಟ್ಸ್, ಮೈಸೂರು





ಪ್ರಸಾರಾಂಗ

ಮೈಸೂರು ವಿಶ್ವವಿದ್ಯಾನಿಲಯ

1968

(169)

N. Ramanathan.

|| ಶ್ರೀಃ ||

ಶ್ರೀ ಶಾರ್ಙ್ಗದೇವ ವಿರಚಿತ

# ಸಂಗೀತ ರತ್ನಾಕರ

"ನಿಃಶಂಕಹೃದಯ" ವೆಂಬ ಕನ್ನಡ ವ್ಯಾಖ್ಯಾನ ಸಮೇತ

ಸಂಪುಟ ೧, ಭಾಗ ೧

## ಸ್ವರಗತಾಧ್ಯಾಯ (ಪ್ರಕರಣಗಳು 1-3)

ಅನುವಾದ ಮತ್ತು ವ್ಯಾಖ್ಯಾನ :

**ರಾ. ಸತ್ಯನಾರಾಯಣ,** ಎಂ.ಎಸ್‌ಸಿ.,

(ಮೈಸೂರು ಸಹೋದರರು)

ಗೌ|| ಸಂಗೀತಶಾಸ್ತ್ರ ಪ್ರಾಧ್ಯಾಪಕ,

ಶ್ರೀ ವರಲಕ್ಷ್ಮೀ ಅಕಾಡಮಿ ಆಫ್ ಫೈನ್ ಆರ್ಟ್ಸ್, ಮೈಸೂರು




**ಪ್ರಸಾರಾಂಗ**

ಮೈಸೂರು ವಿಶ್ವವಿದ್ಯಾನಿಲಯ

**1968**

ಪ್ರಥಮ ಮುದ್ರಣ ೧೯೬೮



ಪ್ರಕಾಶಕರು :
ಡೈರೆಕ್ಟರ್, ಪ್ರಸಾರಾಂಗ
ಮಾನಸಗಂಗೋತ್ರಿ
ಮೈಸೂರು-೬

**ಬೆಲೆ :**
**ಸಾದಾ ಪ್ರತಿ: ೧೮ ರೂ.**
**ಉತ್ತಮ ಪ್ರತಿ : ೨೫ ರೂ.**

ಮುದ್ರಕರು : ಡಿ. ರಾಜರತ್ನಂ
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು

# ಮುನ್ನುಡಿ

ವಿದ್ಯಾಭ್ಯಾಸದ ಸರ್ವ ಶ್ರೇಣಿಗಳಲ್ಲಿಯೂ ದೇಶಭಾಷೆ ಶಿಕ್ಷಣ ಮಾಧ್ಯಮವಾಗಬೇಕಾದುದು ಅತ್ಯವಶ್ಯವಾಗಿದೆ. ಇದು ಒಬ್ಬಿಬ್ಬರು ಭಾಷಾಭಿಮಾನಿಗಳು ದುರುದ್ದೇಶದಿಂದಾಗಲಿ, ಪಕ್ಷಪಾತ ಮನೋಭಾವದಿಂದಾಗಲಿ ಹೇಳುವ ಮಾತಲ್ಲ. ರಾಷ್ಟ್ರದ ಸರ್ವತೋಮುಖವಾದ ಪ್ರಗತಿ ಮತ್ತು ವಿದ್ಯಾರ್ಥಿಗಳ ಸರ್ವಾಂಗೀಣ ವಿಕಾಸ—ಇವುಗಳ ಹಿನ್ನೆಲೆಯಲ್ಲಿ ನಡೆಸಿದ ಕೂಲಂಕಷವಾದ ಚರ್ಚೆ ಮತ್ತು ಸರ್ವಂಕಷವಾದ ವಿಚಾರಮಥನಗಳ ಫಲವಾಗಿ ಸಿದ್ಧಿಸಿದ ತತ್ತ್ವವಿದು. ಡಾ|| ಅಮರನಾಥ ಝಾ ರಂಥ ಶ್ರೇಷ್ಠ ಶಿಕ್ಷಣತಜ್ಞರಿಂದ ಹಿಡಿದು ಮಹಾತ್ಮಾ ಗಾಂಧೀಜಿಯಂಥ ರಾಷ್ಟ್ರನಾಯಕರವರೆಗೆ ಎಲ್ಲರೂ ದೇಶಭಾಷಾ ಮಾಧ್ಯಮದ ಸಾರ್ಥಕತೆಯನ್ನು ಒತ್ತಿಹೇಳಿದ್ದಾರೆ. ಹಿಂದಿನ ಆಂಗ್ಲ ಸರ್ಕಾರ ನೇಮಿಸಿದ್ದ ಸ್ಯಾಡ್ಲರ್ ವಿಚಾರಣಾ ಸಮಿತಿ ಮತ್ತು ಹಾರ್ಟೋಗ್ ಸಮಿತಿಗಳೂ ಸರ್ ಚಾರ್ಲ್ಸ್ ವುಡ್, ಸರ್ ಸಾರ್ಜಂಟ್ ಮೊದಲಾದ ವಿದೇಶೀಯ ಶಿಕ್ಷಣತಜ್ಞರೂ, ದೇಶಭಾಷಾ ಮಾಧ್ಯಮದಿಂದಲ್ಲದೆ ಭಾರತೀಯರ ಶಿಕ್ಷಣ ಸಫಲವಾಗದೆಂದೂ ಸಮರ್ಪಕವಾಗದೆಂದೂ ಏಕಕಂಠದಿಂದ ಸಾರಿದ್ದಾರೆ.

ಈ ಶಿಕ್ಷಣಸೂತ್ರವನ್ನು ದೃಷ್ಟಿಯಲ್ಲಿಟ್ಟುಕೊಂಡೇ ಭರತಖಂಡದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ದೇಶಭಾಷಾ ಮಾಧ್ಯಮ ಯಶಸ್ವಿಯಾಗಿ ಕಾರ್ಯಗತವಾಗುತ್ತಿದೆ. ನಾಗಪುರ, ಅಲಹಾಬಾದ್, ಕಾಶಿ ಮೊದಲಾದ ವಿಶ್ವವಿದ್ಯಾನಿಲಯಗಳಿಂದ ಅಧಿಕೃತವಾಗಿ ದೊರೆತ ವರದಿಗಳಿಂದ ವಿದ್ಯಾರ್ಥಿಗಳು ಆದರಪೂರ್ವಕವಾಗಿ ಅನಿರ್ಬಂಧವಾಗಿ ದೇಶಭಾಷಾ ಮಾಧ್ಯಮವನ್ನು ಆರಿಸಿಕೊಳ್ಳುತ್ತಿರುವುದೂ, ಅದರಿಂದ ಪರೀಕ್ಷೆಗಳಲ್ಲಿ ಫಲಿತಾಂಶ ತುಂಬಾ ಆಶಾದಾಯಕವಾಗಿ ಗೋಚರಿಸುತ್ತಿರುವುದೂ ಸುಸ್ಪಷ್ಟವಾಗುತ್ತಿದೆ.

ದೇಶಭಾಷಾ ಮಾಧ್ಯಮ ಬೇಡವೆನ್ನುವ ಸಂಪ್ರದಾಯಶರಣರ ಸಂಖ್ಯೆ ಈಗೀಗ ಬಹುಮಟ್ಟಿಗೆ ಇಳಿಮುಖವಾಗುತ್ತಿದ್ದರೂ ಅಲ್ಲೊಬ್ಬರು ಇಲ್ಲೊಬ್ಬರು ಇನ್ನೂ ಇದ್ದಾರೆ. ಅವರು ತಮ್ಮ ನಿಲುವನ್ನು ಸಾಧಿಸಲು ಕೊಡುವ ಮುಖ್ಯ ಕಾರಣಗಳಿವು :

೧. ದೇಶಭಾಷೆಗಳಲ್ಲಿ ಪಾರಿಭಾಷಿಕ ಅಥವಾ ವೈಜ್ಞಾನಿಕ ಪದಗಳ ದಾರಿದ್ರ್ಯ.

೨. ಗ್ರಂಥಗಳ ಅಭಾವ.

೩. ವಿವಿಧ ಪ್ರಾಂತಗಳ ವಿದ್ವಾಂಸರ ಸಂಪರ್ಕಕ್ಕೆ ಮತ್ತು ಸರ್ಕಾರಿ ನೌಕರರ ಪರಸ್ಪರ ವಿನಿಮಯಕ್ಕೆ ಅಡಚಣೆ.

ಈ ಕಾರಣಗಳು ಸಂಪೂರ್ಣ ನಿರಾಧಾರವೆಂಬುದು ಕೆಳಗಣ ವಿವರಣೆಯಿಂದ ವ್ಯಕ್ತವಾಗುತ್ತದೆ :

೧. ವೈಜ್ಞಾನಿಕ ಅಥವಾ ಪಾರಿಭಾಷಿಕ ವಿಷಯಗಳಿಗೆ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸುವ ಸಂಕಟಕ್ಕೆ ಗುರಿಯಾಗಬೇಕಾಗಿಲ್ಲ. ಅಂತರರಾಷ್ಟ್ರೀಯ ಶಬ್ದಗಳನ್ನೆ ಇದ್ದಹಾಗೆಯೆ ಬಳಸಿಕೊಳ್ಳಬಹುದು. ಆವಶ್ಯಕತೆ ಕಂಡುಬಂದರೆ ಮಾತ್ರ ವಿವರಣಾತ್ಮಕವಾಗಿ ದೇಶಭಾಷೆಯ ಶಬ್ದಗಳನ್ನು ಉಪಯೋಗಿಸಬಹುದು. ಪಾರಿಭಾಷಿಕ ಶಬ್ದಗಳು ವಾಸ್ತವವಾಗಿ ಅಂಕಿತನಾಮಗಳು ತಾನೆ! ಕೇಂದ್ರ ಸರ್ಕಾರದ ವಿದ್ಯಾಖಾತೆ ತಯಾರಿಸಿರುವ ಪಾರಿಭಾಷಿಕ ಪದಗಳ ಕೋಶ ಈ ತತ್ತ್ವವನ್ನೆ ಅವಲಂಬಿಸಿದೆ. ಮೈಸೂರು ವಿಶ್ವವಿದ್ಯಾನಿಲಯವೂ ಈ ಮಾರ್ಗವನ್ನೆ ಸಂಪೂರ್ಣವಾಗಿ ಅಂಗೀಕರಿಸಿದೆ.

೨. ಈಗಾಗಲೆ ಎಲ್ಲಾ ಭಾಷೆಗಳಲ್ಲಿಯೂ ವೈಜ್ಞಾನಿಕ ಗ್ರಂಥಗಳು ಹೊರಬೀಳುತ್ತಿವೆ. ಆವಶ್ಯಕತೆ ಹೆಚ್ಚಿದಂತೆಲ್ಲ ಅವುಗಳ ಸಂಖ್ಯೆಯೂ ಬೆಳೆಯುತ್ತಿದೆ. ಪೇಟೆಯಲ್ಲಿ ಗಿರಾಕಿ ಇದೆಯೆಂದು ತಿಳಿದರೆ ಸಾಕು ಗ್ರಂಥಗಳು ಲೆಕ್ಕವಿಲ್ಲದೆ ಹೊರಬರುತ್ತವೆ.

೩. ಅಂತರರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಬಿಡುವುದಿಲ್ಲವಾದುದರಿಂದಲೂ, ಹಿಂದಿ ಅಥವಾ ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಎಲ್ಲಾ ವಿದ್ಯಾರ್ಥಿಗಳು ಒಂದಲ್ಲ ಒಂದು ರೀತಿಯಲ್ಲಿ ಕಲಿಯಬೇಕಾಗಿರುವುದರಿಂದಲೂ ವಿದ್ವಾಂಸರ ಸಂಪರ್ಕಕ್ಕಾಗಲಿ, ಸರ್ಕಾರಿ ನೌಕರರ ವಿನಿಮಯಕ್ಕಾಗಲಿ ಅಡಚಣೆ ಆಗುವುದಿಲ್ಲ. ಈ ದೊಡ್ಡ ರಾಷ್ಟ್ರದಲ್ಲಿ ಸರ್ಕಾರಿ ನೌಕರರ ಸಂಖ್ಯೆ ಅತ್ಯಲ್ಪಭಾಗವೆನ್ನುವುದನ್ನೂ, ಈ ಅತ್ಯಲ್ಪ ಸಂಖ್ಯೆಯ ಸರ್ಕಾರಿ ನೌಕರರ ಹಿತಕ್ಕಾಗಿ ಇಡೀ ರಾಷ್ಟ್ರದ ಕಲ್ಯಾಣವನ್ನು ಬಲಿಗೊಡುವುದು ಸರಿಯಲ್ಲವೆಂಬುದನ್ನೂ ಮರೆಯಬಾರದು.

ಶ್ರೀ ಸತ್ಯನಾರಾಯಣ ಅವರು ವೃತ್ತಿಯಲ್ಲಿ ರಸಾಯನಶಾಸ್ತ್ರದ ಅಧ್ಯಾಪಕರು. ಆದರೆ ಸಂಗೀತ ಅವರ ಮನೆತನದ ರಕ್ತದಲ್ಲಿ ಹರಿಯುತ್ತಿದೆ. ಸಂಗೀತ ಶಾಸ್ತ್ರಕ್ಕೂ ಕಲೆಗೂ ಅವರು ಅವರ ಸೋದರ ವರ್ಗದವರೂ ಸಲ್ಲಿಸುತ್ತಿರುವ ಸೇವೆ ಸ್ತುತ್ಯವಾದದ್ದು. "ಸಂಗೀತ ರತ್ನಾಕರ" ವನ್ನು ಕನ್ನಡಿಗರಿಗೆ ಅವರು ಲಲಿತವಾದ ಆದರೆ ಪಾಂಡಿತ್ಯಪೂರ್ಣವಾದ ರೀತಿಯಲ್ಲಿ ಪರಿಚಯ ಮಾಡಿಕೊಟ್ಟು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಸಂಗೀತ ಶಾಸ್ತ್ರವನ್ನು ಕುರಿತು ಇನ್ನೂ ಅನೇಕ ಕೃತಿಗಳನ್ನು ಅವರು ಕನ್ನಡದಲ್ಲಿ ಬರೆದು ಹೆಚ್ಚಿನ ಸೇವೆ ಸಲ್ಲಿಸಲಿ ಎಂದು ಹಾರೈಸುತ್ತೇನೆ.

೧೬—೨—೧೯೬೮ ಮೈಸೂರು

**ಕೆ. ವಿ. ಪುಟ್ಟಪ್ಪ,**
ಪ್ರಧಾನ ಸಂಪಾದಕ.

# ಬಿನ್ನಹ

## ಸಂಗೀತಶಾಸ್ತ್ರ—ಏಕೆ ?

ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿದ ಈ ಎರಡು ದಶಕಗಳಲ್ಲಿ ನಾವು ನಮ್ಮ ನಾಡು, ನುಡಿಗಳನ್ನು ಹೊಸದಾಗಿ ಕಟ್ಟುವ ಸಾಹಸ, ಸಂಭ್ರಮಗಳಲ್ಲಿದ್ದೇವೆ. ಭಾರತೀಯ ಸಂಸ್ಕೃತಿಕುಂಡಲಿನಿಯು ಪೊರೆ ಕಳಚಿ ಅನಂತಕಾಲದ ವಿವೇಕ, ಗಾಂಭೀರ್ಯಗಳನ್ನೂ ಆಧುನಿಕತೆಯ ಹೊಸ ಜವ್ವನ, ಹೊಸ ಚೈತನ್ಯಗಳನ್ನೂ ನೈಗೂಡಿಸಿ ಕೊಂಡು ನವನವೋನ್ಮೇಷಶಾಲಿಯಾಗುವ ಲಕ್ಷಣಗಳು ಕಂಡುಬರುತ್ತಿವೆ. ಹೊಸ ಸೃಷ್ಟಿಯ ಹೆರಿಗೆಯ ನೋವನ್ನು ಭಾರತಮಾತೆಯು ಇಂದು ಅನುಭವಿಸುತ್ತಿದ್ದಾಳೆ ; ಇದು ಅನಿವಾರ್ಯ, ಸಹನೀಯ.

ನಾಳೆಗಾಗಿ ಇಂದು ಹಿಂದಿನವರ ಬುನಾದಿಯ ಮೇಲೆ ಕಟ್ಟಬೇಕಷ್ಟೆ. ಈ ನಮ್ಮ ಪುಣ್ಯಭೂಮಿಯಲ್ಲಿ ಹಿಂದಿನವರ ಮಹತ್ತು ಬೃಹತ್ತಾಗಿದೆ, ತ್ರಿಕಾಲಾಬಾಧಿತವಾಗಿದೆ ; ನಮ್ಮ ಪ್ರಾಚೀನ ಋಷಿಗಳು ಮಾನವ ಜ್ಞಾನಕೋಶದ ಎಲ್ಲ ದಿಕ್ಕುಗಳಿಗೂ ಸೀಮಾಪುರುಷರಾದರು ; ಎಲ್ಲ ಶಾಸ್ತ್ರಗಳಿಗೂ ವೇದೋಪವಸತಿಯನ್ನು ನಿರ್ಮಿಸಿ ಈ ಸಂಸ್ಕೃತಿಗೆ ಕಾಲದೇಶಗಳಲ್ಲಿ ಐಕ್ಯವನ್ನೂ, ಅದರ ಮೌಲ್ಯಗಳಿಗೆ ಕಾಲದೇಶಾತೀತವಾದ ಶಾಶ್ವತತೆ, ಅವಿಚ್ಛಿನ್ನತೆಗಳನ್ನೂ ತಂದುಕೊಟ್ಟು ಅದನ್ನು ದಿವ್ಯ-ಭವ್ಯವನ್ನಾಗಿ ಮಾಡಿದರು. ಹೀಗೆ ತಾಯಿಬೇರಿನಂತಿರುವ ಕೆಲವು ಆಧಾರಭೂತ ಕಲ್ಪನೆಗಳು ವಿಶ್ವವೇದಿಕೆಯ ಮೇಲೆ ಭಾರತೀಯ ಸಂಸ್ಕೃತಿ ಸರಸ್ವತಿಯು ಮಾಡಿದ, ಮಾಡುತ್ತಿರುವ ಸರ್ವಾಂಗಸುಂದರವಾದ ಲಾಸ್ಯವನ್ನೂ ವೀಣೆಯ ಸುಂದರ ಇಂಚರವನ್ನೂ ಒಂದುಮಾಡುವ ತಾಳ-ಲಯದ ಸ್ವರೂಪವನ್ನು ಪಡೆದವು. ಈ ಎಲ್ಲ ಶಾಸ್ತ್ರಗಳ ಸಮಗ್ರ ಪರಿಚಯದಿಂದಲೇ ಈ ಕಲ್ಪನೆಗಳ ಅರಿವು ಮೂಡಬಲ್ಲದು. ಇಂತಹ ವಿವಿಧ ಶಾಸ್ತ್ರಗಳ ಇಬ್ಬಗೆಯ ಲಕ್ಷಣವನ್ನು ಮುಂದಿನ ಪುಟಗಳಲ್ಲಿ (ಪು. 448–450) ಸೂಚಿಸಿದ್ದೇನೆ.

ಇವುಗಳಲ್ಲಿ ಸಂಗೀತಶಾಸ್ತ್ರವೂ ಒಂದು. ಮಾನವಚೇತನದ ಊರ್ಧ್ವಗಮನ ಪ್ರವೃತ್ತಿಯೂ ಶಾಶ್ವತ ಮೌಲ್ಯಗಳ ಅನ್ವೇಷಣವೂ ಸಂಸ್ಕೃತಿಯೆನ್ನಿಸಿದರೆ, ಅವುಗಳ ತಿರ್ಯಗ್ಗಮನವು ನಾಗರಿಕತೆಯೆನ್ನಿಸಿ ಲಲಿತಕಲೆಗಳೇ ಮೊದಲಾದ ರೀತಿಗಳಲ್ಲಿ ಅಭಿವ್ಯಕ್ತಿಯನ್ನು ಪಡೆಯುತ್ತವೆ. ಜೀವನದ ಸಮ್ಯಗ್‌ಸಮಗ್ರದರ್ಶನಕ್ಕೆ ಅನಿವಾರ್ಯವಾಗುವ ಅನುಭವಕೋಶದಲ್ಲಿ ಸಂಗೀತವೂ, ಜ್ಞಾನಕೋಶದಲ್ಲಿ ಅದರ ಶಾಸ್ತ್ರವೂ ಸೇರಿವೆ. ವೇದಸಂಸ್ಕೃತಿಯ ಚೌಕಟ್ಟಿನಲ್ಲಿ ನಮ್ಮ ಸಂಗೀತದ ಹಾಗೂ ಅದರ ಶಾಸ್ತ್ರದ ಸುಂದರವಾದ, ಅಚ್ಚಳಿಯದ ಚಿತ್ರವನ್ನು ನಮ್ಮ ಹಿರಿಯರು ಆಳವಾಗಿ, ಅನನ್ಯಸದೃಶವಾದ ಪಾಂಡಿತ್ಯದಿಂದ, ವ್ಯಾಪಕವೂ ವೈಜ್ಞಾನಿಕವೂ ಆದ ರೀತಿಯಿಂದ ಹೇಗೆ ಬಿಡಿಸಿದ್ದಾರೆ ಎಂಬ ಅಭ್ಯಾಸವು ಆಕರ್ಷಕವೂ ಹೌದು, ಆವಶ್ಯಕವೂ ಹೌದು.

ಎಂದೇ ಈ ಗ್ರಂಥ. ಸಂಗೀತವು ಕೇವಲ ಕೇಳಿ ಆನಂದಿಸಬೇಕಾದ ಕಲೆ, ಶಾಸ್ತ್ರವು ಕೇವಲ ಗ್ರಂಥಸ್ಥವಾದ, ಲಕ್ಷ್ಯವಿಧುರವಾದ ನಿಯಮಗಳ ಗೊಂದಲ, ಪ್ರಾಚೀನ ಸಂಗೀತಶಾಸ್ತ್ರಗ್ರಂಥಗಳು ಗತಕಾಲದ ಕತ್ತಲೆಯ ಗುಹೆಯಿಂದ ಅಗೆದು ತಂದ, ಪ್ರಾಚ್ಯವಸ್ತುಪ್ರದರ್ಶನಕ್ಕೆ ಮಾತ್ರ ಯೋಗ್ಯವಾದ ವಸ್ತುಗಳು ಎಂದು ಮುಂತಾಗಿ ಭಾವನೆ ತಳೆದವರಿಗೆ ಈ ಗ್ರಂಥದಲ್ಲಿ ರುಚಿಯೂ ಪ್ರಯೋಜನವೂ ಇರವು. ಸಂಗೀತದಲ್ಲಿಯೂ ಅದರ ಶಾಸ್ತ್ರದಲ್ಲಿಯೂ ಅವುಗಳನ್ನು ಮೀರಿದ, ಮಾನವಕೋಟಿಯ ಮುನ್ನಡೆಯಲ್ಲಿರುವ, ಮಹತ್ತಾದ ಇನ್ನೇನೋ ಇದೆ, ಅದನ್ನು ಅವುಗಳ ಮೂಲಕ ಅರಸುವ ಪ್ರಯತ್ನವನ್ನು ಮಾಡಬೇಕು ಎಂದು ನಾನು ನಮ್ರವಾಗಿ ನಂಬಿದ್ದೇನೆ.

## ಸಂಗೀತರತ್ನಾಕರ—ಏಕೆ ?

ಈ ಪ್ರಯತ್ನದ ಅಂಗವಾಗಿ ಈ ಸಂಗೀತರತ್ನಾಕರವನ್ನೂ ನಿಃಶಂಕಹೃದಯವನ್ನೂ ಕನ್ನಡ ಸರಸ್ವತಿಯ ಮೇರು ಸದೃಶವಾದ, ರವಿಕೋಟಿ ತೇಜಸ್ಸಿನ ತೇರಿಗೆ ಸಣ್ಣ ಸೊಡರಿನ ಆರತಿಯೆಂದು ಸಮರ್ಪಿಸುತ್ತಿದ್ದೇನೆ. ಸಂಗೀತ ರತ್ನಾಕರವನ್ನು ದೇವಗಿರಿಯ ಯಾದವಸಿಂಘಣದೇವನ ಕಂದಾಯದಮಂತ್ರಿಯಾಗಿದ್ದ ನಿಃಶಂಕಶಾರ್ಙ್ಗದೇವನು ಕ್ರಿ.ಶ. ಹದಿಮೂರನೆಯ ಶತಮಾನದ ಮೊದಲಲ್ಲಿ ಸಂಸ್ಕೃತದಲ್ಲಿ ರಚಿಸಿದನು. ಅವನು ಸೋಢಲದೇವನ ಪುತ್ರ, ಭಾಸ್ಕರದೇವನ ಪೌತ್ರ. ಅವನ ಸಂಗೀತರತ್ನಾಕರವನ್ನು ಕನ್ನಡಿಸಲು ಮತ್ತು ಅವನ ಹೃದಯಕ್ಕೆ ವ್ಯಾಖ್ಯಾನದಿಂದ ಕನ್ನಡದ ಕನ್ನಡಿಯನ್ನು ಹಿಡಿಯಲು ನನ್ನನ್ನು ಪ್ರೇರಿಸಿದ ಕಾರಣಗಳಲ್ಲಿ ಕೆಲವನ್ನಿಲ್ಲಿ ಸೂಚಿಸಬಹುದು: ಗೀತ, ವಾದನ, ನರ್ತನಗಳೆಲ್ಲವನ್ನೂ ಸಂಗೀತವೆಂಬ ಒಂದೇ ಶಬ್ದದ ಅರ್ಥದ ಪರಿಮಿತಿಯಲ್ಲಿ ವ್ಯವಸ್ಥಿತವೂ ವೈಜ್ಞಾನಿಕವೂ ಆದ ರೂಪದಲ್ಲಿ ಸಂಗೀತರತ್ನಾಕರವು ಮೊಟ್ಟಮೊದಲನೆಯ ಬಾರಿಗೆ ತಂದು ಅವುಗಳಿಗೂ ಅವುಗಳಲ್ಲಿ ಅಡಗಿದ ಮೌಲ್ಯಗಳಿಗೂ ವೇದೋಪವಸತಿಯನ್ನು ಪ್ರಪ್ರಥಮವಾಗಿ ನಿರ್ಮಿಸುತ್ತದೆ. ಭಾರತೀಯ ಸಂಸ್ಕೃತಿಯನ್ನು ಸಂಗೀತ ಶಾಸ್ತ್ರದ ಮೂಲಕ ಅಭ್ಯಾಸಮಾಡಲು ಇದೇ ಅತ್ಯಂತ ಸರಿಯಾದ ಗ್ರಂಥ. ಏಕೆಂದರೆ ಋಷಿದೃಷ್ಟಿಯನ್ನೂ ಕವಿಹೃದಯವನ್ನೂ ಶಾಸ್ತ್ರವೈದಗ್ಧ್ಯದ ಗರಿಷ್ಠಮಿತಿಯನ್ನೂ ಏಕಕಾಲದಲ್ಲಿ ಅತ್ಯುನ್ನತ ಮಟ್ಟದಲ್ಲಿ ಒಳಗೊಂಡ ಸಂಗೀತಶಾಸ್ತ್ರ ಗ್ರಂಥವು ಇದೊಂದೇ.

ಬೃಹತ್ತು ಮಹತ್ತುಗಳಲ್ಲಿಯೂ ಸಂಗೀತರತ್ನಾಕರವು ಸಾಟಿಯಿಲ್ಲದುದು. ಭಗವಾನ್ ಭರತಮುನಿಯು ನಾಟ್ಯಸರ್ವಸ್ವವನ್ನು ಆರುಸಾವಿರ ಶ್ಲೋಕಗಳಲ್ಲಿಯೂ ಗೀತ ವಾದಿತ್ರ ನರ್ತನಗಳನ್ನು ನಾಟ್ಯೋಪಕಾರಕಗಳೆಂದು ಮಾತ್ರ ಬಗೆದು ಸುಮಾರು ಒಂದು ಸಾವಿರ ಶ್ಲೋಕಗಳಲ್ಲಿ ಮಾತ್ರ ವರ್ಣಿಸಿದ್ದರೆ ಭಗವಾನ್ ಶ್ರೀ ಶಾರ್ಙ್ಗದೇವನು ವಾದಿತ್ರನರ್ತನಗಳನ್ನೇ ಸುಮಾರು ಐದುಸಾವಿರ ಶ್ಲೋಕಗಳಲ್ಲಿವರ್ಣಿಸಿದ್ದಾನೆ. ಇವುಗಳಲ್ಲಿಯಾದರೂ ಪ್ರತಿಯೊಂದು ಮಾತೂ,—ನಿಪಾತವೂ, ವಾಕ್ಯರಚನಾಕ್ರಮವೂ ಸಹ,—ಸೂತ್ರರೂಪದ್ದೇ ಆಗಿದೆ. ಮಹಾಭಾರತ ದಂತೆಯೇ ಸಂಗೀತರತ್ನಾಕರದಲ್ಲಿ ಹೇಳದಿದ್ದುದು ಬೇರೆಡೆ ಇಲ್ಲ, ಬೇರೆಡೆ ಇರುವುದೆಲ್ಲ ಇಲ್ಲಿದೆ. ನಮ್ಮ ಸಂಗೀತಕ್ಕೆ ಇದು ವೇದಸದೃಶವಾದುದು. ಅದನ್ನು ವಿಪುಲವಾಗಿ ಅಕ್ಷರಶಃ ಉದ್ಧರಿಸಿಕೊಳ್ಳದ ಅಥವಾ ಇತರ ರೀತಿಯಲ್ಲಿ ಸ್ಫೂರ್ತಿ, ಪೂರ್ತಿಗಳನ್ನು ಪಡೆಯದ ಸಂಗೀತಶಾಸ್ತ್ರಗ್ರಂಥವು ಆಮೇಲೆ—ಇಲ್ಲಿಯವರೆಗೆ—ಹುಟ್ಟಲಿಲ್ಲ. ಶ್ರೀ ಶಾರ್ಙ್ಗದೇವನಾದರೂ ಸಂಗೀತರತ್ನಾಕರವನ್ನು ಸಂಪೂರ್ಣವಾಗಿ ಸ್ವಕಪೋಲಕಲ್ಪಿತವಾಗಿ ಬರೆಯಲಿಲ್ಲ. ಸಂಗೀತ ವೆಂಬ ರತ್ನಾಕರ (ಸಾಗರ) ವನ್ನು- ಪೂರ್ವಾಚಾರ್ಯರ ಮತಪಯೋನಿಧಿಯನ್ನು -ಕಡೆದು ಸಾರರೂಪವಾದ, ಅಮೃತ ವಾದ ಸಂಗೀತರತ್ನಾಕರವನ್ನು ರಚಿಸಿದ್ದೇನೆ ಎನ್ನುವ ಅವನ ಮಾತು ಅಕ್ಷರಶಃ ಸತ್ಯವಾದುದು. ಆದುದರಿಂದ ಹಿಂದು ಮುಂದಿನವರ ಹಿನ್ನೆಲೆಯಲ್ಲಿ, ಯಾಥಾತಥ್ಯದ ದೃಷ್ಟಿಕೋನದಲ್ಲಿ ಅಭ್ಯಾಸಮಾಡಿದಾಗ ಅವನ ಗ್ರಂಥವು ಇಡೀ ಭಾರತೀಯ ಸಂಗೀತದ ಸಮಗ್ರ ಇತಿಹಾಸವನ್ನು ಚಿತ್ರಿಸುತ್ತದೆ; ಅಲ್ಲದೆ ಪೂರ್ವಾಚಾರ್ಯರ ಮತವೈವಿಧ್ಯದ ಅರಣ್ಯ ವನ್ನು ವ್ಯವಸ್ಥೆಯಿಂದ ಚೊಕ್ಕಗೊಳಿಸಿ ಸುಂದರ ಉದ್ಯಾನವನವನ್ನಾಗಿ ಕಾಣಲು ಬೇಕಾಗುವ ದೃಷ್ಟಿಯನ್ನು ಒದಗಿಸುತ್ತದೆ; ಈ ಮತವೈವಿಧ್ಯವನ್ನು ಒಂದಾಗಿ ಕಟ್ಟಿ ವ್ಯಾಪಕವೂ ಏಕಾಂಡವೂ ಸಂಪೂರ್ಣವೂ ಆದ ಜ್ಞಾನವನ್ನಾಗಿ ಪರಿವರ್ತಿಸಲು ಅಗತ್ಯವಾದ ಸೂತ್ರವನ್ನು ಕಲ್ಪಿಸಿಕೊಡುತ್ತದೆ.

ಅಲ್ಲದೆ, ಯಾವುದೇ ಶಾಸ್ತ್ರದ ಅಭ್ಯಾಸವು ಅದರಲ್ಲಿ ಮಾತ್ರ ಮುಗಿಯುವುದಿಲ್ಲ. ಅದಕ್ಕೆ ಸಂಬಂಧಿಸಿದ ಇತರ ಶಾಸ್ತ್ರಗಳ ದೃಷ್ಟಿಕೋನದಿಂದ ಅಳೆದು, ವಿಮರ್ಶಿಸಿ, ಸಂಬಂಧಿಸಿ, ಬೆಲೆಕಟ್ಟಿದಾಗಲೇ ಅದರ ಅಭ್ಯಾಸವು ಸಾರ್ಥಕವಾಗಿ ಪ್ರಯೋಜನಸಮೃದ್ಧಿಯನ್ನು ಪಡೆಯುತ್ತದೆ. ಶ್ರೀ ಶಾರ್ಙ್ಗದೇವ ಸೂರಿಯು ಆತ್ಮವಿದ್ಯೆಯಲ್ಲಿ, ಶರೀರವಿದ್ಯೆಯಲ್ಲಿ, ಮನೋವಿಜ್ಞಾನ, ತತ್ತ್ವಶಾಸ್ತ್ರ, ನಾದವಿಜ್ಞಾನ, ಸೌಂದರ್ಯಮೀಮಾಂಸಾಶಾಸ್ತ್ರ ಮುಂತಾದವು ಗಳಲ್ಲಿ ತಲಸ್ಪರ್ಶಿಯಾದ ಪರಿಣತಿಯನ್ನು ಪಡೆದವನು. ಸಂಗೀತರತ್ನಾಕರವು ಇದನ್ನು ನಿಸ್ಸಂದಿಗ್ಧವಾಗಿ ಪುನಃ ಪುನಃ

ಪ್ರಮಾಣಿಸುತ್ತದೆ. ಈ ಎಲ್ಲ ಶಾಸ್ತ್ರಗಳ ಪರಿಭಾಷೆ, ತಂತ್ರ, ವಿಧಾನಗಳನ್ನೂ ಜ್ಞಾನವನ್ನೂ ಅನ್ವಯಿಸಿ ಸಂಗೀತ ಶಾಸ್ತ್ರವನ್ನು ವ್ಯಾಪಕವಾಗಿ ಅಭ್ಯಾಸಮಾಡಲು ಸಾಧಕವಾಗಿರುವುದು ಸಂಗೀತರತ್ನಾಕರವೊಂದೇ. ಇದಕ್ಕಿಂತ ಮುಖ್ಯವಾದುದೆಂದರೆ ಈ ಶಾಸ್ತ್ರಗಳಲ್ಲಿ ಅತ್ಯಾಧುನಿಕವಾಗಿ ಸಂಶೋಧಿತವಾಗುತ್ತಿದ್ದು ಸಿದ್ಧವಾಗಿರುವ ಜ್ಞಾನದ ಪರೀಕ್ಷೆಗೆ ಒಳಪಟ್ಟು ಯಶಸ್ವಿಯಾಗಿ, ಅರ್ಥಪೂರ್ಣವಾಗಿ, ಉಳಿದಿರುವ ಸಂಗೀತಶಾಸ್ತ್ರ ಗ್ರಂಥಗಳಲ್ಲಿ ಮುಖ್ಯ ವಾದುದು ಇದೇ. ಆಧುನಿಕ ಸಂಶೋಧನೆಗಳ ಸಾರವನ್ನು ಸಾವಿರಾರು ವರ್ಷಗಳ ಹಿಂದೆ ನಮ್ಮ ಸಂಗೀತಶಾಸ್ತ್ರಕಾರರು ಮುಂಗಂಡು ಅಸಂದಿಗ್ಧವಾದ ಮಾತುಗಳಲ್ಲಿ ಹೇಳಿದ್ದಾರೆಂಬುದನ್ನು ಅಭ್ಯಾಸಮಾಡಲು ಈ ಗ್ರಂಥವು ಏಕೈಕ ಸಾಧನವಾಗಿದೆ. ಅಷ್ಟೇ ಅಲ್ಲದೆ ಜಗತ್ತಿನ ಎಲ್ಲ ಸಂಗೀತಪದ್ಧತಿಗಳಿಗೂ ಮೂಲಭೂತವಾಗಿರುವ ಪ್ರಮೇಯಗಳ ವೈಜ್ಞಾನಿಕವಾದ ಜಿಜ್ಞಾಸೆಯನ್ನು ಬೀಜರೂಪದಲ್ಲಿ ಸಂಗೀತರತ್ನಾಕರವು ಒಳಗೊಂಡಿದೆ. ಇದೆಲ್ಲ ಉತ್ಪ್ರೇಕ್ಷೆಯಿರ ಬಹುದೇ, ತಾನು ಕೈಗೊಂಡ ಪ್ರಯತ್ನವೆಂಬ ಅಭಿಮಾನದ ಅತಿರೇಕವಿರಬಹುದೇ ಎಂದು ಅನುಮಾನಪಡುವವರಿಗೆ ಈ ಗ್ರಂಥದ ಆಳವಾದ ಅಭ್ಯಾಸದಲ್ಲಿ ತೊಡಗಲೆಂದು ನಮ್ರವಾದ ಆಹ್ವಾನವನ್ನು ನೀಡುತ್ತೇನೆ.

ಇಂತಹ ಶಾಸ್ತ್ರಗ್ರಂಥದ ಅಭ್ಯಾಸವು ವೈಜ್ಞಾನಿಕವಾಗಿಯೂ ವ್ಯಾಪಕವಾಗಿಯೂ ನಡೆಯದಿರುವುದು ಕಹಿಯಾದ ಆದರೆ ಸತ್ಯವಾದ ಸಂಗತಿ. ರಾಷ್ಟ್ರೀಯ ಮಟ್ಟದ ಸಂಗೀತಶಾಸ್ತ್ರ ವಿಚಾರಗೋಷ್ಠಿಗಳಲ್ಲಿ ಸಹ ಈ ಗ್ರಂಥದ ಬಗ್ಗೆ ಅರೆಬೆಂದ ಕಲ್ಪನೆಗಳೂ, ಅರ್ಧ ಸತ್ಯಗಳೂ, ಮಿಥ್ಯಾರೋಪಗಳೂ ವ್ಯಕ್ತವಾದುದನ್ನು ನಾನೇ ಕಂಡಿದ್ದೇನೆ. ಕನ್ನಡನಾಡಿನಲ್ಲಂತೂ ಈ ಗ್ರಂಥದ ಹೆಸರನ್ನು ಕೇಳಿರುವವರೇ ಅಪರೂಪ.

ಆದುದರಿಂದ ಸಂಗೀತರತ್ನಾಕರವನ್ನು ಕನ್ನಡಿಸಿ ವ್ಯಾಖ್ಯಾನದಿಂದ ವಿಸ್ತರಿಸುವ ಸಾಹಸವನ್ನು ನಾನು ಕೈಗೊಳ್ಳ ಬೇಕಾಯಿತು. ಇದೆಲ್ಲವನ್ನೂ ಮೀರಿ ಇನ್ನೂ ಒಂದು ಮುಖ್ಯ ಕಾರಣವಿದೆ: ಅದ್ಭುತವಾದ ಈ ಸಂಗೀತರತ್ನಾಕರ ವನ್ನು ರಚಿಸಿದ ಭಗವಾನ್ ಶ್ರೀ ಶಾರ್ಙ್ಗದೇವನು ಕನ್ನಡಿಗನಾಗಿದ್ದವನು. ಈ ಹೆಮ್ಮೆಯನ್ನು ಕನ್ನಡಿಗರೊಡನೆ ಪಾಲುಗೊಳ್ಳಲೆಂದೇ ಈ ಗ್ರಂಥವನ್ನು ಕನ್ನಡದಲ್ಲಿ ಬರೆದಿದ್ದೇನೆ.

## ಕನ್ನಡದಲ್ಲಿ—ಏಕೆ?

ಸಂಗೀತರತ್ನಾಕರವು ಸ್ವರಗತ, ರಾಗವಿವೇಕ, ಪ್ರಕೀರ್ಣಕ, ಪ್ರಬಂಧ, ತಾಳ, ವಾದ್ಯ ಮತ್ತು ನರ್ತನ ಎಂಬ ಶೀರ್ಷಿಕೆಗಳುಳ್ಳ ಏಳು ಅಧ್ಯಾಯಗಳಲ್ಲಿ ರಚಿತವಾದ ಗ್ರಂಥ. ಈ ಏಳು ಅಧ್ಯಾಯಗಳನ್ನೂ ಇದೇ ವ್ಯಾಪ್ತಿ, ವಿಸ್ತಾರ ಗಳುಳ್ಳ ಅನುವಾದ, ವ್ಯಾಖ್ಯಾನ, ಪರಿಶಿಷ್ಟಗಳೊಡನೆ ಬರೆದುಕೊಡಬೇಕೆಂದು ಘನ ಮೈಸೂರು ವಿಶ್ವವಿದ್ಯಾ ನಿಲಯವು ನನಗೆ ಆಣತಿಯಿತ್ತಿದೆ. ಒಟ್ಟಿನಲ್ಲಿ ಇದೇ ಕ್ರೌನ್ ಚತುಷ್ಪತ್ರದ ಹತ್ತಾರುಸಾವಿರ ಪುಟಗಳಷ್ಟು ವಿಸ್ತಾರ ವಾಗಬಹುದಾದ ಈ ಬೃಹದ್‌ಗ್ರಂಥವನ್ನು ಕನ್ನಡದಲ್ಲಿ ಪ್ರಕಟಿಸಲು ನಿರ್ಧರಿಸಿರುವ ಮೈಸೂರು ವಿಶ್ವವಿದ್ಯಾನಿಲಯದ ಸಾಹಸವನ್ನೂ ಮೇಲ್ಪಂಕ್ತಿಯನ್ನೂ ನೆನೆಸಿಕೊಂಡಾಗ ಅಭಿಮಾನದಿಂದ, ಕೃತಜ್ಞತೆಯಿಂದ ನನ್ನ ಮೈ ನವಿರೇಳು ತ್ತದೆ. ಈ ಆಜ್ಞೆಯನ್ನು ನಾನು ಶಿರಸಾವಹಿಸಿ ಒಪ್ಪಿಕೊಂಡಿದ್ದೇನೆ. ಇಡೀ ಜೀವಮಾನದ ಕೆಲಸ: ಇದನ್ನು ನನ್ನ ಹಿರಿಯರ ಪುಣ್ಯವೂ ಅಭಿಯುಕ್ತರಾದ ಭರತ, ಮತಂಗ, ಶಾರ್ಙ್ಗದೇವಾದಿ ಋಷಿಗಳ ಅನುಗ್ರಹವೂ ಕನ್ನಡಿಗರ ಆಶೀರ್ವಾದವೂ ನಡೆಸಿಕೊಡಬೇಕು.

ಕನ್ನಡದಲ್ಲಿ ಶಾಸ್ತ್ರಸಾಹಿತ್ಯದ ಕೊರತೆಯಿರುವುದನ್ನು ಸಂದರ್ಭ ಬಂದಾಗಲೆಲ್ಲಾ ನಾನು ಹೇಳುತ್ತಲೇ ಬಂದಿದ್ದೇನೆ. ಅದರಲ್ಲಿಯೂ ಕನ್ನಡಿಗರು ಸಾವಿರ ವರ್ಷಗಳಿಗಿಂತ ಹಿಂದಿನಿಂದಲೂ ನಮ್ಮ ಸಂಗೀತದ ಕಲೆ, ಶಾಸ್ತ್ರ, ಹಾಡು, ಸಂಶೋಧನೆ ಮುಂತಾದ ಎಲ್ಲ ಮುಖಗಳಲ್ಲಿಯೂ ನಾಯಕತನವನ್ನು ವಹಿಸಿ ಈ ಸಂಗೀತಕ್ಕೆ ಕರ್ಣಾಟಕ ಸಂಗೀತವೆಂದು ಹೆಸರು ಬರಲು ಕಾರಣರಾಗಿರುವುದನ್ನು ಸ್ಮರಿಸಿಕೊಂಡರೆ ಆಧುನಿಕ ಕನ್ನಡ ಸಾಹಿತ್ಯದಲ್ಲಿರುವ ಈ ಕೊರತೆಯಿಂದಲೂ, ಈ ಅದ್ಭುತ ಭವ್ಯ ಪರಂಪರೆಯ ಬಗೆಗೆ ಕನ್ನಡದ ಜನದಲ್ಲಿ ನಿರಭಿಮಾನ, ನಿರಾಸಕ್ತಿ,

ನಿರುತ್ಸಾಹಗಳೇ ತುಂಬಿರುವುದರಿಂದಲೂ ತುಂಬಾ ವ್ಯಸನವಾಗುತ್ತದೆ. ಆದುದರಿಂದಲೇ ಈ ಗ್ರಂಥವು ಆಂಗ್ಲಭಾಷೆಯಲ್ಲಿ ರಚಿತವಾಗಿದ್ದರೆ ಅದಕ್ಕೆ ದೊರೆಯಬಹುದಾಗಿದ್ದ ವಿಸ್ತಾರವಾದ ವ್ಯಾಪ್ತಿ, ವಿಮರ್ಶೆಗಳ ಆಸೆಯನ್ನು ಬಿಟ್ಟು ಇದನ್ನು ಕನ್ನಡದಲ್ಲಿ ಬರೆದಿದ್ದೇನೆ. ಇದರಲ್ಲಿ ಗರ್ವದ ಮಾತಿಲ್ಲವೆಂದೂ, ಕರ್ತವ್ಯದ ತೃಪ್ತಿಮಾತ್ರವಿದೆಯೆಂದೂ ವಿನಯದಿಂದ ವಿಜ್ಞಾಪಿಸಿಕೊಳ್ಳಬೇಕಾಗಿದೆ. ಭಾರತೀಯೇತರ ಭಾಷೆಗಳಲ್ಲಿ ಸಹ ಸಂಗೀತವನ್ನು ಕುರಿತು ನೂರಾರು ವಿದ್ವಾಂಸರ ಸಂಘಟಿತಶ್ರಮದಿಂದ ಆದ ನಿಘಂಟು, ವಿಶ್ವಕೋಶಗಳನ್ನು ಬಿಟ್ಟರೆ ನಾನು ಉದ್ದೇಶಿಸಿರುವ ಈ ಗ್ರಂಥದ ವ್ಯಾಖ್ಯಾನ, ವಿಮರ್ಶೆ, ಜಿಜ್ಞಾಸೆಗಳ ವಿಸ್ತಾರ, ವ್ಯಾಪ್ತಿಗಳನ್ನುಳ್ಳ ಬೇರೆ ಸಂಗೀತಶಾಸ್ತ್ರಗ್ರಂಥಗಳು ಎಲ್ಲಿಯೂ ಪ್ರಕಟವಾಗಿರುವುದು ನನ್ನ ಗಮನಕ್ಕೆ ಬಂದಿಲ್ಲ. ಭಾರತೀಯ ಭಾಷೆಗಳಲ್ಲಿ ಅಂತೂ ಇಲ್ಲವೆಂದು ಹೇಳಬಹುದು. ಈ ಅಪೂರ್ವ ಸಾಹಸವು ಮೊದಲ ಬಾರಿಗೆ ಕನ್ನಡದಲ್ಲಿ ಆಗುತ್ತಿರುವುದರ ಪುಣ್ಯವು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರಿದುದು.

## ನಿಃಶಂಕಹೃದಯ

ಶ್ರೀ ಶಾರ್ಙ್ಗದೇವನನ್ನೂ ಅವನ ಸಂಗೀತರತ್ನಾಕರವನ್ನೂ ಭಾರತೀಯ ಸಂಗೀತದ, ಭಾರತೀಯ ಸಂಸ್ಕೃತಿಯ ಇತಿಹಾಸದ ಹಿನ್ನೆಲೆಯಲ್ಲಿ ವಿಮರ್ಶಾತ್ಮಕವಾಗಿ ವಿವೇಚಿಸಿ, ಇಡೀ ಗ್ರಂಥದ ಅನುವಾದ, ವ್ಯಾಖ್ಯಾನಗಳು ಹೊರಬಿದ್ದಮೇಲೆ ಅದರ ಮೌಲ್ಯ ನಿರ್ಣಯವನ್ನು ಒಳಗೊಂಡ ವಿಸ್ತಾರವಾದ ಒಂದು ಪೀಠಿಕೆಯನ್ನು ಬರೆಯಲಿದ್ದೇನೆ. ಆದುದರಿಂದ ಇಲ್ಲಿ ಅದರ ಪ್ರಸ್ತಾಪವನ್ನು ಮಾಡುವುದಿಲ್ಲ.

ಈಗ ಹೊರಬಂದಿರುವ ಗ್ರಂಥವು ಸಂಗೀತರತ್ನಾಕರದ ಮೊದಲನೆಯ ಸ್ವರಗತಾಧ್ಯಾಯದ (ಸುಮಾರು 580 ಶ್ಲೋಕಗಳ) ಪೈಕಿ 276 ಶ್ಲೋಕಗಳ ಅನುವಾದವನ್ನೂ ಅದಕ್ಕೆ ಸಂಬಂಧಿಸಿದ ವ್ಯಾಖ್ಯಾನವನ್ನೂ ಒಳಗೊಂಡಿದೆ. ಈ ಅಧ್ಯಾಯದಲ್ಲಿ ಪದಾರ್ಥಸಂಗ್ರಹ, ಪಿಂಡೋತ್ಪತ್ತಿ, ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿ-ಚ್ಛಂದೋರಸ, ಗ್ರಾಮಮೂರ್ಛನಾಕ್ರಮತಾನ, ಸಾಧಾರಣ, ವರ್ಣಾಲಂಕಾರ, ಜಾತಿ ಮತ್ತು ಗೀತಿ ಎಂಬ ಶೀರ್ಷಿಕೆಗಳುಳ್ಳ ಎಂಟು ಪ್ರಕರಣಗಳಿವೆ. ಇವುಗಳಲ್ಲಿ ಮೂರನೆಯ ಪ್ರಕರಣದ ನಾದಸ್ಥಾನಶ್ರುತಿ ಎನ್ನುವವರೆಗೆ ಈ ಗ್ರಂಥವು ಬೆಳೆದಿದೆ. ಮೂರನೆಯ ಪ್ರಕರಣದಲ್ಲಿ ಸ್ವರವಿವೇಚನೆಯನ್ನೂ ಉಳಿದ ಐದು ಪ್ರಕರಣಗಳನ್ನೂ ಒಳಗೊಂಡ ಪ್ರಥಮ ಸಂಪುಟದ ಎರಡನೆಯ ಭಾಗವನ್ನು ಆದಷ್ಟು ಬೇಗ ಹೊರತರಲು ಶ್ರಮಿಸುತ್ತೇನೆ.

ಶ್ರೀ ಶಾರ್ಙ್ಗದೇವನ ಒಂದೊಂದು ಮಾತೂ ಸೂತ್ರರೂಪದಲ್ಲಿದ್ದು ಅತ್ಯಂತ ಅರ್ಥನಿಬಿಡವಾಗಿರುವುದರಿಂದ ಅದರ ಅರ್ಥವಿಸ್ತಾರಕ್ಕೆಂದೂ ತತ್ಕಾಲೀನ ಲಕ್ಷ್ಯವಿರೋಧದೊಡನೆ ಸಮನ್ವಯ ಮಾಡಲೆಂದೂ ಅನೇಕ ವ್ಯಾಖ್ಯಾನಗಳು ಹುಟ್ಟಿಕೊಂಡವು. ಇವುಗಳಲ್ಲಿ ಸಂಸ್ಕೃತ, ತೆಲುಗು, ಹಿಂದೀ ಭಾಷೆಗಳಲ್ಲಿ ರಚಿತವಾದ ಏಳು ವ್ಯಾಖ್ಯಾನಗಳು ಇವೆಯೆಂದು ಅರ್ವಾಚೀನರ ಮಾತುಗಳಿಂದ ತಿಳಿದುಬಂದರೂ, ಸಿಂಹಭೂಪಾಲನ ಸಂಗೀತಸುಧಾಕರ (ಕ್ರಿ.ಶ.ಸು. 1330), ಕಲ್ಲಿನಾಥನ ಸಂಗೀತಕಲಾನಿಧಿ (ಕ್ರಿ.ಶ. ಸು. 1430) ಗಳು ಸಂಸ್ಕೃತದಲ್ಲಿ ಪ್ರಸಿದ್ಧವಾಗಿದ್ದು ಪ್ರಕಟವಾಗಿವೆ. ಲಿಪಿದೋಷದಿಂದ ಸಿಂಹಭೂಪಾಲನು ಹಂಸಭೂಪಾಲನಾದುದನ್ನು ಗಮನಿಸದ ಹಸ್ತಪ್ರತಿ ಸಂಶೋಧಕರು ಹಂಸಭೂಪಾಲನೆಂಬ ಒಬ್ಬ ಹೊಸ ವ್ಯಾಖ್ಯಾನಕಾರನಿಗೆ ಜನ್ಮವಿತ್ತು ನಾಮಕರಣವನ್ನೂ ಮಾಡಿದರು. (ಇದರ ಪ್ರತಿಧ್ವನಿಯು ಈಗಲೂ ಅಲ್ಲಲ್ಲಿ ಕೇಳಿಸುವುದುಂಟು!) ಚಂದ್ರಿಕಾ, ಕೌಸ್ತುಭ ಎಂಬ ಬೇರೆ ಎರಡು ಸಂಸ್ಕೃತ ವ್ಯಾಖ್ಯಾನಗಳೂ ಸಂಗೀತರತ್ನಾಕರಕ್ಕೆ ಇವೆಯೆಂದು ಅನ್ಯೋಕ್ತಿಗಳಿಂದ ಮಾತ್ರ ತಿಳಿದುಬರುತ್ತದೆ. ತೆಲುಗಿನಲ್ಲಿ ಭಂಡಾರು ವಿಠಲಾಮಾತ್ಯನು ಬರೆದ ಸಂಗೀತರತ್ನಾಕರ ವ್ಯಾಖ್ಯಾ, ಗಂಗಾರಾಮನು ಹಿಂದಿಯಲ್ಲಿ ಬರೆದ ಸಂಗೀತ ಸೇತು ಎಂಬ ವ್ಯಾಖ್ಯಾನಗಳೂ ಇವೆ,

ಇಷ್ಟೆಲ್ಲ ವ್ಯಾಖ್ಯಾನಗಳು ಇರುವಾಗ ಹೊಸದೊಂದು ಸ್ವತಂತ್ರ ವ್ಯಾಖ್ಯಾನದ ಆವಶ್ಯಕತೆಯು ಇದೆಯೇ ಎಂಬ ಪ್ರಶ್ನೆಯ ಹಿನ್ನೆಲೆಯಲ್ಲಿ ನಿಃಶಂಕಹೃದಯವೆಂಬ ಪ್ರಕೃತ ಸಂಗೀತರತ್ನಾಕರ ವ್ಯಾಖ್ಯೆಯನ್ನು ಕುರಿತು ಸ್ವಲ್ಪ ಹೇಳಬೇಕಾದುದಿದೆ : ಈ ಹಿಂದೆ ರಚಿತವಾದ ವ್ಯಾಖ್ಯಾನಗಳು ಒಂದಲ್ಲ ಒಂದು ದೃಷ್ಟಿಯಿಂದ ಅಸಮರ್ಪಕವಾಗಿವೆ. ಇದನ್ನು ಪ್ರಕೃತ ಗ್ರಂಥದಲ್ಲಿ ಅಲ್ಲಲ್ಲಿ ತೋರಿಸಿದ್ದೇನೆ. ಸಿಂಹಭೂಪಾಲನು ಮೂಲಗ್ರಂಥವನ್ನು ಸುಲಭವಾಗಿ ತಿಳಿಯಲು ಅನುಕೂಲಿಸುವಂತೆ ಗದ್ಯರೂಪದಲ್ಲಿಡಲು ಮಾತ್ರ ಬಹು ವೇಳೆ ತನ್ನ ವ್ಯಾಖ್ಯಾನವನ್ನು ಸೀಮಿತಗೊಳಿಸುತ್ತಾನೆ. ಕಲ್ಲಿನಾಥನ ವ್ಯಾಖ್ಯಾನವು ಕೆಲವು ಸಲ ಅತಿವ್ಯಾಪ್ತಿ, ಅವ್ಯಾಪ್ತಿಗಳಿಂದಲೂ, ಸಂಗೀತಶಾಸ್ತ್ರಪ್ರಮೇಯಗಳ ಜಿಜ್ಞಾಸೆಗೆ ಕೆಲವು ವೇಳೆ ಹೆಚ್ಚು ಸಹಾಯಕವಾಗಿಲ್ಲದೆಯೂ ಇದೆ. ವಾದ್ಯಾಧ್ಯಾಯ, ನರ್ತನಾಧ್ಯಾಯಗಳಲ್ಲಂತೂ ಅವನು ಹೆಚ್ಚಾಗಿ ಮೌನವನ್ನೇ ತಾಳುತ್ತಾನೆ. ತಾವು ರಚಿತವಾದ ಕಾಲಕ್ಕೆ ಅವು ಪ್ರಯೋಜಕಗಳಾಗಿದ್ದರೂ, ಮುಖ್ಯವಾಗಿ ಸಂಗೀತರತ್ನಾಕರಕ್ಕೆ ಆಧಾರಭೂತವಾದ, ಪೂರ್ವಾಚಾರ್ಯಪ್ರಣೀತವಾದ ಗ್ರಂಥಗಳನ್ನು ಅವು ತಮ್ಮ ವಿವೇಚನೆಯ ಪರಿಮಿತಿಯೊಳಗೆ ಸೇರಿಸಲೆಳಸದೆ ಸಮಸಾಮಯಿಕ ಲಕ್ಷ್ಯದೊಡನೆ ಸಮನ್ವಯಮಾಡಲು ಮಾತ್ರ ಪ್ರಯತ್ನಿಸಿದುದರಿಂದ, ಸಂಗೀತರತ್ನಾಕರವು ಸ್ಪಷ್ಟವಾಗಿಯೋ ಇಂಗಿತದಿಂದಲೋ ಒಳಗೊಂಡ ಪ್ರಮೇಯಸಾಮಗ್ರಿಯ ಶಾಶ್ವತ ಮೌಲ್ಯಗಳ ವಿವೇಚನೆಗೆ ಈ ವ್ಯಾಖ್ಯಾನಗಳು ಸಾಕಾಗುವುದಿಲ್ಲ. ಮೂಲ ಗ್ರಂಥಕಾರನ ಹೃದಯದಲ್ಲಿರುವ ಎಲ್ಲಾ ಭಾವಗಳನ್ನೂ ಧ್ವನಿಗಳನ್ನೂ ಇಂಗಿತಗಳನ್ನೂ ಆಧಾರಸಹಿತವಾಗಿ ವಿವೇಚನೆ, ವಿಮರ್ಶೆಗಳ ಚೌಕಟ್ಟಿನಲ್ಲಿ ವಿವರಿಸುವುದು ವ್ಯಾಖ್ಯಾನಗಳ ಮುಖ್ಯ ಕರ್ತವ್ಯಗಳಲ್ಲಿ ಒಂದು ಎಂದು ನಾನು ತಿಳಿದಿದ್ದೇನೆ.

ಅಷ್ಟೇ ಅಲ್ಲದೆ ಸುಮಾರು ಐದುನೂರು ವರ್ಷಗಳಿಗಿಂತ ಈಚೆಗೆ ಸಂಗೀತರತ್ನಾಕರವು ವಿವೃತವಾಗಿಲ್ಲವೆಂಬುದನ್ನು ಮರೆಯಲಾಗದು. ಯಾವುದಾದರೊಂದು ಗ್ರಂಥದ ಅರ್ಥವಾಹಿನಿಯು ಕಾಲವಾಹಿನಿಯೊಡನೆ ಕೂಡಿ ಹರಿದಾಗಲೇ ಅದಕ್ಕೆ ಪ್ರಯೋಜನಸಮೃದ್ಧಿಯೂ ಜೀವರಸ ಸಂಚಾರವೂ ಉಂಟಾಗುವುದು, ಕಾಲದೇಶಗಳ ಸಂಕೋಲೆಯು ಹರಿಯುವುದು. ಆದುದರಿಂದ ಆಗಾಗ ತತ್ಕಾಲೀನ ಅರ್ಥಪ್ರವಾಹಗಳ ಉಪನದಿಗಳನ್ನು ಅದಕ್ಕೆ ಸೇರಿಸುತ್ತಾ ಅದರ ಪಾತ್ರವನ್ನೂ ಪ್ರವಾಹವನ್ನೂ ಹೆಚ್ಚಿಸುತ್ತಿರಬೇಕು. ಸಂಗೀತದ ಕಲೆ, ಲಕ್ಷಣಗಳಿಗೆ ಸಹೋದರ ಶಾಸ್ತ್ರಗಳಾದ ಆತ್ಮವಿದ್ಯೆ, ತತ್ತ್ವಶಾಸ್ತ್ರ, ಮನೋವಿಜ್ಞಾನ, ನಾದವಿಜ್ಞಾನ, ಶರೀರಶಾಸ್ತ್ರ, ಸೌಂದರ್ಯ ಮೀಮಾಂಸಾಶಾಸ್ತ್ರ, ಅಲಂಕಾರಶಾಸ್ತ್ರ, ಛಂದಃಶಾಸ್ತ್ರ, ಮುಂತಾದವುಗಳಲ್ಲಿ ಅತ್ಯಾಧುನಿಕವಾಗಿ ನಡೆಯುತ್ತಿರುವ ಸಂಶೋಧನೆಗಳ ದೃಷ್ಟಿಯಿಂದ ಅಭ್ಯಾಸಮಾಡಿದಾಗಲೇ ಸಂಗೀತಸರಸ್ವತಿಯು ಸಹಸ್ರಪಾತ್, ಸಹಸ್ರಶೀರ್ಷಳಾಗಿ ಆ ವಿರಾಟ್‌ಸ್ವರೂಪದ ಸಾಕ್ಷಾತ್ಕಾರವು ನಮಗೆ ಆದೀತು.

ಇಂತಹ ಪ್ರಯತ್ನವು ಮೊಟ್ಟಮೊದಲು ಕನ್ನಡದಲ್ಲಿ ನಡೆಯಲೆಂಬ ಆಸೆಯಿಂದ ನಿಃಶಂಕ ಹೃದಯವೆಂಬ ಈ ವಿನಮ್ರ ವ್ಯಾಖ್ಯಾನವನ್ನು ಬರೆಯುವ ಸಾಹಸಮಾಡುತ್ತಿದ್ದೇನೆ. ಇದು ವ್ಯಾಖ್ಯಾನವೂ ಹೌದು, ನಾನು ನಡೆಸಿದ ಸಂಶೋಧನೆಗಳನ್ನು ಒಳಗೊಂಡ ಸ್ವತಂತ್ರ ಗ್ರಂಥವೂ ಹೌದು. ಅದರಲ್ಲಿ ಹೇಳಿರುವುದನ್ನೆಲ್ಲಾ ಶ್ರೀ ಶಾರ್ಙ್ಗದೇವನ ಸ್ಪಷ್ಟೋಕ್ತಿಯ ಅಥವಾ ಇಂಗಿತವೆಂದು ಸಿದ್ಧಮಾಡಬಹುದಾದ ಅರ್ಥದ ಚೌಕಟ್ಟಿನಲ್ಲಿಯೇ ಅಡಗಿಸಲು ಪ್ರಯತ್ನಮಾಡಿದ್ದೇನೆ; ಆದರೂ ನಿಃಶಂಕಹೃದಯವು ಇದಕ್ಕಿಂತ ಬಹು ಮುಖ್ಯವಾದ ಒಂದು ಸಂಗತಿಯನ್ನು ಸಾಧಿಸಲೆಳಸಿದೆಯೆಂದು ಇಲ್ಲಿ ವಿಜ್ಞಾಪಿಸಿಕೊಳ್ಳಬೇಕಾಗಿದೆ : ಶಾರ್ದೂಲ, ಯಾಷ್ಟಿಕ, ದುರ್ಗಾಶಕ್ತಿ, ಕಾಶ್ಯಪ, ಕೋಹಲ, ವಿಶ್ವಾವಸು, ವಿಶಾಖಿಲ, ತುಂಬುರು, ವೇಣ, ನಾರದ, ಮಾತೃಗುಪ್ತ ಮುಂತಾದ ಅನೇಕ ಸಂಗೀತಶಾಸ್ತ್ರಪ್ರವರ್ತಕರ ಹೆಸರುಗಳೂ ಉಕ್ತಿಗಳೂ ಅತ್ಯಲ್ಪವಾದ ಅನ್ಯೋಕ್ತಿಗಳಿಂದಲೇ ಇಂದು ಜೀವಿಸಿವೆ. ಹಲವು ವೇಳೆ ಈ ಉಕ್ತಿಗಳೂ ನಿರರ್ಥಕಗಳಾಗಿಯೋ ಪರಸ್ಪರ ವಿರುದ್ಧಾರ್ಥಕಗಳಾಗಿಯೋ ಕಾಣುತ್ತವೆ. ಇವರು ಮತ್ತು ಭರತ, ದತ್ತಿಲ, ಮತಂಗ, ಅಭಿನವಗುಪ್ತ ಮುಂತಾದ ಪ್ರಾಚೀನಾಚಾರ್ಯರು ಹೇಳಿದುದನ್ನೆಲ್ಲಾ (ಹಲವು ವೇಳೆ ಅಪೂರ್ವ ಹಸ್ತಪ್ರತಿಗಳಿಂದ ಹೊರತೆಗೆದು) ಶ್ರುತಿಕಲ್ಪನೆಯ ಬಗೆಗೆ

ಏಕಾಂಡವಾದ, ಸರ್ವಗ್ರಾಹಕವೂ, ವ್ಯಾಪಕವೂ, ವೈಜ್ಞಾನಿಕವೂ ಆದ ಸಿದ್ಧಾಂತವನ್ನು ಹೊರಡಿಸಲು ಇಲ್ಲಿ ಯತ್ನಿಸಿದ್ದೇನೆ. ಭಾರತೀಯ ಸಂಗೀತಕ್ಕೆ ಮಾತ್ರವಲ್ಲದೆ ಇಡೀ ವಿಶ್ವದ ಸಂಗೀತಕ್ಕೇ ಮೂಲಭೂತವಾದುದು ಶ್ರುತಿಗಳ ಕಲ್ಪನೆ. ನಮ್ಮ ಹಿರಿಯರು ಈ ವೈಜ್ಞಾನಿಕ ಸತ್ಯವನ್ನು ನಿರ್ದುಷ್ಟ ರೀತಿಯಲ್ಲಿ ಎರಡು ಸಾವಿರ ವರ್ಷಗಳಿಗಿಂತಲೂ ಹಿಂದೆಯೇ ಹೇಗೆ ಹೇಳಿದ್ದರು ಎಂಬುದನ್ನು ಸುಮಾರು ಮುನ್ನೂರ ಇಪ್ಪತ್ತು ಪುಟಗಳ ವಿಸ್ತಾರದಲ್ಲಿ ವಿವರಿಸಲು ಇಲ್ಲಿ ಪ್ರಯತ್ನ ಮಾಡಿದ್ದೇನೆ. ನನಗೆ ತಿಳಿದ ಮಟ್ಟಿಗೆ ಈ ವ್ಯಾಪ್ತಿ, ವಿಸ್ತಾರಗಳ ವಿವೇಚನೆ ಈ ಮೂಲಭೂತ ಕಲ್ಪನೆಗೆ ದೊರೆತಿರುವುದು ಇದೇ ಮೊದಲು. ಗೀತ, ವಾದ್ಯ, ನರ್ತನಗಳಿಗೆ ಸಂಬಂಧಪಟ್ಟ ಇತರ ಮೂಲಭೂತ ಕಲ್ಪನೆಗಳನ್ನೂ ಹೀಗೆಯೇ ವಿವೇಚಿಸಬೇಕೆಂದಿದ್ದೇನೆ.

ನಿಃಶಂಕಹೃದಯದ ಶೈಲಿಯು ಅಲ್ಲಲ್ಲಿ ಸ್ವಲ್ಪ ಬಿಗಿಯಾಗಿದೆಯೆಂದು ನಾನು ಬಲ್ಲೆ. ಪಾರಿಭಾಷಿಕ ಸಂಸ್ಕೃತ ಗ್ರಂಥವೊಂದನ್ನು ವ್ಯಾಖ್ಯಾನಮಾಡುವಾಗ ಇದು ಸ್ವಲ್ಪಮಟ್ಟಿಗೆ ಅನಿವಾರ್ಯವೇ. ಸಂಗ್ರಹವಾಗಿ ಬರೆಯಬೇಕಾದ ಆವಶ್ಯಕತೆಯೂ ಇದಕ್ಕೆ ಕಾರಣ. ಆದರೂ ಬಳಸಿರುವ ಮಾತುಗಳನ್ನಾಗಲೀ ಕಲ್ಪನೆಗಳನ್ನಾಗಲೀ ಅರ್ಥವನ್ನು ವಿವರಿಸದೆ ಎಲ್ಲಿಯೂ ಹೇಳಿಲ್ಲ. ಮನಸ್ಸಿಟ್ಟು ಓದುವವರಿಗೆ ಶೈಲಿಯಿಂದ ಹೆಚ್ಚು ಅಡಚಣೆಯಾಗಲಾರದೆಂಬ ಆಸೆಯನ್ನು ತಳೆದಿದ್ದೇನೆ.

## ಗ್ರಂಥರಚನೆಯ ರೀತಿ

ಸಂಗೀತರತ್ನಾಕರದ ಉಪಲಬ್ಧ ಆಕರಗಳಲ್ಲಿ ಅಲ್ಲಲ್ಲಿ ಪಾಠವನ್ನು ಉತ್ತಮಗೊಳಿಸುವ ಸಾಧ್ಯತೆಯು ಕಂಡುಬಂದಿತು. ಗ್ರಂಥ ಸಂಪಾದನೆಗೆಂದು ಪಾಠಶೋಧನದ ಈ ಉಪಕರಣಗಳನ್ನು ಬಳಸಿದ್ದೇನೆ:

**ಅ**: ಅಡ್ಯಾರ್ ಮುದ್ರಣ; ಪಂಡಿತ ಎಸ್. ಸುಬ್ರಹ್ಮಣ್ಯಶಾಸ್ತ್ರೀ ಅವರಿಂದ ಸಂಪಾದಿತ; ಗ್ರಂಥಾಂಕ, 30, ಅಡ್ಯಾರ್ ಲೈಬ್ರರಿ, ಮದ್ರಾಸ್, 1943 ಇದರಲ್ಲಿರುವ ಪಾಠಾಂತರಗಳು.

**ಆ**: ಆನಂದಾಶ್ರಮ ಮುದ್ರಣ; ಮಂಗೇಶ ರಾಮಕೃಷ್ಣ ತೆಲಂಗರಿಂದ ಸಂಪಾದಿತ; ಆನಂದಾಶ್ರಮ ಸಂಸ್ಕೃತ ಗ್ರಂಥಾವಲಿ, ಗ್ರಂಥಾಂಕ 35, ಪೂನಾ, 1942 ಇದರಲ್ಲಿರುವ ಮೂಲಪಾಠ.

**ಇ**: ಅಡ್ಯಾರ್ ಮುದ್ರಣ(ಅ)ದ ಮೂಲಗ್ರಂಥಪಾಠ.

**ಕ**: ಕಲ್ಕತ್ತಾ ಮುದ್ರಣ; ಕಾಲೀವರ ವೇದಾಂತವಾಗೀಶ ಮತ್ತು ಸಾರದಾಪ್ರಸಾದಘೋಷ್‌ರವರಿಂದ ಸಂಪಾದಿತ; ಕಲ್ಕತ್ತಾ, 1879.

**ಗ**: ಆನಂದಾಶ್ರಮ ಮುದ್ರಣ(ಆ)ದಲ್ಲಿರುವ ಪಾಠಾಂತರಗಳು.

**ಸಿಂಹಭೂಪಾಲೀಯ ಪಾಠ.**

**ಕಲ್ಲಿನಾಥೀಯ ಪಾಠ.**

ಇವುಗಳೇ ಅಲ್ಲದೆ ಸಂಗೀತರತ್ನಾಕರವನ್ನು ಅಂಶತಃ ಆದರೆ ಅಕ್ಷರಶಃ ಉದ್ಧರಿಸಿಕೊಳ್ಳುವ ಮುಮ್ಮಡಿ ಚಿಕ್ಕಭೂಪಾಲನ ಅಭಿನವ ಭರತಸಾರಸಂಗ್ರಹ, ತುಳಜೇಂದ್ರನ ಸಂಗೀತಸಾರಾಮೃತ ಮುಂತಾದ ಇತರ ಕೆಲವು ಆಕರಗಳನ್ನೂ ಸಂದರ್ಭಾನುಸಾರ ಬಳಸಲಾಗಿದೆ.

ಅನುವಾದದಲ್ಲಿ ಮೂಲಗ್ರಂಥದ ಯಾವ ಭಾಗವನ್ನೂ, ನಿಪಾತಗಳನ್ನೂ ಸಹ, ಬಿಟ್ಟಿಲ್ಲ. ಮೂಲಗ್ರಂಥದಲ್ಲಿರುವ ವಾಕ್ಯರಚನಾಕ್ರಮ, ಪದಗಳ ಅನುಕ್ರಮ ಮೊದಲಾದವುಗಳನ್ನು ಸಾಧ್ಯವಾದಮಟ್ಟಿಗೂ ಹಾಗೆಯೇ

ಅನುವಾದದಲ್ಲಿಯೂ ಉಳಿಸಿಕೊಳ್ಳಲಾಗಿದೆ. ಮೂಲಗ್ರಂಥದಲ್ಲಿಯೇ ಸ್ಪಷ್ಟವಾಗಿ ವಿವಕ್ಷಿತವಾಗಿದ್ದು ಅಧ್ಯಾಹಾರವಾದ ಶಬ್ದಗಳನ್ನು [ ] ಕಂಸಗಳಲ್ಲಿಯೂ, ಅರ್ಥವು ಬೇಗ ಅಥವಾ ಸ್ಪಷ್ಟವಾಗಿ ಸ್ಫುರಿಸಲು ಬೇಕಾಗುವ ಶಬ್ದಗಳನ್ನು ( ) ಕಂಸಗಳಲ್ಲಿಯೂ ಕೊಡಲಾಗಿದೆ. ಮೂಲದಲ್ಲಿರುವ ಶಬ್ದವನ್ನು ಒಂದೇ ಮಾತಿನಿಂದ ಸಹಜವಾಗಿ ಭಾಷಾಂತರಿಸುವುದು ಪ್ರಯಾಸವೆನ್ನಿಸಿದಾಗ ಅಂತಹ ಶಬ್ದವನ್ನು ಅನುವಾದ ಭಾಗದಲ್ಲಿ < > ಕಂಸಗಳಲ್ಲಿ ಸೇರಿಸಿದೆ. ಅನುವಾದದ ಹಿಂದಿನ ಮತ್ತು ಮುಂದಿನ ವಾಕ್ಯಗಳಿಗಿರುವ ಸಂಬಂಧವನ್ನು—ಎಂಬ ಚಿಹ್ನೆಯಿಂದ ತೋರಿಸಿದೆ.

ಆಕರ ಸೂಚನೆಯಿಲ್ಲದ ಅಥವಾ ಅನ್ಯಥಾ ಸಮರ್ಥನೆಯನ್ನು ಪಡೆಯದ ಅಭಿಪ್ರಾಯ, ಸಂಗತಿ, ವಾದ ಮುಂತಾದವುಗಳನ್ನು ಸಾಧ್ಯವಾದಮಟ್ಟಿಗೂ ಇಲ್ಲಿ ವ್ಯಕ್ತಪಡಿಸಿಲ್ಲ. ಆಕರ ಸೂಚನೆಯಲ್ಲಿ ಅಂತರರಾಷ್ಟ್ರೀಯವಾಗಿ ಮಾನ್ಯವಾಗಿರುವ ಪದ್ಧತಿಯನ್ನೇ ಇಲ್ಲಿ ಅಳವಡಿಸಲು ಯತ್ನಿಸಲಾಗಿದೆ. ಆಕರ ಸೂಚನೆಯು ಪ್ರತಿಪ್ರಕರಣಕ್ಕೂ ಪ್ರತ್ಯೇಕವಾಗಿಯೂ ಸ್ವಯಂಪೂರ್ಣವಾಗಿಯೂ ಇದೆ. ಆಯಾ ಪ್ರಕರಣದಲ್ಲಿ ಪ್ರತಿಯೊಂದು ಉದ್ಧೃತಿಗೂ ಒಂದೊಂದು ನಿರ್ದಿಷ್ಟ ಆಕರ ಸೂಚನಾಸಂಖ್ಯೆಯನ್ನು ಕೊಟ್ಟು ಅದನ್ನು ಆಯಾ ಉದ್ಧೃತಿಯ ಎಲ್ಲ ಪುನರುಕ್ತಿ ಸಂದರ್ಭಗಳಲ್ಲಿಯೂ ಉದ್ಧೃತಿಯ ಪುನರುಕ್ತಿಯಿರಲಿ, ಇಲ್ಲದಿರಲಿ, ಅದೇ ಸಂಖ್ಯೆಯಿಂದಲೇ ಇಡೀ ಪ್ರಕರಣದ ಉದ್ದಕ್ಕೂ ಸೂಚಿಸಲಾಗಿದೆ. ' ಉ. ಗ್ರಂ.' ಎಂದರೆ ಉಕ್ತ ಗ್ರಂಥ, ಎಂದರೆ ಆಯಾ ಗ್ರಂಥಕಾರನದೆಂದು ಹಿಂದಿನ ಆಕರಸೂಚನಾಸಂದರ್ಭದಲ್ಲಿ ಸೂಚಿಸಿರುವ ಗ್ರಂಥ ಎಂದಿಟ್ಟುಕೊಳ್ಳಬೇಕು. ಒಬ್ಬನೇ ಗ್ರಂಥಕಾರನ ಒಂದಕ್ಕಿಂತ ಹೆಚ್ಚು ಗ್ರಂಥಗಳು ಸೂಚಿತವಾಗಿರುವಾಗ, ಉಕ್ತಗ್ರಂಥವಲ್ಲದುದನ್ನು ಅದರ ಪೂರ್ತಿ ಹೆಸರಿನಿಂದಲೇ ಸೂಚಿಸಲಾಗಿದೆ. ' ಅದೇ ಗ್ರಂಥ ' ಎಂದರೆ ತನ್ನ ಹಿಂದಿನ ಸೂಚನೆಯಲ್ಲಿರುವ ಗ್ರಂಥಕಾರನ ಅದೇ ಗ್ರಂಥ ಎಂದು ಸಂಜ್ಞೆ. ರೋಮನ್ ಅಂಕಗಳು (I, II ಇತ್ಯಾದಿ) ಭಾಗ, ಅಧ್ಯಾಯ ಮುಂತಾದವನ್ನೂ ಅರಾಬಿಕ್ ಅಂಕಗಳು (1, 2 ಇತ್ಯಾದಿ) ಶ್ಲೋಕಸಂಖ್ಯೆ ಮೊದಲಾದವನ್ನೂ ಸೂಚಿಸುತ್ತವೆ.

ಆಕರ ಸೂಚನೆಯ ಸಂದರ್ಭದಲ್ಲಿ ಮುಖ್ಯವಾದ ಇನ್ನೊಂದು ಮಾತನ್ನು ಹೇಳಬೇಕಾಗಿದೆ: ಅಂತರರಾಷ್ಟ್ರೀಯ ಆಕರಸೂಚನಾಪದ್ಧತಿಯನ್ನು ಅನುಸರಿಸಿರುವುದರಿಂದ ಕನ್ನಡದಲ್ಲಿ ಇಂದು ಪ್ರಚಲಿತವಾಗಿರುವ ಒಂದು ಸಂಪ್ರದಾಯವನ್ನು ಸ್ವಲ್ಪಮಟ್ಟಿಗೆ ಉಲ್ಲಂಘಿಸಬೇಕಾಯಿತು. ಹೀಗೆ, ಜೀವಂತರಾಗಿರುವ ಆಧುನಿಕ ವಿದ್ವಾಂಸರುಗಳಾದ ಪ್ರೊ|| ಪಿ. ಸಾಂಬಮೂರ್ತಿಯವರು, ಪ್ರೊ|| ಜಿ. ಎಚ್. ರಾನಡೆಯವರು, ಶಿವಶರಣನೆಂಬ ಸಂಕೇತನಾಮದಲ್ಲಿ ತಮ್ಮ ಗ್ರಂಥಗಳನ್ನು ರಚಿಸಿರುವ ಪ್ರೊ|| ಅಲೇನ್ ಡೇನಿಯಲೌರವರು ಮುಂತಾದವರ ಹೆಸರುಗಳನ್ನು ಭರತ, ದತ್ತಿಲ, ಮತಂಗ, ಅಭಿನವಗುಪ್ತ, ಶಾರ್ಙ್ಗದೇವ, ಪಾಣಿನಿ, ಪತಂಜಲಿ ಮುಂತಾದವರಂತೆಯೇ ಏಕರೂಪತೆಗಾಗಿ ಏಕವಚನದಲ್ಲಿ ವ್ಯವಹರಿಸಲಾಗಿದೆ. ಈ ವಿದ್ವಾಂಸರುಗಳ ವಿಷಯದಲ್ಲಿ ವೈಯಕ್ತಿಕವಾಗಿ ನಾನು ಗೌರವವನ್ನೂ ಆದರವನ್ನೂ ತಳೆದಿದ್ದೇನೆ. ಆದುದರಿಂದ ಈ ಏಕವಚನದ ವ್ಯವಹಾರವನ್ನು ಅಗೌರವದ ಸೂಚನೆಯೆಂದು ಭಾವಿಸಬಾರದಾಗಿ ನಮ್ರವಾಗಿ ಕೋರುತ್ತೇನೆ.

ಗ್ರಂಥದೇಹದಲ್ಲಿ ಆಯಾ ಪ್ರಕರಣದಲ್ಲಿ ಬರತಕ್ಕ ಮುಖ್ಯ ವಿಷಯಗಳನ್ನು ಅವು ಪ್ರಾರಂಭವಾಗುವ ಶ್ಲೋಕದ ಎಡ ಪಕ್ಕದ ಅಂಚಿನಲ್ಲಿ ಕೊಟ್ಟಿದೆ. ಪ್ರತಿಯೊಂದು ಪುಟದ ಮೇಲುತುದಿಯಲ್ಲಿಯೂ ಅಧ್ಯಾಯ ಸಂಖ್ಯೆ, ಪ್ರಕರಣ ಸಂಖ್ಯೆ, ಆಯಾ ಪುಟದಲ್ಲಿ ಮುಗಿಯುವ ಶ್ಲೋಕದ ಸಂಖ್ಯೆ ಇವುಗಳನ್ನು ಸುಲಭಾವಲೋಕನಕ್ಕಾಗಿ ಕೊಟ್ಟಿದೆ. ಅಷ್ಟೇ ಅಲ್ಲದೆ ಆಯಾ ಪ್ರಕರಣದಲ್ಲಿ ಒಂದು ಶ್ಲೋಕವು ಪಡೆದ ಕ್ರಮಸಂಖ್ಯೆಯನ್ನೂ ಇಡೀ ಗ್ರಂಥದಲ್ಲಿ ಅದು ಪಡೆದ ಕ್ರಮಸಂಖ್ಯೆಯನ್ನೂ ಅಭ್ಯಾಸಿಗಳ ಸೌಕರ್ಯಕ್ಕಾಗಿ ಕೊಡಲಾಗಿದೆ. ಪುಟದ ಕೆಳತುದಿಯಲ್ಲಿ ಆಯಾ ಪ್ರಕರಣದ ಹೆಸರನ್ನು ಕೊಟ್ಟಿದೆ.

ಗ್ರಂಥದ ಪರಿಶಿಷ್ಟಭಾಗದಲ್ಲಿ ಮೂಲಗ್ರಂಥದ ಶ್ಲೋಕಾರ್ಧಾನುಕ್ರಮಣೀ, ಉದ್ಧೃತಗ್ರಂಥಕರ್ತರ, ಉದ್ಧೃತ ಭಾರತೀಯ ಭಾಷಾಗ್ರಂಥಗಳ, ಉದ್ಧೃತ ಭಾರತಿಯೇತರ ಭಾಷಾಗ್ರಂಥಗಳ ಮತ್ತು ಉದ್ಧೃತ ಹಸ್ತಪ್ರತಿಗಳ ಅನುಕ್ರಮಣಿಕೆಗಳನ್ನು ಕೊಟ್ಟಿದೆ. ಅಚ್ಚಿನ ತಪ್ಪುಗಳನ್ನು ಸಾಧ್ಯವಾದಮಟ್ಟಿಗೂ ಹುಡುಕಿ ಕೊಟ್ಟಿದೆ. ಇವನ್ನು ಓದುಗರು ದಯವಿಟ್ಟು ಮನ್ನಿಸಬೇಕು.

## ಅಭಿವಂದನೆ

ಈ ಗ್ರಂಥವನ್ನು ಪ್ರಕಟಿಸುತ್ತಿರುವ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನನ್ನ ಮೊದಲನೆಯ ಕೃತಜ್ಞತೆ ಸಲ್ಲುತ್ತದೆ. ಈ ಗ್ರಂಥದ ಪ್ರಕಟನೆಯ ಹೊಣೆ ಹೊತ್ತು ಪ್ರಕಟವಾಗಲು ಅವಕಾಶಮಾಡಿಕೊಟ್ಟವರು ಪ್ರಸಾರಾಂಗದ ಅಧಿಕಾರಿಗಳಾದ ಡಾ|| ಪ್ರಭುಶಂಕರ, ಎಂ.ಎ., ಪಿಎಚ್.ಡಿ.,ರವರು ಮತ್ತು ಶ್ರೀ ಕೆ. ಟಿ. ವೀರಪ್ಪ, ಎಂ.ಎ., ರವರು. ಇವರಿಬ್ಬರ ಸಹಾಯ, ಸೌಜನ್ಯಗಳಿಗಾಗಿ ನಾನು ಬಹುವಾಗಿ ಋಣಿಯಾಗಿದ್ದೇನೆ.

ಈ ಗ್ರಂಥವು ಮೊದಲು ತಮ್ಮ ಗ್ರಂಥಮಾಲೆಯಲ್ಲಿ ಪ್ರಕಟವಾಗಬೇಕಾಗಿದ್ದುದು ಬೇರೆಡೆ ಪ್ರಕಟವಾಗಲು ಅನುಮತಿಯಿತ್ತ, ಹಾಗೂ ತಮ್ಮ ಹಸ್ತಪ್ರತಿಗ್ರಂಥಭಂಡಾರದ ಮತ್ತು ಮುದ್ರಿತಗ್ರಂಥಭಂಡಾರದ ಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಲು ಅವಕಾಶವಿತ್ತ ಮೈಸೂರಿನ ಶ್ರೀ ವರಲಕ್ಷ್ಮೀ ಅಕಾಡಮಿ ಆಫ್ ಫೈನ್ ಆರ್ಟ್ಸ್ ಸಂಸ್ಥೆಗೂ ಹಸ್ತಪ್ರತಿಗಳ ಅವಲೋಕನಕ್ಕೆ ಅವಕಾಶಮಾಡಿಕೊಟ್ಟ ಮೈಸೂರು ಪ್ರಾಚ್ಯಸಂಶೋಧನಾಸಂಸ್ಥೆಯವರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ. ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀ ಪಂಚಾಚಾರ್ಯ ಮುದ್ರಣಾಲಯದವರಿಗೂ ವಂದನೆಗಳು.

ಮೈಸೂರು,
ಪ್ಲವಂಗ ಪುಷ್ಯ ಬಹುಳ ದ್ವಾದಶೀ, ಶುಕ್ರವಾರ
ಗಣರಾಜ್ಯದಿನ, 1968

**ರಾ. ಸತ್ಯನಾರಾಯಣ**
(ಮೈಸೂರು ಸಹೋದರರು)

ಪ್ರತ್ಯಕ್ಷದೈವವೂ ಜೀವನದ ಸಾರಸರ್ವಸ್ವವೂ ಆದ

ನನ್ನ ತಾಯಿ

**ಸಂ॥ ವಿ॥ ಶ್ರೀಮತಿ ವರಲಕ್ಷ್ಮೀ ರಾಮಯ್ಯ**

(1899–1964)

ಅವರ ಶ್ರೀಚರಣಗಳಲ್ಲಿ

ಈ ಭಕ್ತಿಕುಸುಮವನ್ನು ಅರ್ಪಿಸಿದ್ದೇನೆ.



# ಸಂಗೀತರತ್ನಾಕರ

## ವಿಷಯಾನುಕ್ರಮಣೀ



## ನಿಃಶಂಕಹೃದಯ

### ಶ್ರುತಿಯ ಸಂಶೋಧನೆ ಮತ್ತು ವಿವೇಚನೆ



### ಸ್ವರ–ಶ್ರುತಿಗಳ ಸಂಬಂಧಗಳು



### ಪರಿಶಿಷ್ಟ: ಅನುಬಂಧಗಳು

## ಪಥಕಗಳು



## ನಕ್ಷೆಗಳು

|| ಶ್ರೀಃ ||

ಶ್ರೀ ನಿಃಶಂಕಶಾರ್ಙ್ಗದೇವನಿಂದ ವಿರಚಿತವಾದ

# ಸಂಗೀತರತ್ನಾಕರ

## ಸ್ವರಗತವೆಂಬ ಮೊದಲನೆಯ ಅಧ್ಯಾಯ

### ಪದಾರ್ಥಸಂಗ್ರಹವೆಂಬ ಮೊದಲನೆಯ ಪ್ರಕರಣ

ಮಂಗಳಾಚರಣೆ

ಬ್ರಹ್ಮಗ್ರಂಥಿಜಮಾರುತಾನುಗತಿನಾ ಚಿತ್ತೇನ ಹೃತ್ಪಂಕಜೇ
ಸೂರೀಣಾಮನುರಂಜಕಃ ಶ್ರುತಿಪದಂ[1] ಯೋऽಯಂ ಸ್ವಯಂ ರಾಜತೇ ।
ಯಸ್ಮಾದ್ ಗ್ರಾಮವಿಭಾಗವರ್ಣ[2]ರಚನಾऽಲಂಕಾರಜಾತಿಕ್ರಮೋ
ವಂದೇ ನಾದತನುಂ ತಮುದ್ಧುರಜಗದ್ಗೀತಂ ಮುದೇ ಶಂಕರಮ್ ॥ 1

ಬ್ರಹ್ಮಗ್ರಂಥಿಯಲ್ಲಿ ಜನಿಸಿದ [ಪ್ರಾಣ] ವಾಯುವಿನೊಡನೆ ಚಲಿಸುವ ಚಿತ್ತದಿಂದ (ಅದರ ಪರಿಣಾಮವಾಗಿ) ಯೋಗಿಗಳ ಹೃದಯಕಮಲದಲ್ಲಿ ಯಾವನು ಸ್ವಯಂಪ್ರಕಾಶನೋ, ಶ್ರುತಿ-ಪದಗಳ ಆಶ್ರಯನೋ, ಯಾರಿಂದ ಗ್ರಾಮ, [ಮತ್ತು ಅದರ] ವಿಭಾಗ, ವರ್ಣ, ರಚನೆ, ಅಲಂಕಾರ, ಜಾತಿ, ಕ್ರಮ (ಮುಂತಾದವು) ಗಳೋ, [ಯಾವನು] ನಾದವನ್ನು ದೇಹವಾಗಿ ಉಳ್ಳವನೂ, ಇಡೀ ಜಗತ್ತಿನಿಂದ ಹಾಡಿನ ಮೂಲಕ ಸ್ತುತಿಸಲ್ಪಡುವವನೂ [ಆಗಿರುವನೋ ಅಂತಹ] ಶಂಕರನನ್ನು ಆನಂದವನ್ನುಂಟುಮಾಡಲೆಂದು ವಂದಿಸುತ್ತೇನೆ.

ಸಂಗೀತರತ್ನಾಕರದ ಈ ಮಂಗಳಶ್ಲೋಕದಲ್ಲಿ ಶ್ರೀ ಶಾರ್ಙ್ಗದೇವನು ಶಿಷ್ಟಾಚಾರದ ಸತ್‌ಸಂಪ್ರದಾಯವನ್ನು ಅನುಸರಿಸಿ ತನ್ನ ಇಷ್ಟದೇವತೆಯಾದ ಶಂಕರನನ್ನು ವಂದಿಸಿದ್ದಾನೆ. ವೈದಿಕಸಂಸ್ಕೃತಿಯ ಪ್ರಕಾರ ಮೋಕ್ಷವು ಮಾನವನ ಕಡೆಯ ಗುರಿ. ಇಂತಹ ಮೋಕ್ಷಪ್ರಾಪ್ತಿಗಾಗಿ ಮೊದಲಿನಲ್ಲಿಯೇ ಮೋಕ್ಷಸ್ಥಾನವೂ ಸಕಲವಿಘ್ನನಿವಾರಕವೂ ಆದ ಬ್ರಹ್ಮಶಬ್ದವನ್ನು ಉಚ್ಚರಿಸಿದ್ದಾನೆ. ನಮಸ್ಕಾರವು ಮನಸ್ಸಿನಿಂದ, ಮಾತಿನಿಂದ ಮತ್ತು ಶರೀರದಿಂದ ಎಂದು ಮೂರು ಬಗೆ. ಪ್ರಥಮ ಚರಣದಲ್ಲಿ 'ಚಿತ್ತೇನ' ಎಂಬ ಶಬ್ದದಿಂದ ಮಾನಸಿಕವಾಗಿಯೂ ಗ್ರಂಥದಲ್ಲಿಯೇ ಶ್ರದ್ಧಾವಂತನಾಗಿ ಹೇಳಿರುವುದರಿಂದ ವಾಚಿಕವಾಗಿಯೂ ವಂದಿಸಿ ಶಾರೀರಕ ನಮಸ್ಕಾರದಿಂದ ಇವುಗಳನ್ನು ಅನುಸರಿಸುವುದರಿಂದ 'ವಂದೇ' ಎಂಬ ಒಂದೇ ಶಬ್ದದಿಂದ ಮೂರೂ ಬಗೆಯನ್ನು ಸೂಚಿಸಿದಂತಾಯಿತು. ಅವನು ಹೀಗೆ ವಂದಿಸಿರುವುದು ತನ್ನ ಇಷ್ಟದೇವತೆಯಾದ ಶಂಕರನನ್ನು. ಈ ಮಂಗಳಾಚರಣ ಶ್ಲೋಕವು ಶಬ್ದಬ್ರಹ್ಮಸ್ವರೂಪವಾದ ಸರ್ವೇಶ್ವರನಿಗೂ ಎಲ್ಲ ಸಂಗೀತಕ್ಕೆ ಆಧಾರವಾದ ಗೀತಕ್ಕೂ ಏಕಕಾಲದಲ್ಲಿ ಅನ್ವಯಿಸುವಂತೆ ಬಹು ಸ್ವಾರಸ್ಯವಾದ ಶ್ಲೇಷಾಲಂಕಾರವನ್ನು ಒಳಗೊಂಡಿದೆ.

---

1 ಗ: ಶ್ರುತಿಪಥಂ. 2 ಗ: ಬದ್ಧ.

ಭಾರತೀಯ ಯೋಗಶಾಸ್ತ್ರದಲ್ಲಿ ಮನುಷ್ಯದೇಹವನ್ನು ವಿವಿಧ ಅಂಗಗಳಲ್ಲಿ ವಿವಿಧ ದೈವೀಶಕ್ತಿಗಳನ್ನುಳ್ಳ ಘಟವೆಂದೂ ಈ ಶಕ್ತಿಗಳನ್ನು ಮೋಕ್ಷಸಿದ್ಧಿಗಾಗಿ ಅಭ್ಯಾಸಮಾಡಿ ಪಡೆಯಬೇಕೆಂದೂ ಹೇಳಿದೆ. ಹೀಗೆ, ಅಸನ ದ್ವಾರಕ್ಕೂ ಲಿಂಗಕ್ಕೂ ನಡುವೆ ಬ್ರಹ್ಮಶಕ್ತಿಸ್ಥಾನವಾದ ಮೂಲಾಧಾರವೆಂಬ ಚಕ್ರವಿದೆ. ಇದಕ್ಕೆ ಎರಡು ಅಂಗುಲಗಳ ಎತ್ತರದಲ್ಲೂ ಜನನಾಂಗದಿಂದ ಎರಡು ಅಂಗುಲಗಳ ಕೆಳಗೂ ಪುಟವಿಟ್ಟ ಚಿನ್ನದಂತೆ ಹೊಳೆಯುವ, ಒಂದು ಅಂಗುಲ ವಿಸ್ತಾರದ ದೇಹಮಧ್ಯವಿದೆ. ಅದರಲ್ಲಿ ತೆಳುವಾದ, ನೀಲವರ್ಣದ ಅಗ್ನಿಶಿಖೆಯಿದೆ. ಮೂಲಾಧಾರ ಚಕ್ರದಿಂದ ಒಂಬತ್ತು ಅಂಗುಲಗಳ ಎತ್ತರದಲ್ಲಿ (ನಾಭಿಸ್ಥಾನದಲ್ಲಿ) ನಾಲ್ಕು ಅಂಗುಲಗಳಷ್ಟು ಉದ್ದ-ಅಗಲಗಳಿರುವ ಗೆಡ್ಡೆಯೊಂದಿದೆ. ಇದಕ್ಕೆ ಬ್ರಹ್ಮಗ್ರಂಥಿಯೆಂದೂ ನಾಭಿಕಂದವೆಂದೂ ಹೆಸರು. ಇದರಲ್ಲಿ ಪ್ರಾಣವಾಯುವು ಹುಟ್ಟುತ್ತದೆ. ಅದರೊಡನೆ ಜೀವನು ಸುಷುಮ್ನಾನಾಡಿಯ ಮೂಲಕ ಬ್ರಹ್ಮಗ್ರಂಥಿಯಿಂದ ಬ್ರಹ್ಮರಂಧ್ರದವರೆಗೂ ಊರ್ಧ್ವಮುಖನಾಗಿ ಚಲಿಸುತ್ತಾನೆ. ಯೋಗಿಗಳು ತಮ್ಮ ಚಿತ್ತವನ್ನು ಹೃದಯಕಮಲದಲ್ಲಿರುವ ಅನಾಹತವೆಂಬ ಚಕ್ರದಲ್ಲಿ ಕೇಂದ್ರೀಕರಿಸಿ ಧ್ಯಾನಮಾಡುವಾಗ ಶ್ರುತಿಪದವಾದ (ಎಂದರೆ ವೇದಗಳಿಗೆ ಆಶ್ರಯಸ್ಥಾನವಾದ) ಓಂಕಾರ ರೂಪದಲ್ಲಿ ಬ್ರಹ್ಮವು ಅಭಿವ್ಯಕ್ತವಾಗುತ್ತದೆ; ಅಲ್ಲದೆ ಬ್ರಹ್ಮವನ್ನು ವರ್ಣಿಸುವ 'ತತ್ತ್ವಮಸಿ' ಮೊದಲಾದ ವಾಕ್ಯಗಳ ಅರ್ಥ, ಅನುಭವಗಳು ಗೋಚರವಾಗುವುದೂ ಅಲ್ಲಿಯೇ. ಪರಾವಲಂಬನೆಯಿಲ್ಲದೆ ಇದು ಯೋಗಿಗಳಿಗೆ ಬ್ರಹ್ಮಾನಂದವನ್ನು ಉಂಟುಮಾಡುತ್ತದೆ. ಮತ್ತು ಸ್ವಯಂಪ್ರಕಾಶವಾಗಿರುತ್ತದೆ.[1] ಪರಬ್ರಹ್ಮನೇ ಅವಿದ್ಯೆಯ ಮೂಲಕ ಗ್ರಾಮ (ಸಕಲ ಲೋಕಗಳು), ಅದರ ವಿಭಾಗಗಳು,[2] ಗುಣ ಮತ್ತು ಕರ್ಮಗಳ ಭೇದಗಳಿಂದ ಉಂಟಾದ (ಬ್ರಾಹ್ಮಣಾದಿ ಸಾಮಾಜಿಕ) ವರ್ಣಗಳು, ಇವುಗಳೆಲ್ಲದರ ವ್ಯವಸ್ಥೆ, ಸಕಲ ಭೂತಗಳ ಸ್ಥಿತಿಗೆ ಸಾಕಾದಷ್ಟು (ಆಹಾರವೇ ಮೊದಲಾದ) ಏರ್ಪಾಟು (ಅಲಂಕಾರ),[3] ಪ್ರಮುಖ ವಿಭಾಗಗಳ ವರ್ಗೀಕರಣದಿಂದ ಉಂಟಾದ ಜಾತಿಗಳು, ಸಕಲ ಸೃಷ್ಟಿಯ ಮುನ್ನಡೆ (ಕ್ರಮ),[4] ಇವುಗಳ ಸೃಷ್ಟಿಗೆ ಕಾರಣವಾಗಿದೆ. ಪರಬ್ರಹ್ಮವು ನಾದವನ್ನೇ ದೇಹವಾಗಿ ಉಳ್ಳದ್ದು.[5]

---

1 ವಿವರಗಳಿಗೆ ಇದೇ ಅಧ್ಯಾಯದ ಎರಡನೆಯ ಪ್ರಕರಣದಲ್ಲಿ 120ನೆಯ ಮತ್ತು ಮುಂದಿನ ಶ್ಲೋಕಗಳ ವ್ಯಾಖ್ಯಾನವನ್ನು ನೋಡಿ.

2 ವಿಭಾಗವೆಂಬುದಕ್ಕೆ ಐಶ್ವರ್ಯ ಎಂಬ ಸಮೀಕರಣವನ್ನು ಕುಸ್ಥ್ ರಾಜಾ ಯಾವ ಆಧಾರದಿಂದ ಪಡೆಯುತ್ತಾರೋ ತಿಳಿಯದು.

3 ಅಲಂಕಾರ ಪದಕ್ಕೆ ಸಿಂಹಭೂಪಾಲ (ಸಂಗೀತರತ್ನಾಕರ, ಪು. 8), ಕುನ್ಹರಾಜಾ (ಸಂಗೀತರತ್ನಾಕರದ ಅಂಗ್ಲಾನುವಾದ, ಪು. 1) ಮೊದಲಾದವರು ಹೇಳುವ 'ಆಭರಣಾದಿಗಳು' ಎಂಬ ಸಾಮಾನ್ಯಾರ್ಥವಿದ್ದರೂ ಅದರಿಂದ ಈ ಸಂದರ್ಭದಲ್ಲಿ ಔಚಿತ್ಯವಾಗಲೀ ಪುಷ್ಟಿಯಾಗಲೀ ದೊರೆಯಲಾರದು. ಅಲಂಶಬ್ದಕ್ಕೆ ಮೂಲತಃ ಸಾಕಾದಷ್ಟು, ಎಂಬರ್ಥವೂ (ಅಥರ್ವವೇದ, VI, 109, 1; ಪಾಣಿನಿ, III, 4, 18 ಇತ್ಯಾದಿ), ಕಾರಕಶಬ್ದಕ್ಕೆ ಸಂಪ್ರದಾನ ಶಬ್ದದ ಸಂಬಂಧದಿಂದ ಉಂಟಾಗುವ 'ಕೊಡುವಿಕೆ, ಉಂಟುಮಾಡುವಿಕೆ' ಎಂಬರ್ಥವೂ ಇದ್ದು 'ಅವಸ್ಥಾವಿಶೇಷದ ಮುಂದುವರಿಯುವಿಕೆಗೆ ಸಾಕಾದಷ್ಟು (ಸಂದರ್ಭಗಳನ್ನು) ಉಂಟುಮಾಡುವಿಕೆ' ಎಂಬ ಅರ್ಥವೇ ಇಲ್ಲಿ ಹೆಚ್ಚು ಪ್ರಶಸ್ತವಾಗಿದೆ.

4 ಕ್ರಮ ಎಂಬುದಕ್ಕೆ ಕುನ್ಹರಾಜಾ (ಪು. 1) ಸಿಂಹಭೂಪಾಲನ ವ್ಯಾಖ್ಯಾನವನ್ನು ಅನುಸರಿಸಿ (ಸಂಗೀತರತ್ನಾಕರ, ಪು. 8) ವಿಕಾಸದ ಹಂತಗಳು ಎಂದು ಅರ್ಥಮಾಡುತ್ತಾನೆ. ಆದರೆ ಪಾಣಿನಿ (I, 3, 38; III, 1, 14), ಕಾಶಿಕಾವೃತ್ತಿ ಮತ್ತು ಭಟ್ಟಿಕಾವ್ಯ (XV, 20) ಇವುಗಳಂತೆ 'ಮುಂದಕ್ಕೆ ಚಲಿಸು' ಎಂಬ ಅರ್ಥವೇ ಇಲ್ಲಿ ಸರಿಯೆಂದು ತೋರುತ್ತದೆ.

5 ಇದೇ ಅಧ್ಯಾಯದ ಮೂರನೆಯ ಪ್ರಕರಣದ ಮೊದಲನೆಯ ಶ್ಲೋಕದ ವ್ಯಾಖ್ಯಾನವನ್ನೂ ನೋಡಿ.

## 1. ಪದಾರ್ಥಸಂಗ್ರಹ ಪ್ರಕರಣ

ಇದೇ ಶ್ಲೋಕದಲ್ಲಿ ಗೀತವನ್ನೂ ಹೀಗೆ ಸ್ತುತಿಸಿದೆ :

ಗೀತವು ರಂಜಕವಾದ ಸ್ವರಸಂದರ್ಭ.[6] ಈ ಸ್ವರಸಂದರ್ಭಕ್ಕೆ ನಾದವೇ ದೇಹವಾದುದರಿಂದ ಅದೂ ನಾದ ತನುವೇ. ಸಂಗೀತಶಬ್ದದಲ್ಲಿ ಗೀತ, ವಾದ್ಯ ಮತ್ತು ನೃತ್ತಗಳು ಅಡಕವಾಗಿದ್ದರೂ,[7] ಇವುಗಳಲ್ಲಿ ಗೀತವೇ ಪ್ರಧಾನ ವಾದುದರಿಂದ[8] ಅದನ್ನೇ ಉದ್ದೇಶಿಸಿ ಗ್ರಂಥಕಾರನು ಮೊದಲಲ್ಲಿ ನಮಸ್ಕರಿಸಿದ್ದಾನೆ. ಆನಂದವನ್ನು (ಶಂ) ಉಂಟು ಮಾಡುವುದರಿಂದ (ಕರ) ಅದು ಶಂಕರವೂ ಹೌದು. ಬೇರೆ ಕಾರಣವಿಲ್ಲದೆಯೂ ಪರಾವಲಂಬನೆಯಿಲ್ಲದೆಯೂ ತನ್ನ ಸ್ವಭಾವದಿಂದಲೇ ಚಿತ್ತವನ್ನು ರಂಜಿಸುವುದರಿಂದ (ಬಣ್ಣ ಕಟ್ಟುವುದರಿಂದ) ಅದು 'ಸ್ವಯಂರಾಜತೇ'. ಹಾಡಿಲ್ಲದ ನಾಡು—ಅದು ಯಾವುದೇ ಸಾಂಸ್ಕೃತಿಕ ಅಥವಾ ಸಾಮಾಜಿಕ ಮಟ್ಟದಲ್ಲಿರಲಿ—ಜಗತ್ತಿನಲ್ಲಿಲ್ಲ. ಆದುದರಿಂದ ಅದು 'ಉದ್ಧುರಜಗದ್ಗೀತಂ'. ನಾದವು ಹುಟ್ಟುವುದು ಪ್ರಾಣವಾಯು ಮತ್ತು ಅಗ್ನಿಗಳ ಸಂಯೋಗದಿಂದ ;[9] ಬ್ರಹ್ಮ ಗ್ರಂಥಿಯ ಪ್ರದೇಶದಲ್ಲಿರುವ ದೇಹಮಧ್ಯದಲ್ಲಿ ಅಗ್ನಿಶಿಖೆಯಿದೆ. ಬ್ರಹ್ಮಗ್ರಂಥಿಯಲ್ಲಿ ಹುಟ್ಟಿದ ಪ್ರಾಣವಾಯುವು ಈ ಅಗ್ನಿಯೊಡನೆ ಸೇರಿದಾಗ ನಾದದ ಉತ್ಪತ್ತಿಯಾಗುತ್ತದೆ. ನಾದವು ತನ್ನ ಅಭಿವ್ಯಕ್ತಿಯ ಘಟ್ಟವನ್ನನುಸರಿಸಿ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಅವಸ್ಥೆಗಳಲ್ಲಿಯೂ[10]—

ವೈಖರೀ ಶಕ್ತಿನಿಷ್ಪತ್ತಿಃ ಮಧ್ಯಮಾ ಶ್ರುತಿಗೋಚರಾ ।
ದ್ಯೋತಿತಾರ್ಥಂತು ಪಶ್ಯಂತೀ ಸೂಕ್ಷ್ಮಾವಾಗನಪಾಯಿನೀ ॥[11]

ಅಲ್ಲದೆ ಉಪಾಂಶು, ಧ್ವಾನ, ನಿಮದ, ಉಪಬ್ದಿಮತ್, ಮಂದ್ರ, ಮಧ್ಯ ಮತ್ತು ತಾರಗಳೆಂಬ ಸಪ್ತಸ್ಥಾನ ಗಳಲ್ಲಿಯೂ—

ಸಪ್ತವಾಚಸ್ಥಾನಾನಿ ಭವಂತಿ । ಉಪಾಂಶು, ಧ್ವಾನ, ನಿಮದ, ಉಪಬ್ದಿಮತ್, ಮಂದ್ರ, ಮಧ್ಯಮ, ತಾರಾಣಿ । ಕರಣವದಶಬ್ದಂ ಅಮನಃ ಪ್ರಯೋಗಂ ಉಪಾಂಶು । ಅಕ್ಷರವ್ಯಂಜನಾನಾಂ ಅನುಪಲಬ್ಧಿರ್ಧ್ವಾನಃ । ಉಪಲಬ್ಧಿರ್ನಿಮದಃ । ಸಶಬ್ದಂ ಉಪಬ್ದಿಮತ್ । ಉರಸಿ ಮಂದ್ರಂ, ಕಂಠೇ ಮಧ್ಯಮಂ, ಶಿರಸಿ ತಾರಂ ।[12]

ಗೋಚರವಾಗುವುದು. ಇವುಗಳಲ್ಲಿ ಹೃದಯಪ್ರದೇಶದಲ್ಲಿ ಗೋಚರವಾಗುವುದೇ ವ್ಯವಹಾರದಲ್ಲಿ ಅತ್ಯಂತ ಕೆಳಮಟ್ಟಕ್ಕೆ ಸೇರಿದ ಮಂದ್ರಸ್ಥಾನ. ಆದುದರಿಂದಲೇ ಈ ನಾದವನ್ನು 'ಸೂರೀಣಾಂ ಹೃತ್ಪಂಕಜೇ ರಂಜಕಃ'

---

6 'ರಂಜಕಃ ಸ್ವರಸಂದರ್ಭೋ ಗೀತಮಿತ್ಯಭಿಧೀಯತೇ' ಸಂಗೀತರತ್ನಾಕರ, IV, 1.

7 'ಗೀತಂ ವಾದ್ಯಂ ತಥಾ ನೃತ್ತಂ ತ್ರಯಂ ಸಂಗೀತಮುಚ್ಯತೇ' ಸಂಗೀತರತ್ನಾಕರ, I, 1, 21.

8 'ಅತೋ ಗೀತಂ ಪ್ರಧಾನತ್ವಾತ್' ಅದೇ, I, 1, 25.

9 'ಜಾತಃ ಪ್ರಾಣಾಗ್ನಿಸಂಯೋಗಾತ್ತೇನ ನಾದೋಽಭಿಧೀಯತೇ'–ಸಂಗೀತರತ್ನಾಕರ, I, 3, 6. 'ಪ್ರಾಣಾನಲಸಂಯೋಗಮು ವಲ್ಲ ಪ್ರಣವನಾದಮು ಸಪ್ತಸ್ವರಮುಲೈ ಬರಗ' ಎಂದು ತ್ಯಾಗರಾಜನು ತನ್ನ ಸಾರಮತಿ ರಾಗದ 'ಮೋಕ್ಷಮುಗಲದಾ' ಎಂಬ ಕೃತಿಯಲ್ಲಿ ಹೇಳಿರುವುದೂ ಇದನ್ನೇ.

10 ಲಲಿತಾಸಹಸ್ರನಾಮ, ನಾಮಗಳು 366 ರಿಂದ 371.

11 ಶ್ರುತಿಯ ಉದ್ಧೃತಿ, ಶ್ರೀ ಲಲಿತಾಸಹಸ್ರನಾಮ ಭಾಷ್ಯ, ಪು. 143.

12 ತೈತ್ತಿರೀಯ ಪ್ರಾತಿಶಾಖ್ಯ, XXIII, 4,—12. ಇದರ ಮೇಲೆ ಗಾರ್ಗ್ಯಗೋಪಾಲಯಜ್ವನು ಬರೆದಿರುವ ಭಾಷ್ಯವನ್ನೂ ನೋಡಿ.

## 1. ಪದಾರ್ಥಸಂಗ್ರಹ ಪ್ರಕರಣ

ಎಂದು ಗ್ರಂಥಕಾರನು ಹೇಳಿದ್ದಾನೆ. ಇಂತಹ ನಾದದಿಂದಲೇ ಗ್ರಾಮ, ಅದರ ವಿಭಾಗಗಳಾದ ಮೂರ್ಛನೆ ಮತ್ತು ತಾನಗಳು, ವರ್ಣಗಳು, ಅಲಂಕಾರಗಳು, ಜಾತಿಗಳು, ಕ್ರಮಗಳು, ಮೊದಲಾದವುಗಳು ವಿಕಾಸಕ್ರಮದಲ್ಲಿ ಹುಟ್ಟಿ ಗಾನಪ್ರಪಂಚವಾಗಿವೆ.

ಗ್ರಾಮ : ಗಾನಪ್ರಪಂಚದಲ್ಲಿರುವ ಎಲ್ಲಾ ಸ್ವರಗಳನ್ನೂ ಅವುಗಳ ಉಚ್ಚನೀಚಭಾವ, ಪರಸ್ಪರ (ವಾದಿ, ಸಂವಾದಿ ವಿವಾದಿ, ಅನುವಾದಿ ಮುಂತಾದ) ಸಂಬಂಧ, ಇತ್ಯಾದಿಗಳನ್ನು ಅನುಸರಿಸಿ ಲಕ್ಷ್ಯದೊಡನೆ ಅವುಗಳ ತಾತ್ತ್ವಿಕ ನಿರೂಪಣೆ ಹಾಗೂ ತಾರತಮ್ಯಗಳಿಗಾಗಿಯೂ, ಪ್ರಾಚೀನ ಮತ್ತು ಅರ್ವಾಚೀನ ರಾಗ ಕೋಶವನ್ನೆಲ್ಲ ಹೋಲಿಸಿ ವಿಂಗಡಿಸಲು ಆವಶ್ಯಕವಾಗಿಯೂ ಇದ್ದ ಪ್ರಾಚೀನ ಭಾರತೀಯ ತಾತ್ತ್ವಿಕ ಸ್ವರಾಷ್ಟಕಕ್ಕೆ ಗ್ರಾಮವೆಂದು ಹೆಸರು.

ಮೂರ್ಛನೆ : ಸಪ್ತಸ್ವರಗಳನ್ನು ಕ್ರಮವಾಗಿಯೂ ಸಂಪೂರ್ಣವಾಗಿಯೂ ಆರೋಹಣ-ಅವರೋಹಣ ಕ್ರಮಗಳಲ್ಲಿ ಉಚ್ಚರಿಸುವುದಕ್ಕೆ ಮೂರ್ಛನೆಯೆಂದು ಹೆಸರು.

ತಾನ : ಮೂರ್ಛನೆಯಲ್ಲಿನ ಒಂದು ಅಥವಾ ಹೆಚ್ಚು ಸ್ವರಗಳ ಲೋಪದಿಂದ ಉಂಟಾಗುವುದು ತಾನ. ಮೂರ್ಛನೆ ಮತ್ತು ತಾನಗಳೇ ಗ್ರಾಮದ ವಿಭಾಗಗಳು.

ವರ್ಣ : ಅನೇಕ ಸ್ವರಗಳ ಸಮುಚ್ಚಯಕ್ಕೆ ವರ್ಣವೆಂದು ಹೆಸರು.

ಅಲಂಕಾರ : ಈ ಸಮುಚ್ಚಯಗಳನ್ನು, ಅವುಗಳ ಚಲನೆಯನ್ನು—ಎಂದರೆ, ದೀರ್ಘವಾಗಿ ನಿಂತು ನಿಂತು ಚಲಿಸುವ, ಏರುವ, ಇಳಿಯುವ ಅಥವಾ ವಕ್ರಗತಿಯ ಚಲನೆಯನ್ನು—ಅವಲಂಬಿಸಿ ಮಾಡಿದ ವಿಭಾಗಗಳೇ ಅಲಂಕಾರಗಳು.

ಜಾತಿ : ಹಾಡಿನಲ್ಲಿ ಅಥವಾ ಆಲಾಪನೆಯಲ್ಲಿ ಅಡಗಿರುವ ಸೌಂದರ್ಯಾತ್ಮಕ ಅಂಶವನ್ನು ಅದರ ಭೌತಿಕ ವಿಶ್ಲೇಷಣೆಯ ಮೂಲಕ ಶಾಸ್ತ್ರೀಯವಾಗಿ ಹೇಳುತ್ತಿದ್ದ ವಿಂಗಡನಾಪದ್ಧತಿಗೆ ಜಾತಿಯೆಂದು ಹೆಸರು.

ಕ್ರಮ : ಯಾವುದಾದರೊಂದು ಮೂರ್ಛನೆಯಲ್ಲಿರುವ ಏಳು ಸ್ವರಗಳಲ್ಲಿ ಪ್ರತಿಯೊಂದನ್ನೂ ಕ್ರಮವಾಗಿ ಆಧಾರ ಸ್ವರವಾಗಿ ಮಾಡಿಕೊಂಡು ಮೂಲದಲ್ಲಿನ ಮೂರ್ಛನೆಯಲ್ಲಿರುವ ಸ್ವರಗಳ ಪರಸ್ಪರ ಭಾವಗಳನ್ನು ಪುನಃ ಪುನಃ ಪಡೆಯುವುದೇ ಕ್ರಮ.

ಇವೆಲ್ಲವೂ ಗೀತದ ಅಂಶಗಳೇ ಆದುದರಿಂದ ಇವುಗಳ ಸೃಷ್ಟಿಗೆ ಗೀತವೇ (ಅಥವಾ ಗೀತಪ್ರವೃತ್ತಿಯೇ) ಕಾರಣ.

ಇಷ್ಟೇ ಅಲ್ಲದೆ, ನಾದದಲ್ಲಿ ಅನಾಹತ ಮತ್ತು ಆಹತವೆಂದು ಎರಡು ಬಗೆ.[13] ಶ್ಲೋಕದ ಪೂರ್ವಾರ್ಧದಲ್ಲಿ ಅನಾಹತ ನಾದವನ್ನೂ ಉತ್ತರಾರ್ಧದಲ್ಲಿ ಅದರಿಂದ ಹುಟ್ಟಿದ ಆಹತನಾದವನ್ನೂ ಶ್ರೀ ಶಾರ್ಙ್ಗದೇವನು ಸ್ಮರಿಸಿ ವಂದಿಸಿದ್ದಾನೆ. ನಾದವೇ ಬ್ರಹ್ಮ;[14] ಅದಿಲ್ಲದೆ ಜಗತ್ತಿಲ್ಲ.[15] ಆದುದರಿಂದಲೇ ಮೊದಲಿನಲ್ಲಿ ನಾದಕ್ಕೆ ನಮಸ್ಕಾರ;

---

13 ' ಆಹತೋऽನಾಹತಶ್ಚೇತಿ ದ್ವಿಧಾ ನಾದೋ ನಿಗದ್ಯತೇ ' ಸಂಗೀತರತ್ನಾಕರ, I, 2, 3.

14 ' ನಾದಬ್ರಹ್ಮ ತದಾನಂದಂ ಅದ್ವಿತೀಯಮುಪಾಸ್ಮಹೇ ', ಅದೇ, I, 3, 1.

15 ' ನಾದಾಧೀನಮತೋ ಜಗತ್ ', ಅದೇ, I, 2, 2.

ನಾದ ದೇಹಿಯಾದ ಗೀತಕ್ಕೆ ನಮಸ್ಕಾರ. ನಿರಾಕಾರವೂ ನಿರ್ಗುಣವೂ ಆದ ಬ್ರಹ್ಮವು ಅವ್ಯಕ್ತವಾಗಿ ಅನಾಹತರೂಪದಲ್ಲಿ ಯೋಗಿಹೃದಯಕ್ಕೆ ಮಾತ್ರ ಗೋಚರವೆಂಬುದೂ ಸಾಕಾರವೂ ಸಗುಣವೂ ವ್ಯಕ್ತವೂ ಆಗಿ ಆಹತರೂಪದಲ್ಲಿ ಗ್ರಾಮ, ವರ್ಣ, ಅಲಂಕಾರ, ಮೂರ್ಛನೆ, ಜಾತಿ, ರಾಗ ಮುಂತಾದವುಗಳಿಗೆ ಆಧಾರವಾಗಿದೆಯೆಂಬುದೂ ಇಲ್ಲಿ ಧ್ವನಿ. ಇದರಿಂದ ಗ್ರಂಥಕಾರನು ಬ್ರಹ್ಮವಸ್ತುವಿನ ನಿರ್ಗುಣ ಸಗುಣರೂಪಗಳೆರಡನ್ನೂ ಸ್ಮರಿಸಿ ವಂದಿಸಿದಂತಾಯಿತು.

ಯಾವುದೇ ಗ್ರಂಥರಚನೆಮಾಡಬೇಕಾದರೂ ವಿಷಯ, ಪ್ರಯೋಜನ, ಅಧಿಕಾರಿ ಮತ್ತು ಸಂಬಂಧ ಎಂಬ ಅನುಬಂಧಚತುಷ್ಟಯವನ್ನು ಮೊದಲಿನಲ್ಲಿಯೇ ಹೇಳುವುದು ಶಿಷ್ಟಾಚಾರ, ಸತ್‌ಸಂಪ್ರದಾಯ. ಶ್ರುತಿಪದ, ಗ್ರಾಮವಿಭಾಗ, ವರ್ಣ, ರಚನೆ, ಅಲಂಕಾರ, ಜಾತಿ, ಕ್ರಮ ಮತ್ತು ಗೀತ—ಈ ಪದಗಳಿಂದ ಸಂಗೀತವನ್ನು ನಿರ್ದೇಶಿಸಿ ವಿಷಯವನ್ನು ಹೇಳಿದೆ. ಬ್ರಹ್ಮಪದದಿಂದ ಮೋಕ್ಷವನ್ನೂ ಮುದೇ ಎಂಬುದರಿಂದ ಸಂತೋಷವನ್ನೂ ಹಾಗೆಯೇ ಇದೇ ಪ್ರಕರಣದ 13-14 ನೇ ಶ್ಲೋಕಗಳಲ್ಲಿಯೂ, I, 1, 30 ರಲ್ಲಿಯೂ ಪ್ರಯೋಜನವನ್ನು ತಿಳಿಸಿದೆ. ಇದೇ ಪ್ರಕರಣದ 10–12 ನೇ ಶ್ಲೋಕಗಳಲ್ಲಿ ಹೇಳಿಕೊಂಡಿರುವ ತನ್ನ ಪ್ರಶಸ್ತಿಯಿಂದ ಗ್ರಂಥರಚನೆಗೆ ತನಗಿರುವ ಅಧಿಕಾರವನ್ನು ಗ್ರಂಥಕಾರನು ತಿಳಿಸಿದ್ದಾನೆ. ಮಂಗಳಾಚರಣೆಯ ಶ್ಲೋಕದಲ್ಲಿರುವ ಸಮಷ್ಟಿ-ವ್ಯಷ್ಟಿ, ಬ್ರಹ್ಮಾಂಡ-ಪಿಂಡಾಂಡಗಳ ನ್ಯಾಯದಿಂದ ಬ್ರಹ್ಮಕ್ಕೂ ನಾದಾತ್ಮಕವಾದ ಗೀತಕ್ಕೂ ಸಂಬಂಧವನ್ನು ಹೇಳಿದ್ದಾನೆ. ಈ ಶಾಸ್ತ್ರದಲ್ಲಿ ಶ್ರದ್ಧೆಯುಳ್ಳವರೇ ಈ ಗ್ರಂಥಕ್ಕೆ ಅಧಿಕಾರಿಗಳೆಂಬುದು ಸ್ಪಷ್ಟವಾಗಿಯೇ ಇದೆ.

ಗ್ರಂಥಕಾರನ ವಂಶ

**ಅಸ್ತಿ ಸ್ವಸ್ತಿಗೃಹಂ ವಂಶಃ ಶ್ರೀಮತ್[3]ಕಾಶ್ಮೀರಸಂಭವಃ ।**
**ಋಷೇರ್ವೃಷಗಣಾಜ್ಜಾತಃ ಕೀರ್ತಿಕ್ಷಾಲಿತದಿಙ್ಮುಖಃ[4] ॥ 2**

ಸಂಪದ್ಭರಿತವಾದ ಕಾಶ್ಮೀರದೇಶದಲ್ಲಿ ಹುಟ್ಟಿದ, ವೃಷಗಣನೆಂಬ ಋಷಿಯಿಂದ ಹುಟ್ಟಿದ (ವೃಷಗಣಗೋತ್ರದ), [ದಶ] ದಿಕ್ಕುಗಳನ್ನೂ ತನ್ನ ಕೀರ್ತಿಯಿಂದ ಶುಚಿಗೊಳಿಸಿದ, ಶುಭಕ್ಕೆ ಆಶ್ರಯವಾದ <ಸ್ವಸ್ತಿಗೃಹಂ> ವಂಶವಿದೆ.

ಈ ವೃಷಗಣನು ವಸಿಷ್ಠಗೋತ್ರದವನು. ಅವನು ಋಗ್ವೇದದ ಈ ಕೆಳಗಿನ ಋಕ್ಕು, ಅದರ ಹಿಂದಿನದು ಮತ್ತು ಮುಂದಿನದು, ಹೀಗೆ ಮೂರು ಋಕ್ಕುಗಳನ್ನು ರಚಿಸಿದ್ದಾನೆ.

ಪ್ರ ಹಂಸಾಸಸ್ತೃಪಲಂ ಮನ್ಯುಮಚ್ಛಾಮಾದಸ್ತಂ ವೃಷಗಣಾ ಅಯಾಸುಃ ।
ಆಂಗೂಷ್ಯಂ ಪವಮಾನಂ ಸಖಾಯೋ ದುರ್ಮರ್ಷಂ ಸಾಕಂ ಪ್ರ ವದಂತಿ ವಾಣಮ್ ॥[16]

ಶತ್ರುಗಳಿಂದ ಹಿಂಸಿಸಲ್ಪಟ್ಟ ಹಂಸಗಳಂತೆ (ನಡೆಯುಳ್ಳ) ವೃಷಗಣರು (ತಮ್ಮ) ಯಜ್ಞಶಾಲೆಗೆ ಓಡಿ ಬಂದು ರಕ್ಷಣೆಗಾಗಿ ಶತ್ರುಗಳನ್ನು ಕ್ಷಿಪ್ರವಾಗಿ ಪ್ರಹರಿಸುವ ಸೋಮನನ್ನು ತಮ್ಮ ಗಾಯನದಿಂದಲೂ ವಾಣವೆಂಬ ಸಂಗೀತವಾದ್ಯವನ್ನು ನುಡಿಸುವುದರಿಂದಲೂ ಸ್ತುತಿಸುತ್ತಾರೆ.

ವೃಷಗಣನು ಯಜ್ಞಕಾರ್ಯಗಳಲ್ಲಿ ತೊಡಗಿದ್ದು ಶತ್ರುಬಾಧೆಯಿಂದ ತೊಂದರೆಗೊಳಗಾದ ತನ್ನ ಬಂಧುಗಳನ್ನು ಕುರಿತು ಬಹುಶಃ ಇಲ್ಲಿ ಹೇಳಿದ್ದಾನೆ.

---

3 ಗ: ಶ್ರೀಮಾನ್. 4 ಗ: ದಿಕ್ತಟಃ.

---

16 ಋಗ್ವೇದ, IX, 6, 97, 8.

ವೃಷಗಣವೆಂಬುದು ಬಹಳ ಪ್ರಾಚೀನವೂ ಪ್ರಸಿದ್ಧವೂ ಆದ ಗಾಯಕವಾದಕರ ವಂಶವೆಂಬುದೂ ಶಾರ್ಙ್ಗದೇವನು ಇದೇ ಗೋತ್ರದವನೆಂಬುದೂ ಇಲ್ಲಿ ಚಿಂತ್ಯವಾಗಿದೆ.

**ಯಜ್ವಭಿರ್ಧರ್ಮಧೀಧುರ್ಯೈರ್ವೇದಸಾಗರಪಾರಗೈಃ ।**
**ಯೋ ದ್ವಿಜೇಂದ್ರೈರಲಂಚಕ್ರೇ ಬ್ರಹ್ಮಭಿರ್ಭೂಗತೈರಿವ[5] ॥** 3

ಯಜ್ಞಗಳನ್ನು ಮಾಡಿದ, ಧರ್ಮದ ಆವಾಸಸ್ಥಾನವಾಗಿದ್ದ, ಪ್ರಖ್ಯಾತಮುಂದಾಳುಗಳಾದ <ಧುರ್ಯೈಃ>, ವೇದವೆಂಬ ಸಾಗರದ [ಆಚೆಯ] ದಡಕ್ಕೆ ಹೋದ, ಭೂಮಿಗೆ ಬಂದ ಬ್ರಹ್ಮರೇ ಏನೋ ಎಂಬಂತಿದ್ದ ಬ್ರಾಹ್ಮಣೋತ್ತಮರಿಂದ ವಿಶಾಲವಾದ [ಭೂ] ಚಕ್ರದಲ್ಲಿ (ಆ ವಂಶವು ಶೋಭಿಸಿತು).

**ತತ್ರಾಭೂದ್ ಭಾಸ್ಕರಪ್ರಖ್ಯೋ ಭಾಸ್ಕರಸ್ ತೇಜಸಾಂ ನಿಧಿಃ ।**
**ಅಲಂಕರ್ತುಂ[6] ದಕ್ಷಿಣಾಶಾಂ ಯಶ್ಚಕ್ರೇ ದಕ್ಷಿಣಾಯನಮ್ ॥** 4

ಅದರಲ್ಲಿ ಸೂರ್ಯದೇವನಿಗೇ ಎಣೆಯಾದವನೂ ತೇಜಸ್ಸಿನ ನಿವಾಸಸ್ಥಾನನೂ (ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿದ್ದವನೂ), [ಸೂರ್ಯನಂತೆ] ದಕ್ಷಿಣದಿಗ್ಭಾಗವನ್ನು ಅಲಂಕರಿಸಲೋಸುಗ ದಕ್ಷಿಣಕ್ಕೆ ವಲಸೆ ಬಂದವನೂ ಆದ ಭಾಸ್ಕರ [ದೇವ]ನು ಉದಯಿಸಿದನು.

ದಕ್ಷಿಣಾಶಾಂ ಅಲಂಕರ್ತುಂ ಎಂಬುದಕ್ಕೆ ಸಿಂಹಭೂಪಾಲನು ಭಾಸ್ಕರಪದದಲ್ಲಿ ಶ್ಲೇಷಾರ್ಥವನ್ನು ಕಾಣುತ್ತಾ 'ದಕ್ಷಿಣೆಯ ಆಶೆಯನ್ನು (ದಕ್ಷಿಣೆ ತೆಗೆದುಕೊಳ್ಳುವುದರಲ್ಲಿ ಅರ್ಹರಾದವರ—ಎಂದರೆ ಭೂಸುರಾದಿಗಳ—ಆಶೆಯನ್ನು) ಅಲಂಕರಿಸಲೋಸುಗ' ಎಂಬ ಅರ್ಥವನ್ನೂ ಹೇಳುತ್ತಾನೆ.

**ತಸ್ಯಾಭೂತ್ತನಯಃ ಪ್ರಭೂತವಿನಯಃ ಶ್ರೀಸೋಢಲಃ ಪ್ರೌಢಧೀ-**
**ರ್ಯೇನ ಶ್ರೀಕರಣಪ್ರವೃದ್ಧ[7]ವಿಭವಂ ಭೂವಲ್ಲಭಂ ಭಿಲ್ಲಮಮ್ ।**
**ಆರಾಧ್ಯಾಖಿಲಲೋಕಶೋಕಶಮನೀ ಕೀರ್ತಿಃ ಸಮಾಸಾದಿತಾ**
**ಜೈತ್ರೇ ಜೈತ್ರಪದಂ ನ್ಯಧಾಯಿ ಮಹತೀ ಶ್ರೀ ಸಿಂಘಣೇ ಶ್ರೀರಪಿ ॥** 5

ಬಹು ವಿನಯವಂತನೂ, ಬಲಿತ ಬುದ್ಧಿಯುಳ್ಳವನೂ, ಕಂದಾಯ <ಕರಣ> ಲಕ್ಷ್ಮಿಯನ್ನು (ಐಶ್ವರ್ಯವನ್ನು) ಹೆಚ್ಚಿಸುವುದರಲ್ಲಿ ಮೆರೆಯುವ ಪ್ರಭು ಭಿಲ್ಲಮನ ಕೃಪೆಯಿಂದ ತನ್ನನ್ನು ಆರಾಧಿಸುವ ಎಲ್ಲ ಲೋಕದ ಶೋಕವನ್ನೂ ಹೋಗಲಾಡಿಸಿ ಕೀರ್ತಿಪಡೆದವನೂ ಶ್ರೀ ಸಿಂಘಣನ ಅಮಿತ ಅಭ್ಯುದಯಕ್ಕೆ [ಮತ್ತು ಅವನ] ಜೈತ್ರಯಾತ್ರೆಯಲ್ಲಿ ಜೈತ್ರನಗರದ ವಿಜಯಕ್ಕೆ ಕಾರಣನಾದವನೂ [ಆಗಿದ್ದ] ಶ್ರೀ ಸೋಢಲ[ದೇವ]ನು ಆತನಲ್ಲಿ ಜನಿಸಿದನು.

ಕುನ್ಹನ್‌ರಾಜಾ 'ಶ್ರೀಕರಣಪ್ರವೃದ್ಧ (–ಪ್ರಬುದ್ಧ–) ವಿಭವಂ' ಎಂಬುದಕ್ಕೂ 'ಜೈತ್ರೇ' ಎಂಬುದಕ್ಕೂ ಅನುವಾದಮಾಡಿಲ್ಲ. ಅ, ಆ ಮತ್ತು ಕ ಆಕರಗಳು 'ಪ್ರಬುದ್ಧವಿಭವಂ' ಎಂಬ ಪಾಠವನ್ನೇ ಕೊಡುತ್ತವೆ.

---

5 ಗ: ಬ್ರಹ್ಮಾಭಿಃ ಸ್ವರ್ಗತೈರಿವ. 6 ಗ: ಅಲಂಕುರ್ವನ್. 7 ಅ, ಆ, ಕ: ಪ್ರಬುದ್ಧ.

ಶ್ರೀಕರಣ ಎನ್ನುವುದಕ್ಕೆ ಕಂದಾಯ ಎಂದು ಅರ್ಥಮಾಡಿದರೆ 'ಪ್ರವೃದ್ಧ' ಎಂಬ ಪಾಠವೇ ಸರಿ. ದೇವನಾಗರಿಯಲ್ಲಿ ಭ್ರಷ್ಟವಾದ 'ವೃ' ಎನ್ನುವುದು 'ಬು' ಹಾಗೆಯೇ ಕಾಣಿಸುತ್ತದೆ. ಶ್ರೀಕರಣ ಎನ್ನುವುದಕ್ಕೆ ಲೇಖನ ಎಂಬ ವಿಶೇಷಾರ್ಥವೂ ಇದೆ.[17] ಇದರಂತೆ, 'ಲೇಖನವನ್ನು (ಬರೆಹಗಾರರನ್ನು) ಹೆಚ್ಚು ಮಾಡುವ' ಎಂಬರ್ಥದಲ್ಲಿ 'ಪ್ರವೃದ್ಧಂ' ಎಂದೂ, 'ವಿಶೇಷವಾಗಿ ಬುದ್ಧಿವಂತವಾದ ಲೇಖನದಲ್ಲಿ ಮೆರೆಯುವವನು' ಎಂಬರ್ಥದಲ್ಲಿ 'ಪ್ರಬುದ್ಧ' ಎಂದೂ ಪಾಠವು ಸರಿಯಾಗುತ್ತದೆ.

ಏಕಃ ಕ್ಷ್ಮಾವಲಯೇ ಕ್ಷಿತೀಶ್ವರಮಿಲನ್ ಮೌಲೀಂದ್ರ ನೀಲಾವಲಿ-
ಪ್ರೋ[8]ದಂಚದ್ದ್ಯುತಿ-ಚಿತ್ರಿತಾಂಘ್ರಿನಖರಶ್ರೇಣಿ[9]ನೃಪಾಲಾಗ್ರಣೀಃ ।
ಶ್ರೀಮತ್ ಸಿಂಘಣದೇವ ಏವ ವಿಜಯೀ ಯಸ್ಯ ಪ್ರತಾಪಾನಲೋ
ವಿಶ್ವವ್ಯಾಪ್ಯಪಿ ದಂದಹೀತಿ ಹೃದಯಾನ್ಯೇವ ದ್ವಿಷಾಮುದ್ಧುರಃ ॥ 6

ಯಶೋವಂತನಾದ [ಈ] ಸಿಂಘಣದೇವನೊಬ್ಬನೇ ಭೂವಲಯದ ರಾಜರುಗಳೆಲ್ಲರ ಅಧಿಪತಿಯಾಗಿದ್ದನು. ಅವನ ಕಾಲುಗುರುಗಳ ಸಾಲು ಪಾದಾಕ್ರಾಂತರಾಗಿದ್ದ ದೊರೆಗಳ ತಲೆ (ಕಿರೀಟ) ಗಳಲ್ಲಿದ್ದ ನೀಲಗಳ ಗುಂಪಿನ ಬೆಳಕಿನಿಂದ ಚಿತ್ರಿತವಾಗಿತ್ತು. ಅವನ ಪ್ರತಾಪದ ಬೆಂಕಿಯು ಇಡೀ ವಿಶ್ವವನ್ನೇ ವ್ಯಾಪಿಸಿದ್ದರೂ ಶತ್ರುಗಳ ಹೃದಯಗಳನ್ನು ಮಾತ್ರ ಸುಡುತ್ತಿತ್ತು.

ತಂ ಪ್ರಸಾದ್ಯ ಸುಧೀಧುರ್ಯೋ ಗುಣಿನಂ ಗುಣರಾಗಿಣಮ್ ।
ಗುಣಗ್ರಾಮೇಣ ಯೋ ವಿಪ್ರಾ[10]ನುಪಕಾರೈರತೀತೃಪತ್ ॥ 7

ಸುಗುಣಗಳ ಪ್ರೇಮಿಯೂ <ಗುಣರಾಗಿಣಂ>, ಸದ್ಗುಣಶಾಲಿಯೂ ಆಗಿದ್ದ ಆತನನ್ನು (ಸಿಂಘಣದೇವನನ್ನು) ತನ್ನ ಸದ್ಗುಣಗಳ ಸಮೂಹದಿಂದ ಸಂತೋಷಗೊಳಿಸುತ್ತಾ ಶ್ರೇಷ್ಠಬುದ್ಧಿಶಾಲಿಗಳಲ್ಲಿ ಅಗ್ರಗಣ್ಯನಾದ [ಸೋಢಲದೇವನು] ಬ್ರಾಹ್ಮಣರನ್ನು (ದಾನವೇ ಮೊದಲಾದ) ಉಪಕಾರಗಳಿಂದ ತೃಪ್ತಿಪಡಿಸಿದನು.

ಗುಣವೆಂಬ ಒಂದೇ ಶಬ್ದವನ್ನು ಒಂದೇ ಅರ್ಥದಲ್ಲಿ ಅನೇಕವೇಳೆ ಉಪಯೋಗಿಸಿ ಅರ್ಥವನ್ನು ಸುಸ್ಪಷ್ಟವಾಗಿ ಹೇಳಿರುವ ಈ ಶ್ಲೋಕವು ಪರಿಕರಾಲಂಕಾರಕ್ಕೆ ಉತ್ತಮ ಉದಾಹರಣೆಯಾಗಿದೆ.

ದದೌ ನ ಕಿಂ ನ ಕಿಂ ಜಜ್ಞೌ ನ ದಧೌ ಕಾಂ ಚ ಸಂಪದಮ್ ।
ಕಂ ಧರ್ಮಂ ವಿದಧೌ ನೈಷ ನ ಬಭೌ ಕೈರ್ಗುಣೈರಯಮ್ ॥ 8

[ಸೋಢಲದೇವನು] ಕೊಡದಿದ್ದ ದಾನವೇನುಂಟು! ಮಾಡದಿದ್ದ ಯಜ್ಞವೇನುಂಟು! ತಿಳಿಯದಿದ್ದುದು ಏನುಂಟು! ಪಡೆಯದಿದ್ದ ಐಶ್ವರ್ಯವೇನುಂಟು! (ಅವನು) ನಿರತನಾಗಿರದ ಧರ್ಮವೇನುಂಟು! (ಅವನಲ್ಲಿ) ಶೋಭಿಸದ ಸದ್ಗುಣವೇನುಂಟು!

---

8 ಕ : ಲೀಲಾವಲಿ ಪ್ರ. 9 ಅ, ಕ : ಜ್ಯೋತಿ. 10 ಗ : ವಿಶ್ವಾ.

---

17 Monier-Williams, A Sanskrit-English Dictionary, p. 1098, col. 3. ಶ್ರೀಕರಣವೆಂಬ ಶಬ್ದಕ್ಕೆ 'ಯಶಸ್ಸುಂಟುಮಾಡುವುದು' ಎಂಬ ಅರ್ಥವೂ ಇದೆ.

## 1, ಪದಾರ್ಥಸಂಗ್ರಹ ಪ್ರಕರಣ

ಸೋಢಲದೇವನು ಎಲ್ಲ ದಾನವನ್ನೂ ಕೊಟ್ಟನು . . . . ಇತ್ಯಾದಿಯೇ ಇದರ ಭಾವ. ಕುನ್ಹನ್‌ರಾಜಾ ಈ ಶ್ಲೋಕವನ್ನು ಪೂರ್ತಿಯಾಗಿ ಅನುವಾದಮಾಡಿಲ್ಲ.

ಗ್ರಂಥಕಾರ

**ತಸ್ಮಾದ್ ದುಗ್ಧಾಂಬುಧೇರ್ಜಾತಃ ಶಾರ್ಙ್ಗದೇವಃ[11] ಸುಧಾಕರಃ ।**
**ಉಪರ್ಯುಪರಿ ಸರ್ವಾನ್ಯಃ ಸದೌದಾರ್ಯಸ್ಫುರತ್‌ಕರಃ ॥** 9

ಆ (ಸೋಢಲದೇವನೆಂಬ) ಕ್ಷೀರಸಾಗರದಲ್ಲಿ ಎಲ್ಲರ ಮೇಲೂ ಯಾವಾಗಲೂ ಔದಾರ್ಯವೆಂಬ ತನ್ನ ಪ್ರಕಾಶಮಾನವಾದ ಕಿರಣಗಳನ್ನು ಬೀರಿದ ಶಾರ್ಙ್ಗದೇವನೆಂಬ ಚಂದ್ರನು ಹುಟ್ಟಿದನು.

**ಕೃತಗುರುಪದಸೇವಃ ಪ್ರೀಣಿತಾಶೇಷದೇವಃ**
**ಕಲಿತಸಕಲಶಾಸ್ತ್ರಃ ಪೂಜಿತಾಶೇಷಪಾತ್ರಃ ।**
**ಜಗತಿವಿತತಕೀರ್ತಿಃ ಮನ್ಮಥೋದಾರಮೂರ್ತಿಃ**
**ಪ್ರಚುರತರ[12]ವಿವೇಕಃ ಶಾರ್ಙ್ಗದೇವೋऽಯಮೇಕಃ ॥** 10

ಶಾರ್ಙ್ಗದೇವನು ಗುರುಗಳ ಪಾದಸೇವೆ ಮಾಡಿದವನು. ಒಂದು ದೇವತೆಯನ್ನೂ ಬಿಡದೆ ಎಲ್ಲ ದೇವತೆಗಳನ್ನೂ ಒಲಿಸಿಕೊಂಡವನು ; ಎಲ್ಲ ಶಾಸ್ತ್ರಗಳನ್ನೂ ತಿಳಿದವನು ; (ಗುರುಹಿರಿಯರೇ ಮೊದಲಾಗಿ) ಅರ್ಹತೆಯುಳ್ಳ ಪ್ರತಿಯೊಬ್ಬರನ್ನೂ ಪೂಜಿಸಿದವನು ; ಜಗತ್ತಿನಲ್ಲೆಲ್ಲಾ ಹರಡಿದ ಕೀರ್ತಿಯುಳ್ಳವನು ; ಮನ್ಮಥನಂತೆ ಸುಂದರನು ; ಸರ್ವವಿದಿತವಾದ ವಿವೇಚನಾಶಕ್ತಿಯುಳ್ಳವನು ; [ಹೀಗೆ] ಅವನೊಬ್ಬನೇ (ಸಾಟಿಯಿಲ್ಲದವನಾಗಿದ್ದನು).

ಗುರುಸೇವೆ ಮಾಡಿ ಶ್ರದ್ಧೆಯಿಂದ ಅನೇಕ ಶಾಸ್ತ್ರಗಳನ್ನೂ, ಅನೇಕ ಯಜ್ಞಯಾಗಾದಿಗಳನ್ನು ಮಾಡಿ ದೇವತೆಗಳ ಪ್ರೀತಿಯನ್ನೂ, ತನಗಿಂತ ಪೂಜ್ಯರಾದವರಿಗೆ ತಕ್ಕ ಗೌರವ ಸಲ್ಲಿಸಿ ಅವರ ಆದರವನ್ನೂ, ಸರಿ-ತಪ್ಪುಗಳನ್ನು ಆಳವಾಗಿ ವಿಮರ್ಶೆಮಾಡುವ ಶಕ್ತಿಯನ್ನೂ ಶಾರ್ಙ್ಗದೇವನು ಪಡೆದಿದ್ದನೆಂಬುದು ಇದರ ತಾತ್ಪರ್ಯ.

**ನಾನಾಸ್ಥಾನೇಷು ಸಂಭ್ರಾಂತಾ ಪರಿಶ್ರಾಂತಾ ಸರಸ್ವತೀ ।**
**ಸಹವಾಸಪ್ರಿಯಾ ಶಶ್ವದ್ವಿಶ್ರಾಮ್ಯತಿ ತದಾಲಯೇ ॥** 11

ನಾನಾಸ್ಥಳಗಳಲ್ಲಿ ಸುತ್ತಿ ಬಳಲಿದ ಸರಸ್ವತಿಯು ಸಹವಾಸವನ್ನು ಬಯಸಿ ಆ (ಶಾರ್ಙ್ಗದೇವನೆಂಬ) ಮನೆಯಲ್ಲಿ ಎಂದೆಂದಿಗೂ ವಿಶ್ರಾಂತಿ ಪಡೆಯುತ್ತಾಳೆ.

ವಿದ್ಯಾಧಿದೇವತೆಯೇ ಹುಡುಕಿ ಹುಡುಕಿ ಶಾರ್ಙ್ಗದೇವನೇ ಅತ್ಯುತ್ತಮ ಪಾತ್ರನೆಂದು ನಿರ್ಧರಿಸಿ ತನ್ನಲ್ಲಿ ನೆಲಸಿದಳೆಂದು ತನ್ನ ಪಾಂಡಿತ್ಯವನ್ನು ಗ್ರಂಥಕಾರನು ಅಲಂಕಾರೋಕ್ತಿಯಲ್ಲಿ ಹೇಳಿದ್ದಾನೆ. ಇಲ್ಲಿ ' ಸಹವಾಸಪ್ರಿಯಾ ' ಎಂಬ ಶಬ್ದವನ್ನು ವಿಶೇಷಾರ್ಥದಲ್ಲಿ ಉಪಯೋಗಿಸಿದೆ. ಕಾಶ್ಮೀರದಲ್ಲಿ ಹುಟ್ಟಿದವಳೆಂದು ಪ್ರಸಿದ್ಧಳಾದ ಸರಸ್ವತಿಯು ತನ್ನ ಅನುಗ್ರಹಕ್ಕೆ ಸತ್ಪಾತ್ರನನ್ನು ಹುಡುಕುತ್ತಾ ಜಗತ್ತನ್ನೆಲ್ಲಾ ಸುತ್ತಿ ಯಾರೂ ಸಿಗದೆ ಬಳಲಿಕೆ

11 ಗ ; ಆದರೆ ಅ : ಸಾಕ್ಷಾದೇವ. 12 ಗ : ಪ್ರಚುರಮತಿ.

ಯಾದಾಗ ಹುಟ್ಟೂರಿನ ಹಂಬಲ ಬೆಳೆಯಿತು ; ಆಗ ಕಾಶ್ಮೀರದವನೇ ಆದ ಶಾರ್ಙ್ಗದೇವನು ಅತ್ಯಂತ ಪಾತ್ರನೂ ಆಗಿದ್ದುದನ್ನು ಕಂಡು ಸಂತೋಷಪಟ್ಟು ಅವನಲ್ಲಿಯೇ ನಿಂತಳೆಂದು ಸಿಂಹಭೂಪಾಲನು[18] ವ್ಯಾಖ್ಯಾನಮಾಡುತ್ತಾನೆ.

**ಸ ವಿನೋದೈಕರಸಿಕೋ ಭಾಗ್ಯವೈದಗ್ಧ್ಯಭಾಜನಮ್ ।**
**ಧನದಾನೇನ ವಿಪ್ರಾಣಾಮಾರ್ತಿಂ ಸಂಹೃತ್ಯ ಶಾಶ್ವತೀಮ್ [13] ॥** 12

ವಿನೋದಗಳಲ್ಲಿಯೇ ಆನಂದಿಸುವ, ಪಾಂಡಿತ್ಯ ಮತ್ತು ಐಶ್ವರ್ಯಗಳಲ್ಲಿ ಪಾಲುಗೊಂಡಿರುವ ಅವನು ಬ್ರಾಹ್ಮಣರ ಕಷ್ಟಕಾರ್ಪಣ್ಯಗಳನ್ನು <ಆರ್ತಿಂ> ಹಣವನ್ನು ಕೊಡುವುದರ ಮೂಲಕ ಎಂದೆಂದಿಗೂ ನಿವಾರಿಸುತ್ತ,

**ಜಿಜ್ಞಾಸೂನಾಂ ಚ ವಿದ್ಯಾಭಿರ್ಗದಾರ್ತಾನಾಂ [14] ರಸಾಯನೈಃ ।**
**ಅಧುನಾಽಖಿಲಲೋಕಾನಾಂ ತಾಪತ್ರಯಜಿಹೀರ್ಷಯಾ ॥** 13

ಜ್ಞಾನವನ್ನು ಹುಡುಕುವವರನ್ನು ವಿದ್ಯೆಯ ಮೂಲಕವೂ ರೋಗಪೀಡಿತರಾದವರನ್ನು ಔಷಧಿಯಿಂದಲೂ [ತೃಪ್ತಿಪಡಿಸುತ್ತ], ಈಗ ಎಲ್ಲ ಲೋಕದ ತಾಪತ್ರಯವನ್ನು ಕಳೆದುಬಿಡಲು—

ತಾಪಗಳು ಮೂರುಬಗೆ: ಅ) ಸಾಮಾನ್ಯವಾದ ಕಾಯಿಲೆಯೇ ಮೊದಲಾಗಿ ತನ್ನ ಸ್ವಭಾವದಿಂದಲೇ ಉಂಟಾದ ಆಧ್ಯಾತ್ಮಿಕ, ಆ) ಅಕಾಲಮರಣವೇ ಮೊದಲಾಗಿ ದೈವಿಕವಾಗಿ ಸಂಭವಿಸುವ ಆಧಿದೈವಿಕ, ಮತ್ತು ಇ) ಕ್ಷಾಮ-ಡಾಮರ ಇತ್ಯಾದಿಯಾಗಿ ಪ್ರಾಕೃತಿಕವಾಗಿ ಒದಗುವ ಆಧಿಭೌತಿಕ.

ಈ ಶ್ಲೋಕದಿಂದ ಶಾರ್ಙ್ಗದೇವನು ಪಂಡಿತನೂ, ಸಿರಿವಂತನೂ, ವೈದ್ಯನೂ ಆಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಆಯುರ್ವೇದದಲ್ಲಿ ಇದೇ ಅಧ್ಯಾಯದ ಎರಡನೆಯ ಪ್ರಕರಣದಲ್ಲಿ ಅವನು ತೋರಿಸಿರುವ ಆಳವಾದ ವೈದುಷ್ಯಕ್ಕೆ ಇದು ಸಮರ್ಥನೆ ನೀಡುತ್ತದೆ.

ಗ್ರಂಥರಚನೆಗೆ ಕಾರಣ

**ಶಾಶ್ವತಾಯ ಚ ಧರ್ಮಾಯ ಕೀರ್ತ್ಯೈ ನಿಃಶ್ರೇಯಸಾಪ್ತಯೇ [15] ।**
**ಆವಿಷ್ಕರೋತಿ ಸಂಗೀತರತ್ನಾಕರಮುದಾರಧೀಃ ॥** 14

ಎಂದೆಂದಿಗೂ (ತನ್ನ ಹೆಸರಿನ ಮೂಲಕ) ಇರಲು, ಧರ್ಮಪಾಲನೆಗಾಗಿ, ಕೀರ್ತಿಯುಂಟಾಗಲು, ಮೋಕ್ಷವು ದೊರಕಲು, ಉದಾರಬುದ್ಧಿಯುಳ್ಳವ (ಶಾರ್ಙ್ಗದೇವ)ನು ಸಂಗೀತರತ್ನಾಕರ[ವೆಂಬ ಗ್ರಂಥ]ವನ್ನು ಪ್ರಕಟಗೊಳಿಸುತ್ತಾನೆ.

ಈ ಶ್ಲೋಕಕ್ಕೆ ಕುನ್ಹನ್‌ರಾಜಾ ಅಪೂರ್ಣವಾದ ಅನುವಾದವನ್ನು ಮಾಡಿದ್ದಾನೆ (ಪು. 4). ಇದರಲ್ಲಿ ಹೇಳಿರುವ ಶಾಶ್ವತತ್ವವೂ ಧರ್ಮವೂ ಮೋಕ್ಷವೂ ಶಾರ್ಙ್ಗದೇವನಿಗೂ ಅಧಿಕಾರಿಗೂ ಏಕಕಾಲದಲ್ಲಿ ಅನ್ವಯಿಸುವಂತೆ ಸಂಧಿಗ್ಧಾರ್ಥವಿದೆ. 'ಶಾಶ್ವತಾಯ' ಎನ್ನುವುದನ್ನು ಅಧಿಕಾರಿಯ ವಿಷಯದಲ್ಲಿ ಅನ್ವಯಮಾಡುವುದು ಕಷ್ಟವಾದುದರಿಂದ ತನ್ನ ವಿಷಯದಲ್ಲೇ ಇವುಗಳನ್ನು ಹೇಳಿಕೊಂಡಿದ್ದಾನೆಂಬ ಪಕ್ಷವನ್ನು ಇಲ್ಲಿ ಗ್ರಹಿಸಿದ್ದೇನೆ. ಸಂಗೀತರತ್ನಾಕರವನ್ನು ರಚಿಸಿದ್ದರಿಂದ ತನ್ನ ಕಾಲದಲ್ಲೇ ಕೀರ್ತಿಯೂ, ಅದರ ಮೂಲಕ ಭವಿಷ್ಯದಲ್ಲಿ ಅಜರ-ಅಮರವಾಗಿ ತನ್ನ ಹೆಸರು ನಿಲ್ಲುವುದರಿಂದ ಶಾಶ್ವತತ್ವವೂ, ಶಾಸ್ತ್ರಋಣವನ್ನು ತೀರಿಸಿದ್ದರಿಂದ ಧರ್ಮ (ಕರ್ತವ್ಯ)

---

13 ಅ : ಆರ್ತೀಃ ಸಂಹೃತ್ಯ ಶಾಶ್ವತೀಃ. 14 ಅ, ಆ : ಗದಿನಾಂ ಚ. 15 ಅ : ನಿಃಶ್ರೇಯಸಾಯ ಚ

18 ಸಿಂಹಭೂಪಾಲ, ಸಂಗೀತಸುಧಾನಿಧಿ, ಸಂಗೀತರತ್ನಾಕರ ವ್ಯಾಖ್ಯಾ. ಪು. 12.

ಪಾಲನೆಯೂ ನಾದೋಪಾಸನೆಯನ್ನು ಶ್ರದ್ಧಾವಂತನಾಗಿ ಮಾಡಿದ್ದರಿಂದ ಮೋಕ್ಷಪ್ರಾಪ್ತಿಯೂ ಉಂಟಾಗಲಿ ಎಂಬ ಭಾವನೆ ಇಲ್ಲಿ ಅಡಗಿದೆ. 'ಉದಾರಧೀಃ' ಎಂದು ತನ್ನನ್ನು ವರ್ಣಿಸಿಕೊಂಡಿರುವುದರಲ್ಲಿಯೂ ಉತ್ಪ್ರೇಕ್ಷೆಯಿಲ್ಲ. ಏಕೆಂದರೆ ಮುಂದಿನ ಆರು ಶ್ಲೋಕಗಳಲ್ಲಿ ಅವನು ಹೆಸರಿಸಿರುವ ಪೂರ್ವಾಚಾರ್ಯರಲ್ಲಿ ಬಹುಮಟ್ಟಿಗೆ ಎಲ್ಲರ ಕೃತಿಗಳನ್ನೂ ಅವನು ಆಳವಾಗಿ ಅಧ್ಯಯನಮಾಡಿ ಪ್ರಾಚೀನ-ಅರ್ವಾಚೀನ ಸಂಗೀತಪದ್ಧತಿಗಳನ್ನೆಲ್ಲ ಇತರರಿಗೆ ದುಸ್ಸಾಧ್ಯವಾದ ಪರಿಶ್ರಮದಿಂದ ಅಳೆದು ನಿರ್ಧರಿಸಿ ಅದರ ಸಾರವನ್ನೆಲ್ಲ ಈ ಗ್ರಂಥದಲ್ಲಿ ಕೊಟ್ಟಿದ್ದಾನೆ. ತಾನು ತುಂಬಾ ಕಷ್ಟಪಟ್ಟು ಸಂಪಾದಿಸಿದುದನ್ನು ಬಚ್ಚಿಡದೆ ಇತರರಿಗೆ ಧಾರೆಯೆರೆಯುವುದು ಔದಾರ್ಯವಲ್ಲದೆ ಮತ್ತೇನು!

ಪೂರ್ವಾಚಾರ್ಯರು

**ಸದಾಶಿವಃ ಶಿವಾ[16] ಬ್ರಹ್ಮಾ ಭರತಃ ಕಶ್ಯಪೋ ಮುನಿಃ ।**
**ಮತಂಗೋ ಯಾಷ್ಟಿಕೋ[17] ದುರ್ಗಾಶಕ್ತಿಃ ಶಾರ್ದೂಲಕೋಹಲೌ ॥ 15**

ಸದಾಶಿವ, ಶಿವಾ, ಬ್ರಹ್ಮ, ಭರತ, ಮುನಿಯಾದ ಕಶ್ಯಪ, ಮತಂಗ, ಯಾಷ್ಟಿಕ, ದುರ್ಗಾಶಕ್ತಿ, ಶಾರ್ದೂಲಕೋಹಲರು,

ಶಿವಾ ಎಂಬ ಪಾಠವೇ ಅಡ್ಯಾರ್ ಮತ್ತು ಆನಂದಾಶ್ರಮದ ಮುದ್ರಣಗಳಲ್ಲಿ ಕಂಡುಬರುತ್ತದೆ. ಶಿವನೆಂಬ ಸಂಗೀತಶಾಸ್ತ್ರಕಾರನ ಗ್ರಂಥವು ಯಾವುದೂ ಇನ್ನೂ ದೊರಕದಿರುವುದರಿಂದಲೂ ಅಥವಾ ರಚಿತವಾಗಿದೆಯೆಂಬ ಸೂಚನೆಯು ಬೇರೆ ಗ್ರಂಥಗಳಲ್ಲಿ ಇಲ್ಲವಾದುದರಿಂದಲೂ ಶಿವಾ ಎಂಬ ಪಾಠವೇ ಗ್ರಾಹ್ಯವಾಗಿದೆ. ನಂದಿಕೇಶ್ವರನು ತನ್ನ ಭರತಾರ್ಣವದಲ್ಲಿ[19] 'ಪಾರ್ವತೀಪ್ರಯುಕ್ತ ಭರತಾರ್ಥಚಂದ್ರಿಕಾಯಾಂ ........' ಎಂದು ನಾನಾರ್ಥಹಸ್ತಗಳ ಲಕ್ಷಣವನ್ನು ಉದ್ಧರಿಸಿರುವುದರಿಂದ ಪಾರ್ವತೀ ಎಂಬ ನಾಟ್ಯಶಾಸ್ತ್ರಕಾರಳು ಚಾರಿತ್ರಿಕ ವ್ಯಕ್ತಿಯಾಗಿದ್ದಿರಬೇಕು. ಈ ಅರ್ಥದಲ್ಲಿ ಶಿವಾ ಎಂಬ ಪಾಠವು ಗ್ರಾಹ್ಯವಾಗಿದೆ. ಭರತಮುನಿಯ ನಾಟ್ಯಶಾಸ್ತ್ರದಲ್ಲಿ ಶಿವನು ನಾಟ್ಯವೇದಾಗಮದ ಪ್ರವರ್ತಕನೆಂದೂ ತಂಡುವಿನ ಮೂಲಕ ಭರತನಿಗೆ ಈ ಶಾಸ್ತ್ರವನ್ನು ಅನುಗ್ರಹಿಸಿದನೆಂದೂ ಹೇಳಿದೆ. ಆದರೆ ಶಾರ್ಙ್ಗದೇವನು ಇಲ್ಲಿ ಕೇವಲ ಚಾರಿತ್ರಿಕ ಸಂಗೀತಶಾಸ್ತ್ರಪ್ರವರ್ತಕರ ಹೆಸರುಗಳನ್ನು ಮಾತ್ರ ಹೇಳಿರುವುದರಿಂದ ಶಿವೋ ಎಂಬ ಕಲ್ಕತ್ತಾಮುದ್ರಣದ ಪಾಠವು ಒಟ್ಟಿನಲ್ಲಿ ಅಗ್ರಾಹ್ಯವೇ.

ಎಲ್ಲರೂ ಸಾಧಾರಣವಾಗಿ ಭರತನಿಗೆ ಉಪಯೋಗಿಸುವ ಮುನಿ ಎಂಬ ಪರ್ಯಾಯ ಶಬ್ದವನ್ನು ಶಾರ್ಙ್ಗದೇವನು ಇಲ್ಲಿ ಕಶ್ಯಪನಿಗೆ ಹೇಳಿದ್ದಾನೆ. ಬೇರೆಡೆಯಲ್ಲಿ ಈ ವಿಶೇಷಣವನ್ನು ಅವನು ಭರತನಿಗೆ ಮಾತ್ರ ಹೇಳಿದ್ದಾನೆ.

ಯಾಷ್ಟಿಕಪದಕ್ಕೆ ಕಲ್ಕತ್ತಾ ಮುದ್ರಣವು ಕೊಡುವ ಪಾರ್ಷ್ಣಿಗೋ ಎಂಬ ಭ್ರಷ್ಟ ಪಾಠವು ಅಗ್ರಾಹ್ಯವಾಗಿದೆ.

ಮೂರೂ ಮುದ್ರಣಗಳಲ್ಲಿ ದುರ್ಗಾಶಕ್ತಿಯೆಂಬ ಹೆಸರನ್ನು ದುರ್ಗಾ ಶಕ್ತಿಃ ಎಂದು ಒಡೆದಿರುವುದು, ದುರ್ಗಾ ಮತ್ತು ಶಕ್ತಿಗಳೆಂಬ ಇಬ್ಬರು ಗ್ರಂಥಕಾರರಿದ್ದರೆಂಬ ತಪ್ಪು ತಿಳುವಳಿಕೆಯನ್ನು ಮೂಡಿಸಲು ಕಾರಣವಾಗಿದೆ. ಮತಂಗನು ಹೇಳಿರುವಂತೆ[20] ಇದು ಒಂದೇ ವ್ಯಕ್ತಿಯನ್ನು ನಿರ್ದೇಶಮಾಡುವ ಹೆಸರು.

---

16 ಕ : ಶಿವೋ ?    17 ಕ : ಪಾರ್ಷ್ಣಿಗೋ ?

---

19 ನಂದಿಕೇಶ್ವರ, ಭರತಾರ್ಣವ, X, ಅಂತ್ಯವಾಕ್ಯ, ಪು. 333 ಮತ್ತು ಬೆಂಗೇರಿ ಹಸ್ತಪ್ರತಿ : 133ನೇ ಹಾಳೆಯ ಬೆನ್ನು.

20 ಮತಂಗ, ಬೃಹದ್ದೇಶೀ : ಪು. 82, 94, 99, 101.

1. ಪದಾರ್ಥಸಂಗ್ರಹ ಪ್ರಕರಣ

**ವಿಶಾಖಿಲೋ ದತ್ತಿಲಶ್ಚ ಕಂಬಲೋಽಶ್ವತರಸ್ತಥಾ ।**
**ವಾಯುರ್ವಿಶ್ವಾವಸೂ ರಂಭಾಽರ್ಜುನೋ ನಾರದತುಂಬುರೂ [18] ॥** 16

ವಿಶಾಖಿಲ ಮತ್ತು ದತ್ತಿಲ, ಕಂಬಲ, ಹಾಗೆಯೇ ಅಶ್ವತರ, ವಾಯು [ಮತ್ತು] ವಿಶ್ವಾವಸು, ರಂಭಾ, ಅರ್ಜುನ, ನಾರದ [ಮತ್ತು] ತುಂಬುರು,

ದತ್ತಿಲನು ರೂಢಿಯಲ್ಲಿ ದಂತಿಲನೂ ಆಗಿದ್ದಾನೆ. ತುಂಬುರು ಎಂಬ ಹೆಸರಿಗೆ ಬದಲು ಆನಂದಾಶ್ರಮ ಮುದ್ರಣದಲ್ಲಿ ತುಂಬರಾ ಎಂದಿದೆ.

**ಆಂಜನೇಯೋ ಮಾತೃಗುಪ್ತೋ ರಾವಣೋ[19] ನಂದಿಕೇಶ್ವರಃ ।**
**ಸ್ವಾತಿರ್ಗಣೋ ಬಿಂದುರಾಜಃ [20] ಕ್ಷೇತ್ರರಾಜಶ್ಚ ರಾಹಲಃ [21] ॥** 17

ಆಂಜನೇಯ, ಮಾತೃಗುಪ್ತ, ರಾವಣ, ನಂದಿಕೇಶ್ವರ, ಸ್ವಾತಿ, ಗಣ, ಬಿಂದುರಾಜ ಮತ್ತು ಕ್ಷೇತ್ರರಾಜ, ರಾಹಲ,

ರಾವಣ ಎನ್ನುವುದಕ್ಕೆ ಕಲ್ಕತ್ತ ಮುದ್ರಣದಲ್ಲಿ ವಾರುಣೋ ಎಂದು ಪಾಠಾಂತರವಿದೆ. ಲಿಪಿಕಾರನ ಅಕ್ಷರ ವಿಪರ್ಯಾಸದೋಷದಿಂದ ರಾವಣ>ವಾರಣ>ವಾರುಣ ಆಗಿರುವಂತೆ ಕಾಣುತ್ತದೆ. ಸಂಗೀತಮಕರಂದಕಾರನು ಸ್ಮರಿಸುವ ಸಮುದ್ರರಾಜನ ಹೆಸರಿನ ಮೂಲ ಇಲ್ಲಿರುವ ಹಾಗೆ ಕಾಣುತ್ತದೆ.[21] ಈ ಎರಡು ಸ್ಮೃತಿಗಳನ್ನು ಬಿಟ್ಟರೆ ಸಮುದ್ರರಾಜನ ಹೆಸರು ಮತ್ತೆಲ್ಲೂ ಕಂಡುಬರುವುದಿಲ್ಲ. ರಾಮಾಯಣದಲ್ಲಿ ಹೇಳಿರುವ[22] ರಾವಣನ ವೀಣಾಕೌಶಲ್ಯವನ್ನೂ ರಾವಣಹಸ್ತವೆಂದು ಸಂಗೀತಶಾಸ್ತ್ರಗ್ರಂಥಗಳಲ್ಲಿ ಪ್ರಸಿದ್ಧವಾಗಿರುವ ಮತ್ತು ಭಾರತದಲ್ಲೆಲ್ಲ ಬಳಕೆಯಲ್ಲಿರುವ ತಂತ್ರೀವಾದ್ಯವನ್ನೂ ಬಿಟ್ಟರೆ ರಾವಣನು ಸಂಗೀತಸಾಸ್ತ್ರಗ್ರಂಥವೊಂದರ ಕರ್ತೃವೆಂದು ಯಾವ ಆಕರದಿಂದಲೂ ತಿಳಿಯುವಂತಿಲ್ಲ. ಹಾಗೆಯೇ ಬಿಂದುರಾಜ ಎನ್ನುವ ಹೆಸರಿಗೆ ಕಲ್ಕತ್ತ ಮತ್ತು ಆನಂದಾಶ್ರಮ ಮುದ್ರಣಗಳು ದೇವರಾಜ ಎಂಬ ಪಾಠಾಂತರವನ್ನು ಕೊಡುತ್ತವೆ. ಈ ಬಿಂದುರಾಜನ ವಿಷಯ ಮತ್ತೇನೂ ತಿಳಿಯದು. ಆದರೆ ದೇವಣಾಚಾರ್ಯನ ಸಂಗೀತ ಮುಕ್ತಾವಲೀ ಎಂಬ ಸಂಗೀತಶಾಸ್ತ್ರಗ್ರಂಥದ ಪ್ರತಿಯು ಮೈಸೂರಿನ ವರಲಕ್ಷ್ಮಿ ಅಕಾಡಮಿಯ ಪುಸ್ತಕಾಗಾರದಲ್ಲಿದೆ. ಇದರಲ್ಲಿ ಈಶ್ವರ, ಶಿವಾ, ಬ್ರಹ್ಮ, ಇಂದ್ರ, ನಂದೀಶ್ವರ, ರಂಭಾ, ತುಂಬುರು, ವಾಯು, ನಾರದ, ಗಣ, ವಿಶ್ವಾವಸು, ಸ್ವಾತಿ, ಶಾರ್ದೂಲ, ಅಶ್ವತರ, ಆಂಜನೇಯ, ಭರತ, ಮತಂಗ, ದುರ್ಗಾಶಕ್ತಿ, ದಶಾಸ್ಯ (ರಾವಣ), ದತ್ತಿಲ, ಕಾಶ್ಯಪ, ಯಾಷ್ಟಿಕ, ಕಂಬಲ, ಕೋಹಲ, ಶ್ರೀಮಾತೃಗುಪ್ತ, ಅರ್ಜುನ, ದೇವರಾಜ, ಕ್ಷತ್ರರಾಜ, ರಾಹಲನೆಂಬ ರಾಜ, ವಿಶಾಖಿಲ, ಭೋಜರಾಜ, ರುದ್ರಸೇನ, ಸೋಮೇಶ್ವರ, ವ್ಯಾಖ್ಯಾತಾರರಾದ ಶಂಕುಕ, ಉದ್ಭಟ, ಲೊಲ್ಲಟ, ಅಭಿನವಗುಪ್ತ, ಕೀರ್ತಿಧರ, ಇವರುಗಳ ಹೆಸರನ್ನು ಸ್ಮರಿಸಿದೆ.[23] ಈ ಪಟ್ಟಿಯಲ್ಲಿ ದೇವರಾಜನಲ್ಲದ ಇಂದ್ರನೆಂಬ ಹೊಸ ಹೆಸರನ್ನೂ, ಕ್ಷತ್ರರಾಜ, ರುದ್ರಸೇನ ಎಂಬ ನಾಮಾಂತರಗಳನ್ನೂ, ರಾಹಲನು ರಾಜರ ಗುಂಪಿಗೆ ಸೇರುವುದನ್ನೂ ಗಮನಿಸಬೇಕು. ಈ ಗ್ರಂಥದ ಹಸ್ತಪ್ರತಿಯನ್ನು

---

18 ಆ : ತುಂಬರಾಃ. 19 ಕ : ವಾರುಣೋ. 20 ಆ, ಕ : ದೇವರಾಜಃ. 21 ಆ : ಕ್ಷೇತ್ರರಾಜಸ್ತಥೈವ ಚ.

---

21 ನಾರದ, ಸಂಗೀತಮಕರಂದ : II, 20. 22 ವಾಲ್ಮೀಕಿರಾಮಾಯಣ : IV, 24, 43, 44.

23 ದೇವಣಾಚಾರ್ಯ, ಸಂಗೀತಮುಕ್ತಾವಲೀ, ಶ್ರೀ ವರಲಕ್ಷ್ಮೀ ಅಕಾಡೆಮಿಯ ಗ್ರಂಥಭಂಡಾರದ ಹಸ್ತಪ್ರತಿ, ಪು. 235-236.

ನಾನು ಆಮೂಲಾಗ್ರವಾಗಿ ನೋಡಿದ್ದೇನೆ. ಅದರ ಕರ್ತೃವೂ ಅಥವಾ ಅದು ಸ್ಮರಿಸುವ ಇಂದ್ರನೂ ಶಾರ್ಙ್ಗದೇವನು ಸ್ಮರಿಸುವ (?) ದೇವರಾಜನೂ ಒಬ್ಬನೇ ಹೌದೇ ಎಂಬುದು ಅನಿಶ್ಚಿತ. ಸಂಗೀತಮಕರಂದಕಾರನೂ ದೇವೇಂದ್ರನೊಬ್ಬನನ್ನು ನೆನೆಯುತ್ತಾನೆ.[24]

**ರುದ್ರಟೋ ನಾನ್ಯ[22]ಭೂಪಾಲೋ ಭೋಜಭೂವಲ್ಲಭಸ್ತಥಾ ।**
**ಪರಮರ್ದೀ ಚ ಸೋಮೇಶೋ ಜಗದೇಕಮಹೀಪತಿಃ ॥** 18

ರುದ್ರಟ, ನಾನ್ಯಭೂಪಾಲ, ಹಾಗೆಯೇ ಭೋಜರಾಜ, ಮತ್ತು ಪರಮರ್ದೀ, ಸೋಮೇಶ್ವರ, ಜಗದೇಕನೆಂಬ ದೊರೆ,

ರುದ್ರಟ, ನಾನ್ಯಭೂಪಾಲ ಎಂಬ ಹೆಸರುಗಳೂ ಪಾಠಾಂತರಗಳಿಂದ ಸ್ಥಿರಪಟ್ಟಿಲ್ಲ. ರುದ್ರಟನ ಬದಲು ಕಲ್ಕತ್ತ ಮುದ್ರಣದಲ್ಲಿ ದುರ್ಜಯನೆಂದೂ ಆನಂದಾಶ್ರಮ ಮುದ್ರಣದಲ್ಲಿ ರುದ್ರಸೇನನೆಂದೂ ಅಸ್ವೀಕೃತಪಾಠಗಳಿವೆ. ಕಲ್ಕತ್ತ ಮುದ್ರಣದ ಆಕರಗಳಲ್ಲಿ ನಾನ್ಯಭೂಪಾಲನ ಹೆಸರೇ ಇಲ್ಲ. ನಾನ್ಯಭೂಪಾಲನ ಸರಸ್ವತೀ ಹೃದಯಾಲಂಕಾರ ಹಾರವನ್ನು ರತ್ನಾಕರಕಾರನು ಎಲ್ಲಿಯೂ ಉಪಯೋಗಿಸಿಕೊಂಡಿರುವಹಾಗಿಲ್ಲ. ಅವನು ತನ್ನ ಆಕರಗಳನ್ನು ಸ್ಪಷ್ಟವಾಗಿ ಹೆಸರಿಸುವುದು ಅಪರೂಪವಾದುದರಿಂದ ನಾನ್ಯಭೂಪಾಲನಿಗೆ ಅವನು ಋಣಿಯಲ್ಲವೆಂದು ಖಂಡಿತವಾಗಿ ಹೇಳುವ ಹಾಗೂ ಇಲ್ಲ. ಆನಂದಾಶ್ರಮ ಮುದ್ರಣದಲ್ಲಿ ರುದ್ರಸೇನಶ್ಚ ಭೂಪಾಲೋ ಎಂದಿರುವುದೂ, ರುದ್ರನ ಹೆಸರು ರಾಜರುಗಳ ಮಧ್ಯೆ ಇರುವುದೂ ಗಮನಾರ್ಹವಾಗಿದೆ. ಈ ಪಾಠದಂತೆ ಅವನೂ ಕಾವ್ಯಾಲಂಕಾರದ ಕರ್ತೃವೂ ಒಂದೇ ವ್ಯಕ್ತಿಯಲ್ಲವೆಂಬುದು ಸ್ಪಷ್ಟವಾಗಿದೆ. ಇನ್ನುಳಿದವರೆಂದರೆ ಕುಡುಮಿಯಾಮಲೈ ಶಾಸನದ ಕರ್ತೃವಾದ ಪಲ್ಲವ ಮಹೇಂದ್ರವರ್ಮನ ಗುರುವಾದ ರುದ್ರಾಚಾರ್ಯನೊಬ್ಬ,[25] ಕಾಕತೀಯ ಪ್ರಭುವೂ ನಾಟ್ಯಶೇಖರದ ಕರ್ತೃವೂ ಆದ ರುದ್ರಸೇನನು ಇನ್ನೊಬ್ಬ.[26] ಆದರೆ ಈ ರುದ್ರಸೇನನು ಸುಮಾರು ಕ್ರಿ. ಶ. 1300 ರಲ್ಲಿ ಗ್ರಂಥರಚನೆಮಾಡಿರಬಹುದಾದ್ದರಿಂದ ಶಾರ್ಙ್ಗದೇವನಿಂದ ಸ್ಮೃತನಾಗಿರುವ ಶಾಸ್ತ್ರಕಾರನಾಗಿರಲಾರ. ರುದ್ರಾಚಾರ್ಯನು ಮಹೇಂದ್ರವರ್ಮನ ಸಂಗೀತಾಚಾರ್ಯನೋ ಧಾರ್ಮಿಕಾಚಾರ್ಯನೋ ಎಂಬುದು ಶಾಸನದಿಂದಾಗಲೀ ಇತರ ಆಕರಗಳಿಂದಾಗಲೀ ತಿಳಿಯುವಂತಿಲ್ಲ.[27] ಅವನು ಸಂಗೀತಶಾಸ್ತ್ರಗ್ರಂಥವೊಂದನ್ನು ರಚಿಸಿದ್ದಾನೆಂಬುದಕ್ಕೂ ಆಧಾರವಿಲ್ಲ. ಬಹುಮಟ್ಟಿಗೆ ಈ ರುದ್ರಾಚಾರ್ಯನಿಗಿಂತ ಪ್ರಾಚೀನನೋ ಅಥವಾ ಹೆಚ್ಚುಕಡಿಮೆ ಸಮಕಾಲೀನನೋ ಆಗಿದ್ದ ಮತಂಗನೂ ಒಬ್ಬ ರುದ್ರಾಚಾರ್ಯನನ್ನು ಸ್ಮರಿಸುವಂತೆ ಕಲ್ಲಿನಾಥದಿಂದ ತಿಳಿದುಬರುತ್ತದೆ.[28] ಇದಕ್ಕೆ ಬೃಹದ್ದೇಶಿಯ ಸಮರ್ಥನೆಯಿಲ್ಲ.

---

22 ಆ : ರುದ್ರಸೇನಶ್ಚ ; ಕ : ದುರ್ಜಯೋ ನಾಮ.

---

24 ನಾರದ, ಸಂಗೀತಮಕರಂದ, II, 20.

25 Sathyanarayana : R.(ed.) The Kudimiyamalai Inscription on Music, Vol. I. p. 12.

26 Karnataka Music, Studies in Education and Culture, p. 408.

27 ' ರುದ್ರಾಚಾರ್ಯಶಿಷ್ಯೇಣ ಪರಮಮಾಹೇಶ್ವರೇಣ ರಾಜ್ಞಾ ಶಿಷ್ಯಹಿತಾರ್ಥಂ ಕೃತಾಃ ಸ್ವರಾಗಮಾಃ '

28 ಕಲ್ಲಿನಾಥ : ' ಯಥಾ ಯಾವತ್ ಷಡ್ಜಮೇವ ತಾರಗತಿರ್ಮಧ್ಯಮಸ್ಯಾಪ್ಯತ್ರ ಸಂವಾದಿತ್ವಾದನಾಶಿತ್ವಾಚ್ಚ ತಾರಗತೀ ರುದ್ರಟೇನ ಕೃತಾ ಮಧ್ಯಮಸ್ಯೇತಿ ನ ದೋಷ ಇತಿ ಮತಂಗೋಕ್ತಂ' ಸಂಗೀತಕಲಾನಿಧಿ, ಸಂಗೀತರತ್ನಾಕರ ವ್ಯಾಖ್ಯಾ ಪು. 185.

ಒಟ್ಟಿನಲ್ಲಿ, ಶಾರ್ಙ್ಗದೇವನು ಸ್ಮರಿಸುವ ರುದ್ರನು ಮತಂಗನಿಂದ ಸ್ಮೃತನಾಗಿರುವವನೆಂದು ತೋರುತ್ತದೆ. ಈ ಎಲ್ಲ ಪೂರ್ವಾಚಾರ್ಯರ ಕಾಲ, ಕೃತಿ ಮುಂತಾದವುಗಳನ್ನು ಕುರಿತು ಪ್ರಕೃತಗ್ರಂಥದ ಮುನ್ನುಡಿಯಲ್ಲಿ ಚರ್ಚಿಸಲಾಗಿದೆ.

**ವ್ಯಾಖ್ಯಾತಾರೋ ಭಾರತೀಯೇ ಲೊಲ್ಲಟೋದ್ಭಟಶಂಕುಕಾಃ ।**
**ಭಟ್ಟಾಭಿನವಗುಪ್ತಶ್ಚ ಶ್ರೀಮತ್ ಕೀರ್ತಿಧರಃ ಪರಃ ॥** 19

ಭರತ [ನನಾಟ್ಯಶಾಸ್ತ್ರದ] ಭಾಷ್ಯಕಾರರಾದ ಲೊಲ್ಲಟ, ಉದ್ಭಟಶಂಕುಕರು, ಮತ್ತು ಭಟ್ಟ ಅಭಿನವಗುಪ್ತ, ನಂತರ ಯಶೋವಂತನಾದ ಕೀರ್ತಿಧರ,

**ಅನ್ಯೇ ಚ ಬಹವಃ ಪೂರ್ವೇ ಯೇ ಸಂಗೀತಶಾಸ್ತ್ರವಿಶಾರದಾಃ ।**
**ಅಗಾಧಬೋಧಮಂಥೇನ ತೇಷಾಂ ಮತಪಯೋನಿಧಿಮ್ ॥** 20

(ಇವರುಗಳೇ ಅಲ್ಲದೆ) ಹಿಂದೆ ಬಹುಮಂದಿ ಇತರರು ಸಂಗೀತಶಾಸ್ತ್ರದಲ್ಲಿ ಮಹಾವಿದ್ವಾಂಸರುಗಳು ಯಾರಿದ್ದರೋ ಅವರುಗಳ ಅಭಿಪ್ರಾಯ <ಮತ>ಗಳೆಂಬ ಕಡಲನ್ನು ಆಳವರಿಯದ [ವಿವೇಚನಾ] ಜ್ಞಾನವೆಂಬ ಕಡೆಗೋಲಿನಿಂದ—

ಸಂಗೀತ ಲಕ್ಷಣ

**ನಿರ್ಮಥ್ಯ ಶ್ರೀಶಾರ್ಙ್ಗದೇವಃ ಸಾರೋದ್ಧಾರಮಿಮಂ ವ್ಯಧಾತ್ ।**
**ಗೀತಂ ವಾದ್ಯಂ ತಥಾ ನೃತ್ತಂ[23] ತ್ರಯಂ ಸಂಗೀತಮುಚ್ಯತೇ ॥** 21

—ಕಡೆದು ಶ್ರೀ ಶಾರ್ಙ್ಗದೇವನು ಈ (ಸಂಗೀತರತ್ನಾಕರವೆಂಬ) ಸಾರವನ್ನು ಉದ್ಧರಿಸಿದ್ದಾನೆ. ಗೀತವನ್ನೂ ವಾದ್ಯವನ್ನೂ ಹಾಗೆಯೇ ನೃತ್ತವನ್ನೂ ಮೂರನ್ನೂ ಸಂಗೀತವೆಂದು ಹೇಳುತ್ತಾರೆ.

ಇದರಿಂದ ಸಂಗೀತರತ್ನಾಕರವು ಪ್ರಾಚೀನ ಸಂಗೀತಶಾಸ್ತ್ರಗ್ರಂಥಗಳ ಉದ್ಧೃತಿಮಾತ್ರವಲ್ಲವೆಂದು ಸ್ಪಷ್ಟವಾಗಿದೆ. ಪೂರ್ವಾಚಾರ್ಯರುಗಳ ಅಭಿಪ್ರಾಯಗಳನ್ನು ಚೆನ್ನಾಗಿ ವಿಮರ್ಶಿಸಿ ತನ್ನ ಕಡೆಯ ತೀರ್ಮಾನವನ್ನು ಲಕ್ಷ್ಯ-ಲಕ್ಷಣಗಳ ಸಮನ್ವಯಕ್ಕಾಗಿ ಮಾಡಿದ್ದಾನೆಂಬುದು ಸಂಗೀತರತ್ನಾಕರದ I, 2, 91, 92; I, 4, 5; I, 7, 73; II, 2, 3; IV, 268, VI, 334, 335, ಮತ್ತು VI, 338 ಇತ್ಯಾದಿ ಅನೇಕ ನಿದರ್ಶನಗಳಿಂದ ವ್ಯಕ್ತವಾಗುತ್ತದೆ.

ಭಾರತದ ಕಲಾ ಇತಿಹಾಸದಲ್ಲಿ ಸಂಗೀತವೆಂಬ ಪದದ ಅರ್ಥವು ಕಾಲಕಾಲಕ್ಕೂ ವ್ಯತ್ಯಾಸವಾಗುತ್ತ ಬಂದಿದೆ. ವೇದವಾಙ್ಮಯದಲ್ಲಿ ಗೀತ, ವಾದ್ಯ ಮತ್ತು ನೃತ್ತಗಳ ಸಮುಚ್ಚಯವನ್ನು ಶಿಲ್ಪಕವೆಂದು ವ್ಯವಹರಿಸಿದೆ. ಭರತಮುನಿಯ ನಾಟ್ಯಶಾಸ್ತ್ರದಲ್ಲಿ ಇವುಗಳನ್ನು ನಾಟ್ಯದ ಅಂಗಗಳಾಗಿ ವ್ಯವಹರಿಸಿದೆ. ಪ್ರಾಚೀನ ಭಾರತದಲ್ಲಿ ಗೀತಕ್ಕೆ ಪ್ರಾಧಾನ್ಯ ದೊರೆತು ಗೀತಶಾಸ್ತ್ರವು ಸರ್ವಸ್ವತಂತ್ರವೂ ಸುದೃಢವೂ ಆದ ಶಾಸ್ತ್ರವಾಗಿ ಬೆಳೆದರೂ, ಅದಕ್ಕೆ ಸಹಜವಾಗಿಯೇ ಉಪಕಾರಕಗಳೂ ಪೂರಕಗಳೂ ಆಗಿರುವ ವಾದ್ಯ ಮತ್ತು ನೃತ್ಯಗಳೊಡನೆ ಸಂಬಂಧಿತವಾದ ಒಂದು ಸಂಯುಕ್ತಕಲೆಯೆಂದು ತಾತ್ತ್ವಿಕವಾಗಿ ಭಾವಿಸುವ ಪ್ರವೃತ್ತಿ ಕಂಡುಬರುವುದು ಉಪಲಬ್ಧಶಾಸ್ತ್ರಗ್ರಂಥಗಳಲ್ಲೆಲ್ಲ ಸಂಗೀತರತ್ನಾಕರದಲ್ಲಿಯೇ ಮೊದಲು. ಸಂಗೀತದ ಈ ಕಲ್ಪನೆಯು ಬಹು ಪ್ರತಿಭಾನ್ವಿತವಾದುದು.

---

23 ಅ, ಕ : ನೃತ್ಯಂ. ಈ ಆಕರಗಳು ಈ ಅಧ್ಯಾಯದಲ್ಲೆಲ್ಲ ಇದೇ ಪಾಠಾಂತರವನ್ನೊಳಗೊಂಡಿವೆ.

## 1. ಪದಾರ್ಥಸಂಗ್ರಹ ಪ್ರಕರಣ

ಲಲಿತಕಲೆಗಳಲ್ಲಿ ನೆಲೆಯಾದ ಸೌಂದರ್ಯಾರ್ಥವನ್ನುಳ್ಳ ಸಾಹಿತ್ಯ, ಶಿಲ್ಪ, ಚಿತ್ರ, ವಾಸ್ತುಶಿಲ್ಪ ಮೊದಲಾದ ಒಂದು ವಿಧವನ್ನೂ, ಸ್ಥಿರವಲ್ಲದ ಅರ್ಥವುಳ್ಳ ಗೀತ, ನೃತ್ತ ಮೊದಲಾದ ಮತ್ತೊಂದು ವಿಧವನ್ನೂ ಗುರುತಿಸ ಬಹುದು. ಮೊದಲನೆಯದಕ್ಕೆ ಸ್ಥಿರವಾದ ಭೌತಿಕ ಚೌಕಟ್ಟು ಇರುತ್ತದೆ. ಇದರಿಂದಾಗಿ ಆಯಾ ಯುಗದ ಕಲಾಭಿ ರುಚಿಯ ವಿಶೇಷ ಸ್ವಭಾವವನ್ನೂ ಸಂಪ್ರದಾಯವನ್ನೂ ಅನುಸರಿಸಿ ಆಕಾರಕ್ಕೆ (form) ಸಂಬಂಧಿಸಿದ ಹಾಗೆ ಅದು ಸ್ವಲ್ಪಮಟ್ಟಿಗೆ ವ್ಯತ್ಯಾಸವಾಗಬಲ್ಲುದೇ ಹೊರತು ಮೂಲಕಲ್ಪನೆಯಲ್ಲಾಗಲೀ, ವಸ್ತುವಿನಲ್ಲಾಗಲೀ, ಅದರ ರಚನೆಯಲ್ಲಾಗಲೀ ವ್ಯತ್ಯಾಸವಾಗಲಾರದು. ಎರಡನೆಯ ವಿಧದಲ್ಲಿ ಚಲನೆಯೇ ಅದರ ಉಸಿರು. ಸ್ರೋತರೂಪ ವಾದ ಶಿಲ್ಪದ ಕಲ್ಪನೆಯು ನೃತ್ತಕ್ಕೆ ಆಸ್ಪದವಿತ್ತಿದೆಯೆನ್ನಬಹುದು. ಈ ವಿಭಾಗದ ದೃಷ್ಟಿಯಿಂದ ಗೀತವಾದ್ಯಗಳಿಗೆ ಪ್ರತ್ಯೇಕಸ್ಥಾನವನ್ನು ಕಲ್ಪಿಸಬೇಕಾಗಿದೆ. ಏಕೆಂದರೆ ಅವುಗಳಲ್ಲಿನ ಕಲೆ ಕ್ಷಣಿಕಸೌಂದರ್ಯಾನುಭವಗಳನ್ನು ಹೆಣೆದು ಮಾಡಿದ ಮಾಲೆ. ಇದನ್ನು ಮನಗಂಡು ಆಧುನಿಕ ತರ್ಕಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳಲ್ಲಿ ಸಂಗೀತಕ್ಕೆ ನಿರಾಲಂಬವೂ ವೈಶಿಷ್ಟ್ಯಪೂರ್ಣವೂ ಆದ ಸ್ಥಾನವನ್ನು ಕೊಡಲಾಗಿದೆ. ತಾರ್ಕಿಕವಾಗಿ ನೋಡಿದಾಗ ಭಾಷೆಗೂ ನೃತ್ತಕ್ಕೂ, ನೃತ್ತಕ್ಕೂ ಗೀತಕ್ಕೂ ಸಮಾನವಾದ ಆಧಾರಗಳೂ, ಆಕರಗಳೂ, ಅಂಶಗಳೂ ಕಂಡುಬರುತ್ತವೆ. ಆಧುನಿಕ ಸಂಕೇತವಾದ (symbolistic philosophy)ದ ದೃಷ್ಟಿಯಲ್ಲಿ, ಗೀತ, ವಾದ್ಯ ಮತ್ತು ನೃತ್ತಗಳು ಮಾನವನ ಮನಸ್ಸಿನ ಸೃಷ್ಟಿಪರಕಲಾತ್ಮಕಚಟುವಟಿಕೆಯ ಮೂರು ಮುಖಗಳು ಎಂದು ತಿಳಿದು ಬರುತ್ತದೆ. ಇವುಗಳ ಮನೋವೈಜ್ಞಾನಿಕ, ಸೌಂದರ್ಯಾತ್ಮಕ ಹಾಗೂ ಪ್ರಾಚೀನ-ಮಾನವ-ಶಾಸ್ತ್ರೀಯ ತತ್ತ್ವಗಳ ಲ್ಲಿರುವ ಸಾಮ್ಯದಿಂದಾಗಿ ಇವು ಮೂರೂ ಒಂದೇ ಬುಡಕಟ್ಟಿಗೆ ಸೇರಿದವುಗಳು ; ಅವುಗಳ ಕಾರ್ಯವಿಧಾನ ಮತ್ತು ಪರಿಣಾಮಗಳು—ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ—ಒಂದೇ. ಭಾಷೆ, ಗೀತ ಮತ್ತು ನೃತ್ತಗಳ ತಾತ್ತ್ವಿಕ ವಿಶ್ಲೇಷಣೆಯನ್ನು ಮದರಾಸಿನ ಹನ್ನೆರಡನೇ ನಾಟ್ಯಕಲಾಸಮ್ಮೇಳನದಲ್ಲಿ ಚಂದ್ರಶೇಖರಯ್ಯನವರು ಮಾಡಿರುವ ವಿದ್ವತ್‌ಪೂರ್ಣವೂ, ವೈಜ್ಞಾನಿವೂ ಆದ ಅಧ್ಯಕ್ಷಭಾಷಣದಲ್ಲಿ ಕಾಣಬಹುದು.[29, 30] ಭಾರತೀಯ ಲಲಿತಕಲೆಗಳನ್ನು ಈ ದೃಷ್ಟಿಯಿಂದ ಅಳೆದಿರುವುದು ಇದೇ ಮೊದಲು.

ಕಾಲಾನುಕ್ರಮದಲ್ಲಿ ಸಂಗೀತದ ಈ ಕಲ್ಪನೆಯು ಮಾಸುತ್ತಬಂದು ವಾದ್ಯಗೀತಗಳೇ ಸಂಗೀತವೆಂಬ ವರ್ಗೀಕರಣವು ರೂಢಿಗೆ ಬಂದಿತು. ಇತ್ತೀಚೆಗೆ ಸಂಗೀತಕ್ಕೆ ಹಾಡುಗಾರಿಕೆಯೊಂದನ್ನೇ ಉದ್ದೇಶಿಸುವ ಅರ್ಥಪ್ರವೃ ತ್ತಿಯೂ ಅಲ್ಲಲ್ಲಿ ಕಂಡುಬರುತ್ತಿದೆ.

ಅಡ್ಯಾರ್ ಮುದ್ರಣದಲ್ಲಿರುವ ನೃತ್ತಶಬ್ದಕ್ಕೆ ಕಲ್ಕತ್ತ ಮತ್ತು ಆನಂದಾಶ್ರಮ ಮುದ್ರಣಗಳೆರಡೂ ನೃತ್ಯ ಎಂಬ ಪಾಠಾಂತರವನ್ನೇ ಕೊಡುತ್ತವೆ. ನೃತ್ತ, ನೃತ್ಯ ಮತ್ತು ನರ್ತನಗಳು ಮೂರೂ ಬೇರೆ ಬೇರೆ ಅರ್ಥವುಳ್ಳ ಶಬ್ದಗಳು : ಆಂಗಿಕ, ಆಹಾರ್ಯ, ವಾಚಿಕ ಮತ್ತು ಸಾತ್ತ್ವಿಕವೆಂಬ ನಾಲ್ಕೂ ಅಂಗಗಳಿಂದ ಕೂಡಿದುದು—ಎಂದರೆ ಕ್ರಮವಾಗಿ, ಅಂಗಪ್ರತ್ಯಂಗಗಳ ಅಭಿನಯದಿಂದಲೂ, ಹಾರ, ಕಿರೀಟ, ಬಣ್ಣ, ಉಡುಪು, ಕೂದಲು ಮೊದಲಾದ ಪಾತ್ರೋಪಕರಣಗಳಿಂದಲೂ, ಮಾತಿನಿಂದಲೂ, ಭಾವ ಮತ್ತು ರಸಗಳಿಂದಲೂ ಕೂಡಿರುವುದು—ನರ್ತನ. ಅಂಗ-ಉಪಾಂಗಗಳಿಂದ ಮಾಡಿದ ಅಭಿನಯಕ್ಕೆ—ಎಂದರೆ ನಿರ್ದಿಷ್ಟಸಾಹಿತ್ಯಾತ್ಮಕ ಸನ್ನಿವೇಶದಲ್ಲಿನ ವರ್ಣಾತ್ಮಕ ಅರ್ಥವನ್ನು ಸ್ಥಾಪ್ಯಾರ್ಥವುಳ್ಳ ಅಂಗಪ್ರತ್ಯಂಗಗಳ ಕಲಾತ್ಮಕಚಲನೆಯಿಂದ ತೋರಿಸುವುದಕ್ಕೆ— ನೃತ್ಯವೆಂದು

29 Souvenir, The Thirteenth Natyakala Conference, Madras, pp. 12-15.

30 Sathyanarayana, R : 'Gondala-A Ritual Dance' in "The Soul of Indian Dance."

ಹೆಸರು. ಇದರಲ್ಲಿ ಅಂಗಗಳ ಅಭಿನಯದಿಂದ ಮಾತ್ರ ಭಾವವು ಸ್ಫುರಿಸುತ್ತದೆ ಮತ್ತು ಆಭರಣಾದಿಗಳೂ ಮಾತೂ ಗೌಣವಾಗಿರುತ್ತವೆ, ಅಥವಾ ಇಲ್ಲದಿರುತ್ತವೆ. ಅಭಿನಯವೂ ಮಾತೂ, ನಾಟಕೀಯ ಸನ್ನಿವೇಶಗಳಿಗೆ ಬೇಕಾಗುವ ಪಾತ್ರೋಪಕರಣಗಳೂ ಇಲ್ಲದೆ ಶರೀರದ ಅಂಗಪ್ರತ್ಯಂಗಗಳ ಕಲಾತ್ಮಕವಿಕ್ಷೇಪ, ವಿನ್ಯಾಸಗಳಿಗೆ ನೃತ್ತವೆಂದು ಹೆಸರು.[31] ನೃತ್ಯ, ನರ್ತನಗಳು ಮುಖ್ಯವಾಗಿ ನಾಟ್ಯಕರ್ಮಕ್ಕೆ ಉಪಕಾರಕಗಳಾದುದರಿಂದ 'ನೃತ್ತ'ವೇ ಇಲ್ಲಿ ಸರಿಯಾದ ಪಾಠವೆಂದು ತೋರುತ್ತದೆ.

ಅಲ್ಲದೆ ಮಾನವಬುದ್ಧಿ ಗೋಚರವಾದ ಅರ್ಥದ್ಯೋತನಕ್ಕೆ ಎರಡು ಮಾರ್ಗಗಳುಂಟು: ಭಾಷೆಯಲ್ಲಿರುವ ಪದಗಳಂತೆ ಅನೇಕವೂ ಸರಳವೂ ಆಗಿರುವ ಸಂಕೇತಗಳು ತಮ್ಮ ಸ್ಥಾಪ್ಯಾರ್ಥ (connotation), ಶಬ್ದಾರ್ಥ (denotation), ಮತ್ತು ಸೂಚ್ಯಾರ್ಥ(signification)ಗಳ ಮೂಲಕ, ಅನಿವಾರ್ಯವಾದ ಕಾಲಾನುಕ್ರಮದಿಂದಾಗಿ, ವಿವಿಧ ಹಂತಗಳಲ್ಲಿ ಉಂಟುಮಾಡುವ ಸಂಕೀರ್ಣಾರ್ಥ ಒಂದು ಬಗೆಯದು. ಇದನ್ನು ವಿವಿಧ ಸೋಪಾನಕ ಅರ್ಥ ಅಥವಾ ವರ್ಣಾತ್ಮಕ-ಅರ್ಥ (discursive meaning) ಎನ್ನಬಹುದು. ಸಂಯೋಜಿತವೂ ಉಪಕಾರಕಗಳೂ ಆಗಿರುವ ಸಂಕೇತಗಳು ಅನೇಕವಾಗಿದ್ದರೂ, ಕೆಲವುವೇಳೆ– ಉದಾಹರಣೆಗೆ, ಗೀತದಲ್ಲಿನ ನಾದಭಾಗದಂತೆ— ಕಾಲಾನುಕ್ರಮದಿಂದ ನಿರ್ಬಂಧಿತವಾಗಿದ್ದರೂ, ಒಟ್ಟು ಅರ್ಥವು ಒಂದೇ ಘಟ್ಟದಲ್ಲಿ ಸ್ಫುರಿಸುವುದು ಇನ್ನೊಂದು ಬಗೆ. ಇದನ್ನು ಏಕಸೋಪಾನಕ-ಅರ್ಥ ಅಥವಾ ಅವರ್ಣಾತ್ಮಕ-ಅರ್ಥ (presentational meaning) ಎನ್ನಬಹುದು. ಗೀತ, ಚಿತ್ರ ಮತ್ತು ಶಿಲ್ಪಗಳು ಇದಕ್ಕೆ ಉದಾಹರಣೆಗಳು. ಗೀತದಲ್ಲಿನ ನಾದಭಾಗವು ಕಾಲಾನುಕ್ರಮದಿಂದ ಬಾಧಿತವಾಗಿದೆಯಲ್ಲ, ಅದು ಎರಡನೆಯ ವಿಧಕ್ಕೆ ಹೇಗೆ ಸೇರಿತು, ಎಂಬ ಶಂಕೆ ಇಲ್ಲಿ ಮೂಡಬಹುದು. ಗಾನದ ಮೂಲಧಾತುಗಳಾದ ಸ್ವರಗಳಿಗೆ ಸ್ಥಾಪ್ಯಾರ್ಥ ಮತ್ತು ಶಬ್ದಾರ್ಥಗಳು ಸ್ಥಿರವಲ್ಲದುದರಿಂದ ಅದು ಎರಡನೆಯ ಬಗೆಯ ಅರ್ಥವನ್ನೇ ಕೊಡುತ್ತದೆ. ವಿವರಗಳಿಗೆ ಸೂಸನ್ ಲ್ಯಾಂಗರಳ 'Philosophy in a New Key' ಗ್ರಂಥದ ಮೂರು, ನಾಲ್ಕು ಮತ್ತು ಎಂಟನೆಯ ಅಧ್ಯಾಯಗಳನ್ನೂ, 8-5-53 ರ ತಾಯಿನಾಡುವಿನಲ್ಲಿರುವ 'ಕರ್ಣಾಟಕ ಸಂಗೀತದಲ್ಲಿ ರಸೋತ್ಪಾದನೆಯ ಸ್ವರೂಪ' ಎಂಬ ನನ್ನ ಲೇಖನವನ್ನೂ ನೋಡಬಹುದು.[32]

ಸಂಗೀತ ಎಂಬ ಪದಕ್ಕೆ ಮೇಲೆ ಹೇಳಿರುವ ನಿರೂಪಣೆಯು ಈ ಎರಡೂ ಬಗೆಯ ಅರ್ಥಗಳನ್ನೊಳಗೊಂಡು, ಮಾನವವ್ಯಕ್ತಿತ್ವದ ಸ್ವಯಂಪೂರ್ಣವೂ, ಸೃಷ್ಟಿಪರವೂ, ಮುಖ್ಯವೂ, ಅನಿವಾರ್ಯವೂ ಆದ ಪ್ರಧಾನಾಂಗವೊಂದನ್ನು ಸೂಚಿಸುವುದರಿಂದ ಈ ಅರ್ಥವನ್ನೇ ಗ್ರಹಿಸುವುದು ಸೂಕ್ತವೆಂದು ತೋರುತ್ತದೆ.[33] ನರ್ತನ ಮತ್ತು ನೃತ್ಯಗಳು ಮುಖ್ಯವಾಗಿ ನಾಟ್ಯಕ್ಕೆ ಉಪಕಾರಕಗಳಾದುದರಿಂದಲೂ ಅವುಗಳಲ್ಲಿ ವರ್ಣಾತ್ಮಕ ಅರ್ಥದ ಸೂಚನೆಯೇ ಪ್ರಧಾನವಾದುದರಿಂದಲೂ ನೃತ್ತವನ್ನೇ ಸಂಗೀತದ ಅಂಗವಾಗಿ ಸ್ವೀಕರಿಸಬೇಕು.

---

31 ಸಂಗೀತರತ್ನಾಕರ, VII, 16, 18.

32 ಈ ಗ್ರಂಥಗಳನ್ನೂ ಅವಲೋಕಿಸಿ: A. N. Whitehead; Symbolism, its Meaning and Effect; Bertrand Russel, Our Knowledge of the External World. ರಾ. ಸತ್ಯನಾರಾಯಣ, ಸಂಗೀತದಲ್ಲಿ ರಸಪ್ರತಿಪಾದನೆ: ಭಾರತೀಯ ಕಲಾದರ್ಶನ (ಸಂಗೀತ, ನೃತ್ಯ, ಸಾಹಿತ್ಯಸಮ್ಮೇಳನ ಸ್ಮಾರಕ ಸಂಚಿಕೆ,) ಮೈಸೂರು ಸಂಗೀತ ನಾಟಕ ಅಕಾಡಮಿ, ಬೆಂಗಳೂರು, 1964. ಪು. 119–133.

33 Chandrasekhariah, R, *op. cit.*, p. 15.

1. ಪದಾರ್ಥಸಂಗ್ರಹ ಪ್ರಕರಣ

ಮಾರ್ಗ ಸಂಗೀತ

**ಮಾರ್ಗೋ ದೇಶೀತಿ ತದ್ದ್ವೇಧಾ ತತ್ರ ಮಾರ್ಗಃ ಸ ಉಚ್ಯತೇ ।**
**ಯೋ ಮಾರ್ಗಿತೋ ವಿರಿಂಚ್ಯಾದ್ಯೈಃ[24] ಪ್ರಯುಕ್ತೋ ಭರತಾದಿಭಿಃ ॥** 22

ಅದು (ಸಂಗೀತವು) ಮಾರ್ಗ [ಮತ್ತು] ದೇಶಿಯೆಂದು ಎರಡು ವಿಧ. ಯಾವುದು ಬ್ರಹ್ಮನೇ ಮೊದಲಾದವರಿಂದ ಹುಡುಕಲ್ಪಟ್ಟು ಭರತನೇ ಮೊದಲಾದವರಿಂದ—

ದೇಶೀ ಸಂಗೀತ

**ದೇವಸ್ಯ ಪುರತಃ ಶಂಭೋರ್ನಿಯತಾಭ್ಯುದಯಪ್ರದಃ ।**
**ದೇಶೇ ದೇಶೇ ಜನಾನಾಂ ಯದ್ರುಚ್ಯಾ ಹೃದಯರಂಜಕಮ್ ॥** 23

—ದೇವನಾದ ಶಿವನಮುಂದೆ ಪ್ರಯೋಗಿಸಲ್ಪಟ್ಟಿತೋ ಕಟ್ಟುಪಾಡುಗಳಿಗೆ ಒಳಪಟ್ಟಿದೆಯೋ, ಏಳಿಗೆಯನ್ನು ಉಂಟುಮಾಡುತ್ತದೋ, ಅದು ಮಾರ್ಗವೆಂದು ಹೇಳಲ್ಪಡುತ್ತದೆ. ವಿವಿಧ ದೇಶಗಳಲ್ಲಿ ಜನರ ರುಚಿಗೆ ತಕ್ಕಂತೆ ಹೃದಯವನ್ನು ರಂಜಿಸುವ—

ಕುನ್ಹನ್‌ರಾಜಾ ಮಾಡಿರುವ ಅನುವಾದವು ಇಲ್ಲಿ ದೂಷಿತವಾಗಿದೆ. (ಪು. 5). ಮಾರ್ಗಶಬ್ದದ ನಿಷ್ಪತ್ತಿಯನ್ನು 'ಮೃಗ್' (ಹುಡುಕುವುದು) ಎಂಬ ಧಾತುವಿನಿಂದ (ಶಾರ್ಙ್ಗದೇವ, ಸಿಂಹಭೂಪಾಲ, ಕಲ್ಲಿನಾಥರು) ಮಾಡಿರುವುದು ಬಹು ಕೃತಕವೆಂದೂ, ಪ್ರಾಚೀನಮಾರ್ಗದಲ್ಲಿ ಪ್ರಯೋಗಿಸಲ್ಪಟ್ಟುದರಿಂದ ಮಾರ್ಗ (ದಾರಿ) ಎಂಬ ಅರ್ಥದಲ್ಲಿ ಪ್ರಯೋಗಿಸಬೇಕೆಂದೂ ಅವನು ಹೇಳಿದ್ದಾನೆ (ಅದೇ ಪುಟ).

'ಮೃಗ್' ಧಾತುವಿಗೆ 'ಹುಡುಕುವಿಕೆ' ಎಂಬ ಅರ್ಥವಿರುವುದೇನೋ ನಿಜ.[34] ಆದರೆ, ಅಟ್ಟಿಸಿಕೊಂಡು ಹೋಗು, ಬೇಟೆಯಾಡು ಎಂಬ ಪ್ರಧಾನಾರ್ಥದಲ್ಲಿ ಋಗ್ವೇದಾದಿ ಗ್ರಂಥಗಳಲ್ಲಿ ಪ್ರಯೋಗವಾಗಿರುವ ಈ ಧಾತುವು ಮೃಗವೆಂಬ ಶಬ್ದಕ್ಕೆ ಆಕರವಾಗಿರುವಂತೆ ಕಾಣುತ್ತದೆ.[35] ಅಲ್ಲದೆ, ಶಾರ್ಙ್ಗದೇವ, ಸಿಂಹಭೂಪಾಲ ಮತ್ತು ಕಲ್ಲಿನಾಥರು ಮಾರ್ಗಶಬ್ದವನ್ನು 'ಮೃಗ್' ಧಾತುವಿನಿಂದ ಪಡೆದಿಲ್ಲವೆಂಬುದು ಸ್ಪಷ್ಟವಾಗಿದೆ. ಏಕೆಂದರೆ, 'ಮಾರ್ಗ್' ಎಂಬ ಧಾತುವಿಗೂ 'ಹುಡುಕುವಿಕೆ' ಎಂಬರ್ಥವೇ ಇದೆ.[36] ಇದಕ್ಕೆ ಕರ್ಮಣಿಯಲ್ಲಿ 'ಮಾರ್ಗಿತ' ಎನ್ನುವ ರೂಪು ಬರುತ್ತದೆ. ಈ ರೂಪದಲ್ಲಿಯೇ ಮಹಾಭಾರತ, ಹರಿವಂಶ, ಋಗ್ವೇದ ಮೊದಲಾದವುಗಳಲ್ಲಿ ಈ ಶಬ್ದವು ಪ್ರಯೋಗವಾಗಿದೆಯೆಂದು ಮೋನಿಯರ್ ವಿಲಿಯಂಸ್ ತಿಳಿಸುತ್ತಾನೆ.[37] ರತ್ನಾಕರಕಾರನು 'ಮಾರ್ಗಿತಃ' ಎಂದು ಪ್ರಯೋಗಮಾಡಿರುವುದನ್ನು ಗಮನಿಸಬೇಕು. ಕಲ್ಲಿನಾಥನು ಇದೇ ರೂಪಕ್ಕೆ 'ಮಾರ್ಗ ಅನ್ವೇಷಣೇ' ಎಂಬ ನಿಷ್ಪತ್ತಿಯನ್ನು ಕರ್ಮಣಿಯಲ್ಲಿ 'ಘಞ್' ಅಂತವಾಗಿ ಹೇಳಿದ್ದಾನೆ. ಹೀಗೆ, ಮಾರ್ಗ ಶಬ್ದವನ್ನು 'ಮೃಗ್' ಧಾತುವಿನಿಂದಲೇ ಪಡೆಯಬೇಕೆಂದಿಲ್ಲ.

---

24 ಅ : ವಿರಿಂಚಾದ್ಯೈಃ.

---

34 ಧಾತುಪಾಠ, XXVI, 137 ; XXXV, 46.

35 Monier-Williams ; *op, cit.*, p. 828, col. 2.

36 ಧಾತುಪಾಠ, XXXIV, 39.

37 Monier-Williams, *op. cit.* p. 812, col. 2.

ಅಲ್ಲದೆ, (ಪ್ರಾಚೀನರು ನಡೆದ ) ' ದಾರಿ ' ಎಂಬ ಅರ್ಥಕ್ಕಿಂತ ' ಹುಡುಕಲ್ಪಟ್ಟ ' ಎಂಬ ಅರ್ಥವೇ ಇಲ್ಲಿ ಹೆಚ್ಚು ಸಮಂಜಸವಾಗಿರುವ ಹಾಗೆ ಕಾಣುತ್ತದೆ. ಏಕೆಂದರೆ ಪ್ರಾಚೀನ ಭಾರತೀಯ ಸಂಗೀತ ಮತ್ತು ನಾಟ್ಯಗಳ ಇತಿಹಾಸದಲ್ಲಿ ಈ ಕಲೆಗಳು ಬ್ರಹ್ಮನೇ ಮೊದಲಾದ ದೇವತೆಗಳಿಂದ ಹುಡುಕಲ್ಪಟ್ಟವುಗಳು ಎಂಬ ನಂಬಿಕೆ ಯಿತ್ತೆಂಬುದಕ್ಕೆ ಸಾಕಷ್ಟು ಆಧಾರವಿದೆ. ಉದಾಹರಣೆಗೆ,

ಕಿಲ ಪಿತಾಮಹಃ! ಕ್ರೀಡನೀಯಕಮಿಚ್ಛಾಮಃ ದೃಶ್ಯಂ ಶ್ರವ್ಯಂ ಚ ಯದ್ಭವೇತ್ ; ನ ವೇದವ್ಯವಹಾರೋಽಯಂ ಶೂದ್ರಜಾತಿಷು ; ತಸ್ಮಾತ್ ಸೃಜಾಪರಂ ವೇದಂ ಪಂಚಮಂ ಸಾರ್ವವರ್ಣಿಕಂ [38]

ನಾಟ್ಯವೇದಃ ಕಥಂ ಬ್ರಹ್ಮನ್ನುತ್ಪನ್ನಃ ? [39]
ವೇದೋಪವೇದೈಃ ಸಂಬದ್ಧೋ ನಾಟ್ಯವೇದೋ ಮಹಾತ್ಮನಾ ।
ಏವಂ ಭಗವತಾ ಸೃಷ್ಟೋ ಬ್ರಹ್ಮಣಾ ಸರ್ವವೇದಿನಾ ॥ [40]
ನಾಟ್ಯಸಂಜ್ಞಮಿಮಂ ವೇದಂ ಸೇತಿಹಾಸಂ ಕರೋಮ್ಯಹಂ ॥ [41]
ಅಲ್ಲದೆ ಸಾಮವೇದಾದಿಂ ಗೀತಂ ಸಂಜಗ್ರಾಹ ಪಿತಾಮಹಃ । [42]

ಮಾರ್ಗಸಂಗೀತವೆನ್ನುವುದಕ್ಕೆ ಪ್ರಾಚೀನಗೌರವಿತವೂ ಬ್ರಹ್ಮಾದಿಗಳಿಂದ ಹುಡುಕಲ್ಪಟ್ಟುದೂ ಆದುದು ಎಂಬ ಅರ್ಥವೇ ಸರಿಯೆಂಬುದಕ್ಕೆ ಬೇರೆ ನಿದರ್ಶನಗಳೂ ಇವೆ. ಉದಾಹರಣೆಗೆ, ಮಾರ್ಗಸಂಗೀತದ ಪ್ರತೀಕಗಳಾದ ಜಾತಿಗಳನ್ನು ಪರಿಶುದ್ಧವಾಗಿಯೇ ಉಳಿಸಿಕೊಳ್ಳಬೇಕೆಂಬ ನಿಯಮವನ್ನು ಹೇಳುತ್ತಾ ಶಾರ್ಙ್ಗದೇವನು

ಬ್ರಹ್ಮಪ್ರೋಕ್ತಪದೈಃ ಸಮ್ಯಕ್ ಪ್ರಾಗುಕ್ತಾಃ ಶಂಕರಸ್ತುತೌ । [43]

ಎಂದೂ, ಕಪಾಲಗಳನ್ನು ನಿರೂಪಿಸುವ ಸಂದರ್ಭದಲ್ಲಿ

ಗಾಯನ್ ಬ್ರಹ್ಮೋದಿತೈಃ ಪದೈಃ ಸ್ವರೈಶ್ಚ ಪಾರ್ವತೀಕಾಂತಸ್ತುತೌ । [44]

ಎಂದೂ ವಿಧಿಸಿದ್ದಾನೆ ಇವುಗಳಿಗೆ ವ್ಯಾಖ್ಯಾನಮಾಡುವಾಗ ಕಪಾಲವೆಂಬ ಹೆಸರು ಆ ಗೀತಪ್ರಕಾರಕ್ಕೆ ಉಂಟಾಗಲು ಕಾರಣವನ್ನು ಕೊಡುತ್ತಾ ಕಲ್ಲಿನಾಥನು [45] ಹಿಂದೆ ಶಂಭುವು ಭಿಕ್ಷಾಟನ ಸಮಯದಲ್ಲಿ ಷಾಡ್ಜೀ ಮೊದಲಾದ ಜಾತಿಗಳನ್ನು ಹಾಡಲು ಅವನ ತಲೆಯಲ್ಲಿರುವ ಚಂದ್ರಕಲೆಯು ಆನಂದಾಧಿಕ್ಯದಿಂದ ಕರಗಿ ಹರಿಯಲು ತೊಡಗಿತು ; ಶಂಭುವು ಧರಿಸಿದ್ದ ಕಪಾಲಮಾಲೆಯಲ್ಲಿದ್ದ ತಲೆಬುರುಡೆಗಳು ಈ ಅಮೃತವಾಹಿನಿಯಿಂದ ಜೀವಗೊಂಡು ಆನಂದಾತಿಶಯದಿಂದ ಅದೇ ಹಾಡುಗಳನ್ನೇ ಪುನರುಕ್ತಿಮಾಡುತ್ತಾ ಹಾಡಿದ್ದರಿಂದ ಕಪಾಲವೆಂಬ ಹೆಸರು ಬಂದಿತು, ಎಂದು ಹೇಳುತ್ತಾನೆ. ಹೀಗಾಗಿ, ಮಾರ್ಗಸಂಗೀತವೆಂಬ ಪದವು ಜಾತಿಗತಗೀತಗಳು, ಕಪಾಲ, ಕಂಬಲಗಳು ಮತ್ತು ಮದ್ರಕಾದಿಗಳು ಮೊದಲಾದ ಪ್ರಾಚೀನ ದೇವತಾಸ್ತುತಿಗಳೂ ಆಧ್ಯಾತ್ಮಿಕವಿಷಯಕಗಳೂ ಆಗಿದ್ದು ಪರಿಶುದ್ಧತೆಯನ್ನೂ ಮೂಲ ರೂಪನ್ನೂ ಕಟ್ಟುನಿಟ್ಟಿನಿಂದ ಉಳಿಸಿಕೊಂಡು ಬರಲಾಗುತ್ತಿದ್ದ ಗೇಯವಸ್ತುಕೋಶಕ್ಕೇ ಸಲ್ಲುವ ಹೆಸರು. ಇದಕ್ಕಿಂತ ಭಿನ್ನವಾದ ಅರ್ಥವನ್ನಾಗಲೀ ಲಕ್ಷಣವನ್ನಾಗಲೀ ಬೇರೆ ಯಾವ ಪ್ರಾಚೀನ ಸಂಗೀತ

---

38 ಭರತಮುನಿ, ನಾಟ್ಯಶಾಸ್ತ್ರ, I, 11, 12. ಪು. 10, 11. 39 ಅದೇ ಗ್ರಂಥ, I, 4. ಪು. 6. 40 ಅದೇ ಗ್ರಂಥ, I, 18. ಪು. 15. 41 ಅದೇ ಗ್ರಂಥ, I, 15. ಪು. 13. 42 ಶಾರ್ಙ್ಗದೇವ, ಉ. ಗ್ರಂ., I, 1, 25. ಪು. 15. 43 ಅದೇ ಗ್ರಂಥ, I, 7, 113. ಪು. 273. 44 ಅದೇ ಗ್ರಂಥ, I, 8, 10. ಪು. 276. 45 ಕಲ್ಲಿನಾಥ, ಸಂಗೀತ ಕಲಾನಿಧಿ, ಸಂಗೀತರತ್ನಾಕರವ್ಯಾಖ್ಯಾ, ಪು. 276.

ಲಾಕ್ಷಣಿಕನೂ ಕೊಡದಿದ್ದರೂ ಆಧುನಿಕರನೇಕರು, ಶಾಸ್ತ್ರೋಕ್ತಲಕ್ಷಣದಿಂದ ಸಂಪೂರ್ಣವಾಗಿ ಲಕ್ಷಿತವಾದ ಸಂಗೀತಕ್ಕೆ ಮಾರ್ಗಸಂಗೀತವೆಂದು ಹೆಸರೆಂದೂ ಶಾಸ್ತ್ರದ ಕಟ್ಟುಪಾಡಿಲ್ಲದೆ ಆಯಾ ದೇಶಗಳ ಕಲಾಭಿರುಚಿಗೆ ತಕ್ಕಂತೆ ಲಂಗುಲಗಾಮಿಲ್ಲದೆ ಸ್ವತಂತ್ರವಾಗಿ ಕೇವಲ ರಂಜನೆಗಾಗಿ ಬೆಳಸಿಕೊಂಡ ಸಂಗೀತಕ್ಕೆ ದೇಶ್ಯವೆಂದು ಹೆಸರೆಂದೂ ತಿಳಿಯುತ್ತಾರೆ. ಮತ್ತೆ ಕೆಲವರು ವೈದಿಕಕರ್ಮಕಾಂಡದ ಸಂದರ್ಭಗಳಲ್ಲಿ ಬಳಸುತ್ತಿದ್ದ ಗಾನಪ್ರಪಂಚವನ್ನು ಮಾರ್ಗವೆಂದೂ ಲೌಕಿಕಸಂದರ್ಭಗಳಲ್ಲಿ ಬಳಸುತ್ತಿದ್ದುದನ್ನು ದೇಶ್ಯವೆಂದೂ ತಿಳಿಯುತ್ತಾರೆ. ಪರೋಕ್ಷಸೂಚನೆಯಿಂದ ಈ ವರ್ಗೀಕರಣವನ್ನು ಒಪ್ಪಬಹುದಾದರೂ ಮಾರ್ಗಸಂಗೀತವೆಂಬುದಕ್ಕೆ ಮೇಲೆ ಸೂಚಿಸಿರುವ ಅರ್ಥವೇ ನೇರವೂ ಸ್ಪಷ್ಟವೂ ಸಾಧಾರವೂ ಆಗಿದೆಯೆಂದು ತೋರುತ್ತದೆ.

**ಗೀತಂ ಚ ವಾದನಂ ನೃತ್ತಂ ತದ್ದೇಶೀತ್ಯಭಿಧೀಯತೇ ।**
**ನೃತ್ತಂ ವಾದ್ಯಾನುಗಂ ಪ್ರೋಕ್ತಂ ವಾದ್ಯಂ ಗೀತಾನುವರ್ತಿ ಚ ॥** 24

—ಗೀತ ಮತ್ತು ವಾದನ, ನೃತ್ತಗಳಿರುತ್ತವೋ ಅವನ್ನು ದೇಶೀ ಎಂದು ಹೆಸರಿಸುತ್ತಾರೆ. ನೃತ್ತವು ವಾದ್ಯವನ್ನು ಅನುಸರಿಸುವುದೆಂದು ಹೇಳಿದೆ; ಮತ್ತು ವಾದ್ಯವು ಗೀತವನ್ನು ಅನುಸರಿಸುವುದು.

ಸಂಗೀತದಲ್ಲಿ ಗೀತವೇ ಪ್ರಧಾನ

**ಅತೋ ಗೀತಂ ಪ್ರಧಾನತ್ವಾದತ್ರಾದಾವಭಿಧೀಯತೇ ।**
**ಸಾಮವೇದಾದಿದಂ ಗೀತಂ ಸಂಜಗ್ರಾಹ ಪಿತಾಮಹಃ ॥** 25

ಹೀಗೆ ಗೀತವೇ ಪ್ರಧಾನವಾದುದರಿಂದ ಇಲ್ಲಿ [ಅದನ್ನು] ಮೊದಲು ಪರಿಶೀಲಿಸಲಾಗುವುದು. ಈ ಗೀತವನ್ನು ಬ್ರಹ್ಮನು ಸಾಮವೇದದಿಂದ ಸಂಗ್ರಹಿಸಿದನು.

ಗೀತದಲ್ಲಿ ಸಾಹಿತ್ಯ ಮತ್ತು ಗೇಯಭಾಗಗಳು ಇರುತ್ತವೆ. ಸಾಹಿತ್ಯದಲ್ಲಿನ ಪದಗಳಿಗೆ ಶಬ್ದಾರ್ಥ ಮತ್ತು ಧ್ವನ್ಯರ್ಥಗಳೆರಡೂ ಇರುತ್ತವೆ. ಗೇಯಭಾಗದಲ್ಲಿ ನಾದಲಯ ಮತ್ತು ಕಾಲಲಯಗಳಿರುತ್ತವೆ. ಈ ನಾಲ್ಕೂ ಇರುವಂತಹುದು ಗೀತವೊಂದೇ. ವಾದ್ಯದಲ್ಲಿ ಸಾಹಿತ್ಯವಿಲ್ಲದಿರುವುದರಿಂದ ಕೇವಲ ನಾದಲಯ ಮತ್ತು ಕಾಲಲಯಗಳಿರುತ್ತವೆ. ನೃತ್ತ(ನೃತ್ಯವಲ್ಲ)ದಲ್ಲಿ ಕೇವಲ ಕಾಲಲಯವಿದ್ದು ಅಂಗಪ್ರತ್ಯಂಗಗಳ ವಿಕ್ಷೇಪ-ವಿನ್ಯಾಸಗಳಿರುವುದರಿಂದ ರಂಜನೆಗಾಗಿ ವಾದ್ಯವನ್ನೂ ಅವಲಂಬಿಸಬೇಕಾಗುತ್ತದೆ. ಹೀಗಾಗಿ ಗೀತಕ್ಕೇ ಪ್ರಾಧಾನ್ಯ. ನೃತ್ತದಲ್ಲಿ ವರ್ಣಾತ್ಮಕ ಅರ್ಥವಿಲ್ಲವಾಗಿ ಗೀತವಾದ್ಯಗಳ ನೆರವಿಲ್ಲದೆ ಅದು ರಂಜಿಸದೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಅಲ್ಲದೆ ಭಾರತೀಯ ಸಂಗೀತದಲ್ಲಿ ವಾದ್ಯಗಾರರಿಗಿಂತ ಹಾಡುಗಾರರೇ ಹೆಚ್ಚು ಸಂಖ್ಯೆಯಲ್ಲಿರುವುದು ಶಾರ್ಙ್ಗದೇವನ ಹೇಳಿಕೆಯನ್ನೇ ಸಮರ್ಥಿಸುತ್ತದೆ.

ಎಲ್ಲ ವರ್ಣದವರೂ ನೋಡಿ ಮತ್ತು ಕೇಳಿ ಆನಂದಿಸಬಹುದಾದ ಹೊಸಕ್ರೀಡೆಯೊಂದನ್ನು ಸೃಷ್ಟಿಸಿಕೊಡಬೇಕೆಂದು ಇಂದ್ರಾದಿಗಳು ಬ್ರಹ್ಮನನ್ನು ಪ್ರಾರ್ಥಿಸಿಕೊಂಡಾಗ ಅವನು ನಾಟ್ಯಾಂಗವಾದ ಗೀತವನ್ನು ಸಾಮವೇದದಿಂದ ಪಡೆದುಕೊಂಡನೆಂದು ನಾಟ್ಯಶಾಸ್ತ್ರದಲ್ಲಿ ಹೇಳಿರುವ

ಜಗ್ರಾಹಪಾಠ್ಯಂ ಋಗ್ವೇದಾತ್ ಸಾಮಭ್ಯೋ ಗೀತಮೇವ ಚ [46]

---

46 ಭರತಮುನಿ, ಉ. ಗ್ರಂ., I, 17. ಪು. 14.

ಎಂಬ ಭರತೋಕ್ತಿಯೇ ಶಾರ್ಙ್ಗದೇವನಿಗೆ ಆಧಾರವೆಂದು ಕಾಣುತ್ತದೆ. ಭರತನಂತೆಯೇ[47] ಶಾರ್ಙ್ಗದೇವನೂ ಪಿತಾಮಹ ಎನ್ನುವುದನ್ನು ಚತುರ್ಮುಖನೂ ಸೃಷ್ಟಿಕರ್ತನೂ ತ್ರಿಮೂರ್ತಿಗಳಲ್ಲೊಬ್ಬನೂ ಆದ ಬ್ರಹ್ಮ ಎಂಬರ್ಥ ದಲ್ಲಿ ಉಪಯೋಗಿಸಿದ್ದಾನೆ. ಅಲ್ಲದೆ, ಸಂಗೀತರತ್ನಾಕರದ I-1-16 ರಲ್ಲಿ ಸ್ಮರಿಸಿರುವ ಬ್ರಹ್ಮಾ ಎಂಬ ಶಬ್ದವನ್ನು ಸಂಗೀತಶಾಸ್ತ್ರಕಾರನಾದ ಚಾರಿತ್ರಿಕವ್ಯಕ್ತಿಯೊಬ್ಬನ ಹೆಸರಾಗಿ ಉಪಯೋಗಿಸಿದ್ದಾನೆಂದೂ ಕಾಣುತ್ತದೆ. ಇಂತಹ ಹೆಸರಿನ ಗ್ರಂಥಕರ್ತೃವೊಬ್ಬನಿಂದನೆಂಬುದಕ್ಕೆ ಶೃಂಗಾರಹಾರದಲ್ಲಿ ಹಮ್ಮೀರನೂ[48] ಸಂಗೀತಮಕರಂದದಲ್ಲಿ ನಾರದನೂ[49] ಕೊಟ್ಟಿರುವ ಉದ್ಧೃತಿಗಳಿಂದ ಸಮರ್ಥನೆ ದೊರೆಯುತ್ತದೆ.

ಗೀತ ಪ್ರಯೋಜನ

**ಗೀತೇನ ಪ್ರೀಯತೇ ದೇವಃ ಸರ್ವಜ್ಞಃ ಪಾರ್ವತೀಪತಿಃ ।**
**ಗೋಪೀಪತಿರನಂತೋಽಪಿ ವಂಶಧ್ವನಿವಶಂ ಗತಃ[25] ॥** 26

ಹಾಡಿನಿಂದ ಸರ್ವಜ್ಞನಾದ ಪಾರ್ವತಿಯ ಪತಿಯು (ಶಿವನು) ಪ್ರಸನ್ನನಾಗುತ್ತಾನೆ. ಗೋಪಿಯರ ಪತಿಯಾದ ಅನಂತನಾದರೋ ಕೊಳಲಿನ ನಾದಕ್ಕೆ ವಶವಾಗಿದ್ದಾನೆ.

ಗೀತ ಪ್ರಶಂಸೆ

**ಸಾಮಗೀತಿರತೋ ಬ್ರಹ್ಮಾ ವೀಣಾಽಽಸಕ್ತಾ ಸರಸ್ವತೀ ।**
**ಕಿಮನ್ಯೇ ಯಕ್ಷಗಂಧರ್ವದೇವದಾನವಮಾನವಾಃ ॥** 27

ಬ್ರಹ್ಮನು ಸಾಮ[ವೇದ]ದ ಹಾಡುಗಳಲ್ಲಿ ಆನಂದಿಸುತ್ತಾನೆ. ಸರಸ್ವತಿಯು ವೀಣೆಯೊಡನೆ ಎಡೆಬಿಡದೆ (ಇರುತ್ತಾಳೆ) <ಆಸಕ್ತಾ>. (ಹೀಗಿರುವಾಗ) ಉಳಿದ ಯಕ್ಷರು, ಗಂಧರ್ವರು, ದೇವತೆಗಳು, ರಾಕ್ಷಸರು [ಹಾಗೂ] ಮನುಷ್ಯರು ಎಷ್ಟರವರು !

ಋಗ್ವೇದದಲ್ಲಿರುವ ಋಕ್‌ಗಳನ್ನು ಕೆಲವು ನಿಯಮಗಳಿಗೆ ಒಳಪಡಿಸಿ, ಮಾರ್ಪಾಟುಗಳನ್ನು ಮಾಡಿ ಹಾಡಿಗೆ ಅಳವಡಿಸಿದಾಗ ಸಾಮಗೀತಿಗಳು ಹುಟ್ಟುತ್ತವೆ. ಸಾಮಗೀತಿಯನ್ನು ಕುರಿತು ಶಬರಸ್ವಾಮಿಯು ಹೀಗೆ ಬರೆಯುತ್ತಾನೆ :

ಸಾಮವೇದೇ ಸಹಸ್ರಂ ಗೀತ್ಯುಪಾಯಾಃ । ಅಹ ಕತಮೋ ಗೀತ್ಯುಪಾಯಾ ನಾಮ । ಉಚ್ಯತೇ । ಗೀತಿರ್ನಾಮಕ್ರಿಯಾ ಸಾಽಭ್ಯಂತರಪ್ರಯತ್ನಜನ್ಯಾ ಸ್ವರವಿಶೇಷಾಣಾಮಭಿವ್ಯಂಜಕಾ ಸಾಮಶಬ್ದಾಭಿಲಪ್ಯಾ । ಸಾ ನಿಯತಪ್ರಮಾಣಾಯಾಂ ಋಚಿ ಗೀಯಂತೇ । ತತಸ್ಸಂಪಾದನಾರ್ಥೋಽಯಂ ಋಗಕ್ಷರವಿಶ್ಲೇಷೋ ವಿಕರ್ಷಣಮಭ್ಯಾಸೋ ವಿರಾಮಃ ಸ್ತೋಭಂ ಇತ್ಯೇವಮಾದಾಯಃ ಸರ್ವೇ ಸಾಮವೇದೇ ಸಮಾಮ್ನಾಯಂತೇ ॥[50]

ಹೀಗೆ, ಋಕ್ಕಿನಲ್ಲಿ ಅಕ್ಷರವಿಕಾರ, ಅಕ್ಷರವಿಶ್ಲೇಷ, ಅಕ್ಷರವಿಕರ್ಷಣ, ಅಕ್ಷರಾಭ್ಯಾಸ, ವಿರಾಮ, ಸ್ತೋಭ, ಲೋಪ, ಮತ್ತು ಆಗಮ ಎಂಬ ತಂತ್ರಗಳನ್ನು ಅನುಸರಿಸಿ ಸಾಮಗಳನ್ನು ಉಂಟುಮಾಡಬಹುದು. ಇವುಗಳನ್ನು ಸಾಮವೇದ ಶಿಕ್ಷೆಯಾದ ಫುಲ್ಲಸೂತ್ರಗಳು ಹೀಗೆ ವಿವರಿಸುತ್ತವೆ :

25 ಕ ; ಆದರೆ ಅ : ವದಃ.

47 ಭರತಮುನಿ, ಉ. ಗ್ರಂ., I, 1, ಪು. 1. ಇದರ ಮೇಲೆ ಅಭಿನವಗುಪ್ತನ ವ್ಯಾಖ್ಯಾನವನ್ನೂ ನೋಡಿ.

48 ರಾಮಕೃಷ್ಣಕವಿ (ಸಂ.), ಭರತಕೋಶ, ಮುನ್ನುಡಿ, ಪು. viii.

49 ನಾರದ, ಉ. ಗ್ರಂ., I, 55, 109, ಇತ್ಯಾದಿ.

50 ಜೈಮಿನಿ, ix, 2, 7, 29.

ಅಕ್ಷರ ವಿಕಾರ : ಪ್ರಯೋಗವಾಗಬೇಕಾದ ಅಕ್ಷರದ ಬದಲು ಬೇರೊಂದನ್ನು ಪ್ರಯೋಗಿಸುವುದು : viii, 87 ಇತ್ಯಾದಿ.

ಅಕ್ಷರ ವಿಶ್ಲೇಷ : ಮಧ್ಯದಲ್ಲಿರುವ ಸ್ವರವನ್ನು ಎರಡಾಗಿ ಒಡೆಯುವುದರಿಂದ ಒಂದು ಪದವನ್ನು ಪಡೆಯುವುದು, vi, 153 ಇತ್ಯಾದಿ.

ಅಕ್ಷರವಿಕರ್ಷಣ : ಅರ್ಧಸ್ವರಗಳಾದ ಯ ಮುಂತಾದುವನ್ನು ವ್ಯಂಜನವಾಗಿ ಹೇಳುವುದು, vii, 1, ಇತ್ಯಾದಿ.

ಅಕ್ಷರಾಭ್ಯಾಸ : ಒಂದು ಪದದಲ್ಲಿರುವ ಅಕ್ಷರಗಳನ್ನು ಪುನರುಚ್ಚರಿಸುವುದು.

ವಿರಾಮ : ಪದದ ಮಧ್ಯದಲ್ಲಿ ಅಥವಾ ಕೊನೆಯಲ್ಲಿ ವಿಶ್ರಾಂತಿ.

ಸ್ತೋಭ : ಋಕ್ಕಿಗೆ ಸಂಬಂಧಿಸದಿರುವ ಅಕ್ಷರಗಳನ್ನೂ ಕೆಲವು ವೇಳೆ ವಾಕ್ಯ, ಶ್ಲೋಕಗಳನ್ನೂ ಮಧ್ಯೆ ಸೇರಿಸುವುದು.

ಲೋಪ : ಉಚ್ಚರಿಸಬೇಕಾದ ಶಬ್ದಗಳನ್ನು ಬಿಟ್ಟುಬಿಡುವುದು. vii, 86 ಇತ್ಯಾದಿ.

ಆಗಮ : ಪದಮಧ್ಯದಲ್ಲಿ ಅರ್ಥಶೂನ್ಯ ಅಕ್ಷರಗಳನ್ನು ಸೇರಿಸುವುದು. vii, 184 ಇತ್ಯಾದಿ.

ಲೌಕಿಕಗೀತಕ್ಕಿರುವ ಸಾಮಾನ್ಯಗುಣಗಳನ್ನೇ ಸಾಮಗೀತಿಯೂ ಪಡೆದಿದ್ದರೂ ವಿಶೇಷವಾದ ವಿಧಿ ಮತ್ತು ಪರಿಸಂಖ್ಯೆಗಳಿಂದ ಅದು ಭಿನ್ನವಾಗಿಯೂ ವಿಶೇಷವಾಗಿಯೂ ಇರುತ್ತದೆ. ಈ ಪಾರಿಭಾಷಿಕ, ಎಂದರೆ ಸಾಮವೇದದ ಗೀತಿ ಎಂಬ, ಅರ್ಥದಲ್ಲಿ ಗೀತಿ ಶಬ್ದವು ಇಲ್ಲಿ ಪ್ರಯೋಗವಾಗಿರುವ ಹಾಗೆ ಕಾಣುತ್ತದೆ. ಏಕೆಂದರೆ, ನಿಯಮಾನುಸಾರಿಮಾತ್ರವಾದ ಮಾರ್ಗಸಂಗೀತವನ್ನು ಹುಡುಕಿಕೊಟ್ಟದು ಬ್ರಹ್ಮನೇ, ಎಂದು ಶಾರ್ಙ್ಗದೇವನು I, 1, 22ರಲ್ಲಿ ಹೇಳಿದ್ದಾನೆ.

**ಅಜ್ಞಾತವಿಷಯಾಸ್ವಾದೋ ಬಾಲಃ ಪರ್ಯಂಕಿಕಾಗತಃ**[26] **।**
**ರುದನ್ ಗೀತಾಮೃತಂ ಪೀತ್ವಾ ಹರ್ಷೋತ್ಕರ್ಷಂ ಪ್ರಪದ್ಯತೇ ॥** 28

(ಇಂದ್ರಿಯಗಳಿಗೆ ವಿಷಯವಾದ) ಪ್ರಾಪಂಚಿಕ ಅನುಭವವೇ ಇಲ್ಲದೆ ತೊಟ್ಟಿಲಲ್ಲಿರುವ ಮಗುವೂ ಅಳುತ್ತಿರುವಾಗ ಗಾನವೆಂಬ ಅಮೃತವನ್ನು ಕುಡಿದು ಸಂತೋಷಾಧಿಕ್ಯಕ್ಕೆ ಒಳಪಡುತ್ತದೆ[51] <ಪ್ರಪದ್ಯತೆ>.

**ವನೇಚರಸ್ತೃಣಾಹಾರಶ್ಚಿತ್ರಂ ಮೃಗಶಿಶುಃ ಪಶುಃ ।**
**ಲುಬ್ಧೋ ಲುಬ್ಧಕಸಂಗೀತೇ ಗೀತೇ ಯಚ್ಛತಿ**[27] **ಜೀವಿತಮ್ ॥** 29

[ಕೇವಲ] ಪಶುವಾದ ಜಿಂಕೆಯ ಮರಿಯೂ ಕಾಡಿನಲ್ಲಿ ಸಂಚರಿಸಿ ಹುಲ್ಲನ್ನು ತಿಂದು ಜೀವಿಸಿದ್ದು ಮೋಹಕವಾದ ಸಂಗೀತವನ್ನು ಮೋಹಿಸಿ ಜೀವದೊರೆಯುತ್ತದೆ.

---

26 ಕ, ಗ : ತಲೇ. 27 ಅ : ತ್ಯಜತಿ.

---

51 ಪ್ರಪದ್ಯತೆ ಎನ್ನುವುದಕ್ಕೆ ಕಾಲಿಗೆ ಬೀಳು, ಶರಣಾಗು, ಒತ್ತಾಸೆಗಾಗಿ ಆಸರೆಯನ್ನು ಪಡೆ, ಎಂದೂ ಅರ್ಥಗಳಿವೆ.

ವಿವಿಧ ಪ್ರಾಣಿಗಳಿಗೆ ವಿವಿಧ ಬಗೆಯ ವಾದ್ಯಸಂಗೀತವು (ಅಥವಾ ಹಾಡುಗಾರಿಕೆಯು) ಇಷ್ಟವಾಗಿರುತ್ತದೆಂಬ ಅಂಶವನ್ನು ಲಂಡನ್ ಮತ್ತು ಮಾಸ್ಕೋ ನಗರಗಳಲ್ಲಿರುವ ಪ್ರಾಣಿಸಂಗ್ರಹಾಲಯಗಳಲ್ಲಿ ನಡೆಸಿದ ಪ್ರಯೋಗಗಳು ಸಿದ್ಧಗೊಳಿಸುತ್ತವೆ. ಇತರ ದೇಶಗಳಲ್ಲಿಯೂ ವಿವಿಧ ರಾಗಗಳು ವಿವಿಧ ಪ್ರಾಣಿಗಳಿಗೆ ಪ್ರಿಯವಾಗುತ್ತದೆಂಬ ಪ್ರತೀತಿಯಿದೆ: ಹೀಗೆ ಪುನ್ನಾಗವರಾಳಿಯು ಹಾವುಗಳನ್ನೂ, ಗೌಳಿಪಂತು ಹಲ್ಲಿಗಳನ್ನೂ, (ಹಿಂದೂಸ್ತಾನೀ ಸಂಗೀತದ) ಅಸಾವರಿಯು ಹಾವುಗಳನ್ನೂ, ತೋಡಿಯು ಜಿಂಕೆಗಳನ್ನೂ ಆಕರ್ಷಿಸುತ್ತವೆಂಬ ನಂಬಿಕೆ ಭಾರತದಲ್ಲಿದೆ. ಹಿಂದಿನ ಕಾಲದಿಂದಲೂ ಈ ನಂಬಿಕೆ ಬೆಳೆದುಬರುತ್ತಿದೆಯೆಂಬುದಕ್ಕೆ ಆಧಾರಗಳಿವೆ: ರಾಮಾಯಣದಲ್ಲಿ ದಶರಥನು, 'ಹಾಡಿನಿಂದ ಜಿಂಕೆಯನ್ನಾಕರ್ಷಿಸಿ ಕೊಲ್ಲುವ ಬೇಡನಂತೆ ನೀನು ನನ್ನನ್ನು ಮರಳುಮಾಡಿ ಕೊಲ್ಲುತ್ತಿದ್ದೀಯೆ' ಎಂದು ಕೈಕೇಯಿಯನ್ನು ದೂಷಿಸಿ ವಿಲಪಿಸುತ್ತಾನೆ:

ಸುರುಧ್ಯ ಗೀತಶಬ್ದೇನ ಲುಬ್ಧೋ ಮೃಗಮಿವಾವಧೀಃ[52]

ಉದಯನನು ಬೇಟೆಯಸಮಯದಲ್ಲಿ ತನ್ನ ಘೋಷವತೀ ವೀಣೆಯನ್ನು ನುಡಿಸಿ ಆನೆಗಳನ್ನು ಸಮೀಪಕ್ಕೆ ಆಕರ್ಷಿಸುತ್ತಿದ್ದನೆಂದು ಭಾಸನು ತನ್ನ ಪ್ರತಿಜ್ಞಾ ಯೌಗಂಧರಾಯಣದಲ್ಲಿ ಹೀಗೆ ಹೇಳುತ್ತಾನೆ:

ಇದಂ ಭರತಕುಲೋಪಭುಕ್ತಂ ವತ್ಸರಾಜಕುಲೇ ದೃಷ್ಟವ್ಯಂ ಘೋಷವತೀ ನಾಮ ವೀಣಾರತ್ನಂ ....
ಶ್ರುತಿಸುಖಮಧುರಾ ಸ್ವಭಾವರಕ್ತಾ ಕರಜಮುಖೋಲ್ಲಿಖಿತಾಗ್ರಘೃಷ್ಟತಂತ್ರೀ ।
ಋಷಿವಚನಗತೇವ ಮಂತ್ರವಿದ್ಯಾ ಗಜಹೃದಯಾನಿ ಬಲಾನ್ ವಶೀಕರೋತಿ ।[53]

ಇದೇ ವಿಷಯವನ್ನು ಕಥಾಸರಿತ್ಸಾಗರ,[54] ಧಮ್ಮಪದ ಅಪ್ಪಮದವಗ್ಗ[55]ವೇ ಮೊದಲಾದ ಜೈನ ಕಥೆಗಳಲ್ಲಿ ಹೇಳಿದೆ. ದೇವೀಭಾಗವತಪುರಾಣದಲ್ಲಿಯೂ ಇದೇ ವಿಷಯವನ್ನು ಪ್ರಸ್ತಾಪಿಸಿದೆ:

ಹರಿಣೋಽಪಿ ವನೇ ಧನ್ಯಾಯಾ ನಾದೇನ ವಿಮೋಹಿತಾಃ ।
ಮಾತಃ ಪ್ರಾಣಾನ್ ಪ್ರಯಚ್ಛತಿ ಧಿಙ್ಮೂರ್ಖಾನ್ ಮಾನುಷಾನ್ ಭುವಿ ॥[56]

ಬಾಣಭಟ್ಟನೂ ಈ ವಿಷಯವನ್ನು ಪ್ರಸ್ತಾಪಮಾಡುತ್ತಾನೆ. ಕಾದಂಬರಿಯಲ್ಲಿ ವೈಶಂಪಾಯನ ಗಿಳಿಯು ಬೇಟೆಗಾರರ ಆಗಮನವನ್ನು ಶೂದ್ರಕನ ಆಸ್ಥಾನದಲ್ಲಿ ವರ್ಣಿಸುವಾಗ 'ಗೀತಮುತ್ಪಾದಕಾರಿ ಮುಗ್ಧಮೃಗಾಣಾಮಿವ'[57] ಎನ್ನುತ್ತದೆ. ಸಂಗೀತರತ್ನಾಕರದಂತಹ ಪಾರಿಭಾಷಿಕ ಶಾಸ್ತ್ರಗ್ರಂಥವೊಂದರಲ್ಲೇ ಈ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದರಿಂದ ಈ ಅಪೂರ್ವ ರೀತಿಯ ಮೃಗಯಾವಿಹಾರವು ಪ್ರಾಚೀನಭಾರತದಲ್ಲಿ ರೂಢಿಯಲ್ಲಿ ಬಹುಕಾಲವಿತ್ತೆಂದು ಕಾಣುತ್ತದೆ.

---

52 ವಾಲ್ಮೀಕಿ ರಾಮಾಯಣ, ii, 12, 78.

53 ಭಾಸ, ಪ್ರತಿಜ್ಞಾಯೌಗಂಧರಾಯಣ, II, 12, ಪು. 45, 46; ಮತ್ತು ಪು. 11, 66.

54 ಅದೇ ಗ್ರಂಥ, ಪು. 132.

55 Eng. Tr. by E. W. Burlingame, H. O. S. Vol, xxviii, pp. 247 ff. and P. D. Gune in Annals of the B. O. R. I., Vol. II, p. 1.

56 ದೇವೀಭಾಗವತಪುರಾಣ, ಆರನೆಯ ಸ್ಕಂಧ, xxvii, 16, ಪು. 391.

57 ಬಾಣ, ಕಾದಂಬರೀ, ಪು. 96.

'ಲುಭ್' ಧಾತುವನ್ನು ಎರಡು ಅರ್ಥಗಳಲ್ಲಿ ಪ್ರಯೋಗಿಸಿರುವುದು ಈ ಶ್ಲೋಕದಲ್ಲಿರುವ ಒಂದು ವಿಶೇಷ. ಲುಬ್ಧ ಎಂಬ ವಿಶೇಷಣವು ಜಿಂಕೆಗೆ ಭ್ರಾಂತ, ಆಸೆಬುರಕ, ಕಾಮಿ, ಮೋಹಿಸುವ ಎಂದು ಮುಂತಾದ ಅರ್ಥಗಳಲ್ಲಿ ಅನ್ವಯವಾದರೆ ಲುಬ್ಧಕ ಎಂಬುದು ಬೇಟೆಗಾರ ಎಂಬ ಅರ್ಥದಲ್ಲಿ ಸಂಗೀತಕ್ಕೆ ಪ್ರಯುಕ್ತವಾಗಿದೆ. ಈ ಅರ್ಥವನ್ನು ಮಹಾಭಾರತಾದಿ ಗ್ರಂಥಗಳಿಂದ ಮೋನಿಯರ್ ವಿಲಿಯಂಸ್ ಉದ್ಧರಿಸಿಕೊಡುತ್ತಾನೆ.[58] ಬೇಟೆಗಾರಿಕೆಯನ್ನು ಸಂಗೀತಕ್ಕೆ ವರ್ಗಾಯಿಸಿರುವ ಈ ಶ್ಲೋಕವು ಉತ್ತಮ ಅಲಂಕಾರೋಕ್ತಿಯಾಗಿದೆ.

**ತಸ್ಯ ಗೀತಸ್ಯ ಮಾಹಾಽಽತ್ಮ್ಯಂ ಕೇ ಪ್ರಶಂಸಿತುಮೀಶತೇ ।**
**ಧರ್ಮಾರ್ಥಕಾಮಮೋಕ್ಷಾಣಾಮಿದಮೇವೈಕಸಾಧನಮ್ ॥** 30

(ಹೀಗಿರುವಾಗ, ಇಂತಹ) ಗೀತದ ಮಹಿಮೆಯನ್ನು ಹೊಗಳಲು ಯಾರುತಾನೇ ಶಕ್ತರು! ಧರ್ಮ, ಅರ್ಥ, ಕಾಮ [ಮತ್ತು] ಮೋಕ್ಷ (ಗಳೆಂಬ ನಾಲ್ಕೂ ವಿಧದ ಪುರುಷಾರ್ಥ) ಗಳನ್ನು ಸಾಧಿಸಲು ಇದೊಂದೇ ಸಾಧನವಾಗಿದೆ.

ಮಾನವಸಾಧ್ಯವಾದ ಅನುಭವಗಳೆಲ್ಲವನ್ನೂ, ಮಾನವಬುದ್ಧಿಗೋಚರವಾದ ಶಾಸ್ತ್ರಗಳೆಲ್ಲವನ್ನೂ ವೇದದಿಂದಲೇ ಪಡೆದುದಾಗಿ ನಂಬಿ ಎಲ್ಲಾ ವಿದ್ಯೆಗಳನ್ನೂ, ಶಾಸ್ತ್ರಗಳನ್ನೂ ಮೋಕ್ಷಸಾಧನೆಗಾಗಿಯೇ ಎಂದು ತಿಳಿದುಕೊಳ್ಳುವುದು ಸನಾತನ ಹಿಂದೂ ಸಂಸ್ಕೃತಿಯ ವೈಶಿಷ್ಟ್ಯ. ಹೀಗೆ, ಸಂಗೀತವು ಸಾಮವೇದದಿಂದ ಹುಟ್ಟಿತೆಂದು ಭಾವಿಸಿ, ಅದು ಮೋಕ್ಷದಾಯಕವೆಂದು ಹಿಂದೂಗಳು ದೃಢವಾಗಿ ನಂಬುತ್ತಾರೆ; ಅಷ್ಟೇ ಅಲ್ಲದೆ ಐಹಿಕ ಜೀವನದ ಗುರಿಗಳಾದ ಧರ್ಮ, ಐಶ್ವರ್ಯ ಮತ್ತು ಕಾಮಗಳೆಂಬ ತ್ರಿವರ್ಗವನ್ನು ಸಾಧಿಸಲೂ ಅದು ನೆರವಾಗುತ್ತದೆಂದು ನಂಬಿಕೆಯಿದೆ. ನನಗೆ ತಿಳಿದನುಟ್ಟಿಗೂ ಇನ್ನು ಯಾವ ವಿದ್ಯೆಗೂ ಈ ಶಕ್ತಿಯನ್ನು ನಮ್ಮ ಹಿರಿಯರು ಹೇಳಿಲ್ಲ. ಮುಂದೆ ಇದೇ ಅಧ್ಯಾಯದ ನಾಲ್ಕನೆಯ ಪ್ರಕರಣದಲ್ಲಿ ಹೇಳಿರುವ 84 ತಾನಗಳಲ್ಲಿ ಒಂದೊಂದನ್ನು ಹಾಡಿದಾಗಲೂ ಆಯಾ ಹೆಸರಿನ ಯಜ್ಞದ ಫಲವು ಲಭಿಸುವುದೆಂದೂ, ಗಾಂಧರ್ವಗಾಯನದಲ್ಲಿ, ಎಂದರೆ ಧಾರ್ಮಿಕ ಸನ್ನಿವೇಶಗಳಲ್ಲಿ ಉಪಯೋಗವಾಗುತ್ತಿದ್ದ ಸಂಗೀತದಲ್ಲಿ, ಪ್ರಯೋಗವಾಗುವ ಈ ತಾನಗಳಿಂದ ಶ್ರೇಯಸ್ಸು ಉಂಟಾಗುವುದೆಂದೂ ಶ್ರೀ ಶಾರ್ಙ್ಗದೇವನು ಹೇಳಿದ್ದಾನೆ.[59] ಅದೇ ರೀತಿಯಲ್ಲಿ, ಅಶ್ವಮೇಧವೇ ಮೊದಲಾದ ಯಾಗಗಳಲ್ಲಿ ಗಾಯನವೂ ವೀಣಾವಾದನವೂ ನಡೆಯಬೇಕೆಂದು ಶ್ರುತಿಗಳೇ ಹೇಳುತ್ತವೆ:

ಅಪ ವಾ ಏತಸ್ಮಾಚ್ಛ್ರೀರಾಷ್ಟ್ರಂ ಕ್ರಮತಿ । ಯೋಽಶ್ವಮೇಧೇನ ಯಜತೇ । ಬ್ರಾಹ್ಮಣೌ ವೀಣಾಗಾಥಿನೌ ಗಾಯತಃ । ಶ್ರಿಯ ವಾ ಏತದ್ರೂಪಂ । ಯದ್ವೀಣಾ[60] ಇತ್ಯಾದಿ.

. . . . ವೀಣಾಸ್ಮೈ ವಾದ್ಯತೇ ಬ್ರಾಹ್ಮಣೌ ವೀಣಾಗಾಥಿನೌ ಸಂವತ್ಸರಂ ಗಾಯತಃ,[61] ಇತ್ಯಾದಿ. ಶ್ರೌತಸೂತ್ರಗಳೇ ಮೊದಲಾದ ಧರ್ಮಶಾಸ್ತ್ರಗ್ರಂಥಗಳೆಲ್ಲ ಇದನ್ನೇ ಹೇಳುತ್ತವೆ.[62] ಅಶ್ವಮೇಧ ಯಜ್ಞದಲ್ಲಿ ಅನೇಕ

58 ಮೋನಿಯರ್ ವಿಲಿಯಂಸ್, ಉ. ಗ್ರಂ., ಪು. 905, ಮೊದಲನೆಯ ಕಲಮು.

59 ಶಾರ್ಙ್ಗದೇವ ಉ. ಗ್ರಂ., i, 4, 90-91, ಪು. 145.

60 ತೈತ್ತಿರೀಯಬ್ರಾಹ್ಮಣ, iii, 9, 14.

61 ಶತಪಥಬ್ರಾಹ್ಮಣ, xiii, 1, 5.

62 ಉದಾಹರಣೆಗೆ, ಬೌಧಾಯನಶ್ರೌತಸೂತ್ರಗಳು, xv, 8, 9; ಆಪಸ್ತಂಬ ಶ್ರೌತಸೂತ್ರಗಳು, xx, 6; ಸತ್ಯಾಷಾಢ ಹಿರಣ್ಯಶ್ರೌತಸೂತ್ರಗಳು, xiv, 2 ಇತ್ಯಾದಿ.

'ಇಷ್ಟಿ' ಗಳನ್ನು ನಡೆಸಬೇಕಾಗುತ್ತದೆ. ಅಂತಹವುಗಳಲ್ಲಿ 'ಸಾವಿತ್ರೀ' ಎಂಬುದೂ ಒಂದು. ಇದು ಪ್ರಯಾಜ ನೆಂಬ ದೇವತೆಯ ಹೆಸರಿನಲ್ಲಿ ನಡೆಯುತ್ತದೆ. ಈ ಇಷ್ಟಿಗೆ ಉತ್ತರಮಂದ್ರಾ ಮೂರ್ಛನೆಯಲ್ಲಿ ಬ್ರಾಹ್ಮಣನು ಮೂರು ಗಾಥೆಗಳನ್ನು ತಾನೇ ರಚಿಸಿ ಹಾಡಬೇಕೆಂದು ಶುಕ್ಲಯಜುರ್ವೇದದಿಂದ ತಿಳಿದುಬರುತ್ತದೆ :

ಪ್ರಯಾಜೇಷು ದಕ್ಷಿಣತೋ ಬ್ರಾಹ್ಮಣೋ ಯಜಮಾನಸ್ಯ ಯಜ್ಞದಾನಯುಕ್ತಾಃ ಸ್ವಯಂಕೃತಾಃ ತಿಸ್ರೋ ಗಾಥಾ ಗಾಯತ್ಯುತ್ತರಮಂದ್ರಾಯಾಮ್ [63]

ಸಂಗೀತವು ವೇದಕರ್ಮಗಳ ಅಂಗವೆನ್ನುವುದಕ್ಕೂ ಪುರಾಣಗೌರವಿತವೆನ್ನುವುದಕ್ಕೂ ರಂಗನಾಥನು ತನ್ನ ಸಂಗೀತಶಾಸ್ತ್ರದುಗ್ಧಾಬ್ಧಿಯಲ್ಲಿ ಋಗ್ಯಜುಸ್ಸಾಮವೇದಗಳಿಂದಲೂ ಪುರಾಣೇತಿಹಾಸಗಳಿಂದಲೂ ಉದ್ಧೃತಿಗಳನ್ನು ಕೊಡುತ್ತಾನೆ. [64] ಆದರೆ ಇದರಲ್ಲಿ ಗ್ರಂಥಪಾತವೂ ಭ್ರಷ್ಟಪಾಠವೂ ವಿಪುಲವಾಗಿದೆ. ವೇದಕ್ಕೂ ಸಂಗೀತಕ್ಕೂ ಇರುವ ಸಂಬಂಧವನ್ನು ಧುಂಡಿರಾಜಶಾಸ್ತ್ರಿಯು ಚೆನ್ನಾಗಿ ಚರ್ಚಿಸಿದ್ದಾನೆ. [65]

ಹೀಗೆ, ಯಜ್ಞಗಳಲ್ಲಿ ದೇವತೆಗಳನ್ನು ಗಾಯನದಿಂದ ಒಲಿಸಿಕೊಳ್ಳುವುದರಿಂದ ಧರ್ಮಸಾಧನೆಯಾಯಿತು.

ಮೇಲೆ ಹೇಳಿದ ಗಾಯನವೇ ಅಲ್ಲದೆ ವೈದಿಕ ಕರ್ಮಗಳ ಅನುಷ್ಠಾನದಲ್ಲಿ ಬಳಸುವ ಹಲವು ತತ, ಅವನದ್ಧ, ಘನ ಮತ್ತು ಸುಷಿರ ವಾದ್ಯಗಳನ್ನೂ ವೈದಿಕ ವಾಙ್ಮಯವು ಹೇಳುತ್ತದೆ. ಅದರಲ್ಲಿ ತತ ವಾದ್ಯಗಳಿಗೆಲ್ಲ ವೀಣಾ ಎಂದೇ ಸಮುಚ್ಚಯ ನಾಮ. ಇದನ್ನು ಸಾಮಗಳನ್ನು ಹಾಡುವಾಗ ಸ್ವರನಿರ್ದೇಶಕ್ಕಾಗಿ ಕೈಬೆರಳುಗಳಿಂದ ತೋರಿಸಲಾಗುತ್ತಿದ್ದ ಮಾನವಶಾರೀರಕವಾದ ಗಾತ್ರವೀಣಾ ಎಂದೂ ಅನೇಕ ಬಗೆಯ ಮರಗಳಿಂದ ಮಾಡುತ್ತಿದ್ದ ದಾರವೀ ವೀಣಾ ಎಂದೂ ವಿಂಗಡಿಸಿದ್ದರು. ಅಲ್ಲದೆ ಇವುಗಳನ್ನು ದೈವೀವೀಣಾ ಮಾನುಷೀವೀಣಾ ಎಂದೂ ವಿಂಗಡಿಸಲಾಗುತ್ತಿತ್ತು. ವೀಣೆಯ ವರ್ಣನೆಯನ್ನು ಐತರೇಯ ಆರಣ್ಯಕವು ವಿವರವಾಗಿ ಕೊಡುತ್ತದೆ. [66] ಸುಮಾರು ಹತ್ತು ವಿಧದ ವೀಣೆಗಳು ಯಜ್ಞಯಾಗಾದಿ ಕಾರ್ಯಗಳಲ್ಲಿ ಪ್ರಯುಕ್ತವಾಗುತ್ತಿದ್ದವೆಂದು ತಿಳಿದುಬರುತ್ತದೆ: ಆಘಾಟೀ (ಕಾಂಡವೀಣಾ), ಘಾಟಲಿಕಾ (ಘಾಟಿಲಾ, ಅಪಘಾಟಲಿಕಾ), ಪಿಚ್ಛೋಲಾ (ಪಿಚ್ಛೋರೀ), ಕರ್ಕರೀ (ಕರ್ಕರೀಕಾ, ಕರ್ಕಟಿಕಾ), ಸ್ತಂಬಲವೀಣಾ, ತಾಲುಕವೀಣಾ, ಅಲಾಬುವೀಣಾ, ಕಪಿಶೀರ್ಷ್ಣೀ (ಕಪಿಶೀರ್ಷ್ಣೀ), ವಕ್ರಾ ಮತ್ತು ಶೀಲ. ಇವುಗಳನ್ನು ಲೌಕಿಕಗಾನಶಾಸ್ತ್ರದ ಗ್ರಂಥಗಳು ಹೇಳುವುದಿಲ್ಲ. ಇವುಗಳಲ್ಲಿ ಆಘಾಟಿಯನ್ನು ಋಗ್ವೇದವೂ [67], ತೈತ್ತಿರೀಯ ಬ್ರಾಹ್ಮಣವೂ [68] ಹೇಳುತ್ತವೆ. ವಾಣ ಅಥವಾ ಬಾಣವೇ ಶತತಂತು. ಇದು ವೀಣೆಗಳಲ್ಲಿ ಪ್ರಧಾನವಾದುದು. ಇದನ್ನು ಋಗ್ವೇದವೂ [69] ತೈತ್ತಿರೀಯಸಂಹಿತೆ,[70] ತಾಂಡ್ಯಬ್ರಾಹ್ಮಣ,[71] ಐತರೇಯ ಆರಣ್ಯಕ,[72]

---

63 ಶುಕ್ಲಯಜುರ್ವೇದದ ಕಾತ್ಯಾಯನಶ್ರೌತಸೂತ್ರಗಳು, XX, 2.

64 ರಂಗನಾಥ, ಸಂಗೀತಶಾಸ್ತ್ರದುಗ್ಧಾಬ್ಧಿ, ಮೈಸೂರು ಪ್ರಾಚ್ಯಸಂಶೋಧನಾಸಂಸ್ಥೆಯ ಹಸ್ತಪ್ರತಿ, ಪು. ಒಂದರಬೆನ್ನು ಮತ್ತು ಮುಂದಕ್ಕೆ.

65 ಧುಂಡಿರಾಜಶಾಸ್ತ್ರೀ ಬಾಪಟ್, ವೈದಿಕಸಂಗೀತ, ಇಡೀ ಗ್ರಂಥ.

66 ಐತರೇಯ ಆರಣ್ಯಕ, iii, 2, 5.

67 ಋಗ್ವೇದ, x, 147, 2.

68 ತೈತ್ತಿರೀಯಬ್ರಾಹ್ಮಣ, ii, 5, 5, 23.

69 ಋಗ್ವೇದ, i, 85, 10 ; vii, 97, 8 ; ix, 51, 1 ; x, 32, 4 ಇತ್ಯಾದಿ.

70 ತೈತ್ತಿರೀಯಸಂಹಿತೆ, vii, 5, 1 ; vii, 8, 9.

71 ತಾಂಡ್ಯಬ್ರಾಹ್ಮಣ, v, 6–12 , vi, 13, 14.     72 ಐತರೇಯ ಆರಣ್ಯಕ, v, 1, 4.

ಜೈಮಿನೀಯ ಬ್ರಾಹ್ಮಣ[73], ಬೌಧಾಯನ ಶ್ರೌತಸೂತ್ರ[74], ಆಪಸ್ತಂಬ ಶ್ರೌತಸೂತ್ರ[75] ಮೊದಲಾದ ಗ್ರಂಥಗಳೂ ಹೆಸರಿಸುತ್ತವೆ. ಶಾಂಖಾಯನ ಶ್ರೌತಸೂತ್ರವು ಶತತಂತ್ರೀ, ತಾಂಡವೀಣಾ, ಪಿಚ್ಛೋರಾಗಳನ್ನೂ[76] ಲಾಟ್ಯಾಯನ ಶ್ರೌತಸೂತ್ರವು ಅಲಾಬು, ವಕ್ರಾ, ಕಪಿಶೀರ್ಷ್ಣೀ, ಮಹಾವೀಣಾ, ಪಿಶೀಲಾ, ಅಪಘಾಟಿಲಾಗಳನ್ನೂ[77] ಕಾತ್ಯಾಯನ ಶ್ರೌತಸೂತ್ರವು ವಾಣ, ಗೋಧಾ, ಕಾಂಡ ವೀಣೆಗಳನ್ನೂ[78], ಆಪಸ್ತಂಬಶ್ರೌತಸೂತ್ರವು ಅಪಾಘಾಟಲಿಕಾ, ಸ್ತಂಬಲ, ಪಿಚ್ಛೋಲಗಳನ್ನೂ[79], ವಾರಾಹ ಶ್ರೌತಸೂತ್ರವು ಶತತಂತು, ಕಾಂಡವೀಣೆಗಳನ್ನೂ[80], ಬೌಧಾಯನ ಶ್ರೌತಸೂತ್ರವು ಅಘಾಟೀ, ಪಿಚ್ಛೋಲ, ಕರ್ಕರಿಕಾಗಳನ್ನೂ[81] ಸತ್ಯಾಷಾಢಹಿರಣ್ಯಶ್ರೌತಸೂತ್ರವು ಅಪಾಘಾಟಲಿಕಾ, ತಾಲುಕವೀಣಾ, ಕಾಂಡವೀಣಾ, ಪಿಚ್ಛೋಲಾ, ಅಲಾಬು, ಕಪಿಶೀರ್ಷ್ಣ್ಯಗಳನ್ನೂ[82] ಹೇಳುತ್ತವೆ. ಅವನದ್ಧ ವಾದ್ಯಗಳಲ್ಲಿ ಇವೇ ಮತ್ತಿತರ ಗ್ರಂಥಗಳು ದುಂದುಭಿ, ಭೂಮಿದುಂದುಭಿ, ತಲವ, ಮುರಜ ಮುಂತಾದವುಗಳನ್ನೂ[83] ಶಂಖ (ಅವರಾ), ನಾಳೀ, ತೂಣ ಮೊದಲಾದ ಸುಷಿರವಾದ್ಯಗಳನ್ನೂ[84] ಹೇಳಿದೆ. ಇವುಗಳ ವಾದನವು ಯಜ್ಞಯಾಗಾದಿಗಳ ಪ್ರಯೋಗಕ್ಕೆ ಉಪಕಾರಕವಾದುದರಿಂದ ಇವುಗಳಿಂದ ಧರ್ಮದ ಆರ್ಜನೆಯುಂಟಾಗುವುದು. ಈ ವಾದ್ಯಗಳ ವಿಚಾರವನ್ನು ಸಂಗೀತರತ್ನಾಕರದ ವಾದ್ಯಾಧ್ಯಾಯದಲ್ಲಿ ಪುನಃ ವಿಮರ್ಶೆಮಾಡಲಾಗುವುದು.

ಕೆಲವು ವೈದಿಕ ಕರ್ಮಗಳಲ್ಲಿ ಯಜಮಾನನ ಅಥವಾ ಗೃಹಪತಿಯ ದಾಸಿಯರಿಂದ ನೃತ್ತವು ಕರ್ಮಾಂಗವಾಗಿ ನಡೆಯುತ್ತಿತ್ತೆಂಬುದು ಅನೇಕರಿಗೆ ಬಹುಶಃ ಗೊತ್ತಿಲ್ಲ. ಮಹಾವ್ರತವೆಂಬ ಸೋಮಯಾಗಪ್ರಭೇದದಲ್ಲಿನ ಮಹಾವೇದಿಕೆಯಲ್ಲಿ ಮರಳಿನಿಂದ ನಾಲ್ಕು ಅಂಗುಲ ಎತ್ತರದ, ಒಂದು ಗೇಣಿನ ವ್ಯಾಸದ ಚಚ್ಚೌಕ ಅಥವಾ ವರ್ತುಲದ ಉಪವೇದಿಕೆಗಳನ್ನು ರಚಿಸುತ್ತಿದ್ದರು. ಇವುಗಳಿಗೆ ಧಿಷ್ಣ್ಯ ಎಂದು ಸಮುಚ್ಚಯನಾಮ. ಇವುಗಳಲ್ಲಿ ಅಗ್ನಿಪ್ರತಿಷ್ಠೆಯಾಗುತ್ತಿತ್ತು. ಇಂತಹ ಎಂಟು ಧಿಷ್ಣ್ಯಗಳನ್ನು ರಚಿಸಲಾಗುತ್ತಿತ್ತು. ಇವುಗಳಲ್ಲಿ ಅಗ್ನೀಧ್ರೀಯವು ಪ್ರಧಾನವಾದುದು. ಸದಸ್ಸಿನ ಉಳಿದ ಏಳು ಹೋತೃ, ಮೈತ್ರಾವರುಣ, ಪ್ರಶಸ್ತೃ, ಬ್ರಾಹ್ಮಣಾಚ್ಛಂಸಿ, ಪೋತೃ ನೇಷ್ಟೃ, ಅಚ್ಛಾವಾಕಗಳಿಗೆ ಸೇರಿದ್ದು. ಇವಲ್ಲದೆ ಮಹಾವೇದಿಯ ಬಲಗಡೆ ಮರಳಿನಲ್ಲಿ ಒಂದು ಉಪವೇದಿಕೆಯನ್ನು ರಚಿಸುತ್ತಿದ್ದರು. ಇದಕ್ಕೆ ಮಾರ್ಜಾಲೀಯವೆಂದು ಹೆಸರು. ಇಲ್ಲಿ ಯಾಗಕರ್ಮದ ಪಾತ್ರೋಪಕರಣ

---

73 ಜೈಮಿನೀಯ ಬ್ರಾಹ್ಮಣ, ii, 4, 15.

74 ಬೌಧಾಯನಶ್ರೌತಸೂತ್ರ, xvi, 21.

75 ಆಪಸ್ತಂಬಶ್ರೌತಸೂತ್ರ, xxi, 17, 18.

76 ಶಾಂಖಾಯನಶ್ರೌತಸೂತ್ರ, xvii, 3, 1-17.

77 ಲಾಟ್ಯಾಯನ ಶ್ರೌತಸೂತ್ರ, iv, 2, 1-8.

78 ಕಾತ್ಯಾಯನ ಶ್ರೌತಸೂತ್ರ, xiii, 3, 15-19.

79 ಆಪಸ್ತಂಬ ಶ್ರೌತಸೂತ್ರ, xxvii, 17, 16; xxi, 19, 3.

80 ವಾರಾಹಶ್ರೌತಸೂತ್ರ, iii 2, 5, 27.

81 ಬೌಧಾಯನಶ್ರೌತಸೂತ್ರ, xvi, 21.

82 ಸತ್ಯಾಷಾಢಹಿರಣ್ಯಶ್ರೌತಸೂತ್ರ, xv, 6-21.

83 ಉದಾಹರಣೆಗೆ, ತೈತ್ತಿರೀಯಸಂಹಿತಾ, vii, 5-9, iv, 6, 6; ತೈತ್ತಿರೀಯಬ್ರಾಹ್ಮಣ, iii, 4, 13, ಸತ್ಯಾಷಾಢ ಹಿರಣ್ಯಶ್ರೌತಸೂತ್ರ, xvi, 3, 39.

84 ಉದಾಹರಣೆಗೆ, ಆಪಸ್ತಂಬಶ್ರೌತಸೂತ್ರ, xxi, 19.

ಗಳನ್ನು ತೊಳೆದು ಶುಚಿಮಾಡಲಾಗುತ್ತಿತ್ತು. ಮೇಲೆ ಹೇಳಿದ ದಾಸಿಯರು ತಲೆಯ ಮೇಲೆ ನೀರಿನಿಂದ ತುಂಬಿದ ಕೊಡಗಳನ್ನಿಟ್ಟುಕೊಂಡು ಧಿಷ್ಣ್ಯಗಳನ್ನೂ ಮಾರ್ಜಾಲೀಯವನ್ನು ಪ್ರದಕ್ಷಿಣೆಯಲ್ಲಿ ನೃತ್ತಮಾಡುತ್ತಾ ಬರುತ್ತಿದ್ದರು. ಇದರೊಡನೆ ವಿಧ್ಯುಕ್ತವಾದ ಕೆಲವು ಮಂತ್ರಭಾಗಗಳನ್ನೂ ಸ್ತೋಭಗಳನ್ನೂ ಅವರು ಹಾಡಬೇಕಾಗಿತ್ತು. ಇದರೊಂದಿಗೆ ಗಾಥೆಗಳ ಗಾಯನವೂ ವೀಣಾವಾದನವೂ ನಡೆಯುತ್ತಿತ್ತು. ಇಂತಹ ಕೆಲವು ಉದಾಹರಣೆಗಳನ್ನಿಲ್ಲಿ ವೈದಿಕ ಸಾಹಿತ್ಯದಿಂದ ಉದ್ಧರಿಸಬಹುದು :

ಉದಕುಂಭಾನಧಿನಿಧಾಯ ದಾಸ್ಯೋ ಮಾರ್ಜಾಲೀಯಂ ಪರಿನೃತ್ಯಂತಿ ಪದೋ ನಿಘ್ನಂತೀಃ ಇಮಂ ಮಧುಂ ಗಾಯಂತ್ಯೋ ಮಧುವೈ ದೇವಾನಾಂ ಪರಮಮನ್ನಾದ್ಯಂ ಪರಮವೇವಾನ್ನಾದ್ಯಮವರುಂಧತೇ ಪದೋ ನಿಘ್ನಂತಿ ಮಹೀಯಾಮೇವೈಸು ದಧಾತಿ. [85]

ಮೇಲೆ ಹೇಳಿದ ರೀತಿಯಲ್ಲಿ ದಾಸಿಯರು ಮಾರ್ಜಾಲೀಯ, ಧಿಷ್ಣ್ಯಗಳನ್ನು ಪ್ರದಕ್ಷಿಣೆಯಲ್ಲಿ ಬಳಸುವಾಗ ನೃತ್ತಮಾಡುತ್ತಾ ಯಜಮಾನನು ಸತ್ರರೂಪದಲ್ಲಿ ಮಾಡುತ್ತಿರುವ ಯಜ್ಞಕರ್ಮವು ಮಧುವಿನಂತೆ ಸಿಹಿಯಾಗಿದೆ, ಸತ್ರದ ಅನ್ನವು ಮಧುವಾಗಿದೆ ಎಂಬ ಅರ್ಥದಲ್ಲಿ ಇದಂ ಮಧು, ಇದಂ ಮಧು ಎಂದು ಸುಸ್ವರದಲ್ಲಿ ಹಾಡುತ್ತಾರೆ. ಅವರ ಪಾದಾಘಾತದಿಂದ ಯಜ್ಞಭೂಮಿಯು ಪವಿತ್ರವಾಗುತ್ತದೆ ಎಂದು ನಂಬಿಕೆ.

ಪರಿಕುಂಭಿನ್ಯೋ ಮಾರ್ಜಾಲೀಯಂ (ಪರಿ)ಯಂತೀದಂ ಮಧ್ವಿತಿ ಸ ಘೋಷಾ ಏವ ತದ್ವ್ಯಯೋ ಭೂತ್ವಾ ಸಹ ಸ್ವರ್ಗಂ ಲೋಕಂ ಯಾಂತಿ.[86]

ಪ್ರೇಷ್ಯಾಃ ಸಂಶಾಸ್ತಿ ಪೂರ್ಣಉದಕುಂಭಾಸ್ತಿಸ್ರೋಽವಮಾಃ ಷಡುತ್ತಮಾಃ । ಇಮಂ ಧಿಷ್ಣ್ಯಂ ಕುಂಭಂ ಚ ತ್ರಿಃ ಪ್ರದಕ್ಷಿಣಂ ಪರಿವ್ರಜಾಯ ದಕ್ಷಿಣೈಃ ಪಾಣಿಭಿರ್ದಕ್ಷಿಣಾನೂರೂನಾಘ್ನಾನಾ ಏಹ್ಯೇವಾ ಏಹ್ಯೇವಾ ಏಹ್ಯೇವಾ ಇದಂ ಮಧು ಇದಂ ಮಧ್ವಿತಿ ವದಂತ್ಯಃ [87]

ಕಡಿಮೆಯೆಂದರೆ ಮೂವರು ಅಥವಾ ಹೆಚ್ಚೆಂದರೆ ಆರು ದಾಸಿಯರು ತಲೆಯಲ್ಲಿ ನೀರು ತುಂಬಿದ ಕೊಡಗಳನ್ನು ಹೊತ್ತು ಧಿಷ್ಣ್ಯಗಳನ್ನೂ ಮಾರ್ಜಾಲೀಯವನ್ನೂ ಪ್ರದಕ್ಷಿಣೆಯಲ್ಲಿ ನೃತ್ತದಲ್ಲಿ ಸುತ್ತುತ್ತಾ ತಮ್ಮ ಬಲಗೈಗಳಿಂದ ಬಲ ತೊಡೆಗಳನ್ನು ಹೊಡೆದುಕೊಳ್ಳುತ್ತಾ ಏಹ್ಯೇವಾ ಏಹ್ಯೇವಾ ಏಹ್ಯೇವಾ, ಇದಂ ಮಧು ಇದಂ ಮಧು ಎಂದು ಸುಸ್ವರದಲ್ಲಿ ಹಾಡುತ್ತಿದ್ದರು.

ಅಥೈತಾ ದಾಸ್ಯ ಉದಕುಂಭಾನ್ ಅಧಿನಿಧಾಯ ಮಾರ್ಜಾಲೀಯಂ ಪರಿನೃತ್ಯಂತಿ ಉಪಸ್ಥಾನುಪಹತ್ಯ ದಕ್ಷಿಣಾನ್‌ಪದೋ ನಿಘ್ನಂತೀಃ ಇದಂ ಮಧುಂ ಗಾಯಂತ್ಯ ತಾಸಾಂ ಸಕೃತ್ ಪರೀತಾನಾಂ ಪ್ರಥಮಾಂ ವಾಚಯತಿ ಗಾನ ಏವ ಸುರಭ್ಯೋ ಹೈ ಮಹಾಜ್ ಇದಂ ಮಧ್ವಿತಿ. [88]

ನೀರು ತುಂಬಿದ ಕೊಡಗಳನ್ನು ಎತ್ತಿಕೊಂಡು ದಾಸಿಯರು ಮಾರ್ಜಾಲೀಯವನ್ನು ಪ್ರದಕ್ಷಿಣೆಯಿಂದ ಮೂರು ಬಾರಿ ನರ್ತಿಸಿ ಬರುವಾಗ, ತೊಡೆಯನ್ನೊಮ್ಮೆ ತಟ್ಟಿ ಹೆಜ್ಜೆಯಿಂದ ನೆಲವನ್ನು ತಟ್ಟುತ್ತಾರೆ. ಹೀಗೆ ಮಾಡುವಾಗ

85 ತೈತ್ತಿರೀಯಸಂಹಿತೆ, vii, 5, 10.

86 ತಾಂಡ್ಯಬ್ರಾಹ್ಮಣ, v, 6.

87 ಐತರೇಯ ಆರಣ್ಯಕ, i, 1.

88 ಬೌಧಾಯನ ಶ್ರೌತಸೂತ್ರ, xvi, 22, 23.

ಗಾನಸುರಭ್ಯೋ ಎಂದು ಆರಂಭವಾಗುವ ಇದಂ ಮಧು ಎಂಬುದರಿಂದ ಋಕ್ಕಿನ ರೂಪದ ಗಾಥೆಯೊಂದನ್ನು ಹಾಡುತ್ತಾರೆ. ಹೀಗೆಯೇ ಇನ್ನೆರಡು ಬಳಸುಗಳಲ್ಲಿಯೂ ಮಾಡುತ್ತಾರೆ.

ಅತ್ರೈತಾ ದಾಸಕುಮಾರ್ಯಃ ಉದಕುಂಭಾನ್ ಅಧಿನಿಧಾಯ ತ್ರಿಃ ಪ್ರದಕ್ಷಿಣಂ ಮಾರ್ಜಾಲೀಯಂ ಪರಿನೃತ್ಯಂತಿ ದಕ್ಷಿಣಾನ್ ಪದೋ ನಿಘ್ನಂತೀಃ ಇದಂ ಮಧುಂ ಗಾಯಂತಿ । ಹಿಲ್ಲಕಾಂ ದ್ವೇ ಗಾಯೇತಾಂ, ಹಿಂಬಿನೀಂ ದ್ವೇ, ಹಸ್ತಾವಾರಾಂ ದ್ವೇ, ಸಂವತ್ಸರಗಾಥಾಂ ದ್ವೇ... ಹೈ ಮಹಾ ಇದಂ ಮಧು ಹಿಲ್ಲು ಹಿಲ್ಲ್ವಿತಿ ಸರ್ವಾಸಾಂ ಋಗಂತೇಷು [89]

ಮೇಲೆ ಹೇಳಿದ ಹಾಗೆ ನರ್ತಿಸುವಾಗ ಮೊದಲನೆಯ ಜೊತೆಯ ದಾಸಿಯರು 'ಹಿಲ್ಲಕಾ', ಎರಡನೆಯ ಜೊತೆಯ ದಾಸಿಯರು 'ಹಿಂಬಿನೀ', ಮೂರನೆಯ ಜೊತೆಯ ದಾಸಿಯರು 'ಹಸ್ತಾವಾರಾ' ಮತ್ತು ನಾಲ್ಕನೆಯ ಜೊತೆಯ ದಾಸಿಯರು 'ಸಂವತ್ಸರ ಗಾಥಾ' ಎಂಬ ಗಾಥೆಗಳನ್ನು ಹಾಡಬೇಕು. ಪ್ರತಿ ಗಾಥೆಯ ಕೊನೆಯಲ್ಲಿಯೂ ಎಲ್ಲರೂ ಹೈ ಮಹಾ ಇದಂ ಮಧು ಹಿಲ್ಲು ಹಿಲ್ಲು ಎಂಬ ಶಬ್ದಗಳನ್ನು ಸುಸ್ವರದಿಂದ ಘೋಷಿಸಬೇಕು.

ಅಷ್ಟೌ ದಾಸಕುಮಾರ್ಯ ಉದಕುಂಭಾನ್ ಶೀರ್ಷನ್ನಿಧಾಯ ತ್ರಿಃ ಪ್ರದಕ್ಷಿಣಂ ಮಾರ್ಜಾಲೀಯಂ ಧಿಷ್ಣ್ಯಂ ಪರಿನೃತ್ಯಂತೀಃ ಪರಿಯಂತಿ ದಕ್ಷಿಣಾನ್ ಪದೋ ನಿಘ್ನಂತೀರಿದಂ ಮಧುಂ ಗಾಯಂತ್ಯಃ । ....ಭಿಲ್ಲುಕಾಂ ದ್ವೇ ಗಾಯತಃ । ವಾಗ್ವೇದ ಹಿಂಬಿನೀತಿ ದ್ವೇ, ವಾಗ್ವೇದ ಹಸ್ತಾವಾರಾಂ ದ್ವೇ ಗಾಯೇತಾಂ ಸಂವತ್ಸರಗಾಥಾಂ ದ್ವೇ ಹೈ ಮಹಾ ಇದಂ ಮಧು ಹಿಲ್ಲು ಹಿಲ್ಲು ವಹ ಮಹರ್ವಮಿತಿ....ಸರ್ವಾಸ್ವನುಷಜಂತೇ [90]

ಇಲ್ಲಿ ಎಂಟು ದಾಸೀ ಕನ್ಯೆಯರು ತಲೆಯಲ್ಲಿ ನೀರು ತುಂಬಿದ ಕೊಡವನ್ನು ಹೊತ್ತು ಧಿಷ್ಣ್ಯ, ಮಾರ್ಜಾಲೀಯಗಳನ್ನು ನೃತ್ತದಲ್ಲಿ ಬಳಸುತ್ತಾ ನೆಲವನ್ನು ಬಲಗಾಲಿನಿಂದ ತಟ್ಟುತ್ತಾ ಇದಂ ಮಧು ಎಂದು ಹಾಡುತ್ತಾ ಮೂರು ಸಲ ಪ್ರದಕ್ಷಿಣೆ ಬರಬೇಕು. ಇವರಲ್ಲಿ ಇಬ್ಬಿಬ್ಬರದು ಒಂದು ತಂಡ. ಮೊದಲನೆಯ ತಂಡವು ಭಿಲ್ಲುಕಾ ಎಂದು ಪ್ರಾರಂಭವಾಗುವ ಗಾಥೆಯನ್ನೂ ಎರಡನೆಯದು ವಾಗ್ವೇದ ಹಿಂಬಿನಿ ಎಂಬುದನ್ನೂ ಮೂರನೆಯದು ವಾಗ್ವೇದ ಹಸ್ತಾವಾರಾ ಎಂಬುದನ್ನೂ ನಾಲ್ಕನೆಯದು ಸಂವತ್ಸರ ಎಂಬುದನ್ನೂ ಹಾಡಬೇಕು. ಪ್ರತಿ ಗಾಥೆಯ ಕೊನೆಯಲ್ಲೂ ಎಲ್ಲರೂ ಹೈ ಮಹಾ ಇದಂ ಮಧು ಹಿಲ್ಲು ಹಿಲ್ಲವಹರ್ಮವಿಾ ಎಂಬ ಶಬ್ದಗಳನ್ನು ಸುಸ್ವರದಲ್ಲಿ ಘೋಷಿಸಬೇಕು.

ಉದಕುಂಭಾನ್ ಶಿರಸ್ಸುಕೃತ್ವಾ ಮಾರ್ಜಾಲೀಯಂ ದಾಸ್ಯಃ ಪರಿಯಂತಿ । ವಾಚಯತ್ಯೇನಾಃ ಪರ್ಯಾಯಾದಿಷು ಹೈ ಮಹಾ 3 ಹೈ ಮಹಾ 3 ಇತಿ [91]

ಗೃಹಪತೇರ್ದಾಸ್ಯೋ ನವಾನುದಹರಣಾನ್ ಪೂರಯಿತ್ವಾ ಪ್ರದಕ್ಷಿಣಂ ಮಾರ್ಜಾಲೀಯಂ ಪರೀಯುಃ । ಹೈ ಮಹಾ 3 ಇದಂ ಮಧು ಇತಿ ವದತ್ಯಃ ಪಂಚಾವರಾರ್ಧ್ಯಾಃ ಪಂಚಾಶತಂ ಪರಾರ್ಧ್ಯಾಃ ಪಂಚವಿಂಶತಿ ಸಾಂಪ್ರತಾಃ । [92]

---

89 ಆಪಸ್ತಂಬಶ್ರೌತಸೂತ್ರ, xxi, 11, 20.

90 ಸತ್ಯಾಷಾಢಹಿರಣ್ಯಶ್ರೌತಸೂತ್ರ, xvi, 6, 39.41.

91 ಕಾತ್ಯಾಯನಶ್ರೌತಸೂತ್ರ, xiii, 3.

92 ಲಾಟ್ಯಾಯನಶ್ರೌತಸೂತ್ರ, iv, 3.

ಗೃಹಪತೇರ್ದಾಸ್ಯಃ ಅಭೀಷ್ಟವಾನ್ ಉದಹರಣಾನ್ ಪೂರಯಿತ್ವಾ ಪ್ರದಕ್ಷಿಣಂ ಮಾರ್ಜಾಲೀಯಂ ಪರೀಯುಃ । ಹೈ ಮಹಾ 3 ಇದಂ ಮಧು ಇತಿ ವದಂತ್ಯಃ.......ತಾಭ್ಯಃ ವೀಣಾ ವಾದಯೇಯುಃ[93]

ಮಾನವನ ಅತ್ಯಂತ ಪ್ರಾಚೀನ ನೃತ್ತಪ್ರವೃತ್ತಿ ಧಾರ್ಮಿಕ ಸಂದರ್ಭಗಳಲ್ಲಿ ಕಂಡುಬರುತ್ತದೆಂದು ಬೇರೆಡೆ ನಾನು ಸೂಚಿಸಿದ್ದೇನೆ.[94] ಇದು ಪ್ರಪಂಚದ ಎಲ್ಲ ಪುರಾತನ ಸಂಸ್ಕೃತಿಗಳಲ್ಲೂ ಕಂಡುಬರುತ್ತದೆ. ಇಂತಹ ಸಂಸ್ಕೃತಿಗಳಲ್ಲಿ ಭಾರತದ್ದು ಬಹುಶಃ ಅತ್ಯಂತ ಪ್ರಾಚೀನವಾದುದು. ಆದುದರಿಂದ ಮಾನವಕುಲದ ಗೀತವಾದನ ನೃತ್ತಪ್ರವೃತ್ತಿಯನ್ನು ಪ್ರಾಯಶಃ ಮೊದಲಬಾರಿಗೆ ವೇದಗಳಲ್ಲಿ ಕಾಣಬಹುದು. ಧಾರ್ಮಿಕ, ಅನುಕರಣ ಮುಂತಾದ ಪ್ರವೃತ್ತಿಗಳಿಂದ ನೃತ್ತಪ್ರವೃತ್ತಿಯು ಹೇಗೆ ಆವಿರ್ಭವಿಸುತ್ತದೆಂಬುದನ್ನು ಸೂಸನ್ ಲ್ಯಾಂಗರ್ ಹೃದಯಂಗಮವಾಗಿಯೂ ವಿದ್ವತ್‌ಪೂರ್ಣವಾಗಿಯೂ ಚರ್ಚಿಸಿದ್ದಾಳೆ.[95]

ಶಿಕ್ಷಣದಿಂದಲೂ ರಾಜಾಶ್ರಯ, ಸಾರ್ವಜನಿಕ ಪುರಸ್ಕಾರ ಮೊದಲಾದವುಗಳಿಂದಲೂ, ಕಛೇರಿಗಳಿಂದಲೂ ಸಂಗೀತದ ಮೂಲಕ ಅರ್ಥ (ಹಣ) ದ ಸಂಪಾದನೆಯಾಗುವುದು ತಿಳಿದೇ ಇದೆ. ಅಲ್ಲದೆ ದೇವತಾ ಪ್ರೀತಿಗಾಗಿ ಸಂಗೀತವನ್ನು ಯಜ್ಞಯಾಗಾದಿ ಪುಣ್ಯಕಾರ್ಯಗಳಲ್ಲಿ ಸಮರ್ಪಿಸಿದರೆ ದೇವತೆಗಳು ಸಂಪತ್ತನ್ನೂ ಯಶಸ್ಸನ್ನೂ ಅನುಗ್ರಹಿಸುತ್ತಾರೆಂಬುದು ಪ್ರಕೃತ ಶ್ಲೋಕದಲ್ಲಿ ಧ್ವನಿಯಿದೆ.

'ತಸ್ಮಾದ್ ಗಾಯಂತಂ ಸ್ತ್ರಿಯಃ ಕಾಮಯಂತೇ'[96] ಎಂಬ ಶ್ರುತಿವಾಕ್ಯದಂತೆ, ಮತ್ತು ಕಲ್ಲಿನಾಥನು ಹೇಳುವ ಹಾಗೆ ವೇದದಿಂದಲೂ ಲೋಕದಿಂದಲೂ ಸಿದ್ಧವಾಗಿರುವಂತೆ[97], ಸಂಗೀತದಿಂದ ಕಾಮಸಾಧನೆಯೂ ಆಗುವುದು.

ಸಂಗೀತವು ಮೋಕ್ಷಸಾಧನವೆಂಬುದಕ್ಕಂತೂ—

ವೀಣಾವಾದನ ತತ್ತ್ವಜ್ಞಃ ಶ್ರುತಿಜಾತಿವಿಶಾರದಃ ।
ತಾಲಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ನಿಯಚ್ಛತಿ ।
ಗೀತಜ್ಞೋ ಯದಿ ಯೋಗೇನ ನಾಪ್ನೋತಿ ಪರಮಂಪದಮ್ ।
ರುದ್ರಸ್ಯಾನುಚರೋ ಭೂತ್ವಾ ತೇನೈವ ಸಹ ಮೋದತೇ ।[98]

ಎಂಬ ಯಾಜ್ಞವಲ್ಕ್ಯಸ್ಮೃತಿಯ ಆಧಾರವೇ ಇದೆ. ಸಂಗೀತಶಾಸ್ತ್ರದಲ್ಲಿಯೂ ಮದ್ರಕಾದಿ ಪ್ರಕರಣ ಗೀತಿಗಳನ್ನು ಹಾಡುವುದರಿಂದ ಮೋಕ್ಷವುಂಟೆಂದು ಹೇಳಿದೆ :

ಶಿವಸ್ತುತೌ ಪ್ರಯೋಜ್ಯಾನಿ ಮೋಕ್ಷಾಯ ವಿದಧೇ ವಿಧಿಃ[99]

---

93 ದ್ರಾಹ್ಯಾಯಣಶ್ರೌತಸೂತ್ರ, xi, 3, 17, 19.

94 Sathyanarayana, R, Gondala—A Ritual Dance in The Soul of Indian Dance.

95 Langer, Susanne, K ; *op. cit.*, Chapter 6 : Life Symbols : The Roots of Sacrament, pp. 116–138.

96 ರಂಗನಾಥ, ಉ. ಗ್ರಂ., ಪು. 17.

97 ಕಲ್ಲಿನಾಥ, ಉ. ಗ್ರಂ., i, 1, 30, ಪು. 17.

98 ಯಾಜ್ಞವಲ್ಕ್ಯಸ್ಮೃತಿ, ಪ್ರಾಯಶ್ಚಿತ್ತಾಧ್ಯಾಯ, ಯತಿಧರ್ಮಪ್ರಕರಣ, 115, 116.

99 ಶಾರ್ಙ್ಗದೇವ, ಉ. ಗ್ರಂ., v, 56, ಪು. 29.

ಶಾರ್ಙ್ಗದೇವನು ಸಂಗೀತರತ್ನಾಕರದ ತಾಳಾಧ್ಯಾಯದಲ್ಲಿರುವ ಏತೈಃ ಪ್ರಕರಣಾಖ್ಯಾನಿ ತಾಲೈರ್ಯಾ-ನಿಜಗುರ್ಬುಧಾಃ ಎಂದು ಪ್ರಾರಂಭಿಸಿ ಮೇಲಿನ ಉಕ್ತಿಯವರೆಗಿನ, ಅಪರಾಂತಕಾದಿ ಹದಿನಾಲ್ಕು ಗೀತಿಗಳನ್ನು ಹೆಸರಿಸುವ, ಏಳು ಸಾಲುಗಳನ್ನು ಯಾಜ್ಞವಲ್ಕ್ಯಸ್ಮೃತಿಯಿಂದ ಉದ್ಧರಿಸಿಕೊಂಡಿದ್ದಾನೆ.[100] ಈಚೆಗೆ ತ್ಯಾಗ ರಾಜನೂ ಇದೇ ಭಾವಗಳಿಂದ ಸ್ಫೂರ್ತಿಪಡೆದು ಸಂಗೀತಜ್ಞಾನವಿಹೀನುಲಕು ಮೋಕ್ಷಮುಗಲದಾ[101], ಅಖಿಲನೈಗ ಮಾಶ್ರಿತ ಸಂಗೀತಜ್ಞಾನಮುನು ಬ್ರಹ್ಮಾನಂದಸಾಗರಮೀದನಿ ದೇಹಮು ಭೂಮಿಭಾರಮುರಾ[102], ಸ್ವರವಿದ್ಧುಲು ಜೀವನ್ಮುಕ್ತುಲನಿ ತ್ಯಾಗರಾಜು ದೆಲಿಯು[103], ಮೂಲಾಧಾರಜನಾದಮೆರಗುಟ ಮುದಮುಗು ಮೋಕ್ಷಮುರಾ[104], ಸಹಜಭಕ್ತಿತೋ ರಾಗಜ್ಞಾನಸಹಿತುಡು ಮುಕ್ತುಡುರಾ[104], ಕೋಲಾಹಲ ಸಪ್ತಸ್ವರ ಗೃಹಮುಲ ಗುರುತೇ ಮೋಕ್ಷಮುರಾ[104], ಸಂಗೀತಶಾಸ್ತ್ರಜ್ಞಾನಮು ಸಾರೂಪ್ಯಸೌಖ್ಯದಮೆ[105] ಸಂಗೀತಕೋವಿದುಲಕು, ಬ್ರಹ್ಮಾನಂದ ಸುಖಾಂಬುಧಿಮರ್ಮವಿದುಲುಕು ಮ್ರೊಕ್ಕೆದ[106] ಎಂದು ಮುಂತಾಗಿ ಹೇಳಿದ್ದಾನೆ.

ಚತುರ್ವಿಧ ಪುರುಷಾರ್ಥಸಾಧನೆಗೆ ಗೀತವಾದ್ಯನೃತ್ತಗಳು ಹೇಗೆ ಅನಿವಾರ್ಯವಾದ ಉಪಕಾರಕಗಳು ಎಂಬುದು ಮೇಲೆ ಹೇಳಿದ ಎಲ್ಲ ಉದ್ಧೃತಿಗಳಿಂದಲೂ ಸ್ಪಷ್ಟವಾಗುತ್ತದೆ. ಇದನ್ನೇ ಶ್ರೀ ಶಾರ್ಙ್ಗದೇವನು ಧರ್ಮಾರ್ಥಕಾಮ ಮೋಕ್ಷಾಣಾಮಿದಮೇವೈಕಸಾಧನಮ್ ಎಂದು ಪ್ರಸ್ತುತ ಶ್ಲೋಕದಲ್ಲಿ ಸಾರವತ್ತಾಗಿ ಹೇಳಿದ್ದಾನೆ. ಗೀತವಾದ್ಯ ನೃತ್ಯಗಳನ್ನು ವೈದಿಕವಾಙ್ಮಯದಲ್ಲಿ ಶಿಲ್ಪಕವೆಂಬ ಹೆಸರಿನಿಂದ ವ್ಯವಹರಿಸಿದೆ :

ತ್ರಿವೃದ್ ವೈ ಶಿಲ್ಪಕಂ ನೃತ್ಯಂ ಗೀತಂ ವಾದನಮಿತಿ[107]

ಇದನ್ನೇ ಗ್ರಂಥಕಾರನು ಸಂಗೀತವೆಂಬ ಸಮುಚ್ಚಯಶಬ್ದದಿಂದ ಕರೆದಿದ್ದಾನೆ.

ಮೊದಲನೆಯ ಅಧ್ಯಾಯದ ವಿಷಯಸಂಗ್ರಹ

**ತತ್ರ ಸ್ವರಗತಾಧ್ಯಾಯೇ ಪ್ರಥಮೇ ಪ್ರತಿಪಾದ್ಯತೇ ।**
**ಶರೀರಂ[28] ನಾದಸಂಭೂತಿಃ ಸ್ಥಾನಾನಿ ಶ್ರುತಯಸ್ತಥಾ ॥** 31

ಅದರಲ್ಲಿ ಮೊದಲನೆಯ ಸ್ವರಗತಾಧ್ಯಾಯದಲ್ಲಿ [ಇವುಗಳು] ವಿವರಿಸಲ್ಪಡುತ್ತವೆ : [ಮನುಷ್ಯ] ದೇಹ, ನಾದದ ಹುಟ್ಟು, ಸ್ಥಾನಗಳು, ಹಾಗೆಯೇ ಶ್ರುತಿಗಳು,

---

28 ಅ, ಕ : ಶಾರೀರಂ.

---

100 ಯಾಜ್ಞವಲ್ಕ್ಯಸ್ಮೃತಿ, ಉಕ್ತಸ್ಥಾನ, 113-114.

101 ತ್ಯಾಗರಾಜ, ಸಾರಮತಿರಾಗದ, ಆದಿತಾಳದ ಮೋಕ್ಷಮುಗಲದಾ ಎಂಬ ಕೃತಿ.

102 ಅದೇ, ಗರುಡಧ್ವನಿರಾಗದ, ದೇಶಾದಿ ತಾಳದ ಆನಂದಸಾಗರಮೀದನಿ ಎಂಬ ಕೃತಿ.

103 ಅದೇ, ಆಂದೋಳಿಕಾರಾಗದ, ದೇಶಾದಿತಾಳದ ರಾಗಸುಧಾರಸ ಎಂಬ ಕೃತಿ.

104 ಅದೇ, ಶಂಕರಾಭರಣರಾಗದ, ಆದಿತಾಳದ ಸ್ವರರಾಗಸುಧಾರಸ ಎಂಬ ಕೃತಿ.

105 ಅದೇ, ಮುಖಾರಿ ರಾಗದ, ಆದಿತಾಳದ ಸಂಗೀತಶಾಸ್ತ್ರಜ್ಞಾನಮು ಎಂಬ ಕೃತಿ.

106 ಅದೇ, ಮಾಯಾಮಾಳವಗೌಳರಾಗದ, ದೇಶಾದಿತಾಳದ ವಿದುಲಕುಮ್ರೊಕ್ಕೆದ ಎಂಬ ಕೃತಿ.

107 ಶಾಂಖಾಯನಬ್ರಾಹ್ಮಣ, xxix, 5.

ಇಲ್ಲಿಂದ ಮುಂದಕ್ಕೆ ಈ ಪ್ರಕರಣದಲ್ಲಿ ಸಂಗೀತರತ್ನಾಕರದ ವಿವಿಧ ಅಧ್ಯಾಯಗಳ ಪರಿವಿಡಿಯನ್ನು ಕೊಟ್ಟಿದೆ. ಈ ಪಾರಿಭಾಷಿಕ ಶಬ್ದಗಳನ್ನು ಅನುವಾದಮಾಡದೆ ಹಾಗೆಯೇ ಕೊಟ್ಟಿದ್ದೇನೆ. ಈ ಶಬ್ದಗಳಿಗೆ ಸರಳವೂ ಹ್ರಸ್ವವೂ ಆದ ವಿವರಣೆಗಳನ್ನಾಗಲೀ ಅರ್ಥವಿನ್ಯಾಸಗಳನ್ನಾಗಲೀ ಕೊಡುವುದು ಕಷ್ಟವಾದ ಕೆಲಸ. ಆದರೂ ಆಧುನಿಕ ದೃಷ್ಟಿಕೋನದೊಡನೆ ವಿರೋಧವಿಲ್ಲದಂತೆ ನನ್ನದೇ ಆದ ಲಕ್ಷಣ-ನಿರೂಪಣೆಗಳನ್ನು ಮಾಡಿದ್ದೇನೆ. ಅವುಗಳ ಪೂರ್ಣ ವಿವೇಚನೆಯನ್ನು ಆಯಾ ಅಧ್ಯಾಯ, ಪ್ರಕರಣಗಳಲ್ಲೇ ಕಾಣಬೇಕು

ಸ್ಥೂಲವಾಗಿ, ಸ್ಥಾನವೆಂದರೆ ನಾದವು ಉಚ್ಚನೀಚಭಾವದಲ್ಲಿ ವ್ಯಕ್ತವಾಗುವ ನಾದಪ್ರದೇಶ. ಯಾವುದಾದರೊಂದು ಸ್ವರವನ್ನು ಆಧಾರವಾಗಿ ಸ್ವೀಕರಿಸಿದರೆ ಅದರ ಅತ್ಯಂತ ಸಮೀಪಸ್ಥ ಆವರ್ತನಸ್ವರದವರೆಗೆ ಇರುವ ನಾದ ಪ್ರದೇಶಕ್ಕೆ **ಸ್ಥಾನ** (ಸ್ಥಾಯಿ) ವೆಂದು ಹೆಸರು. ಆಧಾರಸ್ವರದ ಎಲ್ಲಾ ನಾದಗುಣಗಳನ್ನೂ ಉಳಿಸಿಕೊಂಡು ಅದಕ್ಕೆ ಅತ್ಯಂತ ಸದೃಶವಾಗಿ, ಆದರೆ ಅದರ ಅರ್ಧ ಅಥವಾ ಎರಡರಷ್ಟು ಕಂಪಶಕ್ತಿಯುಳ್ಳ ಸ್ವರಕ್ಕೂ (ಇದೇ ಅತ್ಯಂತ ಸಮೀಪಸ್ಥವಾದ ಆವರ್ತನಸ್ವರ) ಆಧಾರಸ್ವರಕ್ಕೂ ನಡುವೆ ಇರುವ ಅಂತರವೇ ಅದರ ಪ್ರಮಾಣ. ಇದನ್ನು 'ವಿವಿಧ ಕಂಪಶಕ್ತಿಯುಳ್ಳ ಸ್ವರಗಳು ಉದ್ಭವಿಸುವ ಪ್ರದೇಶಗಳು' ಎಂಬ ಅಸ್ಪಷ್ಟವೂ ಅನಸಂಧಿಗ್ಧವೂ ಆದ ರೀತಿಯಲ್ಲಿ ಕುನ್ಹನ್‌ರಾಜಾ ಹೇಳಿದ್ದಾನೆ.[108] ತನ್ನ ರಂಜನಾಶಕ್ತಿ, ನಿರ್ದಿಷ್ಟ ವ್ಯಕ್ತಿತ್ವ ಮತ್ತು ಸ್ವತಂತ್ರ ಅಸ್ತಿತ್ವಗಳನ್ನು ಉಳಿಸಿಕೊಂಡ, ಮತ್ತು ಅದಕ್ಕಿಂತ ಕಡಿಮೆ ನಾದಪ್ರಮಾಣದ್ದಾದರೆ ಕಿವಿಗೇ ಗೋಚರವಾಗದಷ್ಟು ಅತ್ಯಲ್ಪ ಪ್ರಮಾಣದಲ್ಲಿ ಪ್ರಕಟವಾಗಬಲ್ಲ ನಾದಾಂತರಕ್ಕೆ **ಶ್ರುತಿ**ಯೆಂದು ಹೆಸರು. ಕುನ್ಹನ್‌ರಾಜಾ ಈ ಸ್ಥಾನಗಳಲ್ಲಿ ಪ್ರಕಟವಾಗುವ ಸ್ವರಗಳೇ (Notes) ಶ್ರುತಿಗಳೆಂಬ ತಪ್ಪು ಅರ್ಥಮಾಡಿದ್ದಾನೆ. [108]

**ತತಃ ಶುದ್ಧಾಃ ಸ್ವರಾಃ ಸಪ್ತ ವಿಕೃತಾ ದ್ವಾದಶಾಪ್ಯಮೀ ।**
**ವಾದ್ಯಾದಿ ಭೇದಾಶ್ಚತ್ವಾರೋ ರಾಗೋತ್ಪಾದನಹೇತವಃ ।**[29]
**ಕುಲಾನಿ ಜಾತಯೋ ವರ್ಣಾ ದ್ವೀಪಾನ್ಯಾರ್ಷಂ ಚ ದೈವತಮ್ ॥** 32

ಆಮೇಲೆ, ಏಳು ಶುದ್ಧಸ್ವರಗಳು, ವಿಕೃತ [ಸ್ವರ] ಗಳಾದರೋ ಹನ್ನೆರಡು; ರಾಗ(ದ ಸ್ವರೂಪ)ವು ಹುಟ್ಟಲು ಕಾರಣಗಳಾದ (ರಾಗಭಾವವು ಸ್ಫುರಿಸುವಂತೆ ಮಾಡುವ) ವಾದಿಯೇ ಮೊದಲಾದ ನಾಲ್ಕು ಭೇದಗಳು, [ಸ್ವರಗಳ] ಕುಲಗಳು, ಜಾತಿಗಳು, ಬಣ್ಣಗಳು, ದ್ವೀಪಗಳು ಮತ್ತು ಋಷಿಗಳು, [ಅಧಿ] ದೇವತೆಗಳು,—

ನಾದವು ಯಾವುದಾದರೊಂದು ನಿರ್ದಿಷ್ಟ ಶ್ರುತಿಯಲ್ಲಿ ಪ್ರಕಟವಾದಾಗ **ಸ್ವರ**ವಾಗುತ್ತದೆ. ಸ್ವರಕ್ಕೆ ಪರಾವಲಂಬನೆಯಿಲ್ಲದೆ ಕೇಳುವವರ ಮನಸ್ಸನ್ನು ಸಂತೋಷಗೊಳಿಸಬಲ್ಲ ಗುಣವಿರುತ್ತದೆ; ನಯ, ಅನುರಣನ (ಸಹ ಕಂಪನ) ಹಾಗೂ ದೂರಶ್ರಾವ್ಯತೆಗಳು ಅದರ ಇತರ ಗುಣಗಳು. ಒಂದು ಸ್ಥಾಯಿಯಲ್ಲಿನ ವ್ಯಾಪ್ತಿಯನ್ನು ಲಾಕ್ಷಣಿಕವಾಗಿ ತಮ್ಮಲ್ಲಿ ಕನಿಷ್ಠತೆ-ಗರಿಷ್ಠತೆಗಳ ಅಂತರದಿಂದ ನಿರೂಪಿಸುವ ಇಪ್ಪತ್ತೆರಡು ಶ್ರುತಿಗಳಲ್ಲಿ ನಾಲ್ಕು, ಏಳು, ಒಂಬತ್ತು, ಹದಿಮೂರು, ಹದಿನೇಳು, ಇಪ್ಪತ್ತು ಮತ್ತು ಇಪ್ಪತ್ತೆರಡು, ಈ ಸಂಖ್ಯೆಯವುಗಳಲ್ಲಿ ಕ್ರಮವಾಗಿ ಪ್ರಕಟವಾಗುವ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದಗಳು ಆಯಾ

29 ಈ ಶ್ಲೋಕಾರ್ಧವು ಕ ಮತ್ತು ಗ ಗಳಲ್ಲಿ ಮಾತ್ರ ಇದೆ.

108 ಕುನ್ಹನ್‌ರಾಜಾ, ಉಕ್ತಗ್ರಂಥ, ಪು. 6.

1. ಪದಾರ್ಥಸಂಗ್ರಹ ಪ್ರಕರಣ

**ಶುದ್ಧಸ್ವರಗಳು.** ಈ ಸ್ವರಗಳು ತಮ್ಮ ಮೇಲ್ಕಂಡ ಸ್ಥಾನಗಳಿಂದ ಬೇರೆ ಸ್ಥಾನದಲ್ಲಿರುವ ಶ್ರುತಿಗಳನ್ನು ಆಕ್ರಮಿಸಿದರೆ ವಿಕೃತವಾಗುತ್ತವೆ. ಆಧುನಿಕ ದೃಷ್ಟಿಯಿಂದ ಈ ಶುದ್ಧ-ವಿಕೃತಿ ಸ್ವರಗಳ ಲಕ್ಷಣಗಳನ್ನು ಈಗ ಹೇಳಿದ ನಿರೂಪಣೆಗೆ ವಿರೋಧವಿಲ್ಲದಂತೆ ಹೀಗೆ ಇನ್ನೂ ಸರಳವಾಗಿ ಹೇಳಬಹುದು : ಯಾವುದಾದರೊಂದು ಸ್ವರವು ಒಂದಕ್ಕಿಂತ ಹೆಚ್ಚು ನಾದ ಮಟ್ಟಗಳಲ್ಲಿ ಪ್ರಕಟವಾಗಬಹುದು. ಅವುಗಳಲ್ಲಿ ಅತ್ಯಂತ ಕನಿಷ್ಠವಾದುದರಲ್ಲಿ ವ್ಯಕ್ತವಾಗುವ ಪ್ರಭೇದಕ್ಕೆ ಶುದ್ಧಸ್ವರವೆಂದೂ ಉಳಿದವುಗಳಿಗೆ ವಿಕೃತ ಸ್ವರಗಳೆಂದೂ ಸಂಜ್ಞೆ. ಇದೇ ಅಧ್ಯಾಯದ ಮೂರನೆಯ ಪ್ರಕರಣದಲ್ಲಿ ಶುದ್ಧಸ್ವರ-ವಿಕೃತಸ್ವರಗಳ ವಿಷಯದಲ್ಲಿ ಮಾಡಿರುವ ವಿವೇಚನೆಯನ್ನೂ ನೋಡಿ. ವಿಕೃತಸ್ವರ ಎನ್ನುವುದಕ್ಕೆ 'ಸ್ವಲ್ಪಮಟ್ಟಿಗೆ ಬೇರೆ ಸ್ಥಾನಗಳಲ್ಲಿ ಪ್ರಕಟವಾಗುವ ಶುದ್ಧಸ್ವರಗಳು' ಎಂದು ಕುನ್ಹನ್‌ರಾಜಾ ಮಾಡಿರುವ ವ್ಯಾಖ್ಯಾನವು [109] ಖಚಿತವಲ್ಲವಾದುದರಿಂದ ಅಗ್ರಾಹ್ಯವಾಗಿದೆ.

ಈ ಶ್ಲೋಕದಲ್ಲಿನ ಮಧ್ಯದ ಪಾದವನ್ನು ಕಲ್ಕತ್ತ ಮುದ್ರಣದಲ್ಲಿ ಮಾತ್ರ ಕೊಟ್ಟಿದೆ. ಆನಂದಾಶ್ರಮ ಮುದ್ರಣದಲ್ಲಿ ಇದನ್ನು ಒಂದೇ ಆಕರದಲ್ಲಿನ ಪಾಠಾಧಿಕ್ಯವೆಂದು ಅಡಿ ಟಿಪ್ಪಣಿಯಲ್ಲಿ ತೋರಿಸಿದೆ. ಆನಂದಾಶ್ರಮ ಮುದ್ರಣವನ್ನೇ ಹೆಚ್ಚಾಗಿ ಅನುಸರಿಸಿರುವ ಅಡ್ಯಾರ್ ಮುದ್ರಣದಲ್ಲಿ ಇದು ಬಿಟ್ಟೇಹೋಗಿದೆ. ಮೂರನೆಯ ಪ್ರಕರಣದಲ್ಲಿ ವಿಕೃತಸ್ವರವರ್ಣನೆಯನಂತರ ವಾದಿಯೇ ಮೊದಲಾದ ಸ್ವರಭೇದಗಳನ್ನು ಶಾರ್ಙ್ಗದೇವನು ವರ್ಣಿಸಿರುವುದರಿಂದ ಈ ಭಾಗವು ಪ್ರಕ್ಷಿಪ್ತವಲ್ಲವೆಂಬುದು ಸ್ಪಷ್ಟವಾಗಿದೆ. ರಾಗದ ವ್ಯಕ್ತಿತ್ವವನ್ನು ಎತ್ತಿ ತೋರಿಸಿ ಅತ್ಯಂತ ಅಧಿಕವಾಗಿ ಪ್ರಯೋಗವಾಗುವ ಸ್ವರವೇ **ವಾದಿ.** ಸ್ವರಾಷ್ಟಕದ ಎರಡು ಸಮಭಾಗಗಳಲ್ಲಿ ವಾದಿಯಿಲ್ಲದಿರುವ ಚಾತುಃಸ್ವರ್ಯದಲ್ಲಿದ್ದುಕೊಂಡು ಸಮತೂಕವನ್ನುಂಟುಮಾಡುತ್ತಾ ರಾಗಪ್ರಕಟೀಕರಣಕ್ಕೆ ವಾದಿಗೆ ಪರಸ್ಪರವಾಗಿದ್ದು ಸಹಾಯಮಾಡುವ ಸ್ವರವೇ **ಸಂವಾದಿ.** ರಾಗದ ವ್ಯಕ್ತಿತ್ವದ ಅಭಿವ್ಯಕ್ತಿಗೆ ಹಾನಿಯುಂಟುಮಾಡುವುದು **ವಿವಾದಿ.** ಈ ಮೂರೂ ವಿಧಗಳಿಗೆ ಸೇರದಿರುವ ಸ್ವರವೇ **ಅನುವಾದಿ.**

**ಛಂದಾಂಸಿ ವಿನಿಯೋಗಾಶ್ಚ ಸ್ವರಾಣಾಂ ಶ್ರುತಿಜಾತಯಃ ।**
**ಗ್ರಾಮಾಶ್ಚ ಮೂರ್ಛನಾಸ್ತಾನಾಃ ಶುದ್ಧಾಃ ಕೂಟಾಶ್ಚ ಸಂಖ್ಯಯಾ [30] ॥** 33

ಛಂದಸ್ಸುಗಳು ಮತ್ತು ವಿನಿಯೋಗಗಳು, ಸ್ವರಗಳಲ್ಲಿ ಶ್ರುತಿಗಳ ಜಾತಿಗಳು, ಗ್ರಾಮಗಳು, ಮೂರ್ಛನೆಗಳು, ಸಂಖ್ಯೆಯಿಂದ (ಎಣಿಸಿ) ಹೇಳಿದ ಶುದ್ಧತಾನಗಳು ಮತ್ತು ಕೂಟತಾನಗಳು.

ಸ್ವರವಿನಿಯೋಗವೆಂದರೆ ಇಂತಿಂತಹ ಸ್ವರವನ್ನು ಇಂತಿಂತಹ ರಸಗಳನ್ನು ನಿರ್ವಹಿಸುವ ಸನ್ನಿವೇಶಗಳಲ್ಲಿ ಪ್ರಯೋಗಿಸಬೇಕು, ಎಂಬ ನಿಯಮ. 'ಸ್ವರವನ್ನು' ಎಂದರೆ 'ಆಯಾ ಸ್ವರವನ್ನು ಅಂಶವನ್ನಾಗಿ ಪಡೆದಿರುವ ಜಾತಿಗಳನ್ನು' ಎಂದು ಈ ಅರ್ಥವನ್ನು ಅಭಿನವಗುಪ್ತನು ವಿಶದಗೊಳಿಸುತ್ತಾನೆ :

ಅತ್ರ ಹಾಸ್ಯಶೃಂಗಾರಯೋರಿತ್ಯಾದಿನಾ ಜಾತ್ಯಂಶಕವಿನಿಯೋಗಂ ಭವಿಷ್ಯಂತಂ ಅನುವದಂಸ್ತದ್ ದ್ರುತಸ್ಥಾಯಿಸ್ವರಾನುಸಾರೇಣ ಕಾಕೋಃ ಪ್ರಯೋಗ ಇತಿ ದರ್ಶಯತಿ । [110]

---

30 ಅ : ಕೂಟಾಃ ಸ್ವಸಂಖ್ಯಯಾ.

---

109 ಕುನ್ಹನ್‌ರಾಜಾ, ಉ. ಗ್ರಂ., ಪು. 7. 110 ಅಭಿನವಗುಪ್ತ, ಅಭಿನವಭಾರತೀ, ಭಾರತೀಯ ನಾಟ್ಯಶಾಸ್ತ್ರದ XVII, 103, 104 ರ ಮೇಲೆ ವ್ಯಾಖ್ಯಾನ, ಪು. 387.

ಶಾರ್ಙ್ಗದೇವನೂ ಇದೇ ಭಾವದೊಡನೆ ಸಮ್ಮತಿಸುತ್ತಾ 'ಸರ್ವಜಾತಿಷು ಜಾನೀಯಾದಂಶಸ್ವರಗತಂ ರಸಮ್' ಎನ್ನುತ್ತಾನೆ.[111]

ತಾತ್ತ್ವಿಕವಾಗಿ ನಿರ್ದಿಷ್ಟಮಾಪನ ಪದ್ಧತಿಯ ಮೂಲಕ ಉಚ್ಚನೀಚಭಾವದಲ್ಲಿ ಸ್ಥಾಪಿಸಿದ ಸಪ್ತಸ್ವರಗಳೊಡನೆ ಗೇಯವಸ್ತುಕೋಶದಲ್ಲಿನ ಎಲ್ಲ ಸ್ವರಪ್ರಭೇದಗಳನ್ನೂ ಅವುಗಳ ಅವಾಂತರಭೇದಗಳನ್ನೂ, ಹೋಲಿಸಬಹುದಾದ, ಅಲ್ಲದೆ ರಾಗವಸ್ತುಕೋಶವನ್ನೂ, (ವಾದಿ, ಸಂವಾದಿ, ವಿವಾದಿ ಭಾವಗಳ ಮೂಲಕ) ಅದರ ಸೌಂದರ್ಯಾತ್ಮಕ ಅಂಶವನ್ನೂ ಹೋಲಿಸಲು ಮತ್ತು ವರ್ಗೀಕರಿಸಲು ಅಗತ್ಯವಾದ, ಸ್ವರಾಷ್ಟಕಕ್ಕೆ **ಗ್ರಾಮ**ವೆಂದು ಹೆಸರು. ಆಧುನಿಕ ಮೇಳಕರ್ತೃ ಅಥವಾ ಹಿಂದೂಸ್ತಾನೀ ಸಂಗೀತದ 'ಥಾಟ್' ಗೆ ಇದು ಸಮವೆಂದು ಸ್ಥೂಲವಾಗಿ ಹೇಳಬಹುದು.

ಏಳೂ ಸ್ವರಗಳನ್ನೂ ಕ್ರಮವಾಗಿ ಆರೋಹ-ಅವರೋಹಗಳಲ್ಲಿ ಪ್ರಯೋಗಿಸುವುದಕ್ಕೆ **ಮೂರ್ಛನೆ**ಯೆಂದು ಹೆಸರು. ಮೂರ್ಛನೆಯಲ್ಲಿ ಒಂದು ಅಥವಾ ಹೆಚ್ಚು ಸ್ವರಗಳನ್ನು ಲೋಪಮಾಡಿದರೆ **ತಾನ**ವಾಗುತ್ತದೆ. ಕೇವಲ ವರ್ಜ್ಯಸಂಚಾರವುಳ್ಳ (ನಡುವೆ ಇರುವ ಸ್ವರವನ್ನು ಬಿಟ್ಟ) ಮೂರ್ಛನೆಗೆ **ಶುದ್ಧತಾನ**ವೆಂದೂ, ವರ್ಜ್ಯಸಂಚಾರ ಮತ್ತು (ಬಿಟ್ಟ) ಅಥವಾ ವಕ್ರಸಂಚಾರಗಳನ್ನುಳ್ಳ ಮೂರ್ಛನೆಗೆ **ಕೂಟತಾನ**ವೆಂದೂ ಹೆಸರು.

**ಪ್ರಸ್ತಾರಃ ಖಂಡಮೇರುಶ್ಚ ನಷ್ಟೋದ್ದಿಷ್ಟಪ್ರಬೋಧಕಃ**[31] **।**
**ಸ್ವರಸಾಧಾರಣಂ ಜಾತಿಸಾಧಾರಣಮತಃ ಪರಮ್ ॥** 34

ಪ್ರಸ್ತಾರ, ಮತ್ತು ನಷ್ಟ-ಉದ್ದಿಷ್ಟಗಳನ್ನು ತಿಳಿಸಿಕೊಡುವಂತಹ ಖಂಡಮೇರು, ಸ್ವರಸಾಧಾರಣ, ಆಮೇಲೆ ಜಾತಿಸಾಧಾರಣ,—

ಯಾವುದಾದರೊಂದು ನಿರ್ದಿಷ್ಟಸಂಖ್ಯೆಯಷ್ಟು ಸ್ವರಗಳನ್ನು ತೆಗೆದುಕೊಂಡು ಅವುಗಳಲ್ಲಿ ಸಾಧ್ಯವಾಗುವ ಎಲ್ಲಾ ಬಗೆಯ ಜೋಡಣೆಗಳನ್ನೂ (ಕ್ರಮ ವ್ಯತ್ಯಯಗಳನ್ನೂ) ನಿರ್ಧರಿಸುವುದು ಸ್ವರ**ಪ್ರಸ್ತಾರ**. ಒಂದರಿಂದ ಏಳರವರೆಗೆ ವಿವಿಧ ಸಂಖ್ಯೆಯ ಸ್ವರಗಳ ಪ್ರಸ್ತಾರದಿಂದ ಬಂದ ಸಂಖ್ಯೆಗಳನ್ನು ಕ್ರಮಬದ್ಧವಾಗಿ ಒಂದು ಪಥಕದಲ್ಲಿ ತೋರಿಸುವುದು **ಖಂಡಮೇರು**. ಖಂಡಮೇರುವಿನಲ್ಲಿ ಕೊಟ್ಟ ಒಂದು ಸಂಖ್ಯೆಯ ಸಹಾಯದಿಂದ ಪ್ರಸ್ತಾರಕ್ರಮದಲ್ಲಿ ಅದರ ಸ್ಥಾನವನ್ನೂ ರಚನೆಯನ್ನೂ ಕಂಡುಹಿಡಿಯುವುದಕ್ಕೆ **ನಷ್ಟ**ವೆಂದು ಹೆಸರು. ನಿರ್ದಿಷ್ಟ ಸಂಖ್ಯೆಯ ಸ್ವರಗಳನ್ನುಳ್ಳ ಯಾವುದೇ ಸಮುಚ್ಚಯವನ್ನು ಕೊಟ್ಟರೂ ಖಂಡಮೇರುವಿನಲ್ಲಿ ಆ ಸಂಖ್ಯೆಯ ಸ್ವರಗಳ ಪ್ರಸ್ತಾರದಲ್ಲಿ ಕೊಟ್ಟ ಸಮುಚ್ಚಯದ ವ್ಯತ್ಯಯ ಸಂಖ್ಯೆಯನ್ನು ಕಂಡುಹಿಡಿಯುವುದು **ಉದ್ದಿಷ್ಟ**.

ಗಾಂಧಾರ ಸ್ವರವು ತನ್ನ ಮುಂದಿನ ಸ್ವರವಾದ ಮಧ್ಯಮದ ನಾದಪ್ರದೇಶದಲ್ಲಿ ಒಂದು ಅಂಶವನ್ನು ವಹಿಸಿಕೊಂಡು ವಿಕೃತವಾದಾಗ, ವಿಕೃತಾವಸ್ಥೆಯಲ್ಲಿ ಆ ಅಂಶವು ಗಾಂಧಾರಕ್ಕೂ ಮಧ್ಯಮಕ್ಕೂ ಸಾಧಾರಣ (common) ವಾಗಿರುತ್ತದೆ. ಹಾಗೆಯೇ ನಿಷಾದವು ವಿಕೃತಾವಸ್ಥೆಯಲ್ಲಿ ಷಡ್ಜದ ಪ್ರದೇಶದಲ್ಲಿ ಕೆಲವು ಅಂಶವನ್ನು ವಹಿಸಿಕೊಳ್ಳುತ್ತದೆ. ಇಂತಹ ವಿಕೃತಾವಸ್ಥೆಗೆ **ಸ್ವರಸಾಧಾರಣ**ವೆಂದು ಹೆಸರು.

ಎರಡು ಜಾತಿಗಳಲ್ಲಿ ಸಮಾನಸ್ವರಗಳ ಪ್ರಯೋಗದಿಂದ, ಉದಾಹರಣೆಗೆ ಒಂದೇ ಸ್ವರವು ಎರಡು ಜಾತಿಗಳಲ್ಲೂ

---

31 ಕ: ಪ್ರಸಾಧಕಃ.

---

111 ಶಾರ್ಙ್ಗದೇವ, ಉ. ಗ್ರಂ., i, 7, 112, ಪು. 272.

1. ಪದಾರ್ಥಸಂಗ್ರಹ ಪ್ರಕರಣ

ಅಂಶವಾಗಿರುವುದರಿಂದ, ಸಮಾನರಾಗಚ್ಛಾಯೆಯುಂಟಾಗುವುದು **ಜಾತಿಸಾಧಾರಣ.** ಜಾತಿ ಎನ್ನುವುದರ ಅರ್ಥಕ್ಕೆ ಇದೇ ಅಧ್ಯಾಯದ ಏಳನೇ ಪ್ರಕರಣದ ಪೀಠಿಕಾರೂಪದ ವ್ಯಾಖ್ಯಾನವನ್ನು ನೋಡಿ.

**ಕಾಕಲ್ಯಂತರಯೋಃ ಸಮ್ಯಕ್ ಪ್ರಯೋಗೋ ವರ್ಣಲಕ್ಷಣಮ್ ।**
**ತ್ರಿಷಷ್ಟಿರಪ್ಯಲಂಕಾರಾಸ್ತ್ರಯೋದಶವಿಧಂ ತತಃ ॥** 35

ಕಾಕಲೀ [ನಿಷಾದ ಮತ್ತು] ಅಂತರ [ಗಾಂಧಾರ] ಗಳಲ್ಲಿ ಸರಿಯಾದ ಪ್ರಯೋಗ, ವರ್ಣಗಳ ಲಕ್ಷಣ, ಹಾಗೂ ಅರವತ್ತುಮೂರು ಅಲಂಕಾರಗಳು, ಆಮೇಲೆ ಹದಿಮೂರು ವಿಧದ—

**ಕಾಕಲಿಯು** ನಿಷಾದದ ಒಂದು ವಿಕೃತಾವಸ್ಥೆ ; ಹಾಗೆಯೇ **ಅಂತರವು** ಗಾಂಧಾರದ ಒಂದು ವಿಕೃತಾವಸ್ಥೆ. ಸ್ವರಗಳ ಸಮುಚ್ಚಯಕ್ಕೆ **ವರ್ಣ**ವೆಂದು ಹೆಸರು. ಅದರ ಚಲನಾಸ್ವಭಾವವನ್ನು ಅವಲಂಬಿಸಿ ಮಾಡಿರುವ ಪ್ರಕಾರಗಳಿಗೆ **ಅಲಂಕಾರ**ಗಳೆಂದು ಹೆಸರು.

**ಜಾತಿಲಕ್ಷ್ಮ ಗ್ರಹಾಂಶಾದಿ ಕಪಾಲಾನಿ ಚ ಕಂಬಲಮ್ ।**
**ನಾನಾವಿಧಾ ಗೀತಯಶ್ಚೇತ್ಯೇತಾವಾನ್ ವಸ್ತುಸಂಗ್ರಹಃ ॥** 36

—ಗ್ರಹ, ಅಂಶವೇ ಮೊದಲಾಗಿ ಜಾತಿಯ ಲಕ್ಷಣಗಳು, ಕಪಾಲಗಳು ಮತ್ತು ಕಂಬಲ, ಮತ್ತು ಬೇರೆ ಬೇರೆ ರೀತಿಯ ಗೀತಗಳು—ಇಷ್ಟು (ಸ್ವರಾಧ್ಯಾಯದಲ್ಲಿರುವ) ವಿಷಯಗಳ ಸಂಗ್ರಹ.

**ಗ್ರಹ**ವೆಂದರೆ ಗೇಯಭಾಗದ ಮೊದಲಲ್ಲಿರುವ ಸ್ವರ. **ಅಂಶ**ವೆನ್ನುವುದು ಹಾಡಿನಲ್ಲಿ ಅಥವಾ ರಾಗದಲ್ಲಿ ಅತ್ಯಂತ ಬಹುಳಪ್ರಯೋಗದ ಕಾರಣದಿಂದ ರಾಗಭಾವವನ್ನು ಸ್ಫುರಿಸುವ ಸ್ವರ. **ಕಪಾಲವು** ಲಕ್ಷಣಗಳಲ್ಲಿ ಜಾತಿಯನ್ನು ಸ್ವಲ್ಪಮಟ್ಟಿಗೆ ಹೋಲುವ ಗೇಯಪ್ರಕಾರವೊಂದು. ಈಶ್ವರನನ್ನು ಪ್ರಸನ್ನಗೊಳಿಸಲು ಕಂಬಲನು ಹಾಡಿದ ಗೀತಿಗಳೇ **ಕಂಬಲ**ಗಳು. ಜಾತಿ, ಕಪಾಲ ಮತ್ತು ಕಂಬಲಗಳು ಮೂರೂ ಗೀತಿಯ (ಎಂದರೆ ಗಾನಸಂದರ್ಭದ) ಸ್ವರರಚನಾ ವಿನ್ಯಾಸದ ವಿಶ್ಲೇಷಣೆಯ ವಿವಿಧ ರೀತಿಗಳು. ಇವು ಕೇವಲ ಪ್ರಾಚೀನ ಗೇಯಪ್ರಕಾರಗಳಾಗಿದ್ದುವಲ್ಲದೆ ರಾಗಗಳಿಗೆ ಮಾತೃಸ್ಥಾನದಲ್ಲಿದ್ದುವು.

ಗೀತಿಯಲ್ಲಿನ ಸಾಹಿತ್ಯಾಕ್ಷರಗಳ ಹ್ರಸ್ವ ದೀರ್ಘಗಳ ವಿನ್ಯಾಸವನ್ನೂ ಪದಗಳ ಪುನರುಕ್ತಿಕ್ರಮವನ್ನೂ ಮುಖ್ಯವಾಗಿ ಅವಲಂಬಿಸಿ ಮಾಗಧೀ, ಅರ್ಧಮಾಗಧೀ, ಪೃಥುಲಾ ಮತ್ತು ಸಂಭಾವಿತಾ ಎಂಬ ನಾಲ್ಕು ಭೇದಗಳಿವೆ.

ಎರಡನೆಯ ಅಧ್ಯಾಯದ ವಸ್ತುಸಂಗ್ರಹ

**ಅಥ ರಾಗವಿವೇಕಾಖ್ಯೇ ಽಧ್ಯಾಯೇ ವಕ್ಷ್ಯಾಮಹೇ ಕ್ರಮಾತ್ ।**
**ಗ್ರಾಮರಾಗಾಂಶ್ಚೋಪರಾಗಾನ್ ಭಾಷಾವಿಭಾಷಿಕಾಃ ॥** 37

ಆಮೇಲೆ, ರಾಗವಿವೇಕವೆಂಬ (ಎರಡನೆಯ) ಅಧ್ಯಾಯದಲ್ಲಿ ಕ್ರಮವಾಗಿ (ಇವುಗಳನ್ನು) ಹೇಳುವೆವು : ಗ್ರಾಮರಾಗಗಳು, ಮತ್ತು ಉಪರಾಗಗಳು, ಭಾಷೆವಿಭಾಷೆಗಳು,—

ಇವುಗಳೆಲ್ಲ ವಿವಿಧ ರಾಗಪ್ರಕಾರಗಳು. ರಾಗವಿವೇಕಾಧ್ಯಾಯದಲ್ಲಿ ಇವುಗಳನ್ನು ವಿಶದವಾಗಿ ವಿವರಿಸಲಾಗುವುದು. ಕುನ್ಹನ್‌ರಾಜಾ ಈ ಸಂದರ್ಭದಲ್ಲಿ, ಗ್ರಾಮರಾಗಗಳು ನಿರ್ದಿಷ್ಟವಾದ ಮಟ್ಟುಗಳೆಂದೂ ಭಾಷೆಗಳು ಅವು

ಗಳನ್ನು ಹಾಡುವ ವಿಧಾನಗಳೆಂದೂ ಅಪಾರ್ಥಮಾಡಿದ್ದಾನೆ.[112] ಗ್ರಾಮರಾಗಗಳು ಮಟ್ಟುಗಳಲ್ಲವೆಂದೂ ವಿಸ್ತಾರವಾದ ಲಕ್ಷ್ಯದ ಚೌಕಟ್ಟಿನಲ್ಲಿ ಪ್ರಯೋಗವಾಗುತ್ತಿದ್ದ ರಾಗವಿಧಗಳೆಂದೂ, ಭಾಷಾರಾಗಗಳು ದೇಶ್ಯಪ್ರವೃತ್ತಿಯ ಫಲವಾಗಿ ಗ್ರಾಮರಾಗಗಳಿಂದ ಉದ್ಭವಿಸಿದ ಸ್ವತಂತ್ರವೂ ವಿಭಿನ್ನವೂ ಆದ ರಾಗಪ್ರಕಾರಗಳೆಂದೂ ಮತಂಗನ ಬೃಹದ್ದೇಶಿ (ಭಾಷಾಪ್ರಕರಣ) ಯಿಂದಲೂ ಸಂಗೀತರತ್ನಾಕರದ ರಾಗವಿವೇಕಾಧ್ಯಾಯದಿಂದಲೂ ನಿರ್ವಿವಾದವಾಗಿ ಸಿದ್ಧವಾಗುತ್ತದೆ.

**ತತೋಽಪ್ಯಂತರಭಾಷಾಶ್ಚ ರಾಗಾಂಗಾನ್ಯಖಿಲಾನ್ಯಪಿ ।**
**ಭಾಷಾಂಗಾನ್ಯುಪಾಂಗಾನಿ ಕ್ರಿಯಾಂಗಾಣಿ ಚ ತತ್ತ್ವತಃ ॥** 38

ಆಮೇಲಾದರೋ ಅಂತರಭಾಷಾಗಳು, ಎಲ್ಲಾ ರಾಗಾಂಗಗಳು, ಭಾಷಾಂಗಗಳು, ಅಲ್ಲದೆ ಉಪಾಂಗಗಳು, ಮತ್ತು ಕ್ರಿಯಾಂಗಗಳು (ಇವುಗಳನ್ನು) ಸರಿಯಾದ ರೀತಿಯಲ್ಲಿ <ತತ್ತ್ವತಃ> (ಶಾಸ್ತ್ರಪ್ರಮೇಯಗಳಿಗೆ ಅನುಸಾರವಾಗಿ ಹೇಳಲಾಗುವುದು).

ಈ ಶಬ್ದಗಳನ್ನು ರೂಢನಾಮಗಳಾಗಿಯೇ ಇಲ್ಲಿ ಬಳಸಿದೆ. ಕುನ್ಹನ್‌ರಾಜಾ ಇವುಗಳನ್ನು ವಿಗ್ರಹಮಾಡಿ ಕೊಟ್ಟಿದ್ದಾನೆ.[113]

ಮೂರನೆಯ ಅಧ್ಯಾಯದ ವಸ್ತುಸಂಗ್ರಹ

**ತತಃ ಪ್ರಕೀರ್ಣಕಾಧ್ಯಾಯೇ ತೃತೀಯೇ ಕಥಯಿಷ್ಯತೇ ।**
**ವಾಗ್ಗೇಯಕಾರೋ ಗಾಂಧರ್ವಃ ಸ್ವರಾದಿರ್ಗಾಯನ[32]ಸ್ತಥಾ ॥** 39

ಆಮೇಲೆ ಮೂರನೆಯ ಪ್ರಕೀರ್ಣಕಾಧ್ಯಾಯದಲ್ಲಿ (ಇವುಗಳು) ಹೇಳಲ್ಪಡುತ್ತವೆ : ವಾಗ್ಗೇಯಕಾರ, ಗಾಂಧರ್ವ, ಸ್ವರಾದಿ, ಹಾಗೆಯೇ ಹಾಡುಗಾರ,—

ವಾಕ್ (ಮಾತು) ಮತ್ತು ಗೇಯ (ಸ್ವರ-ಲಯಗಳ ಅಂಶ) ಎರಡನ್ನೂ ರಚಿಸುವವನು **ವಾಗ್ಗೇಯಕಾರ.** ಮಾರ್ಗಸಂಗೀತ, ದೇಶೀ ಸಂಗೀತಗಳೆರಡನ್ನೂ ಬಲ್ಲವನು **ಗಾಂಧರ್ವ.** ಮಾರ್ಗಸಂಗೀತವನ್ನು ಮಾತ್ರ ಬಲ್ಲವನು **ಸ್ವರಾದಿ.** ಕಂಠಧ್ವನಿಯನ್ನೇ ವಾದ್ಯವಾಗಿ ಉಳ್ಳವನು ಹಾಡುಗಾರ **(ಗಾಯನ).** ಸ್ವರಾದಿ ಶಬ್ದಕ್ಕೆ ಸ್ವರಗಳು ಮೊದಲಾದವು ಎಂದು ಕುನ್ಹನ್‌ರಾಜಾ ತಪ್ಪು ಅರ್ಥಮಾಡಿದ್ದಾನೆ.[113]

**ಗಾಯನೀ[33]ಗುಣದೋಷಾಶ್ಚ ತಯೋಃ ಶಬ್ದಭಿದಾಸ್ತಥಾ ।**
**ಗುಣದೋಷಾಶ್ಚ ಶಬ್ದಸ್ಯ ಶಾರೀರಂ ತದ್ಗುಣಾಸ್ತಥಾ ॥** 40

—ಹಾಡುಗಾತಿ, ಅವರಿಬ್ಬರ ಗುಣದೋಷಗಳು, ಹಾಗೆಯೇ ಶಬ್ದದ ಭೇದಗಳು, ಶಬ್ದದ ಗುಣದೋಷಗಳು, ಕಂಠಧ್ವನಿ <ಶಾರೀರಂ>, ಹಾಗೆಯೇ ಅದರ ಗುಣಗಳು,—

32 ಅ : ಗಾಯಕಃ. 33 ಕ, ಗ : ಗಾಯನೀ.

112 ಕುನ್ಹನ್‌ರಾಜಾ, ಉ. ಗ್ರಂ., ಪು. 8. 113 ಅದೇ ಗ್ರಂಥ, ಅದೇ ಸ್ಥಾನ.

ಕ ಮತ್ತು ಗ ಆಕರಗಳಲ್ಲಿ ಗಾಯನೀ ಎಂಬ ಪಾಠವಿದೆ. ಹಾಡುವುದರಲ್ಲಿ ಗುಣದೋಷಗಳು ಎಂಬ ಅರ್ಥವನ್ನು ಇದಕ್ಕೆ ಅನ್ವಯಿಸಬಹುದಾದರೂ, ಪ್ರಕೀರ್ಣಕಾಧ್ಯಾಯದಲ್ಲಿ ಗಾಯಕವರ್ಣನೆಯ ನಂತರ ಗಾಯನೀ ವರ್ಣನೆಯನ್ನು ಗ್ರಂಥಕಾರನು ಮಾಡಿರುವುದರಿಂದಲೂ, ಈ ಭಾಗವು ನಿಸ್ಸಂದೇಹವಾಗಿ ಮೂಲಗ್ರಂಥದ ಅವಿಭಾಜ್ಯ ಅಂಶವಾದುದರಿಂದಲೂ ಗಾಯನೀ ಎಂಬ ಪಾಠವೇ ಇಲ್ಲಿ ಸರಿ.

ನಾಲ್ಕನೆಯ ಅಧ್ಯಾಯದ ವಸ್ತುಸಂಗ್ರಹ

**ತದ್ದೋಷಾ ಗಮಕಾಃ ಸ್ಥಾಯಾ[34] ಆಲಪ್ತಿರ್ಬೃಂದಲಕ್ಷಣಮ್ ।**
**ತತಃ ಪ್ರಬಂಧಾಧ್ಯಾಯೇ ತು ಧಾತವೋ ऽಂಗಾನಿ ಜಾತಯಃ ॥** 41

—ಅದರ ದೋಷಗಳು, ಗಮಕ [ಗಳು], ಸ್ಥಾಯಗಳು, ಆಲಾಪ, ಬೃಂದ [-ಸಂಗೀತ-]ದ ಲಕ್ಷಣ; ಆಮೇಲೆ ಪ್ರಬಂಧಾಧ್ಯಾಯದಲ್ಲಾದರೋ [ಪ್ರಬಂಧಗಳ] ಧಾತುಗಳು, ಅಂಗಗಳು, ಜಾತಿಗಳು,—

ರಂಜನೆಯನ್ನು ಉಳಿಸಿಕೊಂಡು, ಒಂದು ಸ್ವರವನ್ನು ಅದರ ಸ್ಥಾನದಿಂದ ವಿವಿಧರೀತಿಗಳಲ್ಲಿ ಕಂಪಿಸುವುದಕ್ಕೆ **ಗಮಕ**ವೆಂದು ಹೆಸರು. ಕುನ್ಹನ್‌ರಾಜಾ ಇದು ಶಾರೀರಕಂಪವೆಂದು ಮಾತ್ರ ಹೇಳಿ[113] ತಪ್ಪು ಅಭಿಪ್ರಾಯ ಮೂಡಿಸಿದ್ದಾನೆ. ರಾಗದ ಒಂದು ಅಂಶಕ್ಕೆ **ಸ್ಥಾಯ**ವೆಂದು ಹೆಸರು. ರಾಗಾಲಾಪನೆಯ ದೇಹವನ್ನು ನಿರ್ವಹಿಸುವುದು ವಿವಿಧ ಸ್ಥಾಯಗಳ ಅನುಕ್ರಮದಿಂದಲೇ. **ಆಲಪ್ತಿ**ಯೆಂದರೆ ರಾಗದ ಸ್ವರೂಪವನ್ನು ಪ್ರಕಟಗೊಳಿಸುವುದು. ಹಾಡುಗಾರಿಕೆ ಮತ್ತು ವಾದ್ಯಸಂಗೀತ ಇವುಗಳ ಸಂಯೋಗಕ್ಕೆ **ಬೃಂದ**ವೆಂದು ಹೆಸರು. **ಅ** ಮತ್ತು **ಕ** ಆಕರಗಳಲ್ಲಿರುವ ಛಾಯಾ ಎಂಬ ಪಾಠಾಂತರವು ಅಗ್ರಾಹ್ಯವಾಗಿದೆ. ಇದು ಬಹುಶಃ ಠಾಯಾ ಎಂಬುದರ ಭ್ರಷ್ಟಪಾಠವಾಗಿರಬಹುದು. ಠಾಯ ಎನ್ನುವುದು ಸ್ಥಾಯಾ ಶಬ್ದದ ತದ್ಭವ.

**ಪ್ರಬಂಧಾನಾಂ ದ್ವಿಧಾ ಸೂಡಃ ಶುದ್ಧಶ್ಛಾಯಾಲಗಸ್ತಥಾ ।**
**ಆಲಿಕ್ರಮ[35]ಪ್ರಬಂಧಾಶ್ಚ ಸೂಡಸ್ಥಾ ಆಲಿಸಂಶ್ರಯಾಃ ॥** 42

ಶುದ್ಧ ಮತ್ತು ಛಾಯಾಲಗವೆಂಬ ಸೂಡ [ಪ್ರಬಂಧ]ದ ಎರಡು ವಿಧಗಳು, ಮತ್ತು ಆಲಿಕ್ರಮ ಪ್ರಬಂಧಗಳು, ಸೂಡದಲ್ಲಿರುವಂತಹವು, ಆಲಿ [ಯೆಂಬ ಹಾಡಿನ ರೀತಿಯಲ್ಲಿ] ಯಲ್ಲಿ ನೆಲೆಯಾದವು,

ಪ್ರಬಂಧಾಧ್ಯಾಯದ ವಸ್ತುಸಂಗ್ರಹದಲ್ಲಿರುವ ಶಬ್ದಗಳಿಗೆ ಕೇವಲ ರೂಢಾರ್ಥಗಳೇ ಇರುವುದರಿಂದಲೂ, ಸರಳವೂ ಸಂಗ್ರಹವೂ ಆದ ಅರ್ಥಸೂಚಿಗಳನ್ನು ಕೊಡುವುದು ಕಷ್ಟವಾದುದರಿಂದಲೂ, ಪ್ರಬಂಧಪ್ರಭೇದಗಳ ವಿವರಣೆಯನ್ನು ಆ ಅಧ್ಯಾಯದಲ್ಲೇ ನೋಡಬೇಕು. ಹಾಡಿನ ಗೇಯಭಾಗವನ್ನು ಕ್ರಮವಾಗಿ ವಿಶ್ಲೇಷಿಸಿ ಉಂಟಾದ ಭಾಗಗಳೇ **ಧಾತು**ಗಳು ; ಹಾಡಿನ ಸಾಹಿತ್ಯಭಾಗವನ್ನು ವಿಶ್ಲೇಷಿಸುವುದರಿಂದ ಉಂಟಾದ ಅಂಶಗಳೇ **ಅಂಗ**ಗಳು. ಧಾತುಗಳ ಮತ್ತು ಅಂಗಗಳ ವಿವಿಧ ಸಂಖ್ಯೆಯ ಆವಿರ್ಭಾವದಿಂದ ಮಾಡಿದ ಹಾಡಿನ ವರ್ಗೀಕರಣವೇ ಪ್ರಬಂಧದ **ಜಾತಿ.**

---

34 ಅ, ಕ : ಗಮಕಾಶ್ಛಾಯಾ ?   35 ಕ, ಗ : ಆಲಿಕ್ರಮಃ.

**ಛಾಯಾಲಗ** ಎಂದರೆ ಇನ್ನೊಂದರ ಛಾಯೆಯನ್ನು, ಎಂದರೆ ಶುದ್ಧವಾದುದರ ಅಂಶತಃ ಸ್ವರೂಪವನ್ನು, ತಳೆದಿರುವುದು ಎಂದರ್ಥ. ಇದು ತದ್ಭವರೂಪದಲ್ಲಿ ಸಾಲಗ, ಸಾಳಗ ಎಂದಾಗಿದೆ. **ಆಲಿ** ಎಂದರೆ ಸಮೂಹ, ಸಮುಚ್ಚಯ. ಸೂಡವೂ ಛಾಯಾಲಗವೂ ಅಲ್ಲದ ಉಳಿದೆಲ್ಲ ಸಂಕೀರ್ಣ ಪ್ರಬಂಧ ಪ್ರಭೇದಗಳನ್ನು ಈ ಸಮುಚ್ಚಯ ಶಬ್ದದಿಂದ ಸಂಗೀತಶಾಸ್ತ್ರದಲ್ಲಿ ವ್ಯವಹರಿಸಿದೆ.

**ವಿಪ್ರಕೀರ್ಣಾಸ್ತತಶ್ಛಾಯಾಲಗಸೂಡಸಮಾಶ್ರಿತಾಃ ।**
**ಗೀತಸ್ಥಾ ಗುಣದೋಷಾಶ್ಚ ವಕ್ಷ್ಯಂತೇ ಶಾರ್ಙ್ಗಸೂರಿಣಾ ॥**[36] 43

ವಿಪ್ರಕೀರ್ಣ [-ಪ್ರಬಂಧ-] ಗಳು, ಆ ಮೇಲೆ ಛಾಯಾಲಗಸೂಡ(ವೆಂಬ ಪ್ರಬಂಧರೀತಿಯನ್ನು) ವನ್ನು ಅವಲಂಬಿಸಿರುವವು, ಮತ್ತು ಹಾಡಿನಲ್ಲಿರುವ ಗುಣದೋಷಗಳು, ಇವುಗಳು ಶಾರ್ಙ್ಗ[ದೇವ] ಪಂಡಿತನಿಂದ ಹೇಳಲ್ಪಡುತ್ತವೆ.

ಐದನೆಯ ಅಧ್ಯಾಯದ ವಸ್ತುಸಂಗ್ರಹ

**ತಾಲಾಧ್ಯಾಯೇ ಪಂಚಮೇ ತು ಮಾರ್ಗತಾಲಾಃ ಕಲಾ[37]ಸ್ತಥಾ ।**
**ಪಾತಾ ಮಾರ್ಗಾಶ್ಚ ಚತ್ವಾರಸ್ತಥಾ ಮಾರ್ಗಕಲಾ ಽಷ್ಟಕಮ್ ॥** 44

ಐದನೆಯ ತಾಳಾಧ್ಯಾಯದಲ್ಲಾದರೋ ಮಾರ್ಗತಾಳಗಳು, ಹಾಗೆಯೇ ಕಲೆಗಳು, ಪಾತಗಳು ಮತ್ತು ನಾಲ್ಕು ಮಾರ್ಗಗಳು, ಹಾಗೆಯೇ ಎಂಟು ಮಾರ್ಗಕಲೆಗಳು,—

ಚಚ್ಚತ್ಪುಟ, ಚಾಚಪುಟ, ಷಟ್ಪಿತಾಪುತ್ರ, ಉದ್ಘಟ್ಟ ಮತ್ತು ಸಂಪಕ್ವೇಷ್ಟಾಕವೆಂಬ ಐದು ಪ್ರಾಚೀನ ತಾಳ ವಿಶೇಷಗಳಿಗೆ **ಮಾರ್ಗತಾಳ**ಗಳೆಂದು ಹೆಸರು. ಉಳಿದೆಲ್ಲ (ದೇಶೀ) ತಾಳಗಳ ರಚನೆಗೂ ಇವು ಮೂಲಧಾತುಗಳು. ತಾಳದ ನಿರ್ವಾಹದಲ್ಲಿ ಶಬ್ದವಿಲ್ಲದೆ ಮಾಡುವ ಕ್ರಿಯೆಗಳು **ಕಲೆ**ಗಳು; ಶಬ್ದದೊಡನೆ ಮಾಡಲ್ಪಡುವ ಕಲೆಗಳು **ಪಾತ**ಗಳು. ಮಾರ್ಗತಾಳಗಳಲ್ಲಿ ಅಥವಾ ದೇಶೀ ತಾಳಗಳಲ್ಲಿ ಪ್ರಯೋಗವಾಗುವುದರಿಂದ ಕಲೆಗಳಲ್ಲಿ (ನಿಃಶಬ್ದ ಕ್ರಿಯೆಗಳಲ್ಲಿ) ಮಾರ್ಗ, ದೇಶೀ ಎಂದು ಎರಡುವಿಧ. ಮಾರ್ಗಕಲೆಗಳು ಎಂಟಿವೆ.

**ಗುರುಲಘ್ವಾದಿಮಾನಂ ಚೈಕಕಲಾತ್ವಾದಯೋ ಭಿದಾಃ ।**
**ಪಾದಭಾಗಾಸ್ತಥಾ ಮಾತ್ರಾಸ್ತಾಲೇ ಪಾತ[38]ಕಲಾವಿಧಿಃ ॥** 45

—ಗುರು, ಲಘು ಮೊದಲಾದವುಗಳ ಅಳತೆ, ಮತ್ತು ಏಕಕಲೆ ಮೊದಲಾದವುಗಳ ಭೇದಗಳು, ಹಾಗೆಯೇ ಪಾದಭಾಗಗಳು, ಮಾತ್ರೆಗಳು, ತಾಳದಲ್ಲಿ ಪಾತ [ಮತ್ತು] ಕಲೆಗಳ(ನ್ನು ಮಾಡುವ) ನಿಯಮ,—

ಹ್ರಸ್ವಾಕ್ಷರದ ಉಚ್ಚಾರಕ್ಕೆ ಬೇಕಾಗುವ ಕಾಲವೇ **ಲಘು**; ಅದರ ಎರಡರಷ್ಟು ಪ್ರಮಾಣವುಳ್ಳದ್ದು **ಗುರು**. ಇಲ್ಲಿ 'ಮೊದಲಾದ' ಎನ್ನುವುದಕ್ಕೆ ದ್ರುತ, ಪ್ಲುತ, ಕಾಕಪಾದ, ಎಂದು ಅರ್ಥ. ಲಘುವಿನ ಅರ್ಧ, ಮೂರು ಮತ್ತು ನಾಲ್ಕರಷ್ಟು ಕಾಲಪ್ರಮಾಣವುಳ್ಳ ತಾಳಾಂಗಗಳೇ ಕ್ರಮವಾಗಿ ದ್ರುತ, ಪ್ಲುತ ಮತ್ತು ಕಾಕಪಾದಗಳು.

---

36 ಅ, ಗ: ಗೀತಸ್ಯ ಗುಣದೋಷಾಶ್ಚ ಲಕ್ಷ್ಯಂತೇ ಸೂರಿಶಾರ್ಙ್ಗಿಣಾ.

37 ಗ; ಆದರೆ ಅ: ಕ್ರಮಾ ? 38 ಅ, ಕ: ತಾಲಪಾತ.

ತಾಳದ ಪ್ರತಿ ಭಾಗಕ್ಕೂ ಪ್ರಮಾಣಭೂತವಾದ ಒಂದು ನಿರ್ದಿಷ್ಟಕಾಲಾವಧಿಯನ್ನು ಪಡೆದಿರುವುದು **ಏಕಕಲೆ;** ಅದರ ಎರಡರಷ್ಟು ಕಾಲಾವಧಿಯಿರುವುದು ದ್ವಿಕಲೆ, ಇತ್ಯಾದಿ. ಇಡೀ ತಾಳಪ್ರಮಾಣದಲ್ಲಿರುವ ಪ್ರತಿಯೊಂದು ಸ್ವತಂತ್ರ ಅಂಗಕ್ಕೂ **ಪಾದಭಾಗ**ವೆಂದು ಹೆಸರು. ಪಾದಭಾಗವೆಂಬುದಕ್ಕೆ ಶ್ಲೋಕವೊಂದರ ನಾಲ್ಕನೆಯ ಒಂದು ಭಾಗವೆಂದು ಕುನ್ಹನ್‌ರಾಜಾ ತಪ್ಪು ಅರ್ಥಮಾಡಿದ್ದಾನೆ.[114] ಕ, ಚ, ಟ, ತ ಮತ್ತು ಪ ಎಂಬ ಐದು ಹ್ರಸ್ವಾಕ್ಷರಗಳ ಉಚ್ಚಾರಕ್ಕೆ ಬೇಕಾಗುವ ಕಾಲವೇ **ಮಾತ್ರೆ.** ಇದಕ್ಕೆ ಲಘು, ಹ್ರಸ್ವ, ವ್ಯಾಪಕ ಎಂಬ ಬೇರೆ ಹೆಸರುಗಳೂ ಇವೆ. ತಾಳವನ್ನು ಹಾಕುವಾಗ ಎಲ್ಲಿ ಯಾವ ಸಶಬ್ದ ಅಥವಾ ನಿಃಶಬ್ದ ಕ್ರಿಯೆಯನ್ನು ಪ್ರಯೋಗಿಸಬೇಕೆಂದು ಹೇಳುವ ನಿಯಮವೇ **ಪಾತಕಲಾವಿಧಿ.**

**ಅಂಗುಲೀನಾಂ ಚ ನಿಯಮೋ ಭೇದಾ ಯುಗ್ಮಾದಯಸ್ತಥಾ ।**
**ಪರಿವರ್ತೋ ಲಯ[39]ಸ್ತೇಷಾಂ ಯತಯೋ ಗೀತಕಾನಿ ಚ ॥** 46

—ಮತ್ತು ಬೆರಳುಗಳ ನಿಯಮ, ಹಾಗೆಯೇ ಯುಗ್ಮ ಮೊದಲಾದವುಗಳ ಭೇದಗಳು, ಪರಿವರ್ತ, ಲಯ [ಮತ್ತು] ಅವುಗಳ ಯತಿಗಳು ಮತ್ತು ಗೀತಕಗಳು,—

ಚಚ್ಚತ್ಪುಟತಾಳಕ್ಕೆ **ಯುಗ್ಮ**ವೆಂದೂ ಹೆಸರು. **ಪರಿವರ್ತವು** ಪಾದಭಾಗದಲ್ಲಿರುವ ಅಂಶಗಳ ವಿವಿಧರೀತಿಯ ಪುನರಾವರ್ತನೆ; **ಲಯ**ವೆನ್ನುವುದು ತಾಳದ ಒಂದು ಪಾದಭಾಗಕ್ಕೂ ಅದರ ಮುಂದಿನದಕ್ಕೂ ನಡುವೆ ಇರುವ ಕಾಲದ ಹ್ರಸ್ವ ಅಥವಾ ದೀರ್ಘ ಪ್ರಮಾಣ; ಎಂದರೆ, ಒಂದು ತಾಲಕ್ರಿಯೆಗೂ ಅದರ ಮುಂದಿನ ಕ್ರಿಯೆಗೂ ನಡುವೆ ಇರುವ ವಿಶ್ರಾಂತಿಯ ಅವಧಿಯೇ ಲಯ. ಲಯದ ವಿವಿಧರೀತಿಯ ಚಲನೆಯನ್ನು ತಿಳಿಸುವುದು **ಯತಿ;** ಎಂದರೆ, ಬೇರೆ ಬೇರೆ ಕಾಲಪ್ರಮಾಣಗಳನ್ನುಳ್ಳ ಅಂಶಗಳನ್ನು ಸಂಯೋಜಿಸುವ ಕ್ರಮಕ್ಕೆ ಯತಿಯೆಂದು ಹೆಸರು. ಕಾವ್ಯಶಾಸ್ತ್ರದಲ್ಲಿ ಛಂದೋಬಂಧವೊಂದರಲ್ಲಿ ಮಧ್ಯದಲ್ಲಿ ಸ್ವಾಭಾವಿಕವಾಗಿ ಬರುವ ವಿರಾಮಕ್ಕೆ ಯತಿಯೆಂದು ಅರ್ಥವಿದೆ. ತಾಳಾಧ್ಯಾಯದಲ್ಲಿ ವಿವರಿಸಲಾಗುವ ಮದ್ರಕವೇ ಮೊದಲಾದ ಹದಿನಾಲ್ಕು ರೀತಿಯ ಹಾಡುಗಳಿಗೆ **ಗೀತಕ**ಗಳೆಂದು ಹೆಸರು. 'ಪರಿವರ್ತ ಮತ್ತು ಅವುಗಳ ಲಯಗಳು' ಎಂದು ಕುನ್ಹನ್‌ರಾಜಾ ತಪ್ಪು ಅನುವಾದಮಾಡಿದ್ದಾನೆ.[114] ಲಯಪ್ರವೃತ್ತಿಗೆ ಯತಿಯೆಂದು ಹೆಸರೆಂಬುದನ್ನು ಸಂಗೀತರತ್ನಾಕರದ ತಾಳಾಧ್ಯಾಯದ 46 ಮತ್ತು ಮುಂದಿನ ಶ್ಲೋಕಗಳು ಸ್ಪಷ್ಟಪಡಿಸುತ್ತವೆ.

**ಛಂದಕಾದೀನಿ ಗೀತಾನಿ ತಾಲಾಂಗನಿಚಯಸ್ತಥಾ ।**[40]
**ಗೀತಾಂಗಾನಿ ಚ ವಕ್ಷ್ಯಂತೇ ದೇಶೀತಾಲಾಶ್ಚ ತತ್ತ್ವತಃ ॥** 47

ಛಂದಕವೇ ಮೊದಲಾದ ಗೀತಗಳು, ಹಾಗೆಯೇ ತಾಳದ ಅಂಗ[ಗಳ] ಸಮೂಹ, ಮತ್ತು [ಈ] ಹಾಡಿನ ಅವಯವಗಳು, ಮತ್ತು ದೇಶೀ ತಾಳಗಳು ಆಯಾ ತತ್ವಗಳನ್ನು ಅನುಸರಿಸಿ (ಸರಿಯಾದ ರೀತಿಯಲ್ಲಿ) <ತತ್ತ್ವತಃ> ಹೇಳಲ್ಪಡುತ್ತವೆ.

ಮದ್ರಕವೇ ಮೊದಲಾದ ಗೀತಗಳನ್ನು ಹಾಡಿದ ಮೇಲೆ ಕೊನೆಯಲ್ಲಿ ಹಾಡಬೇಕಾದ ಗೀತಪ್ರಭೇದಕ್ಕೆ **ಛಂದಕ**ವೆಂದು ಹೆಸರು.

---

39 ಕ : ಲಯಾ. 40 ಈ ಚರಣವು ಕ ಆಕರದಲ್ಲಿ 48 b ಮತ್ತು 48 c ಗಳ ಮಧ್ಯೆ ಪ್ರಕ್ಷಿಪ್ತವಾಗಿದೆ.

---

114 ಕುನ್ಹನ್‌ರಾಜಾ, ಉ. ಗ್ರಂ., ಪು. 9.

ಆರನೆಯ ಅಧ್ಯಾಯದ ವಸ್ತುಸಂಗ್ರಹ

**ನಿಃಶಂಕಶಾರ್ಙ್ಗದೇವೇನ**[41] **ತಾಲಾನಾಂ ಪ್ರತ್ಯಯಾಸ್ತಥಾ ।**
**ಷಷ್ಠೇ ನಾನಾವಿಧಂ ವಾದ್ಯಮಧ್ಯಾಯೇ ಕಥಯಿಷ್ಯತೇ ॥** 48

ಹಾಗೆಯೇ ತಾಳಗಳ ಲಕ್ಷಣಗಳು <ಪ್ರತ್ಯಯಾಃ> ಸಂದೇಹವೇ ಇಲ್ಲದ ಶಾರ್ಙ್ಗದೇವನಿಂದ ಹೇಳಲ್ಪಡುತ್ತವೆ. ಆರನೆಯ ಅಧ್ಯಾಯದಲ್ಲಿ ಬೇರೆಬೇರೆ ರೀತಿಯ ವಾದ್ಯವು ವರ್ಣಿಸಲ್ಪಡುವುದು.

ಪ್ರತ್ಯಯ ಎನ್ನುವುದಕ್ಕೆ ಬೇರೆ ಬೇರೆಯಾಗಿ ಗುರುತಿಸು ಎಂಬ ಅರ್ಥವು ಕುನ್ಹನ್‌ರಾಜಾ ಪ್ರಕಾರ ಸರಿಹೊಂದುತ್ತದೆ. ಆದರೆ ಈ ಸಾಲಿಗೆ ಆತನ ಅನುವಾದ ನಿಖರವಾಗಿಲ್ಲ. ಅಲ್ಲದೆ 'ನಾನಾವಿಧ' ಎನ್ನುವುದರ ಅರ್ಥವನ್ನು 'ಎಲ್ಲಾ' ಎಂದು ಅವನು ಹೇಳುವುದರ[115] ಐತಿಹ್ಯವೇನೋ ತಿಳಿಯದು.

ಏಳನೆಯ ಅಧ್ಯಾಯದ ವಸ್ತುಸಂಗ್ರಹ

**ಸಪ್ತಮೇ ನರ್ತನಂ ನಾನಾರಸಭಾವಾಃ ಕ್ರಮೇಣ ಚ ॥**[42] 49

ಏಳನೆಯದರ (ಅಧ್ಯಾಯದ)ಲ್ಲಿ ನರ್ತನ ಮತ್ತು ಬೇರೆ ಬೇರೆ ರೀತಿಯ ರಸಗಳೂ ಭಾವಗಳೂ ಕ್ರಮವಾಗಿ (ಹೇಳಲ್ಪಡುವುವು).

**ನರ್ತನ**ವೆಂದರೆ ಆಂಗಿಕ, ಆಹಾರ್ಯ, ವಾಚಿಕ ಮತ್ತು ಸಾತ್ತ್ವಿಕಗಳೆಂಬ ನಾಲ್ಕು ಅಂಗಗಳನ್ನು ಪಡೆದ ನಾಟ್ಯಾಂಗ. ವಿವರಗಳಿಗೆ ಇದೇ ಪ್ರಕರಣದ 21 ನೆಯ ಶ್ಲೋಕದ ವ್ಯಾಖ್ಯಾನವನ್ನು ನೋಡಿ. **ರಸ**ಗಳೆಂದರೆ ಶೃಂಗಾರ, ಕರುಣ ಮುಂತಾದವುಗಳು. ವಿಭಾವ, ಅನುಭಾವ ಮೊದಲಾದ ರಸೋತ್ಪಾದಕ ಅಂಶಗಳೇ **ಭಾವಗಳು.** ಕ್ರಮವಾಗಿ ಎಂದರೆ ಈವರೆಗೂ ಹೇಳಿರುವ ಕ್ರಮದಲ್ಲಿಯೇ ನಿರೂಪಣೆಯನ್ನೂ ಮಾಡಲಾಗುವುದು, ಎಂದು ಅರ್ಥ. ಆಯಾ ಅಧ್ಯಾಯಗಳಲ್ಲಿರುವ ವಿಷಯಗಳ ಗಾತ್ರ, ಗೌರವಗಳನ್ನು ಅನುಸರಿಸಿಯೇ ಗ್ರಂಥಕಾರನು ಪದಾರ್ಥ ಸಂಗ್ರಹಪ್ರಕರಣದಲ್ಲಿ ಅವುಗಳ ಪ್ರಾಮುಖ್ಯವನ್ನು ತಕ್ಕಮಟ್ಟಿಗೆ ಪ್ರತಿನಿಧಿಸಿದ್ದಾನಾದರೂ, ನರ್ತನಾಧ್ಯಾಯದ ವಸ್ತುವನ್ನು ಮಾತ್ರ ಒಂದೇ ಸಾಲಿನಲ್ಲಿ ಹೇಳಿ ಮುಗಿಸಿಬಿಟ್ಟಿರುವುದೇಕೋ ತಿಳಿಯದು. ಗಾತ್ರದ ದೃಷ್ಟಿಯಿಂದ ಈ ಏಳನೆಯ ನರ್ತನಾಧ್ಯಾಯವು ಅತ್ಯಂತ ದೊಡ್ಡದು ; ವಸ್ತು ಬಾಹುಳ್ಯ, ವಿಷಯಗೌರವಗಳಲ್ಲಾದರೂ ಅಷ್ಟೆ. 1678 ಶ್ಲೋಕಗಳಿರುವ ಅದರಲ್ಲಿ ರಸ ಮತ್ತು ಭಾವಗಳು ಕೇವಲ 321 ಶ್ಲೋಕಗಳಲ್ಲಿ ಹೇಳಲ್ಪಟ್ಟಿವೆ. ನರ್ತನವನ್ನು ಕುರಿತು ಸ್ವತಂತ್ರವಾಗಿ ಬರೆದಿರುವ ಬೇರೆ ಯಾವುದೇ ಪ್ರೌಢ ಗ್ರಂಥವನ್ನೂ ವಿಚಾರ ವಿವರಗಳಲ್ಲಿ ನಾಚಿಸುತ್ತದೆ, ಈ ಅಧ್ಯಾಯ. ಮೇಲಿನ ಸಂಕ್ಷೇಪ ಪರಿಚಯವು ಅಲ್ಲಿ ಗ್ರಂಥಪಾತಶೇಷವಿರಬಹುದೇ ಎಂದು ಸಂಶಯವನ್ನು ಹುಟ್ಟಿಸುತ್ತದೆ. ಆದರೆ ಪ್ರಕೃತ ಗ್ರಂಥಸಂಪಾದನೆಗೆ ಆಕರಗಳಾಗಿರುವ ಕಲ್ಕತ್ತಾ, ಆನಂದಾಶ್ರಮ ಮತ್ತು

41 ಗ : ಭಟ್ಟಾಭಿನವಗುಪ್ತೇನ ?

42 32 ನೇ ಶ್ಲೋಕದಲ್ಲಿ ಹೆಚ್ಚುವರಿಯಾದ ಶ್ಲೋಕಾರ್ಧವನ್ನೂ ಎಣಿಸಿಕೊಂಡು, ಈ ಶ್ಲೋಕಾರ್ಧವನ್ನೇ 49 ಎಂದು ಪರಿಗಣಿಸಲಾಗಿದೆ.

115 ಕುನ್ಹನ್‌ರಾಜಾ, ಉ. ಗ್ರಂ., ಪು. 10.

ಅಡ್ಯಾರ್ ಮುದ್ರಣಗಳೂ ಅವುಗಳಲ್ಲಿ ಕೊಟ್ಟಿರುವ ಪಾಠಾಂತರಗಳೂ, ವ್ಯಾಖ್ಯಾನಕಾರರುಗಳು ಸ್ವೀಕರಿಸಿರುವ ಪಾಠಗಳೂ, ನಾನು ನೋಡಿರುವ ಸಂಗೀತರತ್ನಾಕರದ ಹಸ್ತಪ್ರತಿಗಳೂ ಈ ಸಂಶಯಕ್ಕೆ ಎಡೆಕೊಡುವುದಿಲ್ಲ. ಆದುದರಿಂದ, ನರ್ತನಾಧ್ಯಾಯವು ಶಾರ್ಙ್ಗದೇವನ ಸಮಯಸ್ಫೂರ್ತಿಯಿಂದಲೂ ಪ್ರತ್ಯುತ್ಪನ್ನಮತಿಯಿಂದಲೂ ಬೃಹದಾಕಾರವಾಗಿ ಬೆಳೆಯಿತೆಂದೂ ಅದರ ಪೂರ್ಣ ಪರಿಮಿತಿಯನ್ನು ಈ ಪ್ರಕರಣದಲ್ಲಿ ಆತನು ಕಾರಣಾಂತರದಿಂದ ಸೇರಿಸಲಿಲ್ಲವೆಂದೂ ಊಹಿಸಬೇಕಾಗುತ್ತದೆ. ಈ ಅಧ್ಯಾಯದಲ್ಲಿ ರಸಭಾವಗಳನ್ನುಳಿದ ಇತರ ಭಾಗಗಳು ಗ್ರಂಥಾಂತರದಿಂದ ಪ್ರಕ್ಷಿಪ್ತವೆಂದು ಭಾವಿಸಲು ಎಳ್ಳಷ್ಟೂ ಅವಕಾಶವಿಲ್ಲ. ನರ್ತನ ಎಂಬ ಒಂದು ಶಬ್ದದಿಂದಲೇ ಈ ಅಧ್ಯಾಯದ ಎಲ್ಲ ವಸ್ತುಕೋಶವನ್ನೂ ಸಂಗ್ರಹವಾಗಿ ಗ್ರಂಥಕಾರನು ಹೇಳಿರಬಹುದೆಂಬ ಸಮಾಧಾನವನ್ನು ತಳೆಯಬೇಕಾಗುತ್ತದೆ, ಅಷ್ಟೆ. ಏಕೆಂದರೆ ಭಾರತೀಯ ಕಾವ್ಯಶಾಸ್ತ್ರದಲ್ಲಿ ಅತ್ಯಂತ ವಿಸ್ತಾರದಲ್ಲಿ ರಚಿತವಾದ ಭಾಗವೆಂದರೆ ರಸಮೀಮಾಂಸೆ. ಅದನ್ನು ನಾನಾರಸಭಾವಾಃ ಎಂದೇ ಸಂಕ್ಷೇಪವಾಗಿ ಇಲ್ಲಿ ಹೇಳಿಬಿಡಲಾಗಿದೆ.

ಸಂಗೀತಶಾಸ್ತ್ರದ ತತ್ತ್ವ, ಪ್ರಮೇಯ, ವಿಚಾರ, ವಿವರಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸುವುದರಲ್ಲಿ ಮತ್ತು ವ್ಯವಸ್ಥೆಗೊಳಿಸುವುದರಲ್ಲಿ ಶ್ರೀ ಶಾರ್ಙ್ಗದೇವನು ಎಣೆಯಿಲ್ಲದವನಾಗಿದ್ದಾನೆ. ಮತಂಗನೇ ಮೊದಲಾದ ಪೂರ್ವಾಚಾರ್ಯರಿಂದ ಅವನು ಈ ವಿಷಯದಲ್ಲಿ ಸ್ವಲ್ಪ ಸ್ಫೂರ್ತಿಪಡೆದಿದ್ದರೂ, ವಸ್ತುವಿನ ವ್ಯವಸ್ಥೆ, ಮಂಡನ, ವಿಮರ್ಶೆ ಮೊದಲಾದುದೆಲ್ಲದರ ಕೀರ್ತಿಯೂ ಆತನಿಗೇ ಸಲ್ಲಬೇಕು. ಹೆಚ್ಚುಕಡಿಮೆ ಎಲ್ಲಾ ರತ್ನಾಕರಾನಂತರದ ಗ್ರಂಥಕಾರರೂ—ಸಂಗೀತರತ್ನಾಕರದ ವಿರೋಧಾಭಾಸಗಳನ್ನು ತಿದ್ದುವೆವೆಂದು ಪ್ರತಿಜ್ಞೆಮಾಡಿದ ಉದ್ಭಟರೂ ಸೇರಿ—ಗ್ರಂಥರಚನೆಯಲ್ಲಿ ರತ್ನಾಕರದ ಮಾದರಿಯನ್ನೇ ಅನುಸರಿಸಿದ್ದಾರೆ. ಈ ಗ್ರಂಥದ ಹಿರಿಮೆಗೂ ಪ್ರಭಾವಕ್ಕೂ ಇದೊಂದು ಸಾಕ್ಷಿ.

ಪದಾರ್ಥಸಂಗ್ರಹ ಪ್ರಕರಣವು ಮುಗಿಯಿತು.

# ಎರಡನೆಯ ಪಿಂಡೋತ್ಪತ್ತಿ ಪ್ರಕರಣ

ನಾದಪ್ರಶಂಸೆ

**ಗೀತಂ ನಾದಾತ್ಮಕಂ ವಾದ್ಯಂ ನಾದವ್ಯಕ್ತ್ಯಾ ಪ್ರಶಸ್ಯತೇ ।**
**ತದ್ದ್ವಯಾನುಗಂ ನೃತ್ತಂ ನಾದಾಧೀನಮತಸ್ತ್ರಯಮ್ [1] ॥ 1 ॥** 50

ಗೀತವು ನಾದಸ್ವರೂಪವನ್ನುಳ್ಳದ್ದು. ವಾದ್ಯವು ನಾದದ ಪ್ರಕಟನೆಯಿಂದ ರಮಣೀಯವಾಗುತ್ತದೆ. ನೃತ್ತವು ಇವೆರಡನ್ನೂ ಅನುಸರಿಸುತ್ತದೆ. ಆದುದರಿಂದ [ಈ] ಮೂರೂ ನಾದಕ್ಕೆ ಅಧೀನವಾಗಿವೆ.

ಇದೇ ಭಾವದ ಸೂಚನೆಯು ಸಂಗೀತರತ್ನಾಕರದ I, 1, 24 ಮತ್ತು 25 ರಲ್ಲಿದೆ. ಶಾರ್ಙ್ಗದೇವನು ಇಲ್ಲಿ ಮತಂಗನಿಗೆ ಋಣಿಯಾಗಿದ್ದಾನೆಂದು ತೋರುತ್ತದೆ :

ನ ನಾದೇನ ವಿನಾ ಗೀತಂ ನ ನಾದೇನ ವಿನಾ ಸ್ವರಾಃ ।
ನ ನಾದೇನ ವಿನಾ ನೃತ್ತಂ ತಸ್ಮಾನ್ನಾದಾತ್ಮಕಂ ಜಗತ್ ॥ [1]

ನಾದವಿಲ್ಲದೆ ನೃತ್ತವಿಲ್ಲ ಎನ್ನುವುದು ನನಗೆ ಅರ್ಥವಾಗಿಲ್ಲ. ಶಾರೀರಕದೃಷ್ಟಿಯಿಂದ ನೋಡಿದರೆ ನಿಃಶಬ್ದವಾಗಿಯೇ ಅಂಗಪ್ರತ್ಯಂಗಗಳ ವಿನ್ಯಾಸದಿಂದ ಸುಂದರವಾದ ಆಕೃತಿಗಳನ್ನುಂಟುಮಾಡುವುದರ ಮೂಲಕ ನೃತ್ತವನ್ನು ಮಾಡಬಹುದಷ್ಟೆ! ಅಧೀನ ಎನ್ನುವುದನ್ನು ಅನಿವಾರ್ಯತೆ ಎನ್ನುವುದಕ್ಕಿಂತ ಮುಖ್ಯಾವಲಂಬನೆ ಎಂದರೆ ಈ ಮಾತನ್ನು ಸುಲಭವಾಗಿ ಒಪ್ಪಬಹುದು. ಅದಕ್ಕಾಗಿಯೇ ಏನೋ, ಶಾರ್ಙ್ಗದೇವನು ' ನ ನಾದೇನ ವಿನಾ ನೃತ್ತಂ ' ಎನ್ನದೆ ' ನಾದಾಧೀನಂ ' ಎಂದು ಮಾತ್ರ ಹೇಳಿದ್ದಾನೆ. ನಟರಾಜನಾದ ಮಹೇಶ್ವರನು ತನ್ನ ತಾಂಡವನೃತ್ತ ಸಮಯದಲ್ಲಿ ಢಕ್ಕೆಯ ನಿನಾದದಿಂದಲೇ ಅಕ್ಷರಾಮ್ನಾಯವನ್ನು ಹೇಳಿದನೆಂದು ನಂದಿಕೇಶ್ವರ ಕಾರಿಕೆಯಲ್ಲಿ ಹೇಳಿರುವ

ನೃತ್ತಾವಸಾನೇ ನಟರಾಜರಾಜೋ ನನಾದ ಢಕ್ಕಾಂ ನವಪಂಚವಾರಂ ।
ಉದ್ಧರ್ತುಕಾಮಃ ಸನಕಾದಿಸಿದ್ಧಾನ್ ಏತದ್ವಿಮರ್ಶೇ ಶಿವಸೂತ್ರಜಾಲಂ ॥ [2]

ಎಂಬ ಮಾತನ್ನು ಗಮನಿಸಿದರೆ ನಾದವೂ ನೃತ್ತವೂ ಸಹೋದ್ಭವಗಳೆಂದು ಹಿಂದೂಗಳು ನಂಬುತ್ತಾರೆಂಬುದು ತಿಳಿಯುತ್ತದೆ. ಅದೂ ಅಲ್ಲದೆ ' ತಸ್ಮಾನ್ನಾದಾತ್ಮಕಂ ಜಗತ್ ' ಎಂದು ಉತ್ಪ್ರೇಕ್ಷೆಯಿಂದ ಮತಂಗನು ಹೇಳಿರುವ ಮಾತನ್ನು ಶಾರ್ಙ್ಗದೇವನು ಮುಂದಿನ ಶ್ಲೋಕದಿಂದ ಸಮರ್ಥಿಸಲೆಳಸುತ್ತಾನೆ.

ಮತಂಗನು ಹೇಳಿದ ನ ನಾದೇನ ವಿನಾ ನೃತ್ತಂ ಮುಂತಾದ ಮಾತುಗಳನ್ನು ಬೇಕಾದರೆ ಹೀಗೆ ಸಮರ್ಥಿಸಿಕೊಳ್ಳಬಹುದು : ಜಗತ್ತಿನಲ್ಲಿ ಎಲ್ಲ ನಾದವೂ ಚಲನೆಯಿಂದಲೆ ಉತ್ಪತ್ತಿಯಾಗುವುದು, ಎಂದರೆ ದೇಹಗಳ ಅಥವಾ

---

[1] ಅ : ನಾದಾಧೀನಮಿದಂ ತ್ರಯಮ್.

---

1 ಮತಂಗ, ಬೃಹದ್ದೇಶೀ, ಶ್ಲೋ. 16, 17, ಪು. 2, 3.

2 ನಂದಿಕೇಶ್ವರಕಾರಿಕಾ, ಉದ್ಧೃತಿ, ಪಾಣಿನೀಯ ಪ್ರವೇಶಿಕಾ. ಪು. 3.

ವಸ್ತುಗಳ ಕಂಪನದಿಂದ. ಅಲ್ಲದೆ ಎಲ್ಲ ಚಲನೆಯೂ ನಾದದಲ್ಲೇ ಪರಿಣಾಮಹೊಂದುವುದು. ಈ ಚಲನೆಯು ಸುವ್ಯವಸ್ಥಿತವೂ ಏಕರೂಪವೂ ಆದ ಕಂಪನಸ್ವಭಾವವನ್ನು ಪಡೆದರೆ ಸಂಗೀತಪ್ರಯುಕ್ತವಾದ ನಾದವಾಗುವುದು. ಇಲ್ಲದಿದ್ದರೆ ಶಬ್ದವಾಗುವುದು. ಚಲನೆಯೆಲ್ಲ ನಾದವನ್ನೇ ಒಳಗೊಂಡಿದ್ದರೂ ಅದರ ಕಂಪನಪ್ರಮಾಣವನ್ನನುಸರಿಸಿ ನಾದ ಅಥವಾ ಶಬ್ದವು ಶ್ರಾವ್ಯತೆಯ ಮಿತಿಯಲ್ಲಿ ಇರಬಹುದು ಅಥವಾ ಈ ಮಿತಿಯ ಕೆಳಗೆ ಮತ್ತು ಮೇಲೆ ಇದ್ದು ಶ್ರವಣಾತೀತವಾಗಬಹುದು. ಹೀಗೆ ನಾದ ಎಂಬುದನ್ನು ಚಲನೆ ಎಂಬ ವಿಶಾಲಾರ್ಥದ ಕಾರ್ಯ-ಕಾರಣ ಭಾವದಿಂದ ಓದಿಕೊಂಡರೆ ನೃತ್ತವೂ ನಾದಾಧೀನ. ಹಾಗಾದರೆ ಚಲಿಸಿದ್ದೆಲ್ಲ ನಾದವೇ, ನೃತ್ತವೇ, ಎಂಬ ಪ್ರಶ್ನೆ ನ್ಯಾಯವಾಗಿಯೇ ಏಳುತ್ತದೆ. ಚಲಿಸಿದ್ದೆಲ್ಲ ನಾದವೇ ; ನಾವು ಅದನ್ನು ಕೇಳಲಾಗಬಹುದು ಅಥವಾ ಆಗದಿರಬಹುದು. ಚಲಿಸಿದ್ದೆಲ್ಲ ನೃತ್ತವೇ ಎಂದು ವಿಶೇಷಾರ್ಥದಲ್ಲಿ ಹೇಳಬಹುದು : ಶಂಕರನೂ ನಾದತನುವೂ ಆದ ಶಿವನನ್ನು ಶ್ರೀ ಶಾರ್ಙ್ಗದೇವನು ನಂದಿಕೇಶ್ವರನಿಂದ ಆಂಗಿಕಂ ಭುವನಂ ಯಸ್ಯ ಎಂದು ಉದ್ಧರಿಸಿಕೊಂಡು ವರ್ಣಿಸಿದ್ದಾನೆ, ತನ್ನ ನರ್ತನಾಧ್ಯಾಯದ ಮಂಗಳ ಶ್ಲೋಕದಲ್ಲಿ. ಆಂಗಿಕ ವಿಕ್ಷೇಪವೇ ನೃತ್ತ. ಇಡೀ ಭುವನದ, ಸ್ಥಾವರಜಂಗಮ ಜಗತ್ತಿನ ಚಲನೆಯೆಲ್ಲವೂ ನಾದಬ್ರಹ್ಮದ ಆಂಗಿಕಾಭಿನಯವೇ, ಶಿವನ ನೃತ್ತವೇ, ಎಂದು ಹೇಳಬಹುದು. ನಟರಾಜನ ನೃತ್ತಾವಸಾನದಲ್ಲಿ ಅಕ್ಷರ ಸಮಾಮ್ನಾಯವೂ ಅದಕ್ಕೆ ವಿಷಯವಾದ ವಿಶ್ವವೂ ಸೃಷ್ಟಿಯಾದುವೆಂದೂ ಶಿವನ ಅಂಗಿಕಾಭಿನಯ (ನೃತ್ತ) ದಿಂದ ಅದರ ಸ್ಥಿತಿಯೆಂದೂ, ರುದ್ರನ ತಾಂಡವನೃತ್ತದಿಂದ ಅದರ ಲಯವೆಂದೂ ಸನಾತನಿಗಳು ನಂಬುತ್ತಾರೆ.

ಶಾರ್ಙ್ಗದೇವನ ದೃಷ್ಟಿಯಲ್ಲಿ ನಾದದೇಹಿಯಾದ ಗೀತವನ್ನು ವಾದ್ಯವು ಅವಲಂಬಿಸುತ್ತದೆ. ಇವೆರಡನ್ನೂ ನೃತ್ತವು ಅವಲಂಬಿಸುವುದರಿಂದ ಅದೂ ನಾದಾಧೀನವೇ.

ಗೀತವೂ ಶಂಕರನೂ ನಾದದೇಹಿಗಳೆಂಬುದನ್ನು ಶ್ರೀ ಶಾರ್ಙ್ಗದೇವನು ಗ್ರಂಥಾರಂಭದ ಮಂಗಳಾಚರಣೆ ಯಲ್ಲೇ ಸೂಚಿಸಿದ್ದಾನೆ. ಅಲ್ಲದೆ ಗೀತವು ಪ್ರಧಾನವಾದುದರಿಂದ ಅದನ್ನು ಮೊದಲು ಹೇಳುತ್ತೇನೆಂಬ ಅವನ ಪ್ರತಿಜ್ಞಾವಾಕ್ಯವನ್ನಿಲ್ಲಿ ಸ್ಮರಿಸಬಹುದು.[3] ಗೀತವೂ (ಎಂದರೆ ಸಾಹಿತ್ಯಾರ್ಥ ಮತ್ತು ಗೇಯಾರ್ಥಗಳನ್ನುಳ್ಳ, ಮನಃ ಸಂಕಲ್ಪಚಾಲಿತವಾದ ರಚನಾವಿಶೇಷ) ಗೀತಪ್ರವೃತ್ತಿಯೂ ಹುಟ್ಟುವುದು ಜಗತ್ತಿನಲ್ಲಿರುವ ಎಲ್ಲಾ ಜೀವರಾಶಿ ಗಳಲ್ಲಿಯೂ ಮನುಷ್ಯದೇಹದಲ್ಲಿ ಮಾತ್ರ. ಅದಕ್ಕೆಂದೇ ಮನುಷ್ಯದೇಹದ ಹುಟ್ಟು, ಸ್ವಭಾವಗಳನ್ನು ಈ ಪ್ರಕರಣದಲ್ಲಿ ಗ್ರಂಥಕಾರನು ವರ್ಣಿಸಿರುವುದು. ಇದರ ನಂತರ ಗೀತೋಪಯುಕ್ತವಾದ ಶ್ರುತಿ, ಸ್ವರ, ಗ್ರಾಮ, ಮೂರ್ಛನೆ, ತಾನ, ವರ್ಣಾಲಂಕಾರಗಳು ಮುಂತಾದವುಗಳನ್ನೂ ಗೀತವಿಶ್ಲೇಷಣಾಪ್ರಯೋಜಕಗಳಾದ ಜಾತಿ, ಕಪಾಲ ಕಂಬಲ ಗಳನ್ನೂ ಅವನು ವರ್ಣಿಸಿದ್ದಾನೆ. ನಂತರ ಗೀತದ ಗೌಣ (abstract) ಸ್ವರೂಪವಾದ ರಾಗವನ್ನು ಎರಡನೆಯ ಅಧ್ಯಾಯದಲ್ಲಿ ಹೇಳಿದೆ. ಗೀತ ಮತ್ತು ರಾಗಗಳಿಗೆ ಸಾಧಾರಣವೂ, ಮೂಲಭೂತವೂ, ಆಲಂಕಾರಿಕವೂ ಆಗಿರುವ ಗಮಕ, ಸ್ಥಾಯಾವಾಗ ಮುಂತಾದವುಗಳನ್ನೂ, ಪ್ರಸಂಗವಶದಿಂದ ವಾಗ್ಗೇಯಕಾರ, ಗಾಯಕ, ಬೃಂದ ಮುಂತಾದವುಗಳನ್ನೂ ಮೂರನೆಯ ಪ್ರಕೀರ್ಣಕಾಧ್ಯಾಯದಲ್ಲಿ ಹೇಳಿದೆ. ಗೀತಗಳನ್ನು ರಚಿಸುವ ವಾಗ್ಗೇಯಕಾರ ಮತ್ತು ಅವುಗಳನ್ನು ಹಾಡುವ ಗಾಯಕ, ಬೃಂದ, ಮೊದಲಾದವರ ಸಂಕಲ್ಪದಿಂದ ತಾನೇ ನಾದತನುವಾದ ಗೀತವು ಉದ್ಧರ ಜಗದ್ಗೀತವಾಗಿರುವುದು ! ಆದುದರಿಂದಲೇ ಇವರುಗಳ ವರ್ಣನೆಯ ನಂತರವೇ ವಿವಿಧ ಗೀತಪ್ರಕಾರಗಳ ವರ್ಣನೆ, ನಾಲ್ಕನೆಯ ಪ್ರಬಂಧಾಧ್ಯಾಯದಲ್ಲಿ. ಸಂಗೀತದ ದೃಷ್ಟಿಯಲ್ಲಿ, ಹಾಡಿನಲ್ಲಿ ಗೇಯಾರ್ಥವೇ ಪ್ರಧಾನ ; ವಾಗರ್ಥವು ಮುಖ್ಯವಾದರೂ ಗೇಯಾರ್ಥಕ್ಕೆ ಉಪಷ್ಟಂಭಕವಾಗಿಯೂ ಉಪಕಾರಕವಾಗಿಯೂ ಇರುವುದು. ಆದುದ ರಿಂದಲೇ ಗೇಯಾರ್ಥವನ್ನು ಮೊದಲನೆಯ ಮೂರು ಅಧ್ಯಾಯಗಳಲ್ಲಿ ಹೇಳಿದ ಮೇಲೆ ನಾಲ್ಕನೆಯದರಲ್ಲಿ ವಾಗರ್ಥ

---

3 ಶಾರ್ಙ್ಗದೇವ, ಉ. ಗ್ರಂ., i, 1, 25. ಪು. 15.

ಭೂಯಿಷ್ಠವಾದ ಪ್ರಬಂಧಗಳ ವರ್ಣನೆ. ಗೀತದಲ್ಲಿ ತಾಳವು ಮುಖ್ಯವಾದರೂ, ಅವಿಭಾಜ್ಯ-ಅನಿವಾರ್ಯವಾಗಿದ್ದರೂ, ಅದಕ್ಕೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಅದಕ್ಕಾಗಿಯೇ ಗೀತಾಂಗಗಳಲ್ಲಿ ಅದಕ್ಕೆ ಕಡೆಯ ಸ್ಥಾನ. ಅಲ್ಲದೆ ಗೀತ, ವಾದ್ಯ, ನೃತ್ತಗಳಲ್ಲಿ ಸಾಮ್ಯವನ್ನು ಸ್ಥಾಪಿಸಿ ಸಾಧಿಸುವುದು ತಾಳವೇ. ಆದುದರಿಂದಲೇ ಇವುಗಳಿಗೆ ಸೇತುವೆಯ ಸ್ಥಾನದಲ್ಲಿ ತಾಳವನ್ನು ವರ್ಣಿಸಿರುವುದು.

ಗೀತವಾದನಂತರ ವಾದ್ಯಕ್ಕೆ ಸ್ಥಾನ. ಆದುದರಿಂದ ಅದು ಆರನೆಯ ಅಧ್ಯಾಯದಲ್ಲಿ ವರ್ಣಿತವಾಗಿದೆ. ಇವೆರಡನ್ನೂ ಅವಲಂಬಿಸುವುದು ನೃತ್ತ. ಅದಕ್ಕಾಗಿ ಕಡೆಯ ಅಧ್ಯಾಯದಲ್ಲಿ ಅದನ್ನು ಹೇಳಲಾಗಿದೆ.

ಗೀತವಾದ್ಯನೃತ್ತಗಳನ್ನು ಮೂರನ್ನೂ ತೌರ್ಯತ್ರಿಕವೆಂಬ ಸಮುಚ್ಚಯ ಶಬ್ದದಿಂದ ಸಂಗೀತಶಾಸ್ತ್ರದಲ್ಲಿ ವ್ಯವಹರಿಸಿದೆ. ತಿಳಿದವರು ತೌರ್ಯತ್ರಿಕವು ರಸಪ್ರಧಾನವಾಗಿರಬೇಕೆಂದು ಇಚ್ಛಿಸುತ್ತಾರೆ :

ರಸಪ್ರಧಾನಮಿಚ್ಛಂತಿ ತೌರ್ಯತ್ರಿಕಮಿದಂ ವಿದಃ[4]

ಆದುದರಿಂದಲೇ ಅವರನ್ನು ರಸಿಕರೆನ್ನುವುದು. ತೌರ್ಯತ್ರಿಕ ವರ್ಣನೆಯಾದಮೇಲೆ ಅವುಗಳ ಅರ್ಥವಾದ ರಸವನ್ನು ಗ್ರಂಥಾಂತ್ಯದಲ್ಲಿ ವರ್ಣಿಸಿರುವುದು ಸಮುಚಿತವಾಗಿದೆ. ಏಕೆಂದರೆ, ವಸ್ತುಜ್ಞಾನವಾದ ಹೊರತು ಅದರ ಅರ್ಥವು ಹೊರಪಡುವಂತಿಲ್ಲ.

ಗೀತವನ್ನು ಮೊದಲು ಹೇಳಲು ತೊಡಗಿ ಅದನ್ನು ಪದಾರ್ಥಸಂಗ್ರಹದನಂತರದ ಮೊಟ್ಟಮೊದಲನೆಯ ಸಂದರ್ಭವಾದ ಈ ಪ್ರಕರಣದ ಮೊದಲನೆಯ ಶ್ಲೋಕದಲ್ಲಿ ಮೊದಲನೆಯ ಪದವನ್ನೇ ಗೀತಂ ಎಂದು ಪ್ರಥಮಾ ವಿಭಕ್ತಿಯಲ್ಲಿ ಬಳಸಿರುವ ಗ್ರಂಥಕಾರನ ಚಮತ್ಕಾರವು ಇಲ್ಲಿ ಗಮನಾರ್ಹವಾಗಿದೆ.

**ನಾದೇನ ವ್ಯಜ್ಯತೇ ವರ್ಣಃ ಪದಂ ವರ್ಣಾತ್ ಪದಾದ್ ವಚಃ |**
**ವಚಸೋ ವ್ಯವಹಾರೋಽಯಂ ನಾದಾಧೀನಮತೋ ಜಗತ್ || 2 ||** 51

ವರ್ಣವು ನಾದದಿಂದ ವ್ಯಕ್ತವಾಗುತ್ತದೆ ; ಪದವು ವರ್ಣದಿಂದ ; ಪದದಿಂದ ವಾಕ್ಯ ; ವಾಕ್ಯದಿಂದಲೇ ಈ (ಪ್ರಾಪಂಚಿಕ) ವ್ಯವಹಾರ. ಆದುದರಿಂದ ಜಗತ್ತು ನಾದಕ್ಕೆ ಅಧೀನವಾಗಿದೆ.

ಜಗತ್ತಿನಲ್ಲಿ ಎಲ್ಲ ವ್ಯಾಪಾರಗಳು ನಡೆಯುವುದೂ ಅರ್ಥದಿಂದ—ಅರ್ಥವನ್ನು ಉಂಟುಮಾಡಬೇಕೆಂಬ ಅಥವಾ ಗ್ರಹಿಸಬೇಕೆಂಬ ಪ್ರವೃತ್ತಿಯಿಂದ. ನಾದಕ್ಕೂ ಅರ್ಥಕ್ಕೂ ಇರುವ ಸಂಬಂಧವನ್ನು ಇಲ್ಲಿ ಪುನಃ ಸ್ಮರಿಸಬಹುದು :

ವೈಖರೀ ಶಕ್ತಿನಿಷ್ಪತ್ತಿಃ ಮಧ್ಯಮಾ ಶ್ರುತಿಗೋಚರಾ |
ದ್ಯೋತಿತಾರ್ಥಂತು ಪಶ್ಯಂತೀ ಸೂಕ್ಷ್ಮಾವಾಗನಪಾಯಸೀ ||[5]

ಲೋಕದಲ್ಲಿ ನಡೆಯುವ ಎಲ್ಲ ವ್ಯಾಪಾರಗಳಿಗೂ ವಾಕ್ಕೇ ಮೂಲವೆಂದು ಕಲ್ಲಿನಾಥನು ಹೇಳುತ್ತಾನೆ[6]. ನಾದ ಎನ್ನುವುದಕ್ಕೆ ಧ್ವನಿಯೆಂಬ ಪರ್ಯಾಯ ಶಬ್ದವನ್ನು ಸಿಂಹಭೂಪಾಲನು ಸ್ವೀಕರಿಸುತ್ತಾನೆ. ಧ್ವನಿಯನ್ನು ಅವನು '(ನಿರ್ದಿಷ್ಟವಾದ ವರ್ಣವೊಂದನ್ನು ಘೋಷಿಸಿದಾಗ) ಹೊರಗಡೆಯಿಂದ ಕಿವಿಯ ಮೂಲಕ ಮಂದ-ತೀವ್ರ ಭಾವ

4 ಶಾರ್ಙ್ಗದೇವ, ಉ. ಗ್ರಂ., vii, 1351, ಪು. 397.

5 ಶ್ರುತಿಯ ಉದ್ಧೃತಿ, ಲಲಿತಾಸಹಸ್ರನಾಮ ಭಾಷ್ಯದಲ್ಲಿ, ಪು. 143.

6 ಕಲ್ಲಿನಾಥ, ಸಂಗೀತ ಕಲಾನಿಧಿ, ಸಂಗೀತರತ್ನಾಕರ ವ್ಯಾಖ್ಯೆ, ಪು. 22.

ಗಳಲ್ಲಿ ವರ್ಣದೊಡನೆ ಅಂಟಿಕೊಂಡೇ ಬರುವಂತಹುದು' ಎಂದು ವರ್ಣಿಸಿ[7] ತನ್ಮೂಲಕ ಸಾಮಾನ್ಯ ಶಬ್ದಕ್ಕೂ ನಾದಕ್ಕೂ ಇರುವ ವ್ಯತ್ಯಾಸವನ್ನು ಸ್ಪಷ್ಟವಾಗಿ ತೋರಿಸಿದ್ದಾನೆ. ಜಗತ್ತಿನಲ್ಲಿ ಎಲ್ಲ ವ್ಯವಹಾರವೂ ಹುಟ್ಟುವುದೂ ಬೆಳೆಯುವುದೂ ಒಂದು ಜೀವಿಯು ಮತ್ತೊಂದರೊಡನೆ ಮಾನಸಿಕವಾಗಿ ಸಂಪರ್ಕ ಬೆಳೆಸಲು ಮೂಲಭೂತವಾಗಿ ಹೊಂದಿರುವ ಸಹಜ ಪ್ರವೃತ್ತಿಯಿಂದ. ಈ ಪ್ರವೃತ್ತಿ ಕಾರ್ಯಗತವಾಗುವುದು ದೈಹಿಕ ಸಂಜ್ಞೆಗಳೇ ಮೊದಲಾದ ಉಪ-ಸಾಧನಗಳಿಂದಾದರೂ ಅದು ಸುವ್ಯವಸ್ಥಿತವಾಗಿ ಬೆಳೆದು ಮಾನವನ ನಾಗರಿಕತೆ ಮತ್ತು ಸಂಸ್ಕೃತಿಗಳಿಗೆ ಆಧಾರವಾಗಿರುವುದು ಮುಖ್ಯವಾಗಿ ಶಾಬ್ದಿಕ ಸಾಮಗ್ರಿಸಾಧನಗಳಿಂದಲೇ. ಇದನ್ನೇ ಪ್ರಾಚೀನ ಭಾರತೀಯರು ವ್ಯವಹಾರ ಮೂಲವಾದ ನಾದ ಎಂದು ಭಾವಿಸಿದರು. ಭಾಷಾ ಸೌಕರ್ಯವಿಲ್ಲದ ಇತರ ಪ್ರಾಣಿಗಳಿಗೂ ಈ ನಿರೂಪಣೆಯನ್ನು ಅನ್ವಯಿಸಲು, ಹಾಗೂ ಮಾನವಗೋಚರವಾಗದಷ್ಟು ಸೂಕ್ಷ್ಮವಾಗಿರುವ ಶಬ್ದವನ್ನುಂಟುಮಾಡುವ ಪ್ರಾಣಿರಾಶಿಯನ್ನೂ ಸೇರಿಸಿ ಹೇಳಲು, ನಾದವನ್ನು ಅವರು ಪರಾ, ಪಶ್ಯಂತೀ ಮಧ್ಯಮಾ, ವೈಖರೀ ಎಂಬ ನಾಲ್ಕು ಹಂತಗಳಲ್ಲಿ ವಿಂಗಡಿಸಿದರು. ನಾದವನ್ನು ಕುರಿತ ನನ್ನ ಈ ದೃಷ್ಟಿಕೋನವು ಬಹುಶಃ ಹೊಸದು. ನಾದದ ಈ ನಾಲ್ಕು ಅವಸ್ಥೆಗಳ ಬಗ್ಗೆ ಪ್ರಾಚೀನ ಭಾರತದಲ್ಲಿ ತಾಂತ್ರಿಕರು, ವೇದಾಂತಿಗಳು, ವೈಯಾಕರಣರು ಮುಂತಾದವರು ಆಧ್ಯಾತ್ಮಿಕವೂ ತಾರ್ಕಿಕವೂ ಆದ ಜಿಜ್ಞಾಸೆಯನ್ನು ವಿಪುಲವಾಗಿ ಮಾಡಿ ಈ ನಾದದ ಕಲ್ಪನೆಯ ಹಿರಿಮೆಯನ್ನು ತೋರಿಸಿಕೊಟ್ಟಿದ್ದಾರೆ. ಪ್ರಾಚೀನ ಮಾನವ ಶಾಸ್ತ್ರದ (anthropology) ತತ್ತ್ವಗಳನ್ನೂ ಇದು ಮೇಲ್ಕಂಡ ರೀತಿಯಲ್ಲಿ ಸಮರ್ಥಕವಾಗಿ ವಿವರಿಸುತ್ತದೆಂಬುದು ಗಮನಾರ್ಹವಾಗಿದೆ. ಮನುಷ್ಯನ ಮಾನಸಿಕ ವ್ಯವಹಾರವೆಲ್ಲ—ಆದುದರಿಂದ ಅವನ ಬಾಹ್ಯಜಗತ್ತಿನ ವ್ಯವಹಾರವೆಲ್ಲ—ನಡೆಯುವುದು ಈಗಾಗಲೇ[8] ಹೇಳಿರುವ ಏಕಸೋಪಾನಕ ಅರ್ಥಸಂಕೇತ ಮತ್ತು ವಿವಿಧ ಸೋಪಾನಕ ಅರ್ಥಸಂಕೇತಗಳಿಂದ. ಇವುಗಳಲ್ಲಿ ಭಾಷೆಯ ಆವಿರ್ಭಾವಕ್ಕೆ ಕಾರಣವಾದುದು ಎರಡನೆಯ ವಿಧದ ಸಂಕೇತವಾದ ಪದ. ಅದಕ್ಕೆ ನಿರ್ದಿಷ್ಟವಾದ ಅರ್ಥವೂ ಬಳಕೆಯೂ ದೊರೆಯುವುದು ಶಬ್ದದ ಮೂಲಕವೇ. ಸ್ಥಿರತೆಯೂ ಸಮುದಾಯಸಮ್ಮತಿಯ ಮೂಲಕ ಬಳಕೆಯೂ ಪದಗಳಿಗೆ ದೊರೆಯದಿದ್ದರೆ ಭಾಷೆಯಲ್ಲಿನ ವ್ಯವಸ್ಥೆಯೂ ಆದುದರಿಂದ ನಾಗರಿಕತೆಯೂ ಅಸಾಧ್ಯವಾಗುತ್ತಿದ್ದವು[9]. ಯೆಸ್ಪರ್ಸನ್ನನೂ ಶಬ್ದದಿಂದ ವರ್ಣವೂ ವರ್ಣದಿಂದ ಪದವೂ ಪದದಿಂದ ಭಾಷೆಯೂ (ಆದುದರಿಂದ ವ್ಯವಹಾರವೂ) ಹುಟ್ಟಿತೆಂದು ವಾದಿಸುತ್ತಾನೆ[10].

ವಾಕ್ಕಿನಿಂದ ಜಗತ್ತಿನ ವ್ಯವಹಾರ ಎಂಬ ಪ್ರಮೇಯವನ್ನು ಶ್ರೀ ಶಾರ್ಙ್ಗದೇವನು ವೇದದಿಂದಲೇ ಪಡೆದುಕೊಂಡಿದ್ದಾನೆ :

ಚತ್ವಾರಿ ವಾಕ್ ಪರಿಮಿತಾ ಪದಾನಿ ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ।
ಗುಹಾತ್ರೀಣಿ ನಿಹಿತಾ ನೇಂಗಯಂತಿ, ತುರೀಯಂ ವಾಚೋ ಮನುಷ್ಯಾ ವದಂತಿ ॥[11]

---

7 ಸಿಂಹಭೂಪಾಲ, ' ಕೋऽಯಂ ಧ್ವನಿಃ ? ಯೋऽಯಂ ವರ್ಣವಿಶೇಷಮಪ್ರತಿಪದ್ಯಮಾನಸ್ಯ ದೂರಾತ್ ಕರ್ಣಪಥಮವತರತಿ ಮಂದತ್ವತೀವ್ರತ್ವಭೇಧಂ ಚ ವರ್ಣೇಷ್ವಾಸಂಜಯತಿ ಸ ಧ್ವನಿರಿತ್ಯುಚ್ಯತೇ ', ಸಂಗೀತಸುಧಾನಿಧಿ, ಸಂಗೀತರತ್ನಾಕರ ವ್ಯಾಖ್ಯೆ, ಪು. 22.

8 ಶಾರ್ಙ್ಗದೇವ, ಸಂಗೀತರತ್ನಾಕರ, (I, 1, 21) ಮತ್ತು ವ್ಯಾಖ್ಯಾನ.

9 Susanne K. Langer, Philosophy in a New Key, pp. 104 ff.

10 Otto Jespersen, Language, Its Nature, Development and Origin, pp. 418, 420, 437, *et seq.*

11 ಋಗ್ವೇದ, I, 22, 164, 45.

## 2. ಪಿಂಡೋತ್ಪತ್ತಿ ಪ್ರಕರಣ

ವಾಕ್ಕಿನ ಚರಣ <ಪದ>ಗಳು (ವರ್ಗಗಳು) ನಾಲ್ಕೆಂದು ನಿಯಮಿತವಾಗಿವೆ. ಈ ನಾಲ್ಕನ್ನೂ ಬ್ರಹ್ಮವಿದರಾದ ಮೇಧಾವಿಗಳು (ಮಾತ್ರ) ತಿಳಿಯಬಲ್ಲರು. (ಅವುಗಳಲ್ಲಿ) ಮೂರು ರಹಸ್ಯವಾಗಿದ್ದುಕೊಂಡು ಬೆಳಕಿಗೆ ಬರುವುದಿಲ್ಲ[12] (ಸ್ಪಷ್ಟವಾಗಿ ತಿಳಿಯುವುದಿಲ್ಲ). ನಾಲ್ಕನೆಯದನ್ನು (ಮಾತ್ರ) ಮಾನವರು ಆಡುತ್ತಾರೆ (ವ್ಯವಹರಿಸುತ್ತಾರೆ).

ವಾಗ್ದೇವತೆಯನ್ನು ಕುರಿತ ಪಶುಹೋಮದಲ್ಲಿ ಹವಿಯನ್ನು ಅರ್ಪಿಸುವ ಕಾಲದಲ್ಲಿ ಪುರೋನುವಾಕ್ಯಾ ಮಂತ್ರವಾಗಿ ಈ ಋಕ್ಕನ್ನು ಪಠಿಸಲಾಗುತ್ತದೆ. ಜಗತ್ತಿನ ವ್ಯವಹಾರವೆಲ್ಲ ವಾಙ್ಮೂಲವೆಂಬ ಈ ಅರ್ಥವನ್ನು ಚತ್ವಾರಿ ವಾಕ್ ಎಂಬ ಶಬ್ದದ ವಿವಿಧ ದೃಷ್ಟಿಕೋನಗಳಲ್ಲಿ ನಿರ್ವಚನ ಮಾಡುವುದರಿಂದ ಬೇರೆ ಬೇರೆ ವ್ಯಾಪ್ತಿಗಳಲ್ಲಿ ಹೇಗೆ ಪಡೆಯಲಾಗುವುದೆಂಬುದನ್ನು ಯಾಸ್ಕನೂ[13] ಸಾಯಣಾಚಾರ್ಯನೂ ವಿವರಿಸುತ್ತಾರೆ.

1. ವೈದಿಕರು, ಸಕಲ ವೇದವಾಙ್ಮಯದ ಸಾರಭೂತವಾದ ಭೂಃ ಭುವಃ ಸುವಃ ಎಂಬ ಮೂರು ವ್ಯಾಹೃತಿಗಳೂ ವೇದಾರ್ಥವೂ, ಪ್ರಣವವೂ ಆದ ಓಂಕಾರವೂ ಸೇರಿ ಚತ್ವಾರಿ ವಾಕ್ ಎನ್ನುತ್ತಾರೆ.

ಓಂಕಾರೋ ಮಹಾ ವ್ಯಾಹೃತಯಶ್ಚೇತ್ಯಾರ್ಷಂ : ಸರ್ವವೈದಿಕವಾಗ್ಜಾಲಸ್ಯ ಸಂಗ್ರಹರೂಪಾಃ ಭೂರಾದಯಸ್ತಿಸ್ರೋ ವ್ಯಾಹೃತಯಃ ಪ್ರಣವ ಏಕ ಇತಿ ವೇದತ್ರಯಸಾರತ್ವಾತ್ ಸ ಪ್ರಣವಾಸು ವ್ಯಾಹೃತಿಷು ಸರ್ವಾವಾಕ್ ಪರಿಮಿತ ಇತಿ ಕೇಚನ ವೇದವಾದಿನೋ ವದಂತಿ[14].

2. ವೈಯಾಕರಣರು, ಎಲ್ಲಾ ವಾಕ್‌ಪ್ರಪಂಚವೂ ನಾಮ, ಆಖ್ಯಾತ, ಉಪಸರ್ಗ, ನಿಪಾತಗಳೆಂಬ ವಾಕ್ಕಿನ ನಾಲ್ಕು ವರ್ಗಗಳಲ್ಲಡಗಿದೆ ಎನ್ನುತ್ತಾರೆ. ಯಾವ ಶಬ್ದದ ಉಚ್ಚಾರದಿಂದ ಒಂದು ದ್ರವ್ಯವು ಗೋಚರಿಸುತ್ತದೆಯೋ ಅದು ನಾಮಪದ. ಅಥವಾ ಅರ್ಥವ್ಯತ್ಯಾಸಗಳನ್ನು ಸಂಬಂಧದ ಮೂಲಕ ತೋರಿಸುವ ಪ್ರತ್ಯಯಗಳನ್ನೂ ಲಿಂಗ–ವಚನಭೇದಗಳನ್ನೂ ಉಳ್ಳದ್ದು ನಾಮಪದ. ವಿವಿಧ ಕ್ರಿಯಾ ಸಂದರ್ಭಗಳಲ್ಲಿ ಅನ್ವಯವಾಗುವ, ತನ್ನ ಪೂರ್ವಾವಸ್ಥೆಯನ್ನು ಪುನಃ ಪಡೆಯಬಲ್ಲ, ಕಾರ್ಯದ ಬೆಳವಣಿಗೆಯನ್ನು ಸೂಚಿಸಬಲ್ಲ ಶಬ್ದಕ್ಕೆ ಆಖ್ಯಾತವೆಂದು ಹೆಸರು. ಇದು ಉತ್ಪತ್ತಿ, ಸ್ಥಿತಿ, ಪರಿಣಾಮ, ವೃದ್ಧಿ, ಹಾನ ಮತ್ತು ನಾಶವೆಂದು ಆರು ಬಗೆ. ನಾಮ ಮತ್ತು ಆಖ್ಯಾತ ಪದಗಳ ಅರ್ಥಗಳು ಯಾವ ಶಬ್ದಗಳನ್ನು ಸೇರಿಸುವುದರಿಂದ (ಉದಾ : ಅ, ಪರ, ಪ್ರ, ವಿ ಇತ್ಯಾದಿ) ಮಾರ್ಪಡುತ್ತವೆಯೋ ಅವು ಉಪಸರ್ಗಗಳು. ಅರ್ಥವನ್ನು ಉಪಮೆ, ಸಂಯೋಜನ, ಆಧಿಕ್ಯ, ನಿಷೇಧ ಇತ್ಯಾದಿ ಭಾವಗಳಲ್ಲಿ ಸ್ಪಷ್ಟಪಡಿಸುವ ಚ, ವೈ, ತು, ಹಿ ಎಂಬ ಶಬ್ದಗಳು ನಿಪಾತಗಳು.

ನಾಮಾಖ್ಯಾತೇ ಚೋಪಸರ್ಗನಿಪಾತಶ್ಚೇತಿ ವೈಯಾಕರಣಾಃ[13]

ಪತಂಜಲಿಯ ಪ್ರಕಾರ ಚತ್ವಾರಿ ವಾಕ್ ಪದಾನಿ ಎಂದರೆ ಜಾತಿಶಬ್ದ, ಗುಣಶಬ್ದ, ಕ್ರಿಯಾಶಬ್ದ, ದ್ರವ್ಯಶಬ್ದ ಎಂಬ ನಾಲ್ಕು.

ಈ ಎರಡು ದೃಷ್ಟಿಗಳೂ ಜಗತ್ತಿನ ಎಲ್ಲಾ ಭಾಷೆಗಳ ರಚನೆ ಮತ್ತು ಸ್ವರೂಪಗಳನ್ನು ಒಳಗೊಳ್ಳುವುದರಿಂದ ವ್ಯವಹಾರವು ವಾಙ್ಮೂಲವಾಗಿರುವುದು ಸ್ಪಷ್ಟವೇ ಆಗಿದೆ.

---

12 ಸಾಯಣಾಚಾರ್ಯ, ಇದೇ ಋಕ್ಕಿಗೆ ವ್ಯಾಖ್ಯಾನ : ನೇಂಗಯಂತಿ=ನ ಪ್ರಕಾಶಂತ ಇತ್ಯರ್ಥಃ.

13 ಯಾಸ್ಕ, ನಿರುಕ್ತ, XIII, 9.

14 ತೈತ್ತಿರೀಯ ಉಪನಿಷತ್, I, 5 ರಲ್ಲಿ ಇದರ ವಿಸ್ತಾರವಿದೆ.

## 2. ಪಿಂಡೋತ್ಪತ್ತಿ ಪ್ರಕರಣ

3. ಯಾಜ್ಞಿಕರು ಎಲ್ಲಾ ವಾಕ್ಕೂ ಮಂತ್ರ, ಕಲ್ಪ, ಬ್ರಾಹ್ಮಣ ಮತ್ತು ವ್ಯಾವಹಾರಿಕವೆಂಬ ನಾಲ್ಕು ಪದ ವಿಧಗಳಲ್ಲಿ ಅಡಗಿದೆಯೆಂದು ಹೇಳುತ್ತಾರೆ. ಯಾವುದರ ಅರ್ಥವನ್ನು ಅನುಷ್ಠಾನಕ್ಕೆ ತರಬೇಕಾಗಿದೆಯೋ ಅಂತಹ ವೇದ ಭಾಗವು ಮಂತ್ರವೆಂದೂ ಅದರ ಅನುಷ್ಠಾನಕ್ಕೆ ವಿಧಾನವನ್ನು ಹೇಳುವುದು ಕಲ್ಪವೆಂದೂ ಮಂತ್ರದ ಅರ್ಥ, ತಾತ್ಪರ್ಯಗಳನ್ನು ತಿಳಿಸುವ ಭಾಗವು ಬ್ರಾಹ್ಮಣವೆಂದೂ, ಲೌಕಿಕ ವೈದಿಕರು ನಿತ್ಯಜೀವನದಲ್ಲಿ ಬಳಸುವ ಭಾಷಾ ಸಾಮಗ್ರಿಯು ವ್ಯಾವಹಾರಿಕವೆಂದೂ ಸಂಜ್ಞೆ.

ಮಂತ್ರಃ ಕಲ್ಪೋ ಬ್ರಾಹ್ಮಣಂ ಚತುರ್ಥೀ ವ್ಯಾವಹಾರಿಕೀತಿ ಯಾಜ್ಞಿಕಾಃ [13]

4. ನಿರುಕ್ತಕಾರರು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ವ್ಯಾವಹಾರಿಕವೆಂಬ ನಾಲ್ಕೇ ವಾಕ್ಕಿನ ಸಮಗ್ರ ಸ್ವರೂಪವೆನ್ನುತ್ತಾರೆ.

ಋಚೋ ಯಜೂಂಷಿ ಸಾಮಾನಿ ಚತುರ್ಥೀ ವ್ಯಾವಹಾರಿಕೀತಿ ನೈರುಕ್ತಾಃ [13]

5. ಐತಿಹಾಸಿಕರು ಸರ್ಪ (ಎದೆಯಿಂದ ದೇಕಿಕೊಂಡು ಮುನ್ನಡೆಯುವ ಎಲ್ಲಾ ಪ್ರಾಣಿರಾಶಿ) ಪಕ್ಷಿ, ಕ್ರಿಮಿ ಕೀಟ ಮತ್ತು ವ್ಯಾವಹಾರಿಕವಾದ ಮಾನುಷೀ ಎಂಬ ನಾಲ್ಕೇ 'ಚತ್ವಾರಿ ವಾಕ್‌ಪದಾನಿ' ಎನ್ನುತ್ತಾರೆ.

ಸರ್ಪಾಣಾಂ ವಾಗ್ವಯಸಾಂ ಕ್ಷುದ್ರಸ್ಯ ಸರೀಸೃಪಸ್ಯ ಚತುರ್ಥೀ ವ್ಯಾವಹಾರಿಕೀತ್ಯೇಕೇ [13]

6. ಆತ್ಮವಾದಿಗಳು ಪಶುಷು ತೂಣವೇಷು, ಮೃಗೇಷು ಆತ್ಮನಿ ಎಂದು ನಾಲ್ಕು ವಿಧದಲ್ಲಿ ವಾಕ್ಸರ್ವಸ್ವವನ್ನು ವಿಂಗಡಿಸುತ್ತಾರೆ.

7. ಇತರರು—ಮುಖ್ಯವಾಗಿ ಶಾಕ್ತರು—ನಾದವನ್ನೂ ತದ್ಭವವಾದ ವಾಕ್ಕನ್ನೂ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂದು ವಿಂಗಡಿಸುತ್ತಾರೆ. ಶಬ್ದಬ್ರಹ್ಮವು ನಿರಾಕಾರ ನಿರ್ಗುಣ ಸ್ವರೂಪದಿಂದ ಸಾಕಾರ ಸಗುಣ ಸ್ವರೂಪವನ್ನು ಪಡೆಯುವ ವಿವಿಧ ಘಟ್ಟಗಳೇ ಪರಾ ಪಶ್ಯಂತೀ, ಮಧ್ಯಮಾ, ವೈಖರೀ.

ಕಾರಣ ಬಿಂದುವಿನಿಂದ ಅಭಿವ್ಯಕ್ತವಾದ ಶಬ್ದಬ್ರಹ್ಮವು ಅದರಲ್ಲೇ ಇನ್ನೂ ಪ್ರತಿಷ್ಠಿತವಾಗಿದ್ದು ನಿಷ್ಪಂದ ವಾಗಿದ್ದರೆ (ಚಲಿಸದಿದ್ದರೆ) ಅದು ಪರಾನಾದವಾಗುತ್ತದೆ. ಅದು ನಾಭಿಯವರೆಗೆ ಚಲಿಸಿ ಪ್ರಾಣವಾಯುವಿನಿಂದ ನಾಭಿಸ್ಥಾನದಲ್ಲಿ ವಿಮರ್ಶಾರೂಪವಾದ ಮನಸ್ಸಿನೊಡನೆ ಸೇರಿದರೆ ಪಶ್ಯಂತೀ ಎನ್ನಿಸಿಕೊಳ್ಳುತ್ತದೆ. ಈಗ ಕಾರಣ ಬಿಂದುವು ಕಾರ್ಯಬಿಂದುವಾಗಿ ಸಾಮಾನ್ಯ (ಸ್ವಲ್ಪ) ಸ್ಪಂದವನ್ನು ಪಡೆಯುತ್ತದೆ. ಅದೇ ಶಬ್ದಬ್ರಹ್ಮವು (ಕಾರ್ಯ ಬಿಂದುವು) ಅದೇ ವಾಯುವಿನೊಡನೆ ಚಲಿಸಿ ಹೃದಯದವರೆಗೆ ಚಲಿಸಿ ನಿಶ್ಚಯಾತ್ಮಕವಾದ ಬುದ್ಧಿಯೊಡನೆ ಸೇರಿ ವಿಶೇಷ ಸ್ಪಂದವನ್ನು ಪಡೆದರೆ ಮಧ್ಯಮಾ ವಾಕ್ಕಾಗುತ್ತದೆ. ಸಾಮಾನ್ಯ ಸ್ಪಂದವೆಂದರೆ ಎಲ್ಲಾ ಶಬ್ದಗಳಿಗೂ ಕಾರಣ ವಾಗಿರುವ ವಿವಿಧ ಸ್ಪಂದಗಳ ಸಾಮಾನ್ಯ ಸ್ವರೂಪ. ವಿಶೇಷ ಸ್ಪಂದವೆಂದರೆ ಉದ್ದಿಷ್ಟ ಶಬ್ದಕ್ಕೆ ವಿಶೇಷವಾಗಿ ಬೇಕಾಗುವ ಸ್ಪಂದ. ಅದೇ ಮುಖದವರೆಗೆ ಪ್ರಾಣವಾಯುವಿನೊಡನೆ ಚಲಿಸಿ ಕಂಠ ಮೊದಲಾದ ಸ್ಥಾನಗಳಲ್ಲಿ ಪ್ರಕಟವಾಗುವ ಅಕಾರಾದಿ ವರ್ಣಗಳನ್ನು ಇನ್ನೊಬ್ಬರ ಕಿವಿಯು ಗ್ರಹಿಸುವಷ್ಟು ಅಭಿವ್ಯಕ್ತಿಯನ್ನು ಪಡೆದರೆ ವೈಖರೀ ಆಗುತ್ತದೆ. ಶ್ರೀ ಶಂಕರಭಗವತ್ಪಾದರು ಇದನ್ನೇ ಸಂಗ್ರಹವಾಗಿ ಪ್ರಪಂಚಸಾರದಲ್ಲಿ ಹೇಳಿದ್ದಾರೆ.[15]

ನಾದ (ಬ್ರಹ್ಮ)ದಿಂದಲೇ, ಬಿಂದುವಿನಿಂದಲೇ ಸರ್ವವಾಙ್ಮಯದ ಸೃಷ್ಟಿ ಎಂಬ ಮಾತನ್ನು ಮತಂಗನೂ ಇತಿ ಕೇಚಿತ್ ಎಂದು ಮಾತ್ರ ಸೂಚಿಸಿ, ಬಹುಶಃ ಶಾಕ್ತರಿಂದ 'ನಾದಾದುತ್ಪದ್ಯತೇ ಬಿಂದುರ್ನಾದಾತ್ ಸರ್ವಂ

15 ಶ್ರೀ ಶಂಕರಭಗವತ್ಪಾದಾಚಾರ್ಯ, ಪ್ರಪಂಚಸಾರ, II, 4.

ಚ ವಾಙ್ಮಯಮ್ ' ಎಂದು ತನ್ನ ಬೃಹದ್ದೇಶಿಯ ನಾದೋತ್ಪತ್ತಿಪ್ರಕರಣದ 18 ನೆಯ ಶ್ಲೋಕದಲ್ಲಿ ಉದ್ಧರಿಸಿ ಹೇಳಿದ್ದಾನೆ.

ಬ್ರಹ್ಮಣಸ್ಪತಿಯೂ ವಾಚಸ್ಪತಿಯೂ ಆದ ಗಣಪತಿಯನ್ನು ವರ್ಣಿಸುವಾಗ ಮುದ್ದುಸ್ವಾಮಿದೀಕ್ಷಿತನು ತನ್ನ ಪ್ರಸಿದ್ಧವಾದ ವಾತಾಪಿಗಣಪತಿಂ ಭಜೇಹಂ ಎಂಬ ಕೃತಿಯಲ್ಲಿ ಪರಾದಿ ಚತ್ವಾರಿ ವಾಗಾತ್ಮಕಂ ಎಂದು ಸ್ತುತಿಸಿದ್ದಾನೆ.[16]

ಎರಡುವಿಧದ ನಾದ

**ಆಹತೋ ಽನಾಹತಶ್ಚೇತಿ ದ್ವಿಧಾ[2] ನಾದೋ ನಿಗದ್ಯತೇ ।**
**ಸೋ ಽಯಂ ಪ್ರಕಾಶತೇ ಪಿಂಡೇ ತಸ್ಮಾತ್ ಪಿಂಡೋ ಽಭಿಧೀಯತೇ** ॥ 3 ॥ 52

ನಾದವು ಆಹತ ಮತ್ತು ಅನಾಹತವೆಂದು ಎರಡು ಬಗೆಯಾಗಿ ಹೇಳಲ್ಪಡುತ್ತದೆ. ಅದು ಈ (ಮಾನವ) ಪಿಂಡದಲ್ಲಿ ಪ್ರಕಾಶಕ್ಕೆ ಬರುತ್ತದೆ. ಆದುದರಿಂದ ಪಿಂಡವು [ಈಗ] ಹೇಳಲ್ಪಡುತ್ತದೆ.

ಜೀವರಾಶಿಗಳಿಗೆಲ್ಲ ಸ್ವಪ್ರೇರಣೆಯಿಂದ ಶಬ್ದವನ್ನುಂಟುಮಾಡುವ ಶಕ್ತಿಯಿದ್ದರೂ ಸುವ್ಯವಸ್ಥೆಯಿಂದಲೂ, ವಿವೇಚನೆಯಿಂದಲೂ, ವೈವಿಧ್ಯದಿಂದಲೂ ಅರ್ಥಪ್ರಕಟನೆಯ ಉದ್ದೇಶದಿಂದಲೂ ನಾದವು ಅಭಿವ್ಯಕ್ತವಾಗುವುದು ಕೇವಲ ಮನುಷ್ಯಶರೀರದಲ್ಲಿಯೇ. ಅಲ್ಲದೆ ಅದನ್ನು ತನ್ನ ಆಲೋಚನಾತ್ಮಕ ಹಾಗೂ ಕಲ್ಪನಾತ್ಮಕ ವ್ಯವಹಾರಗಳಿಗೆ ಸಾಧನವನ್ನಾಗಿ ಬಳಸಿಕೊಂಡಿರುವುದೂ ಮಾನವನೊಬ್ಬನೇ. ನಾದದ ಆಹತ ಮತ್ತು ಅನಾಹತ ಭೇದಗಳೆರಡೂ ವ್ಯಕ್ತವಾಗುವುದೂ ಮನುಷ್ಯರಲ್ಲಿ ಮಾತ್ರ. ಅನಾಹತ ನಾದವನ್ನು ಎರಡು ರೀತಿಯಲ್ಲಿ ಅರ್ಥಮಾಡಬಹುದು. ಶ್ರವಣಯೋಗ್ಯವಾದ ನಾದಕ್ಕೆ ಕಾರಣರೂಪದಲ್ಲಿ ಗುಪ್ತಾವಸ್ಥೆಯಲ್ಲಿರುವುದನ್ನು ಅನಾಹತ ನಾದವೆನ್ನಬಹುದು. ಭೌತಿಕ ಸನ್ನಿವೇಶವು ದೊರೆತಾಗ ಅದು ವ್ಯಕ್ತನಾದವಾಗುವುದು. ಹೀಗೆ ಕಾರ್ಯಕಾರಣ ಸಂಬಂಧದಿಂದ ಇದು ವಿವಕ್ಷಿತವಾಗುತ್ತದೆ. ಆದುದರಿಂದ ಸಮಷ್ಟಿ-ವ್ಯಷ್ಟಿಗಳ ಸಂಬಂಧವನ್ನೇ ಸೂಚಿಸುವ ಬ್ರಹ್ಮ-ಜೀವರ ಬ್ರಹ್ಮಾಂಡ ಪಿಂಡಾಂಡಗಳ ಸಂಬಂಧವನ್ನೇ ಆಧ್ಯಾತ್ಮಿಕಮಟ್ಟದಲ್ಲಿ ಹೇಳಬಹುದು. ಅನಾಹತನಾದವು ಸಮಷ್ಟಿಯಲ್ಲಿದ್ದುಕೊಂಡು ಮನುಷ್ಯಶ್ರೇಷ್ಠರಾದ ಯೋಗಿಗಳಿಗೆ ಮಾತ್ರ ಧ್ಯಾನಸಮಯದಲ್ಲಿ ಹೃದಯ ಪ್ರದೇಶದಲ್ಲಿ ಗೋಚರವಾಗುತ್ತದೆ. ಅಲೆಕ್ಸಿಸ್ ಕ್ಯಾರೆಲ್ಲನು ಹೇಳುವ ಸಿನಿಸ್ತೆಸಿಕ್ ಇಂಪ್ರೆಷನ್ ಇಂತಹುದೇ ಇರಬೇಕು :

The sound body lives in silence. We do not hear, we do not feel, its working. The rhythms of our existence are expressed by cenesthesic impressions which, like the soft whirring of a sixteen cylinder motor, fill the depths of our consciousness when we are in silence and meditation.[17]

ಅನಾಹತನಾದಕ್ಕೆ ಸ್ಥೂಲವಾದ ಭೌತಿಕ ವಿವರಣೆಯನ್ನೂ ಕೊಡಬಹುದು. ಅನಾಹತವೆಂದರೆ 'ಹೊಡೆಯಲ್ಪಡದೆ ಇರುವ' ಎಂದರ್ಥ. ಕಿವಿಗೆ ಬಡೆಯದಿರುವ ಶಬ್ದವೆಂದೂ ಬೇಕಾದರೆ ಸ್ಥೂಲವಾಗಿ ಅರ್ಥಮಾಡಬಹುದು.

---

2 ಅ : ದ್ವೇಧಾ

---

16 ಮುದ್ದುಸ್ವಾಮಿದೀಕ್ಷಿತ, ಹಂಸಧ್ವನಿರಾಗದ, ಆದಿತಾಳದ ವಾತಾಪಿಗಣಪತಿಂ ಭಜೇಹಂ ಎಂಬ ಕೃತಿ.

17 Alexis Carrel, Man, the Unknown, p. 111.

## 2. ಪಿಂಡೋತ್ಪತ್ತಿ ಪ್ರಕರಣ

ಈ ಅರ್ಥದಲ್ಲಿ, ಸೆಕಂಡಿಗೆ 16-20 ಕಂಪನಗಳಿಗಿಂತ ಕಡಿಮೆಯಾದ ಮತ್ತು 16,000-20,000 ಕಂಪನಗಳಿಗಿಂತ ಹೆಚ್ಚಾದ ಶಬ್ದತರಂಗಗಳನ್ನು ಮನುಷ್ಯರ ಶ್ರವಣೇಂದ್ರಿಯವು ಗ್ರಹಿಸಲಾರದು.[18] ಈ ಮಿತಿಯ ಹೊರಗಿರುವ ನಾದವ್ಯಾಪ್ತಿಯನ್ನೆಲ್ಲ ಅನಾಹತವೆನ್ನಬಹುದು. ಆದರೂ, ಧ್ಯಾನನಿಷ್ಠಯೋಗಿಗಳಿಗೆ ಪ್ರಣವರೂಪಿನಲ್ಲಿ ಗೋಚರವಾಗುವ ನಾದವೆಂದೇ ಇಲ್ಲಿ ಗ್ರಹಿಸಬೇಕು. ಈ ನಾದವು ವ್ಯಕ್ತಾವಸ್ಥೆಗೆ ಬಂದಾಗ, ಉಪಾಂಶು, ಧ್ವಾನ, ನಿಮದ, ಉಪಬ್ದಿಮತ್, ಮಂದ್ರ, ಮಧ್ಯ ಮತ್ತು ತಾರಗಳೆಂಬ ಸ್ಥಾನಗಳಲ್ಲಿ ಶ್ರುತಿ, ಸ್ವರಗಳಾಗಿಯೂ, ಭಾಷಾಮೂಲವಾದ ಶಬ್ದವಾದಾಗ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ಅವಸ್ಥೆಗಳಲ್ಲಿ ವರ್ಣ, ಪದ, ವಾಕ್ಯ, ಅರ್ಥಗಳಾಗಿಯೂ ಗೋಚರವಾಗುತ್ತದೆ.

ಬ್ರಹ್ಮಸ್ವರೂಪ

**ಅಸ್ತಿ ಬ್ರಹ್ಮ ಚಿದಾನಂದಂ ಸ್ವಯಂಜ್ಯೋತಿರ್ನಿರಂಜನಮ್ ।**
**ಈಶ್ವರಂ ಲಿಂಗಮಿತ್ಯುಕ್ತಮದ್ವಿತೀಯಮಜಂ ವಿಭು[3] ॥ 4 ॥** 53

ಜ್ಞಾನಸುಖಗಳ ಸ್ವರೂಪವೂ ಸ್ವಯಂಪ್ರಕಾಶವೂ, [ಅವಿದ್ಯೆಯ] ಲೇಪವಿಲ್ಲದಿರುವುದೂ, ಸರ್ವಸ್ವತಂತ್ರವೂ, (ಜಗತ್ತಿನ) ಲಯಕ್ಕೆ ಕಾರಣವೆಂದು ಹೇಳಲ್ಪಟ್ಟಿರುವುದೂ, ಎಣೆಯಿಲ್ಲದುದೂ, ಹುಟ್ಟು ಎಂಬುದೇ ಇಲ್ಲದುದೂ, ಸರ್ವವ್ಯಾಪಕವೂ—

ಮನುಷ್ಯಶರೀರವಾದ ಪಿಂಡದ ವರ್ಣನೆಯನ್ನು ಮಾಡತೊಡಗಿರುವ ಶಾರ್ಙ್ಗದೇವನು ಅದರ ಕಾರಣಸ್ಥಾನವಾದ ಬ್ರಹ್ಮದ ವರ್ಣನೆಯನ್ನು ಆರಂಭಿಸಿದ್ದಾನೆ. ಏಕೆಂದರೆ, ಜೀವಕರ್ಮಪ್ರೇರಿತವಾಗಿಯೇ ಅಜ್ಞಾನದ ಮೂಲಕ ಬ್ರಹ್ಮವು ಸಾಕಾರ-ಸಗುಣವಾಗುವುದು. ಬ್ರಹ್ಮಪದಕ್ಕಿರುವ ಅನೇಕ ಅರ್ಥಗಳಲ್ಲಿ ಸಿಂಹಭೂಪಾಲನು 'ಬೃಹತ್ವಾದ್ ಬೃಂಹಣತ್ವಾದ್ವಾ' ಎಂಬ ಅರ್ಥಗಳನ್ನು ಕೊಡುತ್ತಾನೆ.[19] ಚಿತ್ ಎಂದರೆ (ವಿ) ಜ್ಞಾನವೆಂದೂ, ಆನಂದವೆಂದರೆ ಸುಖವೆಂದೂ ಅರ್ಥ. 'ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್'[20], 'ಆನಂದೋ ಬ್ರಹ್ಮೇತಿ ವ್ಯಜಾನಾತ್'[21], 'ವಿಜ್ಞಾನಮಾನಂದಂ ಬ್ರಹ್ಮ'[22] ಎಂದು ಶ್ರುತಿಗಳಲ್ಲಿ ಬ್ರಹ್ಮಸ್ವರೂಪವನ್ನು ವರ್ಣಿಸಿದೆ. 'ಸ್ವಯಂಜ್ಯೋತಿ' ಎಂಬುದಕ್ಕೆ ಸಿಂಹ ಭೂಪಾಲನು —

ತಮೇವ ಭಾಂತಮನುಭಾತಿ ವಿಶ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ।

ಎಂಬ ಶ್ರುತಿವಾಕ್ಯದ ಪ್ರಕಾರ 'ತನ್ನಿಂದ ತಾನೇ ಪ್ರಕಾಶಿಸುವುದು' ಎಂದು ವಿವರಿಸುತ್ತಾನೆ.[23] ನಿರಂಜನ ಎಂದರೆ ಅಂಟಿಕೊಳ್ಳದಿರುವುದು ಎಂದು ಅಕ್ಷರಾರ್ಥ. ಕಲ್ಲಿನಾಥನು 'ಲೇಪವಿಲ್ಲದಿರುವುದು' ಎಂದೂ[24] ಸಿಂಹಭೂಪಾಲನು

---

೬ ಕ : ವಿಭುಮ್.

---

18 Kudryavtsev : Sounds We Cannot Hear, pp. 17-18.

19 ಸಿಂಹಭೂಪಾಲ, ಉ. ಗ್ರಂ., ಪು. 24.

20 ತೈತ್ತಿರೀಯೋಪನಿಷತ್, ಭೃಗುವಲ್ಲೀ, 5.

21 ಅದೇ ಗ್ರಂಥ, ಅದೇ ಸ್ಥಾನ, 6.

22 ಬೃಹದಾರಣ್ಯಕೋಪನಿಷತ್, vi, 9, 28.

23 ಸಿಂಹಭೂಪಾಲ, ಉ. ಗ್ರಂ., ಪು. 24.

24 ಕಲ್ಲಿನಾಥ, ಸಂಗೀತರತ್ನಾಕರದ ಸಂಗೀತಸುಧಾನಿಧಿ ವ್ಯಾಖ್ಯೆ ಪು. 23.

**2. ಪಿಂಡೋತ್ಪತ್ತಿ ಪ್ರಕರಣ**

'ಅವಿದ್ಯೆಯ ಲೇಪವಿಲ್ಲದಿರುವುದು' ಎಂದೂ[25] ವ್ಯಾಖ್ಯಾನಮಾಡುತ್ತಾರೆ. 'ಈಶ್ವರ' ಎನ್ನುವುದಕ್ಕೆ ಒಡೆಯ ಎಂದು ಸಾಮಾನ್ಯಾರ್ಥವಾದರೂ ಅದರ ಮೂಲಾರ್ಥವಾದ 'ಸ್ವತಂತ್ರ' ಎನ್ನುವುದನ್ನೇ ಕಲ್ಲಿನಾಥಸಿಂಹಭೂಪಾಲರು ಸ್ವೀಕರಿಸಿದ್ದಾರೆ. 'ಸರ್ವಶಕ್ತಿ' 'ಸರ್ವೇಶ್ವರ' ಎಂಬ ವರ್ಣನೆಗಳು ಮುಂದಿನ ಶ್ಲೋಕದಲ್ಲಿದ್ದರೂ ಕುನ್ಹನ್ ರಾಜಾ ಈಶ್ವರ ಎನ್ನುವ ಪದಕ್ಕೆ 'ಸರ್ವಶಕ್ತ' ಎನ್ನುವ ಸಮಾಕರಣವನ್ನು ಹೇಗೆ ಪಡೆಯುತ್ತಾನೋ ತಿಳಿಯದು.[26] 'ಲಿಂಗ' ಎನ್ನುವುದಕ್ಕೆ 'ಚಿಹ್ನೆ', 'ಕಾರಣ' ಇತ್ಯಾದಿಯಾಗಿ ಹಲವು ಅರ್ಥಗಳಿದ್ದರೂ 'ಲಯಕ್ಕೆ ಕಾರಣವಾದ' ಎಂಬ ವಿಶೇಷಾರ್ಥವನ್ನೇ ಇಬ್ಬರು ಭಾಷ್ಯಕಾರರೂ ಬಳಸುವುದರಿಂದಲೂ ಅದು ಹೆಚ್ಚು ಅರ್ಥಪುಷ್ಟಿಯನ್ನು ಹೊಂದಿರುವುದರಿಂದಲೂ ನಾನೂ ಅದನ್ನೇ ಗ್ರಹಿಸಿದ್ದೇನೆ. ಬ್ರಹ್ಮವು ತನ್ನ ಹಾಗೆ ಮಾತ್ರ ಇರುವ ವಸ್ತುವಾದುದರಿಂದ ಅದು ಅದ್ವಿತೀಯ—'ಏಕಮೇವಾದ್ವಿತೀಯಂ ಬ್ರಹ್ಮ' (ಛಾಂದೋಗ್ಯ ಉಪನಿಷತ್ vi, 2, 1) 'ಏಕಂ ಸತ್ ವಿಪ್ರಾ ಬಹುಧಾ ವದಂತಿ'.[27]

**ನಿರ್ವಿಕಾರಂ ನಿರಾಕಾರಂ ಸರ್ವೇಶ್ವರಮನಶ್ವರಮ್ ।**
**ಸರ್ವಶಕ್ತಿ ಚ ಸರ್ವಜ್ಞಂ ತದಂಶಾ ಜೀವಸಂಜ್ಞಕಾಃ ॥ 5 ॥** 54

—ವಿಕಾರಗಳಿಲ್ಲದುದೂ, ಆಕಾರವಿಲ್ಲದುದೂ, ಎಲ್ಲಕ್ಕೂ ಒಡೆಯನಾದುದೂ, ನಾಶವಿಲ್ಲದುದೂ ಮತ್ತು ಎಲ್ಲದರ ಶಕ್ತಿಯೂ, ಎಲ್ಲವನ್ನೂ ತಿಳಿದಿರುವುದೂ ಆದ ಬ್ರಹ್ಮವಿದೆ <ಅಸ್ತಿ ಬ್ರಹ್ಮ>. ಜೀವನೆಂಬವುಗಳು ಅದರ ಅಂಶಗಳು.

ಯಾಸ್ಕನನ್ನು ಅನುಸರಿಸಿ ಹುಟ್ಟು, ಇರುವಿಕೆ, ಬೆಳೆಯುವಿಕೆ, ಬದಲಾವಣೆ, ಕ್ಷೀಣವಾಗುವಿಕೆ ಮತ್ತು ನಾಶವಾಗುವಿಕೆ ಎಂಬ ಆರು ಭಾವಗಳೂ ಇಲ್ಲದಿರುವುದೇ ನಿರ್ವಿಕಾರತ್ವವೆಂದು ಸಿಂಹಭೂಪಾಲ, ಕಲ್ಲಿನಾಥರುಗಳು ಹೇಳುತ್ತಾರೆ[28]. ಈಶ್ವರವೆಂಬ ಪದವು ಈ ಬ್ರಹ್ಮವರ್ಣನದಲ್ಲಿ ಪುನರುಕ್ತಿಯಾಗಿದೆ. ಹಿಂದಿನ ಶ್ಲೋಕದ 'ಈಶ್ವರಂ' ಎಂಬಲ್ಲಿ ನಿರಾವಲಂಬನದ ಮೂಲಕ ಸರ್ವಸ್ವತಂತ್ರ-ಅಸ್ತಿತ್ವವನ್ನೂ ಈ ಶ್ಲೋಕದಲ್ಲಿ ಕರ್ತೃತ್ವ ಶಾಸಕತ್ವಗಳ ಮೂಲಕ ಸ್ವಾಮಿತ್ವಭಾವವನ್ನು ಸೂಚಿಸಿದೆ. 'ಶಕ್ತಿ' ಎನ್ನುವುದಕ್ಕೆ ಎಲ್ಲ ಪ್ರಪಂಚದ ಕಾರಣ, ಮಾಯೆ ಎಂಬ ಹೆಸರಿನಲ್ಲಿ ತೋರಿಬರುವಂತಹದು ಎಂದು ಸಿಂಹಭೂಪಾಲನೂ[28], ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ ಮತ್ತು ಭೋಗಶಕ್ತಿಯೆಂದು ಕಲ್ಲಿನಾಥನೂ[29] ಅರ್ಥಮಾಡುತ್ತಾರೆ.

ಜೀವಗಳಿಗೆ ದೇಹಪ್ರಾಪ್ತಿ

**ಅನಾದ್ಯವಿದ್ಯೋಪಹಿತಾ ಯಥಾಽಗ್ನೇರ್ವಿಸ್ಫುಲಿಂಗಕಾಃ ।**
**ದಾರ್ವಾದ್ಯುಪಾಧಿಸಂಭಿನ್ನಾಸ್ತೇ ಕರ್ಮಭಿರನಾದಿಭಿಃ ॥ 6 ॥** 55

[ಇವು] ಮೊದಲಿಲ್ಲದ ಅವಿದ್ಯೆಯಿಂದ ಆವರಿಸಲ್ಪಟ್ಟು, ಬೆಂಕಿಯ ಕಿಡಿಗಳು ಕಟ್ಟಿಗೆ ಮುಂತಾದವುಗಳ ಸಂಬಂಧ <ಉಪಾಧಿ> ದಿಂದಾಗಿ ಹೇಗೆ ಬೇರೆಬೇರೆಯಾಗಿವೆ[ಕಾಣುತ್ತವೆ]ಯೋ [ಹಾಗೆಯೇ] ಮೊದಲಿಲ್ಲದ—

25 ಸಿಂಹಭೂಪಾಲ, ಉ. ಗ್ರ. 6, ದೇ ಸ್ಥಾನ.

26 ಕುನ್ಹನ್‌ರಾಜಾ, ಸಂಗೀತರತ್ನಾಕರದ ಆಂಗ್ಲಾನುವಾದ, ಪು. 10.

27 ಋಗ್ವೇದ, I, 164, 46.

28 ಸಿಂಹಭೂಪಾಲ, ಉ. ಗ್ರಂ., ಪು. 24 ; ಕಲ್ಲಿನಾಥ, ಉ. ಗ್ರಂ., ಪು. 23.

29 ಕಲ್ಲಿನಾಥ, ಉ. ಗ್ರಂ., ಪು. 24.

## 2. ಪಿಂಡೋತ್ಪತ್ತಿ ಪ್ರಕರಣ

**ಸುಖದುಃಖಪ್ರದೈಃ ಪುಣ್ಯಪಾಪರೂಪೈರ್ನಿಯಂತ್ರಿತಾಃ ।**
**ತತ್ತಜ್ಜಾತಿಯುತಂ ದೇಹಮಾಯುರ್ಭೋಗಂ ಚ ಕರ್ಮಜಮ್ ॥ 7 ॥** 56

—ಸುಖ, ದುಃಖಗಳನ್ನು ಕೊಡುವ, ಪುಣ್ಯ-ಪಾಪಗಳ ರೂಪದಲ್ಲಿರುವ ಕರ್ಮಗಳಿಂದ ನಿರ್ಧರಿಸಲ್ಪಡುವವುಗಳಾಗಿ, (ಬ್ರಹ್ಮದಿಂದ ಭಿನ್ನವಾಗಿರುತ್ತವೆ). ಆಯಾಯಾ ಜಾತಿಗೆ ತಕ್ಕ ಆಯಸ್ಸನ್ನೂ, ಮತ್ತು ಕರ್ಮದಿಂದ ಹುಟ್ಟಿದ ಅನುಭವ ವಿಷಯ <ಭೋಗ>ವನ್ನೂ [ಉಳ್ಳ] ದೇಹವನ್ನು—

ನಿರ್ಗುಣವೂ ನಿರಾಕಾರವೂ ಆಗಿರುವ ಬ್ರಹ್ಮವು ಸಗುಣವೂ ಸಾಕಾರವೂ ಆಗಿ ದೇಹವನ್ನು ಪಡೆಯುವ ವಿಧಾನವನ್ನು ಇಲ್ಲಿ ಹೇಳಿದೆ. ಬ್ರಹ್ಮವು ಕರ್ಮದಿಂದ ಅಬಾಧಿತವಾದುದು; ಅದರ ಅಂಶಗಳೇ ಆಗಿರುವ ಜೀವಗಳು ಕರ್ಮಬಾಧಿತವಾಗುವುದು ಹೇಗೆ? ಅವಿದ್ಯೆಯಿಂದ. ಇದರಿಂದಾಗಿ ಅಸತ್ತ್ವ, ಅಸರ್ವಜ್ಞತ್ವ, ದುಃಖ, ಪರಿಚ್ಛಿನ್ನತೆ ಮೊದಲಾದ ಗುಣಗಳನ್ನು ಹೊಂದಿ ಶಬಲಿತವಾಗಿ-ಎಂದರೆ ಒಂದೇ ಆಗಿದ್ದುದು ಅನೇಕ ಅಂಶಗಳಾಗಿ-ಜೀವಗಳಾಗುತ್ತದೆ. ಈ ಭಾವವು ಸ್ಪಷ್ಟವಾಗಿ ಅರ್ಥವಾಗಲು ಗ್ರಂಥಕಾರನು ಪ್ರೌಢಪ್ರಾಚೀನವಾದ ಒಂದು ಉದಾಹರಣೆಯನ್ನು ಬಳಸಿದ್ದಾನೆ: ಬೆಂಕಿಯು ಎಲ್ಲಿದ್ದರೂ ಒಂದೇ ಆಗಿದ್ದರೂ ಸೌದೆ, ನೀರು ಮೊದಲಾದವುಗಳು ಅದನ್ನು ಮುಚ್ಚಿಕೊಂಡಾಗ ಬೇರೆಬೇರೆಯಾದ ಬೆಂಕಿಯ ಅಂಶಗಳಾಗಿ ಹೇಗೆ ಕಾಣುತ್ತವೆಯೋ, ಹಾಗೆಯೇ ಅವಿದ್ಯೆಯಿಂದ ಆವೃತವಾಗಿರುವಾಗ ಬ್ರಹ್ಮವು ಅಂಶರೂಪದಲ್ಲಿ ಜೀವನಾಗಿರುತ್ತದೆ. ಸೌದೆ ಮುಂತಾದವುಗಳು ಉರಿದು ನಾಶವಾಗುವುದರಿಂದ ಬೆಂಕಿಯ ಅಭಿನ್ನತೆಯು ಹೇಗೆ ಸ್ಪಷ್ಟವಾಗುವುದೋ ಹಾಗೆಯೇ ಅವಿದ್ಯೆಯು ನಾಶವಾದಾಗ ಬ್ರಹ್ಮದ ಅಭಿನ್ನತೆಯೂ ಅದ್ವೈತವೂ ತಿಳಿಯುತ್ತದೆ. ಅವಿದ್ಯೆಯು ಬ್ರಹ್ಮದ ಉಪಾಧಿಯೇ ಆದುದರಿಂದ ಅದೂ ಬ್ರಹ್ಮದಂತೆಯೇ ಅನಾದಿ (ಆದರೆ ಅದು ಮೋಕ್ಷಕಾಲದಲ್ಲಿ ನಿರಸನವಾಗುವಂತಹುದಾದುದರಿಂದ ಅನಂತವಲ್ಲ). ಅದರ ಫಲಿತಾಂಶವಾದ ಜೀವನೂ ಅದರ ಧರ್ಮವಾದ ಕರ್ಮವೂ ಅನಾದಿಗಳೇ. ಈ ಕರ್ಮವು ಜೀವನಿಗೆ ಸುಖದುಃಖವನ್ನು ಉಂಟುಮಾಡುವಂತಹುದು—ಬೇಕು, ಬೇಡ ಎಂಬ ರಾಗದ್ವೇಷಗಳನ್ನೂ, ಇತರ ದ್ವಂದ್ವಗಳನ್ನೂ, ವಾಸನೆಗಳನ್ನೂ ತಂದುಕೊಡುವಂತಹುದು. ಈ ಬೇಕು-ಬೇಡವೆಂಬ ಪ್ರವೃತ್ತಿಗಳ ಫಲವಾಗಿ ಜೀವನು ಪುನಃ ಕರ್ಮಗಳಲ್ಲಿ ತೊಡಗುತ್ತಾನೆ. ಈ ಕರ್ಮವು ಸ್ವಭಾವದಿಂದಲೇ ಒಳ್ಳೆಯದು-ಕೆಟ್ಟದ್ದು, ಸರಿ-ತಪ್ಪು ಮುಂತಾದ ದ್ವಂದ್ವಗಳಿಗೆ ಆಶ್ರಯವಾದುದು, ಎಂದರೆ ಪುಣ್ಯರೂಪವಾದುದು, ಅಥವಾ ಪಾಪರೂಪವಾದುದು. ಕರ್ಮಸಹಜವಾದ ಈ ದ್ವಂದ್ವವು ಜೀವನನ್ನು ತನ್ನ ಸ್ವಭಾವವನ್ನು ಅನುಸರಿಸಿ ಈ (ಪುಣ್ಯ) ಅಥವಾ ಆ (ಪಾಪ) ಕರ್ಮದಲ್ಲಿ ಪ್ರೇರಿಸುತ್ತದೆ. ಈ ಕರ್ಮದ ಮತ್ತೊಂದು ಗುಣವೆಂದರೆ ವಿಶಿಷ್ಟಜಾತಿಯ ದೇಹವೊಂದಕ್ಕೆ ಆಶ್ರಯವಾಗಿರುವುದು. ಯಾವುದಾದರೊಂದು ಜನ್ಮದಲ್ಲಿ ಮಾಡಿದ ಪುಣ್ಯ-ಪಾಪದ ಅಥವಾ ಇತರ ದ್ವಂದ್ವಗಳ ಕರ್ಮಗಳೂ ಅವುಗಳ ಫಲಗಳಾದ ವಾಸನೆಗಳೂ ಜೀವನನ್ನು ಮುಂದಿನ ಜನ್ಮದಲ್ಲಿಯೂ ತಮಗೆ ಅನುಗುಣವಾದ ಕರ್ಮದಲ್ಲಿ ಪ್ರೇರಿಸಿ ಎಂದಿನ ಜಾತಿಯದೇ ಆದ ದೇಹವನ್ನು ಕೊಡುತ್ತವೆ. ಹೀಗೆ ಜೀವನು ಪುನಃ ಪುನಃ ಒಂದೇ ಜಾತಿಯ ದೇಹವನ್ನು ಪಡೆಯುತ್ತಿರುತ್ತಾನೆ. ಇವುಗಳು ಸಾಕಷ್ಟು ಸಂಚಯವಾದಾಗ ಉತ್ತಮವಾದ ಅಥವಾ ಅಧಮವಾದ ಶರೀರವನ್ನೂ ಜೀವನು ಪಡೆಯಲು ಸಾಧ್ಯ. ಕರ್ಮಗಳನ್ನೂ ವಾಸನೆಗಳನ್ನೂ ನಿರ್ದಿಷ್ಟ ರೀತಿಯಲ್ಲಿ ನಡೆಸಿಕೊಂಡು ಹೋಗುವುದರಿಂದ ಆಯಾ ಜಾತಿಯ ದೇಹವನ್ನು ಜೀವನು ಪಡೆಯಲು ಸಾಧ್ಯವಿದೆ. ದ್ವಂದ್ವಾನುಭವಗಳ ವಿವೇಚನಾ ಜ್ಞಾನವು ಇರುವ ಜೀವನಿಗೆ (ಉದಾಹರಣೆಗೆ, ಮನುಷ್ಯ ದೇಹದಲ್ಲಿ) ಅಷ್ಟರಮಟ್ಟಿನ ಕರ್ಮಸ್ವಾತಂತ್ರ್ಯವೂ ಇರುತ್ತದೆ.

ಮೇಲಿನ ಶ್ಲೋಕದಲ್ಲಿ 'ಸುಖದುಃಖಪ್ರದೈಃ ಪುಣ್ಯಪಾಪರೂಪೈಃ ಅನಾದಿಭಿಃ ಕರ್ಮಭಿಃ ನಿಯಂತ್ರಿತಾಃ' ಎಂಬುದನ್ನು 'ಪುಣ್ಯರೂಪೈಃ ಸುಖಪ್ರದೈಃ ಅನಾದಿಭಿಃ ಕರ್ಮಭಿಃ ನಿಯಂತ್ರಿತಾಃ' ಎಂದೂ 'ಪಾಪರೂಪೈಃ

ದುಃಖಪ್ರದೈಃ ಅನಾದಿಭಿಃ ಕರ್ಮಭಿಃ ನಿಯಂತ್ರಿತಾಃ' ಎಂದು ಅನ್ವಯ ಮಾಡಿಕೊಳ್ಳಬೇಕು. ಸನಾತನ ಧರ್ಮದ ಪ್ರಕಾರ ಪುಣ್ಯಕರ್ಮಗಳು ಸುಖವನ್ನೂ ಪಾಪಕರ್ಮಗಳು ದುಃಖವನ್ನೂ ಕೊಡುತ್ತವೆ. 'ಏಷ ಉ ಏವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ' ಎಂದೂ 'ಏಷ ಉ ಏವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ'* ಎಂದೂ ಇದಕ್ಕೆ ಶ್ರುತ್ಯಾಧಾರವಿದೆ. ಈ ಕರ್ಮಗಳು ಪ್ರವಾಹರೂಪದಲ್ಲಿದ್ದು ಅನಾದಿಯಾಗಿದ್ದರೂ ಕೊನೆಮುಟ್ಟಲು ಸಾಧ್ಯವಿದೆ. ಕರ್ಮವ್ಯಾಪಾರವು ಜೀವನ ಧರ್ಮ. ಅದರಿಂದಲೇ ಜೀವನಿಗೆ ವಿಶಿಷ್ಟಗುಣಗಳೂ ಸುಖದುಃಖಾದಿ ದ್ವಂದ್ವಾನುಭೋಗಗಳೂ ವಾಸನಾದಿಗಳೂ ಪ್ರಾಪ್ತಿಯಾಗುತ್ತವೆ. ಇವುಗಳ ಫಲವಾಗಿ ಜೀವನು ಪುನಃ ಕರ್ಮದಲ್ಲಿ ತೊಡಗುತ್ತಾನೆ, ಹಾಗೂ ಮತ್ತೊಂದು ದೇಹವನ್ನು ಪಡೆಯುತ್ತಾನೆ. ಕರ್ಮದಿಂದ ಜನ್ಮ, ಜನ್ಮದಿಂದ ಕರ್ಮ; ಹೀಗೆ ಇದೊಂದು ವಿಷಚಕ್ರ. ಇದನ್ನು ಛೇದಿಸಬೇಕಾದರೆ ಕರ್ಮಫಲವನ್ನು ನಾಶಗೊಳಿಸುತ್ತ ಬರಬೇಕು. ಕರ್ಮಫಲದಿಂದ ಬಿಡುಗಡೆಯಾಗುವುದೇ ಮೋಕ್ಷ. ಈ ರೀತಿಯ ಬಿಡುಗಡೆಯಾಗುವಾಗ ಅವಿದ್ಯೆಯು ನಾಶವಾಗಿ ಜೀವನು ಬ್ರಹ್ಮವಾಗುತ್ತಾನೆ. ಅಲ್ಲಿಯವರೆಗೂ ದೇಹಧಾರಣೆ, ದೇಹ ವಿಸರ್ಜನೆಗಳು ಜೀವನಿಗೆ ತಪ್ಪಿದ್ದಲ್ಲ. ಸ್ಥೂಲವಾದ ದೇಹವು ಸಾವಿನಿಂದ ನಾಶವಾದಂತೆ ತೋರುತ್ತಿದ್ದರೂ ಬಹು ಸೂಕ್ಷ್ಮವಾದ ಲಿಂಗಶರೀರವೆಂಬುದೊಂದು ಜೀವನಿಗೆ ದೇಹದಾನದಲ್ಲಿ ಉಪಕಾರಕವಾಗಿ ಇದ್ದೇ ಇರುತ್ತದೆ. ಇದು ಸ್ಥೂಲದೇಹಕ್ಕೆ ಸಂಪೂರ್ಣವಾಗಿ ಪರಸ್ಪರವಾದುದು. ಪಂಚಭೂತಗಳು, ಪಂಚಪ್ರಾಣಗಳು, ಇಂದ್ರಿಯಗಳು, ಅವ್ಯಕ್ತವೇ ಮೊದಲಾದ ಅವಸ್ಥೆಗಳು, ಹೀಗೆ ಷೋಡಶ ಕಲೆಗಳಿಂದ ಅದು ಕೂಡಿರುತ್ತದೆ. ಆಯಾ ಸ್ಥೂಲದೇಹಕ್ಕೆ ಸಹಜವಾದ ಆಯುಸ್ಸು, ಕರ್ಮ ಮುಂತಾದವುಗಳು ಮುಗಿದೊಡನೆಯೇ, ಲಿಂಗಶರೀರವು ಹೆಣ್ಣುಜಾತಿಯ ಮತ್ತು ಗಂಡುಜಾತಿಯ ದೇಹಗಳು ರತಿಸಂದರ್ಭದಲ್ಲಿರುವಾಗ ತನ್ನ ಪೂರ್ವಕರ್ಮಪರಿಪಾಕಕ್ಕೆ ಅನುಗುಣವಾದ ದೇಹವನ್ನು ಪುನಃ ಪಡೆಯುತ್ತದೆ. ಜೀವನು ತನ್ನ ಅನಾದಿ ಕರ್ಮವ್ಯಾಪಾರವನ್ನು ನಿರ್ವಹಿಸುವುದು ಈ ಲಿಂಗಶರೀರದಿಂದಲೇ. ಹುಟ್ಟುಸಾವುಗಳ ಪ್ರವಾಹವನ್ನು ನಿಲ್ಲಿಸಬೇಕಾದರೆ ಲಿಂಗಶರೀರವನ್ನು ನಾಶಮಾಡಬೇಕು. ಇದಾಗುವುದು ಮೋಕ್ಷ ಕಾಲದಲ್ಲಿಯೇ.

ಜೀವರು ಕರ್ಮವ್ಯಾಪಾರದಲ್ಲಿ ತೊಡಗಲೂ ಅದರಿಂದುಂಟಾದ ಫಲಗಳನ್ನು ಅನುಭವಿಸಲೂ, ದೇಶಕಾಲಗಳನ್ನುಳ್ಳ ರಂಗವೂ ಅವರುಗಳ ವಾಸನೆಗಳ ವೃತ್ತಿಗೆ ವಿಷಯವೂ ಬೇಕಷ್ಟೆ! ಇದಕ್ಕಾಗಿ ಪರಬ್ರಹ್ಮವು ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸುತ್ತದೆ. ಚತುರ್ಮುಖಬ್ರಹ್ಮನು ಜಗತ್ತನ್ನು ಸೃಷ್ಟಿಸುತ್ತಾನೆ. 'ನ ಹಿ ಕದಾಚಿದಪಿ ಅನೀದೃಶಂ ಜಗತ್' ಎಂಬುದಾಗಿ ಜಗತ್ತನ್ನೇ ನಿತ್ಯವೆಂದು ಕೆಲವರು—ಪೂರ್ವಮೀಮಾಂಸಕರು—ತಿಳಿಯುವುದುಂಟು. ಜಗತ್ತು ಸ್ವಧರ್ಮದಿಂದಲೇ ಅಥವಾ ಸ್ವಭಾವದಿಂದಲೇ ಪ್ರವಾಹದಂತೆ ಮುಂದುವರಿಯುತ್ತಿದ್ದು ಆದಿ-ಅಂತಗಳಿಲ್ಲದೆ ನಿತ್ಯವಾಗಿದೆ ಎಂದು ಎನ್ನುತ್ತಾರೆ, ಇವರು. ಕಮ್ಯುನಿಸ್ಟರು ಹೇಳುವ ನಿರೀಶ್ವರವಾದವೂ ಜಗತ್ತು ಅನಾದಿ, ಅನಂತ, ಎನ್ನುತ್ತದೆ. ಈ ವಾದಗಳನ್ನು ಅಲ್ಲಗಳೆಯುತ್ತಾ ಶಾರ್ಙ್ಗದೇವನು ಸ್ಥೂಲದೇಹ ಮತ್ತು ಸೂಕ್ಷ್ಮದೇಹ (ಲಿಂಗಶರೀರ)ಗಳೆರಡರ ಅಭಿಮಾನಿಯಾದ ಜೀವನ ಉಪಭೋಗಕ್ಕಾಗಿ ಬ್ರಹ್ಮವು ಸೃಷ್ಟಿಸಂಹಾರಗಳನ್ನು ಚಕ್ರ ರೂಪದಲ್ಲಿ ಅನಾದಿಯಾಗಿ ಮಾಡುತ್ತಲೇ ಇರುತ್ತದೆಂದು ಹೇಳಿದ್ದಾನೆ

ಲಿಂಗಶರೀರ

**ಪ್ರತಿಜನ್ಮ ಪ್ರಪದ್ಯಂತೇ ತೇಷಾಮಸ್ತ್ಯಪರಂ ಪುನಃ[4] ।**
**ಸೂಕ್ಷ್ಮಂ ಲಿಂಗಶರೀರಂ ತದಾ ಮೋಕ್ಷಾದಕ್ಷಯಂ ಮತಮ್ ॥ 8 ॥** 57

—ಪ್ರತಿಜನ್ಮವೂ ಪಡೆಯುತ್ತವೆ. ಅಲ್ಲದೆ, ಅವುಗಳಿಗೆ (ಜೀವಗಳಿಗೆ) ಸೂಕ್ಷ್ಮವಾದ,

---

4 ಗ: ವಪುಃ. * ಕೌಷೀತಕೀ ಉಪನಿಷತ್, II, 3, 65.

[ಮತ್ತು] ಮೋಕ್ಷವುಂಟಾಗುವವರೆಗೆ ನಾಶವಿಲ್ಲದುದೆಂದು (ತಿಳಿದವರು) ಅಭಿಪ್ರಾಯಪಡುವ, ಲಿಂಗ ಶರೀರವೊಂದು ಬೇರೆ ಇದೆ.

**ಸೂಕ್ಷ್ಮಭೂತೇಂದ್ರಿಯಪ್ರಾಣಾವಸ್ಥಾ ಽಽತ್ಮಕಮಿದಂ ವಿದುಃ ।**
**ಜೀವಾನಾಮುಪಭೋಗಾಯ ಜಗದೇತತ್ ಸೃಜತ್ಯಜಃ ॥ 9 ॥** 58

ಇದು ಸೂಕ್ಷ್ಮವಾದ ಭೂತಗಳು, ಇಂದ್ರಿಯಗಳು ಪ್ರಾಣ [ವೇ ಮೊದಲಾದ ವಾಯು]ಗಳು, ಅವಸ್ಥೆಗಳು— ಇವುಗಳನ್ನೊಳಗೊಂಡಿದೆಯೆಂದು ತಿಳಿಯುತ್ತಾರೆ. ಬ್ರಹ್ಮವು ಜೀವರ ಅನುಭವ <ಉಪಭೋಗ>ಕ್ಕಾಗಿ ಈ ಪ್ರಪಂಚವನ್ನು ಸೃಷ್ಟಿಸುತ್ತದೆ.

ಸೃಷ್ಟಿಸಂಹಾರಗಳಿಗೆ ಕಾರಣ

**ಸ ಆತ್ಮಾ ಪರಮಾತ್ಮಾ ಚ ವಿಶ್ರಾಂತ್ಯೈ ಸಂಹರತ್ಯಥ ।**
**ತದೇತತ್ ಸೃಷ್ಟಿಸಂಹಾರಂ ಪ್ರವಾಹಾನಾದಿ ಸಂಮತಮ್ ॥ 10 ॥** 59

ಆ ಆತ್ಮನೂ ಪರಮಾತ್ಮನೂ ವಿಶ್ರಾಂತಿಪಡೆಯಲೋಸುಗ ಆ ಮೇಲೆ (ಜಗತ್ತನ್ನು) ಸಂಹಾರ ಮಾಡುತ್ತಾನೆ. ಈ ಸೃಷ್ಟಿಸಂಹಾರಗಳ ಪ್ರವಾಹವು ಮೊದಲಿಲ್ಲದುದು ಎಂದು ಒಪ್ಪಲ್ಪಟ್ಟಿದೆ.

ಹಿಂದಿನ ಶ್ಲೋಕದಲ್ಲಿ ಹೇಳಿರುವ ಅಜಃ ಎನ್ನುವುದನ್ನು ನಿರ್ದೇಶಮಾಡುವುದಕ್ಕಾಗಿ ಇಲ್ಲಿ ಆ ಆತ್ಮನು ಎಂದು ಹೇಳಿದೆ. ಸಂಹಾರಕಾಲದಲ್ಲಿ ಕರ್ಮನಾಶದ ಮೂಲಕ ಜೀವನು ಆತ್ಮನಾಗುತ್ತಾನೆ. ಈ ಆತ್ಮನು ಪರಮಾತ್ಮನಾದ ಬ್ರಹ್ಮವೂ ಹೌದು.

ಜೀವ-ಬ್ರಹ್ಮ-ಜಗತ್ತುಗಳ ಅಭಿನ್ನತೆ

**ತೇ ಜೀವಾ ನಾತ್ಮನೋ ಭಿನ್ನಾ ಭಿನ್ನಂ ವಾ ನಾತ್ಮನೋ ಜಗತ್ ।**[5]
**ಶಕ್ತ್ಯಾ ಸೃಜನ್ನಭಿನ್ನೋ ಽಸೌ ಸುವರ್ಣಂ ಕುಂಡಲಾದಿವ[6] ॥ 11 ॥** 60

ಆ ಜೀವರು ಆತ್ಮನಿಂದ ಬೇರೆಯಲ್ಲ. ಜಗತ್ತಾಗಲೀ ಆತ್ಮನಿಂದ ಬೇರೆಯಲ್ಲ. ಚಿನ್ನ [ಮತ್ತು] ಓಲೆಗಳ ಹಾಗೆ [ತನ್ನ] ಶಕ್ತಿಯಿಂದಲೇ ಸೃಷ್ಟಿಸಿದ ಈ ಜಗತ್ತಿನಿಂದ ಅದು ಬೇರೆಯಲ್ಲ.

ಸೃಷ್ಟಿಕ್ರಮ

**ಸೃಜತ್ಯವಿದ್ಯಯೇತ್ಯನ್ಯೇ ಯಥಾ ರಜ್ಜುರ್ಭುಜಂಗಮಮ್ ।**
**ಆತ್ಮನಃ ಪೂರ್ವಮಾಕಾಶಸ್ತತೋ ವಾಯುಸ್ತತೋ ಽನಲಃ ॥ 12 ॥** 61

ಹಗ್ಗದಿಂದ ಹಾವು (ಎಂಬ ಭ್ರಾಂತಿಯು) ಉಂಟಾದಂತೆ ಅವಿದ್ಯೆಯ ಮೂಲಕ [ಆತ್ಮನು ಜಗತ್ತನ್ನು] ಸೃಷ್ಟಿಸುತ್ತಾನೆಂದು ಬೇರೆಯವರು [ಅಭಿಪ್ರಾಯಪಡುತ್ತಾರೆ]. ಆತ್ಮದಿಂದ ಮೊದಲು ಆಕಾಶವು [ಉತ್ಪತ್ತಿಯಾಯಿತು] ; ಅದರಿಂದ ವಾಯು ; ಅದರಿಂದ ತೇಜಸ್ಸು.

ಜೀವ-ಬ್ರಹ್ಮರ ಸಂಬಂಧವನ್ನು ತಿಳಿಸುವ ಈ ಎರಡು ಪ್ರೌಢಪ್ರಾಚೀನ ಉದಾಹರಣೆಗಳೂ ವೇದಾಂತದ್ದು. ಚಿನ್ನದಿಂದ ಓಲೆ ಮಾಡಿದಾಗ ಮೂಲದ್ರವ್ಯವಾದ ಚಿನ್ನಕ್ಕೂ ಓಲೆಯಲ್ಲಿರುವ ಚಿನ್ನಕ್ಕೂ ವ್ಯತ್ಯಾಸವೇನಿಲ್ಲ. ಆದರೂ

5 ಅ, ಕ : ತೇಜೋವದಾತ್ಮನೋ ಭಿನ್ನಾಽಭಿನ್ನಯಾ ವಾತ್ಮನೋ ಜಗತ್ (?)

6 ಅ : ಕುಂಡಲಾದಿವತ್.

ಚಿನ್ನದಿಂದಲೇ ಮಾಡಿದ ಅದನ್ನು ಚಿನ್ನಕ್ಕಿಂತ ಭಿನ್ನವಾಗಿ ವ್ಯವಹರಿಸಿ ಓಲೆಯೆಂದು ಹೇಗೆ ಕರೆಯುತ್ತೇವೋ, ಹಾಗೆಯೇ ಬ್ರಹ್ಮವು ನಾಮ-ರೂಪಗಳೆಂಬ ಉಪಾಧಿಗಳಿಂದ ಜೀವವಾಗಿ ಭಿನ್ನವಾದಂತೆ ತೋರುತ್ತದೆ. ಚಿನ್ನವನ್ನು ಓಲೆಯನ್ನಾಗಿ ಮಾಡಲು ಅಕ್ಕಸಾಲಿಗನ ಶಕ್ತಿ ಹೇಗೆ ಬೇಕಾಗುತ್ತದೆಯೋ, ಹಾಗೆಯೇ ನಿರ್ಗುಣಬ್ರಹ್ಮವು ಸಗುಣ ಬ್ರಹ್ಮವಾಗಿ ಶಬಳೀಕೃತವಾಗಬೇಕಾದರೆ ತನ್ನ ಶಕ್ತಿಯಿಂದಲೇ ಆಗುತ್ತದೆ. ಓಲೆಯನ್ನು ಕಂಡಾಗ ಅದು ಓಲೆ ಎಂಬ ವಸ್ತುಜ್ಞಾನವು ಪ್ರಧಾನವೇ ಹೊರತು ಅದು ಚಿನ್ನ ಎಂಬ ಮೂಲಜ್ಞಾನವು ಗೌಣ. ಆದರೆ ಓಲೆಯು ತನ್ನ ಸ್ವರ್ಣತ್ವವನ್ನು ಕಳೆದುಕೊಂಡಿರುವುದಿಲ್ಲ. ಹಾಗೆಯೇ ಶಬಳೀಕೃತವಾದ ಬ್ರಹ್ಮವು ವ್ಯಷ್ಟಿರೂಪದಲ್ಲಿದ್ದಾಗ ಅದು ವಸ್ತುತಃ ಪರಬ್ರಹ್ಮವಸ್ತುವೇ ಆಗಿದ್ದರೂ ಇದರ ಜ್ಞಾನವು ಸ್ವಯಂಸಿದ್ಧವಾಗಿರುವುದಿಲ್ಲ. ಓಲೆಯ ಉಪಾಧಿಗಳನ್ನೆಲ್ಲ ಕಳೆದುಬಿಟ್ಟರೆ, ಉದಾಹರಣೆಗೆ ಅದನ್ನು ಅಗ್ನಿಪುಟಕ್ಕೆ ಹಾಕುವುದರಿಂದ, ಓಲೆಗಾಗಿ ಮಾಡಿದ ಕರ್ಮಫಲವು ನಾಶ ವಾಗುವುದರಿಂದ ಪುನಃ ಚಿನ್ನವೇ ಎಂಬ ಜ್ಞಾನವು ಹುಟ್ಟುತ್ತದೆ. ಹಾಗೆಯೇ ಯಾವ ಅವಿದ್ಯೆಯಿಂದ ಬ್ರಹ್ಮವು ಜೀವಾಗಳಾಯಿತೋ, ಆ ಅವಿದ್ಯೆಯನ್ನು ( ಜೀವದ ಕರ್ಮಫಲವನ್ನು ) ನಾಶಮಾಡಿದರೆ ಬ್ರಹ್ಮಸ್ವರೂಪದ ಜ್ಞಾನವು ಉಂಟಾಗುವುದು.

ಹಗ್ಗವು ಹಗ್ಗವೇ, ಹಾವಲ್ಲ. ಆದರೂ ಅದು ಹಗ್ಗವೆಂದು ತಿಳಿಯದಿದ್ದಾಗ ಹಾವೆಂಬ ಭ್ರಾಂತಿಯನ್ನು ಉಂಟುಮಾಡುತ್ತದೆ. ಹಾಗೆಯೇ ಅವಿದ್ಯೆಯು ಆವರಿಸಿಕೊಂಡಾಗ ಬ್ರಹ್ಮವಸ್ತುವಿಗೂ ಜೀವನಿಗೂ ಭಿನ್ನತೆಯೆಂಬ ಭ್ರಾಂತಿಯುಂಟಾಗುತ್ತದೆ. ಅವಿದ್ಯೆಯು ನಾಶವಾದಾಗ ಇವುಗಳಲ್ಲಿನ ಅಭಿನ್ನತೆಯು ಪುನಃ ಗೋಚರವಾಗುತ್ತದೆ. ಹಗ್ಗವನ್ನು ಹಾವೆಂದು ಭ್ರಮಿಸಿರುವಷ್ಟು ಕಾಲವೂ (ಮನಸ್ಸಿನ ಮಟ್ಟಿಗೆ) ಹಗ್ಗವು ಹಾವಿನ ಅಸ್ತಿತ್ವವನ್ನೂ ಅದರ ಗುಣಗಳನ್ನೂ ಪಡೆದಿರುತ್ತದೆ. ಇದೇ ರೀತಿಯಲ್ಲಿ ಅವಿದ್ಯಾಪ್ರವರ್ತನೆಯು ಇರುವವರೆಗೂ ಜೀವನೂ ಜಗತ್ತೂ ವಾಸ್ತವಗಳೇ. ಅಲ್ಲದೆ, ಹಗ್ಗವು ಹಾವಲ್ಲವೆಂಬ ಜ್ಞಾನವು ಉಂಟಾದಮೇಲೂ, ಉಂಟಾಗಿದ್ದ ಭ್ರಾಂತಿಯೂ ಅದರ ಪ್ರತಿಕ್ರಿಯೆಗಳೂ ವಾಸ್ತವವೇ ಹೌದಷ್ಟೆ! ಹಾಗೆಯೇ ಅವಿದ್ಯಾನಿರಸನವಾಗಿ ಜೀವಬ್ರಹ್ಮರ ಅಭೇದವು ಸ್ಥಾಪಿತವಾದರೂ ಹಿಂದೆ ಉಂಟಾಗಿದ್ದ ಜಗತ್ತೂ ಜೀವನೂ ನಿಜವೇ. ಇದು ಒಂದು ಬಗೆಯ ಪರಿಮಿತವಾಸ್ತವಿಕತೆ. ಆದುದರಿಂದ ಜಗತ್ತೆಂಬುದು ನಮ್ಮನ್ನು ಪಾಪಕರ್ಮಗಳ ಪರಿಪಾಕದಿಂದ ದುಃಖಕ್ಕೀಡುಮಾಡುವ ಬಲೆಯೆಂದಾ ಗಲೀ, ಭ್ರಾಂತಿಮೂಲವಾದ ಅದು ಮಿಥ್ಯವಾದುದರಿಂದ ಜೀವನವನ್ನು ಪಾಪಭೀತಿಯಿಲ್ಲದೆ ಸ್ವೇಚ್ಛೆಯಾಗಿ ನಡೆಸ ಬಹುದೆಂದಾಗಲೀ ಭಾವಿಸಲಾಗದು. ಅದ್ವೈತವೇದಾಂತವು ಬಳಸುವ ಮಿಥ್ಯೆಯ ಕಲ್ಪನೆಯು ಇದೇ. ಮಿಥ್ಯೆಯ ಮೂಲಕವೇ ಭ್ರಮನಿರಸನವಾಗಿ ಮೋಕ್ಷವಾಗಬೇಕಾಗಿರುವುದರಿಂದ ಜೀವನವನ್ನೂ ದೇಹವನ್ನೂ ಆವಶ್ಯಕತೆಯೂ ಸಾಧನವೂ ಆಗಿದೆಯೆಂಬ ದೃಷ್ಟಿಯಿಂದ ನಡೆಸಬೇಕು. ಮೋಕ್ಷಸಿದ್ಧಿಗೆ ಜೀವನವೊಂದೇ ಮಾರ್ಗ. ರತ್ನಾಕರಕಾರನ ಈ ಭಾವವನ್ನೇ ಹರಿದಾಸರುಗಳು ' ಈಸಬೇಕು, ಇದ್ದು ಜೈಸಬೇಕು ' ಎಂಬ ಮಾತುಗಳಲ್ಲಿ ಹೇಳಿದ್ದಾರೆ.

**ಅನಲಾಜ್ಜಲಮೇತಸ್ಮಾತ್ ಪೃಥಿವೀ ಸಮಜಾಯತ ।**
**ಮಹಾಭೂತಾನ್ಯಮೂನ್ಯೇಷಾ ವಿರಾಜೋ ಬ್ರಹ್ಮಣಸ್ತನುಃ ॥ 13 ॥** 62

ತೇಜಸ್ಸಿನಿಂದ ನೀರು ; ಅದರಿಂದ ಪೃಥ್ವೀ ಹುಟ್ಟಿತು. ಇವುಗಳೇ ಮಹಾಭೂತಗಳು. ಇವು ಗಳೇ [ಪರ] ಬ್ರಹ್ಮದ ದೇಹವಾದ ವಿರಾಜ್.

ಇಲ್ಲಿಂದ ಮುಂದಕ್ಕೆ ಸೂಕ್ಷ್ಮಾವಸ್ಥೆಯಿಂದ ಸ್ಥೂಲವಾದ ಸೃಷ್ಟಿಯು ವಿಕಾಸವಾದುದನ್ನು ಹೇಳಿದೆ. ಇಲ್ಲಿ ಆಕಾಶ, ವಾಯು, ತೇಜಸ್ಸು, ಅಪ, ಪೃಥ್ವೀ ಎಂಬುವುಗಳನ್ನು ಆಯಾ ಸ್ಥೂಲಭೂತಗಳೆಂದು ತಿಳಿಯಲಾಗದು. ಇಡೀ ಬ್ರಹ್ಮಾಂಡದಲ್ಲಿ ಅವ್ಯಕ್ತವಾದ ಆತ್ಮನು ಪೂರ್ಣವ್ಯಕ್ತನಾದ ಸ್ಥಿತಿಯನ್ನು ಪಡೆಯಲು ಬೇಕಾಗುವ

ತತ್ತ್ವಗಳು ಅಥವಾ ಅವಸ್ಥೆಗಳು ಎಂದು ಬೇಕಾದರೆ ಸ್ಥೂಲವಾಗಿ ತಿಳಿಯಬಹುದು. ಜಗತ್ತಿನಲ್ಲಿ ಸೃಷ್ಟಿಕ್ರಮವನ್ನು ವಿವರಿಸುವ ಎಲ್ಲ ಮತಗಳೂ ಪ್ರಾಥಮಿಕವಾದ ಇಂತಹ ಕೆಲವು ಮೂಲಧಾತುಗಳನ್ನು ಒಪ್ಪಿಕೊಳ್ಳುತ್ತವೆ. ದೈಹಿಕ ದೃಷ್ಟಿಯಿಂದ ಇವನ್ನು ಚರಕನು ಹೀಗೆ ಹೇಳುತ್ತಾನೆ:

ಮಹಾಭೂತಾನಿ ಖಂ ವಾಯುರಗ್ನಿರಾಪಃ ಕ್ಷಿತಿಸ್ತಥಾ ।
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಶ್ಚ ತದ್ಗುಣಾಃ ॥ [30]

ವಿರಾಜ್ ಎಂದರೆ ಪ್ರಕಾಶಿಸು ಎಂದರ್ಥ. ಮಹಾಭೂತಗಳ ರೂಪದಲ್ಲಿ ಪ್ರಕಟವಾಗುವುದರಿಂದ ಅದು ವಿರಾಜ್.

**ಬ್ರಹ್ಮ ಬ್ರಹ್ಮಾಣಮಸೃಜತ್ ತಸ್ಮೈ ವೇದಾನ್ ಪ್ರದಾಯ ಚ ।**
**ಭೌತಿಕಂ ವೇದಶಬ್ದೇಭ್ಯಃ ಸರ್ಜಯಾಮಾಸ ತೇನ ತತ್ [7] ॥ 14 ॥** 63

[ವಿರಾಡ್]ಬ್ರಹ್ಮವು [ಚತುರ್ಮುಖ]ಬ್ರಹ್ಮನನ್ನು ಸೃಷ್ಟಿಸಿತು. ಅವನಿಗೆ ವೇದಗಳನ್ನು ಕೊಟ್ಟು ಅವನ ಮೂಲಕ ವೇದಶಬ್ದಗಳಿಂದ ಭೌತಿಕವಾದುದನ್ನೆಲ್ಲವನ್ನೂ ಸೃಷ್ಟಿಮಾಡಿಸಿತು.

ಹಿಂದೂಗಳು ತಮ್ಮ ಎಲ್ಲಾ ಆಧ್ಯಾತ್ಮಿಕ ಮತ್ತು ಪ್ರಾಪಂಚಿಕ ಅನುಭವ, ವಿಷಯಗಳಿಗೂ (ವೇದ) ಶಬ್ದವನ್ನೇ ಪ್ರಮಾಣವಾಗಿ ಸ್ವೀಕರಿಸುತ್ತಾರೆ. ಪರಬ್ರಹ್ಮವು ಬ್ರಹ್ಮನನ್ನು ಸೃಷ್ಟಿಸಿದಮೇಲೆ ಸಂಹಾರಪೂರ್ವದಲ್ಲಿ ಪ್ರಚಲಿತವಾಗಿದ್ದ ವೇದಗಳನ್ನು ಅವನಿಗೆ ಕೊಡುತ್ತದೆ; ಅವುಗಳಲ್ಲಿನ ಶಬ್ದಗಳಿಗೆ ವಿಷಯಗಳಾದ ವಸ್ತುಗಳೆಲ್ಲವನ್ನೂ ಬ್ರಹ್ಮನು ಸೃಷ್ಟಿಸುತ್ತಾನೆ ಎಂದು ಸನಾತನರ ನಂಬಿಕೆ.

**ತದಾಜ್ಞಯಾ ಽಸೃಜದ್ ಬ್ರಹ್ಮಾ ಮನಸೈವ ಪ್ರಜಾಪತೀನ್ ।**
**ತೇಭ್ಯಸ್ತು ರೈತಸೀ ಸೃಷ್ಟಿಃ ಶರೀರಾಣಾಂ ನಿರೂಪ್ಯತೇ ॥ 15 ॥** 64

ಅದರ (ವಿರಾಜದ) ಆಜ್ಞೆಯಿಂದ ಬ್ರಹ್ಮನು ಮನಸ್ಸಿನಿಂದಲೇ ಪ್ರಜಾಪತಿಗಳನ್ನು ಸೃಷ್ಟಿಸಿದನು. ಅವರುಗಳಿಂದಾದ ವೀರ್ಯಜನಿತ ದೇಹಗಳ ಸೃಷ್ಟಿಯು ಹೇಳಲ್ಪಡುತ್ತದೆ.

ದೇಹವಿಧಗಳು

**ಸ್ವೇದೋದ್ಭೇದಜರಾಯ್ವಂಡಹೇತುಭೇದಾಚ್ಚತುರ್ವಿಧಮ್ ।**
**ದೇಹಂ ಯೂಕಾಽಽದಿನಃ ಸ್ವೇದಾದ್ ಉದ್ಭೇದಾತ್ತು ಲತಾಽಽದಿನಃ ॥ 16 ॥** 65

ಬೆವರು, ಮೊಳಕೆ, ಗರ್ಭ, ಮೊಟ್ಟೆ—ಇವುಗಳು (ಉತ್ಪತ್ತಿಗೆ ಬೇರೆಬೇರೆ) ಕಾರಣಗಳಾದುದರಿಂದ ದೇಹವು ನಾಲ್ಕುವಿಧ: ಕೂರೆ ಮೊದಲಾದ ಬೆವರಿನಿಂದ (ಹುಟ್ಟಿದವುಗಳು); ಮೊಳಕೆಯಿಂದಾದರೋ ಬಳ್ಳಿ ಮೊದಲಾದವುಗಳು;

**ಜರಾಯೋರ್ಮಾನುಷಾದೀನಾಂ ಅಂಡಾತ್ತು ವಿಹಗಾದಿನಃ ।**
**ತತ್ರ ನಾದೋಽಪಯೋಗಿತ್ವಾನ್ಮಾನುಷಂ ದೇಹಮುಚ್ಯತೇ ॥ 17 ॥** 66

ಗರ್ಭದಿಂದ ಮನುಷ್ಯರೇ ಮೊದಲಾದವು [ದೇಹ]ಗಳು; ಮೊಟ್ಟೆಯಿಂದಾದರೋ ಹಕ್ಕಿ ಮೊದಲಾದವುಗಳು. ಅದರಲ್ಲಿ ನಾದವನ್ನು ಉಪಯೋಗಿಸುವುದರಿಂದ ಮನುಷ್ಯದೇಹವು ವರ್ಣಿಸಲ್ಪಡುತ್ತದೆ.

---

7 ಕ: ಸಃ. 8 ಗ: ಜ್ಞಾನೋ ?

---

30 ಚರಕ, (ಅಗ್ನಿವೇಶನಿಂದ ಸಂಹಿತೀಕೃತ), ಚರಕ ಸಂಹಿತೆ, IV, 1, 27; ಪು. 323.

ಮೇಲೆ ಹೇಳಿದ ನಾಲ್ಕು ವಿಧಧ ಪ್ರಾಣಿಗಳಲ್ಲಿಯೂ ಮನುಷ್ಯದೇಹವೇ ಜಗತ್ತಿನ ವ್ಯವಹಾರಕ್ಕೆ ಆಶ್ರಯವಾದ ನಾದವನ್ನು ಉಂಟುಮಾಡಿ ಬಳಸಬಲ್ಲುದು. ಆದುದರಿಂದಲೇ ಅದರ ವರ್ಣನೆ. ಕುನ್ಹನ್‌ರಾಜಾ 'ನಾದದ ವಿವರಣೆಗೆ ಉಪಯೋಗವಾಗುವುದರಿಂದ ಮನುಷ್ಯದೇಹವು ವರ್ಣಿಸಲ್ಪಡುತ್ತದೆ' ಎಂದು ಅರ್ಥಮಾಡುತ್ತಾನೆ [31]. ಇನ್ನು ಮುಂದೆ ಸುಮಾರು ನೂರೈವತ್ತು ಶ್ಲೋಕಗಳಲ್ಲಿ ಶಾರ್ಙ್ಗದೇವನು ಮನುಷ್ಯದೇಹದ ಹುಟ್ಟು, ಅದರ ರಚನೆ ಮೊದಲಾಗಿ ವಿಶದವಾಗಿ ವರ್ಣಿಸುತ್ತಾನೆ. ಈ ಭಾಗವು ಆಧುನಿಕರಲ್ಲಿ ಕೆಲವರಿಗೆ ಅಸಂಬದ್ಧವಾಗಿ ಕಾಣಬಹುದು. ಈ ವರ್ಣನೆಯ ಔಚಿತ್ಯವನ್ನು ಕುರಿತು ಈಗಾಗಲೇ ಬರೆಯಲಾಗಿದೆ. ಸಂಗೀತರತ್ನಾಕರದಂತಹ 4,682 ಶ್ಲೋಕಗಳನ್ನುಳ್ಳ ಬೃಹದ್ಗ್ರಂಥಕ್ಕೆ 150 ಶ್ಲೋಕಗಳ ವಿಸ್ತಾರವು ಅಧಿಕವೇನೂ ಅಲ್ಲ ; ಅಲ್ಲದೆ ಮನುಷ್ಯದೇಹವನ್ನೂ ಅದರ ಆರೋಗ್ಯವನ್ನೂ ಪುರುಷಾರ್ಥಚತುಷ್ಟಯದ ಸಾಧನೋಪಕರಣವಾಗಿ ತಿಳಿಯಬೇಕೆಂದು ಶಾಸ್ತ್ರವು ಹೇಳುತ್ತದೆ. ಆದುದರಿಂದ ಈ ಉಪಕರಣದ ಖಚಿತಜ್ಞಾನವು ಆವಶ್ಯಕವಾದುದು. ಶಾರ್ಙ್ಗದೇವನು ಸಂಗೀತದಲ್ಲಿ ಮಾತ್ರವಲ್ಲದೆ ಆಧ್ಯಾತ್ಮಜ್ಞಾನದಲ್ಲೂ ಆಯುರ್ವೇದದಲ್ಲೂ ಮಹಾಪಂಡಿತನಾದುದರಿಂದ ಮನುಷ್ಯಶರೀರಕ್ಕೂ ನಾದೋತ್ಪತ್ತಿಗೂ ಇರುವ ಸಂಬಂಧವನ್ನು ವೈಜ್ಞಾನಿಕವಾಗಿ ಹೇಳುವುದಕ್ಕೆ ಅವನಿಗಿಂತ ಅರ್ಹರಿಲ್ಲ. ನಮ್ಮ ಸಂಗೀತಶಾಸ್ತ್ರದ ಇತಿಹಾಸದಲ್ಲಿ ಇಷ್ಟು ವಿಸ್ತಾರವಾಗಿಯೂ ಪಾಂಡಿತ್ಯಪೂರ್ಣವಾಗಿಯೂ ಈ ವಿಷಯದಲ್ಲಿ ಅವನೊಬ್ಬನೇ ಬರೆದಿರುವುದು. ಅವನ ವೈದುಷ್ಯದ ಪೂರ್ಣ ಪ್ರಯೋಜನವನ್ನು ಪಡೆಯುವುದು ನಮ್ಮ ಕರ್ತವ್ಯವೂ ಆವಶ್ಯಕತೆಯೂ ಆದುದರಿಂದ—ಸ್ವಲ್ಪ ಅಸಂಬದ್ಧವಾಗಿ ಹೊರನೋಟಕ್ಕೆ ಕಂಡುಬರಬಹುದಾದರೂ—ಈ ಭಾಗವನ್ನು ಚರಕ, ಸುಶ್ರುತ ವಾಗ್ಭಟ, ಯಾಜ್ಞವಲ್ಕ್ಯರೇ ಆದಿಯಾಗಿ ಆಯುರ್ವೇದಾಚಾರ್ಯರ ಮತಗಳೊಡನೆಯೂ ಗ್ರೇ, ಕೆನ್ನೆತ್‌ವಾಕರ್, ಅಲೆಕ್ಸಿಸ್ ಕ್ಯಾರೆಲ್ ಮತ್ತು ಎಡಿತ್‌ಸ್ಪ್ರೌಲ್ ಮೊದಲಾದ ಆಧುನಿಕ ಶರೀರಶಾಸ್ತ್ರಜ್ಞರ ಅಭಿಪ್ರಾಯಗಳೊಡನೆಯೂ ತುಲನೆಮಾಡಿ ವಿವರಿಸಿದ್ದೇನೆ. ಅಲ್ಲದೆ ಅವನು ವ್ಯವಹರಿಸಿರುವ ಕೌಲವೇ ಮುಂತಾದ ಶಾಸ್ತ್ರಗಳಲ್ಲಿಯೂ ಅವನ ಪಾಂಡಿತ್ಯದ ಆಳವನ್ನು ತೋರಿಸಿಕೊಡಲು ಹಲವಾರು ಪ್ರಾಚೀನ ಮತ್ತು ಆಧುನಿಕ ಆಕರಗಳ ಸಹಾಯದಿಂದ ಯಥಾಮತಿ ಪ್ರಯತ್ನಿಸಿದ್ದೇನೆ. ಪ್ರಾಚೀನ ಭಾರತದಲ್ಲಿ ಶಾರ್ಙ್ಗದೇವನಂತಹ ಮಹಾನುಭಾವರಾದ ಪಂಡಿತರುಗಳು ಪಡೆದಿದ್ದ ಅಗಾಧವಾದ ಜ್ಞಾನಸಂಪತ್ತಿನ ವಿಷಯದಲ್ಲಿ ನನ್ನ ಹಾಗೆಯೇ ವಾಚಕರೂ ಆಶ್ಚರ್ಯ, ಗೌರವ, ಶ್ರದ್ಧೆ ಮತ್ತು ಹೆಮ್ಮೆಗಳನ್ನು ತಳೆದರೆ ನನ್ನ ಪ್ರಯತ್ನ ಸಾರ್ಥಕವಾದಂತೆಯೇ.

ಮನುಷ್ಯಶರೀರದ ಸೃಷ್ಟಿ

**ಕ್ಷೇತ್ರಜ್ಞಃ ಸ್ಥಿತ ಆಕಾಶ ಆಕಾಶಾದ್ವಾಯುಮಾಗತಃ ।**
**ವಾಯೋರ್ಧೂಮಂ ತತಶ್ಚಾಭ್ರಮಭ್ರಾನ್ಮೇಘೋಽವತಿಷ್ಠತೇ ॥ 18 ॥** 67

ಕ್ಷೇತ್ರಜ್ಞನು ಆಕಾಶದಲ್ಲಿರುತ್ತಾನೆ ; ಆಕಾಶದಿಂದ ವಾಯುವಿಗೆ ಬರುತ್ತಾನೆ. ವಾಯುವಿನಿಂದ ಹಬೆಗೆ ; ಆದರಿಂದ ವಾತಾವರಣಕ್ಕೆ ; ವಾತಾವರಣದಿಂದ ಮೇಘದಲ್ಲಿ ಬಂದಿರುತ್ತಾನೆ.

ಧೂಮ ಎನ್ನುವುದಕ್ಕೆ ಕುನ್ಹನ್‌ರಾಜಾ ಹೊಗೆ ಎಂದರ್ಥಮಾಡುತ್ತಾನೆ [31]. ಹಬೆ (vapour) ಎನ್ನುವುದೇ ಇಲ್ಲಿ ಒಪ್ಪುವ ಅರ್ಥ. ಅಭ್ರವೆನ್ನುವುದು ನೀರಿಲ್ಲದ ಮೋಡ ; ಮೇಘವೆಂದರೆ ಮಳೆಸುರಿಸುವ ಮೋಡ. ಅಭ್ರ ಎನ್ನುವುದಕ್ಕೆ ಸಿಂಹಭೂಪಾಲ, ಕಲ್ಲಿನಾಥ ಮತ್ತು ಕುನ್ಹನ್‌ರಾಜಾರವರುಗಳು ಹೇಳುವ 'ಮೋಡ' ಎಂಬ ಅರ್ಥವನ್ನು ಬಿಟ್ಟು ವಾತಾವರಣ ಎಂಬ ಸಮಾಕರಣವನ್ನು ಗ್ರಹಿಸಿದ್ದೇನೆ. ಇದಕ್ಕೆ ಆಧಾರ ಮಾಘನ ಶಿಶುಪಾಲವಧೆ [32].

31 ಕುನ್ಹನ್‌ರಾಜಾ, ಉ. ಗ್ರಂ., ಪು. 14.

32 ಮಾಘ, ಶಿಶುಪಾಲವಧೆ : IX, 3.

ಶರೀರಕ್ಕೆ ಕ್ಷೇತ್ರವೆಂದು ಹೆಸರು. ಶರೀರವೇ ನಾನು ಅಥವಾ ಅದು ನನ್ನದು ಎಂಬ ಅಹಂಪ್ರಜ್ಞೆಯುಳ್ಳದ್ದೇ ಕ್ಷೇತ್ರಜ್ಞ. ಭಗವದ್ಗೀತೆಯಲ್ಲಿ ಇದನ್ನು ಹೀಗೆ ಹೇಳಿದೆ :

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ, ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ [33]

ಚರಕನು ಕ್ಷೇತ್ರವನ್ನು ಹೀಗೆ ವಿಶದಪಡಿಸುತ್ತಾನೆ :

ಖಾದೀನಿ ಬುದ್ಧಿರವ್ಯಕ್ತಮಹಂಕಾರಸ್ತಥಾ ಽಷ್ಟಮಃ ।
ಭೂತಪ್ರಕೃತಿರುದ್ದಿಷ್ಟಾ ವಿಕಾರಾಶ್ಚೈವ ಷೋಡಶ ॥
ಬುದ್ಧೀಂದ್ರಿಯಾಣಿ ಪಂಚೈವ ಪಂಚ ಕರ್ಮೇಂದ್ರಿಯಾಣಿ ಚ ।
ಸಮನಸ್ಕಾಶ್ಚ ಪಂಚಾರ್ಥಾ ವಿಕಾರಾ ಇತಿ ಸಂಜ್ಞಿತಾಃ ॥
ಇತಿ ಕ್ಷೇತ್ರಂ ಸಮುದ್ದಿಷ್ಟಂ ಸರ್ವಮವ್ಯಕ್ತವರ್ಜಿತಮ್ ।
ಅವ್ಯಕ್ತಮಸ್ಯ ಕ್ಷೇತ್ರಸ್ಯ ಕ್ಷೇತ್ರಜಂ ಋಷಯೋ ವಿದುಃ ॥ [34]

**ಆಹುತ್ಯಾ ಽಽಪ್ಯಾಯಿತೋ ಗ್ರಸ್ತರಸೋ ಗ್ರೀಷ್ಮೇ ಚ ಭಾನುಭಿಃ ।**
**ಭಾನುರ್ಮೇಘೇ ಘನರಸಂ ನಿಧತ್ತೇ ತಂ ಬಲಾಹಕಃ ॥ 19 ॥** 68

[ಯಜ್ಞಾದಿಗಳಲ್ಲಿ ಕೊಟ್ಟ] ಆಹುತಿಯಿಂದ ತೃಪ್ತಿಪಡೆದ ಸೂರ್ಯನಿಂದ ಬೇಸಿಗೆಯಲ್ಲಿ ನೀರು <ರಸಃ> ಎಳೆದುಕೊಳ್ಳಲ್ಪಡುತ್ತದೆ. ಸೂರ್ಯನು [ಈ] ನೀರನ್ನು [35] <ಘನರಸಂ> ಮೇಘದಲ್ಲಿರಿಸುತ್ತಾನೆ. ಅದನ್ನು ಮೇಘವು—

**ಯದಾ ವರ್ಷತಿ ವರ್ಷೇಣ ಸಹ ಜೀವಸ್ತದಾ ಭುವಃ [9] ।**
**ವನಸ್ಪತ್ಯೋಷಧೀರ್ಜಾತಾಃ ಸಂಕ್ರಾಮತ್ಯವಿಲಕ್ಷಿತಃ ॥ 20 ॥** 69

—ಮಳೆಯಾಗಿ ಹುಯ್ಯುವಾಗ ಅದರೊಡನೆ ಜೀವನು (ಭೂಮಿಗೆ ಬಂದು) ಗಿಡಮೂಲಿಕೆಗಳಲ್ಲಿ [ಯಾರಿಂದಲೂ] ಗಮನಿಸಲ್ಪಡದೆಯೇ ಪ್ರವೇಶಿಸುತ್ತಾನೆ.

**ತಾಭ್ಯೋ ಽನ್ನಂ ಜಾತಮನ್ನಂ ತತ್ಪುರುಷೈಃ ಶುಕ್ಲತಾಂ ಗತಮ್ । [10]**
**ಶುದ್ಧಾರ್ತವಾಯಾ ಯೋಷಾಯಾ ನಿಷಿಕ್ತಂ ಸ್ಮರಮಂದಿರೇ ॥ 21 ॥** 70

ಅವುಗಳಿಂದ (ಗಿಡಮೂಲಿಕೆಗಳಿಂದ) ಅನ್ನವು ಹುಟ್ಟಿದೆ. ಅನ್ನವು ಗಂಡಸರ ವೀರ್ಯದಲ್ಲಿದ್ದುಕೊಂಡು [36] ಯುವತಿಯ ಜನನಾಂಗದಲ್ಲಿರುವ ಶುದ್ಧರಜಸ್ಸಿನೊಡನೆ ಸೇರಿಸಲ್ಪಟ್ಟು—

---

9 ಕ : ಭುವಿ.

10 ಕ :_ಜಾತಾಮಾತ್ರಂ ಚ ಪುರುಷೇ ಶುಕ್ರತಾಂ ಗತಮ್. ಕ ಆಕರದಲ್ಲಿ ಶುಕ್ಲಪದವನ್ನು ಶುಕ್ರವೆಂದು ವ್ಯವಹರಿಸಿದೆ.

---

33 ಭಗವದ್ಗೀತೆ, XIII, 2.

34 ಚರಕ, ಉ. ಗ್ರಂ., IV, 1, 63_65. ಪು. 293.

35 ಆವಿಯಾಗಿದ್ದ ನೀರನ್ನು ಪುನಃ ದ್ರವೀಕರಿಸಿದ್ದರಿಂದ ಘನರಸವೆಂದು ಬಹುಶಃ ಕರೆದಿದ್ದಾನೆ. ಘನರಸವೆಂದರೆ ಕಷಾಯ ಮತ್ತು ಗಟ್ಟಿಯಾದ ರಸ ಎಂಬ ಅರ್ಥಗಳಿವೆ.

36 ಗಂಡಸರು ಅನ್ನವನ್ನು ತಿಂದಾಗ ಅದು ಅರಗಿ ವೀರ್ಯವಾಗುವುದೆಂದೂ, ಹೆಂಗಸರಲ್ಲಿ ಅದು ರಜಸ್ಸಾಗುವುದೆಂದೂ ಭಾವ.

**ಸಹಾರ್ತವೇನ ಶುದ್ಧಂ ಚೇದ್ಗರ್ಭಾಶಯಗತಂ ಭವೇತ್ ।**
**ಜೀವಕರ್ಮಪ್ರೇರಿತಂ ತದ್[11]ಗರ್ಭಮಾರಭತೇ ತದಾ ॥ 22 ॥** 71

[ಅ] ರಜಸ್ಸಿನೊಡನೆ ಶುದ್ಧವಾಗಿ ಗರ್ಭಕೋಶವನ್ನು ಒಳಹೊಕ್ಕರೆ ಆಗ ಜೀವ[ನ] ಕರ್ಮಗಳಿಂದ ಪ್ರಚೋದಿತವಾಗಿ ಅದು ಗರ್ಭವನ್ನು ಪ್ರಾರಂಭಮಾಡುತ್ತದೆ.

ಸೃಷ್ಟಿಕ್ರಮವನ್ನು ವಿವರಿಸುವ ಈ ವಾದವು ಪ್ರಾಚೀನಭಾರತಕ್ಕೇ ವಿಶಿಷ್ಟವಾದುದು. ನಮ್ಮ ದುರದೃಷ್ಟದಿಂದ ಹೇಗೆಂದರೆ ಹಾಗೆ ವ್ಯಾಖ್ಯಾನಮಾಡಬಹುದಾದಷ್ಟು ಅಸ್ಪಷ್ಟವೂ ಸಾಮಾನ್ಯವೂ ಆಗಿದೆ, ಈ ಸೃಷ್ಟಿವಾದ. ಆಧುನಿಕಸೃಷ್ಟಿವಾದಗಳಿಗೆ ಅದು ಅನುಗುಣವಾಗಿಯೇ ಇದೆ ಎಂದುಕೊಳ್ಳಬೇಕೆಂದಿರುವವರು ಹೀಗೆ ಅನ್ವಯಮಾಡಬಹುದು : ಸೃಷ್ಟಿಪೂರ್ವದಲ್ಲಿ ನಿರ್ಗುಣ ಬ್ರಹ್ಮವಲ್ಲದೆ ಮತ್ತೇನೂ ಇರಲಿಲ್ಲ. ಅದು ಅಹಂಪ್ರಜ್ಞೆಯನ್ನು ತಳೆದು (ಅವಿದ್ಯೆಯನ್ನು ತಳೆದು) ಆಕಾಶವನ್ನುಂಟುಮಾಡಿತು. ಅದರಲ್ಲಿ ಅನಿಲವೂ ಅನಿಲದಿಂದ ಶಾಖವೂ (ತೇಜಸ್ಸೂ,) ಅನಿಲವು ಶಾಖವನ್ನು ಕಡಿಮೆಮಾಡಿಕೊಂಡು ದ್ರವ(ಆಪ)ವೂ ಅದು ಮತ್ತೂ ಶಾಖವನ್ನು ಕಳೆದುಕೊಂಡು ಘನವೂ (ಪೃಥ್ವಿಯೂ) ಆದವು. ಇಡೀ ವಿಶ್ವದಲ್ಲಿನ ಎಲ್ಲಾ ವ್ಯಾಪಾರಗಳನ್ನೂ ವ್ಯವಸ್ಥೆಗೊಳಿಸುವ ಪ್ರಜ್ಞೆಯೊಂದಿದೆಯೆಂದು ಬಹುಮಂದಿ ವಿಜ್ಞಾನಿಗಳು ಒಪ್ಪುತ್ತಾರೆ. ವಿಶ್ವದ ಇತಿಹಾಸವು ಸುಸ್ಪಷ್ಟವಾಗಿ ವಿಕಾಸಭೂಯಿಷ್ಠವಾಗಿದೆ. ಜಗತ್ತಿನಲ್ಲಿ ನಡೆಯುವ ಭೌತಿಕ ಮತ್ತು ಅಭೌತಿಕ ವ್ಯಾಪಾರಗಳೆಲ್ಲವೂ ನಿರ್ದಿಷ್ಟವೂ ಪ್ರಗತಿಪರವೂ ಆದ ಬೆಳವಣಿಗೆಯನ್ನೇ ಸೂಚಿಸುತ್ತವೆ. ದ್ರವ್ಯ ಮತ್ತು ಶಕ್ತಿಗಳ ನಡುವೆ ಇರುವ ವ್ಯತ್ಯಾಸವು ಮಾಯವಾಗಿ ಎರಡಕ್ಕೂ ಆಧಾರಭೂತವಾದ ಮತ್ತೇನೋ ಇರುವಂತೆ ಭಾಸವಾಗುತ್ತಿದೆ : ಇಡೀ ಸೃಷ್ಟಿಯಲ್ಲಿಯೇ ಒಂದು ನಿರ್ದಿಷ್ಟ ಮಾದರಿಯೂ ಅದನ್ನು ನಡೆಸುತ್ತಿರುವ ಮಹಾಪ್ರಜ್ಞೆಯೂ ಇರುವುದೆಂದು ವಿಜ್ಞಾನಿಗಳು ನಂಬಲು ಪ್ರಾರಂಭಿಸಿದ್ದಾರೆ. ಐನ್‌ಸ್ಟೈನನಂತಹ ಮಹಾವಿಜ್ಞಾನಿಯೂ ಇಂತಹ ಅಹಂ ಪ್ರಜ್ಞೆಯ ಅಸ್ತಿತ್ವವನ್ನು ಒಪ್ಪುತ್ತಾನೆ.[37]

ಆದರೆ ಮೇಲೆ ಹೇಳಿದ ವಾದವು ವಿಶ್ವದಲ್ಲಿನ ಸಂಕೀರ್ಣತೆಯನ್ನೂ ಅನುಭವವಿಶ್ಲಿಷ್ಟವಾದ ಸಂಗತಿಗಳನ್ನೂ ವಿವರಿಸಲಾರದು. ಆಧುನಿಕ ಪಾಶ್ಚಾತ್ಯವಿಜ್ಞಾನದಲ್ಲಿ ಇಂದು ವಿಶ್ವಸೃಷ್ಟಿಯ ಬಗೆಗೆ ಮುಖ್ಯವಾಗಿ ಎರಡು ವಾದಗಳಿವೆ. ಮೊದಲನೆಯದಾಗಿ, ಸೃಷ್ಟಿಪೂರ್ವದಲ್ಲಿ ಏನೂ ಇರಲಿಲ್ಲವೆಂದೂ ವಿಶ್ವವು ಒಂದು ನಿರ್ದಿಷ್ಟಕಾಲಕ್ಕಿಂತ ಮುಂಚೆ ಸೃಷ್ಟವಾಗಿ (ಎಂದರೆ ಅನಾದಿಯಲ್ಲದೆ) ವಿಕಾಸಕ್ಕೆ ಒಳಗಾಯಿತೆಂದೂ ಜಾರ್ಜ್ ಗ್ಯಾಮೋ ಮೊದಲಾದವರು ಮಂಡಿಸುವ ವಾದ. ಇದರ ಪ್ರಕಾರ ಸೃಷ್ಟಿಸಂಹಾರಗಳು ಚಕ್ರದಂತೆ ಕೊನೆಮೊದಲಿಲ್ಲದಿರಬಹುದು. ಇಂದಿನ ವಿಶ್ವವು ಸುಮಾರು ಮುನ್ನೂರು ಕೋಟಿ ವರ್ಷಗಳಿಗೆ ಮುಂಚೆ ಪ್ರಾರಂಭವಾಯಿತು. ಆಗ ಅದರಲ್ಲಿದ್ದ ದ್ರವ್ಯದ ಸ್ವಭಾವವು ನಮಗೆ ತಿಳಿಯದು. ಇದಕ್ಕೂ ಮುಂಚೆ ಅದು ಅತ್ಯಂತ ಸಂಕುಚಿತ ಸ್ಥಿತಿಯಲ್ಲಿತ್ತು.[38] ಈ ಸ್ಥಿತಿಯಲ್ಲಿ ಅಣುವಿಗೆ ಆಧಾರಭೂತವಾದ ಮೂಲದ್ರವ್ಯಗಳೆಲ್ಲವೂ ಉಂಟಾದವು. ಈ ಸಂಕೋಚಕ ಶಕ್ತಿಗಳ ಪ್ರತಿಕ್ರಿಯೆಯಿಂದಲೇ ಅದು ಪುನಃ ಹಿಗ್ಗಲು ಪ್ರಾರಂಭವಾಯಿತು. ಇದರಿಂದ ವಿವಿಧ ನೀಹಾರಕಗಳು ಉಂಟಾದವು[39]. ಇವುಗಳಿಂದ ಸೂರ್ಯರೂ ಅವುಗಳ ಗ್ರಹಗಳೂ ಉಂಟಾದವು.

---

11 ಅ, ಕ : ಸದ್.

---

37 Albert Einstein, *cit.,* Kenneth W. Gatland *and* Derek D. Dempster, The Inhabited Universe, pp. 160–169.

38 George Gamow, Creation of the Universe, pp. 37–40.

39 *Ibid.*, Ch, II,

## 2. ಪಿಂಡೋತ್ಪತ್ತಿ ಪ್ರಕರಣ

ಎರಡನೆಯ ಮತದ ಪ್ರಕಾರ ವಿಶ್ವವು ಅನಾದಿ. ಅದು ಶಾಶ್ವತವಾದುದು. ಈ ದೃಷ್ಟಿಯಲ್ಲಿ, ಪ್ರತಿಕ್ಷಣ ದಲ್ಲಿಯೂ ವಿಶ್ವದಲ್ಲಿ ಹೊಸದ್ರವ್ಯವು ಸೃಷ್ಟಿಯಾಗುತ್ತಿರುವುದೆಂದೂ ತನ್ನ ಸ್ವಭಾವದಿಂದಲೇ ಅನಾದಿಯಾದ ವಿಶ್ವವು ಅನಂತವೂ ಆಗಿರುವುದೆಂದೂ, ಅನಂತಕಾಲದಲ್ಲಿ ಅದು ಅನಂತವಾಗಿ ಹಿಗ್ಗುತ್ತಲೇ ಇರುವುದೆಂದೂ ಫ್ರೆಡ್‌ಹಾಯ್ಲ್ ಮೊದಲಾದ ಸೃಷ್ಟಿಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ[40]. ವಿಶ್ವದ ಶಾಶ್ವತತ್ವವನ್ನೇ ಪ್ರತಿಪಾದಿಸುತ್ತಾ ನಿರೀಶ್ವರ ವಾದಿಗಳು, ಉದಾಹರಣೆಗೆ ವೊರೊಂಟ್ಸೋವ್—ವೆಲ್ಯಮಿನೋಫ್ ಮೊದಲಾದ ರಷ್ಯನ್ ಸೃಷ್ಟಿಶಾಸ್ತ್ರಜ್ಞರು, ಅದು ಆದಿ–ಅಂತ್ಯಗಳಿಲ್ಲದೆ ಯಾವಾಗಲೂ ಹೆಚ್ಚುಕಡಿಮೆ ಒಂದೇ ಸ್ಥಿತಿಯಲ್ಲಿ ಮುಂದುವರೆಯುತ್ತಿರುವುದೆಂದೇ ಹೇಳುತ್ತಾರೆ[41]. ಇವುಗಳಲ್ಲಿ ಇದೇ ಸರಿಯಾದುದು ಎಂದು ಹೇಳಲು ನಿರ್ಣಾಯಕ ಸಾಕ್ಷ್ಯಗಳು ಇನ್ನೂ ದೊರೆತಿಲ್ಲ

ಆಧುನಿಕರಲ್ಲಿಯೂ ಜೀವರಾಶಿಯ ಸೃಷ್ಟಿ ಹೀಗೇ ನಡೆಯಿತೆಂದು ಹೇಳುವ ತಿಳುವಳಿಕೆಯಿಲ್ಲ. ಶಾರ್ಙ್ಗದೇವನದ ಹೆಚ್ಚುಕಡಿಮೆ ಆಧ್ಯಾತ್ಮಿಕ ವಿವರಣೆ. ಸ್ಥೂಲರೂಪದಲ್ಲಿ ಭೌತಿಕವಾಗಿ ಕಾಣುವುದನ್ನೇ ಅವನು ಹೇಳಿದ್ದಾನೆ. ಅವನು ಹೇಳುವ ಸೃಷ್ಟಿಯ ಅನುಕ್ರಮವು ಶ್ರುತ್ಯಾಧಾರಿತವಾದುದು. ಆತ್ಮನಿಂದ ಉದ್ಭವವಾದ ಆಕಾಶದಲ್ಲಿ ಪ್ರಾಣವು ಸೂಕ್ಷ್ಮರೂಪಿನಿಂದ ಇದ್ದು ನೀರಿನ ಮೂಲಕ ಸಸ್ಯಾದಿಗಳಲ್ಲಿ ಸೇರಿಕೊಂಡು ಆಹಾರರೂಪಿನಲ್ಲಿ ಮನುಷ್ಯನ ದೇಹವನ್ನು ಸೇರುತ್ತದೆ. ಅಲ್ಲಿ ಅದು ವೀರ್ಯಗತವಾಗುತ್ತದೆ. ಇದೇ ಪ್ರಾಣನಿರ್ಮಾಣಕ್ಕೆ ಮೂಲದ್ರವ್ಯ. ಸಸ್ಯಗಳೂ ಜೀವಿಗಳೇ ಎನ್ನುವುದನ್ನು ಈ ವಾದವು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಆಧುನಿಕ ವಿಜ್ಞಾನದಲ್ಲಿ ಜೀವಸೃಷ್ಟಿಯ ವಿಷಯದಲ್ಲಿ ಮೂರು ಸಿದ್ಧಾಂತಗಳಿವೆ:

ಒಪರಿನ್ ಮೊದಲಾದವರು ಭೂಮಿಯ ಮೇಲುಮೈ ತಣ್ಣಗಾಗಲು ಪ್ರಾರಂಭವಾದಾಗ ಇಂಗಾಲದ ದ್ವಿಧಾತು ಸಂಯುಕ್ತಗಳು (carbides) ಉಂಟಾದವೆಂದೂ ಇವುಗಳು ವಾತಾವರಣದಲ್ಲಿ ಅತ್ಯಧಿಕವಾಗಿದ್ದ ನೀರಾವಿಯೊಡನೆ ವರ್ತಿಸಿ ಹೈಡ್ರೋಕಾರ್ಬನ್ನುಗಳನ್ನು ಉಂಟುಮಾಡಿದವೆಂದೂ ಹೇಳುತ್ತಾರೆ. ಅಂದಿನ ವಾತಾವರಣದಲ್ಲಿದ್ದ ಸಾರಜನಕ ಮತ್ತು ಆಮ್ಲಜನಕಗಳು ವಿದ್ಯುತ್ತಿನ (ಮಿಂಚಿನ) ಸಂಘಾತದಿಂದಾಗಿ ಅಮೋನಿಯ ಅನಿಲವನ್ನು ಉಂಟುಮಾಡಿದವು ; ಅಮೋನಿಯವು ಮಿಥೇನ್ ಮೊದಲಾದ ಹೈಡ್ರೋಕಾರ್ಬನ್ನುಗಳೊಡನೆ ವರ್ತಿಸಿ ಕ್ಲಿಷ್ಟವಾದ ಸಸಾರಜನಕಸಂಯುಕ್ತಗಳನ್ನು ರಚಿಸಿದವು ; ಇವು ಸಾಗರಗಳಲ್ಲಿಯೂ ವಾತಾವರಣದಲ್ಲಿಯೂ ಇದ್ದ ಹಲವಾರು ರಸಾಯನಿಕ ಸಂಯುಕ್ತಗಳೊಡನೆ ವರ್ತಿಸಿ ಪ್ರಾಣಿಯ ಹುಟ್ಟು ಮತ್ತು ಬೆಳವಣಿಗೆಗೆ ಮೂಲದ್ರವ್ಯವಾದ ಪ್ರೋಟೀನ್ ಅಣುಗಳನ್ನು ಸೃಷ್ಟಿಸಿದವು ಎನ್ನುವುದು ಈ ವಾದದ ಸಾರಾಂಶ[42].

ಸ್ಟ್ಯಾನ್ಲಿಮಿಲ್ಲರನು ನಡೆಸಿದ ಪ್ರಯೋಗವನ್ನು ಅವಲಂಬಿಸಿ ಎಚ್. ಸಿ. ಯುರೀ ಮೊದಲಾದವರು ಪ್ರೋಟೀನ್ ಅಣುವಿಗೆ ರಚನಾದ್ರವ್ಯವಾದ ಅಮಿನೋ ಆಮ್ಲಗಳನ್ನು ಜಲಜನಕ, ನೀರು, ಅಮೋನಿಯ ಮತ್ತು ಮಿಥೇನ್‌ಗಳ ಸಂಯೋಗದಿಂದ ಪಡೆಯಬಹುದಾದ್ದರಿಂದ ಜೀವಸೃಷ್ಟಿಯು ಈರೀತಿ ನಡೆಯಿತೆಂದು ತಿಳಿಯುತ್ತಾರೆ. ಭೂಮಿಯು ತನ್ನ ವಿಕಾಸದ ಮೊದಲಿನ ಘಟ್ಟಗಳಲ್ಲಿದ್ದ ಭೌತಿಕ ಮತ್ತು ರಸಾಯನಿಕ ಸ್ಥಿತಿಗಳನ್ನೇ ಸರಿ–ಸುಮಾರಾಗಿ ಪ್ರಯೋಗಶಾಲೆಯಲ್ಲಿ ಪಡೆದು ಈ ವಸ್ತುಗಳನ್ನು ಸುಮಾರು ಒಂದುವಾರದಕಾಲ ಒಂದೇಸಮವಾಗಿ

---

40 Fred Hoyle, The Nature of the Universe.

41 A. Vorontzoff–Velyaminov, Gaseous Nebulae and New Stars: Reviewed in Astrophysical Journal, 1949, pp. 110, 315.

42 Oparin, Origin of Life.

ವಿದ್ಯುತ್ ಸಂಘಾತಕ್ಕೆ ಒಳಪಡಿಸಿದಾಗ ಮೂರು ಅಮಿನೋ ಆಮ್ಲಗಳು ಉತ್ಪತ್ತಿಯಾದವು. ಭೂಮಿಯಮೇಲಿನ ಪದರವು ಘನೀಕರಿಸಿದ ಹೊಸದರಲ್ಲಿ ಈ ರೀತಿಯಲ್ಲೇ ಸೃಷ್ಟಿಯಾಗಿರಬಹುದಾದ ಇವು ಸಾಗರಗಳಲ್ಲಿಯೂ ನೆಲದ ಮೇಲೂ ಇದ್ದ ಹಲವಾರು ರಸಾಯನಿಕ ವಸ್ತುಗಳೊಡನೆ ಸಂಯೋಗವಾಗಿ ವಿವಿಧ ಪ್ರೋಟೀನ್ ಅಣುಗಳನ್ನೂ ತನ್ಮೂಲಕ ಜೀವರಾಶಿಯನ್ನೂ ಕೊಟ್ಟಿರಬಹುದು [43].

ಈಚೆಗೆ (1956) ಹ್ಯಾಸ್ಸೆಲ್‌ಸ್ಟ್ರಾಂ, ಹೆನ್ರಿ ಮತ್ತು ಮುರ್ರ್‌ರವರುಗಳು ನಡೆಸಿದ ಪ್ರಯೋಗವು ಬಹು ಸ್ವಾರಸ್ಯವಾಗಿಯೂ ಅರ್ಥಪೂರ್ಣವಾಗಿಯೂ ಇದೆ. ಅಮೋನಿಯಂ ಅಸಿಟೇಟ್ ದ್ರಾವಣವನ್ನು ಪರಮಾಣುಬೀಜ ವಿಕರಣ (ರೇಡಿಯೋ ಆಕ್ಟಿವ್) ಪ್ರಸರಣಗಳಿಗೆ-ಮುಖ್ಯವಾಗಿ ಬೀಟಾಕಿರಣಗಳಿಗೆ-ಒಳಪಡಿಸಿದಾಗ ಅಮಿನೋ ಆಮ್ಲಗಳು ಉತ್ಪತ್ತಿಯಾಗುತ್ತವೆಂದು ಅವರು ಕಂಡುಹಿಡಿದಿದ್ದಾರೆ. ಭೂಮಿಯು ಇನ್ನೂ ಶಿಶುವಾಗಿದ್ದಾಗ ಅದರಲ್ಲಿ ಅಮೋನಿಯಂ ಅಸಿಟೇಟ್ ಹೇರಳವಾಗಿತ್ತೆಂದೂ ಆಗ ಬಹು ಧಾರಾಳವಾಗಿ ಭೂಮಿಯನ್ನು ಆವರಿಸಿದ್ದ ರೇಡಿಯೋ ಆಕ್ಟಿವ್ ಪ್ರಸರಣಗಳಿಂದ ಅಮಿನೋ ಆಮ್ಲಗಳೂ ಅವುಗಳಿಂದ ಪ್ರೋಟೀನ್ ಅಣುವೂ, ಅವುಗಳಿಂದ ಜೀವ ರಾಶಿಯೂ ಉತ್ಪತ್ತಿಯಾಯಿತೆಂದು ಅವರು ವಾದಿಸುತ್ತಾರೆ. [44]

ಜೀವಾಣುಗಳ ಸೃಷ್ಟಿಯನ್ನು ಗ್ಯಾಟ್‌ಲ್ಯಾಂಡ್ ಮತ್ತು ಡೆಂಪ್‌ಸ್ಟರ್ ಬಹು ಹೃದ್ಯವಾಗಿಯೂ ನಾಟಕೀಯ ವಾಗಿಯೂ ವರ್ಣಿಸುತ್ತಾರೆ [45]. ಪ್ರಥಮ ಜೀವಾಣುವು ನದೀ ಮುಖಗಳಲ್ಲಿ, ಒದ್ದೆಯಾದ ಜೇಡಿಮಣ್ಣಿನಂತಹ ಪ್ರದೇಶಗಳಲ್ಲಿ ಉದ್ಭವಿಸಿತೆಂದು ರಸಾಯನಿಕ ಆಧಾರಗಳಮೇಲೆ ಬರ್ನಾಲ್ ಊಹಿಸುತ್ತಾನೆ [46].

ನಿರ್ಜೀವಿ (inorganic) ಸಾಮಗ್ರಿ ಸಲಕರಣೆಗಳಿಂದ ಪ್ರಥಮ ಜೀವಾಣುವು ಉತ್ಪತ್ತಿಯಾದ ಬಗೆಯನ್ನು ಕುರಿತು ಜಾರ್ಜ್ ಗ್ಯಾಮೋ ಒಪರಿನ್ ಅನ್ನು ಆಧರಿಸಿ ಸ್ವಾರಸ್ಯವಾದ ಸಿದ್ಧಾಂತವೊಂದನ್ನು ಮಂಡಿಸುತ್ತಾನೆ [47] :

ಭೂಮಿಯ ಮೇಲ್ಮೈ ಆರಲು ತೊಡಗಿದಾಗ ಅದರ ವಾತಾವರಣದಲ್ಲಿ ಸೂರ್ಯರಶ್ಮಿಗೂ ಅಭೇದ್ಯವಾದಷ್ಟು ದಟ್ಟವಾಗಿ ಕವಿದಿದ್ದ ನೀರಾವಿಯ ಮೋಡಗಳು ತಂಪಾಗಿ ಪ್ರಳಯಸದೃಶವಾಗಿ ಮಳೆಗರೆದವು. ಈ ಬೃಹಜ್ಜಲರಾಶಿ ತಕ್ಕ ಪಾತ್ರಗಳನ್ನು ಹುಡುಕಿಕೊಂಡು ಸಾಗರಸಮುದ್ರಗಳಾಯಿತು. ಈ ನೀರು ಆಯಾ ಪಾತ್ರದಲ್ಲಿ ಅಡಗಿದ್ದ ಲವಣಾದಿ ರಸಾಯನಿಕಸಂಯುಕ್ತಗಳನ್ನೂ ಮೇಲೆ ಹೇಳಿದ ರೀತಿಯಲ್ಲಿ ಇಂಗಾಲ-ಜಲಜನಕಗಳು ಮಾತ್ರ ಸಂಯೋಜಿಸಿ ಆದ ಹೈಡ್ರೋಕಾರ್ಬನ್ನುಗಳನ್ನೂ ಕರಗಿಸಿಕೊಳ್ಳತೊಡಗಿತು. ಸಾಗರಕ್ಕೆ ಬಂದು ಸೇರುತ್ತಿದ್ದ ಅಸಂಖ್ಯಾತ ನದಿ, ತೊರೆಗಳೂ ತಮ್ಮ ಪಾತ್ರಗಳಲ್ಲಿದ್ದ ರಸಾಯನಿಕ ವಸ್ತುಗಳನ್ನು ಕರಗಿಸಿಕೊಂಡು ಬಂದು ಸೇರಿಸುತ್ತಿದ್ದುದರಿಂದ ಕಾಲಕ್ರಮದಲ್ಲಿ ಇವುಗಳ ಅಂಶವು ಸಾಗರದ ನೀರಿನಲ್ಲಿ ಅಧಿಕವಾಗಿ ಬೆಳೆಯತೊಡಗಿತು. ಇದೇ ಸಮಯದಲ್ಲಿ ಪೂರ್ತಿಯಾಗಿ ಕರಗಲಾಗದ ಆದರೆ ಅತ್ಯಂತ ಸೂಕ್ಷ್ಮಗಾತ್ರದಲ್ಲಿ ವಿಭಜಿತವಾದ ಇತರ ರಸಾಯನಿಕ ವಸ್ತುಗಳೂ ಅದರಲ್ಲಿ ಸೇರುತ್ತ ಬಂದು ಈ ದ್ರಾವಣವು ಅಸ್ಫಟಿಕ ಸ್ವಭಾವದ ಲೋಳೆಯಾದ ರಸವಾಗಿ

43 Kenneth W. Gatland *and* Derek D. Dempster, *op, cit.*, p. 35.

44 Science, Vol. 125, p. 350.

45 Kenneth W. Gatland *and* Derek D. Dempster, *op. cit.*, pp. 31–32.

46 J. D. Bernal : Evolution of Life in the Universe, Journal of the British Interplanetary Society, May 1953, pp. 114–118.

47 George Gamow, Biography of the Earth, Ch. 9 ; Life on the Earth, pp. 155–180.

(colloidal solution) ಪರಿಣಮಿಸಿತು. ಒಂದು ಸೆಂಟಿಮೀಟರಿನ ಲಕ್ಷದಲ್ಲಿ ಒಂದರಿಂದ ಕೋಟಿಯಲ್ಲಿ ಒಂದರವರೆಗೆ ಅಲ್ಪಗಾತ್ರವಿರುವ ಈ ಅಸ್ಫಟಿಕ (ಕಲಾಯ್ಡ್) ರೇಣುಗಳಲ್ಲಿ ತನ್ನನ್ನು ಆವರಿಸಿರುವ ದ್ರಾವಣವನ್ನು ಆಕರ್ಷಿಸಿ ತನ್ನ ಸುತ್ತಲೂ ಏಕಕೇಂದ್ರಕಪರಿಧಿಗಳಲ್ಲಿ ದ್ರಾವಣದ ಅಣುಗಳ ಪದರಗಳನ್ನು ಉಳ್ಳ, ಹಾಗೂ ಇದರಿಂದ ತನ್ನ ಸ್ವಭಾವ, ಸ್ವರೂಪಗಳನ್ನು ಉಳಿಸಿಕೊಳ್ಳುವ ದ್ರಾವಣ ಪ್ರಿಯ (ಲಯೋಫಿಲಿಕ್) ಮತ್ತು ಇದಕ್ಕೆ ವಿರುದ್ಧ ವಾಗಿ ತನ್ನಿಂದ ದೂರಕ್ಕೆ ದ್ರಾವಣದ ಅಣುಗಳನ್ನು ವಿಕರ್ಷಿಸುವ ದ್ರಾವಣವಿದ್ವೇಷಿ (ಲಯೋಫೋಬಿಕ್) ಎಂಬ ಎರಡು ವಿಧಗಳಿವೆ. ಇವುಗಳೆರಡೂ ಪರಸ್ಪರ ವಿರುದ್ಧವಾದ ವಿದ್ಯುದಂಶಗಳನ್ನು ಪಡೆದಿದ್ದು ಪರಸ್ಪರ ಆಕರ್ಷಿತವಾಗಿ ಒಂದಾದಾಗ ವಿದ್ಯುದಂಶವು ತಟಸ್ಥವಾಗುತ್ತದೆ. ಇದರಿಂದಾಗಿ ಇಂತಹ ಅನೇಕ ರೇಣುಗಳು ಒಟ್ಟುಗೂಡಿ, ಗಾತ್ರದಲ್ಲಿ ಬೆಳೆದು ಘನರೇಣುಗಳ ಪ್ರಮಾಣವನ್ನು ಪಡೆಯುತ್ತವೆ. ಈ ವಿಧದ ಘನೀಕರಣಕ್ಕೆ ಕೋಆಗ್ಯುಲೇಷನ್ ಎಂದು ಹೆಸರು. ಶಾಖ ಮತ್ತು ವಿದ್ಯುದ್ವಿಶ್ಲೇಷ್ಯಪದಾರ್ಥಗಳ ಪ್ರಭಾವ ಮುಂತಾದ ಇತರ ರೀತಿಗಳಿಂದಲೂ ಈ ಘನೀಕರಣ ವನ್ನು ಸಾಧಿಸಬಹುದು. ದ್ರಾವಣಪ್ರಿಯ ಅಸ್ಫಟಿಕಗಳೆರಡು ಸೇರುವುದರಿಂದ ಕೋಅಜರ್ವೇಟ್ ಎಂಬ ಮಿಶ್ರಣವು ಉಂಟಾಗಿ ಅದರಲ್ಲಿನ ಪ್ರತಿ ಕಣವೂ ತನ್ನ ಸ್ವಭಾವ, ಸ್ಥಿತಿಗಳನ್ನು ಕಾಪಾಡಿಕೊಳ್ಳುತ್ತದೆ. ತನ್ನನ್ನು ಆವರಿಸಿರುವ ದ್ರಾವಣದಿಂದ ಲವಣಾದಿಗಳನ್ನು ಜೀರ್ಣಿಸಿಕೊಳ್ಳುತ್ತ ಇವು ಗಾತ್ರದಲ್ಲಿ ಬೆಳೆಯುತ್ತವೆ. ಹೀಗೆ ಬೆಳೆಯುತ್ತಿರುವಾಗ ತನ್ನ ಗಾತ್ರ: ಮೇಲ್ಮೈವಿಸ್ತಾರ—ಈ ಅನುಪಾತದ ಪ್ರಮಾಣವು ಕುಗ್ಗುತ್ತಾ ಬರುತ್ತದೆ. ಯಾವುದೇ ಜೀವಿ ಅಥವಾ ನಿರ್ಜೀವಿಯು ಗಾತ್ರದಲ್ಲಿ ಬೆಳೆಯುತ್ತಿರಬೇಕಾದರೆ ಈ ಅನುಪಾತವು ಸಾಕಷ್ಟು ಹೆಚ್ಚಿನ ಪ್ರಮಾಣದಲ್ಲಿರ ಬೇಕು. ಅದು ತೀರಾ ಕಡಿಮೆಯಾದರೆ ವಸ್ತು ತನ್ನಷ್ಟಕ್ಕೆ ತಾನೇ ಒಡೆದು ಎರಡಾಗುತ್ತದೆ. ಈ ಕಾರಣದಿಂದ ಕೋಅಜರ್ವೇಟಿನ ಕಣಗಳು ಇಭ್ಭಾಗವಾಗುತ್ತವೆ. ಇದೇ ಜೀವಕಣವು ಇಭ್ಭಾಗವಾಗಿ ದ್ವಿಗುಣವಾಗುವುದರ ಭೌತಿಕ ಕಾರಣ. ಕೋಅಜರ್ವೇಟ್ ಕಣಗಳಿಗೂ ಪ್ರೋಟೋಪ್ಲಾಸಂ ಎಂಬ ಪ್ರಾಣರಸವನ್ನು ಒಳಗೊಂಡ ಜೀವಾಣುಗಳಿಗೂ ಸ್ವಾರಸ್ಯವಾದ ಅನೇಕ ಸಾಮ್ಯಸಾದೃಶ್ಯಗಳಿವೆ. ಒಪರಿನ್ನನ ಪ್ರಕಾರ ಕೋಅಜರ್ವೇಟುಗಳ ರಚನೆಯೇ ಜೀವಾಣುವಿನ ರಚನೆಗೆ ಅತ್ಯಗತ್ಯವಾದ ಮೊದಲಹೆಜ್ಜೆ. ಹೀಗೆ ಎರಡಾದ ಕಣಗಳು ಡಾರ್ವಿನ್ನನ 'ಅತ್ಯಂತ ಸತ್ತ್ವವುಳ್ಳವುಗಳೇ ಬದುಕಿ ಉಳಿಯುವುದು' ಎಂಬ (survival of the fittest) ಸಿದ್ಧಾಂತದ ಪ್ರಕಾರ ತಮ್ಮ ಯೋಗ್ಯತಾನುಸಾರವಾಗಿ ಮತ್ತು ತಮಗೆ ದೊರೆಯಬಹುದಾದ ಭೌತಿಕ ಸನ್ನಿವೇಶಗಳ ಪರಿಣಾಮವಾಗಿ ಉಳಿದು ಬೆಳೆಯುತ್ತವೆ ಅಥವಾ ಅಳಿಯುತ್ತವೆ. ಹೈಡ್ರೋಕಾರ್ಬನ್, ಅಮೋನಿಯ, ಇಂಗಾಲಾಮ್ಲ, ನೀರು ಇವುಗಳಿಂದ ಅಮಿನೋ ಆಮ್ಲಗಳು, ಇವುಗಳ ಪರಸ್ಪರ ಸಂಯೋಗದಿಂದ ಪಾಲಿಪೆಪ್ಟೈಡು ಗಳು, ಇವುಗಳ ಪರಸ್ಪರ ಸಂಯೋಜನೆಯಿಂದ ಪ್ರೋಟೀನುಗಳು, ಪ್ರೋಟೀನುಗಳಿಂದ ನ್ಯೂಕ್ಲಿಯಿಕ್ ಆಮ್ಲಗಳು ಮತ್ತು ಇವುಗಳ ನಿರ್ದಿಷ್ಟ ಸಂಯೋಜನಾ ವಿನ್ಯಾಸವ್ಯವಸ್ಥೆಗಳಿಂದ DNA ಅಣುಗಳು ಹೀಗೆ ಸೃಷ್ಟಿಯ ಸರಪಣಿ. ಬಹು ಸ್ವಾರಸ್ಯವಾದ ಈ ಜೀವನಸೃಷ್ಟಿ ಮತ್ತು ಅದರ ವಿಕಾಸವನ್ನು ಕುರಿತು ಹೆಚ್ಚಿಗೆ ಬರೆಯಲು ಗ್ರಂಥವಿಸ್ತಾರಭೀತಿಯಿಂದ ಸಾಧ್ಯವಿಲ್ಲ. ಇದನ್ನು ಈ ವಿಷಯದಲ್ಲಿರುವ ಹಲವು ಗ್ರಂಥಗಳ ಅವಲೋಕನದಿಂದ ತಿಳಿಯಬೇಕು.

ಆಕಾಶದಿಂದ ಬಿದ್ದ ಮಳೆಯೇ ಸಾಗರವಾಯಿತು; ಸಾಗರಜಲದಲ್ಲಿ ಪ್ರಾಣದ ಸೃಷ್ಟಿಯಾಯಿತು ಎನ್ನುವಷ್ಟರ ಮಟ್ಟಿಗೆ ಗ್ರಂಥಕಾರನ ಭೌತಿಕಸೃಷ್ಟಿವಾದವು ಮೇಲೆ ಹೇಳಿದ ವಾದದೊಡನೆ ಸ್ಥೂಲವಾಗಿ ತುಲ್ಯವಾಗಿದೆ.

ಲಿಂಗಶರೀರ ಮತ್ತು ಜೀವಕರ್ಮಪ್ರೇರಣೆಯ ಕಲ್ಪನೆಗಳು, ಸ್ತ್ರೀ ಪುರುಷರ ನಡುವೆ ಸುರತಕ್ರಿಯೆ ನಡೆದಾಗಲೆಲ್ಲ ಏಕೆ ಗರ್ಭೋತ್ಪತ್ತಿಯಾಗುವುದಿಲ್ಲವೆಂಬುದಕ್ಕೂ, ಕೆಲವುವೇಳೆ ಮಾತ್ರ ಏಕಾಗುತ್ತದೆಂಬುದಕ್ಕೂ ಆಧ್ಯಾತ್ಮಿಕ ವಿವರಣೆ ನೀಡುತ್ತದೆ. ಇದನ್ನು ನಮ್ಮ ಆಯುರ್ವೇದಾಚಾರ್ಯರುಗಳು ಒಪ್ಪಿಕೊಂಡಿದ್ದಾರೆ:

## 2. ಪಿಂಡೋತ್ಪತ್ತಿ ಪ್ರಕರಣ

ಶುದ್ಧೇ ಶುಕ್ರಾರ್ತವೇ ಸತ್ತ್ವಃ ಸ್ವಕರ್ಮಕ್ಲೇಶಚೋದಿತಃ |
ಗರ್ಭಃ ಸಂಪದ್ಯತೇ ಯುಕ್ತಿವಶಾದ್ ಅಗ್ನಿರಿವಾರಣೌ || [48]

ಆದರೆ ಆಧುನಿಕಭ್ರೂಣಶಾಸ್ತ್ರಜ್ಞರು ಹೀಗೆ ಹೇಳುತ್ತಾರೆ :

During normal sexual intercourse spermatozoa are projected into the vagina as a result of the male orgasm. It is not necessary for the woman to experience an orgasm for pregnancy to occur ..... If intercourse has not occurred at the time of ovulation there will be no egg to be fertilised and pregnancy is not possible. But if the time is correct and the ovum is in the tube, one sperm may penetrate the capsule of the germ cell. Then fertilisation takes place, usually in the outer half of the tube.[49]

ಗರ್ಭ : ಮೊದಲನೆಯ_ಎರಡನೆಯ ಮಾಸಗಳಲ್ಲಿ

**ದ್ರವತ್ವಂ ಪ್ರಥಮೇ ಮಾಸಿ ಕಲಲಾಖ್ಯಂ ಪ್ರಜಾಯತೇ |**
**ದ್ವಿತೀಯೇ ತು ಘನಃ ಪಿಂಡಃ ಪೇಶೀಷದ್‌ಘನ[12]ಮರ್ಬುದಮ್ || 23 ||** 72

[ಗರ್ಭಧಾರಣೆಯ] ಮೊದಲನೆಯ ತಿಂಗಳಿನಲ್ಲಿ ಕಲಲವೆಂಬ ದ್ರವವುಂಟಾಗುತ್ತದೆ. ಎರಡನೆಯದರಲ್ಲಾದರೋ ಪಿಂಡವು ಗಟ್ಟಿಯಾಗಿರುತ್ತದೆ. ಚೌಕಾಕಾರದಲ್ಲಿರುವ ಮಾಂಸದ ಮುದ್ದೆಯಾಗಿರುವುದು, ಸ್ವಲ್ಪ ಗಟ್ಟಿಯಾಗಿ ಗಂಟಿನಹಾಗಿರುವುದು [ಮತ್ತು] ಉದ್ದಕ್ಕೆ ಗುಂಡಾಗಿ(ಅಂಡಾಕಾರವಾಗಿ) ರುವುದು,—

ಯಾಸ್ಕನು ನಿರುಕ್ತದಲ್ಲಿ ಅರ್ಬುದಾವಸ್ಥೆಯನ್ನೂ ಪೇಶೀಸ್ಥಿತಿಯನ್ನೂ ಕಾಲಾನುಕ್ರಮವೆಂದು ಹೇಳಿ ಮೊದಲನೆಯ ತಿಂಗಳಲ್ಲಿ ಉತ್ತರಾರ್ಧದಲ್ಲಿಯೂ [50] ಯಾಜ್ಞವಲ್ಕ್ಯನು ಎರಡನೆಯ ತಿಂಗಳಲ್ಲೂ [51] ಹೇಳುತ್ತಾರೆ. ಲಿಂಗಭೇದಕ್ಕೆ ಕಾರಣವಾದ ಈ ಭ್ರೂಣಾಕಾರ ವಿಶೇಷಗಳು ವಾಗ್ಭಟನು ಹೇಳಿರುವಂತೆಯೇ ಇವೆ :

ದ್ವಿತೀಯೇ ಮಾಸಿ ಕಲಲಾದ್ಘನಃ ಪೇಶ್ಯಥವಾರ್ಬುದಮ್ |
ಪುಂಸ್ತ್ರೀಕ್ಲೀಬಾಃ ಕ್ರಮಾತ್ತೇಭ್ಯಸ್ತತ್ರ ವ್ಯಕ್ತಸ್ಯ ಲಕ್ಷಣಮ್ || [52]

---

12 ಅ, ಕ : ಪೇಶೀ ಚ ಘನ

---

48 ವಾಗ್ಭಟ, ಉ.ಗ್ರಂ., I, 1, ಪು. 1.
49 Edith E. Sproul, The Science Book of the Human Body, p. 132.
50 ಯಾಸ್ಕ, ಉ. ಗ್ರಂ., XIV, 6.
51 ಯಾಜ್ಞವಲ್ಕ್ಯ, ಯಾಜ್ಞವಲ್ಕ್ಯಸ್ಮೃತಿ, ಪ್ರಾಯಶ್ಚಿತ್ತಾಧ್ಯಾಯ (III), ಯತಿಧರ್ಮಪ್ರಕರಣ, 75. ಪು. 312.
52 ವಾಗ್ಭಟ, ಉ. ಗ್ರಂ., I, 49, 50.

ಚರಕಸುಶ್ರುತರೂ ಎರಡನೆಯ ತಿಂಗಳಿನಲ್ಲಿ ಭ್ರೂಣಕ್ಕೆ ಇದೇ ಆಕಾರಗಳನ್ನು ಹೇಳಿ ಅವುಗಳ ಸಂಬಂಧದ ಕ್ರಮವನ್ನು ಹೀಗೆಯೇ ಹೇಳುತ್ತಾರೆ :

ದ್ವಿತೀಯೇ ಮಾಸಿ ಘನಃ ಸಂಪದ್ಯತೇ ಪಿಂಡಃ ಪೇಶ್ಯರ್ಬುದಂ ವಾ ।
ತತ್ರ ಘನಃ ಪುರುಷಃ, ಪೇಶೀ ಸ್ತ್ರೀ, ಅರ್ಬುದಂ ನಪುಂಸಕಂ ॥ [53]

ತತ್ರ ಪ್ರಥಮೇ ಮಾಸಿ ಕಲಲಂ ಜಾಯತೇ ; ದ್ವಿತೀಯೇ ಶೀತೋಷ್ಣಾನಿಲೈರಭಿಪ್ರಪಚ್ಯಮಾನಾನಾಂ ಮಹಾಭೂತಾನಾಂ ಸಂಘಾತೋ ಘನಃ ಸಂಜಾಯತೇ ; ಯದಿ ಪಿಂಡಃ ಪುಮಾನ್, ಸ್ತ್ರೀಚೇತ್ ಪೇಶೀ, ನಪುಂಸಕಂ ಚೇದರ್ಬುದಮಿತಿ ॥ [54]

ಭ್ರೂಣದ ಲಿಂಗವು ಗರ್ಭಧಾರಣೆಯಕಾಲದಲ್ಲೇ ನಿರ್ಧರವಾಗಿರುವುದೆಂದೂ ದೊರೆಯುವ ಹಲವಾರು ಪುರುಷ ಬೀಜಾಣುಗಳ ಪೈಕಿ ಯಾವುದು ಸ್ತ್ರೀ ಬೀಜಾಣುವಿನೊಡನೆ ಸೇರುವುದೆಂಬುದನ್ನು ಅವಲಂಬಿಸುವುದೆಂದೂ ಸ್ಪ್ರಾಲ್ ಹೇಳುತ್ತಾಳೆ. [55]

ಹೀಗೆ ವಿವಿಧ ಆಚಾರ್ಯರುಗಳಲ್ಲಿ ಭ್ರೂಣದ ಲಿಂಗಕ್ಕೂ ಅದರ ಆಕಾರಕ್ಕೂ ಇರುವ ಸಂಬಂಧದ ವಿಷಯದಲ್ಲಿ ಭಿನ್ನಾಭಿಪ್ರಾಯವಿದ್ದರೂ ಎರಡನೆಯ ತಿಂಗಳಲ್ಲೇ ಈ ಭೇದವುಂಟಾಗುವುದೆಂದು ಎಲ್ಲರೂ ತಿಳಿಯುತ್ತಾರೆ. ಅವರ ಈ ತಿಳಿವಿಗೆ ವಿಶೇಷವಾದ ಆಧಾರವೇನೂ ಇದ್ದ ಹಾಗೆ ಕಾಣುವುದಿಲ್ಲ. ಪೇಶೀ ಎಂಬುದಕ್ಕೆ ಚೌಕಾಕಾರದ ಮಾಂಸದ ತುಂಡೆಂದೂ, ಗುಂಡಾಗಿ ಗಂಟಿನಂತಿರುವುದು ಘನವೆಂದೂ ರೇಶ್ಮೆಹತ್ತಿಯ ಮೊಗ್ಗಿನಂತಿರುವುದು ಅರ್ಬುದವೆಂದೂ ಕಲ್ಲಿನಾಥನು ಅಜ್ಞಾತ ಆಕರದಿಂದ ಉದ್ಧರಿಸುತ್ತಾನೆ :

ಚತುರಶ್ರಾ ಸ್ಮೃತಾ ಪೇಶೀ ವೃತ್ತಃ ಪಿಂಡೋ ಘನಃ ಸ್ಮೃತಃ ।
ಶಾಲ್ಮಲೀಮುಕುಲಾಕಾರಮರ್ಬುದಂ ಭಿಷಜೋ ವಿದುಃ ॥ [56]

ರತ್ನಾಕರಕಾರನ ಈ ಶ್ಲೋಕ ಅಭಿಪ್ರಾಯವನ್ನು ಕಲ್ಲಿನಾಥನು ಪ್ರತ್ಯಕ್ಷವಾಗಿ ವಿರೋಧಿಸದಿದ್ದರೂ ಚರಕಸುಶ್ರುತರ ಅಭಿಪ್ರಾಯವನ್ನೇ ಎತ್ತಿಹಿಡಿಯುತ್ತಾನೆ.[56] ಸಿಂಹಭೂಪಾಲನು ಶಾರ್ಙ್ಗದೇವನ ಅಭಿಪ್ರಾಯವನ್ನೇ ವ್ಯಾಖ್ಯಾನಮಾಡಿದ್ದಾನೆ.[57] ಭ್ರೂಣದ ಲಿಂಗಭೇದವನ್ನು ಸೂಚಿಸುವ ವಾಗ್ಭಟನು ಒಂದು ಹೆಜ್ಜೆ ಮುಂದೆ ಹೋಗಿ ವೀರ್ಯಾಧಿಕ್ಯದಿಂದ ಗಂಡೂ, ರಜಸ್ಸು ಹೆಚ್ಚಿದ್ದಾಗ ಹೆಣ್ಣೂ, ಎರಡೂ ಸಮವಾಗಿದ್ದಾಗ ನಪುಂಸಕವೂ ಹುಟ್ಟುತ್ತವೆಂದು ತಿಳಿಸುತ್ತಾನೆ.[58] ಭ್ರೂಣದ ಆಕಾರಕ್ಕೂ ಅದರ ಲಿಂಗಕ್ಕೂ ಇರುವ (?) ಸಂಬಂಧವು ಆಧುನಿಕ ತಳಿಶಾಸ್ತ್ರಜ್ಞರ ಸಂಶೋಧನೆಗೆ ಅರ್ಹವಾಗಿದೆ. ಇದರ ವಿಮರ್ಶೆಯನ್ನು ಇದೇ ಪ್ರಕರಣದ 56 ನೇ ಶ್ಲೋಕದ ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಮಾಡಿದೆ.

---

53 ಚರಕ, ಉ. ಗ್ರಂ., IV, 4, 10, ಪು. 317.

54 ಸುಶ್ರುತ, ಸುಶ್ರುತಸಂಹಿತೆ, III, 17 ವಚನ, ಪು. 29.

55 ಎಡಿತ್ ಸ್ಪ್ರಾಲ್, ಉ. ಗ್ರಂ., ಪು. 136.

56 ಕಲ್ಲಿನಾಥ, ಉ. ಗ್ರಂ., ಪು. 32.

57 ಸಿಂಹಭೂಪಾಲ, ಉ. ಗ್ರಂ., ಪು. 33.

58 ವಾಗ್ಭಟ, ಉ. ಗ್ರಂ., I, 1. ಪು. 1. ಗರ್ಭೋಪನಿಷತ್ತಿನಲ್ಲಿಯೂ ಹೀಗೆಯೇ ಹೇಳಿದೆ : ಅಷ್ಟೋತ್ತರ ಉಪನಿಷತ್, ಪು. 203.

ರತ್ನಾಕರಾನಂತರದ ಸಂಗೀತಶಾಸ್ತ್ರಕರ್ತರೆಲ್ಲರೂ ಶ್ರೀ ಶಾರ್ಙ್ಗದೇವನ ಅಭಿಪ್ರಾಯಗಳನ್ನೇ ತಮ್ಮ ಗ್ರಂಥಗಳ ಪಿಂಡೋತ್ಪತ್ತಿ ಪ್ರಕರಣದಲ್ಲಿ (ಅದು ಇದ್ದರೆ) ಉದ್ಧರಿಸಿಕೊಂಡಿದ್ದಾರೆ. ಅವನು ಹೆಸರಿಸಿ ಹೇಳಿರುವ ಪೂರ್ವಾಚಾರ್ಯರುಗಳಲ್ಲಿ ನನಗೆ ತಿಳಿದ ಹಾಗೆ ಜಗದೇಕಮಲ್ಲನೊಬ್ಬನೇ ಪಿಂಡೋತ್ಪತ್ತಿ ಮುಂತಾದವುಗಳನ್ನು ವರ್ಣಿಸಿರುವುದು. ಇವೆಲ್ಲವನ್ನೂ 'ಶಕ್ತ್ಯಾಗಮೋಪದಿಷ್ಟಾನಿ' ಎಂದು ಅವನು ಉದ್ಧರಿಸಿಕೊಂಡಿದ್ದಾನೆ. ಷಟ್‌ಚಕ್ರಗಳ ನಿರೂಪಣೆಗೆ ಮಾತ್ರ ಈ ಉದ್ಧೃತಿ ಮಿತವಾಗಿದ್ದರೂ ಇರಬಹುದು. ಈ ಹೆಸರಿನ ಗ್ರಂಥವು ಯಾವುದೂ ನನಗೆ ತಿಳಿಯದು. ಜಗದೇಕಮಲ್ಲನು, ಚೇತನಾಧಿಷ್ಠಿತವಾದ ಶುಕ್ಲಶೋಣಿತ ಸಂಮಿಶ್ರವು ಒಂದೇ ದಿನದಲ್ಲಿ ಕಲಲವೂ, ಐದು ದಿನಗಳಲ್ಲಿ ಬುದ್ಬುದವೂ, ಹತ್ತು ದಿನಗಳಲ್ಲಿ ಮಾಂಸಮಗ್ರಿಯೂ (?), ಇಪ್ಪತ್ತು ದಿನಗಳಲ್ಲಿ ಘನವೂ ಆಗುತ್ತವೆಂದು ಹೇಳುತ್ತಾನೆ :

> ಶುಕ್ಲಶೋಣಿತಸಂಮಿಶ್ರಂ ಚೇತನೇನಾಪ್ಯಧಿಷ್ಠಿತಮ್ ।
> ದಿನೇನೈಕೇನ ಕಲಲಂ ಪಂಚಾಹಾದಪಿ ಬುದ್ಬುದಃ ।
> ದಶಾಹಾಚ್ಛೋಣಿತೇನ ಸ್ಯಾನ್ಮಾಂಸಮಗ್ರಿ ತು ಪಕ್ವತಃ ।
> ವಾಸರಾಣಾಂ ತು ವಿಂಶತ್ಯಾಂ ಘನಂ ಮಾಂಸಂ ಭವೇತ್ತತಃ । [59]

ಅಷ್ಟೇ ಅಲ್ಲದೆ ರಕ್ತಾಧಿಕ್ಯದಿಂದ ಹೆಣ್ಣು, ಶುಕ್ಲಾಧಿಕ್ಯದಿಂದ ಗಂಡು, ಇವೆರಡರ ಸಮತ್ವದಿಂದ ನಪುಂಸಕ, ಸ್ತ್ರೀಯು ಋತುಮತಿಯಾದ ದಿವಸದಿಂದ ಎರಡು, ನಾಲ್ಕು, ಆರು, ಹೀಗೆ ಸಮದಿವಸಗಳಲ್ಲಿ ಗರ್ಭೋತ್ಪತ್ತಿಯಾದರೆ ಗಂಡು, ಒಂದು, ಮೂರು, ಐದು ಮುಂತಾದ ವಿಷಮದಿವಸಗಳಲ್ಲಾದರೆ ಹೆಣ್ಣು, ಈ ರೀತಿಯಾಗಿ ಭ್ರೂಣದ ಲಿಂಗವನ್ನು ಅವನು ನಿರ್ಧರಿಸುತ್ತಾನೆ. [59]

ಮೂರನೆಯ ತಿಂಗಳಿನಲ್ಲಿ ಗರ್ಭ

**ಪುಂಸ್ತ್ರೀನಪುಂಸಕಾನಾಂ ಸ್ಯುಃ ಪ್ರಾಗವಸ್ಥಾಃ ಕ್ರಮಾದಿಮಾಃ ।**
**ತೃತೀಯೇತ್ವಂಕುರಾಃ ಪಂಚ ಕರಾಂಘ್ರಿಶಿರಸೋ ಮತಾಃ ॥ 24 ॥** 73

—ಇವುಗಳು ಕ್ರಮವಾಗಿ ಗಂಡು, ಹೆಣ್ಣು [ಮತ್ತು] ನಪುಂಸಕರುಗಳ ಮೊದಲಿನ ಅವಸ್ಥೆಗಳಾಗಿರುತ್ತವೆ. ಮೂರನೆಯ[ಮಾಸ]ದಲ್ಲಾದರೋ ಕೈಗಳು, ಕಾಲುಗಳು ಮತ್ತು ತಲೆಯ ಮೊಳಕೆಗಳು (ಕಾಣುತ್ತವೆ) ಎಂದು ಸಮ್ಮತಿಸಿದೆ.

**ಅಂಗಪ್ರತ್ಯಂಗಭಾಗಾಶ್ಚ ಸೂಕ್ಷ್ಮಾಃ ಸ್ಯುರ್ಯುಗಪತ್ತದಾ ।**
**ವಿಹಾಯ ಶ್ಮಶ್ರುದಂತಾದೀನ್[13] ಜನ್ಮಾನಂತರಸಂಭವಾನ್[14] ॥ 25 ॥** 74

ಮತ್ತು ಆಗ (ಮೂರನೆಯ ತಿಂಗಳಲ್ಲಿ) ಹುಟ್ಟಿದ ಮೇಲೆ ಬರುವ ಗಡ್ಡ-ಮೀಸೆ, ಹಲ್ಲುಗಳನ್ನು ಬಿಟ್ಟು, ಗೋಚರಕ್ಕೆ ಕಷ್ಟಸಾಧ್ಯವಾದ ಅಂಗಪ್ರತ್ಯಂಗಗಳ ಅಂಶಗಳು ಒಂದೇ ಸಮಯಕ್ಕೆ ಉಂಟಾಗುತ್ತವೆ.

---

13 ಅ : ಶ್ಮಶ್ರುದಂತಾದಿ. 14 ಅ, ಕ : ಸಂಭವಾತ್.

---

59 ಜಗದೇಕಮಲ್ಲ, ಸಂಗೀತಚೂಡಾಮಣಿ, ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರದ ಹಸ್ತಪ್ರತಿ, ಪು. 2–4.

ನಾಲ್ಕನೆಯ ತಿಂಗಳಿನಲ್ಲಿ ಗರ್ಭ

**ಏಷಾ ಪ್ರಕೃತಿರನ್ಯಾ ತು ವಿಕೃತಿಃ ಸಮ್ಮತಾ ಸತಾಮ್ ।**
**ಚತುರ್ಥೇ ವ್ಯಕ್ತತಾ ತೇಷಾಂ ಭಾವಾನಾಮಪಿ[15] ಜಾಯತೇ ॥ 26 ॥** 75

ಇದು ಪ್ರಕೃತಿ. ಉಳಿದವುಗಳು ವಿಕೃತಿಯೆಂದು ಸಜ್ಜನರಿಂದ ಸಮ್ಮತಿಸಲ್ಪಟ್ಟಿದೆ. ನಾಲ್ಕನೆಯ ದರ(ತಿಂಗಳ)ಲ್ಲಿ ಅವುಗಳ ಹಾಗೂ ಭಾವಗಳ ಹುಟ್ಟು (ಗೋಚರ).

ಭ್ರೂಣವು ಮೂರನೆಯ ತಿಂಗಳಿನಲ್ಲಿರುವ ಈ ಸ್ಥಿತಿಯನ್ನು ಇತರ ಪ್ರಾಚೀನಾಚಾರ್ಯರೂ ಒಪ್ಪುತ್ತಾರೆ: ಚರಕನು ತೃತೀಯೇ ಮಾಸಿ ಸರ್ವೇಂದ್ರಿಯಾಣಿ ಸರ್ವಾಂಗಾವಯವಾಶ್ಚ ಯೌಗಪದ್ಯೇನಾಭಿನಿರ್ವರ್ತಂತೇ ಎಂದೂ[60] ಯಾಜ್ಞವಲ್ಕ್ಯನು ತೃತೀಯೇಽಂಗೇಂದ್ರಿಯೈರ್ಯುತಃ ಎಂದೂ[61].

ಸುಶ್ರುತನು ತೃತೀಯೇ ಹಸ್ತಪಾದಶಿರಸಾಂ ಪಂಚಪಿಂಡಕಾ ನಿವರ್ತಂತೇ; ಅಂಗಪ್ರತ್ಯಂಗಭಾಗಾಶ್ಚ ಸೂಕ್ಷ್ಮೋ ಭವತಿ ಎಂದು ಮಾತ್ರವೂ[61]

ವಾಗ್ಭಟನು ವ್ಯಕ್ತೀಭವತಿ ಮಾಸೇಽಸ್ಯ ತೃತೀಯೇ ಗಾತ್ರಪಂಚಕಂ ।
ಮೂರ್ಧಾ ದ್ವೇ ಸಕ್ಥಿನೀ ಬಾಹೂ ಸರ್ವಸೂಕ್ಷ್ಮಾಂಗ ಜನ್ಮ ಚ ॥
ಸಮಮೇವ ಚ ಮೂರ್ಧಾದ್ಯೈಃ ಜ್ಞಾನಂ ಚ ಸುಖದುಃಖಯೋಃ । ಎಂದೂ[62]

ಜಗದೇಕಮಲ್ಲನು ಭಿನ್ನರೀತಿಯಲ್ಲಿ:

ದಿನಾನಾಂ ಪುರ( ? ಪಂಚ) ವಿಂಶತ್ಯಾಂ ಸರ್ವಾಂಕುರಿತಂ ಭವೇತ್ । ಪಂಚಭೂತಾನ್ವಿತಂ ಮಾಸೇ ।
ಮಾಸಾಂತ್ಯಂ ಮೇದಸಾನ್ವಿತಂ ಮಾಸತ್ರಯಾತ್ ಸಮಜ್ಜಾಸ್ಥಿ . . .[59] ಎಂದೂ ಹೇಳುತ್ತಾರೆ.

ಗರ್ಭಕೋಶದಿಂದ ಹುಟ್ಟುವ ಎಲ್ಲಾ ಪ್ರಾಣಿಗಳಿಗೂ ಮೂರನೆಯ ತಿಂಗಳು ಕಳೆಯುವವರೆಗೆ ಭ್ರೂಣವು ಒಂದೇ ಆಕಾರದಲ್ಲಿರುತ್ತದೆ. ಇದನ್ನೇ ಪ್ರಕೃತಿಯೆನ್ನುವುದು. ಇದರಿಂದ ಮುಂದಕ್ಕೆ ಆಗುವ ಅವಸ್ಥಾಭೇದಗಳೆಲ್ಲವೂ ವಿಕೃತಿಗಳು; ಇವು ಆಯಾ ದೇಹದ ಜಾತಿಯನ್ನವಲಂಬಿಸಿ ಅಂಗಪ್ರತ್ಯಂಗಗಳ ಆಕಾರ ಮತ್ತು ಸ್ವಭಾವಗಳನ್ನು ಪಡೆಯುತ್ತವೆ. ಭ್ರೂಣವು ಇನ್ನೂ ಪ್ರಕೃತಿಯಾಗಿರುವಾಗಲೇ ಅದರ ಎಲ್ಲಾ ಅಂಗಪ್ರತ್ಯಂಗಗಳೂ ಮೊಳೆತಿರುತ್ತವೆ. ದೇಹವು ಹುಟ್ಟಿ ಬೆಳೆದ ಮೇಲೆ ಒಂದೊಂದು ಜಾತಿಗೆ ಒಂದೊಂದು ರೀತಿಯಲ್ಲಿ ವಿವಿಧ ಕಾಲಗಳಲ್ಲಿ, ವಿವಿಧ ಪ್ರಮಾಣಗಳಲ್ಲಿ ಅವು ಬೆಳೆದು ವೈಶಿಷ್ಟ್ಯಕ್ಕೂ ವೈವಿಧ್ಯಕ್ಕೂ ಕಾರಣವಾಗುತ್ತದೆ. ಕೂದಲು, ಹಲ್ಲು ಮುಂತಾದವುಗಳು ಮಾತ್ರ ಈಗ ಇರುವುದಿಲ್ಲ. ಅಂಗಪ್ರತ್ಯಂಗಗಳ ಏಕಕಾಲಿಕ ಬೆಳವಣಿಗೆಯ ಬಗೆಗೆ ಶಾರ್ಙ್ಗದೇವನು ಧನ್ವಂತರಿಯನ್ನು ಅನುಸರಿಸಿದ್ದಾನೆ.

ಸ್ಪೌರಲ್ ಭ್ರೂಣದ ಅಭ್ಯುದಯವನ್ನು ಹೀಗೆ ಹೇಳುತ್ತಾಳೆ :

---

15 ಅ, ಕ : ಭಾವಾನಾಮುಪ.

---

60 ಚರಕ, ಉ. ಗ್ರಂ., IV, 4, 11, ಪು. 318.

61 ಸುಶ್ರುತ, ಉ. ಗ್ರಂ., III, 17 ವಚನ, ಪು. 29.

62 ವಾಗ್ಭಟ, ಉ. ಗ್ರಂ., I, 54, 55. ಪು. 17.

During the first half of pregnancy, growth in size is most striking, but differentiation into special organs with specific cell functions is occurring . . . . . . Various organs are undergoing initial formation from the third to the eighth week. At the eighth week the human fetus, as it is known from this point on, resembles the fetus of other mammals. It is curved forward so that the forehead and tail almost touch. In the human the head and brain show an early disproportionate enlargement and the limbs are short. Proper proportions are gradually assumed, so that the newborn infant essentially resembles man in structure.[63]

ಭಾವಗಳೆಂದರೆ ಆಯಾ ದೇಹಕ್ಕೂ ವ್ಯಕ್ತಿಗೂ ವಿಶಿಷ್ಟವಾದ ಶೌರ್ಯ, ಧೈರ್ಯ ಮುಂತಾದ ಗುಣಗಳು. ಭಾವವೆನ್ನುವುದಕ್ಕೆ ಇಂದ್ರಿಯಾಂಗವೆಂದೂ ಅರ್ಥವಿದೆ. ಅದೂ ಇಲ್ಲಿ ಅನ್ವಯವಾಗುತ್ತದೆ. ಆದರೆ ಶಾರ್ಙ್ಗದೇವನು ಮೇಲೆ ಹೇಳಿದ ಗುಣಗಳು ಎಂಬ ಅರ್ಥದಲ್ಲಿಯೇ ಪ್ರಯೋಗಿಸಿದ್ದಾನೆ.

ಪುಂಸಾಂ ಶೌರ್ಯಾದಯೋ ಭಾವಾ ಭೀರುತ್ವಾದ್ಯಾಸ್ತು ಯೋಷಿತಾಮ್ ।
ನಪುಂಸಕಾನಾಂ ಸಂಕೀರ್ಣಾ ಭವಂತೀತಿ ಪ್ರಚಕ್ಷತೇ ॥ 27 ॥ 76

ಶೌರ್ಯವೇ ಮೊದಲಾದವುಗಳು ಪುರುಷರ ಭಾವಗಳು. ಹೆದರು-ತನ ಮೊದಲಾದವುಗಳು ಸ್ತ್ರೀಯರದ್ದು. ನಪುಂಸಕರದ್ದು [ಇವುಗಳ] ಮಿಶ್ರ ಎಂದು (ವಿದ್ವಾಂಸರು) ಹೇಳುತ್ತಾರೆ.

ಚರಕನು ನಾಲ್ಕನೆಯ ತಿಂಗಳಿನಲ್ಲಿ ಭ್ರೂಣವು ನಿಬಿಡವಾಗುವುದೆಂದೂ ಆದುದರಿಂದ ಗರ್ಭಿಣಿಯರು ದಪ್ಪಗಾಗುತ್ತಾರೆಂದೂ ಮಾತ್ರ ಹೇಳುತ್ತಾನೆ.[64]

ಚತುರ್ಥೇ ಮಾಸಿ ಸ್ಥಿರತ್ವಮಾಪದ್ಯತೇ ಗರ್ಭಃ ತಸ್ಮಾತ್ತದಾ ಗರ್ಭಿಣೀ ಗುರುಗಾತ್ರತ್ವಮಾಧಿಕಮಾಪದ್ಯತೇ ವಿಶೇಷೇಣ ।

ಸುಶ್ರುತನು ನಾಲ್ಕನೆಯ ತಿಂಗಳಲ್ಲಿ ಭ್ರೂಣದ ಹೃದಯವು ಉಂಟಾಗಿರುವುದರಿಂದ ದೇಹದ ಅನೇಕ ಮುಖ್ಯ ಕ್ರಿಯೆಗಳು ಆರಂಭವಾಗುತ್ತವೆಂದೂ ಹೇಳಿ ತನ್ನದೂ ಭ್ರೂಣದ್ದೂ ಸೇರಿ ಎರಡು ಹೃದಯಗಳನ್ನುಳ್ಳ (ದೌಹೃದಿನೀ) ಗರ್ಭಿಣಿಗೆ ಬಯಕೆಗಳು ಆರಂಭವಾಗುತ್ತವೆಂದೂ ಸೂಚಿಸುತ್ತಾನೆ :

ಚತುರ್ಥೇ ಸರ್ವಾಂಗಪ್ರತ್ಯಂಗವಿಭಾಗಃ ಪ್ರವ್ಯಕ್ತೋ ಭವತಿ, ಗರ್ಭಹೃದಯಪ್ರವ್ಯಕ್ತಿಭಾವಾತ್ ಚೇತನಾ-ಧಾತುರಭಿವ್ಯಕ್ತೋ ಭವತಿ, ಕಸ್ಮಾತ್ ? ತತ್‌ಸ್ಥಾನತ್ವಾತ್ ; ತಸ್ಮಾದ್ ಗರ್ಭಶ್ಚತುರ್ಥೇಮಾಸ್ಯಭಿಪ್ರಾಯಾ-ನಿಂದ್ರಿಯಾರ್ಥೇಷು ಕರೋತಿ, ದ್ವಿಹೃದ್ಯಾಂ ಚ ನಾರೀಂ ದೌಹೃದಿನೀಮಾಚಕ್ಷತೇ ।[65]

63 ಸ್ಮಾಲ್ : ಉ. ಗ್ರಂ., ಪು. 136, 137. XVIIIನೇ ಫಲಕದಲ್ಲಿರುವ ಚಿತ್ರಗಳನ್ನೂ ನೋಡಿ.

64 ಚರಕ, ಉ. ಗ್ರಂ., IV, 4, 20. ಪು. 320.

65 ಸುಶ್ರುತ, ಉ. ಗ್ರಂ., III, 18, ಪು. 29.

## 2. ಪಿಂಡೋತ್ಪತ್ತಿ ಪ್ರಕರಣ

ವಾಗ್ಭಟನು ಚತುರ್ಥೇ ವ್ಯಕ್ತತಾಂಗಾನಾಂ ಎಂದು ಮಾತ್ರ ಹೇಳುತ್ತಾನೆ.[66]. ಯಾಜ್ಞವಲ್ಕ್ಯನು 'ಸ್ಥೈರ್ಯಂ ಚತುರ್ಥೇ ತ್ವಂಗಾನಾಂ'[67] ಎಂದು ಹೇಳಿ ಮೂರನೆಯ ತಿಂಗಳು ಪೂರ್ತಿ ಅಂಗ, ಇಂದ್ರಿಯಗಳು ಚಂಚಲವಾಗಿರುವುವೆಂದೂ ನಾಲ್ಕನೆಯ ತಿಂಗಳಲ್ಲಿ ಅವು ಸ್ಥಿರವಾಗುತ್ತವೆಂದೂ ವಿಶಿಷ್ಟಾಭಿಪ್ರಾಯವನ್ನು ಕೊಡುತ್ತಾನೆ: ಸರ್ವಂ ತೃತೀಯೇ ಸ್ಪಂದತೇ ತತಃ.[68] ಜಗದೇಕಮಲ್ಲನು ತುರ್ಯೇ ಕೋಶಾಂಗಾನಿಯುತಂ ಪಂಚಮೇ ಮಾಸೇ ಕರ್ಣಾಕ್ಷೀ ಎನ್ನುತ್ತಾನೆ.[59]

ಗರ್ಭಿಣಿಯ ಬಯಕೆಗಳು

**ಮಾತೃಜಂ ಚಾಸ್ಯ ಹೃದಯಂ ವಿಷಯಾನಭಿಕಾಂಕ್ಷತಿ ।**
**ಅತೋ ಮಾತುರ್ಮನೋಽಭೀಷ್ಟಂ ಕುರ್ಯಾದ್‌ಗರ್ಭಸಮೃದ್ಧಯೇ ॥ 28 ॥** 77

ಮತ್ತು ತಾಯಿಯಿಂದ ಉಂಟಾದ ಅದರ ಹೃದಯವು ವಿಷಯಗಳನ್ನು ಅಪೇಕ್ಷಿಸುತ್ತದೆ. ಆದುದರಿಂದ ಗರ್ಭವು ಚೆನ್ನಾಗಿ ಬೆಳೆಯಲು ತಾಯಿಯ ಮನಸ್ಸಿನ ಬಯಕೆಗಳನ್ನು ಪೂರೈಸಬೇಕು.

ನಾಲ್ಕನೆಯ ತಿಂಗಳಲ್ಲಿ ಭ್ರೂಣಕ್ಕೆ ಹೃದಯವು ಹುಟ್ಟುತ್ತದೆಂಬುದನ್ನು ಆಧುನಿಕರೂ ಒಪ್ಪುತ್ತಾರೆ :

. . . . The examining physician can feel various structures, such as head and foot, and can listen to the location of the fetal heartbeat after the fourth month.[69]

ಈ ಹೃದಯವು ತಾಯಿಯಿಂದ ಬಂತೆಂದು ನಮ್ಮ ಪ್ರಾಚೀನಾಚಾರ್ಯರು ತಿಳಿಯುತ್ತಾರೆ. ಈ ಅವಸ್ಥೆಯಲ್ಲಿಯೇ ಅದು ಪ್ರಾಪಂಚಿಕ ಅನುಭೋಗಗಳನ್ನು ಅಪೇಕ್ಷಿಸುತ್ತದೆಂದೂ, ತಾಯಿ ಮತ್ತು ಮಗುವಿನ ಹೃದಯಗಳು ಸಹಸ್ಪಂದಗಳಾದುದರಿಂದ ಅದರ ಅಪೇಕ್ಷೆಗಳೇ ಮಾತೃಹೃದಯದಲ್ಲಿ ಪ್ರಕಟವಾಗುವುವೆಂದೂ, ಈ ಆಸೆಗಳನ್ನು ಪೂರೈಸದಿದ್ದರೆ ಮಗುವು ವಿಕೃತವಾಗಿ ಹುಟ್ಟುವುದೆಂದೂ ಅವರ ಮತ. ಹೀಗೆ ವಾಗ್ಭಟನು

ಮಾತೃಜಂ ಹ್ಯಸ್ಯ ಹೃದಯಂ ಮಾತುಶ್ಚ ಹೃದಯೇನ ತತ್ ।
ಸಂಬಂಧಂ ತೇನ ಗರ್ಭಿಣ್ಯಾ ನೇಷ್ಟಂ ಶ್ರದ್ಧಾವಿಮಾನನಮ್ ॥
ದೇಯಮಪ್ಯಹಿತಂ ತಸ್ಯೈ ಹಿತೋಪಹಿತಮಲ್ಪಕಮ್ ।
ಶ್ರದ್ಧಾವಿಘಾತಾದ್ ಗರ್ಭಸ್ಯ ವಿಕೃತಿಶ್ಚ್ಯುತಿರೇವ ವಾ ॥ [70]

ಸುಶ್ರುತನಾದರೋ

ದೌಹೃದವಿಮಾನನಾತ್ ಕುಬ್ಜಂ ಕುಣಿಂ ಖಂಜಂ ಜಡಂ ವಾಮನಂ ವಿಕೃತಾಕ್ಷಮನಕ್ಷಂ ವಾ ನಾರೀಸುತಂ ಜನಯತಿ, ತಸ್ಮಾತ್ ಸಾ ಯದ್ಯದಿಚ್ಛೇತ್ ತತ್ತಸ್ಯೈ ದಾಪಯೇತ್, ಲಬ್ಧದೌಹೃದಾ ಹಿ ವೀರ್ಯವಂತಂ ಚಿರಾಯುಷಂ

66 ವಾಗ್ಭಟ, ಉ. ಗ್ರಂ., I, 57. ಪು. 57.
67 ಯಾಜ್ಞವಲ್ಕ್ಯ, ಅದೇ ಪ್ರಕರಣ, 75.
68 ಅದೇ ಗ್ರಂಥ, ಅದೇಸ್ಥಾನ, 78.
69 ಸ್ಪ್ರೌಲ್, ಉ. ಗ್ರಂ., ಪು. 137.
70 ವಾಗ್ಭಟ, ಉ. ಗ್ರಂ., I, 52-54. ಪುಟ 16.

ಚ ಪುತ್ರಂ ಜನಯತಿ ॥ ಎನ್ನುತ್ತಾನೆ [71]. ಗರ್ಭೋಪನಿಷತ್ತು ಇದೇ ವಿವರಗಳನ್ನೊಳಗೊಂಡಿದೆ. ಯಾಜ್ಞವಲ್ಕ್ಯನು ಈ ವಿಷಯದಲ್ಲಿ ಮೌನತಾಳಿದ್ದಾನೆ.

**ತಾಂ ಚ ದ್ವಿಹೃದಯಾಂ ನಾರೀಮಾಹುರ್ದೌರ್ಹೃದಿನೀಂ ಬುಧಾಃ ।**
**ಅದಾನಾದ್ದೋಹದಾನಾಂ [16] ಸ್ಯಾದ್ಗರ್ಭಸ್ಯ ವ್ಯಂಗತಾ ಽಽದಯಃ ॥ 29 ॥** 78

[ಹೀಗೆ] ಎರಡು ಹೃದಯಗಳುಳ್ಳ ಹೆಂಗಸನ್ನು ವಿದ್ವಾಂಸರು ದೌಹೃದಿನೀ ಎನ್ನುತ್ತಾರೆ. [ಅವಳು] ಬಯಸಿದುದನ್ನು ಕೊಡದಿರುವುದರಿಂದ ಗರ್ಭದ ಅಂಗಗಳ ವಿಕಾರವೇ ಮೊದಲಾದವುಗಳು ಆಗುತ್ತವೆ.

ಇಲ್ಲಿ ' ಪುಷ್ಟಿಯನ್ನು ಪಡೆದುಕೊಳ್ಳುವುದರಿಂದ ಗರ್ಭದ ವ್ಯಕ್ತತೆ ಮೊದಲಾದವುಗಳು ಉಂಟಾಗುತ್ತವೆ ' ಎಂಬ ತಪ್ಪು ಅರ್ಥವನ್ನು ಕುನ್ಹನ್‌ರಾಜಾ ಮಾಡುತ್ತಾನೆ [72]. ಎರಡು ವ್ಯಾಖ್ಯಾನಗಳನ್ನೂ ಅದಾನಾತ್ ಎಂಬುದರ ಸ್ಪಷ್ಟಾರ್ಥವನ್ನೂ ಮೀರಿ ಈ ಅರ್ಥವನ್ನು ಅವನು ಪಡೆದಿರುವುದು ವಿಸ್ಮಯಕರವಾಗಿದೆ. ವ್ಯಂಗತಾ ಎಂದರೆ ಅಂಗ ವಿಕಲತೆ, ಕೈಕಾಲುಗಳು ಊನವಾಗಿರುವುದು, ಸೊಟ್ಟಗಿರುವುದು ಇತ್ಯಾದಿಯಾಗಿ ಅರ್ಥ. ಅದನ್ನವನು ಪುಷ್ಟಿ ಎನ್ನುತ್ತಾನೆ ! [72] ಬಹುಶಃ ಈ ಶ್ಲೋಕಾರ್ಥವನ್ನು ' ಆದಾನಾದ್ದೋಹದಾನಾಂ ಸ್ಯಾದ್ಗರ್ಭಸ್ಯ ವ್ಯಂಗ್ಯತಾ ಽಽದಯಃ' ಎಂದು ಅವನು ಓದಿಕೊಂಡಿರಬಹುದು. ಬಯಕೆಗಳನ್ನು ತೀರಿಸಿಕೊಂಡ ಗರ್ಭದ( ಲ್ಲಿ ) ರಚನಾಸ್ಪಷ್ಟತೆ ಮೊದಲಾದವುಗಳು ಆಗುತ್ತವೆಂದು ಇದರ ಅರ್ಥ. ಇದೂ ಇಲ್ಲಿ ಅನ್ವಿತವಾದರೂ ಈ ಪಾಠಕ್ಕೆ ಯಾವ ಸಮರ್ಥನೆಯೂ ಇಲ್ಲ. ಅಲ್ಲದೆ ಹಿಂದಿನ ಶ್ಲೋಕದಲ್ಲಿ ಗರ್ಭಸಮೃದ್ಧಿಗಾಗಿ ಮಾತೆಗೆ ದೋಹದದಾನವನ್ನು ಮಾಡಬೇಕೆಂದು ಗ್ರಂಥಕಾರನು ಹೇಳಿರುವುದರಿಂದ ದೋಹದಾನಾಂ ಆದಾನಾತ್, ವ್ಯಂಗ್ಯತಾ ಮೊದಲಾದವು ಪುನರುಕ್ತಿದೋಷವನ್ನುಂಟು ಮಾಡುತ್ತವೆ. ಇಡೀ ಗ್ರಂಥದಲ್ಲಿ ಎಲ್ಲಿಯೂ ಪುನರುಕ್ತಿದೋಷವಿಲ್ಲ. ಗರ್ಭಿಣಿಯು ಬಯಕೆಯನ್ನು ತೀರಿಸಿಕೊಳ್ಳದಿದ್ದರೆ ಮಗುವು ಅಂಗವಿಕಲನೂ ಕುರೂಪಿಯೂ ಆಗುತ್ತಾನೆಂಬ ಸುಶ್ರುತನ ಉಕ್ತಿಯನ್ನು [71] ಇಲ್ಲಿ ಸ್ಮರಿಸಿಕೊಂಡರೆ ಅದಾನಾತ್, ವ್ಯಂಗತಾ ಎಂಬ ಶಬ್ದಗಳ ಅರ್ಥವೇ ಇಲ್ಲಿ ಪುಷ್ಟವಾಗಿಯೂ ಪ್ರಶಸ್ತವಾಗಿಯೂ ಇದೆ. ಮುಂದಿನ ವಾಕ್ಯವು ಶಿಶುವು ಭ್ರೂಣಾವಸ್ಥೆಯಲ್ಲಿ ಹೊಂದಿದ್ದ ಆಸೆಗಳನ್ನು–ಅವು ಆಗ ತೀರದಿದ್ದರೆ–ಜನ್ಮಾನಂತರವೂ ಪಡೆದುಕೊಂಡು ಆರ್ತವಾಗಿರುತ್ತದೆಂದು ಹೇಳಿ ಇದಕ್ಕೆ ಅರ್ಥಪುಷ್ಟಿಯನ್ನು ಒದಗಿಸುತ್ತದೆಯೇ ಹೊರತು ಪುನರುಕ್ತಿಯಲ್ಲ. ಎಂದರೆ, ಅಂಗವಿಕಲತೆ ಆರ್ತತೆ ಇವೆರಡೂ ದೋಹದಾದಾನದ ದುಷ್ಪರಿಣಾಮಗಳು.

ಬಯಕೆಗೂ ಗರ್ಭದ ಸ್ವಭಾವಕ್ಕೂ ಸಂಬಂಧ

**ಮಾತುರ್ಯದ್ವಿಷಯಾಲಾಭ[17]ಸ್ತದಾರ್ತೋ ಜಾಯತೇ ಸುತಃ ।**
**ಗರ್ಭಃ ಸ್ಯಾದರ್ಥವಾನ್ ಭೋಗೀ ದೋಹದಾದ್ ರಾಜದರ್ಶನೇ ॥30॥** 79

ತಾಯಿಯು ಯಾವ ವಿಷಯವನ್ನು (ಬಯಸಿಯೂ) ಪಡೆಯುವುದಿಲ್ಲವೋ ಮಗನು ಅದಕ್ಕಾಗಿ ವ್ಯಥೆಪಟ್ಟು ಹುಟ್ಟುತ್ತಾನೆ. [ತಾಯಿಯು ಬಯಸಿ] ರಾಜನನ್ನು ನೋಡಿದರೆ ಗರ್ಭವು (ಗರ್ಭದಲ್ಲಿರುವ ಮಗನು) ಹಣವಂತನೂ ಸುಖಿಯೂ <ಭೋಗಿ> ಆಗುತ್ತಾನೆ.

---

16 ಕ : ದೌಹೃದಾನಾಂ ? 17 ಗ ಆಕರದಲ್ಲಿ ಹೀಗಿದೆ ; ಆದರೆ ಅ : ವಿಷಯೇ ಲೋಭಃ.

---

71 ಸುಶ್ರುತ, ಉ. ಗ್ರಂ., III, 18, ಪು. 29.

72 ಕುನ್ಹನ್‌ರಾಜಾ, ಉ. ಗ್ರಂ., ಪು. 17.

ಗರ್ಭಿಣಿಯ ಬಯಕೆಗೂ ಹುಟ್ಟುವ ಸಂತಾನದ ಗುಣಗಳಿಗೂ ಇರುವ ಸಂಬಂಧವನ್ನು ಶ್ರೀ ಶಾರ್ಙ್ಗದೇವನು ಸುಶ್ರುತನ ಅಭಿಪ್ರಾಯಗಳನ್ನೇ ಅಲ್ಲಲ್ಲಿ ಮಾರ್ಪಾಟುಮಾಡಿ ಪಡೆದಿದ್ದಾನೆಂದು ತೋರುತ್ತದೆ :

ರಾಜಸಂದರ್ಶನೇ ಯಸ್ಯಾ ದೌಹೃದಂ ಜಾಯತೇ ಸ್ತ್ರಿಯಾಃ ।
ಅರ್ಥವಂತಂ ಮಹಾಭಾಗಂ ಕುಮಾರಂ ಸಾ ಪ್ರಸೂಯತೇ ॥
ದುಕೂಲಪಟ್ಟಕೌಶೇಯಭೂಷಣಾದಿಷು ದೌಹೃದಾತ್ ।
ಅಲಂಕಾರೈಷಿಣಂ ಪುತ್ರಂ ಲಲಿತಂ ಸಾ ಪ್ರಸೂಯತೇ ॥
ಆಶ್ರಮೇ ಸಂಯತಾತ್ಮಾನಂ ಧರ್ಮಶೀಲಂ ಪ್ರಸೂಯತೇ ।
ದೇವತಾಪ್ರತಿಮಾಯಾಂ ತು ಪ್ರಸೂತೇ ಪಾರ್ಷದೋಪಮಮ್ ॥
ದರ್ಶನೇ ವ್ಯಾಲಜಾತೀನಾಂ ಹಿಂಸಾಶೀಲಂ ಪ್ರಸೂಯತೇ ।
ಗೋಧಾಮಾಂಸಾಶನೇ ಪುತ್ರಂ ಸುಷುಪ್ಸುಂ ಧಾರಣಾತ್ಮಕಮ್ ॥
ಗವಾಂ ಮಾಂಸೇ ತು ಬಲಿನಂ ಸರ್ವಕ್ಲೇಶಸಹಂ ತಥಾ ।
ಮಾಹಿಷೇ ದೌಹೃದಾತ್ ಶೂರಂ ರಕ್ತಾಕ್ಷಂ ಲೋಮಸಂಯುತಮ್ ॥
ವರಾಹಮಾಂಸಾತ್ ಸ್ವಪ್ನಾಲುಂ ಶೂರಂ ಸಂಜನಯೇತ್ ಸುತಮ್ ।
ಮಾರ್ಗಾದ್ವಿಕ್ರಾಂತಜಂಘಾಲಂ ಸದಾ ವನಚರಂ ಸುತಮ್ ॥
ಸೃಮರಾದ್ವಿಗ್ನಮನಸಂ ನಿತ್ಯಭೀತಂ ಚ ತೈತ್ತಿರಾತ್ ।
ಅತೋಽನುಕ್ತೇಷು ಯಾ ನಾರೀ ಸಮಭಿಧ್ಯಾಯತಿ ದೌಹೃದಮ್ ॥
ಶರೀರಾಚಾರಶೀಲೈಃ ಸಾ ಸಮಾನಂ ಜನಯಿಷ್ಯತಿ ।
ಕರ್ಮಣಾ ಚೋದಿತಂ ಜಂತೋರ್ಭವಿತವ್ಯಂ ಪುನರ್ಭವೇತ್ ॥
ಯಥಾ ತಥಾ ದೈವಯೋಗಾದ್ ದೌಹೃದಂ ಜನಯೇದ್ ಹೃದಿ ॥ [73]

**ಅಲಂಕಾರೇಷು ಲಲಿತೋ[18] ಧರ್ಮಿಷ್ಠಸ್ತಾಪಸಾಶ್ರಮೇ ।**
**ದೇವತಾದರ್ಶನೇ ಭಕ್ತೋ ಹಿಂಸೋ ಭುಜಗದರ್ಶನೇ ॥ 31 ॥** 80

[ತಾಯಿಯು] ಋಷ್ಯಾಶ್ರಮದಲ್ಲಿ [ಬಯಕೆಪಟ್ಟು ಇದ್ದರೆ ಮಗನು] ಅಲಂಕಾರಪ್ರಿಯನೂ ಧರ್ಮವನ್ನು ಪಾಲಿಸುವನೂ ಆಗುತ್ತಾನೆ; ದೇವರುಗಳ ವಿಗ್ರಹಗಳನ್ನು (ಬಯಸಿ) ನೋಡಿದರೆ ಭಕ್ತನಾಗುತ್ತಾನೆ; ಹಾವನ್ನು <ಭುಜಗ> (ಆಸೆಪಟ್ಟು) ನೋಡಿದರೆ ಹಿಂಸೆಯನ್ನುಂಟುಮಾಡುವವನಾಗುತ್ತಾನೆ.

ಕುನ್ಹನ್‌ರಾಜಾ ಅಲಂಕಾರದಲ್ಲಿ ಉದಾಸೀನನಾಗುತ್ತಾನೆ ಎಂದು ಅರ್ಥಮಾಡುತ್ತಾನೆ[72] ಇದು ಹೇಗೆಂದು ತಿಳಿಯದು ; ಬಹುಶಃ 'ಅಲಂಕಾರೇಷ್ವಲಲಿತೋ' ಎಂದು ಮೂಲವನ್ನು ಓದಿಕೊಂಡಿರಬಹುದು. ಆಶ್ರಮವಾಸಿಗಳ ಸ್ವಭಾವವಾದ ವೈರಾಗ್ಯದಿಂದ ಅಲಂಕಾರದಲ್ಲಿ ಉದಾಸೀನತೆ ಇಲ್ಲಿ ಮೂಡಬೇಕಾದುದು ನ್ಯಾಯವೇ. ಸುಶ್ರುತನು ಮೇಲೆ ಹೇಳಿದ ಸಂಯತಾತ್ಮಾನಂ ಎಂಬುದನ್ನು ಗ್ರಂಥಕಾರನು ಬಿಟ್ಟು ಧರ್ಮಶೀಲಂ ಎಂಬುದನ್ನು ಮಾತ್ರ

18 ಕ : ಅಲಂಕಾರೇ ಸುಲಲಿತೋ.

73 ಸುಶ್ರುತ, ಉ. ಗ್ರಂ., III, 22-29. ಪು. 31-32.

2. ಪಿಂಡೋತ್ಪತ್ತಿ ಪ್ರಕರಣ

ಗ್ರಹಿಸಿದ್ದಾನೆ. ಅಲಲಿತೋ ಎಂಬುದು ಇಲ್ಲಿ ಸಾರ್ಥಕವಾದರೂ ಉಪಲಬ್ಧ ಆಕರಗಳಲ್ಲಿ ಎಲ್ಲಿಯೂ ಇದಕ್ಕೆ ಸಮರ್ಥನೆಯಿಲ್ಲ. ಇಬ್ಬರು ವ್ಯಾಖ್ಯಾನಕಾರರೂ ಈ ಶ್ಲೋಕಕ್ಕೆ ವ್ಯಾಖ್ಯಾನಮಾಡಿಲ್ಲವಾದುದರಿಂದ ಲಲಿತೋ ಎಂಬ ಪಾಠವನ್ನೇ ಇಲ್ಲಿ ಉಳಿಸಿಕೊಂಡಿದ್ದೇನೆ. ಭುಜಗ ಎಂದರೆ ಹಾವು ಎಂದು ಮಾತ್ರವೇ ತಿಳಿಯಬೇಕಾಗಿಲ್ಲ ; ಎದೆ ಅಥವಾ ಭುಜವನ್ನು ಊರಿಕೊಂಡು ಚಲಿಸುವ ಪ್ರಾಣಿಯೆಲ್ಲ, ಸರೀಸೃಪವೆಲ್ಲ ಭುಜಗವೇ.

**ಗೋಧಾ ಽಶನೇ ತು ನಿದ್ರಾಲುರ್ಬಲೀ ಗೋಮಾಂಸಭಕ್ಷಣೇ ।**
**ಮಾಹಿಷೇ ಶುಕರಕ್ತಾಕ್ಷಂ[19] ಲೋಮಶಂ ಸೂಯತೇ[20] ಸುತಮ್ ॥ 32 ॥** 81

[ಗರ್ಭಿಣಿಯು ಬಯಸಿ] ಗೋಧಿಯನ್ನು ತಿಂದರೆ [ಮಗನು] ನಿದ್ರಾಲಂಪಟನಾಗುತ್ತಾನೆ ; ಹಸುವಿನ ಮಾಂಸವನ್ನು ತಿಂದರೆ ಬಲವುಳ್ಳವನಾಗುತ್ತಾನೆ ; ಎಮ್ಮೆಯದನ್ನು (ಎಮ್ಮೆಯ ಮಾಂಸವನ್ನು) ತಿಂದರೆ ಗಿಣಿಯ ಹಾಗೆ ಕೆಂಪಾದ ಕಣ್ಣುಗಳನ್ನೂ (ಹೆಚ್ಚು) ಮೈಕೂದಲನ್ನೂ ಪಡೆದ ಮಗನನ್ನು ಹೆರುತ್ತಾಳೆ.

ಐದನೆಯ-ಆರನೆಯ ತಿಂಗಳಿನಲ್ಲಿ ಗರ್ಭ

**ಪ್ರಬುದ್ಧಂ ಪಂಚಮೇ ಚಿತ್ತಂ ಮಾಂಸಶೋಣಿತಪುಷ್ಟತಾ ।**
**ಷಷ್ಠೇ ಽಸ್ಥಿಸ್ನಾಯುನಖರಕೇಶರೋಮ[21]ವಿವಿಕ್ತತಾ ॥ 33 ॥** 82

ಐದನೆಯ ತಿಂಗಳಲ್ಲಿ [ಭ್ರೂಣಕ್ಕೆ] ಅರಿವನ್ನುಳ್ಳ ಮನಸ್ಸೂ ಮಾಂಸಖಂಡ ಮತ್ತು ರಕ್ತಗಳ ಪುಷ್ಟಿಯೂ (ಉಂಟಾಗುತ್ತವೆ). ಆರನೆಯ ತಿಂಗಳಲ್ಲಿ ಮೂಳೆ, ನರ <ಸ್ನಾಯು>, ಉಗುರು, ತಲೆಕೂದಲು, ಮೈಕೂದಲು, ಇವುಗಳ ಪ್ರತ್ಯೇಕತೆಯು (ಸ್ಪಷ್ಟಾಭಿವ್ಯಕ್ತಿಯು) <ವಿವಿಕ್ತತಾ> ಉಂಟಾಗುತ್ತದೆ.

ಏಳನೆಯ ತಿಂಗಳಿನಲ್ಲಿ ಗರ್ಭ

**ಬಲವರ್ಣೌ ಚೋಪಚಿತೌ ಸಪ್ತಮೇ ತ್ವಂಗಪೂರ್ಣತಾ ।**
**ಪಾಲ್ಯಾಂತರಿತಹಸ್ತಾಭ್ಯಾಂ[22] ಶ್ರೋತ್ರರಂಧ್ರೇ ಪಿಧಾಯ ಸಃ ॥ 34 ॥** 83

ಮತ್ತು ಬಲ, ಬಣ್ಣಗಳು ಕೂಡಿಕೊಳ್ಳುತ್ತವೆ. ಏಳನೆಯ ತಿಂಗಳಲ್ಲಾದರೋ ಅವಯವಗಳ ಪೂರ್ಣತೆಯುಂಟಾಗುತ್ತದೆ. ಅದು [ಆಗ] ತೊಡೆಗಳ ಮಧ್ಯದಲ್ಲಿರುವ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು—

ಐದು ಮತ್ತು ಆರನೆಯ ತಿಂಗಳುಗಳಲ್ಲಿ ಭ್ರೂಣದ ಬೆಳವಣಿಗೆಯನ್ನು ಪ್ರಾಚೀನಾಚಾರ್ಯರು ಸ್ವಲ್ಪ ಬೇರೆಯಾಗಿ ಹೇಳುತ್ತಾರೆ. ಐದನೆಯ ತಿಂಗಳಿಂದ ಮುಂದಕ್ಕೆ ಭ್ರೂಣದ ಮಾಂಸರಕ್ತಗಳು ಬಲಿಯುವುದರಿಂದ ಗರ್ಭಿಣಿಯು ಕೃಶವಾಗುತ್ತಾಳೆಂದು ಚರಕನು ಹೇಳುತ್ತಾನೆ :

---

19 ಕ ಮತ್ತು ಸಿಂಹಭೂಪಾಲೀಯಪಾಠ : ಮಾಹಿಷೇಣ ತು ರಕ್ತಾಕ್ಷಂ ; ಕಲ್ಲಿನಾಥೀಯಪಾಠ : ಮಾಹಿಷೇ ಶೂರ-ರಕ್ತಾಕ್ಷಂ.

20 ಕ ಮತ್ತು ಸಿಂಹಭೂಪಾಲೀಯ ಪಾಠ : ಶೂಕವತ್.

21 ಗ : ಲೋಮ.

22 ಕ : ಭುಗ್ನೋಂತರಿತಪಾಣಿಭ್ಯಾಂ.

ಪಂಚಮೇ ಮಾಸಿ ಗರ್ಭಸ್ಯ ಮಾಂಸಶೋಣಿತೋಪಚಯೋ ಭವತಿ ; ಅಧಿಕಮನ್ಯೇಭ್ಯೋ ಮಾಸೇಭ್ಯಃ ; ತಸ್ಮಾತ್ತದಾ ಗರ್ಭಿಣೀ ಕಾರ್ಶ್ಯಮಾಪದ್ಯತೇ ವಿಶೇಷೇಣ ।[74]

ಸುಶ್ರುತನು ಕೇವಲ 'ಪಂಚಮೇ ಮನಃ ಪ್ರತಿಬುದ್ಧತರಂ ಭವತಿ' ಎನ್ನುತ್ತಾನೆ.[75] ಯಾಜ್ಞವಲ್ಕ್ಯನು 'ಪಂಚಮೇ ಶೋಣಿತೋದ್ಭವಃ' ಎಂದು ಮಾತ್ರವೂ 'ಷಷ್ಠೇ ಬಲಸ್ಯ ವರ್ಣಸ್ಯ ನಖರೋಮ್ಣಾಂ ಚ ಸಂಭವಃ। ಮನಶ್ಚೈತನ್ಯಯುಕ್ತೋಽಸೌ ನಾಡೀಸ್ನಾಯುಶಿರಾಯುತಃ ಸಪ್ತಮೇ।' ಎಂದೂ ಹೇಳುತ್ತಾನೆ.[76]

ವಾಗ್ಭಟನು ಐದನೆಯ ತಿಂಗಳಲ್ಲಿ ಚೇತನವುಂಟಾಗುವುದೆಂದು—'ಚೇತನಾಯಾಶ್ಚ ಪಂಚಮೇ'[77]—ಹೇಳಿದ್ದಾನೆ. ಅಲ್ಲದೆ ಆರನೆಯ ತಿಂಗಳಿನಲ್ಲಿ ನರ, ಸಿರೆ, ಮೈಕೂದಲು, ಬಲ, ಬಣ್ಣ, ಉಗುರು ಮುಂತಾದವು ಉಂಟಾಗುವುವೆಂದು ಅಭಿಪ್ರಾಯಪಡುತ್ತಾನೆ :

ಷಷ್ಠೇ ಸ್ನಾಯುಸಿರಾರೋಮಬಲವರ್ಣನಖತ್ವಚಾಮ್ ।[78]

ಚರಕನು ಆರನೆಯ ತಿಂಗಳಲ್ಲಿ ಭ್ರೂಣಕ್ಕೆ ಬಲ, ಬಣ್ಣಗಳು ಉಂಟಾಗಿರುವುದರಿಂದ ಗರ್ಭಿಣಿಯು ಅವುಗಳನ್ನು ಕಳೆದುಕೊಳ್ಳುತ್ತಾಳೆಂದು ಹೇಳುತ್ತಾನೆ :

ಷಷ್ಠೇ ಮಾಸಿ ಗರ್ಭಸ್ಯ ಬಲವರ್ಣೋಪಚಯೋ ಭವತ್ಯಧಿಕಂ ಅನ್ಯೇಭ್ಯೋ ಮಾಸೇಭ್ಯಃ ; ತಸ್ಮಾತ್ತದಾ ಗರ್ಭಿಣೀ ಬಲವರ್ಣಹಾನಿಮಾಪದ್ಯತೇ ವಿಶೇಷೇಣ ॥[79]

ಸುಶ್ರುತನು 'ಷಷ್ಠೇ ಬುದ್ಧಿಃ'[80] ಎಂದು ಮಾತ್ರ ಹೇಳುತ್ತಾನೆ.

ಸ್ನಾಯು ಎನ್ನುವುದನ್ನು ನರ ಎಂದು ಕುನ್ಹನ್‌ರಾಜಾ ಅನುವಾದಮಾಡುತ್ತಾನೆ[81]. ಈ ಪದಕ್ಕೆ ಮಾಂಸ ಖಂಡ, ಮಾಂಸಬಂಧನವಿಶೇಷ ಎಂಬ ಅರ್ಥಗಳೂ ಉಂಟು. ಇಲ್ಲಿ ಮಾಂಸಖಂಡವನ್ನು ಎಲುಬಿಗೆ ಕಟ್ಟುವ ತಂತಿ ಯಂತಿರುವ ಭಾಗ ಎಂದು ತಿಳಿಯಬೇಕು. ಈ ಶಬ್ದವು ಸ್ನಾ (ಸಿನಾ) ಧಾತುವಿನಿಂದ ಹುಟ್ಟಿರುವುದರಿಂದ ಈ ಅರ್ಥವೇ ಸರಿಯೆಂದು ತೋರುತ್ತದೆ.

**ಉದ್ವಿಗ್ನೋ ಗರ್ಭಸಂವಾಸಾದಾಸ್ತೇ ಗರ್ಭಾಶಯಾನ್ವಿತಃ ।**
**ಸ್ಮರನ್ಪೂರ್ವಾನುಭೂತಾಃ ಸ[23] ನಾನಾಜಾತೀಶ್ಚ ಯಾತನಾಃ ॥ 35 ॥** 84

—ಗರ್ಭಕೋಶದಲ್ಲಿದ್ದುಕೊಂಡು ಗರ್ಭದ ದುರ್ಗಂಧದಿಂದ <ಸಂವಾಸಾತ್> ವ್ಯಥೆಪಟ್ಟು ಹಿಂದೆ (ಹಿಂದಿನ ಜನ್ಮಗಳಲ್ಲಿ) ಅನುಭವಿಸಿದ ನಾನಾರೀತಿಯ ನೋವುಗಳನ್ನೆಲ್ಲ ಜ್ಞಾಪಿಸಿಕೊಂಡು—

23 ಕ, ಗ : ಭೂತಾಂಸ್ತು.

74 ಚರಕ, ಉ. ಗ್ರಂ., IV, 4, 21, ಪು. 320.
75 ಸುಶ್ರುತ, ಉ. ಗ್ರಂ., III, 3, 29 ವ., ಪು. 32.
76 ಯಾಜ್ಞವಲ್ಕ್ಯ, ಉ. ಗ್ರಂ., ಅದೇ ಸ್ಥಾನ, 80–81.
77 ವಾಗ್ಭಟ, ಉ. ಗ್ರಂ, I, 57, ಪು. 17.
78 ಅದೇ ಗ್ರಂಥ, ಪು. 17.
79 ಚರಕ, ಉ. ಗ್ರಂ., IV, 4, 22, ಪು. 320.
80 ಸುಶ್ರುತ, ಉ. ಗ್ರಂ., III, 29 ವ., ಪು. 32.
81 ಕುನ್ಹನ್‌ರಾಜಾ, ಉ. ಗ್ರಂ., ಪು. 18.

ಎಂಟನೆಯ ತಿಂಗಳಿನಲ್ಲಿ ಗರ್ಭ

**ಮೋಕ್ಷೋಪಾಯಮಭಿಧ್ಯಾಯನ್ ವರ್ತತೇ ऽಭ್ಯಾಸತತ್ಪರಃ ।**
**ಅಷ್ಟಮೇ ತ್ವಕ್‌ಸ್ಮೃತೀ[24] ಸ್ಯಾತಾಮೋಜಶ್ಚೈತಚ್ಚ[25] ಹೃದ್ಭವಮ್ ॥36॥** 85

—ಬಿಡುಗಡೆಯ ಉಪಾಯವನ್ನು ಚಿಂತಿಸುತ್ತಲೂ, [ತನ್ನನ್ನೇ ಕುರಿತಾದ] ಚಿಂತನೆ <ಅಭ್ಯಾಸ>ಯಿಂದಲೂ ಇರುತ್ತದೆ. ಎಂಟನೆಯ ತಿಂಗಳಲ್ಲಿ ಚರ್ಮ, ಜ್ಞಾಪಕಶಕ್ತಿಗಳೂ ಮತ್ತು ಓಜಸ್ಸೂ ಉಂಟಾಗುತ್ತವೆ. ಇದು (ಓಜಸ್ಸು) ಹೃದಯದಿಂದ ಹುಟ್ಟಿದುದು.

ಮೋಕ್ಷವೆಂಬುದಕ್ಕೆ ರೂಢಾರ್ಥ ಅಥವಾ ಯೌಗಿಕಾರ್ಥಗಳೆರಡನ್ನೂ ಇಲ್ಲಿ ಅನ್ವಯಿಸಬಹುದು. ಬಹು ನಿರ್ಬಂಧಿತವಾದುದರಿಂದ ಗರ್ಭದಿಂದ ಬಿಡುಗಡೆಯಾಗುವ ಉಪಾಯವನ್ನೂ ಪೂರ್ತಿಯಾಗಿ ಮಾಯೆ ಆವರಿಸದೆ ಇರುವುದರಿಂದ ಲಿಂಗಶರೀರಭೇದನದಿಂದ ಬರುವ ಚತುರ್ಥ ಪುರುಷಾರ್ಥವನ್ನು ಪಡೆಯುವ ಉಪಾಯವನ್ನೂ ಚಿಂತಿಸುತ್ತಾ ಇರುತ್ತದೆ ಎಂದು ಅನ್ವಯಮಾಡಬಹುದು. ಹಾಗೆಯೇ ಅಭ್ಯಾಸತತ್ಪರನೆಂಬುದಕ್ಕೆ ಗರ್ಭಾಶಯದಿಂದ ಬಿಡುಗಡೆಯಾಗಲು ಪುನಃ ಪುನಃ ಪ್ರಯತ್ನಮಾಡುತ್ತಿರುವುದೆಂದೂ ಅಥವಾ ಆತ್ಮಾನುಸಂಧಾನದಲ್ಲಿ ತೊಡಗಿರುತ್ತದೆ ಎಂದೂ ಅರ್ಥಮಾಡಬಹುದು.

ಏಳನೆಯ ತಿಂಗಳಿನಲ್ಲಿ 'ಅಂಗಪೂರ್ಣತಾ' ಎಂದಿಷ್ಟೇ ರತ್ನಾಕರಕಾರನು ಹೇಳಿದ್ದಾನೆ. ಸುಶ್ರುತನು 'ಸರ್ವಾಂಗಪ್ರತ್ಯಂಗವಿಭಾಗಃ ಪ್ರವ್ಯಕ್ತತರಃ'[82] ಎಂದೂ ವಾಗ್ಭಟನು 'ಸರ್ವೈಃ ಸರ್ವಾಂಗಸಂಪೂರ್ಣೋ ಭಾವೈಃ ಪುಷ್ಯತಿ ಸಪ್ತಮೇ' ಎಂದೂ[83] ಚರಕನು 'ಸಪ್ತಮೇ ಮಾಸಿ ಗರ್ಭಃ ಸರ್ವಭಾವೈರಾಪ್ಯಾಯ್ಯತೇ, ತಸ್ಮಾತ್ತದಾ ಗರ್ಭಿಣೀ ಸರ್ವಾಕಾರೈಃ ಕ್ಲಾಂತತಮಾ ಭವತಿ[84] ಎನ್ನುತ್ತಾನೆ. ಈ ಕಾಲದವರೆಗೆ ಒಂದೊಂದು ಅಂಗವು ಒಂದೊಂದು ರೀತಿಯಲ್ಲೂ ವೇಗದಲ್ಲೂ ಬೆಳೆಯುತ್ತಿರುವುದೆಂದೂ ಏಳನೆಯ ತಿಂಗಳಲ್ಲಿ ಒಂದೇ ಸಮಯಕ್ಕೆ ಎಲ್ಲಾ ಅಂಗಗಳೂ ಪೂರ್ಣವಾಗಿ ಭ್ರೂಣವು ಪೂರ್ತಿಯಾಗಿ ಮನುಷ್ಯಾಕಾರವನ್ನು ತಳೆಯುತ್ತದೆಂದೂ ತಿಳಿಯಬೇಕು. ಚರ್ಮ ಮತ್ತು ಸ್ಮೃತಿಗಳು ಭ್ರೂಣಕ್ಕೆ ಎಂಟನೆಯ ತಿಂಗಳಲ್ಲಿ ಆಗುತ್ತವೆ ಎಂಬ ಅಭಿಪ್ರಾಯದಲ್ಲಿ ಶಾರ್ಙ್ಗದೇವನು ಯಾಜ್ಞವಲ್ಕ್ಯನನ್ನು ಅನುಸರಿಸಿರುವ ಹಾಗೆ ಕಾಣುತ್ತದೆ:

ಚಾಷ್ಟಮೇ ಚೈವ ತ್ವಙ್ಮಾಂಸಸ್ಮೃತಿಮಾನಪಿ ।[85]

ಸ್ಮೃತಿ ಎಂಬ ಮಾತನ್ನು ಬಳಸಿರುವುದರಿಂದ ಪೂರ್ವಜನ್ಮದ ಕರ್ಮಫಲವನ್ನೂ ವಾಸನೆಯನ್ನೂ ಭ್ರೂಣದಲ್ಲಿರುವಾಗ ಜೀವನು ಪಡೆಯುವುದನ್ನು ಗ್ರಂಥಕಾರನು ಸೂಚಿಸಿ, ಮೋಕ್ಷಪದಕ್ಕೆ ಅಧ್ಯಾತ್ಮಪರವಾದ ಅರ್ಥವನ್ನೇ ಇಲ್ಲಿ ವಿವಕ್ಷಿಸಿರುವಂತೆ ತೋರುತ್ತದೆ. ಹುಟ್ಟಿದ ಮೇಲೆ ಬೇಕಾಗುವ ಸ್ಮರಣಶಕ್ತಿಯು (ಎಂದರೆ ಅದಕ್ಕೆ ಬೇಕಾದ ರಚನಾಸಾಮಗ್ರಿಯು) ಭ್ರೂಣದ ಮಿದುಳಿನಲ್ಲಿ ಎಂಟನೆಯ ತಿಂಗಳಿನಲ್ಲಿ ಉಂಟಾಗುತ್ತದೆ ಎಂದು ಬೇಕಾದರೂ ಅರ್ಥಮಾಡಿಕೊಳ್ಳಬಹುದು.

---

24 ಕಲ್ಲಿನಾಥೀಯಪಾಠ: ತ್ವಕ್‌ಸ್ಮೃತೀ ; ಅ, ಕ ಮತ್ತು ಸಿಂಹಭೂಪಾಲೀಯ ಪಾಠ: ತ್ವಕ್‌ಶ್ರುತೀ.

25 ಕ :–ಶ್ಚೈವ ಚ.

---

82 ಸುಶ್ರುತ, ಉ.ಗ್ರಂ., ಅದೇ ಸ್ಥಾನ.

83 ವಾಗ್ಭಟ, ಉ. ಗ್ರಂ., I, 58, ಪು. 17.

84 ಚರಕ, ಉ. ಗ್ರಂ., IV, 4, 23, ಪು. 320.

85 ಯಾಜ್ಞವಲ್ಕ್ಯ, ಉ. ಗ್ರಂ., ಅದೇ ಸ್ಥಾನ 81.

## 2. ಪಿಂಡೋತ್ಪತ್ತಿ ಪ್ರಕರಣ

**ಶುದ್ಧಮಾಪೀತರಕ್ತಂ ಚ ನಿಮಿತ್ತಂ[26] ಜೀವಿತೇ ಮತಮ್[27] ।**
**ಪುನರಂಬಾಂ ಪುನರ್ಗರ್ಭಂ ಚಂಚಲಂ ತತ್[28] ಪ್ರಧಾವತಿ ॥ 37 ॥** 86

[ಓಜಸ್ಸು] ಶುದ್ಧವಾಗಿಯೂ (ತಿಳಿಯಾಗಿಯೂ) ಹಳದಿಕೆಂಪಾಗಿಯೂ ಇದ್ದು ಜೀವಿಸಲು ಅಗತ್ಯವಾದುದೆಂದು ಸಮ್ಮತಿಸಲಾಗಿದೆ. ನಿಂತಲ್ಲಿ ನಿಲ್ಲದ ಇದು ಒಮ್ಮೆ ತಾಯಿಯಲ್ಲೂ ಒಮ್ಮೆ ಗರ್ಭದಲ್ಲಿಯೂ ಹರಿಯುತ್ತಿರುತ್ತದೆ.

**ಅತೋ ಜಾತೋಽಷ್ಟಮೇ ಮಾಸಿ ನ ಜೀವತ್ಯೋಜಸೋಜ್ಝಿತಃ ।**
**ಕಿಂಚಿತ್ ಕಾಲಮವಸ್ಥಾನಂ ಸಂಸ್ಕಾರಾತ್ ಖಂಡಿತಾಂಗವತ್ ॥ 38 ॥** 87

ಆದುದರಿಂದ ಓಜಸ್ಸಿಲ್ಲದೆ ಎಂಟನೆಯ ತಿಂಗಳಲ್ಲಿ ಹುಟ್ಟಿದ ಮಗುವು ಬದುಕುವುದಿಲ್ಲ. ತನ್ನ ಹಿಂದಿನ ಅವಸ್ಥೆಯ ಪ್ರಭಾವದಿಂದ, ಕತ್ತರಿಸಿ ಹಾಕಿದ ಅವಯವದಂತೆ ಕೆಲವುಕಾಲ ಜೀವಿಸಿರುತ್ತದೆ.

ಓಜಸ್ಸಿಗೆ ಪಾಶ್ಚಾತ್ಯ ಭ್ರೂಣಶಾಸ್ತ್ರದಲ್ಲಿ ಆಮ್ನಿಯೋಟಿಕ್ ಫ್ಲುಯಿಡ್ ಎಂದು ಹೆಸರು. ಅದನ್ನು ಹೀಗೆ ವರ್ಣಿಸಲಾಗಿದೆ :

The amniotic sac is small at first, but accumulates fluid throughout pregnancy. Eventually the fetus is surrounded by from a pint to a quart of clear, light yellow fluid. The amount varies at times, however, from a tablespoon to several quarts.[86]

ಎಂಟನೆಯ ತಿಂಗಳಲ್ಲಿ ಪ್ರಾಣರಸವಾದ ಓಜಸ್ಸು ಉತ್ಪತ್ತಿಯಾಗುತ್ತದೆ. ಇದು ದೇಹದಲ್ಲಿರುವುದರಿಂದಲೇ ಬದುಕಿರುವುದು. ಆದರೆ ಇದು ಸ್ವಭಾವದಲ್ಲೇ ಚಂಚಲವಾಗಿರುವುದರಿಂದ ಕೆಲವು ವೇಳೆ ತಾಯಿಯ ದೇಹದಲ್ಲೂ ಕೆಲವು ವೇಳೆ ಭ್ರೂಣದಲ್ಲೂ ಇರುತ್ತದೆ. ಹೀಗೆ ಓಜಸ್ಸಿಲ್ಲದೆ ಎಂಟನೆಯ ತಿಂಗಳಲ್ಲಿ ಪ್ರಸವವಾದರೆ ಮಗುವು ಬದುಕುವುದಿಲ್ಲ ; ಹಾಗೆಯೇ ಓಜಸ್ಸು ತಾಯಿಯಲ್ಲಿ ಇಲ್ಲದವೇಳೆಯಲ್ಲಿ ಪ್ರಸವವಾದರೆ ತಾಯಿಯು ಬದುಕುವುದಿಲ್ಲ. ಒಂದು ವೇಳೆ ಎಂಟನೆಯ ತಿಂಗಳಿನಲ್ಲಿ ಮಗುವು ಜೀವಂತವಾಗಿ ಹುಟ್ಟಿದರೂ ಸ್ವಲ್ಪಕಾಲದಲ್ಲಿಯೇ ಸಾಯುತ್ತದೆ. ಓಜಸ್ಸು ಇಬ್ಬರಲ್ಲಿಯೂ ಇರದೆ ಹೊಕ್ಕಳು ಬಳ್ಳಿಯಲ್ಲಿದ್ದರೆ ಇಬ್ಬರೂ ಸಾಯುತ್ತಾರೆ. ದೇಹದ ಯಾವುದಾದರೊಂದು ಭಾಗವನ್ನು ಕತ್ತರಿಸಿ ಹಾಕಿದರೆ ಅದು ಕೂಡಲೇ ಸಾಯುವುದಿಲ್ಲವೆಂದೂ ಸ್ವಲ್ಪಕಾಲದವರೆಗೆ ತನ್ನ ಸಹಜಕ್ರಿಯೆಗಳಲ್ಲಿ ತೊಡಗಿರುತ್ತದೆಂಬುದೂ ಅನುಭವಸಿದ್ಧವಾಗಿರುವ ವಿಷಯ. ಆದರಲ್ಲಿರುವ ಪ್ರಾಣರಸವು ಹರಿದುಹೋದಮೇಲೆಯೇ ಅದು ಮೃತವಾಗುವುದೆಂಬುದು ನಮ್ಮ ಪೂರ್ವಾಚಾರ್ಯರ ಅಭಿಪ್ರಾಯವೆಂದು ಕಾಣುತ್ತದೆ.

ಎಂಟನೆಯ ತಿಂಗಳಲ್ಲಿ ಗರ್ಭಿಣಿಯು ಬಾಹ್ಯಗೋಚರ ಕಾರಣಗಳೇ ಇಲ್ಲದೆ ಒಮ್ಮೊಮ್ಮೆ ಮ್ಲಾನಳಾಗಿಯೂ ಒಮ್ಮೊಮ್ಮೆ ಹರ್ಷದಿಂದಲೂ ಇರುವುದು ಅನುಭವಸಿದ್ಧವೇ ಆಗಿದೆ. ಅವಳು ಓಜಸ್ಸು ತನ್ನಲ್ಲಿರುವಾಗ ಹರ್ಷಿತಳೂ ಅದು ಭ್ರೂಣಕ್ಕೆ ಹೋಗಿಬಿಟ್ಟಿರುವಾಗ ಮ್ಲಾನಳೂ ಆಗಿರುತ್ತಾಳೆಂಬ ಕಾರಣವನ್ನು ನಮ್ಮ ಪೂರ್ವಾಚಾರ್ಯರು ಕೊಡುತ್ತಾರೆ :

---

26 ಕ : ನಿಮಿತ್ತೇ. 27 ಕ, ಗ : ಗತಮ್. 28 ಕ : ಚಂಚಲಃ ಸನ್.

---

86 ಸ್ಪ್ರೌಲ್, ಉ, ಗ್ರಂ., ಪು. 136.

ಚರಕನು ಭ್ರೂಣದ ಸ್ಥಿತಿಯನ್ನು

ಅಷ್ಟಮೇ ಮಾಸಿ ಗರ್ಭಶ್ಚ ಮಾತೃತೋ ಗರ್ಭತಶ್ಚ ಮಾತಾ ರಸಹಾರಿಣೀಭಿಃ ಸಂವಾಹಿನೀಭಿಃ ಮುಹು ರ್ಮುಹುರೋಜಃ ಪರಸ್ಪರತ ಆದದಾತೇ ಗರ್ಭಸ್ಯ ಅಸಂಪೂರ್ಣತ್ವಾತ್ । ತಸ್ಮಾತ್ತದಾ ಗರ್ಭಿಣೀ ಮುಹುರ್ಮುಹು ರ್ಮುದಾ ಯುಕ್ತಾ ಭವತಿ ಮುಹುರ್ಮುಹುಶ್ಚ ಮ್ಲಾನಾ, ತಥಾ ಗರ್ಭಃ ; ತಸ್ಮಾತ್ತದಾ ಗರ್ಭಸ್ಯ ಜನ್ಮವ್ಯಾಪತ್ತಿ ಮುದ್ಭವತ್ಯೋಜಸೋಽನವಸ್ಥಿತತ್ವಾತ್ । ತಂ ಚೈವಾರ್ಥಮಭಿಸಮೀಕ್ಷ್ಯಾಷ್ಟಮಂ ಮಾಸಮಗಣ್ಯಮಿತ್ಯಾಚಕ್ಷತೇ ಕುಶಲಾಃ ।[87]

ಎಂದು ವಿವರಿಸುತ್ತಾನೆ. ಸುಶ್ರುತನು ಓಜಸ್ಸಿಲ್ಲದಿರುವುದರ ಜೊತೆಗೆ ನೈಋತಭಾಗವಾಗಿರುವುದೂ, ಎಂದರೆ, ರಾಕ್ಷಸರು ಅಪಹರಿಸಿಬಿಡುವುದೂ ಕಾರಣವೆಂದು ಹೇಳುತ್ತಾನೆ :

ಅಷ್ಟಮೇ ಽಸ್ಥಿರೀಭವತ್ಯೋಜಃ ತತ್ರ ಜಾತಶ್ಚೇನ್ನ ಜೀವೇನ್ನಿರೋಜಸ್ತ್ವಾನ್ನೈಋತಭಾಗತ್ವಾಚ್ಚ, ತತೋ ಬಲಿಂ ಮಾಂಸೋದನಮಸ್ಮೈ ದಾಪಯೇತ್[88].

ವಾಗ್ಭಟನೂ, ಓಜೋಽಷ್ಟಮೇ ಸಂಚರತಿ ಮಾತಾಪುತ್ರೌ ಮುಹುಃ ಕ್ರಮಾತ್ ।
ತೇನ ತೌ ಮ್ಲಾನಮುದಿತೌ ತತ್ರಜಾತೋ ನ ಜೀವತಿ ।
ಶಿಶುರೋಜೋ ಽನವಸ್ಥಾನಾನ್ನಾರೀ ಸಂಶಯಿತಾ ಭವೇತ್ ॥ ಎನ್ನುತ್ತಾನೆ.[89]

| ಪ್ರಸವಕಾಲ |

**ಸಮಯಃ ಪ್ರಸವಸ್ಯ ಸ್ಯಾನ್ಮಾಸೇಷು ನವಮಾದಿಷು ।**
**ಮಾತೂ ರಸವಹಾಂ ನಾಡೀಮನುಬದ್ಧಾ ಪರಾಽಭಿಧಾ ॥ 39 ॥** 88

[ಮಗುವಿನ] ಹುಟ್ಟಿನ ಕಾಲವು ಒಂಬತ್ತರಿಂದ ಮೊದಲಾದ ತಿಂಗಳುಗಳಲ್ಲಿ. ತಾಯಿಯಿಂದ ಜೀವರಸವನ್ನು ಒಯ್ಯುವ ಪರಾ ಎಂಬ ನಾಡಿಗೆ ಕಟ್ಟಲ್ಪಟ್ಟು (ಭ್ರೂಣವಿರುತ್ತದೆ.)

ಹೆರಿಗೆಯ ಕಾಲವು ಒಂಬತ್ತರಿಂದ ಹನ್ನೆರಡನೆಯ ತಿಂಗಳಿನವರೆಗೆ :

It requires about nine calender months, ten lunar months, or 275 to 280 days for complete development of the infant.[90]

ಸುಶ್ರುತನು 'ನವಮದಶಮೈಕಾದಶದ್ವಾದಶಾನಾಮನ್ಯತಮಸ್ಮಿನ್ ಜಾಯತೇ, ಅತೋನ್ಯಥಾ ವಿಕಾರೀಭವತಿ'[91] ಎಂಬ ವಿಶೇಷವಾದ ಜ್ಞಾನವನ್ನು ಕೊಡುತ್ತಾನೆ. ಚರಕವಾಗ್ಭಟರು ಈ ವಿಷಯದಲ್ಲಿ ಮೌನವಾಗಿದ್ದಾರೆ.

ಪರಾ ಎಂಬ ನಾಡಿಯೇ ಹೊಕ್ಕಳುಬಳ್ಳಿ. ಇದರಿಂದಲೇ ಭ್ರೂಣಕ್ಕೆ ತಾಯಿಯ ಶರೀರದಿಂದ ಆಹಾರವೂ ಓಜಸ್ಸೂ ಹರಿದು ಸೇರುವುದು :

87 ಚರಕ, ಉ. ಗ್ರಂ., IV, 4, 24. ಪು. 320, 321.
88 ಸುಶ್ರುತ, ಉ. ಗ್ರಂ., III, 29 ವ., ಪು. 33.
89 ವಾಗ್ಭಟ, ಉ. ಗ್ರಂ., I, 62–63, ಪು. 18.
90 ಸ್ಟಾಲ್, ಉ. ಗ್ರಂ., ಪು. 136.
91 ಸುಶ್ರುತ, ಉ. ಗ್ರಂ., III, 30, ಪು. 33.

The placenta establishes communication between mother and child by means of the umbilical artery and vein. The umbilical vein carries the fetal blood to the placenta, where the fetal waste products diffuse across the placental membrane into the maternal blood. Various food substances, electrolytes water and minerals diffuse from the maternal blood across the placental membrane and are eventually carried to the fetus by the umbilical artery.[92]

ಗರ್ಭದಲ್ಲಿ ಶಿಶುವಿನ ಆಕಾರ

**ನಾಭಿಸ್ಥನಾಡೀ ಗರ್ಭಸ್ಯ ಮಾತ್ರಾಹಾರರಸಾವಹಾ ।**
**ಕೃತಾಂಜಲಿರ್ಲಲಾಟೇ ऽಸೌ ಮಾತೃಪೃಷ್ಠಮಭಿಸ್ಥಿತಃ ॥ 40 ॥** 89

ಹೊಕ್ಕುಳಿನಲ್ಲಿರುವ ನಾಡಿಯು ಭ್ರೂಣಕ್ಕೆ ಆಹಾರವನ್ನೂ ಓಜಸ್ಸನ್ನೂ ಒಯ್ಯುತ್ತದೆ. ಅದು (ಭ್ರೂಣವು) ಹಣೆಯಮೇಲೆ ಕೈಗಳನ್ನು ಬೊಗಸೆಮಾಡಿಕೊಂಡು ತಾಯಿಯ ಬೆನ್ನಿಗೆ ಎದುರಾಗಿರುತ್ತದೆ.

ತಾಯಿಯ ದೇಹದಿಂದ ಗರ್ಭಶರೀರದೊಳಕ್ಕೆ ಹೊಕ್ಕಳುಬಳ್ಳಿಯ ಮೂಲಕ ಆಹಾರ ಸಾರವು ಹರಿಯುವುದು, ಪೈರಿಗೆ ಪುಷ್ಟಿಯನ್ನು (ನೀರನ್ನು) ಗದ್ದೆಗಳಲ್ಲಿ ಬಿಡಿಗಂಡಿಗಳಿಂದ ಹಾಯಿಸುವಹಾಗೆ, ಎಂಬ ಸುಂದರವಾದ ಹೋಲಿಕೆಯನ್ನು ವಾಗ್ಭಟನು ಕೊಡುತ್ತಾನೆ :

ಯಯಾಸ ಪುಷ್ಟಿಮಾಪ್ನೋತಿ ಕೇದಾರ ಇವ ಕುಲ್ಯಯಾ ।[93]

ಇದೇ ಹೋಲಿಕೆಯನ್ನು ಶಾರ್ಙ್ಗದೇವನು ಇನ್ನೂ ಸಮಂಜಸವಾಗಿ ಧಮನಿಗಳ ವಿಷಯದಲ್ಲಿ ಉಪಯೋಗಿಸುತ್ತಾನೆ.[94]

ಭ್ರೂಣದ ಲಿಂಗ

**ಅಧ್ಮಾಸ್ತೇ ಸಂಕುಚದ್ಗಾತ್ರೋ ಗರ್ಭಂ ದಕ್ಷಿಣಪಾರ್ಶ್ವಗಃ ।**
**ವಾಮಪಾರ್ಶ್ವಸ್ಥಿತಾ ನಾರೀ ಕ್ಲೀಬಂ ಮಧ್ಯಸ್ಥಿತಂ ಮತಮ್ ॥ 41 ॥** 90

[ಭ್ರೂಣವು ಗಂಡಾಗಿದ್ದರೆ] ತನ್ನ ಗಾತ್ರವನ್ನು ಕುಗ್ಗಿಸಿಕೊಂಡು ಗರ್ಭದ ಬಲಗಡೆಗೆ ಇರುತ್ತದೆ. ಹೆಣ್ಣು [ಗರ್ಭದ] ಎಡಗಡೆಯಿರುವಂತಹುದು. ಮಧ್ಯದಲ್ಲಿರುವುದು ನಪುಂಸಕವೆಂದು ಸಮ್ಮತಿಸಿದೆ.

ಭ್ರೂಣದ ಈ ಆಕಾರವು ಅನುಭವವೇದ್ಯವಾದುದು :

Most commonly the fetus lies in the uterus with head down, arms folded, knees drawn high and feet crossed. Many other positions are possible, however.[95]

92 ಸ್ಮಾಲ್, ಉ. ಗ್ರಂ., ಪು. 134.
93 ವಾಗ್ಭಟ, ಉ. ಗ್ರಂ., I, 56, ಪು. 17.
94 ಶಾರ್ಙ್ಗದೇವ, ಉ. ಗ್ರಂ., I, 2, 106.
95 ಸ್ಮಾಲ್, ಉ. ಗ್ರಂ., ಪು. 137.

ಗರ್ಭದಲ್ಲಿರುವ ಭ್ರೂಣದ ಲಿಂಗವನ್ನು ತಿಳಿಯುವ ಕುತೂಹಲವು ಮಾನವಕುಲಕ್ಕೇ ಸಹಜವೆಂದು ತೋರುತ್ತದೆ. ಪ್ರಾಚೀನ ಭಾರತದ ಆಯುರ್ವೇದಾಚಾರ್ಯರೂ ಈ ಕುತೂಹಲಕ್ಕೆ ಹೊರತಲ್ಲ. ಭ್ರೂಣದ ಲಿಂಗವನ್ನು ವೀರ್ಯದ (ಅಥವಾ ರಜಸ್ಸಿನ) ಪ್ರಮಾಣ, ಎರಡನೆಯ ತಿಂಗಳಲ್ಲಿ ಅದರ ಆಕಾರ ಮತ್ತು ಪ್ರಸವಕಾಲವು ಸನ್ನಿಹಿತವಾಗಿರುವ ಗರ್ಭದಲ್ಲಿ ಅದು ಕಂಡುಬರುವ ಸ್ಥಳ ಇವುಗಳ ಆಧಾರದಮೇಲೆ ಅವರು ಊಹಾಸೌಧಗಳನ್ನು ಕಟ್ಟಿದ್ದಾರೆ. ಇವುಗಳೇ ಅಲ್ಲದೆ ಅವರು ಈ ವಿಶೇಷ ಸೂಚನೆಗಳಮೇಲೂ ಭ್ರೂಣದ ಲಿಂಗವನ್ನು ನಿರ್ಧರಿಸುತ್ತಿದ್ದರು:

ಪ್ರಾಗ್ದಕ್ಷಿಣಸ್ತನಸ್ತನ್ಯಾ ಪೂರ್ವಂ ತತ್ಪಾರ್ಶ್ವಚೇಷ್ಟಿನೀ ।
ಪುಂನಾಮ ದೌಹೃದಪ್ರಶ್ನರತಾ ಪುಂಸ್ತ್ವಪ್ರದರ್ಶಿನೀ ॥
ಉನ್ನತೇ ದಕ್ಷಿಣೇ ಕುಕ್ಷೌ ಗರ್ಭೇ ಚ ಪರಿಮಂಡಲೇ ।
ಪುತ್ರಂ ಸೂತೇಽನ್ಯಥಾ ಕನ್ಯಾಂ ಯಾ ಚೇಚ್ಛತಿ ನೃಸಂಗತಿಮ್ ॥
ನೃತ್ತವಾದಿತ್ರಗಾಂಧರ್ವಗಂಧಮಾಲ್ಯಪ್ರಿಯಾ ಚ ಯಾ ।
ಕ್ಲೀಬಂ ತತ್ಸಂಕರೇ ತತ್ರ ಮಧ್ಯಂ ಕುಕ್ಷೇಃ ಸಮುನ್ನತಮ್ ॥
ಯಮೌ ಪಾರ್ಶ್ವದ್ವಯೋನ್ನಾಮಾತ್ ಕುಕ್ಷೌ ದ್ರೋಣ್ಯಾಮಿವ ಸ್ಥಿತೇ ॥[96]

ಸುಶ್ರುತನೂ ಹೆಚ್ಚುಕಡಿಮೆ ಇದೇ ಅಭಿಪ್ರಾಯಗಳನ್ನು ಕೊಡುತ್ತಾನೆ :

ತತ್ರ ಯಸ್ಯಾ ದಕ್ಷಿಣೇ ಸ್ತನೇ ಪ್ರಾಕ್‌ಪಯೋದರ್ಶನಂ ಭವತಿ ದಕ್ಷಿಣಾಕ್ಷಿಮಹತ್ವಂ ಚ ಪೂರ್ವಂ ಚ ದಕ್ಷಿಣಂ ಸಕ್ಥ್ಯುತ್ಕರ್ಷತಿ, ಬಾಹುಲ್ಯಾಚ್ಚ ಪುನ್ನಾಮಧೇಯೇಷು ದ್ರವ್ಯೇಷು ದೌಹೃದಮಭಿಧ್ಯಾಯತಿ, ಸ್ವಪ್ನೇಷು ಚೋಪಲಭತೇ ಪದ್ಮೋತ್ಪಲಕುಮುದಾಮ್ರಾತಕಾದೀನಿ ಪುನ್ನಾಮಾನ್ಯೇವ ಪ್ರಸನ್ನಮುಖವರ್ಣಾ ಚ ಭವತಿ ತಾಂ ಬ್ರೂಯಾತ್ ಪುತ್ರಮಿಯಂ ಜನಯಿಷ್ಯತೀತಿ, ತದ್ವಿಪರ್ಯಯೇ ಕನ್ಯಾಂ, ಯಸ್ಯಾಃ ಪಾರ್ಶ್ವದ್ವಯಮುನ್ನತಂ ಪುರಸ್ತಾನ್ನಿರ್ಗತಮುದರಂ ಪ್ರಾಗಭಿಹಿತಲಕ್ಷಣಂ ಚ ತಸ್ಯಾ ನಪುಂಸಕಮಿತಿ ವಿದ್ಯಾತ್, ಯಸ್ಯಾ ಮಧ್ಯೇ ನಿಮ್ನಂ ದ್ರೋಣೀಭೂತಮುದರಂ ಸಾ ಯುಗ್ಮಂ ಪ್ರಸೂಯತ ಇತಿ ॥[97]

ಪ್ರಸವಕಾಲವು ಸನ್ನಿಹಿತವಾಗಿರುವ ಗರ್ಭಿಣಿಯನ್ನು ಮೇಲ್ಕಂಡ ವಿಷಯಗಳಿಗಾಗಿ ಪರೀಕ್ಷಿಸಿ ಈ ಹೇಳಿಕೆಗಳ ತಥ್ಯ ಅಥವಾ ಮಿಥ್ಯಗಳನ್ನು ಪ್ರಾಯೋಗಿಕವಾಗಿ ಕಂಡುಹಿಡಿಯುವುದು ಸುಲಭ. ಈ ವಿಷಯದಲ್ಲಿನ ಸುವ್ಯವಸ್ಥಿತವೂ ವೈಜ್ಞಾನಿಕವೂ ಆದ ಪ್ರಯೋಗಗಳನ್ನು ನಡೆಸುವುದೂ ಅವುಗಳ ಪರಿಣಾಮಗಳನ್ನು ಅಂಕಿಅಂಶಗಳ ಬಲದಿಂದ (statistically) ನಿರ್ಧರಿಸುವುದೂ ಸ್ವಾರಸ್ಯವಾದ, ಸುಲಭವೂ, ಅಗತ್ಯವೂ ಆದ ಕೆಲಸ. ಇದನ್ನು ನಮ್ಮ ಹೆರಿಗೆ ಆಸ್ಪತ್ರೆಗಳಲ್ಲಿ ವೈದ್ಯರುಗಳು ಏಕೆ ಮಾಡುವುದಿಲ್ಲವೋ !

ಪ್ರಸವವಾಗುವ ರೀತಿ

**ಕ್ರಿಯತೇಽಧಃಶಿರಾಃ ಸೂತಿಮಾರುತೈಃ ಪ್ರಬಲೈಸ್ತತಃ ।**
**ನಿಃಸಾರ್ಯತೇ ರುಜದ್‌ಗಾತ್ರೋ ಯಂತ್ರಚ್ಛಿದ್ರೇಣ ಬಾಲಕಃ** ॥ 42 ॥ 91

ಆಮೇಲೆ ಬಹು ಶಕ್ತಿಯುತವಾದ ಹೆರಿಗೆಯ ವಾಯುವಿಶೇಷದಿಂದ (ಹೆರಿಗೆ ನೋವುಗಳಿಂದ) <ಸೂತಿಮಾರುತೈಃ> ಮಗುವು ತಲೆಯನ್ನು ಕೆಳಗೆಮಾಡಿ ಯಂತ್ರಾಕಾರದಲ್ಲಿರುವ ಯೋನಿರಂಧ್ರದಿಂದ ಒಡೆದು ನೋವನ್ನುಂಟುಮಾಡುವ ದೇಹವುಳ್ಳದ್ದಾಗಿ ಹೊರಗೆ ಒಯ್ಯಲ್ಪಡುತ್ತದೆ.

96 ವಾಗ್ಭಟ: ಉ. ಗ್ರಂ., I, 69–72. ಪು. 20.

97 ಸುಶ್ರುತ, ಉ. ಗ್ರಂ., IV 3, 34, ಪು. 37.

2. ಪಿಂಡೋತ್ಪತ್ತಿ ಪ್ರಕರಣ

ನವಮೇ ದಶಮೇ ವಾಪಿ ಪ್ರಬಲೈಃ ಸೂತಿಮಾರುತೈಃ ।
ನಿಃಸಾರ್ಯತೇ ಬಾಣ ಇವ ಯಂತ್ರಚ್ಛಿದ್ರೇಣ ಸಜ್ವರಃ ॥

ಎಂಬ ಯಾಜ್ಞವಲ್ಕ್ಯನ ವರ್ಣನೆಯೊಡನೆ ಈ ವರ್ಣನೆಯನ್ನು ಹೋಲಿಸಿ [98].

ಗರ್ಭದಲ್ಲಿರುವ ಮಗುವು ಹೊರಗೆ ಬಾಣದಂತೆ ಎಸೆಯಲ್ಪಡುವುದಕ್ಕೆ ಗರ್ಭಾಶಯದಲ್ಲಿರುವ ಸೂತಿಕಾವಾಯು ಎಂಬ ವಿಶೇಷರೀತಿಯ ಗಾಳಿಯು ಕಾರಣವೆಂದು ಭಾರತೀಯ ಆಯುರ್ವೇದಾಚಾರ್ಯರು ನಂಬುತ್ತಾರೆ. ಆದರೆ ಗರ್ಭಾಶಯದ ಮತ್ತು ಜಠರದ ಮಾಂಸಖಂಡಗಳ ಮೊದಲು ಅಲ್ಪವೂ ಕೊನೆಯಲ್ಲಿ ಪ್ರಬಲವೂ ಆದ ವಿಶಿಷ್ಟ ರೀತಿಯ ಸಂಕೋಚನವೂ, ಸೂತಿಕಾಜಲದ ಕೋಶವಾದ ಆಮ್ನಿಯೋಟಿಕ್‌ಸ್ಯಾಕ್ ಒಡೆದುಹೋಗುವುದೂ ಪ್ರಸವಕ್ಕೆ ಕಾರಣಗಳೆಂದು ಆಧುನಿಕ ಪಾಶ್ಚಾತ್ಯ ವೈದ್ಯಶಾಸ್ತ್ರವು ಹೇಳುತ್ತದೆ. ಗರ್ಭೋತ್ಪತ್ತಿ, ಭ್ರೂಣದ ಬೆಳವಣಿಗೆ, ಅದರ ಲಿಂಗ, ಪ್ರಸವ, ಈ ಎಲ್ಲಾ ವಿಷಯಗಳನ್ನೂ ಬಹು ಹೃದಯಂಗಮವಾಗಿ ಜೆ. ಡಿ. ರ್‍ಯಾಡ್‌ಕ್ಲಿಫ್, ಷೈನ್‌ಫೆಲ್ಡ್, ಮಾರ್ಗರೆಟ್ ಷಿಯಾ ಗಿಲ್ಬರ್ಟ್ ಇವರುಗಳು ಸುಲಲಿತವೂ ಸುಂದರವೂ ಸರಳವೂ ಆದ ಶೈಲಿಯಲ್ಲಿ ರೀಡರ್ಸ್ ಡೈಜಸ್ಟ್ ಬುಕ್ ಆಫ್ ದಿ ಹ್ಯೂಮನ್ ಬಾಡಿ (ಪು. 45–65) ಯಲ್ಲಿ ವರ್ಣಿಸಿದ್ದಾರೆ. ಈ ವಿಷಯದಲ್ಲಿ ಆಸಕ್ತಿಯುಳ್ಳವರು ಈ ಲೇಖನಗಳನ್ನು ಅಗತ್ಯವಾಗಿ ಓದಬೇಕು.

**ಜಾತಮಾತ್ರಸ್ಯ ತಸ್ಯಾಥ ಪ್ರವೃತ್ತಿಃ ಸ್ತನ್ಯಗೋಚರಾ ।**
**ಪ್ರಾಗ್‌ಜನ್ಮಬೋಧಸಂಸ್ಕಾರಾದಿತಿ ಜೀವಸ್ಯ ನಿತ್ಯತಾ** [29] ॥ 43 ॥ 92.

ಹಿಂದಿನ ಜನ್ಮದ ಅನುಭವದ ಅರಿವಿನಿಂದ ಕೇವಲ (ಆಗತಾನೇ) ಹುಟ್ಟಿದ ಮಗುವು ಮೊಲೆಯೂಡುವ ಪ್ರವೃತ್ತಿಯನ್ನು ಪಡೆದಿರುತ್ತದೆ. ಹೀಗೆ ಜೀವದ ನಿತ್ಯತೆಯು (ಶಾಶ್ವತತ್ವವು) (ಸಿದ್ಧವಾಗುತ್ತದೆ).

ದೇಹವಳಿದಕೂಡಲೇ ಜೀವನು ಕೊನೆಗಾಣುವುದಿಲ್ಲವೆಂಬುದಕ್ಕೆ ಭಾರತೀಯ ಆಧ್ಯಾತ್ಮವಾದಿಗಳು ಮಂಡಿಸುವ ವಾದಗಳಲ್ಲಿ ಇದೂ ಒಂದು. ಆಗತಾನೆ ಹುಟ್ಟಿದ ಮಗುವಿಗೆ ಐಹಿಕ ಪ್ರಪಂಚದ ಯಾವ ಕರ್ಮವ್ಯಾಪಾರಗಳೂ, ಕರ್ಮಪ್ರವೃತ್ತಿಗಳೂ ಇರಲಾರವಷ್ಟೆ! ಪರಪ್ರಚೋದನೆಯೇ ಇಲ್ಲದೆ ಅದು ಸ್ತನ್ಯಪಾನದಲ್ಲಿ ತೊಡಗುವುದರಿಂದ ಈ ಜ್ಞಾನವನ್ನೂ ಅನುಭವವನ್ನೂ ಪೂರ್ವಜನ್ಮದಿಂದ ಅದು ಪಡೆದಿರಬೇಕೆಂಬುದು ಇವರ ವಾದ.

ಪ್ರಾಚೀನ ಭಾರತದಲ್ಲಿ ಭ್ರೂಣಶಾಸ್ತ್ರವು ಮುಖ್ಯವಾಗಿ ಊಹಾತ್ಮಕವಾಗಿದ್ದಿರಬೇಕು. ಪ್ರಾಚೀನ ಆಯುರ್ವೇದಾಚಾರ್ಯರು ಭ್ರೂಣರಚನೆಯ ಬಗೆಗೆ ಕೊಡುವ ವಿವಿಧ ಅಭಿಪ್ರಾಯಗಳು ಇದನ್ನೇ ಸಮರ್ಥಿಸುತ್ತವೆ. ಗರ್ಭಧಾರಣೆಯ ಕಾಲದಲ್ಲಿ ಅಂಗಪ್ರತ್ಯಂಗಗಳು ಯಾವ ಅನುಕ್ರಮದಲ್ಲಿ ಹುಟ್ಟುತ್ತವೆಂಬುದಕ್ಕೆ ಪ್ರತಿಯೊಬ್ಬ ಆಚಾರ್ಯನೂ ತನ್ನದೇ ವಾದವನ್ನು ಮುಂದಿಡುತ್ತಾನೆ. ಇವುಗಳಲ್ಲಿ ಹಲವು ಕಲ್ಪನೆಯ ಕುದುರೆಯನ್ನೇರಿ ಹಾರಿವೆ. ಇನ್ನುಕೆಲವು ಬಹು ಸ್ಥೂಲವಾದ ಭೌತಿಕ ಕಾರಣಗಳನ್ನು ಅವಲಂಬಿಸಿವೆ. ಹಲವುವೇಳೆ ಪ್ರಾಯೋಗಿಕ ಫಲಿತಾಂಶಗಳನ್ನು ಆಧ್ಯಾತ್ಮಿಕವಾದಕ್ಕೆ ಬಲವಂತದಿಂದ ಹೊಂದಿಸುವ ಪ್ರಯತ್ನ ನಡೆದಿದೆ. ಹೀಗೆ, ಗರ್ಭೋತ್ಪತ್ತಿಯಾಗುವಾಗ, ಶೌನಕನು ತಲೆಯು ಮೊದಲು ಹುಟ್ಟುವುದೆಂದೂ, ಕೃತವೀರ್ಯನು ಹೃದಯವು ಮೊದಲು ಹುಟ್ಟುವುದೆಂದೂ, ಪರಾಶರನೂ ನಾಭಿಯೇ ಎಂದೂ, ಮಾರ್ಕಂಡೇಯನು ಕೈಕಾಲುಗಳೆಂದೂ, ಸುಭೂತಿಗೌತಮನು ಮುಂಡವೇ

29 ಗ: ನಿತ್ಯತಾ ; ಅ: ಸತ್ಯತಾ.

98 ಯಾಜ್ಞವಲ್ಕ್ಯ, ಪು. ಗ್ರಂ., ಅದೇಸ್ಥಾನ, 83.

ಮೊದಲೆಂದೂ ಹೇಳುತ್ತಾರೆ. ಇದು ಸುಶ್ರುತನು ಸಂಗ್ರಹಿಸಿದ 'ಮತಪಯೋನಿಧಿ'![99] ಚರಕನೂ ತನ್ನ ಪೂರ್ವಾಚಾರ್ಯರ ಮತಗಳ ಒಂದು ದೊಡ್ಡ ಪಟ್ಟಿಯನ್ನೇ ಕೊಡುತ್ತಾನೆ. ಅಲ್ಲಿ ಆಯಾ ಮತವನ್ನು ಸಮರ್ಥಿಸಲು ಕೊಟ್ಟಿರುವ ಕಾರಣಗಳನ್ನೂ ಗಮನಿಸಬೇಕು :

ತಮೇವಮುಕ್ತವಂತಮಗ್ನಿವೇಶಂ ಭಗವಾನ್ ಪುನರ್ವಸುರಾತ್ರೇಯ ಉವಾಚ :

ಪೂರ್ವಮುಕ್ತಮೇತದ್‌ಗರ್ಭಾವಕ್ರಾಂತೌ ಯಥಾಽಯಮಭಿನಿರ್ವರ್ತತೇ ಕುಕ್ಷೌ ಯಚ್ಚಾಸ್ಯ ಸಂತಿಷ್ಠತೇಽಂಗಜಾತಮ್ । ವಿಪ್ರತಿವಾದಾಸ್ತ್ವತ್ರ ಬಹುವಿಧಾಃ ಸೂತ್ರಕೃತಾಂ ಋಷೀಣಾಂ ಸಂತಿ ಸರ್ವೇಷಾಂ ; ತಾನಪಿ ನಿಬೋಧೋಚ್ಯಮಾನಾನ್ : ಶಿರಃ ಪೂರ್ವಮಭಿನಿರ್ವರ್ತತೇ ಕುಕ್ಷಾವಿತಿ ಕುಮಾರಶಿರಾ ಭರದ್ವಾಜಃ ಪಶ್ಯತಿ, ಸರ್ವೇಂದ್ರಿಯಾಣಾಂ ತದಧಿಷ್ಠಾನಮಿತಿಕೃತ್ವಾ ; ಹೃದಯಮಿತಿ ಕಾಂಕಾಯನೋ ಬಾಹ್ಲೀಕಭಿಷಕ್, ಚೇತನಾಧಿಷ್ಠಾನತ್ವಾತ್ ; ನಾಭಿರಿತಿ ಭದ್ರಕಾಪ್ಯಃ, ಆಹಾರಾಗಮ ಇತಿ ಕೃತ್ವಾ ; ಪಕ್ವಾಶಯಗುದಮಿತಿ ಭದ್ರಶೌನಕಃ ಮಾರುತಾಧಿಷ್ಠಾನತ್ವಾತ್ ; ಹಸ್ತಪಾದಮಿತಿ ಬಡಿಶಃ, ತತ್ಕಾರಣತ್ವಾತ್ ಪುರುಷಸ್ಯ ; ಇಂದ್ರಿಯಾಣೀತಿ ಜನಕೋ ವೈದೇಹಃ, ತಾನ್ಯಸ್ಯ ಬುದ್ಧ್ಯಧಿಷ್ಠಾನಾನೀತಿಕೃತ್ವಾ ; ಪರೋಕ್ಷತ್ವಾತ್ ಅಚಿಂತ್ಯಮಿತಿ ಮರೀಚಿಃ ಕಶ್ಯಪಃ ; ಸರ್ವಾಂಗಾಭಿನಿರ್ವೃತ್ತಿರ್‍ಯುಗಪದಿತಿ ಧನ್ವಂತರಿಃ ; ತದುಪಪನ್ನಂ, ಸರ್ವಾಂಗಾನಾಂ ತುಲ್ಯಕಾಲಾಭಿನಿರ್ವೃತ್ತತ್ವಾದ್ ಹೃದಯಪ್ರಭೃತೀನಾಮ್ । ಸರ್ವಾಂಗಾನಾಂ ಹ್ಯಸ್ಯ ಹೃದಯಂ ಮೂಲಮಧಿಷ್ಠಾನಂ ಚ ಕೇಷಾಂಚಿದ್ ಭಾವಾನಾಂ ಸರ್ವಾಂಗಾನಾಂ ತುಲ್ಯಕಾಲಾಭಿನಿರ್ವೃತ್ತಿಃ, ಸರ್ವೇ ಭಾವಾ ಹ್ಯನ್ಯೋನ್ಯಪ್ರತಿಬದ್ಧಾಃ ತಸ್ಮಾದ್ಯಥಾಭೂತ ದರ್ಶನಂ ಸಾಧು ‖[100]

ಮರೀಚಿ ಕಶ್ಯಪನು ಕಡೆಯಪಕ್ಷ ಪ್ರಾಮಾಣಿಕನೆಂಬುದು ಸ್ಪಷ್ಟ ; ಅಲ್ಲದೆ ಅವನ ಮಾತಿನಿಂದ ಮಿಕ್ಕೆಲ್ಲರ ಅಭಿಪ್ರಾಯಗಳೂ ವಾದಗಳೂ ಕೇವಲ ಅನುಮಾನಜನ್ಯಗಳೆಂದು ಸಿದ್ಧವಾಗುತ್ತದೆ. ಇದ್ದುದರಲ್ಲಿ ಇವುಗಳಲ್ಲೆಲ್ಲ ಧನ್ವಂತರಿಯ ಅಭಿಪ್ರಾಯವೇ ಸಾಧುವೆಂದು ತೋರುತ್ತದೆ. ಅವನ ಪ್ರಕಾರ ಮಾವಿನಹಣ್ಣು, ಬಿದಿರಿನ ಮೊಳಕೆ ಮೊದಲಾದವುಗಳಂತೆ ಹುಟ್ಟಿನೊಡನೆಯೇ ಭ್ರೂಣಕ್ಕೆ ಅಂಗಪ್ರತ್ಯಂಗಗಳೆಲ್ಲವೂ ಬಹು ಸೂಕ್ಷ್ಮಾವಸ್ಥೆಯಲ್ಲಿ ಇರುತ್ತವೆ. ಅದರ ಬಹು ಸಣ್ಣ ಗಾತ್ರದಿಂದ ಇವುಗಳನ್ನೆಲ್ಲ ಪ್ರತ್ಯೇಕವಾಗಿ ಕಾಣಲು ಸಾಧ್ಯವಿಲ್ಲ. ಕಾಲಕ್ರಮದಲ್ಲಿ ಇವುಗಳು ವಿಕಾಸವಾಗಿ ಪೂರ್ಣ ಸ್ವರೂಪವು ವ್ಯಕ್ತಪಡುವುದು.[101] ಚರಕ, ಸುಶ್ರುತ, ವಾಗ್ಭಟಾದಿಗಳೂ ಶಾರ್ಙ್ಗದೇವನೂ ಧನ್ವಂತರಿಯನ್ನೇ ಅನುಸರಿಸಿದ್ದಾರೆ. ಆಧುನಿಕ ಭ್ರೂಣಶಾಸ್ತ್ರಜ್ಞರ ಸಂಶೋಧನೆಗಳ ರೀತ್ಯಾ ಸುಮಾರು ಆರು ವಾರಗಳ ವಯಸ್ಸಿನ ಭ್ರೂಣದಲ್ಲೇ ಎಲ್ಲ ಅಂಗಪ್ರತ್ಯಂಗಗಳೂ ಉಂಟಾಗಿರುತ್ತವೆ ; ಆದುದರಿಂದ ಶಾರ್ಙ್ಗದೇವನು ಭ್ರೂಣವಿಕಾಸದ ಕಾಲಾನುಕ್ರಮದ ವಿಷಯದಲ್ಲಿ ಹೇಳಿರುವ ಮಾತುಗಳನ್ನು ಸ್ಥೂಲವಾಗಿಯೇ ಅರ್ಥ ಮಾಡಿಕೊಳ್ಳಬೇಕು. ಶಸ್ತ್ರಚಿಕಿತ್ಸಾಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯವನ್ನೂ ಪ್ರಾವೀಣ್ಯವನ್ನೂ ಗಳಿಸಿದ್ದ ಪ್ರಾಚೀನ ಭಾರತೀಯ ಆಯುರ್ವೇದಾಚಾರ್ಯರು ಭ್ರೂಣಶಾಸ್ತ್ರದಂತಹ ಅತ್ಯಂತ ಪ್ರಾಯೋಗಿಕ ವಿಷಯದಲ್ಲಿ ಪ್ರಯೋಗಜನ್ಯವಲ್ಲದ ಕುರುಡು ಕಲ್ಪನೆಗಳನ್ನೇ ಹೇಳಿಹೋದುದು ಆಶ್ಚರ್ಯಕರವಾಗಿದೆ.

ಮಾನವ ಭ್ರೂಣದ ವಿಕಾಸವನ್ನೂ ಅದರ ಬೆಳವಣಿಗೆಯ ವೇಗವನ್ನೂ ಕುರಿತು ನಡೆದಿರುವ ಇತ್ತೀಚಿನ ಸಂಶೋಧನೆಗಳನ್ನು ಜಾನ್ ಫೀಫರನು ಬಹು ಹೃದಯಂಗಮವಾಗಿ ಬಣ್ಣಿಸಿದ್ದಾನೆ. ಈ ವರ್ಣನೆಯೊಡನೆ ಈ ವಿಷಯದ ಉಪಸಂಹಾರಮಾಡಬಹುದು :

99 ಸುಶ್ರುತ, ಉ. ಗ್ರಂ., III, 31-32, ಪು. 34-35.

100 ಚರಕ, ಉ. ಗ್ರಂ., IV, 6, 21, ಪು. 334.

101 ಸುಶ್ರುತ, ಉ. ಗ್ರಂ., III, 32, ಪು. 35.

2. ಪಿಂಡೋತ್ಪತ್ತಿ ಪ್ರಕರಣ

An unfertilized egg leads a quiet and relatively uneventful existence. It uses up extremely small quantities of oxygen, and shows about as much activity as a vegetable. But it is very much alive. A sphere only a few millionths of a cubic inch in volume, it contains most of the raw materials needed to start the production of the human infant. The egg is a pinpoint of biological possibilities, a capsule packed with raw material and chemical regulators that can mold the raw materials into tissues and organs. The product has been designed; the equipment and power supply are ready. All that is needed is something to set the whole system going.

That something is the tadpole shaped sperm that succeeds in penetrating the tough outer coating of the egg. It releases the most spectacular burst of living energy known, a chain reaction of splitting cells and rapid cycles of chemical reaction. In fact, the reactions unleashed by the arrival of the sperm takes place at such a breakneck pace, biologically speaking, that nature is continually applying the brakes to prevent things from getting out of hand . . . . . .

Your brain began taking shape when you were minus eight and a half months old and about a twentyfifth of an inch tall. The earliest trace of the nervous system is a raised area or plate on the surface of the waterfilled ball, the human embryo. The edges of the plate grow higher and a portion along the centreline sinks, forming a narrow groove. As the groove becomes deeper and deeper, the petal–like edges curl upward and around toward one another. Soon they touch and fuse into a closed tube.

The nervous system is rushing through its own private evolution which in broad outline duplicates the great sweep of evolution on a large scale. Each second of embryonic life represents developments that took centuries during past geological ages. By the time it has reached the tube stage the human nervous system roughly resembles that of the ancient marine worms, the humble ancestors of all creatures with spines. The brain of a five-week-old embryo has already advanced two hundred million years or more. The so called neural tube is bent in the form of a question mark, and a " blister " at the end of the hook is destined to become the cerebral hemispheres. If our brains stopped growing at this stage, we would rank with the primitive fish on the I. Q. scale.

Within another week or so the embryo has leaped ahead another hundred million years. In human growth as in evolution, the old

brain is already fairly well developed when the new brain or cortex makes its debut. The cortex originates as a thin film of gray tissue which spreads over the uppermost surface of the growing brain. From the third month on it becomes thicker and covers a larger and larger area. Before birth the brain in general, and the cortex in particular, grows faster than the other organs of the body as far as sheer bulk is concerned.[102]

ಭಾವಗಳು

**ಭಾವಾಃ ಸ್ಯುಃ ಷಡ್ವಿಧಾಸ್ತಸ್ಯ ಮಾತೃಜಾಃ ಪಿತೃಜಾಸ್ತಥಾ ।**
**ರಸಜಾ ಆತ್ಮಜಾಃ ಸತ್ತ್ವಸಂಭವಾಃ ಸಾತ್ಮ್ಯಜಾಸ್ತಥಾ** [30] ॥ 44 ॥ 93

ತಾಯಿಂದ ಹುಟ್ಟಿದವುಗಳು, ತಂದೆಯಿಂದ ಹುಟ್ಟಿದವುಗಳು, ರಸದಿಂದ (ಓಜಸ್ಸಿನಿಂದ) ಹುಟ್ಟಿದವುಗಳು, ಆತ್ಮದಿಂದ ಹುಟ್ಟಿದವುಗಳು, ಸತ್ತ್ವದಿಂದ ಹುಟ್ಟಿದವುಗಳು, ಹಾಗೆಯೇ ಅಭ್ಯಾಸದಿಂದ (ಚಾಳಿಯಿಂದ) ಹುಟ್ಟಿದ್ದು ಎಂಬುದಾಗಿ ಅದರ ಭಾವಗಳು ಆರು ವಿಧವಾಗಿವೆ.

ರಸ ಎನ್ನುವುದಕ್ಕೆ ಅನ್ನರಸವೆಂದೂ ಸತ್ತ್ವವೆಂದರೆ ಅಂತಃಕರಣವಿಶೇಷವೆಂದೂ ಸಾತ್ಮ್ಯವೆಂದರೆ ಚಿರಪರಿಚಯದಿಂದ ಉಂಟಾಗುವ ಅನುಭವವಿಶೇಷವೆಂದೂ ಸಿಂಹಭೂಪಾಲನ ವ್ಯಾಖ್ಯಾನವಿದೆ.[103] ಸಾತ್ಮ್ಯವೆಂಬುದಕ್ಕೆ ಕುನ್ಹನ್‌ರಾಜಾ ಪೂರ್ವಾನುಭವದ ಮುದ್ರೆಗಳು ಎಂಬ ಅಸ್ಪಷ್ಟಾರ್ಥವನ್ನು ಹೇಳುತ್ತಾನೆ.[104]

ಈ ಆರು ಭಾವಗಳನ್ನು ಶಾರ್ಙ್ಗದೇವನೂ ಸುಶ್ರುತ ವಾಗ್ಭಟರೂ ಹೇಳುವುದು ಆತ್ರೇಯನನ್ನು ಅವಲಂಬಿಸಿ; ಭರದ್ವಾಜನು ಭಾವಗಳೇ ಇಲ್ಲವೆಂದು ಹೇಳುತ್ತಾನೆ. ಚರಕನು,

ಏಷಾಂ ಭಾವಾನಾಂ—ಮಾತೃಜಶ್ಚಾಯಂ ಗರ್ಭಃ ಪಿತೃಜಶ್ಚಾತ್ಮಜಶ್ಚ ಸಾತ್ಮ್ಯಜಶ್ಚ ರಸಜಶ್ಚ, ಅಸ್ತಿ ಚ ಖಲು ಸತ್ತ್ವಮೌಪಪಾದಿಕಮಿತಿ ಹೋವಾಚ ಭಗವಾನಾತ್ರೇಯಃ[105] ಎಂದೂ,

ಸುಶ್ರುತನು ' ತತ್ರಗರ್ಭಸ್ಯ ಪಿತೃಜಮಾತೃಜರಸಜಾತ್ಮಜಸತ್ತ್ವಜಸಾತ್ಮ್ಯಜಾನಿ ಶರೀರಲಕ್ಷಣಾನಿ ವ್ಯಾಖ್ಯಾಸ್ಯಾಮಃ '[106] ಎಂದೂ ವಾಗ್ಭಟನೂ[107] ಇವುಗಳ ವರ್ಣನೆಯನ್ನು ಕೊಡುತ್ತಾರೆ. ಜಗದೇಕಮಲ್ಲನೂ ಭಾವಗಳನ್ನು ಹೇಳುತ್ತಾನೆ. ಆದರೆ ಇವು ಮಾತುರಂಶ, ಪಿತುರಂಶ ಮತ್ತು ಪೃಥ್ವೀ, ಆಪ, ತೇಜಸ್ಸು, ವಾಯು, ಆಕಾಶ ಎಂಬ ಪಂಚಭೂತಗಳ ಅಂಶಗಳು :

---

30 ಗ : ಸಾತ್ಮ್ಯಜಸ್ತಥಾ ; ಆದರೆ ಅ : ಸಾತ್ಮ್ಯಗೋಚರಾಃ.

---

102 John Pfeiffer, The Human Brain, Ch. 3, pp. 37, 38.

103 ಸಿಂಹಭೂಪಾಲ, ಉ. ಗ್ರಂ., ಪು. 30.

104 ಕುನ್ಹನ್‌ರಾಜಾ, ಉ. ಗ್ರಂ., ಪು. 20.

105 ಚರಕ, ಉ. ಗ್ರಂ., IV, 3, 3, ಪು. 308.

106 ಸುಶ್ರುತ, ಉ. ಗ್ರಂ., III, 33, ಪು. 36.

107 ವಾಗ್ಭಟ, ಉ. ಗ್ರಂ., III, 4-6, ಪು. 37–38.

ಅಸ್ಥಿನಿಮಜ್ಜಶುಕ್ಲಂ ಚ ಪಿತುರಂಶಾಸ್ತ್ರಯೋ ಮತಾಃ ।
ರಕ್ತಂ ರೋಮಾಣಪಲಲಂ ಮಾತುರಂಶಾಸ್ತ್ರಯೋ ಮತಾಃ ।
ರೋಮತ್ವಕ್‌ಪಲಲಾಸ್ಥಿನಿ ಪಾರ್ಥಿವೋಂಶಃ ಪ್ರಕೀರ್ತಿತಃ ।
ಆಪೋಽಂಶಃ ಶುಕ್ಲವಿಣ್ಮೂತ್ರ ನಿದ್ರಾಲಸ್ಯಾ, ಕ್ಷುಧಾಕಾಂತಿರಂಶಸ್ತು ತೈಜಸಃ ।
ಆಕುಂಚನಪ್ರಸರಣಧಾತುರಾವೇಷ್ಟನಂ ತಥಾ ।
ನಿರೋಧಶ್ಚೇತಿ ವಿಜ್ಞೇಯೋ ವಾಯುರಂಶೋ ಮನೀಷಿಭಿಃ ।
ದ್ವೇಷೋ ಲಜ್ಜಾ ಭಯಂ ಮೋಹಾ ರೋಪಶ್ಚಾಂಶಸ್ತು ನಾಭಸಃ । [59]

ಶರೀರಲಕ್ಷಣಗಳ ಈ ವರ್ಗೀಕರಣವು ವೈಜ್ಞಾನಿಕ ತಳಹದಿಯನ್ನು ಪಡೆದಿರುವಂತೆ ಕಾಣುತ್ತದೆ.

ತಾಯಿಯಿಂದ ಉಂಟಾಗುವ ಭಾವಗಳು

**ಮೃದವಃ ಶೋಣಿತಂ ಮೇದೋ ಮಜ್ಜಾ ಪ್ಲೀಹಾ ಯಕೃದ್ ಗುದಮ್ ।**
**ಹೃನ್ನಾಭೀತ್ಯೇವಮಾದ್ಯಾಸ್ತು ಭಾವಾ ಮಾತೃಭವಾ ಮತಾಃ ॥ 45 ॥** 94

ಮೃದುವಾದ ಭಾಗಗಳು, ರಕ್ತ, ಕೊಬ್ಬು, ಎಲುಬಿನ ನೆಣೆ (ತಿರುಳು), ಪಿತ್ತಜನಕಾಂಗ, ಗುಲ್ಮ (ತೊರಳೆ), ಆಸನದ್ವಾರ, ಹೃದಯ, ಹೊಕ್ಕಳು ಇವುಗಳೇ ಮೊದಲಾದ ಭಾವಗಳು ತಾಯಿಯಿಂದ ಹುಟ್ಟಿದವುಗಳೆಂದು ಸಮ್ಮತಿಸಿದೆ.

ಚರಕನು ಇದೇ ಅಭಿಪ್ರಾಯಪಡುತ್ತಾ, 'ತ್ವಕ್ ಚ ಲೋಹಿತಂ ಚ ಮಾಂಸಂ ಚ ಮೇದಶ್ಚ ನಾಭಿಶ್ಚ ಹೃದಯಂ ಚ ಕ್ಲೋಮ ಚ ಯಕೃಚ್ಚ ಪ್ಲೀಹಾ ಚ ವೃಕ್ಕೌ ಚ ಬಸ್ತಿಶ್ಚ ಪುರೀಷಾಧಾನಂ ಚಾಮಾಶಯಶ್ಚ ಪಕ್ವಾಶಯಶ್ಚೋತ್ತರಗುದಂ ಚಾಧರಗುದಂ ಚ ಕ್ಷುದ್ರಾಂತ್ರಂ ಚ ಸ್ಥೂಲಾಂತ್ರಂ ಚ ವಪಾ ಚ ವಪಾವಹನಂ ಚೇತಿ' ಎಂದು ಹೆಚ್ಚಿನ ವಿವರಗಳನ್ನು ಕೊಡುತ್ತಾನೆ [108].

ಸುಶ್ರುತನು 'ಮಾಂಸಶೋಣಿತಮೇದೋಮಜ್ಜಹೃನ್ನಾಭಿಯಕೃತ್‌ಪ್ಲೀಹಾಂತ್ರಗುದಪ್ರಭೃತೀನಿ ಮೃದೂನಿ ಮಾತೃಜಾನಿ' ಎಂದೂ ವಾಗ್ಭಟನು 'ಮೃದ್ವತ್ರ ಮಾತೃಜಂ ರಕ್ತಮಾಂಸಮಜ್ಜಗುದಾದಿಕಂ' ಎಂದೂ [109] ಹೇಳುತ್ತಾರೆ.

ತಂದೆಯಿಂದ ಉಂಟಾಗುವ ಭಾವಗಳು

**ಶ್ಮಶ್ರುಲೋಮಕಚಾಃ ಸ್ನಾಯುಸಿರಾ[31]ಧಮನಯೋ ನಖಾಃ ।**
**ದಶನಾಃ ಶುಕ್ಲಮಿತ್ಯಾದ್ಯಾಃ ಸ್ಥಿರಾಃ ಪಿತೃಸಮುದ್ಭವಾಃ ॥ 46 ॥** 95

ಗಡ್ಡ-ಮೀಸೆ, ಮೈಕೂದಲು, ತಲೆಗೂದಲು, ಸ್ನಾಯು, ಸಿರೆ, ಧಮನಿಗಳು, ಉಗುರುಗಳು, ಹಲ್ಲುಗಳು, ವೀರ್ಯವೇ ಮೊದಲಾದ ಗಟ್ಟಿಯಾದ ಭಾವಗಳು ತಂದೆಯಿಂದ ಹುಟ್ಟಿದವುಗಳು.

---

31 ಅ ಮತ್ತು ಕ ಗಳಲ್ಲಿ ಸಿರಾ ಶಬ್ದವನ್ನು ಶಿರಾ ಎಂದೇ ವ್ಯವಹರಿಸಿದೆ.

---

108 ಚರಕ, ಪು. ಗ್ರಂ., IV, 3, 6, ಪು. 310.

109 ವಾಗ್ಭಟ, ಪು. ಗ್ರಂ., III, 4, ಪು. 37.

2. ಪಿಂಡೋತ್ಪತ್ತಿ ಪ್ರಕರಣ

ದಪ್ಪ ರಕ್ತನಾಳಗಳಿಗೆ ಸಿರೆಗಳೆಂದೂ ಸೂಕ್ಷ್ಮವಾದವುಗಳಿಗೆ ಸ್ನಾಯುಗಳೆಂದೂ ಹರಳುಗಿಡದ ಕಾಂಡದಂತೆ ಪೊಳ್ಳಾಗಿರುವುದು ಧಮನಿಯೆಂದೂ ಕಲ್ಲಿನಾಥನು ವ್ಯಾಖ್ಯಾನಮಾಡುತ್ತಾನೆ.[110] ಸಿರಾ, ಧಮನಿ ಮತ್ತು ಸ್ರೋತಗಳನ್ನು ಮುಂದೆ ಚರ್ಚಿಸಲಾಗುವುದು.

ಕೇಶಶ್ಮಶ್ರುನಖಲೋಮದಂತಾಸ್ಥಿಸಿರಾಸ್ನಾಯುಧಮನ್ಯಃ ಶುಕ್ರಂ ಚೇತಿ ಪಿತೃಜಾನಿ ಎಂದು ಚರಕನೂ[111] ಗರ್ಭಸ್ಯ, ಕೇಶಶ್ಮಶ್ರುಲೋಮಾಸ್ಥಿನಖದಂತಸಿರಾಸ್ನಾಯುಧಮನೀರೇತಃ ಪ್ರಭೃತೀನಿ ಎಂದು ಸುಶ್ರುತನೂ[106] ರತ್ನಾಕರಕಾರನೊಡನೆ ಸಂಪೂರ್ಣವಾಗಿ ಸಮ್ಮತಿಸುತ್ತಾರೆ. ವಾಗ್ಭಟನು ಪೈತೃಕಂ ತು ಸ್ಥಿರಂ ಶುಕ್ರಂ ಧಮನ್ಯಸ್ಥಿಕಚಾದಿಕಂ ಎಂದು ಮಾತ್ರ ಹೇಳುತ್ತಾನೆ.[112]

ರಸದಿಂದ ಉಂಟಾಗುವ ಭಾವಗಳು

**ಶರೀರೋಪಚಯೋ ವರ್ಣೋ ವೃದ್ಧಿಃ ಸುಪ್ತಿ[32]ರ್ಬಲಂ ಸ್ಥಿತಿಃ[33] |**
**ಅಲೋಲುಪತ್ವಮುತ್ಸಾಹ ಇತ್ಯಾದೀನ್ ರಸಜಾನ್ ವಿದುಃ || 47 ||** 96

ದೇಹದ ಬೆಳವಣಿಗೆ, ಬಣ್ಣ, [ಪ್ರಮಾಣದಲ್ಲಿ] ಹೆಚ್ಚಾಗುವುದು, ನಿದ್ರೆ, ಶಕ್ತಿ, ಮುಂದುವರಿಯುವಿಕೆ, ವಿಷಯಾಸಕ್ತಿಯಿಲ್ಲದಿರುವುದು, ಹುರುಪು, ಇವೇ ಮೊದಲಾದವುಗಳನ್ನು ರಸದಿಂದ ಹುಟ್ಟಿದವುಗಳೆಂದು ತಿಳಿಯುತ್ತಾರೆ.

ಚರಕನೂ ಹೆಚ್ಚು ಕಡಿಮೆ ಹೀಗೆಯೇ ಹೇಳುತ್ತಾನೆ :

ಶರೀರಸ್ಯಾಭಿನಿರ್ವೃತ್ತಿರಭಿವೃದ್ಧಿಃ ಪ್ರಾಣಾನುಬಂಧಸ್ತೃಪ್ತಿಃ ಪುಷ್ಟಿರುತ್ಸಾಹಶ್ಚೇತಿ ರಸಜಾನಿ |[113]

ಸುಶ್ರುತನು ಇವುಗಳಲ್ಲಿ ಕೆಲವನ್ನು ಹೇಳದೆ ಹಾನಿಯನ್ನೂ ಈ ಪಟ್ಟಿಗೆ ಸೇರಿಸುತ್ತಾನೆ :

ಶರೀರೋಪಚಯೋ ಬಲಂ ವರ್ಣಃ ಸ್ಥಿತಿರ್ಹಾನಿಶ್ಚ ರಸಜಾನಿ |[106]

ವಾಗ್ಭಟನು 'ರಸಜಂ ವಪುಷೋ ಜನ್ಮವೃತ್ತಿರ್ವೃದ್ಧಿರಲೋಲುತಾ' ಎಂದು ಮಾತ್ರ ಹೇಳುತ್ತಾನೆ.[114]

ಆತ್ಮದಿಂದ ಹುಟ್ಟುವ ಭಾವಗಳು

**ಇಚ್ಛಾ ದ್ವೇಷಃ ಸುಖಂ ದುಃಖಂ ಧರ್ಮಾಧರ್ಮೌ ಚ ಭಾವನಾ |**
**ಪ್ರಯತ್ನೋ ಜ್ಞಾನಮಾಯುಶ್ಚೇಂದ್ರಿಯಾಣೀತ್ಯಾತ್ಮಜಾ ಮತಾಃ ||48||** 97

ಬೇಕು ಎನ್ನುವುದು, ಬೇಡ ಎನ್ನುವುದು, ಸಂತೋಷ, ನೋವು, ಧರ್ಮ, ಅಧರ್ಮ ಮತ್ತು

32 ಆ, ಗ : ತೃಪ್ತಿ.
33 ಅ : ಧೃತಿಃ.

110 ಕಲ್ಲಿನಾಥ, ಉ. ಗ್ರಂ., ಪು. 38.
111 ಚರಕ, ಉ. ಗ್ರಂ., IV, 3, 7, ಪು. 310.
112 ವಾಗ್ಭಟ, ಉ. ಗ್ರಂ., III, 5, ಪು. 37.
113 ಚರಕ, ಉ. ಗ್ರಂ., IV, 3, 12, ಪು. 312.
114 ವಾಗ್ಭಟ, ಪು. ಗ್ರಂ., III, 6, ಪು. 38.

2. ಪಿಂಡೋತ್ಪತ್ತಿ ಪ್ರಕರಣ

ಕಲ್ಪಿಸಿಕೊಳ್ಳುವುದು <ಭಾವನಾ>, ಕಾರ್ಯಶೀಲತೆ, ತಿಳುವಳಿಕೆ, ಬದುಕಿನ ಕಾಲಪ್ರಮಾಣ ಮತ್ತು ಇಂದ್ರಿಯಗಳು ಎಂಬುವುಗಳು ಆತ್ಮದಿಂದ ಹುಟ್ಟಿದವುಗಳೆಂದು ಸಮ್ಮತಿಸಲಾಗಿದೆ.

ಚರಕನು ಜ್ಞಾನವೆನ್ನುವುದಕ್ಕೆ ಆತ್ಮಜ್ಞಾನವೆಂದೂ, ಆಯುಃ ಎನ್ನುವುದಕ್ಕೆ ಆಯಾ ಯೋನಿಯಲ್ಲಿ ಹುಟ್ಟಿದ ದೇಹಕ್ಕೆ ತಕ್ಕ ಆಯಸ್ಸು ಎಂದೂ ಹೇಳಿ, ಮನಸ್ಸು, ಪ್ರಾಣ-ಅಪಾನಗಳೆಂಬ ವಾಯುಗಳು, ಪ್ರೇರಣೆ, ಧಾರಣೆ, ಆಕಾರ, ಸ್ವರ, ಬಣ್ಣ, ಚೈತನ್ಯ, ಧೈರ್ಯ, ಬುದ್ಧಿ, ನೆನಪು, ತಾನು ಎಂಬ ಪ್ರಜ್ಞೆ ಇವುಗಳು ಆತ್ಮದಿಂದ ಉಂಟಾಗತಕ್ಕವು ಎಂದು ಹೇಳುತ್ತಾನೆ[115]. ಧರ್ಮ, ಅಧರ್ಮಗಳನ್ನು ಅವನು ಹೇಳಿಲ್ಲ. ಸುಶ್ರುತನು ಇಂದ್ರಿಯಗಳು, ಜ್ಞಾನ, ವಿಜ್ಞಾನ, ಆಯಸ್ಸು, ಸುಖದುಃಖಗಳು, ಇಷ್ಟನ್ನು ಮಾತ್ರ ಹೇಳುತ್ತಾನೆ[106]. ವಿವಿಧ ಯೋನಿಗಳಲ್ಲಿ ಹುಟ್ಟುವುದು, ಅರಿಷಡ್ವರ್ಗಗಳು, ಧರ್ಮಾಧರ್ಮಶೀಲತೆಗಳು, ಸ್ಮೃತಿ, ಬುದ್ಧಿ, ಇಚ್ಛೆ, ದ್ವೇಷ, ಪ್ರಯತ್ನ, ಅಹಂಕಾರ, ಸುಖ, ದುಃಖ, ಆಯಸ್ಸು, ಸ್ವರ ಮುಂತಾದವುಗಳನ್ನು ಆತ್ಮದಿಂದ ಹುಟ್ಟಿದವುಗಳೆಂದು ವಾಗ್ಭಟನು ಹೇಳುತ್ತಾನೆ[116].

ಯಾಜ್ಞವಲ್ಕ್ಯನು ಗರ್ಭೋಪನಿಷತ್ತನ್ನು ಅನುಸರಿಸಿ ಪಿತೃಜ ಇತ್ಯಾದಿಯಾಗಿ ಹೇಳಿದ ಆರು ಭಾವಗಳೂ ಭ್ರೂಣದ ಮೂರನೆಯ ತಿಂಗಳಿನಲ್ಲೇ ಉಂಟಾಗುತ್ತವೆ, ಆದರೆ ಬೇರೆ ರೀತಿಯಲ್ಲಿ, ಬೇರೆ ಆಕರಗಳಿಂದ, ಎಂದು ಹೇಳುತ್ತಾನೆ :

ಆಕಾಶಾಲ್ಲಾಘವಂ ಸೌಕ್ಷ್ಮ್ಯಂ ಶಬ್ದಂ ಶ್ರೋತ್ರಂ ಬಲಾದಿಕಂ ।
ವಾಯೋಶ್ಚ ಸ್ಪರ್ಶನಂ ಚೇಷ್ಟಾಂ ವ್ಯೂಹನಂ ರೌಕ್ಷ್ಯಮೇವ ಚ ।
ಪಿತ್ತಾತ್ತು ದರ್ಶನಂ ಪಕ್ತಿಮೌಷ್ಣ್ಯಂ ರೂಪಂ ಪ್ರಕಾಶಿತಾಮ್ ।
ರಸಾತ್ತು ರಸನಂ ಶೈತ್ಯಂ ಸ್ನೇಹಂ ಕ್ಲೇದಂ ಸಮಾರ್ದವಮ್ ।
ಭೂಮೇರ್ಗಂಧಂ ತಥಾ ಘ್ರಾಣಂ ಗೌರವಂ ಮೂರ್ತಿಮೇವ ಚ ।
ಆತ್ಮಾ ಗೃಹ್ಣಾತ್ಯಜಃ ಸರ್ವಂ ತೃತೀಯೇ ಸ್ಪಂದತೇ ತತಃ ॥[117]

**ಜ್ಞಾನೇಂದ್ರಿಯಾಣಿ ಶ್ರವಣಂ ಸ್ಪರ್ಶನಂ ದರ್ಶನಂ ತಥಾ ।**
**ರಸನಂ ಘ್ರಾಣಮಿತ್ಯಾಹುಃ ಪಂಚ ತೇಷಾಂ ತು ಗೋಚರಾಃ ॥ 49 ॥** 98

ಕೇಳುವಿಕೆ, ಮುಟ್ಟುವಿಕೆ, ನೋಡುವುದು, ಹಾಗೆಯೇ ರುಚಿನೋಡುವುದು, ವಾಸನೆ ನೋಡುವುದು, ಈ ಐದೂ ಜ್ಞಾನೇಂದ್ರಿಯಗಳು ಎಂದು ಹೇಳುತ್ತಾರೆ. ಇವುಗಳಿಂದ ಪ್ರಕಟವಾಗುವ ವಿಷಯಗಳು—

**ಶಬ್ದಃ ಸ್ಪರ್ಶಸ್ತಥಾ ರೂಪಂ ರಸೋ ಗಂಧ ಇತಿ ಕ್ರಮಾತ್ ।**
**ವಾಕ್ಕರಾಂಘ್ರಿಗುದೋಪಸ್ಥಾನಾಹುಃ ಕರ್ಮೇಂದ್ರಿಯಾಣಿ ತು ॥ 50 ॥** 99

—ಕ್ರಮವಾಗಿ ಶಬ್ದ, ಸ್ಪರ್ಶ, ಹಾಗೆಯೇ ರೂಪ, ರಸ ಮತ್ತು ಗಂಧಗಳು. ಕರ್ಮೇಂದ್ರಿಯಗಳಾದರೋ ಮಾತು, ಕೈ, ಕಾಲು, ಆಸನದ್ವಾರ ಮತ್ತು ಜನಾಂಗಗಳು ಎನ್ನುತ್ತಾರೆ.

---

115 ಚರಕ, ಉ. ಗ್ರಂ., IV, 3, 10, ಪು. 312.

116 ವಾಗ್ಭಟ, ಉ. ಗ್ರಂ., III, 5 ರಿಂದ ಮುಂದಕ್ಕೆ ; ಪು. 37-38.

117 ಯಾಜ್ಞವಲ್ಕ್ಯ, ಉ. ಗ್ರಂ., ಅದೇಸ್ಥಾನ, 76-78.

**2. ಪಿಂಡೋತ್ಪತ್ತಿ ಪ್ರಕರಣ**

**ವಚನಾದಾನಗಮನವಿಸರ್ಗರತಯಃ ಕ್ರಮಾತ್ ।**
**ಕ್ರಿಯಾಸ್ತೇಷಾಂ ಮನೋಬುದ್ಧಿರಿತ್ಯಂತಃಕರಣದ್ವಯಮ್ ॥ 51 ॥** 100

ಮಾತು, ಹಿಡಿಯುವಿಕೆ, ಚಲಿಸುವುದು, [ಜಲಮಲಗಳನ್ನು] ಹೊರಕ್ಕೆ ಪ್ರವಿಸುವುದು, ಸಂಭೋಗ (ಇವುಗಳು ಕ್ರಮವಾಗಿ) ಅವುಗಳ ಕ್ರಿಯೆಗಳು. ಮನಸ್ಸು ಮತ್ತು ಬುದ್ಧಿಗಳೆರಡೂ ಅಂತಃಕರಣಗಳು.

ಜಗದೇಕಮಲ್ಲನೂ ಇಂದ್ರಿಯಗಳನ್ನು ಹೀಗೆಯೇ ಎಣಿಸುತ್ತಾನೆ :

ಜಿಹ್ವಾತ್ವಕ್ಕರ್ಣನಾಸಾಕ್ಷಿಸ್ಯಾತ್ ಜ್ಞಾನೇಂದ್ರಿಯಪಂಚಕಮ್ ।
ಉಪಸ್ಥಗುದವಾಕ್ಪಾಣಿಕರಾಃ ಕರ್ಮೇಂದ್ರಿಯಂ ಮತಮ್ (?-ಯ ಪಂಚಕಮ್ ?) । [59]

ಯಜುರ್ವೇದದ ಶಾರೀರಕೋಪನಿಷತ್ತು ಇವುಗಳ ಸ್ಥಾನಗಳನ್ನು ಹೀಗೆ ಹೇಳುತ್ತದೆ :

ಮನಃಸ್ಥಾನಂ ಗಳಾಂತಾಂ ಬುದ್ಧೇರ್ವದನಂ ಅಹಂಕಾರಸ್ಯ ಹೃದಯಂ ಚಿತ್ತಸ್ಯ ನಾಭಿರಿತಿ ॥ [118]

**ಸುಖಂ ದುಃಖಂ ಚ ವಿಷಯೌ ವಿಜ್ಞೇಯೌ ಮನಸಃ ಕ್ರಿಯಾ ।**
**ಸ್ಮೃತಿಭ್ರಾಂತಿ[34]ವಿಕಲ್ಪಾದ್ಯಾ ಧಿಯೋಽಧ್ಯವಸಿತಿ[35]ರ್ಮತಾ ॥ 52 ॥** 101

ಸುಖ, ದುಃಖ ಮತ್ತು ವಿಷಯಗಳೆರಡು, ಇವು ಮನಸ್ಸಿನ ಕ್ರಿಯೆಗಳೆಂದು ಹೇಳಲ್ಪಡುತ್ತವೆ. ನೆನಪು, ಭ್ರಾಂತಿ (ತಪ್ಪು ತಿಳಿಯುವುದು), ಸಂದೇಹ ಮೊದಲಾದವುಗಳು ಬುದ್ಧಿಗೋಚರಗಳೆಂದು ಸಮ್ಮತಿಸಿದೆ.

ತ್ರಿಗುಣ

**ಬ್ರಹ್ಮಯೋನೀನೀಂದ್ರಿಯಾಣಿ ಭೌತಿಕಾನ್ಯಪರೇ ಜಗುಃ ।**
**ಸತ್ತ್ವಾಖ್ಯಮಂತಃಕರಣಂ ಗುಣಭೇಧಾತ್ ತ್ರಿಧಾ ಮತಮ್ ॥ 53 ॥** 102

ಇತರರು ಭೌತಿಕವಾದ ಇಂದ್ರಿಯಗಳನ್ನು ಬ್ರಹ್ಮಯೋನಿಗಳೆಂದು ಹೇಳುತ್ತಾರೆ. ಸತ್ತ್ವವೆಂಬ ಅಂತಃಕರಣವು [ತನ್ನ] ಗುಣದಲ್ಲಿನ ಭೇದದಿಂದ ಮೂರುಬಗೆಯೆಂದು ಅಭಿಪ್ರಾಯಪಡಲಾಗಿದೆ.

ನಲವತ್ತೆಂಟನೆಯ ಶ್ಲೋಕದಿಂದ ಜೀವನು ತನ್ನ ವ್ಯಾಪಾರಗಳನ್ನು ನಡೆಸುವ ವಿಧಾನವನ್ನು ಹೇಳಿದೆ. ಈ ತಾತ್ತ್ವಿಕ ವಿಶ್ಲೇಷಣೆಗೆ ಪಂಚೀಕರಣವೆಂದು ಹೆಸರು. ಇದು ಇಂದ್ರಿಯಗಳಿಗೂ ಜ್ಞಾನಕ್ಕೂ ಇರುವ ಸಂಬಂಧವನ್ನು ಹೇಳುತ್ತದೆ. ಈ ಕ್ರಮವು ವೇದಾಂತಿಗಳು ಹೇಳಿದುದು. ಇವರನ್ನೇ ಇಲ್ಲಿ ಅಪರೇ ಎಂದು ಕರೆದಿದೆ. ಮನಸ್ಸು ಮತ್ತು ಬುದ್ಧಿಗಳನ್ನು ವಾಚಸ್ಪತಿಮಿಶ್ರನು ತತ್ತ್ವಕೌಮುದಿಯಲ್ಲಿ ಹೀಗೆ ವಿವರಿಸುತ್ತಾನೆ :

ಬುದ್ಧಿಮನಸೋಶ್ಚ ಕರಣಯೋರಹಮಿತಿ ಪ್ರಖ್ಯಾನಪ್ರತಿಭಾಸಾಲಂಬನತ್ವಂ ಯೋಗಃ । [119]

ಜೀವನ ಅವಸ್ಥೆಯಲ್ಲಿರುವ ಬ್ರಹ್ಮಕ್ಕೂ ಪ್ರಾಪಂಚಿಕ ಭೋಗಗಳಿಗೂ ಸಂಬಂಧವನ್ನುಂಟುಮಾಡುವುದು ಇಂದ್ರಿಯಗಳಷ್ಟೆ. ಬುದ್ಧಿ ಮತ್ತು ಮನಸ್ಸುಗಳೆಂಬ ಇಂದ್ರಿಯಗಳಿಂದ ಪ್ರಖ್ಯಾನ (ಪರರಿಗೆ ಗೋಚರವಾಗುವುದು),

34 ಆ : ಭೀತಿ. 35 ಅ, ಕ : ಧಿಯೋ ವ್ಯವಸಿತಿ.

118 ಶಾರೀರಕೋಪನಿಷತ್ತು, ಅಷ್ಟೋತ್ತರಶತ ಉಪನಿಷತ್, ಪು. 549.

119 ವಾಚಸ್ಪತಿಮಿಶ್ರ, ತತ್ತ್ವಕೌಮುದಿ, ಸಿಂಹಭೂಪಾಲನಿಂದ ಉದ್ಧೃತಿ, ಉ. ಗ್ರಂ., ಪು. 41.

ಪ್ರತಿಭಾಸ, ಆಲಂಬನಗಳ ಮೂಲಕ ಅಹಂ ಪ್ರಜ್ಞೆಯುಂಟಾದರೂ, ಕೇವಲ ಇದರಿಂದಲೇ ಜೀವದ ಕರ್ಮಫಲಗಳಾದ ವಿಷಯ, ವಾಸನೆ ಮುಂತಾದವುಗಳ ಭೋಗವು ಆಗಲಾರದೆಂಬುದು ವಿದಿತವೇ ಆಗಿದೆ. ಭೌತಿಕ ಪ್ರಪಂಚದಲ್ಲಿರುವ ವಿಷಯಗಳಿಗೂ ಅಹಂಪ್ರಜ್ಞೆಗೂ ಸಂಬಂಧವನ್ನು ಕಲ್ಪಿಸುವ ಸೇತುವೆಗಳೇ ಈ ಐದು ಬ್ರಹ್ಮಯೋನಿಗಳು. ಇವು ತುಂಬಾ ಅನ್ವರ್ಥನಾಮಕಗಳು. ಯೋನಿಯೆಂದರೆ ಉತ್ಪತ್ತಿಸ್ಥಾನವೆಂದು ಸಾಮಾನ್ಯಾರ್ಥ. ಸಮಷ್ಟಿಬ್ರಹ್ಮದ ವ್ಯಷ್ಟಿತ್ವಕ್ಕೂ, ಅದರ ಎಂದರೆ ಭೌತಿಕಪ್ರಪಂಚದ ಹಾಗೂ ಅಹಂಪ್ರಜ್ಞೆಯ ಗೋಚರ, ಸಾರ್ಥಕತೆಗಳಿಗೂ ಇವುಗಳೇ ಉತ್ಪತ್ತಿಸ್ಥಾನಗಳು. ಜ್ಞಾನ-ಜ್ಞೇಯ-ಜ್ಞಾತೃ, ಕ್ರಿಯಾ-ಕರಣ-ಕರ್ತೃ ಮುಂತಾದ ಸಂಬಂಧಗಳು ಪೂರ್ತಿಯಾಗಿ ಎಲ್ಲ ಅನುಭವಗಳ ಸಮಗ್ರತೆ ಮತ್ತು ಅವಿಚ್ಛಿನ್ನತೆಗಳು ಗೋಚರವಾಗುವುದೂ ಇವುಗಳ ಮೂಲಕವೇ. ಇವು ವಸ್ತು ಅಥವಾ ವಿಷಯದಲ್ಲಿ ನಿಷ್ಠವೇ, ವೀಕ್ಷಕ ಅಥವಾ ಅನುಭವಿಯಲ್ಲಿ ಇವೆಯೇ ಎಂಬುದರಲ್ಲಿ ತುಂಬಾ ಚರ್ಚೆ ನಡೆದಿದೆ ; ಅದು ಇಲ್ಲಿ ಅಪ್ರಕೃತ. ಇದು ಹೇಗಾದರೂ ಇರಲಿ, ಬ್ರಹ್ಮದ ಶಬಳಿತ ಸ್ವರೂಪದ ಜ್ಞಾನವು ಆಗಬೇಕಾದರೆ ಈ ಬ್ರಹ್ಮಯೋನಿಗಳ ಮೂಲಕವೇ ಆಗಬೇಕು ; ಈ ಜ್ಞಾನದ ಮೂಲಕವೇ ಬ್ರಹ್ಮಜ್ಞಾನವಾಗಬೇಕು. ಆದುದರಿಂದ ಪ್ರಾಚೀನ ಭಾರತೀಯ ಜ್ಞಾನಶಾಸ್ತ್ರ(epistemology)ದಲ್ಲಿ ಇವಕ್ಕೆ ಪ್ರಾಮುಖ್ಯವನ್ನು ಕೊಟ್ಟಿದೆ. ಪ್ರಪಂಚದಲ್ಲಿ ಬ್ರಹ್ಮವು ಸರ್ವವ್ಯಾಪಿಯಾದುದರಿಂದ ಭೌತಿಕವಾದ ಇಂದ್ರಿಯಗಳೇ ಬ್ರಹ್ಮಯೋನಿಗಳೆಂದು ವೇದಾಂತಿಗಳು ಅಭಿಪ್ರಾಯಪಡುತ್ತಾರೆ. ಸಾಂಖ್ಯರು ಬ್ರಹ್ಮಯೋನಿಗಳು ಭೌತಿಕಗಳಲ್ಲವೆನ್ನುತ್ತಾರೆ. ವೈಶೇಷಿಕರು ಇಂದ್ರಿಯಗೋಚರವಾಗಿ ಭೌತಿಕವಾಗಿರುವುದೆಲ್ಲ ಪೃಥ್ವೀ ಮೊದಲಾದ ಭೂತಗಳಿಂದ ಉಂಟಾದುವೆನ್ನುತ್ತಾರೆ. ಶಾರ್ಙ್ಗದೇವನದು ಮುಖ್ಯವಾಗಿ ವೇದಾಂತಪಂಥವೆಂದು ತೋರುತ್ತದೆ. ಜಗತ್ತು ಮಿಥ್ಯಾಸ್ವರೂಪವಾಗಿ ಇಂದ್ರಿಯಗೋಚರವಾಗಿ ಐಹಿಕ ವ್ಯಾಪಾರಗಳಿಗೆ ಆಧಾರವಾಗಿದೆಯೆಂಬುದೇ ಇದರ ವಾದ. ಪೂರ್ವಾಚಾರ್ಯನಾದ ಚರಕನು ನ್ಯಾಯ–ವೈಶೇಷಿಕ ಪಂಥದವನು :[120]

ಖಾದಯಶ್ಚೇತನಾ ಷಷ್ಠಾ ಧಾತವಃ ಪುರುಷಃ ಸ್ಮೃತಃ ।
ಚೇತನಾಧಾತುರಪ್ಯೇಕಃ ಸ್ಮೃತಃ ಪುರುಷಸಂಜ್ಞಕಃ ॥[121]
ವೈವೃತ್ತ್ಯಾನ್ಮನಸೋ ಜ್ಞಾನಂ ಸಾನ್ನಿಧ್ಯಾತ್ ತಚ್ಚ ವರ್ತತೇ ।
ಅಣುತ್ವಮಥ ಚೈಕತ್ವಂ ದ್ವೌ ಗುಣೌ ಮನಸಃ ಸ್ಮೃತೌ ॥[122]

ಮಹತ್‌ತತ್ತ್ವದಿಂದ ಉಂಟಾಗುವ ಅಹಂಕಾರವು ವೈಕಾರಿಕ, ತೈಜಸ, ಮತ್ತು ಭೂತಾದಿ ಎಂದು ಮೂರು ರೂಪಗಳಲ್ಲಿರುತ್ತದೆ. ವೈಕಾರಿಕ ಹಾಗೂ ತೈಜಸದ ಸಂಯೋಗದಿಂದ ಬುದ್ಧೀಂದ್ರಿಯಗಳು, ಕರ್ಮೇಂದ್ರಿಯಗಳು

---

120 ಪಟ್ವವರ್ಧನನು ಚರಕನನ್ನು ಸಾಂಖ್ಯನೆಂದೂ ಸುಶ್ರುತನನ್ನು ಆಸುರೀ ಅಥವಾ ಪಂಚಶಿಖಾ ಪಂಥದ ನಿರೀಶ್ವರ ಸಾಂಖ್ಯನೆಂದೂ ಹೇಳುತ್ತಾನೆ. ಸುಶ್ರುತಸಂಹಿತೆ, ಮುನ್ನುಡಿ, ಪು. 15. ಆದರೆ ಚರಕಸಂಹಿತೆಯ ವ್ಯಾಖ್ಯಾನಕಾರನಾದ ಚಕ್ರಪಾಣಿದತ್ತನು ಇವರಿಬ್ಬರನ್ನೂ ವೈಶೇಷಿಕರೆಂದೇ ಹೇಳುತ್ತಾನೆ :

ಅಯಂ ಚ ವೈಶೇಷಿಕದರ್ಶನಪರಿಗೃಹೀತಶ್ಚಿಕಿತ್ಸಾಶಾಸ್ತ್ರವಿಷಯಃ ಪುರುಷಃ ; ಅಯಮೇವ 'ಪಂಚಮಹಾಭೂತಶರೀರಸಮವಾಯಃ ಪುರುಷಃ' (ಸುಶ್ರುತಸಂಹಿತೆ, ಸೂತ್ರಸ್ಥಾನ, ಅಧ್ಯಾಯ 1) ಇತ್ಯನೇನ ಸುಶ್ರುತಾಪ್ರೃಕ್ತಃ ।' ಚರಕಸಂಹಿತೆ, IV, 1, 16 ಮುಂದಿನ ಶ್ಲೋಕಗಳು ಮತ್ತು ವ್ಯಾಖ್ಯಾನ, ಪು. 287 ಮತ್ತು ಮುಂದಕ್ಕೆ.

121 ಚರಕ, ಉ. ಗ್ರಂ., IV, 1, 16, ಪು. 287.

122 ಅದೇ ಗ್ರಂಥ, IV, 1, 19, ಪು. 288.

## 2. ಪಿಂಡೋತ್ಪತ್ತಿ ಪ್ರಕರಣ

ಮತ್ತು ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳು ಜನಿಸುತ್ತವೆ. ಭೂತಾದಿಯು ತೈಜಸದೊಡನೆ ಸೇರಿ ಇಂದ್ರಿಯವಿಷಯಗಳಾದ ತನ್ಮಾತ್ರೆಗಳು ಉಂಟಾಗುತ್ತವೆ. ಇದು ಸುಶ್ರುತನ ಪಂಥ.[123] ವಾಗ್ಭಟನು ಪಂಚೀಕರಣವನ್ನೇ ಹೇಳುತ್ತಾನೆ.[124]

ಬ್ರಹ್ಮಯೋನಿಗಳು-ಎಂದರೆ ಇಂದ್ರಿಯಗಳು-ಭೌತಿಕಗಳು ಅಥವಾ ಅಭೌತಿಕಗಳು ಎಂಬ ಎರಡು ದರ್ಶನ ಪದ್ಧತಿಗಳನ್ನೂ ಶಾರ್ಙ್ಗದೇವನು ಇಲ್ಲಿ ಸೂಚಿಸುತ್ತಿದ್ದಾನೆ. ಭೌತಿಕವಲ್ಲ ಎಂದರೆ ಅಜ್ಞಾನದಮೂಲಕ ಭೌತಿಕವೆಂದು ಭ್ರಾಂತಿಯಲ್ಲಿ ತೋರುವ ಆದರೆ ಬ್ರಹ್ಮಮಯವೇ ಆದ, ಎಂಬ ಸಾಂಖ್ಯದರ್ಶನವನ್ನು ಸೂಚಿಸಿದಂತಾಯಿತು. ಇಂದ್ರಿಯಗಳು ಭೌತಿಕವೆಂದರೆ ಅಹಂಕಾರಕ್ಕೂ ಇಂದ್ರಿಯಕ್ಕೂ ಸಂಬಂಧಕಲ್ಪಿಸುವ ಸ್ವತಂತ್ರವಸ್ತುವೊಂದನ್ನು ಎಂದರೆ ಭೂತವನ್ನು ಹೇಳಿ ನ್ಯಾಯ-ವೈಶೇಷಿಕ ಪದ್ಧತಿಯನ್ನು ಸೂಚಿಸಿದಂತಾಯಿತು.

ಸತ್ತ್ವವೆಂಬುದು ಇಲ್ಲಿ ಒಂದು ಭಾವ; ಗುಣವಲ್ಲ. ಈ ಭಾವದಿಂದಲೇ ಸಾತ್ತ್ವಿಕ, ರಾಜಸ ಮತ್ತು ತಾಮಸಿಕವೆಂಬ ಮೂರು ಗುಣಗಳು ಉಂಟಾಗುವುದು. ಇವುಗಳಲ್ಲಿ ಸಮಧಾತು ಸ್ಥಿತಿಯಿದ್ದರೆ ಮೋಕ್ಷವಾಗುತ್ತದೆ. ಇವುಗಳಲ್ಲಿನ ಪರಸ್ಪರ ಪ್ರಮಾಣಗಳಲ್ಲಿ ವೈವಿಧ್ಯವು ಉಂಟಾದಾಗ ಸೃಷ್ಟಿಯು ಪ್ರಾರಂಭವಾಗುತ್ತದೆ.

ಶಾರ್ಙ್ಗದೇವನು ಮನಸ್ಸು ಬುದ್ಧಿಗಳನ್ನು ಮಾತ್ರವಲ್ಲದೆ ಸತ್ತ್ವವನ್ನೂ ಅಂತಃಕರಣವೆಂದು ಹೇಳಿದ್ದಾನೆ.

ಸಾತ್ತ್ವಿಕಭಾವಗಳು

**ಸತ್ತ್ವಂ ರಜಸ್ತಮ ಇತಿ ಗುಣಾಃ ಸತ್ತ್ವಾತ್ತು ಸಾತ್ತ್ವಿಕಾತ್ ।**
**ಅಸ್ತಿಕ್ಯಶುದ್ಧಧರ್ಮೈಕ[36] ರುಚಿಪ್ರಭೃತಯೋ ಮತಾಃ ॥ 54 ॥** 103

ಸತ್ತ್ವ[ವೆಂಬ ಅಂತಃಕರಣ] ಸಾತ್ತ್ವಿಕ [ಭಾವ]ದಿಂದ ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ಗುಣಗಳು(ಹುಟ್ಟುತ್ತವೆ). ಸಾತ್ತ್ವಿಕ [ಗುಣ] ದಿಂದ ಆಸ್ತಿಕತೆ, ಶುದ್ಧವಾದ ಧರ್ಮದಲ್ಲಿ ಮಾತ್ರ ನಿಷ್ಠೆ ಮೊದಲಾದವುಗಳು (ಉಂಟಾಗುತ್ತವೆ) ಎಂದು ಸಮ್ಮತಿಸಿದೆ.

ಸುಶ್ರುತನು ಸಾತ್ತ್ವಿಕಗುಣದ ಭಾವಗಳನ್ನು ದಯೆ, ಸುಖವನ್ನು ಪಾಲುಗೊಳ್ಳುವ ಬುದ್ಧಿ, ಸಹಿಷ್ಣುತೆ, ಸತ್ಯ, ಧರ್ಮ, ಜ್ಞಾನ, ಬುದ್ಧಿ, ಮೇಧಾಶಕ್ತಿ, ನೆನಪು, ಧೈರ್ಯ, ನಿರ್ಲಿಪ್ತತೆ ಇವುಗಳೆಂದೂ[125] ವಾಗ್ಭಟನು ಶುಚಿಯಾಗಿರುವುದು, ಆಸ್ತಿಕ್ಯ (ಆತ್ಮವು ಅಥವಾ ಬ್ರಹ್ಮವು ಇದೆಯೆಂದು ನಂಬುವುದು), ಧರ್ಮದಲ್ಲಿ ವಿಶ್ವಾಸ, ಜ್ಞಾನ, ಇವುಗಳನ್ನೂ[126] ಹೇಳುತ್ತಾರೆ. ಆಸ್ತಿಕ್ಯವೆಂದರೆ ಆತ್ಮವು (ಬ್ರಹ್ಮವು) ಇದೆ (ಅಸ್ತಿ) ಎಂದು ನಂಬುವುದು.

ರಾಜಸ ತಾಮಸ ಭಾವಗಳು

**ಸತ್ತ್ವಾತ್ತು ರಾಜಸಾದ್ಭಾವಾಃ[37] ಕಾಮಕ್ರೋಧಾದಯಃ ।**
**ನಿದ್ರಾಽಽಲಸ್ಯಪ್ರಮಾದಾರ್ತಿವಂಚನಾದ್ಯಾಸ್ತು ತಾಮಸಾತ್ ॥ 55 ॥** 104

ಸತ್ತ್ವ [ವೆಂಬ ಅಂತಃಕರಣ]ದ ರಾಜಸ [ಗುಣ]ದಿಂದ ಹುಟ್ಟಿದ ಭಾವಗಳು ಕಾಮ, ಕ್ರೋಧ

36 ಗ; ಆದರೆ ಅ: ಶುಕ್ಲಧರ್ಮೈಕ-; ಕ: ಗುರುಧರ್ಮೇಚ.     37 ಅ: ರಜಸೋ ರಾಜಸಾ ಭಾವಾಃ ?

123 ಸುಶ್ರುತ, ಉ. ಗ್ರಂ., I, 1-17, ಪು. 1-7.
124 ವಾಗ್ಭಟ, ಉ. ಗ್ರಂ., III, 2-8.
125 ಸುಶ್ರುತ, ಉ. ಗ್ರಂ., I, 18, ಪು. 8.
126 ವಾಗ್ಭಟ, ಉ. ಗ್ರಂ., III, 7, ಪು. 38.

ಮೊದಲಾದವುಗಳು. ನಿದ್ರೆ, ಸೋಮಾರಿತನ <ಆಲಸ್ಯ>, ತಪ್ಪುಮಾಡುವಿಕೆ, ಆಪತ್ತು, ಮೋಸಮಾಡುವಿಕೆ ಮೊದಲಾದವುಗಳಾದರೋ ತಾಮಸದಿಂದ [ಹುಟ್ಟುತ್ತವೆ].

ಸತ್ತ್ವವೆಂಬ ಮೂರನೆಯ ಅಂತಃಕರಣದಲ್ಲಿ ಹುಟ್ಟುವ ರಾಜಸ ಗುಣದಿಂದ ಉದ್ಭವಿಸುವ ಭಾವಗಳನ್ನು ಸುಶ್ರುತನು ಹೆಚ್ಚಾದ ದುಃಖ, ಅಲೆಯುವಿಕೆ, ಚಂಚಲಬುದ್ಧಿ, ಅಹಂಕಾರ, ಸುಳ್ಳುಹೇಳುವುದು, ಕರುಣೆಯಿಲ್ಲದಿರುವುದು, ಡಂಭವಾಗಿರುವುದು, ಗರ್ವ, ಸಂತೋಷಪ್ರಿಯತೆ, ಕಾಮ, ಕ್ರೋಧ ಇವುಗಳನ್ನೂ [125] ವಾಗ್ಭಟನು ಅಧಿಕವಾಗಿ ಮಾತನಾಡುವುದು, ಅಹಂಕಾರ, ಹೊಟ್ಟೆಕಿಚ್ಚು, ಕ್ರೋಧಗಳನ್ನೂ [126] ಹೇಳುತ್ತಾರೆ.

ತಾಮಸಿಕ ಗುಣಗಳನ್ನು ವಿಷಾದ, ನಾಸ್ತಿಕತೆ, ಅಧರ್ಮದಲ್ಲಿ ನಡೆಯುವುದು, ಬುದ್ಧಿಯ ವ್ಯಾಪಾರಗಳಿಗೆ ತಡೆಯಾಗುವುದು, ಅಜ್ಞಾನ, ಕೆಟ್ಟವಿಷಯಗಳಲ್ಲಿ ಆಸಕ್ತಿ, ಕರ್ತವ್ಯದಲ್ಲಿ ನಿರಾಸಕ್ತಿ, ನಿದ್ರೆ ಇವುಗಳೆಂದು ಸುಶ್ರುತನೂ [125] ಭಯ, ಅಜ್ಞಾನ, ನಿದ್ರೆ, ಸೋಮಾರಿತನ, ವಿಷಾದಗಳೆಂದು ವಾಗ್ಭಟನೂ [127] ತಿಳಿಸುತ್ತಾರೆ.

ಸಾತ್ಮ್ಯಜ ಭಾವಗಳು

**ಪ್ರಸನ್ನೇಂದ್ರಿಯತಾಽಽರೋಗ್ಯಾನಾಲಸ್ಯಾದ್ಯಾಸ್ತು ಸಾತ್ಮ್ಯಜಾಃ ।**
**ದೇಹೋ ಭೌತಾತ್ಮಕಃ ತಸ್ಮಾದಾದತ್ತೇ ತದ್ಗುಣಾನಿಮಾನ್** ॥ 56 ॥ 105

ಇಂದ್ರಿಯಗಳು ಚುರುಕಾಗಿರುವುದು, ಕಾಯಿಲೆಗಳಿಲ್ಲದಿರುವುದು, ಸೋಮಾರಿತನವಿಲ್ಲದಿರುವುದು ಇವೇ ಮೊದಲಾದವುಗಳಾದರೋ ಅಭ್ಯಾಸ (ಚಾಳಿ) ದಿಂದ ಹುಟ್ಟಿದವುಗಳು. ದೇಹವು ಭೂತಗಳಿಂದಾದುದು ; ಆದುದರಿಂದ ಈ ಗುಣಗಳನ್ನು ಪಡೆಯುತ್ತದೆ.

ಆತ್ಮಜಭಾವವಾದ ಇಂದ್ರಿಯಗಳನ್ನೂ ಅವುಗಳ ಅಂಶಗಳಾದ ಅಂತಃಕರಣಗಳನ್ನೂ ವಿವರಿಸಿದನಂತರ ಶಾರ್ಙ್ಗದೇವನು ಕ್ರಮವಾಗಿ ಚಾಳಿಯಿಂದ-ಎಂದರೆ ಪದೇಪದೇ ನಡೆಸುವ ಕರ್ಮವ್ಯಾಪಾರದಿಂದ-ಹುಟ್ಟುವ ಭಾವಗಳನ್ನು ವಿವರಿಸುತ್ತಿದ್ದಾನೆ. ಚರಕನು ಈ ಗುಣಗಳ ಜೊತೆಗೆ ಅಲೋಲುಪತೆ, ಸ್ವರವರ್ಣಬೀಜಸಂಪತ್ತು (ಇದನ್ನು ಆತ್ಮಜವೂ ಹೌದೆಂದು ಹೇಳಿದೆ), ಸಂತೋಷಾಧಿಕ್ಯ ಇವುಗಳನ್ನು ಹೇಳುತ್ತಾನೆ [128]. ಸುಶ್ರುತನು ವೀರ್ಯ, ಆರೋಗ್ಯ, ಬಲ, ಬಣ್ಣ ಇವುಗಳನ್ನೂ [106] ವಾಗ್ಭಟನು ಆಯಸ್ಸು, ಆರೋಗ್ಯ, ಅನಾಲಸ್ಯ, ಪ್ರಭೆ ಮತ್ತು ಬಲಗಳನ್ನೂ [107] ಹೇಳುತ್ತಾರೆ. ಆರೋಗ್ಯವು ಅಭ್ಯಾಸಬಲದಿಂದ ಉಂಟಾಗುವ ಸ್ಥಿತಿಯೆಂದು ನಮ್ಮ ಆಯುರ್ವೇದಾಚಾರ್ಯರೆಲ್ಲರೂ ಒಮ್ಮತದಿಂದ ಹೇಳುವುದನ್ನು ಇಲ್ಲಿ ಗಮನಿಸಬೇಕು. ಆರೋಗ್ಯವನ್ನೂ(ಎಂದರೆ ಅರೋಗತೆಯನ್ನೂ) ಚಟುವಟಿಕೆಯನ್ನೂ ಒಳ್ಳೆಯ ಅಭ್ಯಾಸಗಳಿಂದ ಬೆಳಸಿಕೊಳ್ಳಬಹುದು, ಅವು ಸ್ವಭಾವ ಜನ್ಯಗಳಲ್ಲ, ಪೂರ್ವಕರ್ಮದ ಫಲಗಳಲ್ಲ, ಆನುವಂಶಿಕಗುಣಗಳಲ್ಲ ಎಂಬುದು ಇದರ ತಾತ್ಪರ್ಯ. ಇಂದ್ರಿಯಗಳು ಚುರುಕಾಗಿ ಕೆಲಸಮಾಡುವುದೂ ಹೀಗೆಯೇ ಅಭ್ಯಾಸತತ್ಪರತೆಯಿಂದಲೇ ಬರುತ್ತದೆ.

ಈ ಆರು ವಿಧದ ಭಾವಗಳನ್ನು ನಮ್ಮ ಪ್ರಾಚೀನಚಾರ್ಯರು ಹೇಳಿ ತಳಿಶಾಸ್ತ್ರದಲ್ಲಿದ್ದ ತಮ್ಮ ಪಾಂಡಿತ್ಯವನ್ನು ಸೂಚಿಸಿದ್ದಾರೆ. ತಾಯಿತಂದೆಗಳಿಂದಲೂ ತನ್ನ ಸುತ್ತಮುತ್ತಲಿನ ಸಂದರ್ಭಗಳಿಂದಲೂ, ಅಭ್ಯಾಸಬಲದಿಂದಲೂ ವ್ಯಕ್ತಿಯು ಗುಣಸಮುದಾಯವನ್ನು ಪಡೆದುಕೊಳ್ಳುತ್ತಾನೆಂಬುದು ಅನುಭವವೇದ್ಯವೇ ಆಗಿದೆ. ಇದನ್ನು ಆಧುನಿಕ ವಿಜ್ಞಾನದಲ್ಲಿ ಹೀಗೆ ಹೇಳಿದೆ :

---

127 ವಾಗ್ಭಟ, ಉ. ಗ್ರಂ., III, 8, ಪು. 38.

128 ಚರಕ, ಉ. ಗ್ರಂ., IV, 3, 11, ಪು. 312.

## 2. ಪಿಂಡೋತ್ಪತ್ತಿ ಪ್ರಕರಣ

Testicles and ovaries possess functions of overwhelming importance. They generate male or female cells. Simultaneously they secrete into the blood certain substances which impress the male or female characteristics on our tissues, humours and consciousness and give to all our functions their intensity. The testicle engenders audacity, violence and brutality, the qualities distinguishing the fighting bull from the ox drawing the plough along the furrow. The ovary affects the organism of the woman in an analogous manner.[129]

The father and the mother contribute in equal proportions to the formation of the nucleus of the ovum which engenders every cell of the new organism. But the mother gives also, in addition to half its nuclear substance, all the protoplasm surrounding the nucleus. She thus plays a more important part in the genesis of the embryo than the father does. Indeed, parental characteristics are transmitted to the offspring by the nucleus. But the remaining part of the cell also has some influence. The laws of heredity and the present theories of the geneticists do not entirely elucidate these complex phenomena.[130]

Our form is moulded by our physiological habits and even by our usual thoughts. Its characteristics are partly due to the muscles running under the skin or along the bones.[131]

ಇಷ್ಟೇ ಅಲ್ಲದೆ ಭ್ರೂಣವಾಗಿ ಬೆಳೆಯುವ ಜೀವಾಣುವು ವ್ಯಕ್ತಿಯ ಗುಣಭಾವಾದಿಗಳನ್ನು ತಂದೆತಾಯಿಗಳಿಂದ ಪಡೆದುಕೊಳ್ಳುವುದಕ್ಕೆ ಅದರಲ್ಲಿರುವ ಸೂಕ್ಷ್ಮಾಂಶಗಳೇ ಕಾರಣವೆಂದು ಪಾಶ್ಚಾತ್ಯ ತಳಿಶಾಸ್ತ್ರವು ಸಿದ್ಧಪಡಿಸಿದೆ. ಈ ದೃಷ್ಟಿಯಿಂದ ತಂದೆತಾಯಿಗಳನ್ನು ಹೋಮೋಜೈಗಸ್ (homozygous) ಮತ್ತು ಹೆಟರೋಜೈಗಸ್ (heterozygous) ಎಂಬ ಸಮ ಅಥವಾ ವಿಷಮ ಜಾತಿಗಳನ್ನಾಗಿ ವಿಂಗಡಿಸಬಹುದು. ಭಾರತೀಯ ಜ್ಯೌತಿಷ ಶಾಸ್ತ್ರದಲ್ಲಿ ಜಾತಕನ ಕುಜದೋಷವೆಂಬ ತತ್ತ್ವವು ಇದನ್ನೇ ಸ್ಥೂಲವಾಗಿ, ಆದರೆ ಭಿನ್ನವಾದ ಆಧಾರ ಪ್ರತಿಜ್ಞೆಗಳನ್ನವಲಂಬಿಸಿ, ಹೇಳುತ್ತದೆ. ಈ ಜೀವಾಣುವಿನಲ್ಲಿರುವ ಕ್ರೋಮೋಸೋಂಗಳಲ್ಲಿರುವ ಆಟೋಸೋಂಗಳೂ ಎಕ್ಸ್ ಮತ್ತು ವೈ ಎಂಬ ಲೈಂಗಿಕ ಕ್ರೊಮೋಸೋಂಗಳೂ, ಜೀನ್ ಎಂಬ ಗುಣಕಾರಕವಾದ ಮೂಲಾಣುಗಳಲ್ಲಿರುವ ಅಲ್ಲೆಲೋಮಾರ್ಫ್‌ಗಳೂ ಮತ್ತು ಡಾಮಿನೆಂಟ್ ಅಥವಾ ರಿಸೆಸಿವ್ ವಿಧಗಳೂ ವ್ಯಕ್ತಿಯ ಗುಣಗಳಿಗೆ ಬಹುಮಟ್ಟಿಗೆ ಕಾರಣಗಳೆಂದೂ ಅವುಗಳನ್ನು ಒಂದು ನಿರ್ದಿಷ್ಟ ಸಮೀಕರಣದಿಂದ ಮುಂಗಾಣಬಹುದೆಂದೂ ತಿಳಿದುಬರುತ್ತದೆ[132].

ಎಲ್ಲಾ ವಿಧಧ ಪ್ರಾಣಿದೇಹಕ್ಕೂ ಮೂಲದ್ರವ್ಯವು ಜೀವಾಣು. ಇದರ ವಿವಿಧ ಸಂಖ್ಯೆ ಮತ್ತು ರಚನಾ ವಿನ್ಯಾಸದಿಂದಲೇ ಬೇರೆಬೇರೆ ಅಂಗಗಳ ರಚನೆಯಾಗುತ್ತದೆ. ನರ ಮತ್ತು ಮಿದುಳುಗಳ ಜೀವಾಣುಗಳನ್ನು ಬಿಟ್ಟು

---

129 ಆಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 92.

130 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 94.

131 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 69.

132 ಗ್ರೇ, ಉ. ಗ್ರಂ., ಪು. 58–59.

ಮಿಕ್ಕೆಲ್ಲ ಬಗೆಯ ಜೀವಾಣುಗಳೂ ತಮ್ಮನ್ನೇ ಸೃಷ್ಟಿಸಿಕೊಳ್ಳುತ್ತವೆ. ಈ ಸೃಷ್ಟಿಯಿಂದಲೇ ಜಗತ್ತಿನ ಸರ್ವ ಜೈವಿಕ ವ್ಯಾಪಾರವೂ ಜರುಗುತ್ತಿದೆ. ಪ್ರತಿ ಪ್ರಾಣಿವರ್ಗದಲ್ಲಿಯೂ ಜಾತಿಯ ಮತ್ತು ವ್ಯಕ್ತಿಯ ಸಾಮಾನ್ಯ ಮತ್ತು ವಿಶೇಷ ಗುಣಗಳೂ ಅವುಗಳಿಂದ ಉದ್ಭವಿಸುವ ವ್ಯವಹಾರವೂ ಜೀವಾಣುವಿನಲ್ಲಿ ಬೀಜರೂಪವಾಗಿ ಅಡಗಿರುತ್ತವೆ. ಎಂದರೆ, ವ್ಯಕ್ತಿಯ ಗುಣಗಳು (ಆದುದರಿಂದ ಜಾತಿಯ ಗುಣಗಳು) ವ್ಯಕ್ತಿಯ ಮಿದುಳು, ಹೃದಯ ಮುಂತಾದ ಯಾವುದೇ ಒಂದು ಭಾಗದಲ್ಲಿ ಹುಟ್ಟಿ, ಇದ್ದು, ಪ್ರಭಾವಗೊಳಿಸುವುದಿಲ್ಲ ; ವ್ಯಕ್ತಿಯ ದೇಹದಲ್ಲಿರುವ ಕೋಟಿಕೋಟಿ ಸಂಖ್ಯೆಯ ಪ್ರತಿ ಜೀವಾಣುವಿನಲ್ಲಿಯೂ ಇರುತ್ತವೆ. ಶಾರ್ಙ್ಗದೇವನು ಜೀವನಿಗೆ ಹೇಳುವ ಷಡ್ಭಾವಗಳನ್ನೂ ಆಧುನಿಕ ಜೀವಶಾಸ್ತ್ರ ಸಂಶೋಧನೆಯ ಫಲಿತಾಂಶಗಳಲ್ಲಿಯೇ ಕಾಣಬಹುದು. ಪ್ರಾಚೀನಭಾರತೀಯ ವೈಜ್ಞಾನಿಕ ಶಾಸ್ತ್ರಗಳಿಗೆಲ್ಲ ಆಧ್ಯಾತ್ಮಿಕ ಬಣ್ಣವನ್ನು ಕಟ್ಟುತ್ತಿದ್ದುದರಿಂದ, ಹಲವುವೇಳೆ ಅಂತಹ ಉಕ್ತಿಗಳ ವೈಜ್ಞಾನಿಕ ಮೌಲ್ಯವೂ ಸಾರ್ವಜನಿಕ ಪ್ರಸಾರವೂ ಕಡಿಮೆಯೇ ಆಗುತ್ತಿತ್ತು. ಆದುದರಿಂದ ಜ್ಞಾನಾರಣ್ಯಗಳಾಗಿರುವ ಪ್ರಾಚೀನಭಾರತೀಯ ಶಾಸ್ತ್ರಗಳನ್ನು ಆಧುನಿಕ ವೈಜ್ಞಾನಿಕ ಸಂಶೋಧನೆಗಳ ವಿಧಾನ, ಫಲಿತಾಂಶಗಳಿಂದ ಪುನರ್ವಿಮರ್ಶಿಸಿದರೆ ನಮ್ಮ ಸಂಸ್ಕೃತಿಗೂ ವಿಶ್ವದ ಜ್ಞಾನಭಂಡಾರಕ್ಕೂ ವಿಶೇಷ ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲ.

ಜೀವಾಣು ಮತ್ತು ಅದರಲ್ಲಿರುವ ಗುಣವಾಹಕ ವರ್ಣತಂತುಗಳಾದ ಕ್ರೋಮೋಸೋಂಗಳ ವಿಷಯದಲ್ಲಿ ಜೀವವಿಜ್ಞಾನದಲ್ಲಿ ಇಂದು ಹೇರಳವಾಗಿ ಸಂಶೋಧನೆ ನಡೆಯುತ್ತಿದ್ದು ಅತ್ಯಾಶ್ಚರ್ಯಕರವೂ ಅತಿಮುಖ್ಯವೂ ಆಗಿರುವ ಸಂಗತಿಗಳು ಬೆಳಕಿಗೆ ಬರುತ್ತಿವೆ. ಇವುಗಳನ್ನೆಲ್ಲ ಇಲ್ಲಿ ವರ್ಣಿಸುವುದು ಈ ಗ್ರಂಥದ ವ್ಯಾಪ್ತಿಗೆ ಮೀರಿದ್ದು. ಆದರೂ ಗ್ರಂಥಕಾರನು ಹೇಳಿರುವ ವಿಷಯದಲ್ಲಿನ ತಥ್ಯತೆಯನ್ನು ಆಧುನಿಕ ಸಂಶೋಧನಾ ಫಲಿತಾಂಶಗಳ ಉದಾಹರಣೆಯಿಂದ ಹೆಚ್ಚು ಪರಿಭಾಷೆಯಿಲ್ಲದೆ ಸಂಕ್ಷೇಪವಾಗಿ ವಿವರಿಸಲಾಗುವುದು.

ವಿವಿಧ ಅಂಗಗಳ ಜೀವಾಣುಗಳು (living cells), ಗಾತ್ರ, ಆಕಾರ, ಬೀಜಗಳ ಸಂಖ್ಯೆ, ಜೀವರಸದಲ್ಲಿರುವ ಸಾಮಗ್ರಿಗಳ ಸಂಖ್ಯೆ ಮತ್ತು ಸ್ವಭಾವ ಮುಂತಾದ ಅಂಶಗಳಲ್ಲಿ ಭಿನ್ನವಾಗಿರುತ್ತವೆ. ಸೂಕ್ಷ್ಮದರ್ಶಿನಿಯಲ್ಲಿ ಕಾಣುವ ಅವುಗಳ ಆಕಾರದಿಂದ ಅವುಗಳನ್ನು ಗುರುತಿಸಬಹುದು. ಇವುಗಳ ಬೇರೆಬೇರೆ ರೀತಿಯ ಸಂಯೋಜನೆಯಿಂದ ಹುರಿ, ಗ್ರಂಥಿ, ಎಳೆ ಮುಂತಾದ ಅಂಗದ್ರವ್ಯಗಳು ಉಂಟಾಗುತ್ತವೆ. ಆದರೆ ಇವುಗಳ ರಚನೆ ಸಾಮಾನ್ಯವಾಗಿ ಒಂದೇ ಆಗಿರುತ್ತದೆ. ಅರ್ಧವ್ಯಾಪಕಪದರವೊಂದರಿಂದ ಆವೃತವಾದ ಲೋಳೆರಸದ ಒಂದು ಹನಿ ಇದು, ಎಂಬ ಹಿಂದಿನ ಕಲ್ಪನೆ ಮಾಯವಾಗಿ, ಬಹು ಸಂಕೀರ್ಣವೂ ಜಟಿಲವೂ ಆಗಿರುವ ರಚನೆಯನ್ನು ಅದು ಒಳಗೊಂಡಿದೆ, ಎಂಬ ವಿಶೇಷ ತಿಳುವಳಿಕೆ ಈಗ ಉಂಟಾಗಿದೆ. ಅರ್ಧವ್ಯಾಪಕಪದರವೊಂದರಿಂದ ಅದು ಆವೃತವಾಗಿದೆ ; ಅದರೊಳಗೆ ಸೈಟೋಪ್ಲಾಸಂ ಎಂಬ ಗಟ್ಟಿಯಾದ ದ್ರವವಿದೆ. ಇದರಲ್ಲಿ ಅನೇಕ ಕಿಣ್ವವಸ್ತುಗಳಿವೆ. ಇವು ಜೀವಾಣುವಿನಲ್ಲಿ ನಡೆಯುವ ಎಲ್ಲಾ ರಾಸಾಯನಿಕ ಕ್ರಿಯೆಗಳ ವೇಗವನ್ನೂ ವರ್ಧಿಸುತ್ತವೆ. ಈ ದ್ರವದಿಂದಲೂ ಜೀವಾಣುಗಳ ನಡುವೆ ನಿರಂತರವಾಗಿ ಪ್ರವಹಿಸುತ್ತಿರುವ ಜೀವರಸದಿಂದಲೂ ಪುಷ್ಟಿಯನ್ನು ಪಡೆದು ಜೀವಾಣುವು ಬೆಳೆಯುತ್ತದೆ. ಅದರ ಮಧ್ಯದಲ್ಲಿ ದೀರ್ಘವೃತ್ತಾಕಾರದ, ಹಿಗ್ಗಿ, ಕುಗ್ಗಬಲ್ಲ, ಬಲೂನಿನಂತಹ ವಸ್ತುವು ತೇಲುತ್ತಿರುತ್ತದೆ. ಇದೇ ನ್ಯೂಕ್ಲಿಯಸ್ ಅಥವಾ ಬೀಜ. ಇದೂ ತನ್ನದೇ ಆದ ತೆಳುವಾದ ಪಾರದರ್ಶಕ ಪದರದಿಂದ ಆವರಿಸಲ್ಪಟ್ಟಿದೆ. ಈ ಬೀಜದಲ್ಲಿ ಗಟ್ಟಿಯಾದ ಆಹಾರರಸವಿದೆ. ಇದರಲ್ಲಿ ತಮ್ಮ ಆಕಾರವನ್ನು ಎಡೆಬಿಡದೆ ಬದಲಾಯಿಸುತ್ತಿರುವ ನ್ಯೂಕ್ಲಿಯೋಲಸ್ ಎಂಬ ಎರಡು ಬೀಜಗರ್ಭಗಳಿವೆ. ಜೀವಾಣುವಿಗೂ ಬೀಜಗರ್ಭಗಳಿಗೂ ಆಹಾರವಸ್ತುಗಳು ಅರ್ಧವ್ಯಾಪಕಗಳಾದ ಆಯಾ ಪದರಗಳ ಮೂಲಕ ಪ್ರವಹಿಸಿ ದೊರೆಯುತ್ತವೆ. ಬೀಜದ ಹೊರಗಡೆ ಅನೇಕ ತಂತುಗಳಿರುವ, ಅಂಟುಪುರಲೆಯಂತಹ ಸೆಂಟ್ರೋಸೋಂ ಎಂಬ ವಸ್ತುವೂ, ಕಿಣ್ವಗಳನ್ನು ಸೃಷ್ಟಿಸಿ ಸ್ರವಿಸುವ ಗ್ರಾನ್ಯೂಲ್ಸ್ ಎಂಬ ಮರಳಿನಂತಹ ವಸ್ತುಗಳೂ, ಅನಿಲದಿಂದ ತುಂಬಿದ ವ್ಯಾಕ್ಯುಓಲ್ ಎಂಬ

ಗುಳ್ಳೆಗಳೂ ಇರುತ್ತವೆ. ಇವುಗಳೇ ಅಲ್ಲದೆ, ಉದ್ದಕ್ಕೆ ಹಾವಿನಂತಿರುವ, ಮೈಟೊಕಾಂಡ್ರಿಯ ಎಂಬ ಅತಿಸೂಕ್ಷ್ಮ ತಂತುಗಳೂ ನ್ಯೂಕ್ಲಿಯಸ್ಸಿನಲ್ಲಿ ಅಡಗಿರುತ್ತವೆ. ಈ ಮೇಲೆ ಹೇಳಿರುವ ವಸ್ತುಗಳೆಲ್ಲವೂ ನಿರಂತರವಾಗಿ ಚಲಿಸುತ್ತಲೇ ಇರುತ್ತವೆ. ಬೀಜದ ಹೊರಗಡೆ ಗ್ರ್ಯಾನ್ಯೂಲ್‌ಗಳು ಸುಂಟರಗಾಳಿಯಂತೆ ಸುತ್ತುತ್ತಿರುತ್ತವೆ. ಈ ಪ್ರದೇಶದಲ್ಲಿ ಗೋಲ್ಗಿಯ ಉಪಕರಣ ಅಥವಾ ರೀನೋವಿನ ಉಪಕರಣ ಎಂದು ಹೆಸರುಳ್ಳ ಭಾಗವೊಂದಿದೆ. ಇದರಲ್ಲಿ ಮೊನಚು ಅಂಡಾಕಾರದ ಹಲವು ಕಣಗಳಿವೆ. ಈ ಉಪಕರಣದಿಂದಲೇ ಬೀಜದ ಪೋಷಣೆಯಾಗುತ್ತದೆಂದು ಜೀವ ವಿಜ್ಞಾನಿಗಳು ನಂಬುತ್ತಾರೆ.

ಜೀವಾಣುವು ಹೀಗೆ ಬೆಳೆದು ಗಾತ್ರದಲ್ಲಿ ದೊಡ್ಡದಾಗುತ್ತಿರುವಾಗ ತನ್ನ ಗಾತ್ರ: ಮೇಲ್ಮೈ ವಿಸ್ತಾರ— ಈ ಅನುಪಾತವು ತೀರಾ ಕಡಿಮೆಯಾದಾಗ, ಒಡೆದು ಇಬ್ಭಾಗವಾಗಿ ತನ್ನನ್ನೇ ಪುನಃ ಸೃಷ್ಟಿಸಿಕೊಳ್ಳುತ್ತದೆ.

ಲೈಂಗಿಕವಲ್ಲದ ಜೀವಾಣುವು ವಿಭಜನೆಯಮೂಲಕ ತನ್ನನ್ನೇ ಪುನಃ ಸೃಷ್ಟಿಸಿಕೊಂಡು ಗುಣಿಸಿಕೊಳ್ಳುವ ವಿಧಾನಕ್ಕೆ ಜೀವಾಣುವಿಶ್ಲೇಷಣವೆಂದು ಹೆಸರು. ಇದನ್ನು ಪಾಶ್ಚಾತ್ಯ ಜೀವಶಾಸ್ತ್ರದಲ್ಲಿ ಮೈಟೋಸಿಸ್ (mitosis) ಅಥವಾ ಕರ್ಯೋಕಿನೀಸಿಸ್ (karyokinesis) ಎನ್ನುತ್ತಾರೆ. ಇದು ಮುಖ್ಯವಾಗಿ ನಾಲ್ಕು ಹಂತಗಳಲ್ಲಿ ನಡೆಯುತ್ತದೆ. ಈ ಹಂತಗಳು ಎಡೆಬಿಡದ ಕಾಲಾನುಕ್ರಮದಲ್ಲಿ ಜರುಗುತ್ತವೆ. ಮೊದಲಿನಲ್ಲಿ ಜೀವಾಣುವಿನಲ್ಲಿರುವ ಕ್ರೋಮೋಸೋಂ ಎಂಬ ಯಮಳರೂಪದಲ್ಲಿರುವ ವರ್ಣತಂತುಗಳು ಒಟ್ಟಿಗೆ ನಿಬಿಡವಾದ ಸುರುಳಿಗಳಾಗಿ ಸುತ್ತಿಕೊಳ್ಳುತ್ತವೆ. ಈ ಸ್ಥಿತಿಯಲ್ಲಿ ಪ್ರತಿಯೊಂದು ವರ್ಣತಂತುವೂ ಜೋಡಿಯಲ್ಲಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ಹಂತಕ್ಕೆ ಪ್ರೊಫೇಸ್ ಎಂದು ಹೆಸರು. ಕ್ರೋಮೋಸೋಂ ಎಂಬುದು ಜೀವಾಣುವಿನ ಬೀಜದಲ್ಲಿದ್ದುಕೊಂಡು ಆಯಾ ಜೀವಾಣುವಿನ ರಚನೆಯ ಮತ್ತಿತರ ವೈಶಿಷ್ಟ್ಯಗಳನ್ನು ಒಳಗೊಂಡು, ಒಯ್ಯುವ ಸಾಧನವಾಗಿರುತ್ತದೆ. ಅಷ್ಟೇ ಅಲ್ಲದೆ ಆಯಾ ಯೋನಿಯ ಇಡೀ ದೇಹದ ಜಾತಿ ಮತ್ತು ವ್ಯಕ್ತಿಗತ ಗುಣಗಳಿಗೂ ವೈಶಿಷ್ಟ್ಯಗಳಿಗೂ ಇದು ವಾಹಕವಾಗಿದೆ. ಇದು ಡಿಆಕ್ಸಿರೈಬೋ ನ್ಯೂಕ್ಲಿಯಿಕ್ ಆಸಿಡ್ ಎಂದು ಮುಂದೆ ಹೇಳಲಾಗುವ ಕ್ಲಿಷ್ಟರಚನೆಯ ಆಮ್ಲವಿಶೇಷದಿಂದ ಆಗಿದೆ.

ಎರಡನೆಯ ಹಂತವಾದ ಮೆಟಾಫೇಸ್‌ನಲ್ಲಿ ಬೀಜವನ್ನು ಆವರಿಸಿರುವ ಪದರವು ಮಾಯವಾಗಿ ಇನ್ನೂ ಜೋಡಿಗಳಲ್ಲಿರುವ ಕ್ರೋಮೋಸೋಂಗಳು ಜೀವಾಣುವಿನ ವಿಷುವದ್ರೇಖೆಯ ಬಳಿ ಬಂದುಸೇರುತ್ತವೆ. ಆನೇಲೆ ಕ್ರೋಮೋಸೋಂ ಜೋಡಿಯಲ್ಲಿರುವ ಒಂದೊಂದು ತಂತುಯಮಳವೂ ಎದುರುಬದುರು ದಿಕ್ಕಿಗೆ ಚಲಿಸಿ ಒಂದೊಂದಾಗಿ ಬೇರ್ಪಡುತ್ತದೆ. ಈ ಮೂರನೆಯ ಹಂತಕ್ಕೆ ಅನಫೇಸ್ ಎಂದು ಹೆಸರು. ಕಡೆಯದಾದ ಟಿಲೋಫೇಸ್‌ನಲ್ಲಿ ಬಿಡಿಬಿಡಿಯಾದ ಕ್ರೋಮೋಸೋಂಗಳು ತಮ್ಮ ನಿಬಿಡವಾದ ಸುರುಳಿಯಾಕಾರದ ರಚನೆಯನ್ನು ತೊರೆದು ಮತ್ತೆ ಒಂದು ಪದರದಿಂದ ಆವೃತವಾಗುತ್ತವೆ. ಹೀಗೆ ಒಂದರಿಂದ ಎರಡು ಬೀಜಾಣುಗಳು ಸೃಷ್ಟಿಯಾಗುತ್ತವೆ. ನಂತರ ಜೀವಾಣುವು ವಿಷುವದ್ರೇಖೆಯ ಸಮಕ್ಕೆ ಸರಿಯಾಗಿ ಇಬ್ಭಾಗವಾಗುತ್ತದೆ. ಹೀಗೆ ಒಂದು ಜೀವಾಣುವು ಎರಡಾಗುತ್ತದೆ. ಇದರಲ್ಲಿ ಪ್ರತಿಯೊಂದೂ ಸೂಕ್ತಪೋಷಕ ದ್ರವ್ಯವನ್ನು ಪಡೆದುಕೊಂಡು ಗಾತ್ರದಲ್ಲಿ ಬೆಳೆಯುತ್ತಾಹೋಗುತ್ತದೆ. ಗಾತ್ರ/ಮೇಲ್ಮೈವಿಸ್ತಾರದ ಅನುಪಾತವು ಅತ್ಯಂತ ಕಡಿಮೆಯಾಗುವವರೆಗೂ ಈ ಕ್ರಿಯೆ ಮುಂದುವರಿಯುತ್ತಿರುತ್ತದೆ. ಈ ಅವಧಿಗೆ ಇಂಟರ್‌ಫೇಸ್ ಎಂದು ಹೆಸರು. ನಂತರ ಪ್ರತಿಯೊಂದು ಜೀವಾಣು ಸಂತಾನವೂ ಮೇಲೆ ಹೇಳಿದ ರೀತಿಯಲ್ಲಿ ಪುನಃ ಸೃಷ್ಟಿಯಲ್ಲಿ ತೊಡಗುತ್ತದೆ.

ಜೀವಾಣುಗಳ ಜೀವಿತಕಾಲ ಅಲ್ಪವಾದುದು ; ಉದಾಹರಣೆಗೆ, ಪ್ರತಿಸೆಕೆಂಡಿನಲ್ಲಿಯೂ ಸುಮಾರು ಮೂವತ್ತು ಲಕ್ಷ ಕೆಂಪುರಕ್ತಕಣಗಳು ಸಾಯುತ್ತವೆ ಹಾಗೂ ಸೃಷ್ಟವಾಗುತ್ತವೆ. ಪ್ರತಿ ಪ್ರಾಣಿಯ ದೇಹದಲ್ಲಿಯೂ ಜೀವಾಣುಗಳ ಮರಣ ಮತ್ತು ಪುನಃಸೃಷ್ಟಿಕಾರ್ಯಗಳು ಅವ್ಯಾಹತವಾಗಿ ನಡೆಯುತ್ತಲೇ ಇರುತ್ತವೆ. ಗರ್ಭಾಧಾನದ

ಕ್ಷಣದಿಂದ ಶಿಶುವಿನ ಪ್ರಸವದವರೆಗೆ ಇಪ್ಪತ್ತಾರುಲಕ್ಷಕೋಟಿಯನ್ನು ಮಿಾರಿದ ಜೀವಾಣುಗಳು ಹೀಗೆ ಸೃಷ್ಟವಾಗುತ್ತವೆ. ಈ ಸೃಷ್ಟಿಯ ವೇಗ ಕ್ರಮೇಣ ಕಡಿಮೆಯಾಗುತ್ತಾ ಒಂಬತ್ತನೆಯ ತಿಂಗಳಿನಲ್ಲಿ ಅತ್ಯಂತ ನಿಧಾನವಾಗುತ್ತದೆ. ಒಂಬತ್ತನೆಯ ತಿಂಗಳಿನ ವೇಗದಲ್ಲೇ ಪ್ರಸವದ ನಂತರವೂ ಈ ಸೃಷ್ಟಿಕಾರ್ಯವು ನಡೆದರೂ, ಪುಷ್ಟನಾದ ಮಧ್ಯವಯಸ್ಸಿನ ಮನುಷ್ಯನ ತೂಕ ದಶಲಕ್ಷ ಸೂರ್ಯರಷ್ಟು, ಎಂದರೆ ಸುಮಾರು 2,000,000,000,000,000, 000,000,000,000,000,000 ಟನ್ ಗಳಷ್ಟಾಗುತ್ತದೆ ! ಅವನ ಸುತ್ತಳತೆಯು ಆರುಲಕ್ಷಕೋಟಿ ಮೈಲಿಗಳ ಗಣಕವಾಗುತ್ತದೆ !

ಜೀವಾಣುವಿನ ಬೀಜದಲ್ಲಿ ಬೀಜಗರ್ಭಗಳೇ ಅಲ್ಲದೆ ಬಣ್ಣಗಳನ್ನು ಹೀರಿಕೊಳ್ಳಬಲ್ಲ ಕ್ರೊಮಾಟಿನ್ ಎಂಬ ವಸ್ತುವಿದೆ. ಜೀವಾಣುವು ಇಬ್ಭಾಗವಾಗುವಾಗ ಇದು ದಾರದ ಎಳೆಗಳಂತೆ ಜೀವಾಣುವಿನ ಮಧ್ಯಭಾಗದಲ್ಲಿ ಎರಡು ಸಾಲುಗಳಾಗಿ ನಿಲ್ಲುತ್ತವೆ. ಇಂತಹ ಪ್ರತಿ ತಂತುವಿಗೂ ಕ್ರೋಮೋಸೋಂ ಅಥವಾ ವರ್ಣತಂತು ಎಂದು ಹೆಸರು. ಇವು ಜೀವಾಣುವಿನಲ್ಲಿ ಇಜ್ಜೋಡಿಗಳಾಗಿಯೂ, ಶುಕ್ರ ಮತ್ತು ಶೋಣಿತದ ಜೀವಾಣುಗಳಲ್ಲಿ ಒಂಟಿಗಳಾಗಿಯೂ, ಎಂದರೆ ಸಾಮಾನ್ಯ ಜೀವಾಣುವಿನ ಕ್ರೋಮೋಸೋಂಗಳ ಅರ್ಧದಷ್ಟು ಇರುತ್ತವೆ. ಜೀವಾಣುವಿನಲ್ಲಿ ಇರುವ ಕ್ರೋಮೋಸೋಂ ಜೋಡಿಗಳ ಸಂಖ್ಯೆಯು ಆಯಾ ಪ್ರಾಣಿವರ್ಗಕ್ಕೆ ನಿರ್ದಿಷ್ಟವಾಗಿಯೂ ವಿಶಿಷ್ಟವಾಗಿಯೂ ಇರುತ್ತದೆ. ಆದುದರಿಂದ ಇವುಗಳ ಸಂಖ್ಯೆಯಿಂದ ಆಯಾ ಪ್ರಾಣಿಜಾತಿಯ (ಅಥವಾ ಸಸ್ಯಜಾತಿಯ) ಜೀವಾಣುವನ್ನು ಗುರುತಿಸಬಹುದು. ಇದಕ್ಕೆ ಹ್ಯಾಪ್ಲಾಯ್ಡ್ ಸಂಖ್ಯೆಯೆಂದು ಹೆಸರು. ಹೀಗೆ, ಮನುಷ್ಯನ ಜೀವಕೋಶದಲ್ಲಿ 23 ಕ್ರೋಮೋಸೋಂ ಜೋಡಿಗಳೂ, ಕೋತಿಯದರಲ್ಲಿ 21 ಜೊತೆ, ಹಸುವಿನದರಲ್ಲಿ 30 ಜೊತೆ, ಈರುಳ್ಳಿಯದರಲ್ಲಿ 8 ಜೊತೆ, ಬಾಳೆನೊಣದ್ದರಲ್ಲಿ 4 ಜೊತೆ ವರ್ಣತಂತುಗಳೂ ಇರುತ್ತವೆ. ಮನುಷ್ಯದೇಹದ ಶುಕ್ರದಲ್ಲಿ ಜೀವಾಣುವು ಬಾಲದ ಕಪ್ಪೆಮರಿಯ (ಗೊದಮೊಟ್ಟೆಮರಿಯ) ಆಕಾರದಲ್ಲಿದ್ದು, ಅದರ ತಲೆಯ ಭಾಗದಲ್ಲಿ ವರ್ಣತಂತುಗಳು ಇರುತ್ತವೆ. ಅದರ ಬಾಲದ ಭಾಗವು ಮಿಾನಿನ ಬಾಲದಂತೆ ಚಲನೆಯಲ್ಲಿ ವೇಗಕ್ಕೂ ದಿಕ್ಕಿಗೂ ಸಹಾಯಕವಾಗಿರುತ್ತದೆ. ಈ ಜೀವಾಣುವು ಪುರುಷಸಂಭೋಗೋದ್ರೇಕದಿಂದಾಗಿ ಬಹುವೇಗದಿಂದ ಸ್ತ್ರೀಯೋನಿಯಲ್ಲಿ ಒಗೆಯಲ್ಪಟ್ಟು ಶೋಣಿತಾಣುವನ್ನು ಭೇದಿಸಿ, ಒಳಹೊಕ್ಕು ಫಲಿತಗೊಳಿಸುತ್ತದೆ. ಹೀಗೆ ಕ್ರೋಮೋಸೋಂ ಜೋಡಿಗಳನ್ನೊಳಗೊಂಡ ಜೀವಾಣುವು ನಿರ್ಮಿತವಾದಾಗಲೇ ಗರ್ಭೋತ್ಪತ್ತಿಯಾಗುತ್ತದೆ. ಇದು ತನ್ನ ಸಂತತಿಯನ್ನು ಮೇಲೆ ಹೇಳಿದ ರೀತಿಯಲ್ಲಿ ಬೆಳೆಸಿಕೊಂಡುಹೋಗುತ್ತದೆ.

ಪ್ರತಿ ಜೀವಾಣುವಿನ ಕ್ರೋಮೋಸೋಂಗಳಲ್ಲಿಯೂ ಜೀನ್‌ಗಳೆಂಬ ದಾರದ ತುಂಡಿನಂತಿರುವ ಪದಾರ್ಥಗಳಿರುತ್ತವೆ. ಒಂದು ಅಂಗುಲದ ಹತ್ತುಲಕ್ಷ ಸಮಪಾಲುಗಳಲ್ಲಿ ಐದರಷ್ಟು ಉದ್ದವಿರುವ ಇವು ಪ್ರತಿ ಜೀವಾಣುವಿನಲ್ಲಿಯೂ ಸಮಾರು ಮೂವತ್ತುಸಾವಿರದಷ್ಟು ಇರುತ್ತವೆ. ವ್ಯಕ್ತಿಯ ಸಮಸ್ತ ಗುಣಸಮುದಾಯ, ಸ್ವಭಾವ, ದೇಹದ ಒಳ-ಹಾಗೂ ಹೊರರಚನೆಯ ಅತ್ಯಂತ ಸೂಕ್ಷ್ಮ ವಿವರಗಳು—ಇವೆಲ್ಲವನ್ನೂ ಹುಟ್ಟಿಗಿಂತ ಮುಂಚೆ ನಿರ್ಧರಿಸುವುದು ಈ ಜೀನ್‌ಗಳೇ. ಕಣ್ಣಿನ ಬಣ್ಣ, ಚರ್ಮದ ಬಣ್ಣ, ಮುಖಕಾಂತಿ, ರೋಮ ಮತ್ತು ಕೇಶಗಳ ಸಾಂದ್ರತೆ, ತಲೆಯ ಆಕಾರ, ಮುಖದ ತೇಜಸ್ಸು, ಮಿದುಳಿನ ಸಾಮರ್ಥ್ಯ, ಸಂಗೀತಾಭಿರುಚಿ ಅಥವಾ ಪ್ರಾವೀಣ್ಯತೆ, ಕಂಠಧ್ವನಿಯ ಗುಣ, ಇಷ್ಟೇಕೆ, ಜಾತಿ ಮತ್ತು ವ್ಯಕ್ತಿಯ ಪ್ರತಿಗುಣವನ್ನೂ ವೈಶಿಷ್ಟ್ಯವನ್ನೂ ಉಂಟುಮಾಡಿ ನಿರ್ಧರಿಸುವುದು ಜೀನ್‌ಗಳೇ. ಆಯಾ ಅಂಗಗಳಲ್ಲಿರುವ ಜೀವಾಣುಗಳಲ್ಲಿನ ಆಯಾ ಜೀನ್‌ಗಳು ಆಯಾ ಗುಣ, ಸ್ವಭಾವ, ವೈಶಿಷ್ಟ್ಯ, ದೇಹರಚನಾ ವಿವರ ಮುಂತಾದವುಗಳನ್ನು ನಿರ್ಧರಿಸಿದರೂ, ಪ್ರತಿ ಜೀವಾಣುವಿನಲ್ಲಿಯೂ ಎಲ್ಲ ಜೀನ್‌ಗಳೂ ಇರುವುದರಿಂದ, ವ್ಯಕ್ತಿ ಮತ್ತು ಜಾತಿ ವೈಶಿಷ್ಟ್ಯಗಳು ದೇಹದ ಎಲ್ಲಾ ಭಾಗದಲ್ಲಿಯೂ ಇರುತ್ತವೆ, ಎಂಬ ಬಹು ಸಾರಸ್ಯ ಸಂಗತಿಯು ಜೀವವಿಜ್ಞಾನ ಸಂಶೋಧನೆಯಿಂದ ಹೊರಪಡುತ್ತದೆ.

## 2. ಪಿಂಡೋತ್ಪತ್ತಿ ಪ್ರಕರಣ

ಇತ್ತೀಚಿನವರೆಗೂ ಭ್ರೂಣದ ಲಿಂಗದ ವಿಷಯವು—ಎಂದರೆ ಹುಟ್ಟುವ ಮಗುವು ಹೆಣ್ಣೋ, ಗಂಡೋ, ನಪುಂಸಕವೋ, ಎಂಬುದು—ವಿಜ್ಞಾನದಲ್ಲಿ ಬಗೆಹರಿಯದ ವಿಷಯವಾಗಿತ್ತು. ಪ್ರಾಚೀನ ಭಾರತದಲ್ಲಿ ಹೇಗೋ ಹಾಗೆಯೇ ಕೇವಲ ಊಹಾಪ್ರಧಾನ ನಂಬಿಕೆಗಳೇ ಪಾಶ್ಚಾತ್ಯರಲ್ಲೂ ರೂಢಿಯಲ್ಲಿದ್ದುವು. ರೇತಸ್ಸು-ಆರ್ತವಗಳ ಪರಸ್ಪರ ಪ್ರಮಾಣ, ಭ್ರೂಣವು ಎರಡನೆಯ ತಿಂಗಳಿನಲ್ಲಿ ಇರುವ ಆಕಾರ, ಪ್ರಸವಕಾಲದಲ್ಲಿ ಅದು ಗರ್ಭದಲ್ಲಿ ಇರುವ ಸ್ಥಳ ಮುಂತಾದವುಗಳಿಂದ ಅದರ ಲಿಂಗವನ್ನುಊಹಿಸಲು ನಮ್ಮ ಪೂರ್ವಜರು ಪ್ರಯತ್ನಿಸುತ್ತಿದ್ದುದನ್ನು ಇದೇ ಪ್ರಕರಣದ 23, 24 ಮತ್ತು 41ನೇ ಶ್ಲೋಕಗಳಲ್ಲೂ ಅವುಗಳ ವ್ಯಾಖ್ಯಾನದಲ್ಲೂ ನೋಡಿದ್ದೇವೆ. ಆಧುನಿಕ ಸಂಶೋಧನೆ ಈ ವಿಷಯವಾಗಿ ವಿಶೇಷ ಬೆಳಕನ್ನು ಚೆಲ್ಲುತ್ತದೆ. ಮಾನವಶರೀರದ ಜೀವಾಣುಗಳಲ್ಲಿ ಪ್ರತಿಯೊಂದರಲ್ಲೂ 23 ಜೋಡಿ ಕ್ರೋಮೋಸೋಂಗಳಿರುತ್ತವೆಂದು ಈಗಾಗಲೇ ಹೇಳಿದೆ. ಇವು ಸ್ತ್ರೀ ದೇಹದ ಜೀವಾಣುವಿನಲ್ಲಿ ಮಾತ್ರ ಪರಸ್ಪರ ಸಮಾನವಾಗಿರುತ್ತವೆ. ಇವುಗಳನ್ನು x ಎಂದು ಗುರುತಿಸುತ್ತಾರೆ. ಪುರುಷದೇಹದ ಜೀವಾಣುವಿನಲ್ಲಿ 22 ಕ್ರೋಮೋಸೋಂ ಜೋಡಿಗಳೂ ಪರಸ್ಪರ ಸಮವಾಗಿದ್ದು ಕಡೆಯದು ಯಮಳವಾಗಿ, ಅಂಟಿಕೊಂಡು ಇರುತ್ತದೆ. ಇದರಲ್ಲಿರುವ ಎರಡು ಕ್ರೋಮೋಸೋಂಗಳಲ್ಲಿ ಒಂದು ಮಾಮೂಲಿನ x ಆಗಿದ್ದು, ಇನ್ನೊಂದು ಸ್ವಲ್ಪ ಗಿಡ್ಡಾಗಿರುತ್ತದೆ. ಇದನ್ನು y ಎಂದು ಗುರುತಿಸುತ್ತಾರೆ. ಪುಲ್ಲಿಂಗಸೂಚಕವಾದ ಈ y ತಂತುವು ಜಡವೆಂದು ಸಾಮಾನ್ಯವಾಗಿ ನಂಬಲಾಗಿತ್ತು. ಆದರೆ ಲಿಂಗವೈಪರೀತ್ಯ ಸಂಶೋಧನೆಗಳಿಂದ, ಎಂದರೆ ಹೆಂಗಸರು ಗಂಡಸರಾಗಿ, ಗಂಡಸರು ಹೆಂಗಸರಾಗಿ ಸ್ವಾಭಾವಿಕವಾಗಿಯೋ, ಕೃತಕವಾಗಿಯೋ ಮಾರ್ಪಾಡಾಗುವ ಪ್ರಯೋಗದ ಅನುಭವದಿಂದ, y ತಂತುವು ಪುರುಷವಿಶಿಷ್ಟಗುಣಗಳ ನಿರ್ಮಿತಿಯಲ್ಲಿ ಪ್ರಧಾನಪಾತ್ರವಹಿಸುತ್ತದೆ, ಎಂದು ಸ್ಪಷ್ಟವಾಗಿದೆ. ಫಲಿತವಾದ ಎಂದರೆ ಗರ್ಭಕಟ್ಟುವ, ಜೀವಾಣುವು ಪುರುಷನ ರೇತಸ್ಸಿನ ಜೀವಾಣುವಿನಿಂದ x ಅಥವಾ y ತಂತುವನ್ನು ಪಡೆದಿರಬಹುದು. ಸ್ತ್ರೀಋತುವಿನಿಂದ ಕೇವಲ x ಅನ್ನು ಮಾತ್ರ ಪಡೆಯಬಲ್ಲುದು—ಏಕೆಂದರೆ ಅದರಲ್ಲಿ ಕೇವಲ x ತಂತುಗಳು ಮಾತ್ರ ಇರುತ್ತವೆ. ಹೀಗೆ ಫಲಿತವಾದ ಜೀವಾಣುವಿನಲ್ಲಿ x ತಂತುಗಳು ಮಾತ್ರ ಇದ್ದರೆ ಮಗು ಹೆಣ್ಣಾಗುತ್ತದೆ ; ಒಂದು x, ಒಂದು y ಇದ್ದರೆ ಗಂಡಾಗುತ್ತದೆ. ಇನ್ನು ಕೆಲವುವೇಳೆ, ಯಮಳದಲ್ಲಿ xy ಬದಲು xxy, xxxy, xxxxy ಅಥವಾ xxyy ಇರುವುದುಂಟು. ಇಂತಹವರು ಗಂಡಸರಾಗಿಯೇ ಇದ್ದರೂ, ಮಂದ ಬುದ್ಧಿಯವರಾಗುತ್ತಾರೆ. ಅವರ ವೃಷಣಗಳು ಅಲ್ಪವಾಗಿರುತ್ತವೆ. ಕೆಲವು ಹೆಂಗಸರಲ್ಲಿ ನಲವತ್ತಾರರ ಬದಲು ನಲವತ್ತೈದೇ ವರ್ಣತಂತುಗಳಿರುತ್ತವೆ ; ಅಂತಹವರು ಕುಳ್ಳಾಗುತ್ತಾರೆ, ಬಂಜೆಯರಾಗುತ್ತಾರೆ. ಇನ್ನುಕೆಲವರ ಜೀವಾಣುಗಳಲ್ಲಿ xo, xxx ಅಥವಾ xo, xx, xxx ಗಳು ಬೆರಕೆಯಾಗಿರುತ್ತವೆ. ('o' ಎಂದರೆ ವರ್ಣತಂತು ಇಲ್ಲ ಎಂದಿಟ್ಟುಕೊಳ್ಳಬೇಕು). ಇವರಿಗೆ ತೇಪೆಯವರು ಅಥವಾ ಶಬಲಿತರು ಎಂದು ಹೆಸರು. ಶಬಲಿತರಲ್ಲಿ y ತಂತು ವಿದ್ದರೆ ಅವರು ಗಂಡಸರಾಗುತ್ತಾರೆ, ಇಲ್ಲದವರು ಹೆಂಗಸರು ; ಆದರೆ xxy, xxxy ಮುಂತಾದ ಸಂದರ್ಭಗಳಲ್ಲಿ, x ನ ಪ್ರಾಬಲ್ಯವೇ ಹೆಚ್ಚಾಗಿ ಅಂತಹವರ ಪುರುಷಕ್ರಿಯಾಶಕ್ತಿ ಇಂಗುತ್ತದೆ. ವ್ಯಕ್ತಿಯ ಜೀವಾಣುವಿನಲ್ಲಿ xo ಮತ್ತು xy ಗಳು ಮಿಶ್ರವಾಗಿದ್ದರೆ ಆತನು ದ್ವಿಲಿಂಗಿಯಾಗುತ್ತಾನೆ. ಒಟ್ಟಿನಲ್ಲಿ ಲಿಂಗ ಅದರ ಫಲವಾದ ಗುಣಗಳು, ಸ್ವಭಾವ ಮುಂತಾದವುಗಳು ಕ್ರೋಮೋಸೋಂಗಳಲ್ಲಿರುವ x ಮತ್ತು y ತಂತುಗಳ ಸಂಖ್ಯೆ, ರಚನೆಗಳನ್ನು ಅವಲಂಬಿಸುತ್ತವೆ. ರತಿಕಾಲದಲ್ಲಿ ದೊರೆಯುವ ಅಸಂಖ್ಯಾತ ಶುಕ್ರಾಣು ಮತ್ತು ಶೋಣಿತಾಣುಗಳಲ್ಲಿ ಯಾವುದರ ಸಂಸರ್ಗದಿಂದ ಗರ್ಭೋತ್ಪತ್ತಿಯಾಗುತ್ತದೋ, ಅವುಗಳ ಸ್ವಭಾವದಿಂದ ವ್ಯಕ್ತಿವೈಶಿಷ್ಟ್ಯಗಳು ನಿರ್ಣಯವಾಗುತ್ತವೆ. ಆದುದರಿಂದ ಶಾರ್ಙ್ಗದೇವನು ಅಥವಾ ಇತರ ಆಯುರ್ವೇದಾಚಾರ್ಯರು ಹೇಳುವ ಲಿಂಗನಿರ್ಣಯವನ್ನು ಸ್ಥೂಲವಾದ ದೈಹಿಕಸೂಚನೆಗಳಿಂದೇ ಗ್ರಹಿಸಬೇಕು. ಆದರೆ, ಶಾರ್ಙ್ಗದೇವಾದಿಗಳು ಹೇಳುವ ಷಡ್ಭಾವಗಳನ್ನು ಮೇಲೆ ಹೇಳಿದ ಆಧಾರ ಪ್ರತಿಜ್ಞೆಗಳಿಂದ ಹೇಗೆ ತಾರ್ಕಿಕವಾಗಿ ಪಡೆಯಬಹುದೆಂಬುದು ಸ್ಪಷ್ಟವಾಗಿಯೇ ಇದೆ.

## 2. ಪಿಂಡೋತ್ಪತ್ತಿ ಪ್ರಕರಣ

ವ್ಯಕ್ತಿಯ ವಂಶವಾಹಕ ಗುಣಗಳನ್ನೂ ಮತ್ತಿತರ ವಿವರಗಳನ್ನೂ ಉಂಟುಮಾಡುವ ಜೀನ್‌ಗಳನ್ನುಳ್ಳ ಜೀವಾಣುವು ಇಬ್ಭಾಗವಾಗಿ ಸಂತಾನೋತ್ಪತ್ತಿಮಾಡುತ್ತದೆಂದು ಹೇಳಿದೆಯಷ್ಟೆ. ಜೀನ್‌ಗಳು ಸಂಪೂರ್ಣವಾಗಿ, ಎಲ್ಲ ವಿಧದಲ್ಲಿಯೂ ತಮ್ಮಂತೆಯೇ ಇರುವ ಪ್ರತಿರೂಪುಗಳನ್ನು ಹೇಗೆ ಸೃಷ್ಟಿಸುತ್ತವೆ, ಎಂಬುದೇ ಇಲ್ಲಿಯವರೆಗೆ ಬಗೆಹರಿಯದ ಪ್ರಶ್ನೆಯಾಗಿತ್ತು. ಇದನ್ನು ಮೊಟ್ಟಮೊದಲಬಾರಿಗೆ ಉತ್ತರಿಸಿದ ಕ್ರಿಕ್, ವಾಟ್ಸನ್ ಮತ್ತು ವಿಲ್ಕಿನ್ಸ್‌ರು ಭವಿಷ್ಯತ್ ಜೀವವಿಜ್ಞಾನದ ರೂಪುರೇಖೆಗಳನ್ನೇ ಬದಲಾಯಿಸಿಬಿಡುವಂತಹ ಮಹತ್ತರ ಕಾಣಿಕೆಯನ್ನು ನೀಡಿ, 1962 ನೇ ವರ್ಷದ ನೊಬೆಲ್ ಪಾರಿತೋಷಕವಿಜೇತರಾಗಿದ್ದಾರೆ. ಜೀವಾಣುವಿನ ಬೀಜಗರ್ಭದಲ್ಲಿರುವ—ಕ್ರೋಮ್ಯಾಟಿನ್ ಮತ್ತು ನ್ಯೂಕ್ಲಿಯೋಲಸ್‌ಗಳಲ್ಲಿರುವ—ಪ್ರಧಾನ ರಸಾಯನವಸ್ತುವು ನ್ಯೂಕ್ಲಿಯಿಕ್‌ಆಮ್ಲ ಎಂಬ ಜಾತಿಗೆ ಸೇರಿದ್ದು. ಇಂಗಾಲ, ಜಲಜನಕ, ಆಮ್ಲಜನಕ, ಸಾರಜನಕ ಮತ್ತು ರಂಜಕಗಳ ಲಕ್ಷಾಂತರ ಪರಮಾಣುಗಳು ಸೇರಿ ಆಗಿರುತ್ತದೆ, ಈ ಆಮ್ಲದ ದೈತ್ಯಾಣು. ಅದರೊಳಗೆ ಆರು ಇಂಗಾಲದ, ಹತ್ತು ಜಲಜನಕದ ಮತ್ತು ಐದು ಆಮ್ಲಜನಕದ ಪರಮಾಣುಗಳನ್ನುಳ್ಳ ರೈಬೋಸ್ ಎಂಬ ಶರ್ಕರವಸ್ತುವಿನ ಅಣುವಿನ ಪ್ರಧಾನಾಂಗವೂ ಸೇರಿದ್ದು ಕ್ರೊಮಾಟಿನ್‌ನಲ್ಲಿರುವ ಈ ಆಮ್ಲಕ್ಕೆ ರೈಬೋನ್ಯೂಕ್ಲಿಯಿಕ್‌ಆಮ್ಲ ಎಂದು ಹೆಸರು (Ribonucleic Acid). ಇದನ್ನು RNA ಎಂಬ ಸಂಕೇತದಿಂದ ಕರೆಯುತ್ತಾರೆ. ಇದರಲ್ಲಿರುವ ರೈಬೋಸ್ ಶರ್ಕರಾಣುವು ರಸಾಯನಿಕ ಅಪಕರ್ಷಣದ ಫಲವಾಗಿ ಒಂದು ಪರಮಾಣು ಆಮ್ಲಜನಕವನ್ನು ಕಳೆದುಕೊಂಡಾಗ ಅದು ಡಿ-ಆಕ್ಸಿ-ರೈಬೋನ್ಯೂಕ್ಲಿಯಿಕ್ ಆಸಿಡ್ ಆಗುತ್ತದೆ (Deoxy-ribo Nucleic Acid). ಇದನ್ನು DNA ಎಂಬ ಸಂಕೇತದಿಂದ ಕರೆಯುತ್ತಾರೆ. ವರ್ಣತಂತುವಿನಲ್ಲಿ ವಂಶವಾಹಕಗುಣಗಳಿಗೆ ಕಾರಣವಾಗಿರುವುದು ಇದೇ ಎಂದೂ, ವರ್ಣತಂತುವಿನಲ್ಲಿ DNA ಎಲ್ಲೆಲ್ಲಿದೆ ಎಂಬ ನಕ್ಷೆಯನ್ನೂ ಆಧುನಿಕ ಸಂಶೋಧನೆ ಸಿದ್ಧಪಡಿಸಿದೆ. ಜೀವಾಣುವಿನಲ್ಲಿ DNA ಅಣುಗಳು ಆಮ್ಲಜನಕವನ್ನು ಪಡೆದುಕೊಂಡು RNA ಅಣುಗಳನ್ನು ಸೃಷ್ಟಿಸುತ್ತವೆ. DNA ಅಣುಗಳು ಮಾರ್ಗದರ್ಶನ ಮಾಡುತ್ತಾ RNA ಅಣುಗಳಿಂದ ರಚನಾಕಾರ್ಯಗಳನ್ನು ಮಾಡಿಸುತ್ತವೆ. ಆಗ RNA ಅಣುಗಳು ಜೀವಾಣುವಿನಲ್ಲಿರುವ ಅನೇಕ ಕಿಣ್ವಗಳನ್ನು ಬಳಸಿಕೊಂಡು, ಆಯಾ ರಸಾಯನಿಕ ಕ್ರಿಯೆಗಳ ವೇಗವನ್ನು ವರ್ಧಿಸಿಕೊಂಡು, ಜೀವಾಣುವಿನಲ್ಲಿರುವ ಇತರ ಮೂಲದ್ರವ್ಯಗಳನ್ನೂ ಬಳಸಿಕೊಂಡು, ಬೇಕಾಗಿರುವ ವಸ್ತುವನ್ನು ತಯಾರಿಸಿಕೊಡುತ್ತದೆ. ಉದಾಹರಣೆಗೆ ಮೈಬಣ್ಣದ ರಚನೆಯಾಗಬೇಕಾದಾಗ DNA ಅಣುಗಳಿಂದ ಸೃಷ್ಟವಾದ RNA ಅಣುಗಳು DNA ಗಳ ಮಾರ್ಗದರ್ಶನದಲ್ಲಿ ದೌತ್ಯವನ್ನು ವಹಿಸಿಕೊಂಡು ಜೀವಾಣುಗಳಲ್ಲಿನ ಮೂಲದ್ರವ್ಯಗಳನ್ನೂ, ಸಾಮಗ್ರಿಗಳನ್ನೂ ಕ್ರಿಯಾವೇಗವರ್ಧಕಗಳನ್ನೂ ಬಳಸಿಕೊಂಡು ಮೈಬಣ್ಣಕ್ಕೆ ಕಾರಣವಾದ ವರ್ಣದ್ರವ್ಯವನ್ನು ಸೃಷ್ಟಿಸುತ್ತವೆ. ಈ ಸೃಷ್ಟಿಕಾರ್ಯ ಮುಖ್ಯವಾಗಿ ತನ್ನನ್ನೇ ಮಾದರಿಯಾಗಿಟ್ಟುಕೊಂಡು ವಿವಿಧರೀತಿಯ ಅಣುಗಳು ತಮ್ಮ ಪಡಿಯಚ್ಚುಗಳನ್ನು ಅಸಂಖ್ಯಾತವಾಗಿ ನಿರ್ಮಿಸುವುದರ ಮೂಲಕ ನಡೆಯುತ್ತದೆ. ಇದಕ್ಕೆ ಮೂಲದ್ರವ್ಯವಾದ DNA ಅಣುವು ತನ್ನ ಪ್ರತಿರೂಪನ್ನೇ ಸೃಜಿಸಿಕೊಳ್ಳುವ ರಹಸ್ಯವನ್ನು ಭೇದಿಸಿದ್ದಾದರೂ ಕ್ರಿಕ್ಸ್, ವಾಟ್ಸನ್ ಮತ್ತು ವಿಲ್ಸನ್ನರೇ: DNA ಅಣುವು ರಚನೆಯಲ್ಲಿ ಸುರುಳಿಸುರಳಿಯಾಗಿ ಸುತ್ತಿಕೊಂಡಿದ್ದು ನೂಲೇಣಿಯಂತೆ ಕಾಣುತ್ತದೆ. ಎಲೆಕ್ಟ್ರಾನ್ ಮೈಕ್ರೋಸ್ಕೋಪಿನಲ್ಲಿ ಸುಮಾರು ಆರುಲಕ್ಷದಷ್ಟು ಗಾತ್ರವನ್ನು ಉಪಬೃಂಹಿಸಿ ನೋಡಿದಾಗ, ಈ ಸುರಳಿಯ ಉದ್ದಕ್ಕೆ ಮಧ್ಯದಲ್ಲಿ ಒಂದು ಸರಳರೇಖೆಯನ್ನೆಳೆದರೆ ಆ ರೇಖೆಯ ಎಡ-ಬಲದ ಭಾಗಗಳು ಕನ್ನಡಿಯಲ್ಲಿ ಕಂಡ ಬಿಂಬ ಪ್ರತಿಬಿಂಬಗಳಂತೆ ಸಮಪಾರ್ಶ್ವಗಳಾಗಿರುತ್ತವೆ. ಜೀವಾಣುವು ಇಬ್ಭಾಗವಾಗಿ ಸ್ವನಿರ್ಮಾಣದಲ್ಲಿ ತೊಡಗುವಾಗ, ಪ್ರತಿ DNA ಅಣುವೂ ಮೇಲೆ ಹೇಳಿದ ರೇಖೆಗೆ ಸರಿಯಾಗಿ ಉದ್ದುದ್ದಕ್ಕೆ ತನಗೆ ತಾನೇ ಸೀಳಿಕೊಂಡು ಸುರುಳಿಯು ಬಿಚ್ಚಿಹೋಗಿ ಆಯಾ ಅರ್ಧಸುರುಳಿಗಳ ತುಂಡುಗಳು, ಜೀವಾಣುವಿನ ಎದುರುಬದುರು ಕೊನೆಗಳಿಗೆ ಬೇರೆಬೇರೆಯಾಗಿ ಹೋಗಿ ನಿಲ್ಲುತ್ತವೆ. ಜೀವಾಣುವು ಒಮ್ಮೆ ಜೋರಾಗಿ ಕಂಪಿಸಿ ತನ್ನಲ್ಲಿರುವ ಸಾಮಗ್ರಿಯನ್ನೆಲ್ಲ

ಎಲ್ಲೆಡೆಗೆ ಒಗೆಯುತ್ತದೆ. ಇದಕ್ಕೆ ಮುಂಚೆಯೇ ಬೀಜದ ಪೊರೆಯು ಮಾಯವಾಗಿರುತ್ತದೆ. ಈಗ ಜೀವಾಣುವು ಎರಡಾಗಿ ಒಡೆದುಹೋಗುತ್ತದೆ. ಎರಡು ಸಂತಾನ ಜೀವಾಣುಗಳೂ ಸ್ವಲ್ಪಕಾಲ ರಬ್ಬರ್‌ನಂತಹ ತಂತುಗಳಿಂದ ಸಂಬಂಧಿತವಾಗುತ್ತವೆ. ಸಂತಾನ ಜೀವಾಣುಗಳು ದೂರ ಚಲಿಸಿದ ಹಾಗೆಲ್ಲ ಈ ತಂತುಗಳೂ ಕಿತ್ತುಹೋಗಿ, ಸಂತಾನಗಳು ಬೇರೆಬೇರೆಯಾಗುತ್ತವೆ. ಪ್ರತಿ ಸಂತಾನದಲ್ಲಿಯೂ ಇರುವ ಅರ್ಧ DNA ಅಣುಗಳು ಜೀವಾಣುವಿನಲ್ಲಿಯೇ ಇರುವ ಹೇರಳವಾದ ಆಹಾರ ಸಾಮಗ್ರಿಯಲ್ಲಿರುವ ಪರಮಾಣುಗಳನ್ನು ಬಳಸಿಕೊಂಡು ಕಿಣ್ವಗಳ ಸಹಾಯದಿಂದ ತನಗೆ ಊನವಾಗಿರುವ ಉಳಿದರ್ಧವನ್ನು ಕ್ಷಣಾಂಶದಲ್ಲಿ ನಿರ್ಮಿಸಿಕೊಂಡು ಸ್ವಯಂಪೂರ್ಣವಾಗುತ್ತವೆ. ಈ ಬಗೆಯಲ್ಲಿ ಪ್ರತಿ ಜೀವಾಣುವೂ ಎರಡಾಗಿ ಒಡೆದು ಅದರಲ್ಲಿನ ಪ್ರತಿ ವರ್ಣತಂತುವೂ ಅದರ ದ್ರವ್ಯವಾದ DNA ಅಣುವೂ ತನ್ನ ಅರ್ಧಾಂಶವನ್ನೇ ಮಾದರಿಯನ್ನಾಗಿ ಮಾಡಿಕೊಂಡು ತನ್ನ ಪ್ರತಿ ರೂಪನ್ನೇ ಪುನಃ ಪುನಃ ಸೃಷ್ಟಿಸಿಕೊಳ್ಳುತ್ತದೆ.

ಹೀಗೆ ಹೇಳುವಾಗ ಒಂದು ತಪ್ಪುಭಾವನೆಯುಂಟಾಗಬಹುದು. ಜೀವಾಣು ಅಥವಾ DNA ತನ್ನನ್ನೇ ಸೃಷ್ಟಿಸಿಕೊಳ್ಳುತ್ತದೆ ಎನ್ನುವಾಗ ಅವುಗಳಿಗೆ ಜೀವಿಯ ಮುಖ್ಯಲಕ್ಷಣವಾದ ಉದ್ದೇಶವಿದೆ, ಸಾಮಗ್ರಿಗಳ ಸಂಗ್ರಹ, ವ್ಯವಸ್ಥೆ, ವಿವೇಚನೆ, ಮುಂತಾದ ಗುಣಗಳಿರುತ್ತವೆಂಬ ಭಾವನೆ ಸ್ವಾಭಾವಿಕವಾಗಿಯೇ ಮೂಡುತ್ತದೆ. ಆದರೆ ಜೀವಾಣುವಿನಲ್ಲಿರುವ ಪ್ರತಿಯೊಂದು ವಸ್ತುವೂ ನಿರ್ದಿಷ್ಟ ಸೂತ್ರ, ಸ್ವಭಾವ ಮತ್ತು ಗುಣಗಳನ್ನುಳ್ಳ ರಸಾಯನಿಕ ದ್ರವ್ಯಗಳೆಂದೂ ಪ್ರತಿಯೊಂದೂ ಪ್ರತ್ಯೇಕವಾಗಿ ತೆಗೆದುಕೊಂಡಾಗ ಅತ್ಯಂತ ನಿರ್ಜೀವವಾದ ಜಡವಸ್ತುವೆಂಬುದನ್ನು ನೆನೆಸಿಕೊಂಡರೆ, ಜೀವಿಗೆ ಮೂಲಭೂತವಾದ ಅಹಂಪ್ರಜ್ಞೆಯನ್ನಾಗಲೀ ನಿರಪೇಕ್ಷ ಸಾಮಾನ್ಯ ಪ್ರಜ್ಞೆಯನ್ನಾಗಲೀ ಉಂಟುಮಾಡುವ ವಸ್ತು ಅಥವಾ ಶಕ್ತಿಯಾವುದು, ಎಂಬ ಪ್ರಶ್ನೆ ಹಾಗೆಯೇ ಉಳಿದುಹೋಗುತ್ತದೆ. ಜೀವಾಣುವಿನ ಸೃಷ್ಟಿಯ ಕಾರ್ಯ ಹೇಗೆ ನಡೆಯುತ್ತದೆಂಬುದನ್ನು ಸಂಶೋಧನೆ ತೋರಿಸಿಕೊಡುತ್ತದೆಯೇ ಹೊರತು, ಏಕೆ ನಡೆಯುತ್ತದೆಂಬುದನ್ನು ಹೇಳಲಾರದು. ಜಡವಸ್ತುವಿಗೂ ಸಚೇತನವಸ್ತುವಿಗೂ ಮಧ್ಯದ ಸೇತುವೆ ಇಲ್ಲಿರುವ ಹಾಗೆ ತೋರುತ್ತದೆ. ಹೀಗೆ ದ್ವಿಗುಣಕಾರ್ಯದಿಂದ ಆದ ಸೃಷ್ಟಿ ಅಷ್ಟೇನೂ ರಹಸ್ಯಪೂರ್ಣವಲ್ಲ. ಏಕೆಂದರೆ ಜೀವಾಣುವಿನಲ್ಲಿ ಮೂಲಸಾಮಗ್ರಿಗಳು, ಕಿಣ್ವಗಳು, ಪ್ರಾಯೋಗಿಕ ಸಂದರ್ಭಗಳು, ಇವುಗಳು ದೊರೆತಾಗ RNA ಯಿಂದ DNA ಗೆ ಪರಿವರ್ತನ, DNA ಅರ್ಧವಾಗಿ ಒಡೆಯುವುದು, ಪ್ರತಿ ಅರ್ಧವೂ ಉಳಿದ ದ್ರವ್ಯದೊಡನೆ ಪರಿವರ್ತಿಸಿ ಮೊದಲಿನ ಅಣುವಾಗುವುದು, ಇವುಗಳೆಲ್ಲವನ್ನೂ ನಿರ್ದಿಷ್ಟ ರಸಾಯನಿಕ ಕ್ರಿಯೆಗಳಿಂದ ವಿವರಿಸಲು ಯತ್ನಿಸಬಹುದು. ಆದರೆ ಇದು ಏಕೆ ಹೀಗಾಗುತ್ತದೆ, ಜೀವಾಣುಗಳ ಕೇವಲ ನಿರ್ದಿಷ್ಟ ವ್ಯೂಹರಚನೆಗಳಿಂದ ಅತ್ಯಂತ ಜಟಿಲವೂ, ಕ್ಲಿಷ್ಟವೂ ಆದ ಜೈವಿಕ ವ್ಯಾಪಾರಗಳು ಸ್ವಯಂಚಾಲಿತವಾಗಿ ಹೇಗೆ ನಡೆದುಬಿಡುತ್ತವೆ, ಮಾನವನ ಬುದ್ಧಿಶಕ್ತಿಯಂತಹ ಅತ್ಯಂತ ಸಂಕೀರ್ಣವೂ, ಕ್ಲಿಷ್ಟವೂ ಆಗಿರುವ ವಸ್ತು ಹೇಗೆ ಹುಟ್ಟುತ್ತದೆ, ಅಹಂಪ್ರಜ್ಞೆಯ ಗುಟ್ಟೇನು, ಎಂಬ ಸಮಸ್ಯೆಗಳಿಗೆ ಉತ್ತರಗಳು—ಇದ್ದರೆ—ಅತ್ಯಂತ ವಿಸ್ಮಯಕಾರಿಯಾದವುಗಳು.

ದೇಹದಲ್ಲಿ ಆಕಾಶಭೂತ_ ಗುಣಗಳು

**ಶಬ್ದಂ ಶ್ರೋತ್ರಂ ಸುಷಿರತಾಂ ವೈವಿಕ್ತ್ಯಂ ಸೂಕ್ಷ್ಮಬೋದ್ಧೃತಾಮ್ ।**
**ಬಿಲಂ ಚ ಗಗನಾದ್ವಾಯೋಃ ಸ್ಪರ್ಶಂ ಚ ಸ್ಪರ್ಶನೇಂದ್ರಿಯಮ್** ॥ 57 ॥ 106

ಶಬ್ದ, ಕೇಳುವಿಕೆ, ಸಚ್ಛಿದ್ರತೆ (ಸಣ್ಣ ರಂಧ್ರಗಳಿರುವಿಕೆ), ಪ್ರತ್ಯೇಕತೆ, ಗೋಚರಕ್ಕೆ ಕಷ್ಟವಾದುದನ್ನು ತಿಳಿಯುವಿಕೆ, ಮತ್ತು ಟೊಳ್ಳಾಗಿರುವುದು <ಬಿಲಂ> ಇವುಗಳು ಆಕಾಶದಿಂದ ಹುಟ್ಟಿದವುಗಳು. ವಾಯುವಿನಿಂದ, ಮುಟ್ಟುವಿಕೆ, ಮುಟ್ಟುವ ಇಂದ್ರಿಯ,—

ವಾಯುಗುಣಗಳು

**ಉತ್ಕ್ಷೇಪಣಮವಕ್ಷೇಪಾಕುಂಚನೇ ಗಮನಂ ತಥಾ ।**
**ಪ್ರಸಾರಣಮಿತೀಮಾನಿ ಪಂಚ ಕರ್ಮಾಣಿ ರೂಕ್ಷತಾವತ್ ॥ 58 ॥** 107

- ಎತ್ತುವುದು, ಇಳಿಸುವುದು, ಬಗ್ಗುವುದು, ಹಾಗೆಯೇ ಚಲಿಸುವುದು, ಹರಡುವುದು, ಎಂಬಿವುಗಳು ಐದು ಕೆಲಸಗಳೂ ಒಣಗಿರುವುದೂ (ಒಣಗಿಕೊಂಡಿರುವ ಗುಣವೂ) [ಹುಟ್ಟುತ್ತವೆ].

ದಶಪ್ರಾಣಗಳು

**ಪ್ರಾಣಾಪಾನೌ ತಥಾ ವ್ಯಾನಸಮಾನೋದಾನಸಂಜ್ಞಕಾನ್ ।**
**ನಾಗಂ ಕೂರ್ಮಂ ಚ ಕೃಕರಂ ದೇವದತ್ತಂ ಧನಂಜಯಂ ॥ 59 ॥** 108

ಪ್ರಾಣ-ಅಪಾನಗಳು, ಹಾಗೆಯೇ ವ್ಯಾನ, ಸಮಾನ, ಉದಾನ ಎಂಬ ಹೆಸರಿನವು, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ,—

ಪ್ರಾಣ

**ದಶೇತಿ ವಾಯುವಿಕೃತೀಸ್ತಾ ಗೃಹ್ಣಾತಿ ಲಾಘವಮ್ ।**
**ತೇಷಾಂ ಮುಖ್ಯತಮಃ ಪ್ರಾಣೋ ನಾಭಿಕಂದಾಧಃಸ್ಥಿತಃ ॥ 60 ॥** 109

ವಾಯುವಿನ ಈ ಹತ್ತು ರೂಪಾಂತರಗಳು [ಮತ್ತು] ಹಗುರವಾಗಿರುವುದು, [ಇವುಗಳನ್ನು ಶರೀರವು ವಾಯು ಭೂತದಿಂದ] ತೆಗೆದುಕೊಳ್ಳುತ್ತದೆ. ಅವುಗಳಲ್ಲಿ ಅತ್ಯಂತ ಮುಖ್ಯವಾದುದು ನಾಭಿಕಂದದ (ಹೊಕ್ಕಳು ಗೆಡ್ಡೆಯ) ಕೆಳಗೆ ಇರುವ ಪ್ರಾಣ[ವಾಯು]ವು.

**ಚರತ್ಯಾಸ್ಯೇ ನಾಸಿಕಯೋರ್ನಾಭೌ ಹೃದಯಪಂಕಜೇ ।**
**ಶಬ್ದೋಚ್ಚಾರಣನಿಃಶ್ವಾಸೋಚ್ಛ್ವಾಸಕಾಸಾದಿಕಾರಣಮ್[38] ॥ 61 ॥** 110

[ಅದು] ಮುಖದಲ್ಲಿಯೂ ಮೂಗಿನಹೊಳ್ಳೆಗಳಲ್ಲೂ, ಹೊಕ್ಕುಳಿನಲ್ಲೂ, ಹೃದಯಕಮಲದಲ್ಲೂ ಚಲಿಸುತ್ತದೆ. [ಮತ್ತು] ಶಬ್ದವನ್ನು ಉಚ್ಚರಿಸುವುದು, ಉಸಿರುಬಿಡುವುದು, ಉಸಿರೆಳೆಯುವುದು, ಕೆಮ್ಮು ಮೊದಲಾದವುಗಳು ಉಂಟಾಗಲು ಕಾರಣ[ವಾಗಿದೆ].

ಅಪಾನ

**ಅಪಾನಸ್ತು ಗುದೇ ಮೇಢ್ರೇ ಕಟೀಜಂಘೋದರೇಷು ಚ ।**
**ನಾಭಿಕಂದೇ[39] ವಂಕ್ಷಣಯೋರೂರುಜಾನುನಿ[40] ತಿಷ್ಠತಿ ॥ 62 ॥** 111

ಅಪಾನವಾದರೋ ಆಸನದ್ವಾರ, ಜನನಾಂಗ, ಸೊಂಟ, ಕಾಲು ಮತ್ತು ಹೊಟ್ಟೆ, ಹೊಕ್ಕಳು ಗೆಡ್ಡೆ, ತೊಡೆಸಂದುಗಳು, ತೊಡೆ, ಮೊಣಕಾಲು—ಇವುಗಳಲ್ಲಿ ಇರುತ್ತದೆ.

**ಅಸ್ಯ ಮೂತ್ರಪುರೀಷಾದಿವಿಸರ್ಗಃ ಕರ್ಮ ಕೀರ್ತಿತಃ ।**
**ವ್ಯಾನೋಽಕ್ಷಿಶ್ರೋತ್ರಗುಲ್ಫೇಷು ಕಟ್ಯಾಂ ಘ್ರಾಣೇ ಚ ತಿಷ್ಠತಿ ॥ 63 ॥** 112

ಮೂತ್ರ [ಮತ್ತು] ಮಲ ಮೊದಲಾದವುಗಳನ್ನು ಹೊರಕ್ಕೆ ಸ್ರವಿಸುವುದು ಅದರ ಕೆಲಸ

38 ಕ : ಶಬ್ದೋಚ್ಚಾರಣನಿಃಶ್ವಾಸೌ ಶ್ವಾಸೋಚ್ಛ್ವಾಸಾದಿ ಕಾರಣಮ್ ।

39 ಕ : ನಾಭೌ ಸ್ಕಂಧ.

40 ಗ : ಜಾನುನಿ, ಆದರೆ ಅ, ಕ : ಜಾನುಷು.

ಗಳೆಂದು ಪ್ರಸಿದ್ಧಿಯಾಗಿದೆ. ವ್ಯಾನವು ಕಣ್ಣು, ಕಿವಿ, ಕಾಲಿನ ಹರಡು(ಗಿಣ್ಣು)ಗಳಲ್ಲಿಯೂ ಸೊಂಟದಲ್ಲಿಯೂ ಮೂಗಿನಲ್ಲಿಯೂ ಇರುತ್ತದೆ.

ಸಮಾನ

**ಪ್ರಾಣಾಪಾನಧೃತಿತ್ಯಾಗಗ್ರಹಣಾದ್ಯಸ್ಯ ಕರ್ಮ ಚ ।**
**ಸಮಾನೋ ವ್ಯಾಪ್ಯ ನಿಖಿಲಂ ಶರೀರಂ ವಹ್ನಿನಾ ಸಹ ॥ 64 ॥** 113

ಪ್ರಾಣ [ವಾಯು ಮತ್ತು] ಅಪಾನ[ವಾಯು]ಗಳನ್ನು ಹಿಡಿದು ನಿಲ್ಲಿಸುವುದು, ಹೊರಗೆ ಬಿಡುವುದು, ಒಳಕ್ಕೆ ತೆಗೆದುಕೊಳ್ಳುವುದು ಮೊದಲಾದವುಗಳು ಅದರ (ವ್ಯಾನದ) ಕೆಲಸಗಳು. ಸಮಾನವು ತೇಜಸ್ಸಿನೊಡನೆ ಸೇರಿಕೊಂಡು ದೇಹವನ್ನೆಲ್ಲಾ ವ್ಯಾಪಿಸಿ—

ಮೂತ್ರಪುರೀಷಾದಿ (ಶ್ಲೋ. 63) ಎನ್ನುವಲ್ಲಿ ಆದಿ ಶಬ್ದಕ್ಕೆ ವೀರ್ಯ, ಸ್ಖಲಿತವಾದ ವೀರ್ಯ ಮೊದಲಾಗಿ ಜನನೇಂದ್ರಿಯ ಮತ್ತು ಆಸನದ್ವಾರಗಳ ಮೂಲಕ ಹೊರಪಡಿಸುವ ವಸ್ತುಗಳು (ಬಹುಶಃ ಬೆವರನ್ನೂ ಸೇರಿಸಿ) ಎಂದು ಅರ್ಥಮಾಡಬೇಕು. ಸಿಂಹಭೂಪಾಲನು ಇವುಗಳಲ್ಲಿ ದೂಷಿಕ್ ಎಂಬ ಕಣ್ಣಿನ ಪಿಸುರನ್ನೂ ಹೇಳುತ್ತಾನೆ.[133] 64 ನೇ ಶ್ಲೋಕದಲ್ಲಿ ಗ್ರಹಣಾದಿ ಎಂಬ ಶಬ್ದಕ್ಕೂ ಯೋಗಶಾಸ್ತ್ರದಲ್ಲಿ ಹೇಳಿರುವ ನಕುಲವೇ ಮೊದಲಾದ ವಾಯುಗಳ ಕರ್ಮಗಳೆಂದು ಸಿಂಹಭೂಪಾಲನು ಹೇಳುತ್ತಾನೆ.[134]

**ದ್ವಿಸಪ್ತತಿಸಹಸ್ರೇಷು ನಾಡೀರಂಧ್ರೇಷು ಸಂಚರನ್ ।**
**ಭುಕ್ತಪೀತರಸಾನ್ ಸಮ್ಯಗಾನಯನ್ ದೇಹಪುಷ್ಟಿಕೃತ್ ॥ 65 ॥** 114

ಎಪ್ಪತ್ತೆರಡುಸಾವಿರ ನಾಡಿಗಳಲ್ಲಿರುವ ರಂಧ್ರಗಳಲ್ಲಿ ಸಂಚರಿಸಿ (ಅದು) ತಿಂದ, ಕುಡಿದ [ಆಹಾರದ] ರಸವನ್ನು ಒಯ್ದು ದೇಹದ ಪುಷ್ಟಿಯನ್ನು ಉಂಟುಮಾಡುತ್ತದೆ.

ಈ ಎಪ್ಪತ್ತೆರಡುಸಾವಿರ ನಾಡಿಗಳು ಯೋಗನಾಡಿಗಳಲ್ಲವೆಂಬುದನ್ನು ಗಮನಿಸಬೇಕು. ಯೋಗನಾಡಿಗಳನ್ನು ಇದೇ ಪ್ರಕರಣದಲ್ಲಿ ಮುಂದೆ ಹೇಳಲಾಗುವುದು. ಭೂತಶುದ್ಧಿತಂತ್ರದಲ್ಲಿ ಎಪ್ಪತ್ತೆರಡು ಸಾವಿರ ನಾಡಿಗಳನ್ನೂ ಪ್ರಪಂಚಸಾರತಂತ್ರದಲ್ಲಿ ಮೂರುಲಕ್ಷನಾಡಿಗಳನ್ನೂ ಶಿವಸಂಹಿತೆಯಲ್ಲಿ ಮೂರೂವರೆಲಕ್ಷನಾಡಿಗಳನ್ನೂ ಹೇಳಿದೆ.[135] ಧ್ಯಾನಬಿಂದೂಪನಿಷತ್ತಿನಲ್ಲಿಯೂ ಎಪ್ಪತ್ತೆರಡು ಸಾವಿರ ನಾಡಿಗಳನ್ನು ಮಾತ್ರ ಹೇಳಿದೆ.[136] ಇವುಗಳೆಲ್ಲ ಯೋಗ ನಾಡಿಗಳಲ್ಲ. ಹಲವಾರು, ಸ್ಥೂಲವಾದ ಧಮನಿ, ಸಿರಾ ಮತ್ತು ಸ್ರೋತಗಳು; ಉಳಿದವುಗಳು ಬಹು ಸೂಕ್ಷ್ಮವೂ ದೈವಿಕಶಕ್ತಿವಾಹಕಗಳೂ ಆಗಿರುವ ಯೋಗನಾಡಿಗಳಾಗಿರುತ್ತವೆ.

ಉದಾನ

**ಉದಾನಃ ಪಾದಯೋರಾಸ್ತೇ ಹಸ್ತಯೋರಂಗಸಂಧಿಷು ।**
**ಕರ್ಮಾಸ್ಯ ದೇಹೋನ್ನಯನೋ[41]ತ್ಕ್ರಮಣಾದಿ ಪ್ರಕೀರ್ತಿತಮ್ ॥ 66 ॥** 115

ಉದಾನವು ಹೆಜ್ಜೆಗಳಲ್ಲಿಯೂ, ಕೈಗಳಲ್ಲಿಯೂ, ಅವಯವಗಳ ಕೀಲುಗಳಲ್ಲಿಯೂ ಇದೆ. ಇದರ ಕೆಲಸಗಳು ದೇಹವನ್ನು ಮೇಲಕ್ಕೆತ್ತುವುದು, ಮರಣ, ಮೊದಲಾದವುಗಳೆಂದು ವರ್ಣಿಸಲ್ಪಟ್ಟಿವೆ.

41 ಗ : ನಯನೋ ; ಅದರೆ ಆ : ನಮನೋ.

133 ಸಿಂಹಭೂಪಾಲ, ಉ. ಗ್ರಂ., ಪು. 41.

134 ಅದೇ ಗ್ರಂಥ, ಪು. 42.

135 Arthur Avalon, The Serpent Power, p. 110.

136 ಧ್ಯಾನಬಿಂದೂಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 341.

## 2. ಪಿಂಡೋತ್ಪತ್ತಿ ಪ್ರಕರಣ

ನಾಗಾದಿ ಪಂಚಪ್ರಾಣಗಳು

**ತ್ವಗಾದಿಧಾತೂನಾಶ್ರಿತ್ಯ ಪಂಚ ನಾಗಾದಯಃ ಸ್ಥಿತಾಃ ।**
**ಉದ್ಗಾರಾದಿ ನಿಮೇಷಾದಿ ಕ್ಷುತಪ್ರಭೃತಿ ಚ[42] ಕ್ರಮಾತ್ ॥ 67 ॥** 116

ಚರ್ಮವೇ ಮೊದಲಾದ ಧಾತುಗಳನ್ನು ನಾಗವೇ ಮೊದಲಾದವುಗಳು ಐದು ಅವಲಂಬಿಸಿರುತ್ತವೆ. ಜೊಲ್ಲುಸುರಿಸುವುದು, ಕಣ್ಣುಮಿಟುಕಿಸುವುದು ಮತ್ತು ಹಸಿವು ಮೊದಲಾದವುಗಳು ಕ್ರಮವಾಗಿ—

ತ್ವಗಾದಿ ಎನ್ನುವಲ್ಲಿ ಆದಿಶಬ್ದಕ್ಕೆ ಚರ್ಮದಲ್ಲಿ ನಾಗವೂ, ರಕ್ತದಲ್ಲಿ ಕೂರ್ಮವೂ, ಮಾಂಸದಲ್ಲಿ ಕೃಕರವೂ, ಕೊಬ್ಬಿನಲ್ಲಿ ದೇವದತ್ತವೂ, ಎಲುಬಿನಲ್ಲಿ ಧನಂಜಯವೂ ಇರುತ್ತವೆಂದು ಅರ್ಥ. ಪ್ರಾಣರಸ (ಪ್ಲಾಸ್ಮಾ) ಮತ್ತು ವೀರ್ಯಗಳೆರಡೂ ಸೇರಿ ಇವು ಸಪ್ತಧಾತುಗಳಾಗುತ್ತವೆ. ಉದಾನದ ಕ್ರಿಯೆಗಳಲ್ಲಿ 'ಆದಿ' ಎನ್ನುವುದರಲ್ಲಿ ಬಿಕ್ಕಳು ಮುಂತಾದವೂ ಸೇರಿದೆಯೆಂದು ಸಿಂಹಭೂಪಾಲನು ಹೇಳುತ್ತಾನೆ.[137]

ಈ ದಶಪ್ರಾಣಗಳನ್ನು ಪ್ರಾಚೀನಭಾರತದ ಋಷಿಗಳು ಹೀಗೆ ವಿವರಿಸುತ್ತಾರೆ:

ಪ್ರಾಣಾಪಾನಸ್ಸಮಾನಶ್ಚೋದಾನವ್ಯಾನೌ ಚ ವಾಯವಃ ಪಂಚಕರ್ಮೇಂದ್ರಿಯೈರ್ಯುಕ್ತಾಃ ಕ್ರಿಯಾಶಕ್ತಿಬಲೋದ್ಯತಾಃ । ನಾಗಃ ಕೂರ್ಮಶ್ಚ ಕೃಕರೋ ದೇವದತ್ತೋ ಧನಂಜಯಃ ಪಂಚ ಜ್ಞಾನೇಂದ್ರಿಯೈರ್ಯುಕ್ತಾ ಜ್ಞಾನಶಕ್ತಿಬಲೋದ್ಯತಾಃ ॥[138] ಎಂದೂ

ಪ್ರಾಣಾಪಾನಸಮಾನಾಖ್ಯಾ ವ್ಯಾನೋದಾನೌ ಚ ವಾಯವಃ ।
ನಾಗಃ ಕೂರ್ಮೋಽಥ ಕೃಕರೋ ದೇವದತ್ತೋ ಧನಂಜಯಃ ॥
ಹೃದಿ ಪ್ರಾಣಸ್ಥಿತೋ ನಿತ್ಯಮಪಾನೋ ಗುದಮಂಡಲೇ ।
ಸಮಾನೋ ನಾಭಿದೇಶೇತು ಉದಾನಃ ಕಂಠಮಧ್ಯಗಃ ॥
ವ್ಯಾನಃ ಸರ್ವಶರೀರೇತು ಪ್ರಧಾನಾ ಪಂಚವಾಯವಃ ।
ಉದ್ಗಾರೇ ನಾಗ ಆಖ್ಯಾತಃ ಕೂರ್ಮ ಉನ್ಮಿಲನೇ ತಥಾ ॥
ಕೃಕರಃ ಕ್ಷುತ್ಕರೋ ಜ್ಞೇಯೋ ದೇವದದ್ತೋ ವಿಜೃಂಭಣೇ ।
ನಜಹಾತಿ ಮೃತಂ ವಾಪಿ ಸರ್ವವ್ಯಾಪೀ ಧನಂಜಯಃ[139] ಎಂದೂ

ಸ್ವಲ್ಪ ಭಿನ್ನವಾಗಿರುವ ವರ್ಣನೆಗಳನ್ನು ಅಲ್ಲಲ್ಲಿ ಕಾಣಬಹುದು. ಜಗದೇಕಮಲ್ಲನೂ ಈ ದಶವಾಯುಗಳನ್ನೂ ಅವುಗಳ ಕರ್ಮಗಳನ್ನೂ ಅಲ್ಲಲ್ಲಿ ವ್ಯತ್ಯಾಸಗಳೊಡನೆ ಹೇಳುತ್ತಾನೆ.[59] ವಸಂತರೆಲೆಯು ಪ್ರಾಣಾದಿಪಂಚವಾಯುಗಳನ್ನು ಮಿದುಳಿನಲ್ಲಿಯೂ ಮಿದುಳುಬಳ್ಳಿಯಲ್ಲಿಯೂ ಇರುವ ನರತಂತುಜಾಲಗಳೆಂದೂ· ಶಕ್ತಿಕೇಂದ್ರಗಳೆಂದೂ ತಿಳಿಯುತ್ತಾನೆ. ಆಧುನಿಕ ಶರೀರಶಾಸ್ತ್ರ ದೃಷ್ಟಿಯಲ್ಲಿ ಅವನು ಮುಂದಿನ ಸಮೀಕರಣಗಳನ್ನು ಹೇಳುತ್ತಾನೆ:

---

42 ಕ : ಕ್ಷುತ್‌ಪಿಪಾಸಾದಿಕಂ.

---

137 ಸಿಂಹಭೂಪಾಲ, ಉ. ಗ್ರಂ., ಪು. 42.

138 ಬ್ರಹ್ಮವಿದ್ಯೋಪನಿಷತ್ : ಅಷ್ಟೋತ್ತರಶತ ಉಪನಿಷತ್, ಪು. 349.

139 ಯೋಗಚೂಡಾಮಣ್ಯುಪನಿಷತ್ : ಉ. ಗ್ರಂ., ಪು. 406.

*Prana* has been located in the region between the larynx and the base of the heart. It governs the verbal mechanism and the vocal apparatus, the movements of the gullet, the respiratory system, and the muscles engaged in it. These functions are governed mainly by the cervical portion of the autonomic nervous system.[140]

"Its normal function is to receive all afferent impulses from within and without the body and control unconsciously the activity of the sympathetic fibres. It is situated in the medulla oblongata and governs the respiratory and circulatory function. The last relay in the spinal cord, from which it receives impulses, is situated on a level with the apex of the heart. It is, therefore said to rule the region of the body between the mouth and the heart.[141]

*Apana* has its abode below the navel and rules the automatic action of the kidney, the colon, the rectum, the bladder and the genitals ; i.e., it governs mostly the excretory apparatus of the body. These functions are governed by impulses from the lumbar portion of the autonomic system.[142] Normally it sends efferent impulses to the excretory and ejaculatory mechanisms of the body, as occasion arises. These impulses from prana-apana cause relaxation of the of the anus and the bladder as well as contraction of the muscular portion above them, these actions being necessary for the expulsion of their contents.[143]

*Vyana* is said to pervade the whole body. Its function is to keep the whole body stationary and this stationary condition is due to the balancing action of ihe various antagonistic muscles in the body through the unconscious reflexes that are generated along the whole spinal cord,[144] and through the stimulation of the automatic ganglia situated vertically along the middle of the body.[144]

*Samana* has been located in the region of the body between the heart and the navel and rules the machinery of the metabolism for the maintenance of life, i.e., the secretions of the stomach, the liver, the pancreas and the intestine, as also the circulation of the

140 Vasanta Rele, The Mysterious Kundalini, pp. 50–51.

141 ಅದೇ ಗ್ರಂಥ, ಪ್ಯಾರಾ 62.63.

142 ಅದೇ ಗ್ರಂಥ, ಪ್ಯಾರಾ 62.63.

143 ಅದೇ ಗ್ರಂಥ, ಪು. 52 ; ಪ್ಯಾರಾ 63–64.

144 ಅದೇ ಗ್ರಂಥ, ಪು. 51.

2. ಪಿಂಡೋತ್ಪತ್ತಿ ಪ್ರಕರಣ

blood in the heart and the blood-vessels. This portion is controlled mainly by the splanchnic nerves arising out of the ganglia of the sympathetic portion of the autonomic system in the thoracic region.[144] It inhibits the excessive activity of the digestive tract.[145]

*Udana* rules the region of the body above the larynx. This prana keeps us on the alert as regards our special senses. All the automatic functions of these anatomical sections of the body are under the control of the cephalic division of the autonomic nervous system.

As the thalamus is the highst reflex centre in the brain, and as all its impressions ascend to it, it is called the udana prana.

It must not be supposed that these are the only pranas (reflex centres) that were known to the ancient yogis. They have mentioned five more, naming them the upa-pranas. These are naga, kurma, krikkara, devadatta, and dhananjaya and the stimulation of these causes, respectively, belching, hiccupping, yawning, hunger and dropping of eyelids before sleep. These are all the reflex actions, according to our knowledge of physiology.[146]

ಈ ದಶಪ್ರಾಣಗಳು ನಮ್ಮ ಆಯುರ್ವೇದ ಶಾಸ್ತ್ರಕ್ಕೆ ಆಧಾರಪ್ರತಿಜ್ಞೆಗಳಾಗಿರುವಂತೆಯೇ ಯೋಗಶಾಸ್ತ್ರಕ್ಕೆ ತಳಹದಿಯಾಗಿವೆ. ಆದರೆ ಇವುಗಳು ಕೇವಲ ಸೂಕ್ಷ್ಮಗಳೆಂಬುದನ್ನು ನಾವು ಗಮನಿಸಬೇಕು. ವಸಂತರೆಲೆಯು ಮೇಲೆ ಹೇಳುವ ಸ್ಥೂಲಾರ್ಥಗಳಲ್ಲಿ ಇವುಗಳನ್ನು ತಿಳಿಯಲಾಗದು. ಅವನು ವರ್ಣಿಸಿರುವ ಸ್ಥೂಲವೂ ಭೌತಿಕವೂ ಆಗಿರುವ ಸ್ಥಾನಗಳಿಗೆ ಪರಸ್ಪರವೂ ಅಗೋಚರವೂ ಕ್ಲಿಪ್ತವೂ ಆಗಿರುವ ದೈವಿಕವಾದ ಶಕ್ತಿಜಾಲಗಳೆಂದು ಭಾವಿಸಿದರೆ ಹೆಚ್ಚು ವಿಪರೀತಾರ್ಥವಾಗುವುದಿಲ್ಲ. ಅಲ್ಲದೆ, ವಸಂತರೆಲೆಯು ಮಿದುಳಿನ ಥ್ಯಾಲಮಸ್ ಎಂಬ ಭಾಗಕ್ಕೆ ಉದಾನವನ್ನು ಹೇಳಿರುವುದು ಸರಿಯಲ್ಲವೆಂದು ತೋರುತ್ತದೆ. ಇದಕ್ಕೆ ಮುಂದೆ ಹೇಳುವ ಮನಶ್ಚಕ್ರವು ಶಾರೀರಕವಾಗಿ ಸಾಟಿಯಾಗಿರುವುದೆಂದು ನನ್ನ ಅಭಿಪ್ರಾಯ ಅವನು ಉಪಪ್ರಾಣಗಳಿಗೆ ಹೇಳುವ ಕರ್ಮಗಳಲ್ಲಿನ ಕ್ರಮವಾಗಲೀ ಸಮಾಕರಣವಾಗಲೀ ಬಹುಸಮ್ಮತಿಯನ್ನು ಪಡೆದಿಲ್ಲ.

ತೇಜೋಗುಣಗಳು

**ತಂದ್ರಾಪ್ರಭೃತಿ ಶೋಫಾದಿ[43] ತೇಷಾಂ ಕರ್ಮ ಪ್ರಕೀರ್ತಿತಮ್ ।**
**ಅಗ್ನೇಸ್ತು ಲೋಚನಂ ರೂಪಂ ಪಿತ್ತಂ ಪಾಕಂ ಪ್ರಕಾಶತಾಮ್** ॥ 68 ॥ 117

ಸೋಮಾರಿತನ ಮೊದಲಾದವುಗಳು, ಊದಿಕೊಳ್ಳುವುದು ಮೊದಲಾದವುಗಳು ಅವುಗಳ ಕೆಲಸಗಳೆಂದು ವರ್ಣಿಸಲ್ಪಟ್ಟಿವೆ. ತೇಜೋಭೂತದಿಂದ<ಅಗ್ನೇಸ್ತು>ಲಾದರೋ ಕಣ್ಣು, ಆಕಾರ, ಪಿತ್ತ[ದೋಷ], ಜೀರ್ಣವಾಗುವುದು, ಗೆಲುವಾಗಿರುವುದು <ಪ್ರಕಾಶತಾಮ್>,—

43 ಕ : ಮೋಹಾದಿ.

145 ಅದೇ ಗ್ರಂಥ, ಪು. 53, ಪ್ಯಾರಾ 64-65.

146 ಅದೇ ಗ್ರಂಥ, ಪ್ಯಾರಾ 66–68.

ಜಲಭೂತದ ಗುಣಗಳು

**ಅಮರ್ಷಂ ತೈಕ್ಷ್ಣ್ಯಮೂಷ್ಮಾಣಮೋಜಸ್ತೇಜಶ್ಚ ಶೂರತಾಮ್ ।**
**ಮೇಧಾವಿತಾಂ ತಥಾಽಽದತ್ತೇ ಜಲಾತ್ತು ರಸನಂ ರಸಮ್ ॥ 69 ॥** 118

—ಕೋಪ, ಸಹಿಸದಿರುವಿಕೆ, ಬೆವರುಬರುವಂತೆ ಸೆಕೆಯಾಗುವುದು, ಚೇತನ <ಓಜಃ>, ಮುಖವರ್ಚಸ್ಸು <ತೇಜಃ> ಮತ್ತು ಶೂರನಾಗಿರುವುದು, ಅಂತೆಯೇ ಬುದ್ಧಿವಂತನಾಗಿರುವುದು [ಇವುಗಳನ್ನು ದೇಹವು] ಪಡೆದುಕೊಂಡಿದೆ. ಜಲಭೂತದಿಂದಾದರೋ ರುಚಿಯ ಇಂದ್ರಿಯ, ರುಚಿ,—

ಓಜಸ್ಸು ಎಂಬುದಕ್ಕೆ ಈ ಹಿಂದೆಯೇ ಅರ್ಥವನ್ನು ಹೇಳಿದೆ: ಎಲ್ಲ ಕ್ರಿಯೆಗಳಿಗೂ ಶಕ್ತಿಯನ್ನೊದಗಿಸುವ ಮತ್ತು ಅಂಗಪ್ರತ್ಯಂಗಗಳಿಗೆ ಪುಷ್ಟಿಯನ್ನೊದಗಿಸುವ ರಸವೇ ಓಜಸ್ಸು. 'ಊಷ್ಮಾಣಂ' ಎನ್ನುವುದಕ್ಕೆ ಶಾಖ ಎಂದೂ ತೇಜಃ ಎನ್ನುವುದಕ್ಕೆ ವ್ಯಕ್ತಿತ್ವ ಎಂದೂ ಕುನ್ಹನ್‌ರಾಜಾ ಅರ್ಥಮಾಡುತ್ತಾನೆ[147]. ತೇಜಸ್ಸು ಎನ್ನುವುದಕ್ಕೆ ಮುಖದಲ್ಲಿ ಒಡೆದು ಕಾಣುವ ಆತ್ಮಶಕ್ತಿ, ವರ್ಚಸ್ಸು ಎಂದೇ ಇಲ್ಲಿ ಹೆಚ್ಚು ಸೂಕ್ತವಾಗಿದೆ.

ಪೃಥ್ವೀಗುಣಗಳು

**ಶೈತ್ಯಂ ಸ್ನೇಹಂ ದ್ರವಂ ಸ್ವೇದಂ ಮೂತ್ರಾದಿ ಮೃದುತಾಮಪಿ ।**
**ಭೂಮೇರ್ಘ್ರಾಣೇಂದ್ರಿಯಂ ಗಂಧಂ ಸ್ಥೈರ್ಯಂ ಧೈರ್ಯಂ ಚ ಗೌರವಮ್॥70॥** 119

—ತಣ್ಣಗಿರುವುದು, ಜಿಡ್ಡಾಗಿರುವುದು, ನೀರಾಗಿ(ದ್ರವವಾಗಿ)ರುವುದು, ಬೆವರು, ಮೂತ್ರ ಮೊದಲಾದವು ಹಾಗೂ ಮೃದುವಾಗಿರುವುದು (ಇವುಗಳನ್ನು ದೇಹವು ಪಡೆಯುತ್ತದೆ). ಭೂಮಿ (ಪೃಥ್ವೀ) ಭೂತದಿಂದ ವಾಸನೆ ನೋಡುವ ಇಂದ್ರಿಯ, ವಾಸನೆ, ಅಲುಗಾಡದೆ ಇರುವುದು, ಧೈರ್ಯ ಮತ್ತು ಭಾರವಾಗಿರುವುದು,

ಗೌರವವೆಂಬ ಶಬ್ದಕ್ಕೆ ಗಂಭೀರತೆ ಎಂಬ ಸಮಾಕರಣವನ್ನು ಕುನ್ಹನ್‌ರಾಜಾ ಕೊಡುತ್ತಾನೆ.[147] ಪೃಥ್ವೀ ಭೂತದಿಂದ ಉದ್ಭವಿಸುವುದರಿಂದಲೂ ಗುರುಶಬ್ದಮೂಲವಾಗಿಯೂ ಇರುವುದರಿಂದ ಭಾರ ಎಂಬ ಅರ್ಥವೇ ಇಲ್ಲಿ ಹೆಚ್ಚು ಸೂಕ್ತವಾಗಿದೆ.

**ಶ್ಮಶ್ರುಕೇಶನಖಂ ದಂತಾನ್ ಅಸ್ಥ್ಯಾದ್ಯನ್ಯಚ್ಚ ಕರ್ಕಶಮ್ ।**
**ವಾತಾದಿಧಾತುಪ್ರಕೃತಿರ್ವ್ಯೋಮಾದಿಪ್ರಕೃತಿಸ್ತಥಾ ॥ 71 ॥** 120

ಗಡ್ಡ-ಮೀಸೆ, ತಲೆಗೂದಲು, ಉಗುರು, ಹಲ್ಲುಗಳು, ಎಲುಬು ಮೊದಲಾದವುಗಳನ್ನು ಮತ್ತು ಉಳಿದ ಒರಟಾದವುಗಳನ್ನು (ದೇಹವು ಪಡೆದುಕೊಂಡಿದೆ). [ಇವುಗಳೇ ಅಲ್ಲದೆ] ವಾತವೇ ಮೊದಲಾದ ಧಾತುಪ್ರಕೃತಿಗಳೂ ಹಾಗೆಯೇ ಆಕಾಶವೇ ಮೊದಲಾದ ಪ್ರಕೃತಿಗಳೂ ಇವೆ.

ಈವರೆಗೂ ದೇಹವನ್ನು ವಿವಿಧ ಆಧಾರಗಳಿಂದ ವರ್ಗೀಕರಣವನ್ನು ಮಾಡಿದಮೇಲೆ ಶಾರ್ಙ್ಗದೇವನು ಬೇರೆ ವಿಧದ ಶರೀರಗಳನ್ನೂ ಸೂಚಿಸುತ್ತಾನೆ. ಪಿತ್ತ, ವಾತ, ಕಫವೆಂಬವುಗಳು ಶರೀರದ ಧಾತುಗಳು. ಇವುಗಳನ್ನು ಮನುಷ್ಯದೇಹದ ಸ್ವಭಾವಕ್ಕೂ ಕ್ರಿಯೆಗಳಿಗೂ ಕಾರಣವಾದ ತ್ರಿದೋಷವೆಂದು ಆಯುರ್ವೇದದಲ್ಲಿ ಹೇಳಿದೆ. ಆಕಾಶಾದಿ ಪಂಚಭೂತಗಳಿಂದ ಹುಟ್ಟಿ ಅವುಗಳಿಗೆ ಅನುಗುಣವಾಗಿ ದೇಹಗುಣಗಳನ್ನು ಪಡೆದುಕೊಳ್ಳುವ ದೇಹವು ಇನ್ನೊಂದು ಬಗೆಯದು. ಸಾತ್ತ್ವಿಕ, ರಾಜಸ, ತಾಮಸಗಳೆಂಬ ಗುಣತ್ರಯದ ವಿಭಾಗದಿಂದಾದ ಶರೀರಭೇದವೂ ಬೇರೆ ಇದೆ.

147 ಕುನ್ಹನ್‌ರಾಜಾ, ಉ. ಗ್ರಂ., ಪು. 26.

## 2. ಪಿಂಡೋತ್ಪತ್ತಿ ಪ್ರಕರಣ

59 ನೇ ಶ್ಲೋಕದಿಂದ 71 ನೇ ಶ್ಲೋಕದವರೆಗೆ ಶಾರ್ಙ್ಗದೇವನು ಹೇಳುವ ವಿವರಗಳು ನನಗೆ ಬೇರೆ ಯಾವ ಆಯುರ್ವೇದಾಚಾರ್ಯರಲ್ಲಿಯೂ ದೊರೆಯಲಿಲ್ಲ. ಆದರೆ ಮಾನುಷಶರೀರವನ್ನು ವರ್ಣಿಸುವ ಕೆಲವು ಉಪನಿಷತ್ತುಗಳಲ್ಲಿ ಇಂತಹ ವರ್ಣನೆಯಿದೆ. ಉದಾಹರಣೆಗೆ, ಅಥರ್ವವೇದದ ಶಾಂಡಿಲ್ಯೋಪನಿಷತ್ತು ಪ್ರಾಣಾದಿ ದಶಪ್ರಾಣಗಳ ಸ್ಥಾನಗಳನ್ನೂ ಕರ್ಮಗಳನ್ನೂ ಚೆನ್ನಾಗಿ ವಿವರಿಸುತ್ತದೆ :

ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬ ಹತ್ತು ವಾಯುಗಳು ಎಲ್ಲ ನಾಡಿಗಳಲ್ಲಿಯೂ ಸಂಚರಿಸುತ್ತವೆ. ಪ್ರಾಣವು ಮುಖ, ಮೂಗು, ಕಂಠ, ಹೊಕ್ಕುಳು, ಕಾಲಿನ ಹೆಬ್ಬೆರಳುಗಳು ಮತ್ತು ಕಿವಿಯ ಮೇಲೆ–ಕೆಳಗೆ ಸಂಚರಿಸುತ್ತದೆ. ವ್ಯಾನವು ಕಿವಿ, ಕಣ್ಣು, ಸೊಂಟ, ಕಾಲಿನ ಹರಡು, ಅನ್ನನಾಳ, ಪಿರ್ರೆಗಳು— ಈ ಪ್ರದೇಶಗಳಲ್ಲಿ ಸಂಚರಿಸುತ್ತದೆ. ಆಸನದ್ವಾರ, ಜನನಾಂಗ, ತೊಡೆ, ಮೊಣಕಾಲು, ಹೊಟ್ಟೆ, ಬೀಜ, ಸೊಂಟ, ಕಾಲು, ಹೊಕ್ಕುಳು, ಇವುಗಳಲ್ಲಿ ಅಪಾನವು ಸಂಚರಿಸುತ್ತದೆ. ಎಲ್ಲಾ ಕೀಲುಗಳಲ್ಲಿಯೂ ಉದಾನವಿರುತ್ತದೆ. ಸಮಾನವು ಎಲ್ಲಕಡೆಯೂ ವ್ಯಾಪಿಸಿದೆ ; ಅದು ಅನ್ನರಸ ಮತ್ತು ಅಗ್ನಿಗಳನ್ನು ಎಪ್ಪತ್ತೆರಡುಸಾವಿರ ನಾಡಿಗಳ ಮೂಲಕ ದೇಹದ ಎಲ್ಲಾ ಭಾಗಗಳಿಗೂ ಒಯ್ಯುತ್ತದೆ. ನಾಗವೇ ಮೊದಲಾದ ಐದು ಎಲುಬು ಮುಂತಾದವುಗಳಲ್ಲಿ ಹುಟ್ಟುತ್ತವೆ. . . . . ನಿಶ್ವಾಸ, ಉಚ್ಛ್ವಾಸ, ಕೆಮ್ಮು ಇವುಗಳು ಪ್ರಾಣದ ಕೆಲಸಗಳು. ಜಲಮಲವಿಸರ್ಜನೆಗಳು ಅಪಾನದ್ದು. ವಿಸರ್ಜನೆ ಮತ್ತು ಸ್ವೀಕಾರಗಳು ವ್ಯಾನದ ಕೆಲಸಗಳು. ದೇಹವನ್ನು ಮೇಲಕ್ಕೆತ್ತುವುದೇ ಮೊದಲಾದವುಗಳು ಉದಾನದ ಕೆಲಸಗಳು. ಶರೀರವನ್ನು ಪೋಷಿಸುವುದು ಸಮಾನದ ಕೆಲಸ. ವಾಂತಿ, ಕಕ್ಕುವುದು, ಉಗುಳುವುದು ಮೊದಲಾದವುಗಳು ನಾಗದ ಕೆಲಸಗಳು. ಕಣ್ಣು ಮಿಟುಕಿಸುವುದು ಇತ್ಯಾದಿಯಾಗಿ ಕೂರ್ಮದ್ದು ; ಹಸಿವುಂಟುಮಾಡುವುದು ಕೃಕರದ್ದು ; ಸೋಮಾರಿತನ (ಸುಸ್ತಾಗುವುದು ?) ದೇವದತ್ತದ್ದು ; ಶ್ಲೇಷ್ಮವೇ ಮೊದಲಾದುವನ್ನು ಉಂಟುಮಾಡುವುದು ಧನಂಜಯ ವಾಯುವಿನ ಕರ್ಮ[148].

ಇಂತಹ ವಿವರಗಳನ್ನು ಯಜುರ್ವೇದದ ಶಾರೀರಕೋಪನಿಷತ್ತೂ ಒಳಗೊಂಡಿದೆ[149].

ವ್ಯಾನದ ಕ್ರಿಯೆಯನ್ನು ಹೃದಯಕ್ಕೆ ಬಂದ ಅನ್ನರಸವನ್ನು ಹತ್ತು ಸಿರೆಗಳ ಮೂಲಕ ದೇಹಕ್ಕೆಲ್ಲಾ ಹಂಚುವುದು ಎಂದೂ ಸಮಾನದ ಕ್ರಿಯೆಯನ್ನು ಆಹಾರವನ್ನು ಜೀರ್ಣಮಾಡಿ ಅನ್ನರಸವಾಗಿ ಮಾಡುವುದು ಎಂದೂ ವಾಗ್ಭಟನು ಹೇಳುತ್ತಾನೆ[150].

ದೇಹಪ್ರಕೃತಿಯನ್ನು ಪಾಂಚಭೌತಿಕವಾಗಿ ನಿರ್ಧರಿಸಿರುವ ಕ್ರಮವನ್ನು ಸುಶ್ರುತಸಂಹಿತೆಯಲ್ಲಿ ಹೇಳಿದೆ :

ಪ್ರಕೃತಿಮಿಹ ನರಾಣಾಂ ಭೌತಿಕೀಂ ಕೇಚಿದಾಹುಃ
ಪವನದಹನತೋಯೈಃ ಕೀರ್ತಿತಾಸ್ತಾಸ್ತು ತಿಸ್ರಃ ।
ಸ್ಥಿರವಿಪುಲಶರೀರಃ ಪಾರ್ಥಿವಶ್ಚ ಕ್ಷಮಾವಾನ್
ಶುಚಿರಥ ಚಿರಜೀವೀ ನಾಭಸಃ ಖೈರ್ಮಹದ್ಭಿಃ ॥ [151]

---

148 ಶಾಂಡಿಲ್ಯೋಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 497–498.

149 ಶಾರೀರಕೋಪನಿಷತ್, ಅದೇ ಗ್ರಂಥ, ಪು. 548–550.

150 ವಾಗ್ಭಟ, ಉ. ಗ್ರಂ., III, 68, 70, 73, 76. ಪು. 54–55.

151 ಸುಶ್ರುತ, ಉ. ಗ್ರಂ., IV, 80, ಪು. 72.

## 2. ಪಿಂಡೋತ್ಪತ್ತಿ ಪ್ರಕರಣ

ವಾತಾದಿ ಧಾತುಗಳು ಮನುಷ್ಯಸ್ವಭಾವವನ್ನು ಪ್ರಭಾವಗೊಳಿಸುವ ಬಗ್ಗೆ ಸುಶ್ರುತನು ವಿವರವಾಗಿ ಬರೆಯುತ್ತಾನೆ. ಉದಾಹರಣೆಗೆ, ವಾತಶರೀರಿಗೆ ರಾತ್ರಿ ಎಚ್ಚರ, ಶೀತವಸ್ತುಗಳ ದ್ವೇಷ, ಕುರೂಪ, ಅಸೂಯೆ, ಗೀತವಾದ್ಯಗಳಲ್ಲಿ ಪ್ರೀತಿ, ಅಂಗೈ, ಅಂಗಾಲುಗಳ ಒಡೆತ, ಅಲ್ಪವಾದ ಮತ್ತು ಒಣಕೂದಲು, ಕೋಪ, ಉಗುರುಗಳನ್ನೂ, ಹಲ್ಲುಗಳನ್ನೂ ಕಡಿಯುವುದು ಇತ್ಯಾದಿ ಗುಣಗಳಿರುತ್ತವೆ. ಅವನ ಸ್ವಭಾವವು ಆಡು, ಒಂಟೆ, ಕಪ್ಪೆ, ನಾಯಿ, ಹದ್ದು, ಕಾಗೆ, ಕತ್ತೆ ಮುಂತಾದವುಗಳನ್ನು ಹೋಲುತ್ತದೆ[152].

ಪಿತ್ತಶರೀರಿಗೆ ದುರ್ಗಂಧ, ಬೆವರು, ಹಳದಿಯ ಮೈ ಬಣ್ಣ, ಶಿಥಿಲವಾದ ಕೈಕಾಲುಗಳು, ಉಗುರು, ಕಣ್ಣು, ಅಂಗಳು, ನಾಲಿಗೆ, ತುಟಿ, ಅಂಗಾಲುಗಳಲ್ಲಿ ಕೆಂಪು, ಅತಿ ಆಹಾರ, ಅತೃಪ್ತಿ, ಮುಂಗೋಪ, ಸಾಮಾನ್ಯವಾದ ಆಯಸ್ಸು ಇತ್ಯಾದಿ ಗುಣಗಳಿರುತ್ತವೆ. ಆದರೆ ಪ್ರಕೃತಿಯು ಅನುಕೂಲವಾದಾಗ ಸೃಷ್ಟಿಪರನೂ, ವಾಗ್ಮಿಯೂ, ಶಕ್ತಿಶಾಲಿಯೂ, ಯುದ್ಧಗಳಲ್ಲಿ ಅಜೇಯನೂ ಆಗುತ್ತಾನೆ. ಇವನ ಸ್ವಭಾವವು ಹಾವು, ಗೂಬೆ, ಗಂಧರ್ವ ಅಥವಾ ಯಕ್ಷ, ಬೆಕ್ಕು, ಕೋತಿ, ಹುಲಿ, ಕರಡಿ ಅಥವಾ ಮುಂಗುಸಿಯನ್ನು ಹೋಲುತ್ತದೆ.[153]

ಕಫಶರೀರಿಗೆ, ನೀಲಿ, ಹಸುರು ಬಣ್ಣಗಳೂ, ಸುಂದರಾಕೃತಿಯೂ, ಸಿಹಿ ತಿನಿಸುಗಳಲ್ಲಿ ಪ್ರೀತಿಯೂ, ಕೃತಜ್ಞತೆಯೂ, ಧೈರ್ಯವೂ, ಕಷ್ಟಸಹಿಷ್ಣುತೆಯೂ, ದೃಢಕಾಯವೂ, ಒಳ್ಳೆಯ ಜ್ಞಾಪಕಶಕ್ತಿಯೂ, ತನಗೆ ಆದ ಅಪಚಾರವನ್ನು ಮರೆಯದಿರುವುದೂ, ಶುಭ್ರವಾದ ಬಿಳಿಯ ಕಣ್ಣುಗುಡ್ಡೆಗಳೂ, ಗಂಭೀರವಾದ ಧ್ವನಿಯೂ ಇರುತ್ತವೆ. ವಿಜ್ಞಾನದಲ್ಲಿಯೂ, ಸ್ನೇಹಿತರನ್ನು ಉಂಟುಮಾಡಿಕೊಳ್ಳುವುದರಲ್ಲಿಯೂ, ಸಂಪತ್ ಸಾಧನದಲ್ಲಿಯೂ ಅವನಿಗೆ ಅಭಿರುಚಿಯಿರುತ್ತದೆ. ಅವನು ದೇವತೆಗಳಲ್ಲಿ ಬ್ರಹ್ಮ, ಇಂದ್ರ, ವರುಣರನ್ನೂ, ಮೃಗಗಳಲ್ಲಿ ಸಿಂಹ, ಕುದುರೆ, ಆನೆ, ಗೂಳಿ, ಗರುಡಪಕ್ಷಿ ಅಥವಾ ಹಂಸವನ್ನೂ ಹೋಲುತ್ತಾನೆ.[154]

ಸಾತ್ವಿಕ ದೇಹಗಳ ವಿಧಗಳು

**ಸಪ್ತಧಾ ಸಾತ್ತ್ವಿಕೋ ಯಶ್ಚ ಬ್ರಹ್ಮೇಂದ್ರಯಮವಿಗ್ರಹಃ ।**
**ವಾರುಣಶ್ಚಾಥ ಕೌಬೇರ ಆರ್ಷೋ ಗಾಂಧರ್ವವಿಗ್ರಹಃ ॥ 72 ॥** 121

ಸಾತ್ತ್ವಿಕದೇಹವು ಬ್ರಹ್ಮ, ಇಂದ್ರ, ಯಮ, ಆಮೇಲೆ ವರುಣ, ಕುಬೇರ, ಋಷಿ, ಗಂಧರ್ವ, ಎಂದು ಏಳು ಬಗೆ.

**ರಾಜಸಃ ಷಡ್ವಿಧೋ ಯಶ್ಚ[44] ಪೈಶಾಚೋ ರಾಕ್ಷಸಸ್ತಥಾ ।**
**ಆಸುರಃ ಶಾಕುನಃ ಸಾರ್ಪಃ ಪ್ರೇತದೇಹಸ್ತಥಾ ಪರಃ ॥ 73 ॥** 122

ರಾಜಸದೇಹವು ಪಿಶಾಚಿ, ರಾಕ್ಷಸ, ಅಸುರ, ಪಕ್ಷಿ, ಹಾವು, ಮುಂದಿನದು ಪ್ರೇತ, ಹೀಗೆ ಆರುವಿಧ.

**ತಾಮಸಸ್ತ್ರಿವಿಧೋ ಯಶ್ಚ ಪಶುಮತ್ಸ್ಯಾಂಘ್ರಿಪಾಕೃತಿಃ ।**
**ತೇಷಾಂ ಲಕ್ಷ್ಮಾಣಿ ನ ಬ್ರೂಮೋ ಗ್ರಂಥವಿಸ್ತರಕಾತರಾಃ ॥ 74 ॥** 123

44 ಅ : ಯಕ್ಷ ?

152 ಅದೇ ಗ್ರಂಥ, IV, 60-67, ಪು. 67-69.
153 ಅದೇ ಗ್ರಂಥ, IV, 68-71, ಪು. 69-70.
154 ಅದೇ ಗ್ರಂಥ, IV, 72-76, ಪು. 70.

## 2. ಪಿಂಡೋತ್ಪತ್ತಿ ಪ್ರಕರಣ

ತಾಮಸದೇಹವು ಮೃಗ, ಮೀನು, ಮರ, ಎಂಬ ಆಕಾರದ ಮೂರುವಿಧ. ಅವುಗಳ ಲಕ್ಷಣ ಗಳನ್ನು ಗ್ರಂಥವು [ಬಹು] ವಿಸ್ತಾರವಾದೀತೆಂದು ಆತಂಕಪಡುವ ನಾವು ಹೇಳುವುದಿಲ್ಲ.

ಅಂಘ್ರಿಪಾ ಎಂಬುದಕ್ಕೆ ಕುನ್ಹನ್‌ರಾಜಾ ಆನೆ ಎಂದು ಹೇಳುತ್ತಾನೆ.[155] ಚರಕನನ್ನು ಅನುಸರಿಸಿ ಮರ, ಎಂದೇ ನಾನು ಅರ್ಥಮಾಡುತ್ತೇನೆ.

ಸಾತ್ತ್ವಿಕ, ರಾಜಸ, ತಾಮಸಗುಣಗಳ ಕ್ರಮದಿಂದ ದೇಹಪ್ರಕೃತಿಯನ್ನು ನಿರ್ಧರಿಸುವ ಈ ಪದ್ಧತಿಯನ್ನು ಶಾರ್ಙ್ಗದೇವನು ಚರಕನಿಂದಲೇ ಪಡೆದುಕೊಂಡಿದ್ದಾನೆ. ಇದನ್ನು ಚರಕಸುಶ್ರುತರ ಹೊರತು ಬೇರೆ ಆಯುರ್ವೇದಾ ಚಾರ್ಯರು ಹೇಳಿರುವುದು ನನಗೆ ಗೊತ್ತಿಲ್ಲ. ಚರಕಮತದಂತೆ ಈ ವರ್ಗಗಳನ್ನು ಗ್ರಂಥಪೂರ್ತಿಗಾಗಿ ಸಂಕ್ಷೇಪವಾಗಿ ವಿವರಿಸಲಾಗುವುದು :

ಬ್ರಾಹ್ಮದೇಹವು ಶುಚಿ, ಸತ್ಯದ ಅಭಿಸಂಧಾನ, ಇಂದ್ರಿಯನಿಗ್ರಹ, ತನ್ನ ಆಸ್ತಿಯನ್ನು ಎಲ್ಲರೊಡನೆಯೂ ಅನುಭವಿಸುವುದು, ಜ್ಞಾನ, ವಿಜ್ಞಾನ, ಮಾತು—ಇವುಗಳಲ್ಲಿ ಸಂಪನ್ನತೆ, ಜ್ಞಾಪಕಶಕ್ತಿ, ಅರಿಷಡ್ವರ್ಗದ ಅಭಾವ, ಸರ್ವಭೂತಗಳನ್ನೂ ಸಮವಾಗಿ ಕಾಣುವುದು, ಈ ಗುಣಗಳನ್ನು ಪಡೆದಿರುತ್ತದೆ.[156]

ಆರ್ಷದೇಹವು ಯಜ್ಞ, ಅಧ್ಯಯನ, ವ್ರತ, ಹೋಮ, ಬ್ರಹ್ಮಚರ್ಯಗಳಲ್ಲಿ ತೊಡಗಿರುವುದು, ಅತಿಥಿಸತ್ಕಾರ, ಮದ, ಮಾನ, ರಾಗ, ದ್ವೇಷ, ಮೋಹ, ಲೋಭ, ರೋಷಗಳನ್ನು ಶಾಂತಗೊಳಿಸಿರುವುದು, ಪ್ರತಿಭೆ, ಮಾತು, ವಿಜ್ಞಾನ, ಉಪಧಾರಣೆ ಈ ಗುಣಗಳನ್ನು ಪಡೆದಿರುತ್ತದೆ.[157]

ಐಂದ್ರದೇಹವು ಸಿರಿವಂತಿಕೆ, ಕೊಟ್ಟಮಾತನ್ನು ನಡೆಸಿಕೊಳ್ಳುವುದು, ಯಜ್ಞಮಾಡುವುದು, ಶೌರ್ಯ, ಓಜಸ್ವಿತನ, ತೇಜಸ್ಸು, ಇವುಗಳನ್ನು ಪಡೆದಿದ್ದು, ಕ್ಲಿಷ್ಟವಾದ ಕೆಲಸಗಳನ್ನು ಮಾಡದ, ದೂರನೋಟದ, ಧರ್ಮ, ಅರ್ಥ, ಕಾಮಗಳಲ್ಲಿ ವ್ಯವಹರಿಸುವ ಸ್ವಭಾವದ್ದಾಗಿರುತ್ತದೆ[158].

ಯಮದೇಹವು ಮಾಡಬೇಕಾದ್ದು-ಮಾಡಬಾರದ್ದು ಎಂಬ ವಿವೇಚನೆ, ಕಂದಾಯವನ್ನು ಪಡೆಯುವಿಕೆ, ಮತ್ತೊಬ್ಬರೊಡನೆ ಜಗಳವಾಡದಿರುವಿಕೆ (ಅಸಂಪ್ರಹಾರ್ಯತೆ), ಏಳಿಗೆ ಮತ್ತು ಐಶ್ವರ್ಯಗಳಲ್ಲಿ ಆಕಾಂಕ್ಷೆ, ಸ್ಮೃತಿ, ರಾಗ, ಈರ್ಷ್ಯೆ, ದ್ವೇಷ, ಮೋಹ ಇವುಗಳಿಲ್ಲದಿರುವಿಕೆ, ಈ ಗುಣಗಳನ್ನು ಪಡೆದಿರುತ್ತದೆ[159].

ವರುಣದೇಹವು ಶೂರವೂ, ಧೀರವೂ, ರುಚಿಯೂ, ಕೊಳೆತನದ ದ್ವೇಷಿಯೂ, ಯಜ್ಞಗಳನ್ನು ಮಾಡು ವಂತಹುದೂ, ಜಲಕ್ರೀಡೆಯಲ್ಲಿ ನಿರತವಾಗಿರುವುದೂ, ಕಷ್ಟವಲ್ಲದ ಕೆಲಸಗಳನ್ನು ಮಾಡುವಂತಹುದೂ, ಉಚಿತ ವಾದೆಡೆಗಳಲ್ಲಿ ಮಾತ್ರ ಕೋಪ ಮತ್ತು ಪ್ರಸನ್ನತೆಗಳನ್ನು ತೋರುವಂತಹುದೂ ಆಗಿರುತ್ತದೆ[160].

ಕುಬೇರದೇಹವು ಸ್ಥಾನ, ಮಾನ, ಉಪಭೋಗ, ಪರಿವಾರಗಳನ್ನು ಉಳ್ಳದ್ದೂ, ಧರ್ಮ, ಅರ್ಥ, ಕಾಮ ಗಳನ್ನು ಉಳ್ಳದ್ದೂ, ಶುಚಿಯೂ, ಸುಖಗಳಲ್ಲಿಯೇ ಇರತಕ್ಕದ್ದೂ, ಕೋಪ, ಪ್ರಸನ್ನತೆಗಳನ್ನು ತೋರಿಸಿಕೊಳ್ಳು ವಂತಹುದೂ ಆಗಿರುತ್ತದೆ[161].

---

155 ಕುನ್ಹನ್‌ರಾಜಾ, ಉ. ಗ್ರಂ., ಪು. 28.

156 ಚರಕ, ಉ. ಗ್ರಂ., IV, 4, 37 (1), ಪು. 323.

157 ಅದೇ ಗ್ರಂಥ, IV, 4, 32 (2), ಪು. 323.

158 ಅದೇ ಗ್ರಂಥ, IV, 4, 37 (3)

159 ಅದೇ ಗ್ರಂಥ, IV, 4, 37 (4)

160 ಅದೇ ಗ್ರಂಥ, IV, 4, 37 (5)

161 ಅದೇ ಗ್ರಂಥ, IV, 4, 37 (6)

## 2. ಪಿಂಡೋತ್ಪತ್ತಿ ಪ್ರಕರಣ

ಗಾಂಧರ್ವದೇಹವು ನೃತ್ಯ, ಗೀತ, ವಾದ್ಯ, ಹೊಗಳುವಿಕೆ(ಉಲ್ಲಾಪಕ), ಶ್ಲೋಕ, ಆಖ್ಯಾಯಿಕೆ, ಇತಿಹಾಸ, ಪುರಾಣಗಳಲ್ಲಿ ಪ್ರೀತಿಯುಳ್ಳದ್ದೂ, ಕುಶಲವೂ, ಗಂಧ, ಹಾರ ಮೊದಲಾದವುಗಳನ್ನು ಧರಿಸುವಂತಹುದೂ, ಬಟ್ಟೆಬರೆ, ಸ್ತ್ರೀಸಂಗ ಮೊದಲಾದವುಗಳನ್ನು ಬಯಸುವುದೂ, ಹೊಟ್ಟೆಕಿಚ್ಚಿಲ್ಲದಿರುವುದೂ ಆಗಿರುತ್ತದೆ [162].

ಈ ಏಳೂ ಸಾತ್ತ್ವಿಕ ದೇಹಗಳು.

ಅಸುರದೇಹವು ಶೂರವೂ, ಚಂಡವೂ, ಹೊಟ್ಟೆಕಿಚ್ಚಿರುವುದೂ, ಸಿರಿವಂತವೂ, ಮೋಸಗಳಲ್ಲಿ ತೊಡಗುವುದೂ, ರೌದ್ರವೂ, ನಿರ್ದಯವೂ ತನ್ನನ್ನುತಾನೇ ಪೂಜಿಸಿಕೊಳ್ಳುವಂತಹುದೂ ಆಗಿರುತ್ತದೆ [163].

ರಾಕ್ಷಸದೇಹವು ರೋಷವಂತವೂ, ಮುಂಗೋಪಿಯೂ, ಕ್ರೂರವೂ, ಅತಿಆಹಾರದಲ್ಲಿಮಾತ್ರವೂ, ಪಾಶವೀ ಸಂತೋಷಗಳಲ್ಲಿಯೂ ಅತ್ಯಂತ ಪ್ರೀತವೂ, ಕನಸ್ಸಿನಿಂದ ಬಹು ಆಯಾಸಪಡುವಂತಹುದೂ, ಅಸೂಯೆಯುಳ್ಳದ್ದೂ ಆಗಿರುತ್ತದೆ [164].

ಪಿಶಾಚದೇಹವು ಸ್ತ್ರೀಯರಿಂದ ಆಳಲ್ಪಡುವಂತಹುದೂ, ಸ್ತ್ರೀಸಂಭೋಗಪ್ರಿಯವೂ, ಅತ್ಯಾಹಾರಿಯೂ, ಕೊಳಕೂ, ಶುಚಿದ್ವೇಷಿಯೂ, ಪುಕ್ಕಲೂ, ಹೆದರಿಸುವಂತಹುದೂ, ವಿಕೃತವಾದ ಆಹಾರ ವಿಹಾರಗಳಲ್ಲಿ ತೊಡಗಿರುವುದೂ ಆಗಿರುತ್ತದೆ [165].

ಸರ್ಪದೇಹವು ಕ್ರೋಧವುಳ್ಳದ್ದೂ, ಕ್ರೋಧವಿಲ್ಲದಿರುವಾಗ ಭೀರುವೂ, ತೀಕ್ಷ್ಣವೂ, ಹೆಚ್ಚು ಆಯಾಸಪಡುವಂತಹುದೂ, ಎಲ್ಲರಿಗೂ ಕಾಣುವಂತಹ ವಿಷಯಗಳಲ್ಲಿ ತೊಡಗದಿರುವುದೂ, ಆಹಾರ ವಿಹಾರಗಳಲ್ಲಿಯೇ ಮಗ್ನವಾಗಿರುವುದೂ ಆಗಿರುತ್ತದೆ [166].

ಪ್ರೇತದೇಹವು ಆಹಾರದಲ್ಲಿಯೇ ಪ್ರೀತವೂ, ಆಚಾರ ಉಪಾಹಾರಗಳನ್ನು ಬಹು ದುಸ್ತರವಾಗಿ ಪಡೆದುಕೊಂಡು, ಅಸೂಯಾಪರವಾಗಿಯೂ, ತನ್ನದನ್ನು ಇತರರೊಡನೆ ಅನುಭವಿಸದೆಯೂ, ಬಹು ಸುಖಾಕಾಂಕ್ಷಿಯೂ, ಕೆಲಸಮಾಡದೆಯೂ ಇರುತ್ತದೆ. [167]

ಶಕುನದೇಹವು ಕಾಮದಲ್ಲಿಯೇ ಮುಳುಗಿರುವಂತಹುದೂ, ಉದ್ದೇಶಸಾಧನೆಯಲ್ಲಿ ತಡೆಯಲಾಗದುದೂ, ಆಹಾರವಿಹಾರಗಳಲ್ಲಿ ಮಗ್ನವೂ, ಸ್ಥಿರವಾದ ಗುಣವಿಲ್ಲದಿರುವುದೂ, ರೋಷಯುಕ್ತವೂ, ತನಗೆ ಬೇಕಾದುದನ್ನು ಸಂಗ್ರಹಿಸಲಾರದುದೂ ಆಗಿರುತ್ತದೆ. [168]

ಈ ಆರೂ ರಾಜಸದೇಹಗಳು.

---

162 ಅದೇ ಗ್ರಂಥ, IV, 4, 37 (7)
163 ಅದೇ ಗ್ರಂಥ, IV, 4, 38 (1)
164 ಅದೇ ಗ್ರಂಥ, IV, 4, 38 (2)
165 ಅದೇ ಗ್ರಂಥ, IV, 4, 38 (3)
166 ಅದೇ ಗ್ರಂಥ, IV, 4, 38 (4)
167 ಅದೇ ಗ್ರಂಥ, IV, 4, 38 (5) ; ಪು. 324.
168 ಅದೇ ಗ್ರಂಥ, IV, 4, 38 (6) ; ಪು. 324.

## 2. ಪಿಂಡೋತ್ಪತ್ತಿ ಪ್ರಕರಣ

ಪಶು ಶರೀರವು ಸುಂದರವಲ್ಲದೆಯೂ, ಬುದ್ಧಿಯಿಲ್ಲದೆಯೂ, ಜುಗುಪ್ಸೆಯುಂಟಾಗುವ ಆಹಾರ ವಿಹಾರಗಳಲ್ಲಿ ಮಗ್ನವೂ ಸಂಭೋಗದಲ್ಲಿಯೇ ಮಗ್ನವೂ, ಕನಸುಕಾಣುವಂತಹುದೂ ಆಗಿರುತ್ತದೆ. [169]

ಮತ್ಸ್ಯಶರೀರವು ಹೆದರುವಂತಹುದೂ, ಬುದ್ಧಿಯಿಲ್ಲದುದೂ, ಆಹಾರದಲ್ಲಿ ಅತ್ಯಾಸೆಯುಳ್ಳದ್ದೂ, ಸ್ಥಿರವಲ್ಲದ ಗುಣವುಳ್ಳದ್ದೂ, ಕಾಮಕ್ರೋಧಗಳಲ್ಲಿಯೇ ಮಗ್ನವಾಗಿರುವುದೂ, ಚಲಿಸುವ ಸ್ವಭಾವದ್ದೂ, ನೀರನ್ನು ಆಶಿಸುವಂತಹುದೂ ಆಗಿರುತ್ತದೆ. [170]

ವನಸ್ಪತಿಶರೀರವು ಸೋಮಾರಿಯೂ ಕೇವಲ ಆಹಾರಸಂಗ್ರಹದಲ್ಲಿಯೇ ತೊಡಗಿರುವುದೂ, ಬುದ್ಧಿ ಮತ್ತು ಅದರ ಎಲ್ಲಾ ಅಂಗಗಳೂ ಇಲ್ಲದಿರುವುದೂ ಆಗಿರುತ್ತದೆ. [171]

ಈ ಮೂರೂ ತಾಮಸದೇಹಗಳು.

ಸಾತ್ತ್ವಿಕದೇಹಗಳು ಕಲ್ಯಾಣಾಂಶದಿಂದಲೂ, ರಾಜಸದೇಹಗಳು ರೋಷಾಂಶದಿಂದಲೂ, ತಾಮಸದೇಹಗಳು ಮೋಹಾಂಶದಿಂದಲೂ ಉತ್ಪತ್ತಿಯಾಗುತ್ತವೆ. [172]

ಪಿಂಡದ ಅಂಗ-ಪ್ರತ್ಯಂಗಗಳು

**ಪಿಂಡಸ್ಯಾಹುಃ ಷಡಂಗಾನಿ ಶಿರಃ ಪಾದೌ ಕರೌ ತಥಾ ।**
**ಮಧ್ಯಂ ಚೇತ್ಯಥ ವಕ್ಷ್ಯಂತೇ ಪ್ರತ್ಯಂಗಾನ್ಯಖಿಲಾನ್ಯಪಿ ॥ 75 ॥** 124

ತಲೆ, ಕಾಲುಗಳು, ಹಾಗೆಯೇ ಕೈಗಳು ಮತ್ತು ಸೊಂಟ ಇವುಗಳು ಪಿಂಡದ ಆರು ಅಂಗಗಳು ಎನ್ನುತ್ತಾರೆ. ನಂತರ ಎಲ್ಲಾ ಪ್ರತ್ಯಂಗಗಳೂ ವರ್ಣಿಸಲ್ಪಡುವುವು.

ಬ್ರಹ್ಮವು ಜೀವನಾಗಿ ಕ್ಷೇತ್ರಜ್ಞನ ರೂಪದಲ್ಲಿ ಶರೀರಧಾರಣೆ ಮಾಡುವುದನ್ನು ವರ್ಣಿಸುವ ಶ್ರೀ ಶಾರ್ಙ್ಗದೇವನು ಪಿಂಡೋತ್ಪತ್ತಿಯನ್ನೂ, ವಿವಿಧದೇಹ ಜಾತಿಗಳನ್ನೂ ಹೇಳಿದ್ದಾನೆ. ಇನ್ನು ಮುಂದೆ ಮನುಷ್ಯದೇಹದ ವರ್ಣನೆಯನ್ನು ಮಾಡಲಾಗುವುದು. ಪಿಂಡವು ಶರೀರವಾಗಿ ಬೆಳೆಯುವುದರಲ್ಲಿ ಪಂಚಭೂತಗಳ ಪಾತ್ರವನ್ನು ವಿವರಿಸುತ್ತಾ ವಾಯುವು ಭ್ರೂಣವನ್ನು ಅಂಗಪ್ರತ್ಯಂಗಗಳಾಗಿ ಒಡೆಯುವುದೆಂದೂ, ತೇಜಸ್ಸು ಅವುಗಳನ್ನು ಪಕ್ವಮಾಡುವುದೆಂದೂ, ಆಪೋಭೂತವು ಅವುಗಳನ್ನು ಒದ್ದೆಮಾಡುವುದೆಂದೂ, ಪೃಥ್ವಿಯು ಅವುಗಳಲ್ಲಿ ಬಲವನ್ನು ತುಂಬುವುದೆಂದೂ ಆಕಾಶವು ಬೆಳೆಸುವುದೆಂದೂ ಸುಶ್ರುತನು ಹೇಳುತ್ತಾನೆ. [173] ಶರೀರದ ಅಂಗಗಳ ಈ ಎಣಿಕೆಯನ್ನು ಸುಶ್ರುತ [174] ವಾಗ್ಭಟರು [175] ಒಪ್ಪುತ್ತಾರೆ. ಚರಕನು ' ಶಿರಃ ' ಎನ್ನುವುದಕ್ಕೆ ' ಶಿರೋಗ್ರೀವಂ ' ಎಂದೂ ಕೈಕಾಲುಗಳಿಲ್ಲದ ಮುಂಡಕ್ಕೆ ಅಂತರಾಧಿ ಎಂದು ಹೇಳುತ್ತಾನೆ.[175] ವಾಗ್ಭಟನೂ ಈ ಶಬ್ದವನ್ನು ಹೀಗೆಯೇ ಬಳಸುತ್ತಾನೆ.[176]

---

169 ಅದೇ ಗ್ರಂಥ, IV, 4, 39 (1) ; ಪು. 324.

170 ಅದೇ ಗ್ರಂಥ, IV, 4, 39 (2) ; ಪು. 324.

171 ಅದೇ ಗ್ರಂಥ, IV, 4, 39 (3) ; ಪು. 324.

172 ಸುಶ್ರುತಸಂಹಿತೆಯ ಶಾರೀರಸ್ಥಾನದ ನಾಲ್ಕನೆಯ ಅಧ್ಯಾಯದಲ್ಲಿ 81 ರಿಂದ 97ನೇ ಶ್ಲೋಕಗಳಲ್ಲಿ ಈ ಜಾತಿಗಳನ್ನು ಅಲ್ಲಲ್ಲಿ ವ್ಯತ್ಯಾಸವಾಗಿ ಹೇಳಿದೆ. ಪು. 72-75.

173 ಅದೇ ಗ್ರಂಥ, V, 3. ಪು. 77.

174 ಅದೇ ಗ್ರಂಥ, V, 4, ಪು. 78.

175 ವಾಗ್ಭಟ, ಉ. ಗ್ರಂ., III, 1, ಪು. 37.

176 ಚರಕ, ಉ. ಗ್ರಂ., IV, 7, 5. ಪು. 337.

ಮನುಷ್ಯದೇಹದ ರಚನೆಯನ್ನು ಗರ್ಭೋಪನಿಷತ್ತು ಹೀಗೆ ಹೇಳುತ್ತದೆ :

ತಸ್ಯೈತಚ್ಛರೀರಸ್ಯ ಷೋಡಶಪಾತ್ರದಂತಪಟಲಾನಿ ದಶಪಂಚಸುಷಯಃ ಷಣ್ಣವತ್ಯಂಗುಳೋನ್ಮಾನಂ ಚತುರ್ದಶನಾಡೀಸ್ಥಾನಾನ್ಯಷ್ಟೋತ್ತರ(ಶತ)ಂ ಮರ್ಮಾಣಿ । ತತ್ರ ದ್ವಿಸಪ್ತತಿ(ಸಹಸ್ರ)ಧಮನ್ಯಸ್ತಾಸಾಂ ಮಧ್ಯೇ ದ್ವಿಸಪ್ತತಿಸ್ತಾಸು ಮುಖ್ಯಾಸ್ತಿಸ್ರ ಇಡಾಪಿಂಗಳಾಸುಷುಮ್ನಾ ಚೇತಿ । ತುರೀಯ ಪುರೀತತಃ . . . . . .ತದ್ವೃಕ್ಷಃ ಶರೀರಃ ತಸ್ಮಿನ್ ಲೋಮ್ನಾಮಷ್ಟಾಕೋಟಯಸ್ತ್ವಶೀತಿಸಂಧಿಶತಂ ನವಸ್ನಾಯುಶತಾನಿ ಹೃದಯಪಲಾನ್ಯಷ್ಟ ದ್ವಾದಶಪಲಾಜಿಹ್ವಾ . . . . .[177]

ಚರಕ, ಸುಶ್ರುತ, ವಾಗ್ಭಟಾದಿಗಳಿಂದ ಅನೇಕ ರೀತಿಯಲ್ಲಿ ಭಿನ್ನಾಭಿಪ್ರಾಯವನ್ನು ಹೊಂದಿರುವ ಗರ್ಭೋಪನಿಷತ್ತು ಅಭ್ಯಾಸಾರ್ಹವಾಗಿದೆ. ಗ್ರಂಥವಿಸ್ತರ ಭೀತಿಯಿಂದ ಅವುಗಳನ್ನೆಲ್ಲ ಇಲ್ಲಿ ಚರ್ಚಿಸಿಲ್ಲ.

**ತ್ವಚಃ ಸಪ್ತ ಕಲಾಃ ಸಪ್ತ ಸ್ನಾಯುಶ್ಲೇಷ್ಮಜರಾಯುಭಿಃ ।**
**ಛನ್ನಾಃ ಕೋಶಾಗ್ನಿಭಿಃ ಪಕ್ವಾಸ್ತಾ ಧಾತೂನಂತರಾಂತರಾ[45] ॥ 76 ॥** 125

ಏಳು ಚರ್ಮಗಳೂ, ನರಗಳು, ಶ್ಲೇಷ್ಮರಸ ಮತ್ತು ಪೊರೆಗಳಿಂದ ಆವೃತವಾದ ಏಳು ಕಲೆಗಳೂ ಆಯಾ ಕೋಶಗಳಲ್ಲಿರುವ ಅಗ್ನಿಗಳಿಂದ ಪಕ್ವವಾದ ಧಾತುಗಳ ಮಧ್ಯದಲ್ಲಿದ್ದುಕೊಂಡು—

ಪ್ರತ್ಯಂಗಗಳನ್ನು ಸುಶ್ರುತನು ಹೀಗೆ ಎಣಿಸಿದ್ದಾನೆ :

ಅತಃ ಪರಂ ಪ್ರತ್ಯಂಗಾನಿ ವಕ್ಷ್ಯಂತೇ : ಮಸ್ತಕೋದರಪೃಷ್ಠನಾಭಿಲಲಾಟನಾಸಾಚಿಬುಕಬಸ್ತಿಗ್ರೀವಾ ಇತ್ಯೇತಾ ಏಕೈಕಾಃ ; ಕರ್ಣನೇತ್ರಭ್ರೂಶಂಖಾಂಸಗಂಡಕಕ್ಷಸ್ತನವೃಷಣಪಾರ್ಶ್ವಸ್ಫಿಗ್‌ಜಾನುಬಾಹೂರುಪ್ರಭೃತಯೋ ದ್ವೇ ದ್ವೇ ವಿಂಶತಿರಂಗುಲಯಃ ಸ್ರೋತಾಂಸಿ ವಕ್ಷ್ಯಮಾಣಾನಿ, ಏಷ ಪ್ರತ್ಯಂಗವಿಭಾಗ ಉಕ್ತಃ ।[178]

ಪ್ರತ್ಯಂಗಗಳ ಸಂಖ್ಯೆಯನ್ನೂ ಅವನು ಹೀಗೆ ಹೇಳಿದ್ದಾನೆ :

ತ್ವಚಃ ಕಲಾ ಧಾತವೋ ಮಲಾ ದೋಷಾ ಯಕೃತ್‌ಪ್ಲೀಹಾನೌ ಫುಪ್ಫುಸ ಉಂಡುಕೋ ಹೃದಯ-ಮಾಶಯಾ ಅಂತ್ರಾಣಿ ವೃಕ್ಕೌ ಸ್ರೋತಾಂಸಿ ಕಂಡರಾ, ಜಾಲಾನಿ ಕೂರ್ಚಾ ರಜ್ಜವಃ ಸೇವನ್ಯಃ ಸಂಘಾತಾಃ ಸೀಮಂತಾ ಅಸ್ಥೀನಿ ಸಂಧಯಃ ಸ್ನಾಯವಃ ಪೇಶ್ಯೋ ಮರ್ಮಾಣಿ ಸಿರಾ ಧಮನ್ಯೋ ಯೋಗವಾಹಾನಿ ಸ್ರೋತಾಂಸಿ ಚ ॥[179]

ತ್ವಚಃ ಸಪ್ತ, ಕಲಾಃ ಸಪ್ತ, ಆಶಯಾಃ ಸಪ್ತ, ಧಾತವಃ ಸಪ್ತ, ಸಪ್ತ ಸಿರಾಶತಾನಿ, ಪಂಚ ಪೇಶೀಶತಾನಿ, ನವ ಸ್ನಾಯುಶತಾನಿ. ತ್ರೀಣ್ಯಸ್ಥಿಶತಾನಿ, ದ್ವೇ ದಶೋತ್ತರೇ ಸಂಧಿಶತೇ, ಸಪ್ತೋತ್ತರಂ ಮರ್ಮಶತಂ, ಚತುರ್ವಿಂಶತಿ ರ್ಧಮನ್ಯಃ, ತ್ರಯೋ ದೋಷಾಃ, ತ್ರಯೋ ಮಲಾಃ ನವ ಸ್ರೋತಾಂಸೀತಿ ಸಮಾಸಃ ।[180]

45 ಕ : ಸ್ವಸ್ವಕೋಶಾಗ್ನಿಭಿಃ ಪಕ್ವಾಸ್ತೇ ತ್ರಿಧಾತೂನುತ್ತರೋತ್ತರಾನ್ ।

177 ಗರ್ಭೋಪನಿಷತ್ತು : ಅಷ್ಟೋತ್ತರಶತ ಉಪನಿಷತ್, ಪು. 205-206.

178 ಸುಶ್ರುತ, ಉ. ಗ್ರಂ., V, 4, ಪು. 78.

179 ಅದೇ ಗ್ರಂಥ, V, 5, ಪು. 78.

180 ಅದೇ ಗ್ರಂಥ, V, 6, ಪು. 79.

## 2. ಪಿಂಡೋತ್ಪತ್ತಿ ಪ್ರಕರಣ

ಕಲ್ಲಿನಾಥನು ಈ ಸಂದರ್ಭದಲ್ಲಿ ವಾಗ್ಭಟನ ಶ್ಲೋಕಗಳನ್ನು[181] 'ಯಥೋಕ್ತಂ ಆಯುರ್ವೇದೇ' ಎಂದು ಮಾತ್ರ ಹೇಳಿ ಉದ್ಧರಿಸಿದ್ದಾನೆ[182]. ಚರ್ಮಪದರಗಳನ್ನು ಹೇಳುತ್ತಾ, ಹಾಲನ್ನು ಕಾಯಿಸಿದಾಗ ಅದು ಕೆನೆಕಟ್ಟುವಂತೆ, ಚರ್ಮದ ಪದರಗಳು ರಕ್ತಧಾತುವಿನ ಪರಿಪಾಕದಿಂದ ಉಂಟಾಗುತ್ತವೆ ; ಚರ್ಮದ ಭಾಸಿನೀ, ಲೋಹಿನೀ, ಶ್ವೇತಾ, ತಾಮ್ರಾ, ತ್ವಗ್ವೇದಿನೀ, ರೋಹಿಣೀ, ಮಾಂಸಧರಾ ಎಂಬ ಏಳು ಪದರಗಳು ದೇಹವನ್ನು ಮುಚ್ಚಿಕೊಂಡಿವೆ ಎಂದು ವಾಗ್ಭಟನು ತಿಳಿಸುತ್ತಾನೆ.

**ಸೀಮಭೂತಾಶ್ಚ ಧಾತೂನಾಂ ಕಾಷ್ಠಸಾರೋಪಮಾ ಮತಾಃ ।**
**ಆದ್ಯಾ ಮಾಂಸಧರಾ[46]ಮಾಂಸೇ ಸಿರಾ ಧಮನಯಸ್ತಥಾ ॥ 77 ॥** 126

—[ಆಯಾ] ಧಾತುಗಳ ಎಲ್ಲೆಕಟ್ಟುಗಳಾಗಿ ಮರದಕೊಂಬೆಯ ತಿರುಳಿನ ಹಾಗಿರುತ್ತವೆಂದು ಅಭಿಪ್ರಾಯವಿದೆ. ಮೊದಲನೆಯ ಮಾಂಸಧರಾ [ಚರ್ಮ] ಎಂಬುದು, ಮಾಂಸದಲ್ಲಿ ಸಿರೆಗಳೂ ಹಾಗೆಯೇ ಧಮನಿಗಳೂ—

ಈ ಉದಾಹರಣೆಯನ್ನು ಶಾರ್ಙ್ಗದೇವನು ಸುಶ್ರುತನಿಂದಲೂ[183] ವಾಗ್ಭಟನಿಂದಲೂ[184] ಪಡೆದುಕೊಂಡಿದ್ದಾನೆ. ವಾಗ್ಭಟನು ಈ ಹೋಲಿಕೆಯನ್ನು ಕಲೆಗಳಿಗೆ ಅನ್ವಯಿಸುತ್ತಾನೆ. ಶಾರ್ಙ್ಗದೇವನು ಚರ್ಮಪದರಗಳೂ ಕಲೆಗಳ ಹಾಗೆಯೇ ಎಂದು ಹೇಳುತ್ತಾನೆ. ಮರದಲ್ಲಿ ಬಲಿತ ಕೊಂಬೆಯನ್ನು ಕತ್ತರಿಸಿದಾಗ ಕೇಂದ್ರದಲ್ಲಿರುವ ಗಟ್ಟಿಯಾದ ಭಾಗಕ್ಕೂ ಸುತ್ತಲೂ ಬೆಳೆಯುತ್ತಿರುವ ಬಿಳಿಯ ಮೃದುವಾದ ಭಾಗಕ್ಕೂ ನಡುವೆ ತೆಳುವಾದ ಪೊರೆಯೊಂದು ಇವೆರಡನ್ನೂ ಪ್ರತ್ಯೇಕಿಸುವುದು ಕಾಣುತ್ತದೆ. ಹಾಗೆಯೇ ಪ್ರತಿಯೊಂದು ದೇಹಪ್ರಾಂತದಲ್ಲಿಯೂ ಇರುವ ಅಗ್ನಿಯಿಂದ, ಎಂದರೆ ಅಲ್ಲಿ ಉತ್ಪತ್ತಿಯಾಗುವ ಭೌತಿಕ ಮತ್ತು ರಸಾಯನಿಕ ಶಕ್ತಿಗಳ ಪ್ರಭಾವದಿಂದ, ಹಾಗೂ ಅವು ಪ್ರವಿಸುವ ರಸಾಯನಿಕ ವಸ್ತುವಿಶೇಷಗಳಿಂದ—ಪಕ್ವವಾಗುತ್ತವೆ. ಹೀಗಾಗುವಾಗ ಕಲಾ ಎಂಬ ಭಾಗವು ಆಯಾ ಧಾತುವಿನ ಸಾಮಗ್ರಿಯೇ ಆಗಿದೆ ; ಆಯಾ ಧಾತುಗಳಿಗೂ ಅವುಗಳನ್ನು ರಕ್ಷಿಸಿಕೊಂಡಿರುವ ಆವರಣಕ್ಕೂ ಮಧ್ಯೆ ಇರುವ ನರಜಾಲದಮೇಲೆ ಶ್ಲೇಷ್ಮರಸ (ಎಂದರೆ ಪ್ರಾಣರಸ, ಪ್ಲಾಸ್ಮಾ)ವನ್ನು ಹಚ್ಚಿ, ಅಗ್ನಿಯು ಪಾಕಮಾಡಿ ತೆಳುವಾದ ಪೊರೆಯನ್ನು ಉಂಟುಮಾಡುತ್ತದೆ. ಇದೇ ಕಲಾ. ಹೀಗೆಯೇ ಚರ್ಮಪದರಗಳೂ ಉಂಟಾಗುತ್ತವೆ.

ಚರ್ಮದ ಪದರಗಳನ್ನು ಕೆಲವರು ಆರೇ ಎನ್ನುತ್ತಾರೆ. ಉದಾಹರಣೆಗೆ ಚರಕನು ಹೀಗೆ ಹೇಳುತ್ತಾನೆ.

ಶರೀರೇ ಷಟ್‌ತ್ವಚಃ ; ತದ್ಯಥಾ—ಉದಕಧರಾತ್ವಗ್‌ಬಾಹ್ಯಾ, ದ್ವಿತೀಯಾ ತು ಅಸೃಗ್‌ಧರಾ, ತೃತೀಯಾ ಸಿಧ್ಮಕಿಲಾಸ ಸಂಭವಾಧಿಷ್ಠಾನಾ, ಚತುರ್ಥೀ ದದ್ರೂಕುಷ್ಠಸಂಭವಾಧಿಷ್ಠಾನಾ, ಪಂಚಮೀ ತು ಅಲಜೀವಿದ್ರಧಿ ಸಂಭವಾಧಿಷ್ಠಾನಾ, ಷಷ್ಠೀ ತು ಯಸ್ಯಾಂ ಛಿನ್ನಾಯಾಂ ತಾಮ್ಯತ್ಯಂಧ ಇವ ಚ ತಮಃ ಪ್ರವಿಶತಿ ಯಾಂ ಚಾಪ್ಯಧಿಷ್ಠಾಯಾರೂಪಂ ಜಾಯಂತೇ ಪೂರ್ವಸು ಕೃಷ್ಣರಕ್ತಾನಿ ಸ್ಥೂಲಮೂಲಾನಿ ದುಶ್ಚಿಕಿತ್ಸ್ಯತಮಾನಿ ಚ ; ಇತಿ ಷಟ್ ತ್ವಚಃ[185]

46 ಕ : ಮಾಂಸೋದ್ಭವಾ ?

181 ವಾಗ್ಭಟ, ಉ. ಗ್ರಂ., III, 8-9, ಪು. 38-39.
182 ಕಲ್ಲಿನಾಥ, ಉ. ಗ್ರಂ., ಪು. 44.
183 ಸುಶ್ರುತ, ಉ. ಗ್ರಂ., IV, 6 ; ಪು. 46.
184 ವಾಗ್ಭಟ, ಉ. ಗ್ರಂ., III, 10 ; ಪು. 39.
185 ಚರಕ, ಉ. ಗ್ರಂ., IV, 7, 4, ಪು. 337.

## 2. ಪಿಂಡೋತ್ಪತ್ತಿ ಪ್ರಕರಣ

ಈ ಜ್ಞಾನವು ಆಧುನಿಕ ಶರೀರಶಾಸ್ತ್ರದಷ್ಟೇ ನಿಖರವಾಗಿದೆ: ಅಲೆಕ್ಸಿಸ್ ಕ್ಯಾರೆಲ್ಲನು ಚರ್ಮದ ವಿಷಯದಲ್ಲಿ ಹೇಳುವ ಹಲವಾರು ಸಂಗತಿಗಳಿಗೆ [186] ನಮ್ಮ ಪ್ರಾಚೀನ ಆಕರಗಳಲ್ಲಿ ಪರಸ್ಪರತೆ ದೊರೆಯುತ್ತದೆ.

ಶಾರ್ಙ್ಗದೇವನು ಮಾಂಸಧರಾ ಎಂಬುದು ಕಲೆಗಳಗಲ್ಲಿ ಮೊದಲನೆಯದೆನ್ನುತ್ತಾನೆ. ಕುನ್ಹನ್‌ರಾಜಾ ಇದನ್ನು ಚರ್ಮದ ಕಡೆಯ ಪದರವೆಂದು ಹೇಳಿರುವುದು ಸರಿಯಲ್ಲ [155]. ಚರ್ಮಪದರಗಳಿಗೂ ಕಲೆಗಳಿಗೂ ಸುಸ್ಪಷ್ಟವಾದ ವ್ಯತ್ಯಾಸವಿದೆ. ಚರ್ಮದ ಪದರಗಳು ಹೊರಮೈಯನ್ನು ಮುಚ್ಚಿದರೆ ಕಲೆಗಳು ದೇಹದ ವಿವಿಧ (ರಕ್ತ, ಮಾಂಸ, ಮಜ್ಜೆ ಮುಂತಾದ) ಧಾತುಗಳನ್ನು ಅವುಗಳ ಸ್ಥಾನಗಳಲ್ಲಿ ನಿಲ್ಲಿಸುವ ಪೊರೆಗಳಾಗಿವೆ. ಅಲೆಕ್ಸಿಸ್ ಕ್ಯಾರೆಲ್ ವರ್ಣಿಸುವ ಸೈನಾಪ್ಟಿಕ್ ಮೆಂಬ್ರೇನ್‌ನಂತಹ ಪೊರೆಗಳು, ಇವು [187].

ಹೀಗೆ 1) ಮಾಂಸಧರಾಕಲೆಯು ಮಾಂಸಖಂಡದ ಒಳಗಡೆ ಸಿರಾ, ಧಮನೀ, ಸ್ರೋತ ಮೊದಲಾದವುಗಳು ಒಂದನ್ನೊಂದು ಅತಿಕ್ರಮಿಸದೆ ತಮ್ಮ ಸ್ಥಾನಗಳಲ್ಲೇ ಪ್ರತ್ಯೇಕವಾಗಿರುವಂತೆ ಮಾಡುವ ಪದರ. 2) ರಕ್ತಧರಾ ಕಲೆಯೂ ಮಾಂಸಖಂಡದಲ್ಲಿದ್ದುಕೊಂಡು, ಸಿರಾ ಧಮನೀ ನರಗಳು ವ್ಯಾಪಕವಾಗಿದ್ದರೂ ರಕ್ತವು ಅವುಗಳೊಳಗೆ ಮಾತ್ರ ಹರಿಯುವಂತೆ ಮಾಡುತ್ತದೆ. 3) ಮೇದೋಧರಾ ಕಲೆಯು ಎಲುಬು ಮತ್ತು ಉದರಗಳಲ್ಲಿದ್ದು ಎಲುಬಿನ ತಿರುಳನ್ನು ಗಟ್ಟಿಯಾದ ಮೂಳೆಯಿಂದ ಬೇರ್ಪಡಿಸುತ್ತದೆ. 4) ಕಫಧರಾ ಕಲೆಯು ಮೂಳೆ ಕೀಲುಗಳ ಮಧ್ಯದಲ್ಲಿದ್ದು ಅವುಗಳಲ್ಲಿ ಬಿಗಿಯನ್ನುಂಟುಮಾಡುತ್ತದೆ. 5) ಪುರೀಷಧರಾ ಕಲೆಯು ಜಠರ ಮತ್ತು ದೊಡ್ಡ ಕರಳುಗಳ ನಡುವೆಯಿದ್ದು ಆಹಾರದಿಂದ ಮಲಮೂತ್ರಗಳನ್ನು ಬೇರ್ಪಡಿಸುತ್ತದೆ. 6) ಪಿತ್ತಧರಾ ಕಲೆಯು ದೊಡ್ಡ ಕರುಳಿನಲ್ಲಿದ್ದುಕೊಂಡು ಆಹಾರದಲ್ಲಿ ದ್ರವಭಾಗವನ್ನು ಹೀರಿಕೊಂಡು, ಆಹಾರವನ್ನು ಜೀರ್ಣಮಾಡಿ, ಹಾಗೆ ಜೀರ್ಣವಾದುದನ್ನು ಮುಂದಕ್ಕೆ ಬಿಡುತ್ತದೆ. 7) ಶುಕ್ಲಧರಾ ಕಲೆಯು ಜನನಾಂಗದಲ್ಲಿದ್ದು ಅಂಡಕೋಶಗಳಿಂದ ಮೂತ್ರದ್ವಾರಕ್ಕೆ ವೀರ್ಯವನ್ನು ಪ್ರವಿಸುತ್ತದೆ [188].

ಸುಶ್ರುತಸಂಹಿತೆಯನ್ನು ಸಂಪಾದಿಸಿರುವ ಪಟ್ಟವರ್ಧನನು ಕಲಾ ಎಂಬುದಕ್ಕೆ ಧಾತುಗಳನ್ನು ಉಂಟುಮಾಡುವ, ಬಹುಸೂಕ್ಷ್ಮವಾದ ಅಂಗಸತ್ತ್ವ ಎಂದು ಅರ್ಥಮಾಡಿರುವುದು ಅಸಾಧುವಾಗಿಯೂ ಅನಾವಶ್ಯಕವಾಗಿ ಪ್ರಯಾಸಸಾಧ್ಯವಾದ ತರ್ಕವಾಗಿಯೂ ಕಾಣುತ್ತದೆ.

**ಸ್ನಾಯುಸ್ರೋತಾಂಸಿ ರೋಹಂತಿ ಪಂಕೇ ಪಂಕಜವತ್ ।**
**ಅಸೃಙ್ಮೇದಃ ಶ್ಲೇಷ್ಮಶಕೃತ್‌ಪಿತ್ತಶುಕ್ಲಧರಾಃ ಪರಾಃ ॥ 78 ॥** 127

— ಸ್ನಾಯುಸ್ರೋತಗಳೂ ಕೆಸರಿನಲ್ಲಿ ತಾವರೆಯಂತೆ ಹುಟ್ಟಿಬೆಳೆಯುತ್ತವೆ. ರಕ್ತ, ಕೊಬ್ಬು, ಜೀವರಸ, ಮಲ, ಪಿತ್ತ, ವೀರ್ಯ, ಇವುಗಳನ್ನು ಒಳಗೊಂಡಿರುವವುಗಳು ಉಳಿದವುಗಳು.

ಇದು ಬಹು ಸುಂದರವೂ ಖಚಿತವೂ ಆಗಿರುವ ಹೋಲಿಕೆ. ಆಧುನಿಕ ಶರೀರಶಾಸ್ತ್ರಜ್ಞರು ಇದನ್ನು ಹೀಗೆಯೇ ಒಪ್ಪಿಕೊಂಡಿದ್ದಾರೆ:

The organic medium is a part of the tissues. Should it be removed, the body would cease to exist. Every manifestation of the life of our organs and nervous centres, our thoughts, our affections, the

186 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 71-72.

187 ಅದೇ ಗ್ರಂಥ, ಪು. 97.

cruelty, the ugliness and the beauty of the universe, its very existence, depend on the physicochemical state of our humours. The organic medium is composed of blood, flowing in the vessels, and of fluids, plasma or lymph, which filter through the walls of the capillaries into the tissues. There is a general organic medium, the blood, the regional media consisting of the interstitial lymph of each organ. An organ may be compared to a pond completely filled with aquatic plants and fed by a small brook. The almost stagnant water is polluted by waste products, dead fragments of plants, and chemical substances set free by them. The degree of stagnation and of pollution of the water depends on the rapidity and the volume of the brook. Such is the case with interstitial lymph. In short, the composition of regional media inhabited by the various cells of the body rests, directly or indirectly, on blood.[189]

Blood plasma is not exactly what chemists believe it to be. It is incomparably richer than the classical abstractions. Without any doubt, plasma really is the solution of bases, acids, salts, and proteins, whose physicochemical equilibria are expressed in the laws discovered by Van Slyke and Henderson. Owing to this particular composition, its ionic alkalinity is maintained near the neutral point, in spite of the acids ceaselessly liberated by the tissues. In this manner, it supplies all the cells of the entire organism with an unvarying medium, neither too acid, nor too alkaline. But it also contains proteins, polypeptides, aminoacids, sugars, fats, enzymes, metals in infinitesimal quantities, and the secretions of all glands and tissues. The nature of the majority of these substances is still very imperfectly known. We are scarcely beginning to understand the immense complexity of their functions. Each cell type finds in the blood plasma the foodstuffs indispensable to its maintenance, and also substances accelerating or retarding its activity. . . . In addition, there is in blood plasma a protein, fibrinogen, father of fibrin, whose shreds spontaneously adhere to the wounds of blood vessels and stop haemorrhages.[190]

ಈ ವರ್ಣನೆಯಲ್ಲಿ ಪ್ಲಾಸ್ಮಾ ಅಥವಾ ಲಿಂಫ್ ಎಂಬ ಸಚೇತಕದ್ರವ್ಯಕ್ಕೂ ಜೀವರಸಕ್ಕೂ ಇರುವ ಸಾದೃಶ್ಯವನ್ನು ಗಮನಿಸಬೇಕು.

---

188 ಸುಶ್ರುತ, ಉ. ಗ್ರಂ., V, 5.23 ; ಪು. 78.90.

189 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 81.82.

190 ಅದೇ ಗ್ರಂಥ, ಪು. 82.83.

2. ಪಿಂಡೋತ್ಪತ್ತಿ ಪ್ರಕರಣ

ಸಪ್ತಧಾತುಗಳು

**ತ್ವಗ್ ಅಸೃಜ್ ಮಾಂಸಮೇದೋಽಸ್ಥಿಮಜ್ಜಶುಕ್ಲಾನಿ ಧಾತವಃ ।**
**ಸಪ್ತ ಸ್ಯುಸ್ತತ್ರ ಚೋಕ್ತಾ ತ್ವಗ್ ರಕ್ತಂ ಜಾಠರವಹ್ನಿನಾ ॥ 79 ॥** 128

ಚರ್ಮ, ರಕ್ತ, ಮಾಂಸ, ಕೊಬ್ಬು, ಎಲುಬು, ಎಲುಬಿನ ನೆಣೆ, ವೀರ್ಯಗಳೆಂದು ಧಾತುಗಳು ಏಳು ಇವೆ. ಅದರಲ್ಲಿ ಚರ್ಮ [ಧಾತು]ವು ಹೇಳಲ್ಪಟ್ಟಿದೆ. ರಕ್ತವು ಜಠರದಲ್ಲಿರುವ ಅಗ್ನಿಯಿಂದ--

**ಪಕ್ವಾದ್ ಭವೇದನ್ನರಸಾದೇವಂ ರಕ್ತಾದಿಭಿಃ ಪರೇ ।**
**ಸ್ವಸ್ವಕೋಶಾಗ್ನಿನಾ ಪಕ್ವೈರ್ಜನ್ಯಂತೇ ಧಾತವಃ ಕ್ರಮಾತ್ ॥ 80 ॥** 129

-- ಅನ್ನರಸವು ಪಕ್ವವಾಗುವುದರಿಂದ ಹುಟ್ಟುತ್ತದೆ. ಹಿಗೆಯೇ ರಕ್ತದಿಂದ ಉಳಿದ ಧಾತುಗಳು ಕ್ರಮವಾಗಿ ತಮ್ಮ ತಮ್ಮ ಕೋಶದಲ್ಲಿರುವ ಅಗ್ನಿಯಿಂದ ಪಕ್ವವಾಗಿ ಹುಟ್ಟುತ್ತವೆ.

ಈ ವಿಧದ ಧಾತು-ಉತ್ಪತ್ತಿಯನ್ನು ಆಚಾರ್ಯತ್ರಯರಲ್ಲಿ ವಾಗ್ಭಟನು ಹೀಗೆ ಹೇಳುತ್ತಾನೆ: ಅನ್ನವು ಪಾಕವಾಗಿ ಸಾರ ಮತ್ತು ಕಿಟ್ಟಗಳೆಂದು ವಿಭಾಗವಾಗುತ್ತದೆ. ಕಿಟ್ಟದ ದ್ರವಾಂಶವು ಮೂತ್ರವಾಗಿಯೂ ಘನಭಾಗವು ಮಲವಾಗಿಯೂ ವಿಸರ್ಜಿತವಾಗುತ್ತವೆ. ಸಾರವು ಸಪ್ತಧಾತುಗಳಲ್ಲಿರುವ ಅಗ್ನಿಯಿಂದ (ಎಂದರೆ ಭೌತಿಕಶಕ್ತಿಯಿಂದ ಮತ್ತು ರಾಸಾಯನಿಕ ಕ್ರಿಯೆಗಳಲ್ಲಿ) ಪುನಃ ಪಾಕವಾಗುತ್ತದೆ; ಆಹಾರ ರಸವು ಹೃದಯವನ್ನು ಸೇರಿ ವ್ಯಾನವಾಯುವಿನಿಂದ ಹತ್ತು ಮೂಲಸಿರೆಗಳ ಮೂಲಕ ಸಕಲಶರೀರಭಾಗಗಳನ್ನೂ ತಲುಪಿ ರಸಧಾತುವಿನೊಡನೆ ಮಿಶ್ರವಾಗಿ ಅದರ ಅಗ್ನಿಯಿಂದಲೂ ಭೂತಾಗ್ನಿಯಿಂದಲೂ ಪಾಕವಾಗಿ ರಕ್ತಧಾತುವಿನ ಸಾರವಾಗುತ್ತವೆ. ರಕ್ತವು ಪಾಕವಾಗಿ ಮಾಂಸವೂ, ಮಾಂಸವು ಪಕ್ವವಾಗಿ ಮೇದಸ್ಸೂ, ಮೇದಸ್ಸು ಪಕ್ವವಾಗಿ ಎಲುಬೂ, ಎಲುಬಿನಿಂದ ಅದರ ತಿರುಳೂ, ತಿರುಳಿನಿಂದ ವೀರ್ಯವೂ, ವೀರ್ಯದಿಂದ ಗರ್ಭವೂ ಉತ್ಪತ್ತಿಯಾಗುತ್ತವೆ. ಇವುಗಳ ಮಲಗಳು ಹೀಗಿವೆ: ರಸಕ್ಕೆ ಮಲವು ಕಫ; ರಕ್ತಕ್ಕೆ ಪಿತ್ತ; ಮೂಗಿನ ಸಿಂಬಳ ಮುಂತಾದವು ಮಾಂಸಕ್ಕೆ; ಮೇದಸ್ಸಿಗೆ ಬೆವರು; ಎಲುಬಿಗೆ ಉಗುರು ಮತ್ತು ರೋಮಗಳು. ಮಜ್ಜೆಗೆ ಕಣ್ಣಿನ ಜಿಬರು ಮತ್ತು ಪುರೀಷದ ಮೇಲಿನ ಹೊಳಪು; ಶುಕ್ಲಕ್ಕೆ ಸರ್ವಧಾತುಗಳ ತೇಜೋರೂಪವಾದ ಓಜಸ್ಸು. ಹೀಗೆ ಪ್ರತಿಧಾತುವಿಗೂ ಸಾರಭಾಗವೂ ಕಿಟ್ಟವೂ ಇದ್ದು ಪ್ರತಿಧಾತುವೂ ಉಳಿದವುಗಳಿಗೆ ಪೂರಕವೂ ಆಶ್ರಯವೂ ಆಗಿರುತ್ತದೆ [191]. ಅನ್ನವು ಪಕ್ವವಾಗುವುದು ಅಗ್ನಿಯಿಂದ ಎಂಬಲ್ಲಿ ಶಾರ್ಙ್ಗದೇವನು ಆತ್ರೇಯನ ಅಭಿಪ್ರಾಯವನ್ನು ಅನುಮೋದಿಸಿದ್ದಾನೆ. ಇಲ್ಲಿ ಹೇಳಿರುವ ಆಹಾರಜೀರ್ಣಕ್ರಮವೂ ಧಾತು ಪರಿವರ್ತನಕ್ರಮವೂ ಆಧುನಿಕ ಶರೀರಶಾಸ್ತ್ರವು ಹೇಳುವಂತೆಯೇ ಇದೆಯೆಂಬುದನ್ನು ಗಮನಿಸಬೇಕು.

ಆಶಯಗಳು

**ರಕ್ತಶ್ಲೇಷ್ಮಾಮಪಿತ್ತಾನಾಂ ಪಕ್ವಸ್ಯ ಮರುತಸ್ತಥಾ ।**
**ಮೂತ್ರಸ್ಯ ಚಾಶ್ರಯಾಃ ಸಪ್ತ ಕ್ರಮಾದಾಶಯಸಂಜ್ಞಕಾಃ ॥ 81 ॥** 130

ರಕ್ತ, ಶ್ಲೇಷ್ಮರಸ, ಪಕ್ವವಾಗದಿರುವ ಆಹಾರ, ಪಿತ್ತ, ಪಕ್ವವಾದ ಆಹಾರ, ಹಾಗೆಯೇ ಗಾಳಿ ಮತ್ತು ಮೂತ್ರಗಳ ಆಶ್ರಯಸ್ಥಾನಗಳಾದ ಏಳು ಕ್ರಮವಾಗಿ (ಆಯಾ ಧಾತುವಿನ) ಆಶಯಗಳೆಂಬುವುಗಳು.

ಇವುಗಳನ್ನು ವ್ಯತ್ಯಾಸವಿಲ್ಲದೆ ಸುಶ್ರುತನೂ ಹೇಳುತ್ತಾನೆ [192]. ವಾಗ್ಭಟನು ಇವುಗಳೆಲ್ಲವನ್ನೂ ಹೇಳಿ,

191 ವಾಗ್ಭಟ, ಉ. ಗ್ರಂ., 61-64 III, ಪು. 52.53.

192 ಸುಶ್ರುತ, ಉ. ಗ್ರಂ., V, 8; ಪು. 79.

ಹೃದಯ, ಎಡಗಡೆಯ ಮತ್ತು ಬಲಗಡೆಯ ಶ್ವಾಸಕೋಶಗಳು, ಯಕೃತ್ತು, ಪ್ಲೀಹ, ದೊಡ್ಡ ಕರುಳು, ಮೂತ್ರ ಜನಕಾಂಗಗಳು, ಹೊಕ್ಕುಳು, ಗರ್ಭಾಶಯ, ಚಿಕ್ಕಕರುಳು, ಮೂತ್ರಕೋಶ ಎಂಬ ಅಂಗಗಳನ್ನು ಒಳಗೊಂಡ ಕೋಷ್ಠವೆಂಬುದನ್ನೂ ಸೇರಿಸುತ್ತಾನೆ.[193]

ಚರಕನು ಈ ಹದಿನೈದನ್ನು ಕೋಷ್ಠಾಂಗಗಳೆಂದು ಎಣಿಸುತ್ತಾನೆ: ನಾಭಿ, ಹೃದಯ, ಶ್ವಾಸಕೋಶಗಳು, ಯಕೃತ್, ಪ್ಲೀಹ, ಮೂತ್ರಜನಕಾಂಗಗಳು, ಮೂತ್ರಕೋಶ, ಪುರೀಷಾಧಾರ, ಆಮಾಶಯ, ಪಕ್ವಾಶಯ, ಉತ್ತರಗುದ, ಅಧರಗುದ, ಚಿಕ್ಕಕರುಳು, ದೊಡ್ಡ ಕರುಳು ಮತ್ತು ಶುಕ್ಲಾಶಯ.[194]

ಹೃದಯ

ಗರ್ಭಾಶಯೋಽಷ್ಟಮಃ ಸ್ತ್ರೀಣಾಂ ಪಿತ್ತಪಕ್ವಾಶಯಾಂತರೇ ।
ಪ್ರಸನ್ನಾಭ್ಯಾಂ ಕಫಾಸೃಗ್ಭ್ಯಾಂ ಹೃದಯಂ ಪಂಕಜಾಕೃತಿ ॥ 82 ॥ 131

ಹೆಂಗಸರ ಪಿತ್ತಾಶಯ ಮತ್ತು ಪಕ್ವಾಶಯಗಳ ನಡುವೆ ಇರುವ ಗರ್ಭಾಶಯವು ಎಂಟನೆ ಯದು. ತಿಳಿಯೂ ಶುದ್ಧವೂ ಪ್ರಕಾಶಮಾನವೂ ಆಗಿರುವ <ಪ್ರಸನ್ನಾಭ್ಯಾಂ> ಶ್ಲೇಷರಸ ಮತ್ತು ರಕ್ತಗಳಿಂದೊಡಗೂಡಿದ ಹೃದಯವು ತಾವರೆಹೂವಿನ ಆಕಾರದಲ್ಲಿ—

ಸುಷಿರಂ ಸ್ಯಾದಧೋ[47]ವಕ್ತ್ರಂ ಯಕೃತ್ಪ್ಲೀಹಾಂತರಸ್ಥಿತಮ್ ।
ಏತಚ್ಚ ಚೇತನಸ್ಥಾನಂ ತದಸ್ಮಿಂಸ್ತಮಸಾಽಽವೃತೇ ॥ 83 ॥ 132

—ಕೆಳಮುಖವಾಗಿಯೂ ಟೊಳ್ಳಾಗಿಯೂ[ಇದ್ದು] ಪಿತ್ತಕೋಶ ಮತ್ತು ತೊರಳೆಗಳ ಮಧ್ಯ ದಲ್ಲಿರುತ್ತದೆ. ಮತ್ತು ಇದು ಚೈತನ್ಯದ ಆವಾಸಸ್ಥಾನ. ಅದು(ಚೈತನ್ಯವು)ತಮಸ್ಸಿನಿಂದ ಆವೃತವಾಗಿ—

ಹೃದಯವನ್ನು ಚೇತನಾಧಿಷ್ಠಾನಂ ಎಂದು ಮಾತ್ರ ಚರಕನು ಹೇಳುತ್ತಾನೆ.[195] ಆದರೆ ಸುಶ್ರುತನು ಇದನ್ನು ಕೆಳಮುಖವಾಗಿರುವ ತಾವರೆಹೂವಿನಂತಿದೆಯೆಂದೂ, ಅದು ವಿಶೇಷವಾಗಿ ಚೈತನ್ಯದ ಸ್ಥಾನವೆಂದೂ, ಅದು ತಮಸ್ಸಿನಲ್ಲಿದ್ದಾಗ ಎಲ್ಲ ಪ್ರಾಣಿಗಳಿಗೆ ನಿದ್ರೆ(ಮರಣ)ಎಂದೂ, ಚಟುವಟಿಕೆಯಿಂದಿದ್ದಾಗ ಪ್ರಾಣಿಗಳಿಗೆ ಬದುಕೆಂದೂ ಹೇಳುತ್ತಾನೆ.[196]

ಹೃದಯವು ಎಲ್ಲ ಜೀವಿತಕರ್ಮಗಳ ಸ್ಥಿತಿಗೆ ಆವಶ್ಯಕವಾದ ಆಹಾರ, ಆಮ್ಲಜನಕ, ಇತ್ಯಾದಿಗಳನ್ನೊಳಗೊಂಡು ಕಶ್ಮಲಗಳನ್ನು ಕಳೆಯುವ ರಕ್ತಕ್ಕೆ ಆಕರವಾದುದರಿಂದ ಅದು ಚೈತನ್ಯಸ್ಥಾನವೆಂಬುದು ಭೌತಿಕದೃಷ್ಟಿಯಿಂದ ನಿರ್ವಿವಾದವೇ. ಆಧ್ಯಾತ್ಮಿಕ ದೃಷ್ಟಿಯಲ್ಲಿಯೂ ಅದು ಚೈತನ್ಯಸ್ಥಾನವೇ ಎಂಬುದನ್ನು ಕಲ್ಲಿನಾಥನು ವಿವರಿಸುತ್ತಾನೆ: 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' 'ಅಥ ಯದಿದಂ ಬ್ರಹ್ಮಪುರಂ', 'ಪುಂಡರೀಕಸನ್ನಿವೇಶಮ್' ಇತ್ಯಾದಿ ಶ್ರುತಿವಾಕ್ಯಗಳಿಂದ ಕೂಟಸ್ಥಬ್ರಹ್ಮನು ಹೃದಯದಲ್ಲೇ ಪ್ರಕಾಶಮಾನನಾಗುತ್ತಾನೆಂಬುದು ಅವನ

47 ಕ: ಸ್ನಾಯುವಂಶ್ಯಮಧೋ ?

193 ವಾಗ್ಭಟ, ಉ. ಗ್ರಂ., III, 10-12, ಪು. 40.
194 ಚರಕ, ಉ. ಗ್ರಂ., IV, 7-10 ; ಪು. 338.
195 ಅದೇ ಗ್ರಂಥ, IV, 7, 8 ; ಪು. 337.
196 ಸುಶ್ರುತ, ಉ. ಗ್ರಂ., IV, 31-32. ಪು. 59-60.

ತಾತ್ಪರ್ಯ.[197] ಬ್ರಹ್ಮವು ಅನಾಹತನಾದರೂಪಿನಲ್ಲಿ ಯೋಗಿಗಳಿಗೆ ಗೋಚರವಾಗುವುದು ಇಲ್ಲೇ ಎಂಬುದನ್ನಿಲ್ಲಿ ಸ್ಮರಿಸಬಹುದು. ಹೃದಯಪ್ರದೇಶವನ್ನು ಯೋಗಶಾಸ್ತ್ರವು ಬ್ರಹ್ಮವಸ್ತುವು ನಿರಾಕಾರ ನಿರ್ಗುಣದಲ್ಲಿ ಸಾಕ್ಷಾತ್ಕರಿಸುವ ದಹರಾಕಾಶವೆಂದು ಹೇಳುತ್ತದೆ. ಹೃದಯವು ಹೇಗೆ ಚೇತನಸ್ಥಾನವೆಂದು ಬ್ರಹ್ಮೋಪನಿಷತ್ತು ವರ್ಣಿಸಿದೆ.*

ಶರೀರಶಾಸ್ತ್ರದ ದೃಷ್ಟಿಯಲ್ಲಿ ಇದು ತಥ್ಯವೆಂಬುದು ಸ್ವಯಂಸಿದ್ಧವೇ ಆಗಿದೆ. ಪ್ರಸವಕ್ಕಿಂತ ಮೊದಲಿನಿಂದಲೂ ಭ್ರೂಣದ ಹೃದಯವು ಕೆಲಸಮಾಡುತ್ತಿರುತ್ತದೆ ಎಂದು ಇದೇ ಪ್ರಕರಣದ 28 ನೇ ಶ್ಲೋಕದ ವ್ಯಾಖ್ಯಾನದಲ್ಲಿ ಹೇಳಿದೆ. ಹೃದಯದ ಈ ಹಿಗ್ಗುವಿಕೆ, ಕುಗ್ಗುವಿಕೆಗಳು ಪ್ರಾಣಿಯ ಕಡೆಯ ಉಸಿರಿನತನಕ ಒಂದುಕ್ಷಣಮಾತ್ರವೂ ನಿಲ್ಲದೆ, ನಿಮಿಷಕ್ಕೆ 65–90 ಬಾರಿ ಅವ್ಯಾಹತವಾಗಿ ನಡೆಯುತ್ತಲೇ ಇರುತ್ತವೆ. ಇಷ್ಟು ಕೆಲಸಮಾಡುವ ಅಂಗವು ಇಡಿ ದೇಹದಲ್ಲಿಯೇ ಇಲ್ಲ. ಮಾನವ ನಿರ್ಮಿತವಾದ ಯಾವ ತಿದಿಯಾಗಲಿ, ರೇಚಕಯಂತ್ರ(ಪಂಪು)ವಾಗಲೀ, ಇಷ್ಟು ಸಮರ್ಥವಾಗಿ ಎಡೆಬಿಡದೆ ಕೆಲಸಮಾಡಲಾರದು. ಶಕ್ತಿಗಾಗಿ ಪರಾವಲಂಬನೆಯಿಲ್ಲದೆ ಕೆಲಸಮಾಡುವ ಅದ್ಭುತ ಗುಣವನ್ನು ಇದು ಪಡೆದಿದೆ. ಆದುದರಿಂದ ಇದು ಚೇತನದ ಎಂದರೆ ಶಕ್ತಿಯ, ಅಧಿಷ್ಠಾನ ಎಂಬುದು ಸ್ಥೂಲಾರ್ಥದಲ್ಲಿಯೂ ಬಹು ಅನ್ವರ್ಥವಾಗಿದೆ. ಇದಕ್ಕೆ ಕಾರಣ, ಹೃದಯದ ಮಾಂಸಖಂಡವನ್ನು ಉಂಟುಮಾಡುವ ಜೀವಾಣುಗಳ ವಿಶೇಷವೇ ಆಗಿದೆ. ಇವು ರಚನೆಯಲ್ಲಿ ಅನ್ಯಜೀವಾಣುಗಳಿಗಿಂತ ಭಿನ್ನವಾಗಿರುವುದೇ ಅಲ್ಲದೆ ನರಗಳ ಮೂಲಕ ಒದಗುವ ವಿದ್ಯುತ್ ಆವೇಗಗಳನ್ನೂ ವೇಧನೆಗಳನ್ನೂ ಹೀರಿಕೊಂಡು ಪ್ರತಿಕ್ರಿಯೆ ತೋರುವ ಅತ್ಯಂತ ಕ್ರಿಯಾಶಕ್ತಿಯನ್ನು ಪಡೆದಿದೆ. ಈ ವಿಧದ ಜೀವಾಣುಗಳ ರಚನೆಯನ್ನು ಮೊಟ್ಟಮೊದಲಬಾರಿಗೆ ಕಂಡುಹಿಡಿದು ವರ್ಣಿಸಿದ ಪರ್ಕಿಂಜೆ ಎಂಬ ವಿಜ್ಞಾನಿಯ ಗೌರವಾರ್ಥವಾಗಿ ಅವುಗಳಿಗೆ ಪರ್ಕಿಂಜೆ ಪದ್ಧತಿ (Purkinje system) ಎಂದು ಹೆಸರಿಟ್ಟಿದೆ.

ಎಚ್ಚರ-ನಿದ್ರೆ ಕನಸುಗಳಿಗೆ ಕಾರಣ

**ನಿಮೀಲತಿ ಸ್ವಪಿತ್ಯಾತ್ಮಾ ಜಾಗರ್ತಿ ವಿಕಸತ್ಯಪಿ ।**
**ದ್ವೇಧಾ ಸ್ವಪ್ನಸುಷುಪ್ತಿಭ್ಯಾಂ ಸ್ವಾಪೋ ಬಾಹ್ಯೇಂದ್ರಿಯಾಣಿ ಚೇತ್ ॥84॥** 133

—(ಮೊಗ್ಗಿನಂತೆ) ಮುಚ್ಚಿಕೊಂಡಿದ್ದರೆ ಆತ್ಮವು ನಿದ್ರೆಮಾಡುತ್ತದೆ; ಅರಳಿದ್ದರೆ ಎಚ್ಚರವಾಗಿರುತ್ತದೆ. ನಿದ್ರೆಯು ಕನಸು ಮತ್ತು ಗಾಢನಿದ್ರೆಗಳೆಂದು ಎರಡು ವಿಧ. ಹೊರಗಡೆಯ ಇಂದ್ರಿಯಗಳು—

**ಲೀಯಂತೇ ಹೃದಿ ಜಾಗರ್ತಿ ಚಿತ್ತಂ ಸ್ವಪ್ನಸ್ತದೋಚ್ಯತೇ ।**
**ಮನಶ್ಚೇಲ್ಲೀಯತೇ ಪ್ರಾಣೇ ಸುಷುಪ್ತಿಃ ಸ್ಯಾತ್ತದಾಽಽತ್ಮನಃ ॥ 85 ॥** 134

—ಹೃದಯದಲ್ಲಿ ಅಂಟಿಕೊಂಡು ಚಿತ್ತವು ಎಚ್ಚರವಾಗಿದ್ದರೆ ಅದನ್ನು (ಆ ಸ್ಥಿತಿಯನ್ನು) ಕನಸೆನ್ನುತ್ತಾರೆ. ಮನಸ್ಸು ಪ್ರಾಣಕ್ಕೆ ಅಂಟಿಕೊಂಡಿದ್ದರೆ ಆಗ ಆತ್ಮನಿಗೆ ಗಾಢನಿದ್ರೆ (ಯಾಗುತ್ತದೆ).

ಇಂದ್ರಿಯಾಂಗಗಳು ತಮ್ಮ ಕೆಲಸಗಳನ್ನು ನಿಲ್ಲಿಸಿದರೂ ಮನಸ್ಸು ಈ ವ್ಯಾಪಾರಗಳಿಂದ ವಿಮುಖವಾಗದೆ ಅವುಗಳಲ್ಲೇ ತೊಡಗಿದ್ದರೆ ಅದು ಸ್ವಪ್ನವೆನ್ನಿಸುತ್ತದೆ. ಮನಸ್ಸೂ ಇಂದ್ರಿಯಗಳೂ ತಮ್ಮ ಕೆಲಸಗಳನ್ನು ನಿಲ್ಲಿಸಿದಾಗ ಗಾಢನಿದ್ರೆಯಾಗುತ್ತದೆ. ಸ್ರೋತೋಮಾರ್ಗಗಳಲ್ಲಿ ಕಫವು ತುಂಬಿಕೊಂಡು ಇಂದ್ರಿಯಗಳು ತಮ್ಮ ತಮ್ಮ ವ್ಯಾಪಾರಗಳಿಂದ ಹಿಂತಿರುಗಿದರೆ ನಿದ್ರೆಯಾಗುವುದೆಂದು ಮತಾಂತರವಿದೆ.

---

197 ಕಲ್ಲಿನಾಥ, ಉ. ಗ್ರಂ., ಪು. 46. * ಬ್ರಹ್ಮೋಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 185.

ನವರಂಧ್ರಗಳು

**ಸ್ವಮುಪೀತಃ[48] ಪರಾತ್ಮಾನಂ ಸ್ವಪಿತ್ಯಾತ್ಮೇತ್ಯತೋ ಮತಃ ।**
**ಶ್ರವಣೇ ನಯನೇ ನಾಸೇ ವದನಂ ಗುದಶೇಫಸೀ ॥ 86 ॥** 135

ಆತ್ಮನು ತನ್ನ ಪರಮಾತ್ಮನಲ್ಲಿಯೇ ವಿಲೀನವಾಗುತ್ತಾನೆ. ಆದುದರಿಂದ ಆತ್ಮನು ನಿದ್ರೆ ಮಾಡುತ್ತಾನೆಂದು ಅಭಿಪ್ರಾಯಪಡಲಾಗಿದೆ. ಕಿವಿಗಳೆರಡು, ಕಣ್ಣುಗಳೆರಡು, ಮೂಗಿನ ಹೊಳ್ಳೆ ಗಳೆರಡು, ಬಾಯಿ, ಆಸನದ್ವಾರ ಮತ್ತು ಪುರುಷ ಜನನಾಂಗ,—

**ಬಹಿರ್ಮಲವಹಾನಿ ಸ್ಯುರ್ನವ ಸ್ರೋತಾಂಸಿ ದೇಹಿನಾಮ್ ।**
**ಸ್ತ್ರೀಣಾಂ ತ್ರೀಣ್ಯಧಿಕಾನಿ ಸ್ಯುಃ ಸ್ತನಯೋರ್ದ್ವೇ ಭಗೇ ಽಸೃಜಃ ॥ 87 ॥** 136

ಇವು ಒಂಬತ್ತು ದೇಹದ ಕಶ್ಮಲವನ್ನು ಹೊರಕ್ಕೆ ಕಾಲುವೆಯಂತೆ ಸಾಗಿಸುವ <ಸ್ರೋತ> ಗಳಾಗಿವೆ. ಹೆಂಗಸರಿಗಾದರೋ ಸ್ತನಗಳಲ್ಲಿ ಎರಡು, ಯೋನಿಯಲ್ಲಿ ರಜಸ್ಸಿನದು [ಒಂದು], ಹೀಗೆ ಮೂರು ಹೆಚ್ಚಾಗಿವೆ.

ಸುಶ್ರುತನೂ ಇದೇ ಸಂಖ್ಯೆಯ ಬಹಿರ್ಮುಖ ಮಲಸ್ರೋತಗಳನ್ನು ಕೊಡುತ್ತಾನೆ[198]. ವಾಗ್ಭಟನು ಇವುಗಳ ಜೊತೆಗೆ[199] ಪ್ರಾಣವಾಯುವನ್ನು ಒಯ್ಯುವ ಒಂದು, ರಕ್ತಾದಿ ಸಪ್ತಧಾತುಗಳನ್ನು ಒಯ್ಯುವ ಏಳು, ಪುರೀಷ, ಮೂತ್ರ, ಬೆವರುಗಳನ್ನು ಒಯ್ಯುವ ಮೂರು, ಕುಡಿದ ನೀರನ್ನು ಸಾಗಿಸುವುದು ಒಂದು, ಅನ್ನವನ್ನು (ಅನ್ನರಸ ವನ್ನು) ಒಯ್ಯುವ ಒಂದು, ಹೀಗೆ ಅಂತರ್ಮುಖಗಳಾದ ಹದಿಮೂರು ಸ್ರೋತಸ್ಸುಗಳನ್ನು ಹೆಚ್ಚಾಗಿ ಹೇಳುತ್ತಾನೆ: ಅಲ್ಲದೆ ಸ್ತ್ರೀಯರಲ್ಲಿ ಸ್ತನ್ಯವನ್ನು ಒಯ್ಯುವ ಎರಡು, ಯೋನಿರಂಧ್ರವೊಂದು ಹೀಗೆ ಮೂರು ಅಧಿಕ ಸ್ರೋತಗಳನ್ನು ಅವನೂ ಎಣಿಸುತ್ತಾನೆ[200].

ಜಾಲಗಳು

**ಅಸ್ಥಿಸ್ನಾಯುಸಿರಾಮಾಂಸಸ್ಥಾನಿ ಜಾಲಾನಿ ಷೋಡಶ ।**
**ಷಟ್ ಕೂರ್ಚಾಃ ಕರಯೋರಂಘ್ರ್ಯೋಃ ಕಂಧರಾಯಾಂ ಚ**
**ಮೇಹನೇ ॥ 88 ॥** 137

ಮೂಳೆ, ಸ್ನಾಯು, ಸಿರಾ, ಮಾಂಸಖಂಡಗಳು ಇವುಗಳಲ್ಲಿರುವ ಬಲೆಗಳು ಹದಿನಾರು. ಎರಡು ಕೈಗಳಲ್ಲೂ, ಎರಡು ಕಾಲುಗಳಲ್ಲೂ [ಒಟ್ಟು] ಆರು ಕುಂಚಗಳಿವೆ. ಕುತ್ತಿಗೆಯಲ್ಲಿ ಮತ್ತು ಪುರುಷ ಜನನಾಂಗದಲ್ಲಿ—

ಇವುಗಳ ಜೊತೆಗೆ ಶರೀರ, ಇಂದ್ರಿಯ ಮತ್ತು ಮನಸ್ಸುಗಳು ಒಂದುಗೂಡಿರುವ ಸ್ಥಾನಗಳೆಂದು ತಲೆ, ನಾಲಿಗೆ, ಕಂಠ, ರಕ್ತ, ಹೃದಯ, ನಾಭಿ, ಬಸ್ತಿ, ಶುಕ್ರ, ಓಜಸ್ಸು, ಆಸನದ್ವಾರ ಎಂಬ ಹತ್ತು ಜೀವಿತ ಸ್ಥಾನಗಳನ್ನು ವಾಗ್ಭಟನೂ[201], ಇವುಗಳಲ್ಲಿ ತಲೆಯನ್ನು ಮೂರ್ಧಾ ಎಂದೂ ಕಂಠದ ಬದಲು ಮಾಂಸವೆಂದು

48 ಕ, ಗ: ಸ್ವಮುಪೀತಂ.

198 ಸುಶ್ರುತ, ಉ. ಗ್ರಂ., V, 10, ಪು. 80.

199 ವಾಗ್ಭಟ, ಉ. ಗ್ರಂ., III, 40-41, ಪು. 45.

200 ಅದೇ ಗ್ರಂಥ, III, 41-42, ಪು. 45.

201 ಅದೇ ಗ್ರಂಥ, III, 13, ಪು. 41.

ಚರಕನೂ[202] ಹೇಳುತ್ತಾರೆ. ಹದಿನಾರು ಜಾಲಗಳನ್ನು ಮಾಂಸ, ಸಿರಾ, ಸ್ನಾಯು ಮತ್ತು ಅಸ್ಥಿಗಳಿಗೆ ಪ್ರತಿಯೊಂದಕ್ಕೂ ನಾಲ್ಕರಂತೆ ಸುಶ್ರುತನು ಹಂಚುತ್ತಾನೆ[203]. ಮೀನಿನ ಬಲೆಯಂತೆ ಶರೀರದಲ್ಲೆಲ್ಲಾ ಬಹುಸೂಕ್ಷ್ಮವಾಗಿ ಹರಡಿಕೊಂಡಿರುವ ನರಗಳ ಹೆಣಿಕೆಗೆ ಜಾಲವೆಂದು ಹೆಸರು. ಕೂರ್ಚವೆನ್ನುವುದು ಜಡೆಜಡೆಯಾಗಿ ಸೇರಿಕೊಂಡಿರುವ ನರಗಳ ದಪ್ಪ ದಾರ. ಇವುಗಳನ್ನು ಕೈಗಳಲ್ಲಿ ಎರಡು, ಕಾಲುಗಳಲ್ಲಿ ಎರಡು, ಕುತ್ತಿಗೆ ಮತ್ತು ಪುರುಷಜನನಾಂಗಗಳಲ್ಲಿ ಒಂದೊಂದು ಎಂದು ಸುಶ್ರುತನು ಎಣಿಸುತ್ತಾನೆ.[204] ಮಾಂಸಖಂಡದಿಂದಾದ ಉದ್ದವಾದ ಹಗ್ಗಕ್ಕೆ (ಹುರಿಹುರಿಯಾಗಿ ಸುತ್ತಿಕೊಂಡಿರುವ ತಂತು ವಿಶೇಷಕ್ಕೆ) ಮಾಂಸರಜ್ಜುವೆಂದು ಹೆಸರು. ವಾಗ್ಭಟನು ಪ್ರದೇಶಗಳನ್ನು ಹೇಳದೆ ನಾಲ್ಕು ಮಾಂಸರಜ್ಜುಗಳೆಂದರೆ[205] ಸುಶ್ರುತನು ಬೆನ್ನುಮೂಳೆಯ ಇಕ್ಕೆಲಗಳಲ್ಲೂ ಎರಡು ಒಳಗೂ ಎರಡು ಹೊರಗೂ ಇರುತ್ತವೆಂದು ಹೇಳುತ್ತಾನೆ.[206] ಕಂಧರ ಅಥವಾ ಕಂಡರವೆನ್ನುವುದು ಸ್ನಾಯುಗಳನ್ನು ದಪ್ಪ ಹಗ್ಗವಾಗುವಂತೆ ಒಟ್ಟಿಗೆ ಸೇರಿಸಿ ಹೆಣೆದುಕೊಂಡಿರುವ ಮಾಂಸಖಂಡ. ಇವುಗಳು ಹದಿನಾರೆಂದು ವಾಗ್ಭಟನೂ ಎಣಿಸುತ್ತಾನೆ.[207] ಸುಶ್ರುತನು ಕಾಲುಗಳು, ಕೈಗಳು, ಕುತ್ತಿಗೆ ಮತ್ತು ಬೆನ್ನುಗಳಲ್ಲಿ ನಾಲ್ಕು ನಾಲ್ಕೆಂದು ತಿಳಿಸಿ ಅವುಗಳು ಆಯಾ ಅಂಗಗಳೊಡನೆ ಸಂಧಿಸುವ ರೀತಿಯನ್ನೂ ತಿಳಿಸುತ್ತಾನೆ.[208] ಸೀವನಿಯೆಂದರೆ ವಿವಿಧ ಅಂಗಗಳ ಕೋಶಗಳನ್ನು ಸೇರಿಸಿ ಹೊಲೆಯುವ ನರ. ಸೀವನಿಗಳು ಏಳೆಂದು ವಾಗ್ಭಟನು ಹೇಳಿದರೂ,[207] ತಲೆಯಲ್ಲಿ ಐದು, ನಾಲಿಗೆಯಲ್ಲಿ ಒಂದು ಮತ್ತು ಪುರುಷಜನನಾಂಗದ ಕೆಳಗೆ ಒಂದು ಎಂದು ವಿವರಗಳನ್ನು ಕೊಡುವುದು ಸುಶ್ರುತನೇ.[209] ಸೀವನೀ ಎಂಬ ಪಾಠವನ್ನು ವಾಗ್ಭಟನೂ ಸೇವನಿ ಎಂಬುದನ್ನು ಸುಶ್ರುತನೂ ಬಳಸಿದ್ದಾರೆ. ರತ್ನಾಕರಕಾರನು ಹೇಳುವ ಹದಿನೆಂಟು ಸೀಮಂತಗಳನ್ನು ಎಂದರೆ ಮೂಳೆಗಳು ಸೇರುವೆಡೆಯಲ್ಲಿ ನೇರವಾಗಿ ಬೈತಲೆಯಂತೆ ಸೇರಿಸಿದ ಚರ್ಮಗಳ ಹೊಲಿಗೆಗಳನ್ನು, ವಾಗ್ಭಟನು ಹೇಳಿದರೂ[210] ಸುಶ್ರುತನು ಹದಿನಾಲ್ಕು ಸೀಮಂತಗಳನ್ನೇ ಎಣಿಸಿ ಮತಾಂತರದಲ್ಲಿ ಹದಿನೆಂಟೆಂದು ಸ್ವೀಕರಿಸಿದ್ದಾನೆ.[211] ಸೀಮಂತಗಳನ್ನು ಪಟ್ಟವರ್ಧನನು ಅನುವಾದ ಮಾಡಿರುವುದು[211] ಶಬ್ದಾರ್ಥಕ್ಕೂ ಲಕ್ಷಣಕ್ಕೂ ವಿರುದ್ಧವಾಗಿದೆ. ಸಂಧಿಗಳನ್ನು ಮುಚ್ಚಿಕೊಂಡಿರುವ ತಂತುಸದೃಶ ವಸ್ತುವಿನಿಂದ ಮಾಡಿದ ಸಂಚಿಕೆಗಳಲ್ಲಿರುವ ಮತ್ತು ಸಂಧಿಯಲ್ಲಿ ತಿಕ್ಕಾಟವನ್ನು ತಪ್ಪಿಸಲು ಮೆತ್ತೆಯಂತಿರುವ, 'ಬರ್ಸಾ' ಎಂದು ಸೀಮಂತವನ್ನು ಅವನು ಅನುವಾದಮಾಡಿದ್ದಾನೆ.

ಮಾಂಸರಜ್ಜು, ಸೀವನಿಗಳು

**ಪಾರ್ಶ್ವಯೋಃ ಪೃಷ್ಠವಂಶಸ್ಯ ಚತಸ್ರೋ ಮಾಂಸರಜ್ಜವಃ ।**
**ಸೀವನ್ಯಃ[49] ಪಂಚ ಶಿರಸಿ ದ್ವೇ ಜಿಹ್ವಾಲಿಂಗಯೋರ್ಮತೇ ॥ 89 ॥** 138

ಬೆನ್ನುಮೂಳೆಯ ಪಕ್ಕಗಳಲ್ಲಿ ನಾಲ್ಕು ಮಾಂಸದ ಹುರಿಗಳು, ತಲೆಯಲ್ಲಿ ಐದೂ ನಾಲಿಗೆ ಮತ್ತು ಪುರುಷಜನನಾಂಗಗಳಲ್ಲಿ ಎರಡೂ ಸೀವನಿಗಳು ಎಂದು ಸಮ್ಮತಿಸಿದೆ.

---

49 ಇದನ್ನು ಅ, ಕ ಗಳಲ್ಲಿ ಸೇವನೀ ಎಂದು ವ್ಯವಹರಿಸಿದೆ.

---

202 ಚರಕ, ಉ. ಗ್ರಂ., VI, 7, 9, ಪು. 338.
203 ಸುಶ್ರುತ, ಉ. ಗ್ರಂ., V, 12, ಪು. 80.
204 ಸುಶ್ರುತ, ಉ. ಗ್ರಂ., V, 13 ; ಪು. 81.
205 ವಾಗ್ಭಟ, ಉ. ಗ್ರಂ., III, 15 ; ಪು. 41.
206 ಸುಶ್ರುತ, ಉ. ಗ್ರಂ., V, 14 ; ಪು. 81.
207 ವಾಗ್ಭಟ, ಉ. ಗ್ರಂ., III, 15 ; ಪು. 41.
208 ಸುಶ್ರುತ, ಉ. ಗ್ರಂ., V, 11 ; ಪು. 80.
209 ಸುಶ್ರುತ, ಉ. ಗ್ರಂ., V, 15 ; ಪು. 81.
210 ವಾಗ್ಭಟ, ಉ. ಗ್ರಂ.: III, 14 ; ಪು. 41.
211 ಸುಶ್ರುತ, ಉ. ಗ್ರಂ., V, 17 ; ಪು. 82.

## 2. ಪಿಂಡೋತ್ಪತ್ತಿ ಪ್ರಕರಣ

ಎಲುಬುಗಳು ಸಂಖ್ಯೆ

**ಚತುರ್ದಶಾಷ್ಟಾದಶ ವಾ ಸೀಮಂತಾ [50] ಅಸ್ಥಿರಾಶಯಃ ।**
**ಅಸ್ಥ್ನಾಂ ಶರೀರೇ ಸಂಖ್ಯಾ ಸ್ಯಾತ್ ಷಷ್ಟಿಯುಕ್ತಂ ಶತತ್ರಯಮ್ ॥ 90 ॥** 139

ಸೀಮಂತಗಳೂ ಮೂಳೆಗಳ ಗುಂಪುಗಳೂ (ಪ್ರತ್ಯೇಕವಾಗಿ) ಹದಿನಾಲ್ಕು ಅಥವಾ ಹದಿನೆಂಟು. ಶರೀರದಲ್ಲಿ ಮೂಳೆಗಳ ಸಂಖ್ಯೆಯು ಮುನ್ನೂರರವತ್ತು.

ಚರಕನಲ್ಲಿ ಈ ವಿವರಗಳು ಇಲ್ಲವಾದುದರಿಂದಲೂ ವಾಗ್ಭಟನು ಬಹು ಸಂಕ್ಷೇಪವಾಗಿರುವುದರಿಂದಲೂ, ಸುಶ್ರುತಸಂಹಿತೆಯ ವಿವರಗಳೇ ಬಹುವಾಗಿ ಕಂಡುಬರುವುದರಿಂದಲೂ ಶಾರ್ಙ್ಗದೇವನು ಶರೀರಸಂಖ್ಯಾಪ್ರಕರಣದಲ್ಲಿ ಸುಶ್ರುತನನ್ನೇ ಅನುಸರಿಸಿರುವ ಹಾಗೆ ಕಾಣುತ್ತದೆ. ವಾಗ್ಭಟನು ಸೀಮಂತಗಳನ್ನು ಹದಿನೆಂಟು ಮಾತ್ರವೆನ್ನುತ್ತಾನೆ.[210] ಆದರೆ ಸುಶ್ರುತನು ಅಸ್ಥಿರಾಶಿಗಳಷ್ಟೇ ಸೀಮಂತಗಳೂ ಇರುತ್ತವೆಂದು ಹೇಳಿದ್ದಾನೆ; ತಾನು ಹದಿನಾಲ್ಕೇ ಸೀಮಂತಗಳೆಂದು ಭಾವಿಸಿದ್ದರೂ ಹದಿನೆಂಟನ್ನು ಮತಾಂತರದಿಂದ ಒಪ್ಪಿದ್ದಾನೆ.[211] ಇದನ್ನೇ ರತ್ನಾಕರಕಾರನು 'ಚತುರ್ದಶಾಷ್ಟಾದಶ ವಾ' ಎಂದಿರುವುದು.

ಎಲುಬಿನ ವಿಧಗಳು

**ವಲಯಾನಿ ಕಪಾಲಾನಿ ರುಚಕಾಸ್ತರುಣಾನಿ ಚ ।**
**ನಲಕಾನೀತಿ ತಾನ್ಯಾಹುಃ ಪಂಚಧಾ ऽಸ್ಥೀನಿ ಸೂರಯಃ ॥ 91 ॥** 140

ವಿದ್ವಾಂಸರು ಆ ಮೂಳೆಗಳನ್ನು ವಲಯಗಳು, ಕಪಾಲಗಳು, ರುಚಕಗಳು, ಮತ್ತು ತರುಣಗಳು, ನಲಕಗಳು ಎಂದು ಐದು ವಿಧವಾಗಿ ಹೇಳುತ್ತಾರೆ.

ಮೂಳೆಗಳ ಈ ವರ್ಗೀಕರಣವು ಮುಖ್ಯವಾಗಿ ಅವುಗಳ ಆಕಾರವನ್ನವಲಂಬಿಸಿದೆ. ಬಳೆಯ ಹಾಗಿರುವ ವಲಯ, ತಲೆಯ ಬರುಡೆಯ ಹಾಗಿರುವ ಕಪಾಲ, ಹರಿತವಾಗಿರುವ ರುಚಕ, ಎಳಸಾಗಿರುವ ತರುಣ, ನಾಳವಾಗಿರುವ ನಲಕ ಎಂದು ಮೂಳೆಗಳು ಐದು ವಿಧ. ಈ ವಿಧದ ವರ್ಗೀಕರಣವು ಸುಶ್ರುತನಲ್ಲಿಯೂ ಕಂಡುಬರುತ್ತದೆ.[212] 'ಆ ಮೂಳೆಗಳನ್ನು' ಎಂದರೆ, ಹಿಂದಿನ ಶ್ಲೋಕದಲ್ಲಿ ಹೇಳಿರುವ ಮುನ್ನೂರರವತ್ತು ಮೂಳೆಗಳನ್ನು ಎಂದರ್ಥ.

ಮೂಳೆ ಕೀಲುಗಳು

**ತ್ರೀಣ್ಯೇವಾಸ್ಥಿಶತಾನ್ಯತ್ರ ಧನ್ವಂತರಿರಭಾಷತ ।**
**ದ್ವೇ ಶತೇ ತ್ವಸ್ಥಿಸಂಧೀನಾಂ ಸ್ಯಾತಾಮತ್ರ ದಶೋತ್ತರೇ ॥ 92 ॥** 141

ಮೂಳೆಗಳನ್ನು ಮುನ್ನೂರು ಮಾತ್ರವೇ ಎಂದು ಧನ್ವಂತರಿಯು ಹೇಳಿದನು. ಮೂಳೆ ಕೀಲುಗಳಾದರೋ ಇನ್ನೂರಹತ್ತಿವೆ.

ರತ್ನಾಕರಕಾರನು ಮೂಳೆಗಳ ಸಂಖ್ಯೆಯನ್ನು ಮುನ್ನೂರ ಅರವತ್ತು ಎಂದು ತಿಳಿಯುತ್ತಾನೆ. ವಾಗ್ಭಟನದೂ ಇದೇ ಅಭಿಪ್ರಾಯ; ಅವನು ಈ ಸಂಖ್ಯೆಯಲ್ಲಿ ಹಲ್ಲುಗಳನ್ನೂ, ಉಗುರುಗಳನ್ನೂ ಸೇರಿಸುತ್ತಾನೆ.[213] ಸುಶ್ರುತನು ಈ ಸಂಖ್ಯೆಯನ್ನು ವೇದವಾದಿಗಳಿಂದ—ಎಂದರೆ ಯಜ್ಞಯಾಗಾದಿಗಳಲ್ಲಿ ಬಲಿಕೊಟ್ಟು ಶರೀರಶಾಸ್ತ್ರಜ್ಞಾನ ಪಡೆದಿರುವವರಿಂದ—ಪಡೆದಿದ್ದರೂ ಧನ್ವಂತರಿಮತವನ್ನೇ ಸಂಪೂರ್ಣವಾಗಿ ಆಶ್ರಯಿಸಿರುವುದರಿಂದ ಶಲ್ಯತಂತ್ರದ ಪ್ರಕಾರ ಮುನ್ನೂರೇ ಎಂದು ಹೇಳಿದ್ದಾನೆ.[214] ಈ ಶಲ್ಯತಂತ್ರನೆಂಬುದು ಶಸ್ತ್ರವೈದ್ಯದ ಸಾಮಾನ್ಯನಾಮವಾಗಿ

50 ಇ ಮತ್ತು ಆ ಗಳಲ್ಲಿ ಸಂಮತಾ ಎಂಬ ಭ್ರಷ್ಟಪಾಠವಿದೆ.

212 ಸುಶ್ರುತ, ಉ. ಗ್ರಂ. V, 20, ಪು. 85.

213 ವಾಗ್ಭಟ, ಉ. ಗ್ರಂ. III, 16; ಪು. 41.

214 ಸುಶ್ರುತ, ಉ. ಗ್ರಂ. V, 18; ಪು. 82.

ಇಲ್ಲಿ ಪ್ರಯೋಗವಾಗಿದೆಯೋ ಅಥವಾ (ಧನ್ವಂತರಿಯು ಬರೆದ?) ಶಲ್ಯತಂತ್ರವೆಂಬ ಗ್ರಂಥದ ಹೆಸರೋ ತಿಳಿಯುವಂತಿಲ್ಲ. ಈ ಮುನ್ನೂರನ್ನು ಅವನು ಕೈಗಳು ಕಾಲುಗಳಲ್ಲಿ ಪ್ರತಿಯೊಂದರಲ್ಲೂ ಮೂವತ್ತರಂತೆ ಒಟ್ಟು ನೂರ ಇಪ್ಪತ್ತು, ಬಸ್ತಿಪ್ರದೇಶದಲ್ಲಿ ನೂರಹದಿನೇಳು, ತಲೆ ಮತ್ತು ಕಂಠಗಳಲ್ಲಿ ಅರವತ್ತಮೂರು ಎಂದೂ ವಿಂಗಡಿಸಿದ್ದಾನೆ.

ಶಲ್ಯತಂತ್ರವೆಂಬ ಗ್ರಂಥವೇನೋ ಇಂದು ಹಸ್ತಪ್ರತಿಯಲ್ಲಿ ದೊರೆಯುತ್ತದೆ. ಉದಾಹರಣೆಗೆ, ರಾಜೇಂದ್ರ ಲಾಲ್‌ಮಿತ್ರ,[215] ಕೀಲ್‌ಹಾರ್ನ್[216] ಮತ್ತು ಪೀಟರ್ಸನ್[217] ಇವರು ಈ ಗ್ರಂಥದ ಹಸ್ತಪ್ರತಿಯನ್ನು ಗಮನಿಸಿ, ವರದಿಮಾಡಿದ್ದಾರೆ. ಆದರೆ ಇದು ಮುಖ್ಯವಾಗಿ, ತೀವ್ರರೋಗಗಳನ್ನು ಮಂತ್ರಶಾಸ್ತ್ರ ಮತ್ತು ತಂತ್ರಶಾಸ್ತ್ರಗಳಿಂದ ಗುಣಪಡಿಸುವ ಬಗೆಯನ್ನು ವರ್ಣಿಸುತ್ತದೆ. ಅಲ್ಲದೆ ಇದು ಧನ್ವಂತರಿ ರಚಿತವೆಂದು ಅದರಲ್ಲಾಗಲೀ, ಧನ್ವಂತರಿಯವೆಂದು ಹೇಳಲಾಗುವ ಇತರ ಗ್ರಂಥಗಳಲ್ಲಾಗಲೀ, ಬೇರೆ ಆಯುರ್ವೇದಶಾಸ್ತ್ರ ಗ್ರಂಥಗಳಲ್ಲಾಗಲೀ ಹೇಳಿಲ್ಲ. ಧನ್ವಂತರಿಯ ಹೆಸರಿನಲ್ಲಿಯೇ ಕಡೆಯುಪಕ್ಷ ಇಷ್ಟು ಗ್ರಂಥಗಳಾದರೂ ದೊರೆಯುತ್ತವೆ : ಆಯುರ್ವೇದಸಾರಾವಲೀ,[218] ಔಷಧಪ್ರಯೋಗ,[219] ಕಾಲಜ್ಞಾನ,[220] ಚಿಕಿತ್ಸಾದೀಪಿಕಾ,[221] ಚಿಕಿತ್ಸಾಸಾರ,[222] ಧನ್ವಂತರೀನಿಘಂಟು,[223]

---

215 Rajendralal Mitra, Notices of Sanskrit Mss, Calcutta, 1871-90, No. 2255.

216 Kielhorn, F., A Catalogue of Sanskrit Mss Existing in Central Provinces, Nagpur, 1874, No. 52.

217 Peterson, Detailed Report of Operations in search of Sanskrit Mss in the Bombay Circle, Aug. 1882—Mar. 1886 & 1892, Bombay 1883-1887 & 1894; Vol. 4, No. 43.

218 Haraprasada Sastri, Notices of Sanskrit Mss. Calcutta 1898, Vol. 1, No. 31.

219 Oppert, Gustav, Lists of Sanskrit Mss in Private Libraries of Southern India, Madras, 1880 and 1885, No. 1168.

220 Buhler, G., A Catalogue of Saskrit Manuscripts contained in the Private Libraries of Gujarat, Kathiawad, Kach, Sindh and Khandesh, Bombay, 1871-73, Vol. IV, 220.

221 Deviprasada., Catalogue of Skt. Mss Existing in Oudh, Calcutta, 1878, III, 20.

222 Buhler, G., *op. cit.*, Vol. IV, 224.

223 Rajendralal Mitra, *op. cit.*, 823; Kielhorn, F., *op. cit.*, 212, Buhler, G., *op. cit.*, IV 226, Oppert, Gustav, *op. cit.*, 3991, 5021 *et seq.* Lawrence, R., List of Skt. Mss Supposed by the Nepalese Pandits to be rare in Nepalese Libraries in Khatmandoo, Nepal, 1868, No. 13; A Catalogue of Skt. Mss in Private Libraries of the North-West Provinces, Benares, 1874, No, 592; Rice, Lewis, B., Catalogue of Skt. Mss in Mysore and Coorg, Bangalore, 1884, No, 294 etc. etc. etc.

2. ಪಿಂಡೋತ್ಪತ್ತಿ ಪ್ರಕರಣ

ನಿಬಂಧಸಂಗ್ರಹ,[224] ಉತ್ತರನಿಬಂಧಸಂಗ್ರಹ,[225] ಪಥ್ಯಾಪಥ್ಯ,[226] ಬಾಲಚಿಕಿತ್ಸಾ,[227] ಯೋಗಚಿಂತಾಮಣಿ,[228] ಯೋಗದೀಪಿಕಾ,[229] ವಿದ್ಯಾಪ್ರಕಾಶಚಿಕಿತ್ಸಾ,[230] ವೈದ್ಯಭಾಸ್ಕರೋದಯ,[231] ವೈದ್ಯವಿದ್ಯಾವಿನೋದ.[232] ಇವುಗಳಲ್ಲದೆ ಚಿಕಿತ್ಸಾತತ್ತ್ವವಿಜ್ಞಾನವು ಧನ್ವಂತರಿಕೃತವೆಂದು ಬ್ರಹ್ಮವೈವರ್ತಪುರಾಣದಲ್ಲಿನ ಉದ್ಧೃತಿಯಿಂದ ತಿಳಿದು ಬರುತ್ತದೆ. ಧನ್ವಂತರಿ ಗುಣಾಗುಣಯೋಗಶತ,[233] ಧನ್ವಂತರಿಗ್ರಂಥ,[234] ಧನ್ವಂತರಿಪಂಚಕ[235] ಮೊದಲಾದವೂ ಧನ್ವಂತರಿಗೇ ಆರೋಪಿಸಲ್ಪಟ್ಟಿವೆ. ಧನ್ವಂತರಿವಿಲಾಸ,[236] ಧನ್ವಂತರಿಸಾರನಿಧಿ[237] ಮುಂತಾದ ಅನ್ಯಕೃತಗ್ರಂಥಗಳೂ ರೂಢಿಯಲ್ಲಿವೆ. ಧನ್ವಂತರಿ ಮಹರ್ಷಿಯು ಆಯುರ್ವೇದಶಾಸ್ತ್ರದ ಪ್ರಥಮಪ್ರವರ್ತಕನೆಂದು ಪ್ರಸಿದ್ಧನಾದುದರಿಂದ, ತಮ್ಮ ಪುಸ್ತಕಗಳಿಗೂ ಪ್ರಚಾರ, ಮಾನ್ಯತೆಗಳು ದೊರೆಯಲೆಂಬ ಆಸೆಯಿಂದ ಹಲವರು ಅಲ್ಪಗುಣದ ತಮ್ಮ ಗ್ರಂಥಗಳನ್ನು ಬೇರೆಬೇರೆ ಕಾಲಗಳಲ್ಲಿ ಧನ್ವಂತರಿಯ ಹೆಸರಿನಲ್ಲೇ ರಚಿಸಿದ್ದಾರೆ. ಹೀಗಾಗಿ ಮೂಲಧನ್ವಂತರಿಯ ಹಾಗೂ ಅವನು ಬರೆದ ಗ್ರಂಥದ ಬಗೆಗೆ ಬಹುವಾಗಿ ಭ್ರಾಂತಿ, ಅನಿಶ್ಚಯ, ಅಜ್ಞಾನಗಳೇ ಹರಡಿವೆ. ಮೇಲೆ ಹೇಳಿದ ಗ್ರಂಥಗಳಲ್ಲಿ ಧನ್ವಂತರೀನಿಘಂಟು ಅಮರಕೋಶವ್ಯಾಖ್ಯಾನಸಂದರ್ಭದಲ್ಲಿ ಕ್ಷೀರಸ್ವಾಮಿಯಿಂದಲೂ, ಭಾವ ಪ್ರಕಾನದಲ್ಲಿ ಶಾರದಾತನಯನಿಂದಲೂ ಉದ್ಧೃತವಾಗಿದೆ; ಮೈಸೂರು, ಮದ್ರಾಸ್, ಬಂಗಾಳ, ಪಂಜಾಬು, ನೇಪಾಲ, ಕೇರಳ, ಕಾಶಿ, ತಂಜಾವೂರು ಇತ್ಯಾದಿಯಾಗಿ ದೇಶದ ಎಲ್ಲಾ ಕಡೆಗಳಲ್ಲಿಯೂ ಅದು ಬಹು ಹಸ್ತಪ್ರತಿ ಗಳಲ್ಲಿ ಉಳಿದುಬಂದಿದೆ; ಆದುದರಿಂದ ಅದೇ ಹೆಚ್ಚು ಪ್ರಾಚೀನವೆಂದು ಊಹಿಸಬಹುದು. ಈ ಗ್ರಂಥವು ಮದ್ರಾಸಿನಲ್ಲೂ ಪೂನಾ ಆನಂದಾಶ್ರಮದಲ್ಲೂ ಪ್ರಕಟವಾಗಿದೆ. ಆದರೆ ಇದು ಮುಖ್ಯವಾಗಿ ವಿವಿಧರೋಗಗಳಿಗೆ ಔಷಧಗಳನ್ನು ಸೂಚಿಸುವ ನಿಘಂಟುಗ್ರಂಥವಾಗಿದೆ. ಆದುದರಿಂದ, ಶಾರ್ಙ್ಗದೇವ, ವಾಗ್ಭಟ, ಚರಕಾದಿ ಆಯುರ್ವೇದಾಚಾರ್ಯರುಗಳು ಧನ್ವಂತರಿಯನ್ನು ಕುರಿತು ಆಡಿರುವ ಮಾತುಗಳ ವಿವೇಚನೆಗೆ ಮೇಲೆ ಹೇಳಿದ ಗ್ರಂಥಗಳಿಂದ ವಿಶೇಷ ಪ್ರಯೋಜನವೇನೂ ಆಗುವುದಿಲ್ಲ. ಪ್ರಾಚೀನಸಂಗೀತಶಾಸ್ತ್ರಪ್ರವರ್ತಕರಾದ ಭರತ,

---

224 Peterson: *op, cit.*, IV, 40.

225 Bhandarkar, R. G., Report on the search for Skt. Mss in the Bombay Presidency during 1885-86, 1886-87, Bombay, 1894, No. 909.

226 Aufrecht, Theodor, Katalog der Sanskrit-Handschriften der Universitatz-Bibliothek in Leipzig, Leipzig, 1901. Nos. 1215, 1216.

227 Buhler, G, *op.cit.*, IV, 230.

228 Bhandarkar, R. G., *op.. cit,*, for 1882-83, Bombay 1884, No 371.

229 Buhler, G., *op.cit,*, IV, 230.

230 Rajendralal Mitra, *op. cit.*, No. 1446.

231 Stein, M.A., Catalogue of the Skt. Mss in the Raghunatha Temple Library of H. H. the Maharaja of Jammu and Kashmir, Bombay, 1894, 190.

232 Stein, M.A., *op. cit., loc.-cit.*

233 Rajendralal Mitra, *op. cit.*, 871 3128.

234 Oppert, Gustav., *op.cit.*, 69.

235 Oppert, Gustav: *op.-cit.* 4118.

236 Dhanvantarivilasa by King Tulaja, Mss Nos. 11066-9. Tanjore New Descriptive Catalogue of Skt. Mss.

237 Dhanvantarisaranidhi by King Tulajai, *ibid.*, Mss. No. 11069-72.

2. ಪಿಂಡೋತ್ಪತ್ತಿ ಪ್ರಕರಣ

ದತ್ತಿಲ, ಕೋಹಲ, ತುಂಬುರು, ನಾರದ, ಕಶ್ಯಪ, ಯಾಷ್ಟಿಕ, ವಿಶ್ವಾವಸು, ದುರ್ಗಾಶಕ್ತಿ, ಮತಂಗ ಮುಂತಾದವರಂತೆ ಆಯುರ್ವೇದಶಾಸ್ತ್ರಪ್ರವರ್ತಕನಾದ ಧನ್ವಂತರಿಯೂ ಅವನ ಗ್ರಂಥವೂ ಅನಿಶ್ಚಯತೆಯ ಮೋಡಗಳಿಂದ ಆವೃತವಾಗಿರುವುದು ನಮ್ಮ ದುರ್ದೈವ.

ಎಲುಬು ಕೀಲುಗಳನ್ನು ಸುಶ್ರುತನೂ[238] ವಾಗ್ಭಟನೂ[239] ಇನ್ನೂರಹತ್ತೆಂದು ಒಪ್ಪುತ್ತಾರೆ. ಸುಶ್ರುತನು ಇವುಗಳನ್ನು ಕೈಕಾಲುಗಳಲ್ಲಿ ಪ್ರತಿಯೊಂದಕ್ಕೂ ಹದಿನೇಳರಂತೆ ಅರವತ್ತೆಂಟು, ಮುಂಡದಲ್ಲಿ ಐವತ್ತೊಂಬತ್ತು, ತಲೆ ಮತ್ತು ಕುತ್ತಿಗೆಗಳಲ್ಲಿ ಎಂಬತ್ತಮೂರೆಂದು ವಿಂಗಡಿಸುತ್ತಾನೆ. ವಾಗ್ಭಟನು ಆತ್ರೇಯನನ್ನು ಉದ್ಧರಿಸಿ ಸಂಧಿಗಳು ಎರಡುಸಾವಿರವೆಂಬ ಮತಾಂತರವನ್ನೂ ಹೇಳುತ್ತಾನೆ. ಸ್ನಾಯು, ಪೇಶಿ ಮತ್ತು ಸಿರೆಗಳನ್ನು ಆಶ್ರಯಿಸಿರುವ ಸಂಧಿಗಳನ್ನೂ ಸೇರಿಸಿ ಹೀಗೆ ಎಣಿಸಿರಬಹುದೆಂಬ ಭಟ್ಟಾಚಾರ್ಯನ ಸೂಚನೆಯು ಚಿಂತ್ಯವಾಗಿದೆ.[240]

ಮನುಷ್ಯದೇಹದಲ್ಲಿರುವ 360 ಅಸ್ಥಿಗಳ ವಿನಿಯೋಗವನ್ನು ಯಾಜ್ಞವಲ್ಕ್ಯನು ತುಂಬಾ ನಿಷ್ಕೃಷ್ಟವಾಗಿ ಹೀಗೆ ಲೆಕ್ಕಮಾಡುತ್ತಾನೆ.[241]

| | ವಿವರ | ಸಂಖ್ಯೆ | ಒಟ್ಟು | ಮೊತ್ತ |
|---|---|---|---|---|
| 1 | ಹಲ್ಲುಗಳು | 32 | | |
| | ಹಲ್ಲಿನ ಮೂಲದಲ್ಲಿರುವ ಸ್ಥಾಲವೆಂಬ ಅಸ್ಥಿ | 32 | 64 | |
| 2 | ಉಗುರುಗಳು | | | |
| | ಕೈಬೆರಳುಗಳು | 10 | | |
| | ಕಾಲುಬೆರಳುಗಳು | 10 | 20 | |
| 3 | ಕೈಗಳು, ಕಾಲುಗಳು ಇವುಗಳಲ್ಲಿ ಮಣಿಕಟ್ಟಿನ ಮೇಲಕ್ಕೆ ಇರುವ ನಾಲ್ಕು ಶಲಾಕಾಕಾರದ ಅಸ್ಥಿಭಾಗಗಳಿಂದ | 20 | 20 | 104 |
| 4 | ಒಂದೊಂದು ಬೆರಳಿನಲ್ಲಿಯೂ ಮೂರು ಅಸ್ಥಿಗಳಂತೆ 20 ಬೆರಳುಗಳಲ್ಲಿ | 60 | | |
| 5 | ಹಿಮ್ಮಡಿಗಳು | 2 | | |
| 6 | ಕಾಲಿನ ಹರಡುಗಳು | 4 | | |
| 7 | ಮೊಳಕೈಗಳು (ಮುಷ್ಟಿ?) <ಅರತ್ನಿಕಾ> | 4 | | |
| 8 | ಮೊಳಕಾಲುಗಳು | 4 | 74 | 74 |
| 9 | ಮಂಡಿ, ಗಲ್ಲ, ತೊಡೆ, ಅಂಸ (ಭುಜಶಿರ), ಅಕ್ಷ (ಕಣ್ಣು–ಕಿವಿಗಳ ಮಧ್ಯೆ ಶಂಖದ ಕೆಳಗಡೆ ಇರುವ ಸ್ಥಾನ), ಅಂಗಳು, ಪಿರ್ರೆಗಳು ಈ ಏಳು ಸ್ಥಾನಗಳಿಗೂ ಎರಡೆರಡರಂತೆ ಹಲಗೆಗಳು | 14 | 14 | 14 |
| 10 | ಗುಹ್ಯ | 1 | | |
| 11 | ಬೆನ್ನು | 45 | | |

238 ಸುಶ್ರುತ, ಉ. ಗ್ರಂ., V, 18, ಪು. 82.

239 ವಾಗ್ಭಟ, ಉ. ಗ್ರಂ., III, 16–17, ಪು. 41.

240 ಅದೇ ಗ್ರಂಥ, ಪು. 42.

241 ಯಾಜ್ಞವಲ್ಕ್ಯ, ಉ. ಗ್ರಂ., ಅದೇ ಸ್ಥಾನ, 85-90.

## 2. ಪಿಂಡೋತ್ಪತ್ತಿ ಪ್ರಕರಣ

| | ವಿವರ | ಸಂಖ್ಯೆ | ಒಟ್ಟು | ಮೊತ್ತ |
|---|---|---|---|---|
| 12 | ಕತ್ತು | 15 | | |
| 13 | ಜತ್ರು (ಕಾಲರ್ ಬೋನ್ ಅಥವಾ ಗ್ರೀವಾಸ್ಥಿ) | 2 | | |
| 14 | ದವಡೆ | 1 | 64 | 64 |
| 15 | ದವಡೆಯ ಮೂಲ, ಎರಡೆರಡರಂತೆ | 4 | | |
| 16 | ಹಣೆ, ಅಕ್ಷಿಗಂಡಗಳಿಗೆ ಎರಡೆರಡು | 4 | | |
| 17 | ನಾಸಾಮೂಲದ ಘನವೆಂಬ ಅಸ್ಥಿ | 1 | 9 | |
| 18 | ಕೌಂಕುಳಿನ ಕೆಳಗೆ ಪಕ್ಕಗಳಲ್ಲಿ ಮಾಂಸಾರ್ಬುದಗಳನ್ನು ಸೇರಿಸುವ ಸಣ್ಣ ಸಣ್ಣ ಅಸ್ಥಿಗಳು | 72 | 72 | 81 |
| 19 | ಹುಬ್ಬು, ಕಿವಿಗಳ ಮಧ್ಯೆ ಇರುವ ಶಂಖವೆಂಬ ಎರಡು, ತಲೆಚಿಪ್ಪಿನ ನಾಲ್ಕು, ಎದೆ ಮತ್ತು ವಕ್ಷಗಳಲ್ಲಿ ಹದಿನೇಳು, ಹೀಗೆ | 23 | 23 | 23 |
| | | | ಒಟ್ಟು | 360 |

ಆಧುನಿಕ ಪಾಶ್ಚಾತ್ಯ ಶರೀರಶಾಸ್ತ್ರಜ್ಞರು ಮಾನವಶರೀರದಲ್ಲಿ ಒಟ್ಟು 206 ಮೂಳೆಗಳನ್ನು ಎಣಿಸುತ್ತಾರೆ[242] ಈ ಸಂಖ್ಯೆ 200 ರಿಂದ 260 ರ ವರೆಗೆ ವ್ಯತ್ಯಾಸವಾಗುವುದುಂಟು. ಇದಕ್ಕೆ ಅವರು ವಯಸ್ಕಮಾನವದೇಹವನ್ನು ಗಣಿಸುವುದೂ, ಮಗುವಿನ ದೇಹದಲ್ಲಿ ಬಿಡಿಯಾಗಿರುವ ಹಲವು ಮೂಳೆಗಳು ತಾರುಣ್ಯ ಮತ್ತು ನಂತರದಲ್ಲಿ ಒಂದಾಗಿ ಬೆಸೆಯುವುದು, ಹಲ್ಲುಗಳನ್ನು ಮೂಳೆಗಳೆಂದು ಎಣಿಸದಿರುವುದು, ಕಿವಿಯ ಮೂಳೆಗಳನ್ನೂ, ಅನೇಕ ಮೃದ್ವಸ್ಥಿಗಳನ್ನೂ (cartilages) ಗಣಿಸದಿರುವುದೂ ಮುಖ್ಯ ಕಾರಣಗಳಾಗಿವೆ. ಭಾರತೀಯ ಆಯುರ್ವೇದಾಚಾರ್ಯರೇ ಈ ವಿಷಯದಲ್ಲಿ ಹೆಚ್ಚು ವೈಜ್ಞಾನಿಕವಾಗಿರುವಂತೆ ತೋರುತ್ತದೆ.

ಕೀಲುಗಳ ವಿಧಗಳು

**ಕೋರಕಾಃ ಪ್ರತರಾ[51]ಸ್ತುನ್ನಾಃ ಸೀವನ್ಯಃ ಸ್ಯುರುಲೂಖಲಾಃ ।**
**ಸಾಮುದ್ಗಾ[52] ಮಂಡಲಾಃ ಶಂಖಾವರ್ತಾ ವಾಯಸತುಂಡಕಾಃ ॥ 93 ॥** 142

ಕೋರಕಗಳು, ಪ್ರತರಗಳು, ತುನ್ನಗಳು, ಸೀವನಿಗಳು, ಉಲೂಖಲಗಳು, ಸಾಮುದ್ಗಗಳು, ಮಂಡಲಗಳು, ಶಂಖಾವರ್ತಗಳು, ವಾಯಸತುಂಡಕಗಳು,—

ಅಸ್ಥಿ ಸಂಧಿಗಳನ್ನು ಶಾರ್ಙ್ಗದೇವನು ಸುಶ್ರುತನನ್ನನುಸರಿಸಿ ಅವುಗಳ ಆಕಾರವನ್ನು ಮುಖ್ಯವಾಗಿ ಅವಲಂಬಿಸಿ ವಿಂಗಡಿಸಿದ್ದಾನೆ. ಹೇಗೆಂದರೆ ಹಾಗೆ ಚಲಿಸಬಲ್ಲ ಕೋರಕಗಳು, (ಕುತ್ತಿಗೆ ಮತ್ತು ಬೆನ್ನುಮೂಳೆಗಳಲ್ಲಿರುವಂತೆ) ಒಂದನ್ನೊಂದು ಅಡ್ಡಹಾಯುವ ಪ್ರತರಗಳು, (ತಲೆಬುರುಡೆ ಮೊದಲಾದವುಗಳಲ್ಲಿರುವಂತೆ) ಗರಗಸದ ಹಲ್ಲುಗಳಂತೆ ಒಂದರಲ್ಲಿ ಮತ್ತೊಂದು ಕೂತಿರುವ ತುನ್ನ ಸೀವನಿಗಳು, (ಕೌಂಕಳು, ತೊಡೆ ಕೀಲುಗಳು ಮುಂತಾದ) ಒರಳಿನಂತಿರುವ ಉಲೂಖಲಗಳು, (ಭುಜದ ಮೂಳೆಯಂತೆ) ಪೆಟ್ಟಿಗೆಯ ಹಾಗಿರುವ ಸಾಮುದ್ಗಗಳು, (ಕಣ್ಣು ಮೂಳೆ ಮುಂತಾಗಿ) ಗುಂಡಗಿರುವ ಮಂಡಲಗಳು, (ಕಿವಿಯೊಳಗಿನ ಮೂಳೆಯಂತೆ) ಸುರುಳಿ ಸುತ್ತಿರುವ ಶಂಖಾವರ್ತಗಳು,

51 ಗ : ಪ್ರಚುರ ? 52 ಅ : ಸಾಮುದ್ರಾ ?

242 ಸ್ಮಾಲ್, ಉ. ಗ್ರಂ., 182 ; The Readers Digest Book of the Human Body, p. 228,

ಕಾಗೆಯ ಕೊಕ್ಕಿನಂತಿರುವ ವಾಯಸತುಂಡಕಗಳು, ಹೀಗೆ ಎಲುಬು ಕೀಲಗಳು ಎಂಟುವಿಧ. ಇವುಗಳ ವಿವರಗಳನ್ನು ಸುಶ್ರುತನಲ್ಲಿ ಕಾಣಬಹುದು.[243] ಈ ಹೆಸರುಗಳೆಲ್ಲ ಅನ್ವರ್ಥವಾಗಿವೆ.

ಕುನ್ಹನ್‌ರಾಜಾ ಕೋರಕ ಎಂಬುದಕ್ಕೆ ಮೊಗ್ಗು ಎಂದೂ ವಾಯಸ ಎಂದರೆ ಹಕ್ಕಿ ಎಂದೂ ತಪ್ಪು ಅರ್ಥ ಹೇಳಿದ್ದಾನೆ.[244]

ಇತರ ಸಂಧಿಗಳು

**ಇತ್ಯಷ್ಟಧಾ ಸಮುದ್ದಿಷ್ಟಾ ಮುನೀಂದ್ರೈರಸ್ಥಿಸಂಧಯಃ ।**
**ಪೇಶೀಸ್ನಾಯುಸಿರಾಸಂಧಿಸಹಸ್ರದ್ವಿತಯಂ ಮತಮ್ ॥ 94 ॥** 143

—ಎಂಬುದಾಗಿ ಮೂಳೆಕೀಲುಗಳು ಮುನಿಶ್ರೇಷ್ಠರುಗಳಿಂದ ಎಂಟು ವಿಧವಾಗಿ ಪರಿಗಣಿತವಾಗಿವೆ. ಪೇಶೀ, ಸ್ನಾಯು, ಸಿರಾ ಇವುಗಳ ಸಂಧಿಗಳು ಎರಡುಸಾವಿರವೆಂದು ಅಭಿಪ್ರಾಯಪಡಲಾಗಿದೆ.

ರತ್ನಾಕರಕಾರನು ಇಲ್ಲಿ ಆತ್ರೇಯರನ್ನು ಅನುಸರಿಸಿರುವಂತೆ ತೋರುತ್ತದೆ. ಈ ಸಂಧಿಗಳ ಸಂಖ್ಯೆಯನ್ನು ಎರಡುಸಾವಿರವೆಂದು ವಾಗ್ಭಟನೂ ಆತ್ರೇಯರಿಂದಲೇ ಪಡೆದುಕೊಂಡಿದ್ದಾನೆ.[245] ಇವುಗಳ ಸಂಖ್ಯೆಯು ತಿಳಿಯುವುದಿಲ್ಲವೆಂದು ಸುಶ್ರುತನು ಹೇಳುತ್ತಾನೆ.[246]

ಸ್ನಾಯುವಿಧಗಳು

**ನವ ಸ್ನಾಯುಶತಾನಿ ಸ್ಯುಶ್ಚತುರ್ಧಾ ಸ್ನಾಯವೋ ಮತಾಃ ।**
**ಪ್ರತಾನವತ್ಯಃ ಸುಷಿರಾಃ ಕಂಡರಾಃ ಪೃಥುಲಾಸ್ತಥಾ ॥ 95 ॥** 144

ಸ್ನಾಯುಗಳು ಒಂಬೈನೂರಿವೆ. ಸ್ನಾಯುಗಳು ಪ್ರತಾನವತೀ, ಸುಷಿರಾ, ಕಂಡರಾ ಹಾಗೆಯೇ ಪೃಥುಲಾಗಳೆಂಬ ನಾಲ್ಕುವಿಧಗಳೆಂದು ಅಭಿಪ್ರಾಯಪಡಲಾಗಿದೆ.

ಸ್ನಾಯುವೆಂದರೆ ಇಲ್ಲಿ ಮಾಂಸಖಂಡ, ಮಾಂಸದಪಟ್ಟಿ ಅಥವಾ ಹುರಿಯೆಂದು ಅರ್ಥಮಾಡಬೇಕು. ಇವುಗಳನ್ನು ಒಂಬೈನೂರೆಂದು ವಾಗ್ಭಟನೂ ಹೇಳುತ್ತಾನೆ.[247] ಸುಶ್ರುತನು ಕೈಕಾಲುಗಳಲ್ಲಿ ಪ್ರತಿಯೊಂದರಲ್ಲೂ ನೂರೈವತ್ತರಂತೆ ಒಟ್ಟು ಆರುನೂರು, ಮುಂಡದಲ್ಲಿ ಇನ್ನೂರಮೂವತ್ತು, ತಲೆ ಮತ್ತು ಕುತ್ತಿಗೆಗಳಲ್ಲಿ ಎಪ್ಪತ್ತು ಎಂದು ವಿಂಗಡಿಸುತ್ತಾನೆ.[248] ಅಲ್ಲದೆ ಪ್ರತಾನವತಿಗಳು ಶಾಖೆಯಾಗಿ ಒಡೆಯುತ್ತವೆಂದೂ, ಪೃಥುಲಾಗಳು ಗುಂಡಗೆ ದಪ್ಪವಾಗಿರುತ್ತವೆಂದೂ, ಕಂಡರಾಗಳು ಗುಂಡಗೆ ಚಕ್ರದಂತಿರುತ್ತವೆಂದೂ, ಸುಷಿರಗಳು ಪೊಳ್ಳಾಗಿರುತ್ತವೆಂದೂ ಅವನು ಅವುಗಳನ್ನು ವರ್ಣಿಸುತ್ತಾನೆ.[249] ಸ್ನಾಯುಗಳ ಸಂಖ್ಯೆ ಒಂಬೈನೂರೇ ಎಂದು ಯಾಜ್ಞವಲ್ಕ್ಯನೂ ಒಪ್ಪುತ್ತಾನೆ.[250]

**ಬಂಧನೈರ್ಬಹುಭಿರ್ಬದ್ಧಾ ಭೂರಿಭಾರಕ್ಷಮಾ ಭವೇತ್ ।**
**ನೌರಂಭಸಿ ಯಥಾ ಸ್ನಾಯುಶತಬದ್ಧಾ ತನುಸ್ತಥಾ ॥ 96 ॥** 145

ದೋಣಿಯು ಅನೇಕ ಕಟ್ಟುಗಳಿಂದ ಕಟ್ಟಲ್ಪಟ್ಟಿದ್ದರೆ ಹೇಗೆ ಹಿರಿದಾದ ಭಾರವನ್ನು ತಡೆದುಕೊಳ್ಳಬಲ್ಲುದೋ ಹಾಗೆಯೇ ನೂ[ರಾ]ರು ಸ್ನಾಯುಗಳಿಂದ ಕಟ್ಟಲ್ಪಟ್ಟ ಶರೀರವು (ತನ್ನ ಭಾರವನ್ನು ತಡೆದುಕೊಳ್ಳುತ್ತದೆ).

---

243 ಸುಶ್ರುತ, ಉ. ಗ್ರಂ., V, 27, ಪು. 94–96.
244 ಕುನ್ಹನ್‌ರಾಜಾ, ಉ. ಗ್ರಂ., ಪು. 31.
245 ವಾಗ್ಭಟ, ಉ. ಗ್ರಂ., III, 17, ಪು. 41.
246 ಸುಶ್ರುತ, ಉ. ಗ್ರಂ., V, 28, ಪು. 96.
247 ವಾಗ್ಭಟ, ಉ. ಗ್ರಂ., III, 17, ಪು 41.
248 ಸುಶ್ರುತ, ಉ. ಗ್ರಂ., V, 29 ಇತ್ಯಾದಿ, ಪು. 97.
249 ಅದೇ ಗ್ರಂಥ, V, 30-32, ಪು. 92.
250 ಯಾಜ್ಞವಲ್ಕ್ಯ, ಉ. ಗ್ರಂ., ಅದೇ ಸ್ಥಾನ, 100,

ಈ ಹೋಲಿಕೆಗಾಗಿ ಶಾರ್ಙ್ಗದೇವನು ಸುಶ್ರುತನಿಗೆ ಋಣಿಯಾಗಿದ್ದಾನೆಂದು ತೋರುತ್ತದೆ :

ನೌರ್ಯಥಾ ಫಲಕಾಸ್ತೀರ್ಣಾ ಬಂಧನೈರ್ಬಹುಭಿರ್ಯುತಾ |
ಭಾರಕ್ಷಮಾ ಭವೇದಪ್ಸು ನೃಯುಕ್ತಾ ಸುಸಮಾಹಿತಾ ||
ಏವಮೇವ ಶರೀರೇ ऽಸ್ಮಿನ್ ಯಾವಂತಃ ಸಂಧಯಃ ಸ್ಮೃತಾಃ |
ಸ್ನಾಯುಭಿರ್ಬಹುಭಿರ್ಬದ್ಧಾಸ್ತೇನ ಭಾರಸಹಾ ನರಾಃ || [251]

ಅನೇಕ ಹಲಗೆಗಳನ್ನು ಸೇರಿಸಿ ಕಟ್ಟಿ ಮಾಡಿದ ದೋಣಿಯನ್ನು ತಕ್ಕ ನಾವಿಕರು ನಡೆಸಿದರೆ ಯಾನಯೋಗ್ಯವಾಗಿದ್ದು ಹೆಚ್ಚು ಭಾರವನ್ನು ಹೊರುವ ಸಾಮರ್ಥ್ಯವನ್ನು ಪಡೆಯುತ್ತದೆ. ಹಾಗೆಯೇ ದೇಹದಲ್ಲಿರುವ ಸಂಧಿಗಳೆಲ್ಲವೂ ಸ್ನಾಯುಗಳಿಂದ ಬಂಧಿಸಲ್ಪಟ್ಟಿವೆ. ಭಾರಗಳನ್ನು ಎತ್ತುವ ಮತ್ತು ಹೊರುವ ಸಾಮರ್ಥ್ಯವು ಶರೀರಕ್ಕೆ ಬರುವುದು ಇವುಗಳಿಂದಲೇ.

ಪೇಶಿಗಳು

**ಪಂಚ ಪೇಶೀಶತಾನ್ಯಾಹುಃ ಶರೀರಸ್ಥಾನಿ ಸೂರಯಃ |**
**ಅಧಿಕಾ ವಿಂಶತಿಃ ಸ್ತ್ರೀಣಾಂ ತತ್ರ ಸ್ಯುಃ ಸ್ತನಯೋರ್ದಶ || 97 ||** 146

ವಿದ್ವಾಂಸರು ದೇಹದಲ್ಲಿರುವ ಐದುನೂರು ಮಾಂಸಪೇಶೀಗಳನ್ನು ಹೇಳುತ್ತಾರೆ. ಹೆಂಗಸರಲ್ಲಿ [ಅವು] ಇಪ್ಪತ್ತು ಹೆಚ್ಚಾಗಿರುತ್ತವೆ ; ಅದರಲ್ಲಿ ಸ್ತನಗಳಲ್ಲಿ ಹತ್ತು ಇವೆ.

**ಯೌವನೇ ತಾಃ ಪ್ರವರ್ಧಂತೇ ದಶ ಯೋನೌ ತು ತತ್ರ ಚ |**
**ದ್ವೇ ಅಂತಃ ಪ್ರಸೃತೇ ಬಾಹ್ಯೇ ದ್ವೇ ತಿಸ್ರೋ ಗರ್ಭಮಾರ್ಗಗಾಃ || 98 ||** 147

ಅವು ಯೌವನದಲ್ಲಿ ಹಿಗ್ಗಿ ಬೆಳೆಯುತ್ತವೆ. ಮತ್ತು ಅದರಲ್ಲಿ (ಹೆಂಗಸರ ಪೇಶೀಗಳಲ್ಲಿ) ಯೋನಿಯಲ್ಲಾದರೋ ಹತ್ತು [ಇವೆ]. ಎರಡು ಒಳಮುಖವಾಗಿಯೂ ಎರಡು ಹೊರಮುಖವಾಗಿಯೂ ಹರಡಿರುತ್ತವೆ ; ಮೂರು ಗರ್ಭಕೋಶದ ಮಾರ್ಗದಲ್ಲಿರುತ್ತವೆ.

**ಶಂಖನಾಭ್ಯಾಕೃತಿರ್ಯೋನಿಸ್ತ್ರ್ಯಾವರ್ತಾ ऽತ್ರ ತೃತೀಯಕೇ |**
**ಆವರ್ತೇ ಗರ್ಭಶಯ್ಯಾ ऽಸ್ತಿ ಪಿತ್ತಪಕ್ವಾಶಯಾಂತರೇ || 99 ||** 148

ಸ್ತ್ರೀ ಜನನಾಂಗವು ಶಂಖದ ಒಳಮಧ್ಯಭಾಗದ ಆಕಾರದಲ್ಲಿ ಮೂರು ಸುರುಳಿಗಳನ್ನೊಳಗೊಂಡು ಇರುತ್ತದೆ. ಇವುಗಳಲ್ಲಿ ಮೂರನೆಯ ಸುರುಳಿಯಲ್ಲಿ ಗರ್ಭಾಶಯದ ಪಾತ್ರವು ಪಿತ್ತಕೋಶ ಮತ್ತು ಪಕ್ವಾಶಯ(ದೊಡ್ಡ ಕರುಳು)ಗಳ ನಡುವೆ ಇರುತ್ತದೆ.

ಪೇಶಿಯೆಂದರೆ ಚೌಕಾಕಾರದ, ಚಪ್ಪಟೆಯಾದ ಮಾಂಸದ ತುಂಡು. ಇಂತಹವು ಐನೂರು ಇವೆಯೆಂದು ವಾಗ್ಭಟನೂ ಒಪ್ಪುತ್ತಾನೆ ; ಹಾಗೂ ಸ್ತ್ರೀಯರಲ್ಲಿರುವ ಅಧಿಕವಾದ ಇಪ್ಪತ್ತನ್ನೂ ಹೇಳುತ್ತಾನೆ. [252] ಸುಶ್ರುತನು ಈ ಐನೂರನ್ನು ಹೀಗೆ ವಿಂಗಡಿಸುತ್ತಾನೆ : ಕೈಕಾಲುಗಳಲ್ಲಿ ಪ್ರತಿಯೊಂದರಲ್ಲೂ ನೂರರಂತೆ ಒಟ್ಟು ನಾಲ್ಕುನೂರು, ಮುಂಡದಲ್ಲಿ ಅರವತ್ತಆರು, ಕಂಠದಿಂದ ಮೇಲೆ ಮೂವತ್ತನಾಲ್ಕು. ಹೆಂಗಸರಲ್ಲಾದರೋ, ಪ್ರತಿ ಸ್ತನದಲ್ಲಿಯೂ ಐದೈದು, ಯೋನಿಯಲ್ಲಿ ಒಳಗಡೆ ಎರಡು ಮತ್ತು ಉತ್ತರಭಾಗದಲ್ಲಿ ಎರಡು, ಗರ್ಭಾಶಯದ ದ್ವಾರದಲ್ಲಿ ಮೂರು,

251 ಸುಶ್ರುತ, ಉ. ಗ್ರಂ., V, 33–34, ಪು. 99.
252 ವಾಗ್ಭಟ, ಉ. ಗ್ರಂ., III, 17–18, ಪು. 41.

ಮತ್ತು ವೀರ್ಯರಜಸ್ಸುಗಳು ಕೂಡುವ ಸ್ಥಳದಲ್ಲಿ ಮೂರು, ಎಂದು ಇಪ್ಪತ್ತನ್ನು ವಿನಿಯೋಗಮಾಡುತ್ತಾನೆ.[253] ಯಾಜ್ಞವಲ್ಕ್ಯನ ಪ್ರಕಾರವೂ ಪೇಶಿಗಳ ಸಂಖ್ಯೆ ಐನೂರೇ : ಪಂಚ ಪೇಶೀಶತಾನಿ ಚ.[250]

**ರೋಹಿತಾಭಿಧಮತ್ಸ್ಯಸ್ಯ ಸದೃಶೀ ತತ್ರ ಪೇಶಿಕಾ ।**
**ಶುಕ್ಲಾರ್ತವ ಪ್ರವೇಶಿನ್ಯಸ್ತಿಸ್ರಃ ಪ್ರಚ್ಛಾದಿಕಾ ಮತಾಃ ॥ 100 ॥** 149

ಅದರಲ್ಲಿ ಪೇಶಿಯು ರೋಹಿತವೆಂಬ ಹೆಸರಿನ ಮೀನಿನಂತಿರುತ್ತದೆ. ವೀರ್ಯ ಮತ್ತು ರಜಸ್ಸುಗಳನ್ನು ಒಳಗೆ ಬಿಡುವ ಮೂರು [ಗರ್ಭದ್ವಾರವನ್ನು] ಮುಚ್ಚಿಕೊಂಡಿರುತ್ತವೆಂದು ಸಮ್ಮತಿಸಲ್ಪಟ್ಟಿವೆ.

ಮೇಲೆಹೇಳಿದ ಪೇಶಿಗಳಲ್ಲಿ ಮೂರನೆಯದು ಸುರುಳಿ ಸುತ್ತಿಕೊಂಡು ರೋಹಿತವೆಂಬ (Cyprinus Rohitaka) ಮೀನಿನ ಆಕಾರದಲ್ಲಿರುತ್ತದೆ. ಕಡೆಯಲ್ಲಿ ಹೇಳಿರುವ ಮೂರು ಪೇಶೀಗಳನ್ನು ಸುಶ್ರುತನೇ ಹೇಳಿದ್ದಾನೆ.

ರೋಹಿತವೆಂಬ ಮೀನಿನ ಹೋಲಿಕೆಯನ್ನೂ ಅವನೇ ಕೊಟ್ಟಿದ್ದಾನೆ :

ಶಂಖನಾಭ್ಯಾಕೃತಿರ್ಯೋನಿಸ್ತ್ರ್ಯಾವರ್ತಾ ಸಾ ಪ್ರಕೀರ್ತಿತಾ ।
ತಸ್ಯಾಸ್ತೃತೀಯೇ ತ್ವಾವರ್ತೇ ಗರ್ಭಶಯ್ಯಾ ಪ್ರತಿಷ್ಠಿತಾ ॥
ಯಥಾ ರೋಹಿತಮತ್ಸ್ಯಸ್ಯ ಮುಖಂ ಭವತಿ ರೂಪತಃ ।
ತತ್ ಸಂಸ್ಥಾನಾಂ ತಥಾರೂಪಾಂ ಗರ್ಭಶಯ್ಯಾಂ ವಿದುರ್ಬುಧಾಃ ॥[254]

ರೋಹಿತವೆಂಬುದು ಸಣ್ಣಬಾಯುಳ್ಳ ಮತ್ತು ಹಿರಿಯ ಉದರವುಳ್ಳ ಮೀನಿನ ಜಾತಿ. ಇದನ್ನು ಕೆಂಪು ಮೀನೆಂದು ವಾಡಿಕೆಯಲ್ಲಿ ಕರೆಯುತ್ತಾರೆ.

ಸಿರಾಧಮನಿಗಳು

**ಸಿರಾಧಮನಿಕಾನಾಂ ತು ಲಕ್ಷಾಣಿ ನವವಿಂಶತಿಃ ।**
**ಸಾರ್ಧಾನಿ ಸ್ಯುರ್ನವಶತೀ ಷಟ್‌ಪಂಚಾಶದ್ಯುತಾ ತಥಾ ॥ 101 ॥** 150

ಸಿರಾ, ಧಮನಿಗಳಾದರೋ ಇಪ್ಪತ್ತೊಂಬತ್ತುಲಕ್ಷದ ಐವತ್ತುಸಾವಿರದ ಒಂಬೈನೂರ ಐವತ್ತಾರು ಇವೆ.

ಸುಶ್ರುತನು ಇವುಗಳ ಸೂಕ್ಷ್ಮ ಶಾಖೆಗಳನ್ನು ಗಣಿಸದೆ ಸ್ಥೂಲವಾದ ಸಿರೆಗಳು ಏಳುನೂರೆಂದೂ[255] ಧಮನಿಗಳು ಇಪ್ಪತ್ತನಾಲ್ಕೆಂದೂ[256] ಮಾತ್ರ ಹೇಳುತ್ತಾನೆ. ವಾಗ್ಭಟನು ಹತ್ತು ಮೂಲಸಿರೆಗಳನ್ನೂ ಅವುಗಳ ಏಳುನೂರು ಸೂಕ್ಷ್ಮ ಶಾಖೆಗಳನ್ನೂ ಗುರುತಿಸುತ್ತಾನೆ.[257] ಅಲ್ಲದೆ ಅವನೂ ಇಪ್ಪತ್ತುನಾಲ್ಕನ್ನೇ ಮುಖ್ಯ ಧಮನಿಗಳೆಂದು ಹೇಳುತ್ತಾನೆ.[258]

ಸಿರಾಧಮನಿಗಳ ಈ ಸಂಖ್ಯೆಯನ್ನು ಶ್ರೀ ಶಾರ್ಙ್ಗದೇವನು ಯಾಜ್ಞವಲ್ಕ್ಯನಿಂದ ಪಡೆದುಕೊಂಡಿರುವಂತೆ ತೋರುತ್ತದೆ. ಒಟ್ಟಿನಲ್ಲಿ ನೋಡಿದಾಗ, ಚರಕ, ಧನ್ವಂತರಿಯನ್ನು ಅವಲಂಬಿಸಿದ ಸುಶ್ರುತ, ಬೌದ್ಧನಾಗಿರಬಹುದಾದ ವಾಗ್ಭಟ ಇವರುಗಳ ಮತಗಳನ್ನು ಸ್ವೀಕರಿಸದೆ ಗ್ರಂಥಕಾರನು ಅನೇಕವೇಳೆ ಆತ್ರೇಯ, ಯಾಜ್ಞ

253 ಸುಶ್ರುತ, ಉ. ಗ್ರಂ., V, 37–38 ; ಪು. 103–105.
254 ಸುಶ್ರುತ, ಉ. ಗ್ರಂ., V, 43–45, ಪು. 109.
255 ಅದೇ ಗ್ರಂಥ, VII, 3, ಪು. 147.
256 ಅದೇ ಗ್ರಂಥ, IX, 3, ಪು. 186.
257 ವಾಗ್ಭಟ, ಉ. ಗ್ರಂ., III, 18–20, ಪು. 42.
258 ಅದೇ ಗ್ರಂಥ, III, 39–40, ಪು. 45.

ವಲ್ಕ್ಯರನ್ನು ಉದ್ಧರಿಸುತ್ತಾನೆ. ಇದಕ್ಕೆ ಕಾರಣವು ದಾರ್ಶನಿಕ ಪ್ರಭಾವವೋ ಪ್ರಾಯೋಗಿಕ ತಥ್ಯತೆಯೋ ತಿಳಿಯದು. ಯಾಜ್ಞವಲ್ಕ್ಯನಾದರೂ ಇಪ್ಪತ್ತೊಂಬತ್ತುಲಕ್ಷದ ಒಂಬೈನೂರ ಐವತ್ತಾರು ಸಿರಾಧಮನಿಗಳನ್ನೂ, ಇನ್ನೂರು ಧಮನಿಗಳನ್ನೂ, ಏಳುನೂರು ಸಿರಾಗಳನ್ನೂ ಹೇಳುತ್ತಾನೆ.[59] ಈ ಸಂಖ್ಯೆಯನ್ನು ಅವನು ಸಾಮಶ್ರವ ಮುಂತಾದ ಮುನಿಗಳಿಂದ ಪಡೆದುಕೊಂಡಿರಬಹುದೆಂದು ಯಾಜ್ಞವಲ್ಕ್ಯನ ಪ್ರಮುಖ ಭಾಷ್ಯಕಾರನಾದ ವಿಜ್ಞಾನೇಶ್ವರನ ಮಿತಾಕ್ಷರದಿಂದ ತಿಳಿಯುತ್ತದೆ.[259]

ಶಾರ್ಙ್ಗದೇವನು ಮೇಲಿನ ಶ್ಲೋಕದಲ್ಲಿ ಸಾರ್ಧಾನಿ ಎಂಬ ಶಬ್ದದಿಂದ ಅರ್ಧಲಕ್ಷದಷ್ಟು ಹೆಚ್ಚು ಸಿರಾಧಮನಿಗಳನ್ನು ಹೇಳಿರುವ ಹಾಗೆ ಕಾಣುತ್ತದೆ. ಈ ಶ್ಲೋಕಕ್ಕೆ ಸಿಂಹಭೂಪಾಲ, ಕಲ್ಲಿನಾಥರು ನಿಗದವ್ಯಾಖ್ಯೆಯನ್ನು ಮಾಡಿರುತ್ತಾರೆ. ಆದ್ದರಿಂದ ಈ ಸಂಖ್ಯೆಯ ಬಗೆಗೆ ಅವರ ಅಭಿಪ್ರಾಯಗಳನ್ನು ತಿಳಿಯಲಾಗುವುದಿಲ್ಲ. ಈ ಶಬ್ದಕ್ಕೆ (ಅದರ) ಅರ್ಧದಷ್ಟನ್ನು ಸೇರಿಸಿ ಎಂದೇ ಇಲ್ಲಿ ಅರ್ಥವಿದ್ದರೆ, ಈ ಸಂಖ್ಯೆಯನ್ನು ಗ್ರಂಥಕಾರನು ಎಲ್ಲಿಂದ ಪಡೆದನೋ ತಿಳಿಯದು. ಆದರೆ ಸಾರ್ಧಂ ಎಂಬ ಶಬ್ದಕ್ಕೆ ಕೂಡಿಸಿ, ಸೇರಿಸಿ ಮುಂತಾದ ಅರ್ಥವೂ ಇದೆ. ಆಗ ಸಾರ್ಧಾನಿ ಎನ್ನುವುದಕ್ಕೆ ಇಪ್ಪತ್ತೊಂಬತ್ತು ಲಕ್ಷಗಳನ್ನು ಸೇರಿಸಿದ ಒಂಬೈನೂರು ಎಂದು ಮುಂತಾಗಿ ಅರ್ಥ ಬರುತ್ತದೆ. ಇಲ್ಲಿ ಈ ಅರ್ಥವೇ ಹೆಚ್ಚು ಗ್ರಾಹ್ಯವಿರಬಹುದು.

ಸಿರೆಗಳನ್ನು ಸೂಕ್ಷ್ಮಲೋಮನಾಳಗಳೆಂದು ತಿಳಿಯುವುದೇ ಸೂಕ್ತವೆಂದು ತೋರುತ್ತದೆ. ಅವುಗಳನ್ನು ವಾತಪಿತ್ತಕಫಗಳ ವಾಹಕಗಳೆಂದು ವಾಗ್ಭಟನೂ[260] ಸುಶ್ರುತನೂ[261] ಹೇಳಿ ಸುಶ್ರುತನು ಅವುಗಳ ಬಣ್ಣದ ಆಧಾರದಮೇಲೆ ವಾತವಹಗಳಾದ ಅರುಣಾ, ಪಿತ್ತವಾಹಕಗಳಾದ ನೀಲಾ, ಕಫವಾಹಕಗಳಾದ ಗೌರೀ, ರಕ್ತವಾಹಕಗಳಾದ ರೋಹಿಣೀ ಎಂದು ನಾಲ್ಕುವಿಧವಾಗಿ ವಿಂಗಡಿಸುತ್ತಾನೆ.[262]

**ದಶ ಮೂಲಸಿರಾ ಓಜೋವಾಹಿನ್ಯೋ ಹೃದಯಾಶ್ರಯಾಃ ।**
**ದ್ವ್ಯಂಗುಲಂ ಚಾಂಗುಲದಲಂ ಯವಂ ಯವದಲಂ ತಥಾ ॥ 102 ॥** 151

ಓಜಸ್ಸನ್ನು ಒಯ್ಯುವ ಹತ್ತು ಮೂಲಭೂತವಾದ ಸಿರೆಗಳು ಹೃದಯದಲ್ಲಿವೆ. ಎರಡು ಅಂಗುಲ, ಅಂಗುಲದ ಅಂಶ, ಅಂಗುಲದ ಆರು ಸಮಭಾಗಗಳಲ್ಲಿ ಒಂದರಷ್ಟು <ಯವ>, ಹಾಗೆಯೇ ಯವದಲ್ಲಿ ಒಂದು ಅಂಶ—

ಸೀವನಿಗಳು

**ಗತ್ವಾ ದ್ರುಮದಲಸ್ಯೇವ[53] ಸೀವನ್ಯಃ ಪ್ರತತಾ ಯದಾ ।**
**ಭಿದ್ಯಂತೇ ತಾಸ್ತದಾ[54] ಸಪ್ತ ಶತಾನಿ ಪರಿಸಂಖ್ಯಯಾ ॥ 103 ॥** 152

—[ಹೀಗೆ] ಆಗಿ ಮರದ ಎಲೆಯ (ರೋಮನಾಳಗಳ) ಹಾಗೆ ಕವಲೊಡೆದಾಗ ಅವುಗಳು ಏಳುನೂರರಷ್ಟು ಸಂಖ್ಯೆಯಲ್ಲಿ ಒಡೆಯುತ್ತವೆ.

ದೇಹದಲ್ಲಿ ಯಾವುದಾದರೂ ದ್ರವವನ್ನು ಒಯ್ಯುವ ಸಣ್ಣ ನಾಳಕ್ಕೆ ಸಿರಾ ಎಂದು ಹೆಸರು. ಮೂಲ ಸಿರೆಗಳು ಸುಶ್ರುತನ ಪ್ರಕಾರ ನಲವತ್ತು. ಅವುಗಳಲ್ಲಿ ವಾತ, ಪಿತ್ತ, ಕಫ ಮತ್ತು ರಕ್ತಗಳನ್ನು ಪ್ರತ್ಯೇಕವಾಗಿ ಹತ್ತು ಹತ್ತು

53 ಕ: ಗಂಧಾಶ್ರುಮದನಸ್ವೇದ? 54 ಕ: ಚ ತಥಾ.

259 ಯಾಜ್ಞವಲ್ಕ್ಯ, ಉ. ಗ್ರಂ., ಅದೇಸ್ಥಾನ, 100-101.
260 ವಾಗ್ಭಟ, ಉ. ಗ್ರಂ., III, 35, ಪು. 44.
261 ಸುಶ್ರುತ, ಉ. ಗ್ರಂ., VII, 6, ಪು. 153.
262 ಅದೇ ಗ್ರಂಥ, VII, 18, ಪು. 158.

ಒಯ್ಯುತ್ತವೆ; ಇವೇ ಸಣ್ಣದಾಗಿ ಕವಲೊಡೆಯುತ್ತಾ, ಕಡೆಯಲ್ಲಿ ಕಣ್ಣಿಗೇ ಗೋಚರಕಷ್ಟವಾದ ಲೋಮನಾಳಗಳಾಗಿಬಿಡುತ್ತವೆ; ಇಂತಹ ಏಳುನೂರು ಶಾಖೆಗಳನ್ನು ಎಣಿಸಬಹುದು. ಅವುಗಳಲ್ಲಿ ವಾತ, ಪಿತ್ತ, ಕಫ ಮತ್ತು ರಕ್ತವನ್ನು ಸ್ರವಿಸುವ ಪ್ರತಿಯೊಂದೂ ನೂರ ಎಪ್ಪತ್ತೈದು ಶಾಖೆಗಳಾಗುವುದರಿಂದ ಒಟ್ಟು ಏಳುನೂರಾಗುತ್ತವೆ.[263] ಎಲೆಯೊಂದರಲ್ಲಿ ರೋಮನಾಳವು ಬುಡದಲ್ಲಿ ದಪ್ಪವಾಗಿದ್ದು ಕ್ರಮೇಣ ಕವಲೊಡೆಯುತ್ತಾ ಅತಿ ಸೂಕ್ಷ್ಮನಾಳಗಳಾಗುವ ಹಾಗೆ ಸಿರೆಗಳು ಮೂಲತಃ ದಪ್ಪವಾಗಿದ್ದು ಆ ಮೇಲೆ ಕವಲೊಡೆಯುತ್ತವೆಂಬ ಈ ಹೋಲಿಕೆಯೂ ಪ್ರಾಚೀನ ಗೌರವಿತವೇ. ಸುಶ್ರುತನೂ[264] ವಾಗ್ಭಟನೂ[265] ಇದೇ ಉದಾಹರಣೆಯನ್ನು ಕೊಡುತ್ತಾರೆ. ವಾಗ್ಭಟನು ಸಿರೆಗಳನ್ನು ಏಳುನೂರೆಂದು ಹೇಳಿ ಶಾಖೆಗಳಲ್ಲಿ ಪ್ರತಿಯೊಂದಕ್ಕೂ ನೂರರಂತೆ ಒಟ್ಟು ನಾಲ್ಕುನೂರು, ಸೊಂಟದಲ್ಲಿ ಮೂವತ್ತೆರಡು, ಪಕ್ಕಗಳಲ್ಲಿ ಹದಿನಾರು, ಬೆನ್ನಿನಲ್ಲಿ ಇಪ್ಪತ್ತನಾಲ್ಕು, ಹೊಟ್ಟೆಯ ಮೇಲೆ ಇಪ್ಪತ್ತನಾಲ್ಕು, ಎದೆಯಲ್ಲಿ ನಲವತ್ತು, ಕತ್ತಿನಲ್ಲಿ ಇಪ್ಪತ್ತನಾಲ್ಕು, ದವಡೆಯಲ್ಲಿ ಹದಿನಾರು, ನಾಲಿಗೆಯಲ್ಲಿ ಹದಿನಾರು, ಮೂಗಿನಲ್ಲಿ ಇಪ್ಪತ್ತನಾಲ್ಕು, ಕಣ್ಣುಗಳಲ್ಲಿ ಐವತ್ತಾರು, ಮೂಗು ಕಣ್ಣುಗಳಲ್ಲಿ ಅರವತ್ತು, ಕಿವಿಗಳಲ್ಲಿ ಹದಿನಾರು, ತಲೆಯಲ್ಲಿ ಹದಿನಾರು, ಹೀಗೆ ವಿಭಾಗಿಸುತ್ತಾನೆ.[266] ಅಲ್ಲದೆ ವಾತಪಿತ್ತಕಫಗಳನ್ನು ಒಯ್ಯುವಂತಹವುಗಳು ಪ್ರತಿಯೊಂದೂ ನೂರಎಪ್ಪತ್ತೈದೆಂದು ಸುಶ್ರುತನೊಡನೆ ಸಮ್ಮತಿಸುತ್ತಾನೆ.[267] ಸುಶ್ರುತನು ಇದೇ ವಿಭಾಗವನ್ನು ವಿವರವಾಗಿ ಕೊಡುತ್ತಾನೆ:

ತತ್ರ ವಾತವಾಹಿನ್ಯಃ ಸಿರಾಃ ಏಕಸ್ಮಿನ್ ಸಕ್ಥಿನಿ ಪಂಚವಿಂಶತಿಃ, ಏತೇನೇತರಸಕ್ಥಿ ಬಾಹೂಚ ವ್ಯಾಖ್ಯಾತೌ। ವಿಶೇಷಸ್ತು ಕೋಷ್ಠೇ ಚತುಸ್ತ್ರಿಂಶತ್; ತಾಸಾಂ ಗುದಮೇಢ್ರಾಶ್ರಿತಾಃ ಶ್ರೋಣ್ಯಾಮಷ್ಟೌ, ದ್ವೇ ದ್ವೇ ಪಾರ್ಶ್ವಯೋಃ, ಷಟ್‌ಪೃಷ್ಠೇ, ತಾವತ್ಯ ಏವ ಚೋದರೇ, ದಶ ವಕ್ಷಸಿ। ಏಕಚತ್ವಾರಿಂಶತ್ ಜತ್ರುಣ ಊರ್ಧ್ವಂ, ತಾಸಾಂ ಚತುರ್ದಶ ಗ್ರೀವಾಯಾಂ, ಕರ್ಣಯೋಶ್ಚತಸ್ರಃ, ನವ ಜಿಹ್ವಾಯಾಂ, ಷಟ್ ನಾಸಿಕಾಯಾಂ, ಅಷ್ಟೌ ನೇತ್ರಯೋಃ, ಏವಮೇತತ್ ಪಂಚಸಪ್ತತಿಶತಂ ವಾತವಹಾನಾಂ ಸಿರಾಣಾಂ ವ್ಯಾಖ್ಯಾತಂ ಭವತಿ। ಏಷ ಏವ ವಿಭಾಗಃ ಶೇಷಾಣಾಮಪಿ। ವಿಶೇಷತಸ್ತು ಪಿತ್ತವಾಹಿನ್ಯೋ ನೇತ್ರಯೋರ್ದಶ, ಕರ್ಣಯೋರ್ದ್ವೇ, ಏವಂ ರಕ್ತವಹಾಃ ಕಫವಹಾಶ್ಚ। ಏವಮೇತಾನಿ ಸಪ್ತ ಸಿರಾಶತಾನಿ ಸವಿಭಾಗಾನಿ ವ್ಯಾಖ್ಯಾತಾನಿ।[268]

**ತಾಸು ಜಿಹ್ವಾಸ್ಥಿತೇ ದ್ವೇ ದ್ವೇ ವಾಗ್ರಸಜ್ಞಾನಕಾರಿಣೇ।**
**ಘ್ರಾಣೇ ಗಂಧವಹೇ ದ್ವೇ ದ್ವೇ ನಿಮೇಷೋನ್ಮೇಷಕೃತೌ ದೃಶೋಃ** ॥ 104 ॥ 153

ಅವುಗಳಲ್ಲಿ ಮಾತು ಮತ್ತು ರುಚಿಗಳ ಅರಿವಿಗೆ ಕಾರಣವಾದ ಎರಡೆರಡು ನಾಲಿಗೆಯಲ್ಲಿವೆ; ಘ್ರಾಣೇಂದ್ರಿಯದಲ್ಲಿ ವಾಸನೆಯನ್ನು ಒಯ್ಯುವ ಎರಡು, ಕಣ್ಣುಗಳಲ್ಲಿ ರೆಪ್ಪೆಯು ಮುಚ್ಚುವುದು, ತೆಗೆಯುವುದು ಇವುಗಳನ್ನು ಉಂಟುಮಾಡುವ ಎರಡು [ಸಿರೆಗಳು ಇವೆ].

---

263 ಸುಶ್ರುತ, ಉ. ಗ್ರಂ., VII, 6, ಪು. 153.

264 ಅದೇ ಗ್ರಂಥ, VII, 3, ಪು. 147.

265 ವಾಗ್ಭಟ, ಉ. ಗ್ರಂ., III, 19, ಪು. 42.

266 ಅದೇ ಗ್ರಂಥ, III, 21-32, ಪು. 42-44, ಇಲ್ಲಿ 48 ಸಿರೆಗಳು ಅಧಿಕವಾಗಿ ಪುನರುಕ್ತಿಯಾಗಿವೆ.

267 ಅದೇ ಗ್ರಂಥ, III, 35–36, ಪು. 44.

268 ಸುಶ್ರುತ, ಉ. ಗ್ರಂ., VII, 7, ಪು. 156.

ಧಮನಿಗಳು

**ಶ್ರೋತ್ರಯೋಃ ಶಬ್ದವಾಹಿನ್ಯೌ[55]ತಾಸು ದ್ವೇ ಶಾರ್ಙ್ಗಿಣೋದಿತೇ ।**
**ಧಮನ್ಯೋ ರಸವಾಹಿನ್ಯಶ್ಚತುರ್ವಿಂಶತಿರೀರಿತಾಃ ॥ 105 ॥** 154

ಅವುಗಳಲ್ಲಿ ಕಿವಿಗಳಲ್ಲಿದ್ದುಕೊಂಡು ಶಬ್ದವನ್ನು ಒಯ್ಯುವಂತಹವು ಎರಡೆಂದು ಶಾರ್ಙ್ಗದೇವ ನಿಂದ ಹೇಳಲ್ಪಡುತ್ತವೆ. ರಸವನ್ನು (ಓಜಸ್ಸನ್ನು) ಒಯ್ಯುವ ಧಮನಿಗಳು ಇಪ್ಪತ್ತನಾಲ್ಕೆಂದು ಹೇಳಲ್ಪಡುತ್ತವೆ.

'ಇಲ್ಲಿ ಶಾರ್ಙ್ಗಿಣೋದಿತೇ' ಎನ್ನುವುದರಲ್ಲಿ ವಿಶೇಷಾರ್ಥವಿದೆ. ಸುಶ್ರುತನು ಕಿವಿಗಳಲ್ಲಿ ನಾಲ್ಕು, ನಾಲಿಗೆಯಲ್ಲಿ ಒಂಬತ್ತು, ಮೂಗಿನಲ್ಲಿ ಆರು ಮತ್ತು ಕಣ್ಣುಗಳಲ್ಲಿ ಎಂಟು ಎಂದು ಇಪ್ಪತ್ತೇಳು ಸಿರೆಗಳನ್ನು ಹೇಳುತ್ತಾನೆ.[268] ಇದರಿಂದ ಭಿನ್ನಾಭಿಪ್ರಾಯವನ್ನು ಸೂಚಿಸಲು 'ಇದು ತನ್ನ ಮತ' ಎಂದು ಹೀಗೆ ಹೇಳಿದ್ದಾನೆ. ಧಮನಿಗಳ ಈ ಸಂಖ್ಯೆಯನ್ನು ಸುಶ್ರುತ[269] ವಾಗ್ಭಟರೂ[270] ಒಪ್ಪುತ್ತಾರೆ.

**ಕುಲ್ಯಾಭಿರಿವ ಕೇದಾರಾಸ್ತಾಭಿರ್ದೇಹೋಽಭಿವರ್ಧತೇ ।**
**ಏತಾಃ ಪ್ರತಿಷ್ಠಿತಾ ನಾಭ್ಯಾಂ ಚಕ್ರನಾಭಾವರಾ ಇವ ॥ 106 ॥** 155

ನಳಿಕೆಗಳಿಂದ (ಬಿಡಿಗಂಡಿಗಳಿಂದ) ಗದ್ದೆಗಳು ಹೇಗೋ [ಹಾಗೆಯೇ] ಅವು (ಧಮನಿ) ಗಳಿಂದ ದೇಹವು ಬೆಳೆಯುತ್ತದೆ. ಇವು ಚಕ್ರಗುಂಭದಲ್ಲಿ ಆರೆಕೋಲುಗಳಂತೆ ಹೊಕ್ಕುಳಿನಲ್ಲಿ ನೆಲಸಿವೆ.

ದೇಹವು ಅಭಿವೃದ್ಧಿಯಾಗುವುದು ಧಮನಿಗಳು ಓಜಸ್ಸಿನ ಮೂಲಕ ಒದಗಿಸುವ ಆಹಾರಾದಿಗಳ ಮೂಲಕ.[271] ಇದಕ್ಕೆ ಅವನು ಬಳಸಿರುವ ಹೋಲಿಕೆಯು ಪ್ರೌಢಪ್ರಾಚೀನವಾಗಿದ್ದು ಸುಶ್ರುತ-ಗೌರವಿತವಾಗಿದೆ. ತೋಟವನ್ನು ಜಲಹಾರಿಣಿಗಳಿಂದಲೂ ಗದ್ದೆಗಳನ್ನು ಸಣ್ಣ ಕಾಲುವೆಗಳಿಂದಲೂ ನೆನೆಸಿ ಸಸ್ಯಾದಿಗಳನ್ನು ಬೆಳಸುವಂತೆ, ಸಿರೆಗಳು ದೇಹದ ಅಂಗಗಳನ್ನೆಲ್ಲ ತಮ್ಮ ರಸದಲ್ಲಿ ತೋಯಿಸಿ ಆಹಾರವನ್ನು ಕೊಡುತ್ತವೆ.[272] ವಾಗ್ಭಟನೂ ಈ ಹೋಲಿಕೆಯನ್ನು ಉಪಯೋಗಿಸುತ್ತಾನೆ; ಆದರೆ ಇದು ಭ್ರೂಣದ ಬೆಳವಣಿಗೆಯ ವಿಷಯದಲ್ಲಿ ಹೇಳಿದ ಮಾತು. ಇಪ್ಪತ್ತನಾಲ್ಕು ಧಮನಿಗಳು ನಾಭಿಯಿಂದ ಹೊರಡುವ ರೀತಿಗೆ ಕೊಟ್ಟ ಈ ಪ್ರೌಢಪ್ರಾಚೀನ ಉದಾಹರಣೆಯನ್ನು ವಾಗ್ಭಟನೂ ಕೊಟ್ಟಿದ್ದಾನೆ.[273]

**ಊರ್ಧ್ವಗಂ ದಶ ದಶಾಧಸ್ತಾಚ್ಚತಸ್ರಸ್ತಿರ್ಯಗಾಯತಾಃ ।**
**ಊರ್ಧ್ವಗಾ ಹೃದಯಂ ಪ್ರಾಪ್ತಾಃ ಪ್ರತಾಯಂತೇ ಪೃಥಕ್ ತ್ರಿಧಾ ॥107॥** 156

[ಅವು] ಮೇಲುಮುಖವಾಗಿ ಹತ್ತು, ಕೆಳಮುಖವಾಗಿ ಹತ್ತು, ಸಮತಲವಾಗಿ ನಾಲ್ಕು ಇರುತ್ತವೆ. ಮೇಲುಮುಖವಾಗಿ ಹೃದಯವನ್ನು ತಲುಪಿ ಪ್ರತ್ಯೇಕವಾಗಿ ಮೂರುಮೂರಾಗಿ ಕವಲೊಡೆಯುತ್ತವೆ.

---

55 ಆ : ಗ್ರಾಹಿಣ್ಯೌ.

---

269 ಅದೇ ಗ್ರಂಥ, IX, 3, ಪು. 186.

270 ವಾಗ್ಭಟ, ಉ. ಗ್ರಂ., III, 39, ಪು. 42.

271 ಇದೇ ಪ್ರಕರಣದ 78 ನೇ ಶ್ಲೋಕದ ವ್ಯಾಖ್ಯಾನವನ್ನೂ ನೋಡಿ.

272 ಸುಶ್ರುತ, ಉ. ಗ್ರಂ., VII, 4, ಪು. 147.

273 ವಾಗ್ಭಟ, ಉ. ಗ್ರಂ., I, 56, ಪು. 17.

ವಾತಂ ಪಿತ್ತಂ ಕಫಂ ರಕ್ತಂ ರಸಂ ದ್ವೇ ದ್ವೇ ವಿಮುಂಚತಃ ।
ಶಬ್ದಂ ರೂಪಂ ರಸಂ ಗಂಧಂ ದ್ವೇ ದ್ವೇ ತತ್ರಾವಗಚ್ಛತಃ ॥ 108 ॥ 157

[ಅವುಗಳಲ್ಲಿ] ಎರಡೆರಡು ವಾತ, ಪಿತ್ತ, ಕಫ, ರಕ್ತ [ಮತ್ತು ಜೀವ] ರಸಗಳನ್ನು ಬಿಡುಗಡೆ ಮಾಡುತ್ತವೆ. ಅದರಲ್ಲಿ ಎರಡೆರಡು ಶಬ್ದ, ರೂಪ, ರುಚಿ [ಮತ್ತು] ವಾಸನೆಗಳ ಅರಿವನ್ನುಂಟು ಮಾಡುತ್ತವೆ.

ಕುನ್ಹನ್‌ರಾಜಾ ರೂಪವೆನ್ನುವುದಕ್ಕೆ ಬಣ್ಣವೆಂಬ ಸಮೀಕರಣವನ್ನು ಹೇಗೆ ಪಡೆದಿದ್ದಾನೆಯೋ ತಿಳಿಯದು ! [274]

ದ್ವೇ ದ್ವೇ ಚ ಭಾಷಣಂ ಘೋಷಂ ಸ್ವಾಪಂ ಬೋಧಂ ಚ ರೋದನಮ್ ।
ಕುರ್ವಾತೇ ದ್ವೇ ನರೇ ಶುಕ್ಲಂ ಸ್ತನ್ಯಂ ತು ಸ್ರವತಃ ಸ್ತ್ರಿಯಾಮ್ ॥109॥ 158

ಮತ್ತು ಎರಡೆರಡು [ಧಮನಿಗಳು] ಮಾತನ್ನೂ ಜೋರಾಗಿ ಶಬ್ದವನ್ನು ಉಚ್ಚರಿಸುವುದನ್ನೂ ನಿದ್ರೆಯನ್ನೂ ಅರಿವನ್ನೂ ಅಳುವನ್ನೂ ಉಂಟುಮಾಡುತ್ತವೆ. ಎರಡು ಗಂಡಸರಲ್ಲಿ ವೀರ್ಯವನ್ನೂ ಹೆಂಗಸರಲ್ಲಾದರೆ ಎದೆಹಾಲನ್ನೂ ಹರಿಸುತ್ತವೆ.

ಅಧೋಗತಾ ಅಪಿ ತ್ರೇಧಾ ಪೃಥಕ್‌ಪಕ್ವಾಶಯಸ್ಥಿತಾಃ ।
ಪ್ರವರ್ತಯಂತಿ ತತ್ರಾದ್ಯಾ ದಶ ವಾತಾದಿ ಪೂರ್ವವತ್ ॥ 110 ॥ 159

ಕೆಳಮುಖವಾಗಿ[ವ್ಯಾಪಿಸಿ]ರುವ ಧಮನಿಗಳಾದರೋ ದೊಡ್ಡಕರುಳಿನಲ್ಲಿದ್ದು ಪ್ರತ್ಯೇಕವಾಗಿ ಮೂರು ವಿಧವಾಗಿವೆ. ಅವುಗಳಲ್ಲಿ ಮೊದಲನೆಯ ಹತ್ತು, ವಾತ ಮೊದಲಾದವುಗಳನ್ನು ಹಿಂದೆ ಹೇಳಿದ ಹಾಗೆಯೇ ಹರಿಸುತ್ತವೆ <ಪ್ರವರ್ತಯಂತಿ>.

ಅನ್ನಂ ಭುಕ್ತಂ ಧಮನ್ಯೌ ದ್ವೇ ವಹತೋಽಂಬುಸಮಾಶ್ರಯಾತ್ ।
ತೋಯಂ ಮೂತ್ರಂ ಬಲಂ ದ್ವೇ ದ್ವೇ ನಾರೀಣಾಮಾರ್ತವಂ ಶ್ರಿಮೇ ॥ 111 ॥ 160

ತಿಂದ ಅನ್ನವನ್ನು (ಆಹಾರವನ್ನು) ನೀರಿನೊಡನೆ ಸೇರಿಸಿ ಎರಡು ಧಮನಿಗಳು ಒಯ್ಯುತ್ತವೆ. ನೀರನ್ನೂ, ಮೂತ್ರವನ್ನೂ, [ಪುರುಷರಲ್ಲಿ] ಬಲವನ್ನೂ ಎರಡೆರಡು [ಒಯ್ಯುತ್ತವೆ]. ಇವು ಹೆಂಗಸರಲ್ಲಾದರೋ ರಜಸ್ಸನ್ನು [ಒಯ್ಯುತ್ತವೆ].

ವಿಮುಂಚತೋ ದ್ವೇ ಸ್ರೋತಾಂಸಿ ಸ್ಥೂಲಾಂತ್ರಾನ್ನಿತೇ ಶಕೃತ್ ।
ಸ್ವೇದಂ ಸಮರ್ಪಯಂತ್ಯಷ್ಟೌ ತಿರಶ್ಚ್ಯೋ ಬಹುಧಾ ಮತಾಃ ॥ 112 ॥ 161

ಎರಡು ಸ್ರೋತಗಳು ದೊಡ್ಡಕರುಳಿನಲ್ಲಿರುವ ಪುರೀಷವನ್ನು ಹೊರಡಿಸುತ್ತವೆ. ಎಂಟು [ಧಮನಿಗಳು] ಬೆವರನ್ನು ಹೊರಡಿಸುತ್ತವೆ. ಅಡ್ಡವಾಗಿ ವ್ಯಾಪಿಸಿರುವವುಗಳು ಬಹುವಿಧವೆಂದು ಅಭಿಪ್ರಾಯಪಡಲಾಗಿದೆ.

ರೋಮಕೂಪೇಷು ಸಂತ್ಯಾಸಾಂ ಮುಖಾನಿ ಸ್ವೇದಮುಕ್ತಯೇ ।
ಪ್ರವೇಶಯಂತಿ ಚಾಭ್ಯಂಗಲೇಪಾದಿಪ್ರಭವಾನ್ ರಸಾನ್ ॥ 113 ॥ 162

274 ಕುನ್ಹನ್‌ರಾಜಾ, ಉ. ಗ್ರಂ., ಪು. 34.

ಅವುಗಳ ಬಾಯಿಗಳು ಬೆವರನ್ನು ಹೊರಪಡಿಸುವುದಕ್ಕಾಗಿ ಚರ್ಮರಂಧ್ರಗಳಲ್ಲಿವೆ ; ಮತ್ತು [ಎಣ್ಣೆ ಮುಂತಾಗಿ] ಅಂಗಗಳಿಗೆ ಲೇಪಿಸಿಕೊಳ್ಳುವವುಗಳಲ್ಲಿ ಇರುವ ರಸಗಳನ್ನು ಒಳಕ್ಕೆ ಬಿಡುತ್ತವೆ.

ಸಿರೆಗಳನ್ನು ಅಷ್ಟಾಂಗಹೃದಯಸಂಹಿತೆಯಲ್ಲಿ ಶಾರೀರಸ್ಥಾನದ ಮೂರನೆಯ ಅಧ್ಯಾಯದಲ್ಲಿಯೂ, ಸುಶ್ರುತ ಸಂಹಿತೆಯ ಶಾರೀರಸ್ಥಾನದ ಏಳು ಮತ್ತು ಎಂಟನೆಯ ಅಧ್ಯಾಯಗಳಲ್ಲಿಯೂ ಹೆಚ್ಚು ವ್ಯತ್ಯಾಸವಿಲ್ಲದೆ ಹೀಗೆಯೇ ಹೇಳಿದೆ. ಧಮನಿಗಳನ್ನು ಕ್ರಮವಾಗಿ ಅದೇ ಗ್ರಂಥಗಳ ಮೂರನೆಯ ಮತ್ತು ಒಂಬತ್ತನೆಯ ಅಧ್ಯಾಯಗಳಲ್ಲಿ ಹೇಳಿದೆ. ವಿವರಗಳಿಗೆ ಆಯಾ ಗ್ರಂಥಗಳನ್ನೇ ನೋಡಬೇಕು. ಸಂಗೀತರತ್ನಾಕರ ಮತ್ತು ಈ ಗ್ರಂಥಗಳ ಈ ಭಾಗದಲ್ಲಿ ಅಭಿನ್ನತೆಯೇ ಹೆಚ್ಚಾಗಿರುವುದರಿಂದ ಸಮಾನವರ್ಣನೆಗಳ ಆಕರಗಳನ್ನಿಲ್ಲಿ ಉದ್ಧರಿಸಿಲ್ಲ.

ಮರ್ಮಸ್ಥಾನಗಳು

**ಜೀವಸ್ಥಾನಾನಿ ಮರ್ಮಾಣಿ ಶತಂ ಸಪ್ತೋತ್ತರಂ ವಿದುಃ ।**
**ಸಾರ್ಧಕೋಟಿತ್ರಯಂ ರೋಮ್ಣಾಂ ಶ್ಮಶ್ರುಕೇಶಾಸ್ತ್ರಿಲಕ್ಷಕಾಃ ॥ 114 ॥** 163

ಜೀವವು ಇರುವ ಮರ್ಮಸ್ಥಾನಗಳು ನೂರಏಳೆಂದು [ವಿದ್ವಾಂಸರು] ತಿಳಿಯುತ್ತಾರೆ. ಮೈಕೂದಲುಗಳು ಮೂರುವರೆ ಕೋಟಿಯಷ್ಟು ; ಗಡ್ಡಮೀಸೆ [ಮತ್ತು] ತಲೆಯಲ್ಲಿನ ಕೂದಲುಗಳು ಮೂರುಲಕ್ಷದಷ್ಟು.

ಪೆಟ್ಟುಬಿದ್ದರೆ ಮರಣವೋ ತೀವ್ರವೂ ದೀರ್ಘವೂ ಆದ ಯಾತನೆಯೋ ಉಂಟಾಗುವ ಅವಯವಸ್ಥಾನಕ್ಕೆ ಮರ್ಮವೆಂದು ಹೆಸರು. ಮನುಷ್ಯದೇಹದಲ್ಲಿ ಶಾಖೆಗಳಲ್ಲಿ ಪ್ರತಿಯೊಂದರಲ್ಲೂ ಹನ್ನೊಂದರಂತೆ ನಲವತ್ತುನಾಲ್ಕೂ, ಕೋಷ್ಠದಲ್ಲಿ ಮೂರೂ, ಎದೆಯ ಪ್ರಾಂತದಲ್ಲಿ ಒಂಬತ್ತೂ, ಬೆನ್ನಿನಲ್ಲಿ ಹದಿನಾಲ್ಕೂ, ಕಂಠನಾಳದಿಂದ ಮೇಲೆ ಮೂವತ್ತೇಳೂ ಸೇರಿ ಇಂತಹವು ಒಟ್ಟು ನೂರಏಳಿವೆ. ಇವುಗಳನ್ನು ವಾಗ್ಭಟನೂ[275] ಸುಶ್ರುತನೂ[276] ವಿವರವಾಗಿ ವರ್ಣಿಸುತ್ತಾರೆ. ಜುಡೊ, ಜೂಜಿಟ್ಸು, ಕರತೆ ಮೊದಲಾದ ಶಸ್ತ್ರರಹಿತ ಕಾಳಗಗಳ ತಂತ್ರಗಳು ಬಹುಮಟ್ಟಿಗೆ ಈ ಮರ್ಮಸ್ಥಾನಗಳ ಜ್ಞಾನವನ್ನು ಅವಲಂಬಿಸುತ್ತವೆ. ಸುಶ್ರುತ ವಾಗ್ಭಟರು ವಿವಿಧ ಕೂದಲುಗಳ ಸಂಖ್ಯೆಯನ್ನು ಕೊಡುವುದಿಲ್ಲ. ಆದರೆ ಚರಕನು ಸಿರಾಧಮನಿಗಳೂ ಕೇಶಶ್ಮಶ್ರುಲೋಮಗಳೂ ಪ್ರತ್ಯೇಕವಾಗಿ ಇಪ್ಪತ್ತೊಂಬತ್ತು ಸಾವಿರದ ಒಂಬೈನೂರ ಐವತ್ತಾರು ಇರುತ್ತವೆಂದು ಹೇಳುತ್ತಾನೆ.[277] ಮರ್ಮಸ್ಥಾನಗಳನ್ನು ಅವನೂ ನೂರಏಳೆಂದೇ ಎಣಿಸುತ್ತಾನೆ.[277] ಕೂದಲಿನ ಸಂಖ್ಯೆ ಮುಂತಾದುವು ಮುಖ್ಯವಾಗಿ ಆಯಾ ಗ್ರಂಥಕಾರನ ಕಲ್ಪನಾಶಕ್ತಿಯನ್ನೇ ಅವಲಂಬಿಸುತ್ತಿತ್ತೆಂದು ತೋರುತ್ತದೆ; ಇದು ಹೇಗೇ ಇರಲಿ, ಶಾರ್ಙ್ಗದೇವನು ಇಲ್ಲಿ ಯಾಜ್ಞವಲ್ಕ್ಯನನ್ನೇ ಅನುಸರಿಸಿದ್ದಾನೆ.[278] ಆದರೆ ಯಾಜ್ಞವಲ್ಕ್ಯನು ಮುಂದಿನ ಶ್ಲೋಕದಲ್ಲಿ ಹೇಳಿರುವ ಸಂಖ್ಯೆಯನ್ನು ಕೇವಲ ರೋಮಗಳದ್ದೆಂದು ಎಣಿಸುತ್ತಾನೆ.[279]

ಕೂದಲಿನಸಂಖ್ಯೆ

**ಸ್ರೋತಃಸಿರಾಶ್ಮಶ್ರುಕೇಶೈಃ ಸಹ ರೋಮ್ಣಾಂ ತು ಕೋಟಯಃ ।**
**ಚತುಃಪಂಚಾಶದಾಖ್ಯಾತಾಃ ಸಪ್ತಷಷ್ಟ್ಯಾ ಚ ಸಾರ್ಧಯಾ ॥ 115 ॥** 164

ಸ್ರೋತಗಳು, ಸಿರೆಗಳು, ಗಡ್ಡಮೀಸೆಗಳು, ತಲೆಕೂದಲು ಇವುಗಳನ್ನು ಸೇರಿಸಿದರೋ ರೋಮಗಳು ಐವತ್ತುನಾಲ್ಕುಕೋಟಿ ಅರವತ್ತೇಳು ಲಕ್ಷದ ಐವತ್ತುಸಾವಿರವೆಂದು ಹೇಳಲ್ಪಡುತ್ತವೆ.

---

275 ವಾಗ್ಭಟ, ಉ. ಗ್ರಂ., IV, ಪು. 68-79.
276 ಸುಶ್ರುತ, ಉ. ಗ್ರಂ. VI, ಪು. 113-142.
277 ಚರಕ, ಉ. ಗ್ರಂ., IV, 7-14 ; ಪು. 338.
278 ಯಾಜ್ಞವಲ್ಕ್ಯ, ಅದೇ ಸ್ಥಾನ, 102,
279 ಅದೇ ಗ್ರಂಥ, 103

ದೇಹದಲ್ಲಿ ಜಲ ಮೊದಲಾದವುಗಳ ಪ್ರಮಾಣಗಳು

ಲಕ್ಷ್ಮಾಣಾಂ, ಸಂಹಿತಾಮಾನಂ ಜಲಾದೇರಧುನೋಚ್ಯತೇ ।
ದಶಾಂಜಲಿ ಜಲಂ ಜ್ಞೇಯಂ ರಸಸ್ಯಾಂಜಲಯೋ ನವ ॥ 116 ॥ 165

ನೀರು ಮೊದಲಾದವುಗಳ ಮೊತ್ತದ ಅಳತೆಯು ಈಗ ಹೇಳಲ್ಪಡುತ್ತದೆ. ನೀರು ಹತ್ತು ಬೊಗಸೆಗಳಷ್ಟು ಎಂದು ತಿಳಿಯಲ್ಪಟ್ಟಿದೆ; ರಸದ್ದು ಒಂಬತ್ತು ಬೊಗಸೆಗಳು.

ರಕ್ತಸ್ಯಾಷ್ಟೌ ಪುರೀಷಸ್ಯ ಸಪ್ತ ಸ್ಯುಃ ಶ್ಲೇಷ್ಮಣಸ್ತು ಷಟ್ ।
ಪಿತ್ತಸ್ಯ ಪಂಚ ಚತ್ವಾರೋ ಮೂತ್ರಸ್ಯಾಂಜಲಯಸ್ತ್ರಯಃ ॥ 117 ॥ 166

ರಕ್ತದ್ದು ಎಂಟು [ಬೊಗಸೆಗಳು] ; ಪುರೀಷದ್ದು ಏಳು ಇವೆ ; ಶ್ಲೇಷ್ಮರಸದ್ದಾದರೋ ಆರು ; ಪಿತ್ತದ್ದು ಐದು ; ನಾಲ್ಕು ಮೂತ್ರದ್ದು ; ಮೂರು ಬೊಗಸೆಗಳು—

ವಸಾಯಾ ಮೇದಸೋ ದ್ವೌ ತು ಮಜ್ಜ ಏಕೋಽಂಜಲಿರ್ಮತಃ[56] ।
ಅರ್ಧಾಂಜಲಿಃ ಶಿರೋಮಜ್ಜಾ ಶ್ಲೇಷ್ಮಸಾರೋ ಬಲಂ ತಥಾ ॥ 118 ॥ 167

—ವಸೆಯದು ; ಕೊಬ್ಬಿನದು ಎರಡು, ಎಲುಬಿನ ನೆಣೆಯದಾದರೋ ಒಂದು ಬೊಗಸೆ ಯೆಂದು ಅಭಿಪ್ರಾಯಪಡಲಾಗಿದೆ. ತಲೆಯ ಮಿದುಳೂ, ಶ್ಲೇಷ್ಮಸಾರವೂ, ಹಾಗೆಯೇ ವೀರ್ಯವೂ (ಪ್ರತಿಯೊಂದೂ) ಅರ್ಧಬೊಗಸೆ.

ಶಾರ್ಙ್ಗದೇವನು ದೇಹಸ್ಥವಾದ ಈ ಪ್ರಾಣಧಾತುಗಳ ಪ್ರಮಾಣಗಳನ್ನು ಚರಕನಿಂದ ಪಡೆದುಕೊಂಡಿರುವಂತೆ ತೋರುತ್ತದೆ.[280] ವಾಗ್ಭಟನು ಇದೇ ಪ್ರಮಾಣಗಳನ್ನು ಹೇಳಿದರೂ ಮಸ್ತುಲುಂಗ (ತಲೆಯ ಮಿದುಳು), ವೀರ್ಯ ಮತ್ತು ಓಜಸ್ಸು(ಶ್ಲೇಷ್ಮಸಾರ)ಗಳನ್ನು ಅರ್ಧ ಬೊಗಸೆಯ ಬದಲು ಒಂದೊಂದು ಬೊಗಸೆಯಷ್ಟೆಂದು ಹೇಳುತ್ತಾನೆ.[281] ದೊಡ್ಡದಾದ ಮತ್ತು ಉದ್ದವಾದ ಎಲುಬುಗಳ ಮಧ್ಯದ ತಿರುಳಿಗೆ ಮಜ್ಜಾ ಎಂದು ಹೆಸರು. ಇದರಿಂದಲೇ ಕೆಂಪು ರಕ್ತಕಣಗಳು ಹುಟ್ಟುವುದು. ಉಳಿದ ಮೂಳೆಗಳಿಗೆ ಅಂಟುಕೊಂಡಿರುವ ಕೊಬ್ಬಿಗೆ ಮೇದಸ್ಸು ಎಂದು ಹೆಸರು. ಮಾಂಸಖಂಡಗಳಲ್ಲಿರುವ ಜಿಡ್ಡಾದ 'ಚರಬಿ'ಗೆ ವಸೆಯೆಂದು ಹೆಸರು. ಈ ಮೂರೂ ನಮ್ಮ ಆಯುರ್ವೇದಾಚಾರ್ಯರ ಮತದಲ್ಲಿ ಮಾಂಸಧರಾ ಕಲೆಯಲ್ಲಿರುತ್ತವೆ.

ಇತಿ ಪ್ರತ್ಯಂಗಸಂಕ್ಷೇಪೋ ವಿಸ್ತರಸ್ತ್ವಿಹ ತತ್ತ್ವತಃ ।
ಅಸ್ಮದ್ವಿರಚಿತೇಽಧ್ಯಾತ್ಮವಿವೇಕೇ ವೀಕ್ಷ್ಯತಾಂ ಬುಧೈಃ ॥ 119 ॥ 168

ಇಲ್ಲಿ ಹೀಗೆ ಪ್ರತ್ಯಂಗವು(-ದ ವರ್ಣನೆಯು) ಸಂಕ್ಷೇಪವಾಗಿದೆ. [ಇದರ] ತತ್ತ್ವಗಳಿಂದ ಒಡಗೂಡಿದ ವಿಸ್ತಾರವಾದರೋ ನಮ್ಮಿಂದ ರಚಿತವಾಗಿರುವ ಅಧ್ಯಾತ್ಮವಿವೇಕದಲ್ಲಿ ವಿದ್ವಾಂಸರಿಂದ ನೋಡಲ್ಪಡಲಿ.

56 ಅ, ಅ, ಕ : ಮಜ್ಜಾ ತ್ವಂಜಲಿಸಂಮಿತಃ.

280 ಚರಕ, ಉ. ಗ್ರಂ., IV, 7.15, ಪು. 339.

281 ವಾಗ್ಭಟ, ಉ. ಗ್ರಂ., III, 80, 81. ಪು. 56. ವಾಗ್ಭಟನು ಈ ಅಳತೆಗಳಿಗಾಗಿ ಯಾಜ್ಞವಲ್ಕ್ಯನಿಗೆ ಋಣಿಯಾಗಿರುವಂತೆ ತೋರುತ್ತದೆ : ಯಾಜ್ಞವಲ್ಕ್ಯಸ್ಮೃತಿ, ಅದೇ ಸ್ಥಾನ, 105.107.

## 2. ಪಿಂಡೋತ್ಪತ್ತಿ ಪ್ರಕರಣ

ಸಂಗೀತರತ್ನಾಕರದಲ್ಲಿ ಹೇಳಿರುವ ಇಷ್ಟು ಶರೀರಶಾಸ್ತ್ರವೂ ಪ್ರಾಸಂಗಿಕವಾಗಿದ್ದು ಸಂಗೀತಶಾಸ್ತ್ರಾಭ್ಯಾಸಿಗೋಸ್ಕರ, ಪಾರಿಭಾಷಿಕಕ್ಲಿಷ್ಟತೆಯಿಲ್ಲದೆ ಬರೆದದ್ದು. ಶಾರ್ಙ್ಗದೇವನು ಆಯುರ್ವೇದಶಾಸ್ತ್ರಕೋವಿದನೂ ಆಗಿದ್ದನೆಂಬುದು (ಎಂದರೆ ಕೇವಲ ಪುಸ್ತಕಪಂಡಿತನಾಗಿರದೆ ಚಿಕಿತ್ಸಾ-ನಿದಾನಾದಿ ಭಾಗಗಳಲ್ಲೂ ಪರಿಣತನಾಗಿದ್ದನೆಂಬುದು) ಮೊದಲನೆಯ ಪ್ರಕರಣದ ಹದಿಮೂರನೆಯ ಶ್ಲೋಕದಿಂದ ತಿಳಿಯುತ್ತದೆ. ಆತನು ಬರೆದ ಅಧ್ಯಾತ್ಮವಿವೇಕವು ಆಯುರ್ವೇದ ಹಾಗೂ ಆತ್ಮವಿಜ್ಞಾನಗಳ ನಿಷ್ಕೃಷ್ಟ, ಸರ್ವಗ್ರಾಹಕ ಹಾಗೂ ಉನ್ನತಮಟ್ಟದ ಜ್ಞಾನದ ಉದ್ಭುದವಾಗಿದ್ದಿರಬೇಕು. ಆದರೆ ದುರ್ದೈವದಿಂದ ಈ ಗ್ರಂಥವು ಇನ್ನೂ ಉಪಲಬ್ಧವಾಗಿಲ್ಲ. ಶ್ರೀ ಶಾರ್ಙ್ಗದೇವನು ಆತ್ರೇಯ ಪುನರ್ವಸು, ಧನ್ವಂತರಿ, ಚರಕ, ಸುಶ್ರುತ, ವಾಗ್ಭಟಾದಿ ಆಚಾರ್ಯರ ಅಭಿಪ್ರಾಯಗಳನ್ನು ಸಾಮಾನ್ಯವಾಗಿ ಒಪ್ಪಿದರೂ, ಹಲವೆಡೆ ತನ್ನದೇ ಅಭಿಪ್ರಾಯಗಳನ್ನು ಹೇಳುತ್ತಾನೆ. ಆದರೂ ಭಗವಾನ್ ಯಾಜ್ಞವಲ್ಕ್ಯನ ಅಭಿಪ್ರಾಯಗಳಲ್ಲಿಯೇ ಅವನದು ಹೆಚ್ಚಿನ ಒಲವು. ಆದುದರಿಂದ ಅವನು ವೇದವಾದಿಯಾದ ಆರ್ಯುರ್ವೇದ ಪರಂಪರೆಗೆ ಸೇರಿದವನು ಎಂಬ ಅನುಮಾನವು ಬಲವಾಗುತ್ತದೆ.

ಬ್ರಹ್ಮವು ಅವಿದ್ಯೆಯ ಮೂಲಕ ಜೀವನಾಗಿ ವ್ಯಷ್ಟಿಯಾದುದನ್ನೂ ಅದರಿಂದ ವಿಶ್ವಸೃಷ್ಟಿಯಾದುದನ್ನೂ ಮನುಷ್ಯನ ಹುಟ್ಟು ಮತ್ತು ಶರೀರಗಳನ್ನೂ ಶಾರ್ಙ್ಗದೇವನು ಈವರೆಗೆ ವರ್ಣಿಸಿದ್ದಾನೆ. 'ತತ್ರ ನಾದೋಪಯೋಗಿತ್ವಾತ್ ಮಾನುಷಂ ದೇಹಮುಚ್ಯತೇ' ಎಂಬ ಪ್ರತಿಜ್ಞಾವಾಕ್ಯದಿಂದ ಪ್ರಾರಂಭಿಸಿದ ಅವನು ಮನುಷ್ಯದೇಹವನ್ನು ವರ್ಣಿಸಿದನಂತರ ಈ ದೇಹವು ಯೋಗಶಾಸ್ತ್ರದ ರೀತ್ಯಾ ಸೃಷ್ಟಿಯಾದ ಕ್ರಮವನ್ನೂ ನಾದೋಪಾಸನೆ ಮಾಡಬೇಕಾದರೆ ಅದಕ್ಕೆ ಬೇಕಾಗುವ ಸಂದರ್ಭಗಳು ಮುಂತಾದುವನ್ನೂ ಹೇಳಲು ತೊಡಗಿದ್ದಾನೆ. ಇದು ಏಕೆಂದರೆ ಯೋಗಶಾಸ್ತ್ರಪ್ರಮೇಯಗಳ ಅನುಸಾರವಾಗಿ, ಅಲ್ಲಿ ಹೇಳಿರುವ ಕೆಲವು ಚಕ್ರಗಳ ಕೆಲವು ದಳಗಳನ್ನು ಧ್ಯಾನಿಸುತ್ತಿದ್ದಾಗ ಜೀವನು ದೇಹಧಾರಣೆ ಮಾಡಿದರೆ ಮಾತ್ರ ಅವನಿಗೆ ಮನುಷ್ಯಜನ್ಮದಲ್ಲಿ ಸಂಗೀತದಲ್ಲಿ ಅಭಿರುಚಿ, ಪರಿಣತಿಗಳು ಲಭಿಸುತ್ತವೆ. ಬೇರೆ ಕೆಲವು ದಳಗಳಲ್ಲಿ ಉಪಸ್ಥಿತವಾಗಿ ಧ್ಯಾನಿಸುತ್ತಿದ್ದರೆ, ಈ ಗುಣಗಳು ನಾಶವಾಗುತ್ತವೆ. ಇವುಗಳನ್ನು ನಿರ್ದೇಶಿಸಿ ಹೇಳುವುದಕ್ಕಾಗಿ ಮತ್ತು ವಿಷಯ ಸಂಪೂರ್ಣತೆಗಾಗಿ ಇಲ್ಲಿ ಯೋಗಶಾಸ್ತ್ರದ ಪರಿಚಯವನ್ನು ಮಾಡಿಕೊಡುತ್ತಿದ್ದಾನೆ. ಯೋಗಶಾಸ್ತ್ರದಲ್ಲಿ ಗ್ರಂಥಕಾರನದು ಅಗಾಧ ಪಾಂಡಿತ್ಯ. ಅದನ್ನು ತನ್ನ ಅಧ್ಯಾತ್ಮವಿವೇಕದಲ್ಲಿ ತೋರಿಸಿಕೊಂಡಿದ್ದಾನೆ. ಇಲ್ಲಿ ಕೇವಲ ಸ್ಥೂಲಪರಿಚಯಕ್ಕೆ ಅಗತ್ಯವಾದಷ್ಟನ್ನು ಮಾತ್ರ ಸಂಕ್ಷೇಪವಾಗಿ ಹೇಳಿದ್ದಾನೆ. ಸೃಷ್ಟಿಯಲ್ಲಿನ ಎಲ್ಲಾ ತತ್ತ್ವಗಳನ್ನೂ ಬ್ರಹ್ಮಾಂಡದ ಸೂಕ್ಷ್ಮರೂಪವಾದ ಪಿಂಡಾಂಡವು ವ್ಯಷ್ಟಿರೂಪದಲ್ಲಿ ಒಳಗೊಂಡಿರುವುದರಿಂದ, ಈ ತತ್ತ್ವಗಳ ಸಾಕ್ಷಾತ್ಕಾರಕ್ಕೆ ಅನುಕೂಲಿಸುವಂತೆ ಅವುಗಳೆಲ್ಲ ದೇಹದಲ್ಲಿವೆಯೆಂದು ತಿಳಿದು ಅವುಗಳನ್ನು ವಿವಿಧ ವಿಕಾಸಘಟ್ಟಗಳನ್ನಾಗಿ ವಿಂಗಡಿಸಲಾಗಿದೆ. ಈ ಹಂತಗಳನ್ನು ಯೋಗಶಾಸ್ತ್ರವು ಚಕ್ರಗಳೆಂದು ಕರೆದಿದೆ.

ಸೇಶ್ವರ ಸಾಂಖ್ಯವೆಂದೂ ಹೆಸರಿರುವ ಈ ಯೋಗದರ್ಶನವು ಹಿರಣ್ಯಗರ್ಭಪ್ರಣೀತವೆಂದು ಹಿಂದೂಗಳು ನಂಬುತ್ತಾರೆ. ಈ ಬ್ರಹ್ಮಸಾಕ್ಷಾತ್ಕಾರಸಾಧನವನ್ನು ಮೊದಲಬಾರಿಗೆ ಈಗಿನ ರೂಪದಲ್ಲಿ ವ್ಯವಸ್ಥಿಗೊಳಿಸಿದವನು ಪತಂಜಲಿ. ಇವನು ಬೆಳಸಿದ ಅಷ್ಟಾಂಗಯೋಗಪದ್ಧತಿಗೆ ವ್ಯಾಸನು ಭಾಷ್ಯಬರೆದನೆಂದು ನಂಬಿಕೆಯಿದೆ. ಇದಕ್ಕೂ ಹಿಂದೆ ಬೇರೊಂದು ಯೋಗಶಾಸ್ತ್ರವಿದ್ದಿತೆಂದು ಶಾಂಕರಬ್ರಹ್ಮಸೂತ್ರಭಾಷ್ಯದಿಂದ[282] ತಿಳಿದುಬರುತ್ತದೆ. ಯೋಗಶಾಸ್ತ್ರವು ಅನಾರ್ಯರಾಗಿದ್ದ ದ್ರಾವಿಡರಿಂದಲೋ ಪ್ರಾಚೀನ ಹರಿಯೂಪೀಯ(ಹರಪ್ಪ)ಸಂಸ್ಕೃತಿಯಿಂದಲೋ ಆರಂಭವಾಯಿತೆಂದು ಕೆಲವು ಪಾಶ್ಚಾತ್ಯ ಹಾಗೂ ನಮ್ಮ ಭಾರತೀಯಶಾಸ್ತ್ರಜ್ಞರು ತಿಳಿಯುತ್ತಾರೆ. ಆದರೆ ಯೋಗವು

282 ಶ್ರೀ ಶಂಕರಭಗವತ್ಪಾದಾಚಾರ್ಯ, ಬ್ರಹ್ಮಸೂತ್ರಭಾಷ್ಯ, II, 2.

ಋಗ್ವೇದದಲ್ಲಿಯೇ ಹೇಳಲ್ಪಟ್ಟಿರುವುದರಿಂದಲೂ[283] ಅದರ ತತ್ತ್ವಗಳೂ ಆಧಾರಪ್ರತಿಜ್ಞೆಗಳೂ ವೇದಸಮ್ಮತಗಳಾದುದರಿಂದಲೂ ಯೋಗವು ವೈದಿಕವೇ. ಶರೀರಶುದ್ಧಿ, ಚಿತ್ತಶುದ್ಧಿಗಳ ಮೂಲಕ ಬ್ರಹ್ಮಸಾಕ್ಷಾತ್ಕಾರವೇ ಇದರ ಧ್ಯೇಯ ; ನಾಡೀಶುದ್ಧಿ, ಶರೀರಶುದ್ಧಿ (ಭೂತಶುದ್ಧಿ), ಚಿತ್ತವೃತ್ತಿನಿರೋಧ ಮತ್ತು ಸಮಾಧಿಗಳೆಂಬ ಘಟ್ಟಗಳಲ್ಲಿ ಇದನ್ನು ಸಾಧಿಸಬೇಕು. ಪ್ರಾಣಾಯಾಮ, ಮಂತ್ರಾದಿಗಳಿಂದ ನಾಡೀ ಶುದ್ಧಿಯೂ, ಆಸನ, ಭಸ್ತ್ರಿಕ, ನೌಳಿ, ಧೌತಿ ಮುಂತಾದವುಗಳಿಂದ ಶರೀರಶುದ್ಧಿಯೂ, ಚಿತ್ತವೃತ್ತಿನಿರೋಧ, (ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವವೆಂಬ) ಅಷ್ಟಸಿದ್ಧಿ, ಮತ್ತು ಸಮಾಧಿ ಇವುಗಳು (ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಯೆಂಬ) ಅಷ್ಟಾಂಗಗಳಿಂದಲೂ ಆಗುತ್ತವೆ. ಯೋಗಮಾರ್ಗಗಳಲ್ಲಿ ಹಠ, ಕರ್ಮ, ಜ್ಞಾನ, ಭಕ್ತಿ, ಮಂತ್ರವೆಂಬ ಹಲವಾರು ಇವೆ. ಇವುಗಳು ಒಳಗೊಂಡಿರುವ ಶಾರೀರಕ, ಮಾನಸಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ತತ್ತ್ವಗಳು ಉತ್ಕೃಷ್ಟವಾಗಿಯೂ, ಸರ್ವಗ್ರಾಹ್ಯವಾಗಿಯೂ, ಸಾಮಾನ್ಯವಾಗಿಯೂ ಇರುವುದರಿಂದ ಎಲ್ಲ ಹಿಂದೂ ಮತಪ್ರಭೇದಗಳೂ ಇವುಗಳನ್ನು ಒಪ್ಪುತ್ತವೆ.

ಯೋಗವೆನ್ನುವುದಕ್ಕೆ ಜೀವಬ್ರಹ್ಮರ ಐಕ್ಯತೆಯನ್ನು ಎಂದರೆ ಅಭೇದವನ್ನು, ಸಾಧಿಸುವುದು ಎಂದು ಸ್ಥೂಲವಾಗಿ ಅರ್ಥಹೇಳಬಹುದು. ಸ್ಥೂಲದೇಹವನ್ನು ಉಪಕರಣವಾಗಿ ಪಡೆದು, ಇದನ್ನು ಸಾಧಿಸುವ ಬಗೆಯನ್ನು ಆಗಮಕಲ್ಪದ್ರುಮ, ಊರ್ಧ್ವಾಮ್ನಾಯ, ಕಾದಿಮತ, ಕಾಲೀಕುಲಾಮೃತ, ಗೋರಕ್ಷಸಂಹಿತಾ, ಘೇರಂಡ ಸಂಹಿತಾ, ತಂತ್ರಜೀವನ, ತಾರಾಕಲ್ಪ, ತ್ರಿಕಾಂಡಶೇಷ, ತ್ರಿಪುರಾಸಾರಸಮುಚ್ಚಯ, ನಿರ್ವಾಣಪದ್ಧತಿ, ಪ್ರಪಂಚಸಾರ, ಸೌಂದರ್ಯಲಹರೀ, ಪ್ರಭಾಸಖಂಡ, ಪ್ರಯೋಗಸಾರ, ಬೃಹತ್ ತ್ರಿವಿಕ್ರಮಸಂಹಿತಾ, ಬೃಹತ್ ಶ್ರೀಕ್ರಮ, ಮಂತ್ರತಂತ್ರಪ್ರಕಾಶ, ಷಟ್‌ಚಕ್ರನಿರೂಪಣ, ಹಠಯೋಗಪ್ರದೀಪಿಕಾ, ಯೋಗಿನೀಹೃದಯ, ಲಲಿತಾ ರಹಸ್ಯ, ಶಾಕ್ತಾನಂದತರಂಗಿಣೀ, ಶಾರದಾತಿಲಕ, ಶ್ರೀಮತ, ಸ್ವಚ್ಛಂದಸಂಗ್ರಹ ಇತ್ಯಾದಿ ಗ್ರಂಥಗಳೂ, ಯೋಗತತ್ತ್ವ, ಯೋಗಕುಂಡಲೀ, ಯೋಗಶಿಖಾ, ವರಾಹ, ಧ್ಯಾನಬಿಂದು, ಶಾಂಡಿಲ್ಯ, ಯೋಗಚೂಡಾಮಣಿ, ಬ್ರಹ್ಮವಿದ್ಯಾ, ಶಾರೀರಕ, ಪೈಂಗಳ, ತ್ರಿಶಿಖಿಬ್ರಾಹ್ಮಣ ಮೊದಲಾದ ಉಪನಿಷತ್ತುಗಳೂ, ಕಂಕಾಲಮಾಲಿನೀ, ಕುಲಾರ್ಣವ, ಗಂಧರ್ವಮಾಲಿಕಾ, ಗೋಮತೀ, ಜ್ಞಾನಾರ್ಣವ, ತಂತ್ರಚೂಡಾಮಣಿ, ತೋಡಲ, ನಿಗಮ ತತ್ತ್ವಸಾರ, ನಿರ್ವಾಣ, ಬಾಲಾವಿಲಾಸ, ಭೂತಶುದ್ಧಿ, ಮಾಯಾ, ಯಾಮಲ, ಯೋಗಾರ್ಣವ, ರುದ್ರಯಾಮಲ, ಸ್ವತಂತ್ರ ವಿಶ್ವಸಾರ, ಸಮ್ಮೋಹನ, ಶಾರದಾ ಮೊದಲಾದ ತಂತ್ರಗಳೂ, ಶಾರೀರಕಸಾಧನೆ, ಧ್ಯಾನ ನಿಯಮಾದಿ ಕ್ರಮಗಳು ಇತ್ಯಾದಿಗಳ ಮೂಲಕ ಹೇಳುತ್ತವೆ.

ಶಾರ್ಙ್ಗದೇವನು ಇಲ್ಲಿ ಹೇಳಿರುವ ಕುಂಡಲಿನೀ ಯೋಗಕ್ಕೆ ಲಯಯೋಗವೆಂದೂ ಸಮಯಮತವೆಂದೂ ನಾಮಾಂತರಗಳುಂಟು. ಇದರ ಪ್ರಕಾರ ಬ್ರಹ್ಮವು ಅನಾದಿಯಾದ ಅವಿದ್ಯೆಯಿಂದ ಸಮಷ್ಟಿಸ್ಥಿತಿಯನ್ನು ಬಿಟ್ಟು ವ್ಯಷ್ಟಿಯಲ್ಲಿ ನಾಮರೂಪಾದಿ ಉಪಾಧಿಗಳನ್ನು ಪಡೆಯುವಾಗ ಕುಂಡಲಿನೀ (ಎಂದರೆ ಹಾವಿನ ಹಾಗೆ ಸುರುಳಿ ಸುತ್ತಿಕೊಂಡ)ರೂಪದಲ್ಲಿ ಸುಪ್ತಾವಸ್ಥೆಯಲ್ಲಿರುತ್ತದೆ. ಈ ಕುಂಡಲಿನಿಯೇ ಬ್ರಹ್ಮವಸ್ತು. ಇದು ದೇಹಧಾರಣೆಮಾಡುವ ಸಮಯದಲ್ಲಿ ಪಿಂಡದ ಬ್ರಹ್ಮರಂಧ್ರದಿಂದ ಒಳಗೆ ಪ್ರವೇಶಿಸುತ್ತದೆ. ಅದು ಕೆಳಗಿಳಿಯುತ್ತಾಹೋದಹಾಗೆಲ್ಲ ಹೆಚ್ಚು ಹೆಚ್ಚು ಅವಿದ್ಯೆಯಿಂದ ಉಪಹಿತವಾಗುವುದರಿಂದ ಸ್ವಸ್ವರೂಪಜ್ಞಾನವು ಮರೆಯಾಗುತ್ತ ಬಂದು, ಮೂಲಾಧಾರ

---

283 ಋಗ್ವೇದ : ' ಯಸ್ಮಾದೃತೇನ ಸಿಧ್ಯತಿ ಯಜ್ಞೋ ವಿಪಶ್ಚಿತಶ್ಚನ । ಸ ಧೀನಾಂ ಯೋಗಮಿನ್ವತಿ ' I, 5, 19, 8 ;
' ಯೋಗೇ ಯೋಗೇ ತವಸ್ತರಂ ವಾಜೇ ವಾಜೇ ಹವಾಮಹೇ । ಸಖಾಯ ಇಂದ್ರಮೂತಯೇ........', I, 6, 30, 8, ಇತ್ಯಾದಿ.

## 2. ಪಿಂಡೋತ್ಪತ್ತಿ ಪ್ರಕರಣ

ಚಕ್ರದಲ್ಲಿ ಕುಂಡಲಿನಿಯು ಪೂರ್ತಿಯಾಗಿ ಸುಪ್ತಾವಸ್ಥೆಯಲ್ಲಿರುತ್ತದೆ. ಅದನ್ನು ಎಚ್ಚರಿಸಿ ಬ್ರಹ್ಮರಂಧ್ರಕ್ಕೆ ಸುಷುಮ್ನಾನಾಡಿಯ ಮೂಲಕ ನಡೆಸಿಕೊಂಡು ಹೋಗಿ ಸ್ವಪ್ರಜ್ಞೆಯನ್ನುಂಟುಮಾಡುವುದೇ ಮೋಕ್ಷಮಾರ್ಗ ವೆನ್ನಿಸುವುದು.

ಈಗಾಗಲೇ ನೋಡಿರುವಂತೆ ಸೂಕ್ಷ್ಮದೇಹವಾದ ಲಿಂಗಶರೀರಕ್ಕೆ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪ್ರಾಣಗಳು, ಮನಸ್ಸು, ಅಹಂಕಾರ ಮತ್ತು ಬುದ್ಧಿಯೆಂಬ ತತ್ತ್ವಗಳಿವೆ. ಇವುಗಳಿಗೂ, ದೇಹವ್ಯಾಪಾರಗಳಿಗೂ ನಿಯಾಮಕವಾಗಿರುವ ಹಲವಾರು ಚಕ್ರಗಳೂ ಗ್ರಂಥಿಗಳೂ ಯೋಗದೇಹದಲ್ಲಿವೆಯೆಂಬುದು ಕುಂಡಲಿನೀ ಯೋಗದ ಮೂಲ ಆಧಾರ ಪ್ರತಿಜ್ಞೆ. ಇವು ಯೋಗದೇಹದಲ್ಲಿ, ಸ್ಥೂಲದೇಹಕ್ಕೆ ಪರಸ್ಪರವಾದ ಆಯಾ ಅಂಗಗಳಲ್ಲಿ ಇರುತ್ತವೆ. ಪ್ರತಿಚಕ್ರಕ್ಕೂ ಪ್ರಧಾನವಾದ ತತ್ತ್ವವೂ, ಅಧಿದೇವತೆಯೂ, ಗುಣಸಮುದಾಯವೂ ಉಂಟು. ಪ್ರತಿಚಕ್ರದಿಂದಲೂ ನಿರ್ದಿಷ್ಟ ಸಂಖ್ಯೆಯಷ್ಟು ಯೋಗನಾಡಿಗಳು ವಿಕಿರಣವಾಗುತ್ತವೆ. ದೈವೀಶಕ್ತಿವಾಹಕಗಳೂ ಸ್ಥೂಲವಾದ ಇಂದ್ರಿಯ ಗಳಿಗೆ ಅಗೋಚರವೂ ಆಗಿರುವ ಈ ಯೋಗನಾಡಿಗಳನ್ನು ಶರೀರಶಾಸ್ತ್ರ ಅಥವಾ ಜ್ಯೌತಿಷಗಳಲ್ಲಿ ಹೇಳುವ ನಾಡಿ ಗಳಿಂದ ಭಿನ್ನವಾಗಿ ತಿಳಿಯಬೇಕು. ಈ ನಾಡಿಗಳಿಗೆ ದಳಗಳೆಂದು ಹೆಸರು. ಪ್ರತಿಯೊಂದು ದಳವನ್ನೂ ಸಂಸ್ಕೃತ ವರ್ಣಮಾಲೆಯ ಒಂದು ವರ್ಣವನ್ನು ಒಳಗೊಂಡಿರುವಂತೆ ಹೇಳಿದೆ. ಈ ವರ್ಣವು ನಿರ್ದಿಷ್ಟವಾದ ಒಂದು ವಿಶ್ವತತ್ತ್ವವನ್ನು ಪ್ರತಿನಿಧಿಸಿ ಕುಂಡಲಿನೀ ಮಂತ್ರವಾಗಿದೆ; ಅಲ್ಲದೆ ಆಯಾ ನಾಡಿಯ ಸ್ಪಂದಶಕ್ತಿಯನ್ನವ ಲಂಬಿಸುತ್ತದೆ.[284] ಜೀವನು ಜನ್ಮವನ್ನು ವಹಿಸುವ ಸಮಯದಲ್ಲಿ ಪೂರ್ವಕರ್ಮಪರಿಪಾಕದಿಂದ ಯಾವ ಚಕ್ರದ ಯಾವ ದಳಗಳಲ್ಲಿರುವ ತತ್ತ್ವಗಳಲ್ಲಿ ಮಗ್ನನಾಗಿರುತ್ತಾನೋ ಅದೇ ತತ್ತ್ವಗಳನ್ನು ದೇಹದಲ್ಲಿಯೂ ಪಡೆಯುತ್ತಾನೆ. ಗುರೂಪದಿಷ್ಟಮಾರ್ಗದಲ್ಲಿ ಕ್ರಮವಾಗಿ ಪ್ರತಿಯೊಂದು ಚಕ್ರವನ್ನೂ ಭೇದಿಸುತ್ತ ಬಂದರೆ ಅದರಲ್ಲಿರುವ ತತ್ತ್ವಗಳು ಸಾಧಕನ ಸ್ವಾಧೀನವಾಗುತ್ತವೆ. ಈ ಸ್ಥಿತಿಯಲ್ಲಿಯೇ ಯೋಗಿಗೆ ಅಷ್ಟಸಿದ್ಧಿಗಳು ಲಭಿಸುತ್ತವೆ. ಶಕ್ತಿಕೇಂದ್ರಗಳಾದ ಮತ್ತು ಅವಿದ್ಯಾಪ್ರತೀಕಗಳಾದ ಈ ಚಕ್ರಗಳನ್ನೂ ಗ್ರಂಥಿಗಳನ್ನೂ ಭೇದಿಸಿ ಕುಂಡಲಿನಿಯು ಬ್ರಹ್ಮರಂಧ್ರದಲ್ಲಿರುವ ಸಹಸ್ರಾರ ಚಕ್ರವನ್ನು ಮುಟ್ಟಿದರೆ ಅಲ್ಲಿ ಅಮೃತತತ್ತ್ವವೂ ಬ್ರಹ್ಮಸಾಕ್ಷಾತ್ಕಾರವೂ ಉಂಟಾಗುತ್ತವೆ.

ಸೂರ್ಯಕಾಂತಿ ಹೂವು ಯಾವಾಗಲೂ ಸೂರ್ಯನಿಗೇ ಅಭಿಮುಖವಾಗಿರುವಂತೆ ಈ ನಾಡೀಚಕ್ರಗಳು ಕುಂಡಲಿನಿಗೇ ಅಭಿಮುಖವಾಗಿರುತ್ತವೆ—ಉದಾಹರಣೆಗೆ, ಕುಂಡಲಿನಿಯು ಮೂಲಾಧಾರ ಚಕ್ರದಲ್ಲಿದ್ದಾಗ ಅವು ಕೆಳಮುಖವಾಗಿಯೂ, ಅದು ಸಹಸ್ರಾರ ಚಕ್ರದಲ್ಲಿದ್ದಾಗ ಮೇಲುಮುಖವಾಗಿಯೂ ಇರುತ್ತವೆ. ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಾ, ಆಜ್ಞಾ ಮತ್ತು ಸಹಸ್ರಾರಗಳೆಂಬವುಗಳೇ ಯೋಗದೇಹದಲ್ಲಿ ಪ್ರಧಾನವಾದ ಆರು ಚಕ್ರಗಳು. ಕೆಲವರು (ಉದಾಹರಣೆಗೆ, ಶಾರ್ಙ್ಗದೇವನು) ಹತ್ತು ಚಕ್ರಗಳನ್ನು ಹೇಳುತ್ತಾರೆ. ಇವುಗಳ ನಾಮಾಂತರಗಳನ್ನೂ ಸೇರಿಸಿಕೊಂಡು ಯೋಗಶಾಸ್ತ್ರಗ್ರಂಥಗಳಲ್ಲಿ ಈ ಚಕ್ರಗಳ ಹೆಸರುಗಳು ಕಂಡುಬರುತ್ತವೆ: ಆಧಾರ, ಅಮೃತ, ಆನಂದಲಲಿತ, ಬಲ್ಬನ, ಬ್ರಹ್ಮದ್ವಾರ, ಕರ್ಣಮೂಲ, ಗುಲ್ಹಹ(?), ಕುಲದೀಪ, ಕುಂಡಲೀ, ಗಲಬದ್ಧ, ಕಾಲದಂಡ, ಕರಂಗ, ಕಾಲಭೇದನ, ಲಲನಾ, ಮಹೋತ್ಸಾಹ, ಮಹಾಪದ್ಮ, ನಿರಾಧಾರ, ನೌಕುಲ, ಪ್ರಾಣ, ಸೋಮ, ತ್ರಿವೇಣೀ, ಊರ್ಧ್ವರಂಧ್ರ, ವಜ್ರ ಇತ್ಯಾದಿ.[285] ಇವುಗಳೇ ಅಲ್ಲದೆ

284 ಮಂತ್ರಶಕ್ತಿಯ ವಿವೇಚನೆಗೆ ಅವಲಾನನ The Serpent Power ಗ್ರಂಥದ ನಾಲ್ಕನೆಯ ಅಧ್ಯಾಯವನ್ನೂ (ಪು. 82-102), ಶ್ರೀ ಶಂಕರಭಗವತ್ಪಾದರ ಸೌಂದರ್ಯಲಹರಿಗೆ ಲಕ್ಷ್ಮೀಧರಾಮಾತ್ಯನ ಭಾಷ್ಯವನ್ನೂ ಅವಲೋಕಿಸಿ.

285 ಅದ್ವೈತಮಾರ್ತಾಂಡವೆಂಬ ಅರ್ವಾಚೀನ ಗ್ರಂಥದ ಕೃತ್ಯರ್ವಾದ ಬ್ರಹ್ಮಾನಂದಸ್ವಾಮಿಯು ಆಧಾರ, ಕುಲದೀಪ, ವಜ್ರ, ಸ್ವಾಧಿಷ್ಠಾನ, ರೌದ್ರ, ಕರಾಳ, ಗಹ್ವರ, ವಿದ್ಯಾಪ್ರದ, ತ್ರಿಮುಖ, ತ್ರಿಪದ, ಕಾಲದಂಡ, ಉಕಾರ, ಕಾಲದ್ವಾರ,

ಸಂಗೀತಸಾರಕಾರನಾದ ಸವಾಯ್ ಪ್ರತಾಪಸಿಂಹನು ಅಂಗಾಲುಗಳಲ್ಲಿ ಅನಂತ ಮತ್ತು ಛಾಯಾ, ಕಾಲುಗಳಲ್ಲಿ ವಾತ, ಹಣೆಯಲ್ಲಿ ಲಲನಾ, ನಾಲಿಗೆಯಲ್ಲಿ ಮೂರುದಳಗಳ ಲೋಲ ಮತ್ತು ವಾಕ್ಕಿನ ಜಲಚಕ್ರ, ಅಂಗಳಿನಲ್ಲಿ ಎರಡುದಳಗಳ ವರುಣ, ಮೂಗಿನ ಎಡಹೊಳ್ಳೆಯಲ್ಲಿ ದುರ್ಗಂಧಿ, ಬಲಹೊಳ್ಳೆಯಲ್ಲಿ ಸುಗಂಧಿ, ಎಡಗಿವಿಯಲ್ಲಿ ಸವ್ಯ, ಬಲಗಿವಿಯಲ್ಲಿ ಶಬ್ದ, ಎಡಗಣ್ಣಿನಲ್ಲಿ ಜ್ಯೋತಿ, ಬ್ರಹ್ಮರಂಧ್ರದಲ್ಲಿ ಭ್ರಮರವೆಂಬ ನಾಡೀಗೊಂಚಲಿನಲ್ಲಿ ಏಳುದಳಗಳ ದೀಪಕ ಎಂಬ ಇತರ ಚಕ್ರಗಳನ್ನೂ ಹೇಳುತ್ತಾನೆ.[286]

ಈ ಚಕ್ರಗಳೇ ಅಲ್ಲದೆ ಬ್ರಹ್ಮಾ, ವಿಷ್ಣು ಮತ್ತು ರುದ್ರ ಎಂಬ ಹೆಸರಿನ ಗ್ರಂಥಿಗಳು ಯೋಗದೇಹದಲ್ಲಿ ಶಕ್ತಿ ಕೇಂದ್ರಗಳಾಗಿವೆ. ವಿವಿಧ ಚಕ್ರಗಳಿಗೆ ಸ್ಥೂಲದೇಹದಲ್ಲಿ ನರಜಾಲಗಳನ್ನೂ ಗ್ರಂಥಿಗಳಿಗೆ ನರಗ್ರಂಥಿಗಳನ್ನೂ ಈ ಕೆಳಗೆ ಸಮಾನಾಂತರವಾಗಿ ಕೊಡುತ್ತಿದ್ದೇನೆ. ಇದರಲ್ಲಿ ನನ್ನದೇ ಪ್ರಥಮ ಪ್ರಯತ್ನವೆಂದು ತಿಳಿದಿದ್ದೆ. ಆದರೆ ಅವಲಾನನ The Serpent Power ಮತ್ತು ವಸಂತರೆಲೆಯ The Mysterious Kundalini ಮುಂತಾದ ಗ್ರಂಥಗಳನ್ನು ಅವಲೋಕಿಸಿದಾಗ ಈ ಪ್ರಯತ್ನವು ಹಿಂದೆಯೂ ನಡೆದಿತ್ತೆಂದು ತಿಳಿಯಿತು. ಆದರೆ ನಾನು ಸ್ವತಂತ್ರವಾಗಿಯೇ ಪಡೆದ ಕೆಳಗಿನ ಸಮೀಕರಣಗಳನ್ನು ಮೇಲಿನ ಎರಡು ಗ್ರಂಥಾಂತರ್ಗತಸಮೀಕರಣಗಳೊಡನೆ ಹೋಲಿಸಿದಾಗ ಕಂಡುಬಂದ ವ್ಯತ್ಯಾಸಗಳಲ್ಲಿಯೂ ನನ್ನ ಅಭಿಪ್ರಾಯಗಳೇ ಹೆಚ್ಚು ನಿರ್ದುಷ್ಟವೆಂದು ಕಂಡುಬಂದವು. ಆದುದರಿಂದ ಅವುಗಳನ್ನು ಹಾಗೆಯೇ ಉಳಿಸಿಕೊಂಡು ಆವಶ್ಯಕವೆಂದು ಕಂಡಾಗಲೆಲ್ಲ ಮತಾಂತರಗಳನ್ನು ಸೂಚಿಸಿದ್ದೇನೆ. ಪ್ರಾಚೀನ ಭಾರತೀಯ ಯೋಗಶಾಸ್ತ್ರವು ನಿಷ್ಕೃಷ್ಟವಾದ ಶರೀರಶಾಸ್ತ್ರಜ್ಞಾನವನ್ನು ಅವಲಂಬಿಸಿತ್ತೆಂದು ತೋರಿಸುವುದು ಇದರ ಉದ್ದೇಶ. ಅದರಲ್ಲಿಯೂ ಶಾರ್ಙ್ಗದೇವವಿರಚಿತವಾದ ಅಧ್ಯಾತ್ಮವಿವೇಕವು ಈ ಜ್ಞಾನದ ಬಗ್ಗೆ ಬಹುಕಾಲ ಪ್ರಮಾಣಗ್ರಂಥವಾಗಿ ಉಳಿಯುವಷ್ಟು ಉತ್ತಮವಾಗಿದ್ದುದರಿಂದ ನನ್ನ ಈ ಪ್ರಯತ್ನವಾಗಲೀ ಗ್ರಂಥವಿಸ್ತಾರವಾಗಲೀ ಅಪ್ರಕೃತವಲ್ಲವೆಂದು ಭಾವಿಸಿದ್ದೇನೆ. ಚಕ್ರ ಮತ್ತು ಗ್ರಂಥಿಗಳ ಭೌತಿಕ ಅನುರೂಪತೆಯನ್ನು, ಅವುಗಳ ಸ್ಥಾನಗಳನ್ನೂ ಕ್ರಿಯೆಗಳನ್ನೂ ಕುರಿತ ಹಲವು ನಿರ್ದಿಷ್ಟ ಸೂತ್ರಗಳ ಆಧಾರದಿಂದ ಊಹಿಸಿದ್ದೇನೆ. ಈ ಕುಂಡಲಿನೀ ಯೋಗವನ್ನು ವಿಸ್ತಾರವಾಗಿ ತಿಳಿಯಬಯಸುವವರಿಗೆ ಅವಲಾನನ ' ಸರ್ಪಶಕ್ತಿ ' (The Serpent Power)ಯು ಅತ್ಯುತ್ತಮ ಪ್ರವೇಶವನ್ನು ದೊರಕಿಸುತ್ತದೆ.

ಹೀಗೆ, ಸ್ಥೂಲದಲ್ಲಿ ಹಲವಾರು ಪ್ರಾಥಮಿಕ ಕ್ರಿಯೆಗಳಿಗೆ ಉತ್ಪತ್ತಿಸ್ಥಾನಗಳಾಗಿರುವ ಕೊರಾಯಿಡ್, ಬ್ರೇಕಿಯಲ್, ಸರ್ವಿಕಲ್, ಕಾಕ್ಸೀಜಿಯಲ್, ಸೀಲಿಯಾಕ್, ಕಾರೊನರಿ, ಗ್ಯಾಸ್ಟ್ರಿಕ್, ಹೆಪ್ಯಾಟಿಕ್, ಹೈಪೋಗ್ಯಾಸ್ಟ್ರಿಕ್, ಲಂಬಾರ್, ಇಸೋಫೆಗಲ್, ಫ್ಯಾರಿಂಜಿಯಲ್, ಪ್ರೋಸ್ಟ್ಯೇಟಿಕ್, ಸೇಕ್ರಲ್, ಸೋಲಾರ್, ಸುಪ್ರಾರೀನಲ್, ಟೆಸ್ಟಿಕ್ಯುಲರ್, ಥೈರಾಯಿಡ್ ಮೊದಲಾದ ನರಜಾಲ (plexus)ಗಳಿವೆ. ಇವುಗಳನ್ನೆಲ್ಲ ನಮ್ಮ ಪ್ರಾಚೀನ ಆಯುರ್ವೇದಾಚಾರ್ಯರು ವಿವರಿಸಿದರೂ ಇವುಗಳ ನಿಖರಜ್ಞಾನವು ನಮಗೆ ಆಗುವುದು ತಂತ್ರಶಾಸ್ತ್ರದಿಂದಲೇ. ಈ ಜಾಲಗಳಿಗೆ ಸಮಾನಾಂತರವಾಗಿ ಕ್ರಿಯಾಶಕ್ತಿಯ ಮೂಲಸ್ಥಾನವೆಂದು ಹೇಳಲಾಗುವ

---

ಕರಂಗ, ದೀಪಕ, ಆನಂದಲಲಿತಾ, ಮಣಿಪೂರ, ನಾಕುಲ, ಕಾಲಭೇದನ, ಮಹೋತ್ಸಾಹಗಳೆಂಬ ಇಪ್ಪತ್ತು ಚಕ್ರಗಳನ್ನು ಹೇಳುತ್ತಾನೆ. ಆದರೆ ಇವುಗಳನ್ನು ಅವನು ತನ್ನ ಸಾಧನೆಯಲ್ಲೇ ಸಾಕ್ಷಾತ್ಕರಿಸಿಕೊಂಡನೋ, ಪೂರ್ವಾಚಾರ್ಯರಿಂದ ಉದ್ಧರಿಸಿ ಹೇಳಿದನೋ ತಿಳಿಯದು. ಅವಲಾನನು ಪು. 152 ರಲ್ಲಿ ಮತ್ತು ಮುಂದೆ ಹೇಳುವ ಹೆಸರುಗಳಲ್ಲಿ ವರ್ಣನೆಗಳೂ ಸೇರಿಕೊಂಡಿರುವುದರಿಂದ ಶ್ಲೋಕಗಳ ಭ್ರಷ್ಟಪಾಠವೆಂದು ಇದನ್ನು ತಿಳಿಯಬೇಕೇ ಹೊರತು ಸ್ವತಂತ್ರವಾದ ಚಕ್ರಗಳೆಂದಲ್ಲ.

286 ಪ್ರತಾಪಸಿಂಹ, ಸಂಗೀತಸಾರ, ಪ್ರಥಮಭಾಗ, 17-20.

ಪ್ರಧಾನ ಚಕ್ರಗಳೂ ಉಪಚಕ್ರಗಳೂ ಯೋಗಶರೀರದಲ್ಲಿವೆ. ನರಜಾಲಗಳನ್ನು ಆಧುನಿಕ ಶರೀರಶಾಸ್ತ್ರವು ಹೀಗೆ ವರ್ಣಿಸಿದೆ :

In their course, nerves subdivide into branches and these frequently communicate with branches of neighbouring nerves, such communications form what is called a *nerve plexus*. Sometimes a plexus is formed by the primary branches of the trunks of the nerves, as for example, the cervical, brachial, lumbar and sacral plexuses—and occasionally by the terminal funiculi, as in the plexuses formed at the periphery of the body. In the formation of a plexus, the component nerves divide, then join and again subdivide in such a complex manner that the individual funiculi become intricately interlaced.[287]

ಆಧಾರಚಕ್ರ

**ಗುದಲಿಂಗಾಂತರೇ ಚಕ್ರಮಾಧಾರಾಖ್ಯಂ ಚತುರ್ದಲಮ್ ।**
**ಪರಮಃ ಸಹಜಸ್ತದ್ವದಾನಂದೋ ವೀರಪೂರ್ವಕಃ ॥ 120 ॥** 169

ಆಸನದ್ವಾರ ಮತ್ತು ಜನನಾಂಗಗಳ ನಡುವೆ ನಾಲ್ಕುದಳಗಳ ಆಧಾರವೆಂಬ ಚಕ್ರವಿದೆ. ಪರಮಾನಂದ, ಸಹಜಾನಂದ ಹಾಗೆಯೇ ವೀರಾನಂದ,

**ಯೋಗಾನಂದಶ್ಚ ತತ್ರ ಸ್ಯಾದೈಶಾನಾದಿದಲೇ ಫಲಮ್ ।**
**ಅಸ್ತಿ ಕುಂಡಲಿನೀ ಬ್ರಹ್ಮಶಕ್ತಿರಾಧಾರಪಂಕಜೇ ॥ 121 ॥** 170

ಮತ್ತು ಯೋಗಾನಂದಗಳು ಈಶಾನ್ಯದಿಕ್ಕಿನಿಂದ ಮೊದಲಾಗುವ ಅದರ ದಳಗಳಿಂದ [ಉಂಟಾಗುವ] ಫಲಗಳು. ಆಧಾರ [ಚಕ್ರ] ಕಮಲದಲ್ಲಿ ಬ್ರಹ್ಮಶಕ್ತಿಯಾದ ಕುಂಡಲಿನೀ ಇದೆ.

ಮೂಲಾಧಾರವು ನಾಲ್ಕು ದಳಗಳ ಚಕ್ರ. ಕೆಂಪುಬಣ್ಣದ ಅದರ ದಳಗಳಲ್ಲಿ ವಂ, ಶಂ, ಷಂ, ಸಂ ಎಂಬ ಸುವರ್ಣವರ್ಣದ ಅಕ್ಷರಗಳಿವೆ. ಇದರ ಬೀಜಕೋಶದಲ್ಲಿ ಚೌಕಾಕಾರವಾದ ಧರಾಮಂಡಲವಿದೆ, ಹಾಗೂ ಎಂಟು ಶೂಲಗಳಿಂದ ಆವರಿಸಲ್ಪಟ್ಟಿದೆ. ಕೋಶದ ಒಳಗೆ ಧರಾಬೀಜವಾದ ಲಂಕಾರವಿದೆ. ಚತುರ್ಭುಜ ಮೂರ್ತಿಯಾದ ಇದು ಐರಾವತವನ್ನೇರಿದೆ. ಪೀತವರ್ಣದ ಈ ಮೂರ್ತಿಯು ವಜ್ರಧಾರಿಯಾಗಿದೆ. ಧರಾಬೀಜದಲ್ಲಿರುವ ಬಿಂದುವಿನಲ್ಲಿ ರಕ್ತವರ್ಣದ, ದಂಡ, ಕಮಂಡಲು, ರುದ್ರಾಕ್ಷಮಾಲೆ ಮತ್ತು ಅಭಯಮುದ್ರೆಗಳನ್ನು ಧರಿಸಿದ ಶಿಶು (ಚತುರ್ಮುಖ) ಬ್ರಹ್ಮನಿದ್ದಾನೆ. ಇದರ ಬೀಜಕೋಶದಲ್ಲಿ ಚಕ್ರಾಧಿಷ್ಠದೇವತೆಯಾದ ಡಾಕಿನಿಯು ರಕ್ತವರ್ಣಳಾಗಿ ಶೂಲ, ಖಟ್ವಾಂಗ, ಖಡ್ಗ, ಪಾನಪಾತ್ರೆಗಳನ್ನು ಧರಿಸಿದ ಚತುರ್ಭುಜೆಯಾಗಿ ಪದ್ಮಾಸನಸ್ಥಳಾಗಿದ್ದಾಳೆ. ಇದೇ ಬೀಜಕೋಶದಲ್ಲಿ ಮಿಂಚಿನಂತಹ ತ್ರಿಕೋಣವಿದೆ. ಅದರಲ್ಲಿ ಕೆಂಪು ಬಣ್ಣದ ಕಾಮವಾಯು ಮತ್ತು ಕಾಮಬೀಜಗಳಿವೆ. ಇದರ ಮೇಲೆ ಶ್ಯಾಮವರ್ಣದ ಸ್ವಯಂಭೂ ಲಿಂಗವಿದೆ ; ಈ ಲಿಂಗವನ್ನು ಮೂರೂವರೆ ಬಾರಿ ಸುರುಳಿ ಸುತ್ತಿ ಅದರ ಮೇಲೆ ಕುಂಡಲಿನೀ ಇದೆ. ಸ್ವಯಂಭೂ ಲಿಂಗದ ಮೇಲೆ ಚಿತ್‌ಕಲೆಯಿದೆ.[288]

---

287 Gray's Anatomy,(30th edn.), p. 1059 ; *see also*, p. 893.

288 ಪೂರ್ಣಾನಂದಸ್ವಾಮಿ, ಶ್ರೀತತ್ತ್ವಚಿಂತಾಮಣಿಯ ಆರನೆಯ ಪಟಲ : ಷಟ್‌ಚಕ್ರನಿರೂಪಣಂ, ಶ್ಲೋ. 1-18, ಪು. 2-23. ಇದರಮೇಲೆ ಕಾಲೀಚರಣನ ಭಾಷ್ಯವನ್ನೂ ಅವಲೋಕಿಸಿ.

## 2. ಪಿಂಡೋತ್ಪತ್ತಿ ಪ್ರಕರಣ

ಇದು ಹಳದಿಯ ತತ್ತ್ವವಾದ ಪೃಥ್ವೀ ತತ್ತ್ವದ್ದು ; ಸಪ್ತವ್ಯಾಹೃತಿಗಳಲ್ಲಿ ಭೂತತ್ತ್ವದ್ದು ; ತ್ರೈಪುರ ತ್ರಿಕೋಣವೇ ಇದರ ಯೋನಿ. ಗಂಧ, ಘ್ರಾಣ ಮತ್ತು ಕರ್ಮೇಂದ್ರಿಯಗಳು ಇದರ ತತ್ತ್ವಗಳು.[289] ದೇಹದಲ್ಲಿ ಅಸ್ಥಿಧಾತುವಿಗೆ ಆಶ್ರಯಸ್ಥಾನವಾಗಿದೆ.

ಇದರ ಅಧಿದೇವತೆಯನ್ನು ಮೂಷಕವಾಹನನಾದ ಗಣಪತಿಯೆಂದೂ ಹೇಳುವುದುಂಟು.

ಇದು ಸ್ಥೂಲಶರೀರದಲ್ಲಿ ಕಾಕ್ಸೀಜಿಯಲ್ ನರಜಾಲಕ್ಕೆ ಸಮಾನವಾದುದು. ಅದನ್ನು ಹೀಗೆ ವರ್ಣಿಸಿದೆ :

The **coccygeal plexus** is formed by a small descending branch from the anterior primary ramus of the fourth sacral nerve, and the anterior primary rami of the fifth sacral and coccygeal nerves. The anterior primary ramus of the fifth sacral nerve emerges from the sacral hiatus and turns forwards round the lateral margin of the sacrum below the cornu. It pierces the coccygeus muscle to gain its pelvic surface and is then joined by a descending filament from the fourth sacral nerve. The small trunk so formed descends on the pelvic surface of the coccygeus and unites with the minute anterior primary ramus of the coccygeal nerve, which descends from the sacral hiatus, turns round the lateral margin of the coccyx and pierces the coccygeus to gain the pelvis. This small trunk constitutes the *coccygeal plexus*.[290]

ವಸಂತರೆಲೆಯು ಮೂಲಾಧಾರಚಕ್ರಕ್ಕೆ ಪೆಲ್ವಿಕ್ ಪ್ಲೆಕ್ಸಸ್ ಎಂಬುದನ್ನು ಸಮನ್ವಯಮಾಡುತ್ತಾನೆ.[291] ಆದರೆ ಮುಂದೆ ಹೇಳುವಂತೆ, ಇಂತಹ ಎರಡು ನರಜಾಲಗಳಿರುವುದರಿಂದಲೂ ಸ್ಥಾನ ವ್ಯತ್ಯಾಸವಾಗುವುದರಿಂದಲೂ ಮೇಲಿನ ಸಮೀಕರಣವೇ ಸಮೀಚೀನವಾಗಿದೆ. ಡಾ॥ ಬ್ರಜೇಂದ್ರನಾಥಸೀಲ್‌ನನ್ನು[292] ಆಧರಿಸಿ ಅವಲಾನನು ಮೂಲಾಧಾರಕ್ಕೆ ಸೇಕ್ರೋಕಾಕ್ಸೀಜಿಯಲ್ ನರಜಾಲವು ಪರಸ್ಪರವೆಂದು ಹೇಳುತ್ತಾನೆ.[293]

ಶ್ರೀ ಶಂಕರಭಗವತ್ಪಾದರು ಮೂಲಾಧಾರಕಮಲದಲ್ಲಿ ಸಮಯಾ ಎಂಬ ಶಕ್ತಿಸ್ವರೂಪಿಣಿಯು ಲಾಸ್ಯವನ್ನು ಮಾಡುತ್ತಿರುವಳೆಂದೂ ಅವಳೊಡನೆ ಶಿವನು ತಾಂಡವನೃತ್ತವನ್ನೆಸಗುತ್ತಿರುವನೆಂದೂ, ಜಗತ್ತಿನ ಜನಕಜನನಿಯರಾದ ಶಿವಶಕ್ತಿಯರ ಸಮಾಗಮದಿಂದ ಈ ಜಗತ್ತು ಹುಟ್ಟಿತೆಂದೂ ಮೂಲಾಧಾರ ಚಕ್ರವು ಸೃಷ್ಟಿಸ್ಥಾನವೆಂಬುದನ್ನು ವಿವಕ್ಷಿಸಿ ತಮ್ಮ ಸೌಂದರ್ಯಲಹರಿಯಲ್ಲಿ ಹೇಳಿದ್ದಾರೆ :

ತವಾಧಾರೇ ಮೂಲೇ ಸಹ ಸಮಯಯಾ ಲಾಸ್ಯಪರಯಾ
ನವಾತ್ಮಾನಂ ಮನ್ಯೇ ನವರಸಮಹಾತಾಂಡವನಟಮ್ |

---

289 ಅವಲಾನ್, ಉ. ಗ್ರಂ., ಪು. 141–142.

290 ಗ್ರೇ, ಉ. ಗ್ರಂ., ಪು. 1157.

291 ವಸಂತರೆಲೆ, ಉ. ಗ್ರಂ., ಪು. 42.

292 Brajendranath Seal, The Positive Sciencs of the Hindus, *cit*., Aval on *op. cit* *loc*., *cit*.

293 ಅವಲಾನ್, ಉ. ಗ್ರಂ., ಪು. 154, 159.

## 2. ಪಿಂಡೋತ್ಪತ್ತಿ ಪ್ರಕರಣ

ಉಭಾಭ್ಯಾಮೇತಭ್ಯಾಮುದಯವಿಧಿಮುದ್ದಿಶ್ಯ ದಯಯಾ
ಸನಾಥಾಭ್ಯಾಂ ಜಜ್ಞೇ ಜನಕಜನನೀಮಜ್ಜಗದಿದಮ್ ‖ 294

ಈ ಮೂಲಾಧಾರ ಚಕ್ರಕ್ಕೆ ಕುಲವೆಂದೂ ಹೆಸರು. ಇದರ ಧ್ಯಾನದಿಂದ ಕ್ಷಣಮಾತ್ರದಲ್ಲಿ ಸ್ಫುರಿಸಿ ಬ್ರಹ್ಮ ಸಾಕ್ಷಾತ್ಕಾರವಾಗುವುದರಿಂದ ಇದರ ಸಾಧಕರಿಗೆ ಕೌಲರೆಂದು ಹೆಸರು. ಸಹಸ್ರಾರಚಕ್ರದಿಂದ ಸ್ರವಿಸುವ ಅಮೃತದಿಂದ ಇಡೀ ಯೋಗದೇಹವನ್ನೂ ಅದರ ಎಪ್ಪತ್ತೆರಡುಸಾವಿರ ನಾಡಿಗಳನ್ನೂ ತೋಯಿಸಿ, ತನ್ನ ನಿವಾಸವಾದ ಮೂಲಾಧಾರಕಮಲವನ್ನೂ ಅಮೃತಸಿಂಚನಮಾಡಿ ಕುಂಡಲಿನಿಯು ಸರ್ಪದಂತೆ ಆಕಾರವನ್ನು ಧರಿಸಿ ಸುಷುಮ್ನಾ ಮಾರ್ಗದಲ್ಲಿ ನಿದ್ರೆಮಾಡುತ್ತದೆ ಎಂದು ಶಂಕರಭಗವತ್ಪಾದರು ಹೇಳಿದ್ದಾರೆ :

ಸುಧಾಧಾರಾಸಾರೈಶ್ಚರಣಯುಗಳಾಂತರ್ವಿಗಳಿತೈಃ
ಪ್ರಪಂಚಂ ಸಿಂಚಂತೀ ಪುನರಪಿ ರಸಾಮ್ನಾಯಮಹಸಃ ।
ಅವಾಪ್ಯ ಸ್ವಾಂ ಭೂಮಿಂ ಭುಜಗನಿಭಮಧ್ಯುಷ್ಟವಲಯಂ
ಸ್ವಮಾತ್ಮಾನಂ ಕೃತ್ವಾ ಸ್ವಪಿಷಿ ಕುಲಕುಂಡೇ ಕುಹರಿಣಿ ‖ 295

ಹೀಗೆ ಸರ್ಪಾಕಾರವೂ ಬ್ರಹ್ಮಶಕ್ತಿಯೂ ಆಗಿರುವ ಕುಂಡಲಿನಿಯು ತಾವರೆದಂಟಿನೊಳಗೆ ಇರುವ ತಂತುವಿನಂತೆ ಸೂಕ್ಷ್ಮವಾಗಿಯೂ ಮಿಂಚಿನಂತೆ ಹೊಳೆಯುತ್ತಲೂ ಇದ್ದು ತನ್ನದೇ ಬಾಲದ ತುದಿಯನ್ನು ಕಚ್ಚಿಕೊಂಡು ಸುಷುಮ್ನಾನಾಡಿಯ ಕೆಳಗೆ ಅದರ ದ್ವಾರವನ್ನು ಮುಚ್ಚಿಕೊಂಡು ಮೂಲಾಧಾರದ ಕಂದದಲ್ಲಿ ನೆಲಸಿರುತ್ತಾಳೆ. ಯೋಗಿಯು ಪದ್ಮಾಸನದಲ್ಲಿ ಕುಳಿತು ಗುದಸ್ಥಾನವನ್ನು ಬಿಗಿಮಾಡುತ್ತಲೂ ಕುಂಭಕದಲ್ಲಿ ಪ್ರಾಣಾಯಾಮ ಮಾಡುತ್ತಲೂ ವಾಯುವನ್ನು ಊರ್ಧ್ವಮುಖವಾಗಿ ಚಲಿಸಿದಾಗ, ಈ ವಾಯುವು ಸ್ವಾಧಿಷ್ಠಾನ ಚಕ್ರದಲ್ಲಿರುವ ಅಗ್ನಿಯನ್ನು ಹೊಡೆದು ಎಬ್ಬಿಸುತ್ತದೆ. ಈ ಸಂಘಾತದಿಂದ, ಸಹಸ್ರಾರಚಕ್ರದಿಂದ ಸುಷುಮ್ನಾನಾಡಿಯ ಮೂಲಕ ಎಡೆಬಿಡದೆ ಹರಿದುಬರುತ್ತಿರುವ ಅಮೃತಧಾರೆಯು ನಿಂತುಹೋಗುವುದರಿಂದ ನಿದ್ರೆಯಲ್ಲಿದ್ದ ಕುಂಡಲಿನಿಗೆ ಆಹಾರವಾದ ಅಮೃತವು ದೊರಕದಂತಾಗಿ, ಅವಳು ಎಚ್ಚತ್ತು ಅಮೃತವನ್ನು ಪಡೆಯಲು ಮೇಲುಮುಖವಾಗಿ ನಡೆದು ಕ್ರಮವಾಗಿ ಆರು ಚಕ್ರಗಳನ್ನೂ ಮೂರು ಗ್ರಂಥಿಗಳನ್ನೂ ಭೇದಿಸಿ ಸಹಸ್ರಾರವನ್ನು ಸೇರಿ ಅಮೃತಪಾನ ಮಾಡುವಳು. ಇಲ್ಲಿರುವ ಪರಶಿವನೊಡನೆ ಸಮಾಗಮವಾಗುವುದರಿಂದ ವಿಕೃತಿ ಅವಸ್ಥೆಯು ತಪ್ಪಿಹೋಗುತ್ತದೆ; ಇದೇ ಸಮಾಧಿ, ಇದೇ ಮೋಕ್ಷ. ಈ ತತ್ವಗಳನ್ನು ವಾಮಕೇಶ್ವರ ಮಹಾತಂತ್ರವು ಈ ಮಾತುಗಳಲ್ಲಿ ವರ್ಣಿಸುತ್ತದೆ :

ಭುಜಂಗಾಕಾರ ರೂಪೇಣ ಮೂಲಾಧಾರಂ ಸಮಾಶ್ರಿತಾ ।
ಶಕ್ತಿಃ ಕುಂಡಲಿನೀ ನಾಮ ಬಿಸತಂತುನಿಭಾಽಽಶುಭಾ ‖
ಮೂಲಕಂದಂ ಫಣಾಗ್ರೇಣ ದಷ್ಟ್ವಾ ಕಮಲಕಂದವತ್ ।
ಮುಖೇನ ಪುಚ್ಛಂ ಸಂಗೃಹ್ಯ ಬ್ರಹ್ಮರಂಧ್ರಸಮನ್ವಿತಾ ‖
ಪದ್ಮಾಸನಗತಃ ಸ್ವಸ್ಥೋ ಗುದಮಾಕುಂಚ್ಯ ಸಾಧಕಃ ।
ವಾಯುಮೂರ್ಧ್ವಗತಂ ಕುರ್ವನ್ ಕುಂಭಕಾವಿಷ್ಟಮಾನಸಃ ‖
ವಾಯ್ವಾಘಾತವಶಾದಗ್ನಿಃ ಸ್ವಾಧಿಷ್ಠಾನಗತೋ ಜ್ವಲನ್ ।
ಜ್ವಲನಾಘಾತಪವನಾಘಾತೈರುನ್ನಿದ್ರಿತೋಽಹಿರಾಟ್ ‖

294 ಶ್ರೀ ಶಂಕರಭಗವತ್ಪಾದಾಚಾರ್ಯ, ಸೌಂದರ್ಯಲಹರೀ, 40.

295 ಅದೇ ಗ್ರಂಥ, 10.

## 2. ಪಿಂಡೋತ್ಪತ್ತಿ ಪ್ರಕರಣ

ರುದ್ರಗ್ರಂಥಿಂ ತತೋ ಭಿತ್ತ್ವಾ ವಿಷ್ಣುಗ್ರಂಥಿಂ ಭಿನತ್ತ್ಯತಃ ।
ಬ್ರಹ್ಮಗ್ರಂಥಿಂ ಚ ಭಿತ್ತ್ವೈವ ಕಮಲಾನಿ ಭಿನತ್ತಿ ಷಟ್ ॥
ಸಹಸ್ರಕಮಲೇ ಶಕ್ತಿಃ ಶಿವೇನ ಸಹ ಮೋದತೇ ।
ಸಾ ಚಾವಸ್ಥಾ ಪರಾ ಜ್ಞೇಯಾ ಸೈವ ನಿರ್ವೃತಿಕಾರಣಮ್ ॥ [296]

ಆದುದರಿಂದಲೇ ಇದನ್ನು ಆಧಾರ ಅಥವಾ ಮೂಲಾಧಾರ ಚಕ್ರವೆಂದಿರುವುದು. ಇದು, ಮಿಕ್ಕೆಲ್ಲ ಚಕ್ರಗಳಂತೆ ಸುಷುಮ್ನಾ, ಇಡಾ, ಪಿಂಗಳಾ ನಾಡಿಗಳಿಗೆ ಅಂಟಿಕೊಂಡೇ ಇದೆ. ಗುದಸ್ಥಾನ ಮತ್ತು ಜನನೇಂದ್ರಿಯಗಳ ನಡುವೆ ಇದರ ಸ್ಥಾನ.

ಮೇಲೆ ಹೇಳಿದ ಧರಾಮಂಡಲ, ಶಿಶು ಬ್ರಹ್ಮಾ ಮೊದಲಾದವುಗಳೆಲ್ಲಾ ಮತ್ತು ಮುಂದಿನ ಚಕ್ರಗಳಲ್ಲಿ ಇದೇರೀತಿ ಹೇಳುವುದೆಲ್ಲವೂ ಧ್ಯಾನಕ್ಕಾಗಿ ವಿಧಿಸಲ್ಪಟ್ಟ ಪ್ರತಿಮೆಗಳು. ಇವುಗಳಲ್ಲಿ ಪ್ರತಿಯೊಂದಕ್ಕೂ ವಿಶೇಷವಾದ ತಾತ್ತ್ವಿಕ ಸಂಕೇತಾರ್ಥವುಂಟು. ಇವುಗಳ ಏಕಾಗ್ರಚಿತ್ತದ ಧ್ಯಾನದಿಂದ ಮತ್ತು ಶಾಸ್ತ್ರದಲ್ಲಿ ಹೇಳಿದ ವಿಧಿನಿಯಮಗಳ ಆಚರಣೆಯಿಂದ ಅಪೂರ್ವವಾದ ಅನುಭವಗಳೂ ಶಕ್ತಿಗಳೂ ಸಾಧಕನಿಗೆ ಲಭಿಸುತ್ತವೆ.

ಜೀವರಾಶಿಗಳಲ್ಲೆಲ್ಲ ತನ್ನನ್ನು ದ್ವಿಗುಣಗೊಳಿಸಿಕೊಂಡು ಸಂತಾನೋತ್ಪತ್ತಿ, ವೃದ್ಧಿಗಳನ್ನು ಮಾಡಿ ಜೀವದ ಸೃಷ್ಟಿಸ್ಥಿತಿಗಳಿಗೆ ಕಾರಣವಾದ DNA ಅಣುವೂ ಸರ್ಪಾಕಾರದ ಸುರುಳಿಯಲ್ಲೇ ಇರುವುದೂ ಬ್ರಹ್ಮಾಂಡದಲ್ಲಿ ಪಿಂಡಾಂಡದ ಸೃಷ್ಟಿಗೆ ಕಾರಣವೆಂದು ಸುರುಳಿಸುತ್ತಿರುವ ಸರ್ಪ ಎಂಬ ಅರ್ಥದ ಕುಂಡಲಿನಿಯನ್ನೇ ಸಾವಿರಾರು ವರ್ಷಗಳ ಹಿಂದೆ ಭಾರತದ ಋಷಿಗಳು ಹೇಳಿರುವುದೂ, ಕಾಕತಾಳೀಯವಾಗಿರಬಹುದಾದರೂ ಇಲ್ಲಿ ತುಂಬಾ ಚಿಂತ್ಯವಾಗಿದೆ. DNA ಅಣುವಿನ ಕುಂಡಲಿನೀ ರೂಪದ ಬಗ್ಗೆ ರುಥ್ ಮೂರ್ ತನ್ನ The Coil of Life ಎಂಬ ಗ್ರಂಥದಲ್ಲಿ ಅತ್ಯಂತ ಸ್ವಾರಸ್ಯವಾಗಿಯೂ, ವೈಜ್ಞಾನಿಕವಾಗಿಯೂ, ಹೃದಯಂಗಮವಾಗಿಯೂ ವರ್ಣಿಸಿದ್ದಾಳೆ.

ಸ್ವಾಧಿಷ್ಠಾನಚಕ್ರ

**ಆಬ್ರಹ್ಮರಂಧ್ರಮೃಜುತಾಂ ನೀತೇಯಮಮೃತಪ್ರದಾ ।**
**ಸ್ವಾಧಿಷ್ಠಾನಂ ಲಿಂಗಮೂಲೇ ಷಟ್‌ಪತ್ರಂ ಚಕ್ರಮಸ್ಯ ಚ** ॥ 122 ॥ 171

—ನೆಟ್ಟಗೆಮಾಡಲ್ಪಟ್ಟು ಬ್ರಹ್ಮರಂಧ್ರದವರೆಗೂ ನಡೆಸಿಕೊಂಡುಹೋದರೆ ಇದು ಅಮೃತವನ್ನು ಕೊಡುವಂತಹುದು. ಜನನಾಂಗದ ಬುಡದಲ್ಲಿ ಆರು ದಳಗಳ ಸ್ವಾಧಿಷ್ಠಾನ ಚಕ್ರವಿದೆ. ಮತ್ತು ಇದರ—

ಮೂರೂವರೆ ಬಾರಿ ಸುರುಳಿಸುತ್ತಿಕೊಂಡಿರುವ ಕುಂಡಲಿನಿಯನ್ನು ನೆಟ್ಟಗೆ ನಿಲ್ಲುವಂತೆ ಮಾಡಿ ಬ್ರಹ್ಮನಾಡಿಯ ಮೂಲಕ ಬ್ರಹ್ಮಕಂದದಿಂದ ಬ್ರಹ್ಮರಂಧ್ರದಲ್ಲಿರುವ ಸಹಸ್ರಾರವನ್ನು ಮುಟ್ಟುವಂತೆ ಮಾಡಿದರೆ ಸಹಸ್ರಾರ ಚಕ್ರದಲ್ಲಿ ಸಮೀಪದಲ್ಲಿರುವ ಚಂದ್ರನು ಅಮೃತವನ್ನು ಸುರಿಸುತ್ತಾನೆಂಬುದು ಯೋಗಶಾಸ್ತ್ರದ ತಿಳುವಳಿಕೆ. ಈ ವಿಧದ ಅಮೃತಸೇಚನೆಯಾದರೆ ಮೋಕ್ಷವೂ ಮರಣರಾಹಿತ್ಯವೂ ಉಂಟಾಗುತ್ತವೆ.

**ಪೂರ್ವಾದಿಷು ದಲೇಷ್ವಾಹುಃ ಫಲಾನ್ಯೇತಾನ್ಯನುಕ್ರಮಾತ್ ।**
**ಪ್ರಶ್ರಯಃ ಕ್ರೂರತಾ ಗರ್ವನಾಶೋ[57] ಮೂರ್ಛಾ ತತಃ ಪರಮ್** ॥123॥ 172

57 ಸರ್ವನಾಶೋ ಎಂದು ಅಧ್ಯಾತ್ಮವಿವೇಕದಲ್ಲಿ ಪಾಠಾಂತರವಿದೆ.

296 ವಾಮಕೇಶ್ವರತಂತ್ರ, ಚಕ್ರಣಾಮಾತ್ಯನಿಂದ ತನ್ನ ಷಟ್ಚಕ್ರದೀಪಿಕಾದಲ್ಲಿ ಉದ್ಧೃತಿ, ಪು. 15.

—ಪೂರ್ವದಿಂದ ಮೊದಲಾಗುವ ದಳಗಳಲ್ಲಿ ಕ್ರಮವಾಗಿ ಈ ಫಲಗಳನ್ನು ಹೇಳುತ್ತಾರೆ: ವಿನಯ, ಕ್ರೂರವಾಗಿರುವುದು, ಜಂಬವು ನಾಶವಾಗುವುದು, ಮೋಹ ; ಆಮೇಲೆ—

**ಅವಜ್ಞಾ ಸ್ಯಾದವಿಶ್ವಾಸಃ ಕಾಮಶಕ್ತೇರಿದಂ ಗೃಹಮ್ ।**
**ನಾಭೌ ದಶದಲಂ ಚಕ್ರಂ ಮಣಿಪೂರಕಸಂಜ್ಞಿತಮ್ ॥ 124 ॥** 173

— ಅಸಡ್ಡೆ, ಅಪನಂಬಿಕೆ ಇರುತ್ತದೆ ; ಇದು ಕಾಮಶಕ್ತಿಯ ಆವಾಸಸ್ಥಾನ. ಹೊಕ್ಕುಳಿನಲ್ಲಿ ಹತ್ತು ದಳಗಳ ಮಣಿಪೂರಕವೆಂಬ ಚಕ್ರ[ವಿದೆ].

ಮೂರ್ಛಾ ಎಂದರೆ ಮೋಹ ಎಂಬ ಸಿಂಹಭೂಪಾಲಿಯ ವ್ಯಾಖ್ಯಾನವನ್ನು ಇಲ್ಲಿ ಅನುಸರಿಸಿದೆ ; ಮೋಹವೆಂದರೆ ಆಧ್ಯಾತ್ಮಜ್ಞಾನದ ಅಭಾವ ಎಂದು ಇಲ್ಲಿ ತಿಳಿಯಬೇಕು. ನನಗೆ ಉಪಲಬ್ಧವಾದ ಯಾವ ಯೋಗಶಾಸ್ತ್ರ ಗ್ರಂಥದಲ್ಲೂ ವಿವಿಧ ಚಕ್ರಗಳ ಫಲಗಳು ದೊರೆಯಲಿಲ್ಲ. ಆದರೆ ಹಂಸೋಪನಿಷತ್ತಿನಲ್ಲಿರುವ—

ಗುದಮವಷ್ಟಭ್ಯಾ ऽऽಧಾರಾದ್ವಾಯುಮುತ್ಥಾಪ್ಯ ಸ್ವಾಧಿಷ್ಠಾನಂ ತ್ರಿಃಪ್ರದಕ್ಷಿಣೀಕೃತ್ಯ ಮಣಿಪೂರಂ ಗತ್ವಾ ऽನಾಹತಮತಿಕ್ರಮ್ಯ ವಿಶುದ್ಧೇ ಪ್ರಾಣಾನ್ನಿರುಧ್ಯಾ ऽऽಜ್ಞಾಮನುಯಾಯನ್ ಬ್ರಹ್ಮರಂಧ್ರಂ ಧ್ಯಾಯನ್ . . . . . . . . . ಪೂರ್ವದಳೇ ಪುಣ್ಯೇ ಮತಿರಾಗ್ನೇಯೇ ನಿದ್ರಾ ऽऽಲಸ್ಯಾದಯೋ ಭವಂತಿ । ಯಾಮ್ಯೇ ಕ್ರೌರ್ಯೇ ಮತಿರ್ನೈಋತೇ ಪಾಪೇ ಮನೀಷಾ ವಾರುಣ್ಯಾಂ ಕ್ರೀಡಾ ವಾಯವ್ಯಾಂ ಗಮನಾ ऽऽದೌ ಬುದ್ಧಿಃ ಸೌಮ್ಯೇ ರತಿಪ್ರೀತಿರೀಶಾನ್ಯೇ ದ್ರವ್ಯಾದಾನಂ ಮಧ್ಯೇ ವೈರಾಗ್ಯಂ ಕೇಸರೇ . . . . . *

ಎಂದು ಮೊದಲಾದ ಮಾತುಗಳಿಂದ ಶ್ರೀ ಶಾರ್ಙ್ಗದೇವನು ಸ್ಫೂರ್ತಿ ಪಡೆದಿರಬಹುದು. ನಾರಾಯಣನೂ ಈ ವಾಕ್ಯ ಸಮುಚ್ಚಯವನ್ನು ವ್ಯಾಖ್ಯಾನಮಾಡುವಾಗಲೇ ಶಾರ್ಙ್ಗದೇವನ ಅಧ್ಯಾತ್ಮವಿವೇಕದಿಂದ ವಿವಿಧ ಚಕ್ರಗಳಲ್ಲಿನ ದಳಗಳ ಫಲಗಳನ್ನು ಕುರಿತು ಉದ್ಧರಿಸಿದ್ದಾನೆ.

ಆಯಾ ದಳದ ಫಲಗಳು, ಎಂದರೆ ಆಯಾ ದಳವನ್ನು ಸಾಧಕನು ಧ್ಯಾನಿಸಿದರೆ ಉಂಟಾಗುವ ಗುಣಗಳು ಎಂದು ಅರ್ಥ. ಈ ಫಲಗಳನ್ನು ಶಾರ್ಙ್ಗದೇವನು ತನ್ನ ಅಧ್ಯಾತ್ಮವಿವೇಕದಿಂದಲೇ ಉದ್ಧರಿಸಿದ್ದಾನೆಂಬುದು ನಿರ್ವಿವಾದವಾಗಿದೆ. ಏಕೆಂದರೆ ಹಂಸೋಪನಿಷತ್ತಿನ ವ್ಯಾಖ್ಯೆಯಾದ, ನಾರಾಯಣನಿಂದ ರಚಿತವಾದ ದೀಪಿಕೆಯಲ್ಲಿ ಷಟ್‌ಚಕ್ರಗಳ ಫಲಗಳನ್ನು ವರ್ಣನೆಮಾಡುವಾಗ ಅಧ್ಯಾತ್ಮ ವಿವೇಕದಿಂದ ಅವುಗಳನ್ನು ಉದ್ಧರಿಸಿದೆ.[297] 123 ನೇ ಶ್ಲೋಕದಲ್ಲಿರುವ ಗರ್ವನಾಶೋ ಎಂಬುದಕ್ಕಿಂತ ಅಧ್ಯಾತ್ಮವಿವೇಕದ 'ಸರ್ವನಾಶೋ' ಎಂಬ ಪಾಠವೇ ಹೆಚ್ಚು ಗ್ರಾಹ್ಯವಾಗಿದೆ.

ಕುಂಕುಮ ವರ್ಣದ ಸ್ವಾಧಿಷ್ಠಾನ ಚಕ್ರದಲ್ಲಿ ಆರುದಳಗಳಿವೆ. ಅವುಗಳಲ್ಲಿ ಮಿಂಚಿನ ಬಣ್ಣದ ಬಂ, ಭಂ, ಮಂ, ಯಂ, ರಂ, ಲಂ ಎಂಬ ವರ್ಣಗಳಿವೆ. ಇದರ ಬೀಜಕೋಶದಲ್ಲಿ ಎಂಟುದಳಗಳ ಆಕೃತಿಯ ವರುಣ ಪ್ರದೇಶವಿದೆ ; ಬಿಳಿಯ ಬಣ್ಣಕ್ಕಿರುವ ಇದರ ಕೇಂದ್ರದಲ್ಲಿ, ಪಾಶವನ್ನು ಹಿಡಿದಿರುವ ಮತ್ತು ಮೊಸಳೆಯ ವಾಹನವಿರುವ ವಂ ಎಂಬ ವರುಣಬೀಜವಿದೆ. ಇದರ ಮಧ್ಯದಲ್ಲಿ ಗರುಡನನ್ನೇರಿದವನೂ, ಶಂಖ, ಚಕ್ರ, ಗದಾ, ಪದ್ಮಧಾರಿಯೂ, ಚತುರ್ಭುಜನೂ, ಪೀತಾಂಬರ, ವನಮಾಲೆ, ಕೌಸ್ತುಭ ಮತ್ತು ಶ್ರೀವತ್ಸಗಳಿಂದ ಅಲಂಕೃತನೂ ತರುಣನೂ ಆಗಿರುವ ವಿಷ್ಣುವಿದ್ದಾನೆ. ಬೀಜಕೋಶದಲ್ಲಿರುವ ಕೆಂದಾವರೆಯಲ್ಲಿ ಶ್ಯಾಮವರ್ಣದವಳೂ ಶೂಲ,

* ಹಂಸೋಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 199.

297 ಅನಲಾನನಿಂದ ಉದ್ಧೃತಿ, ಉ. ಗ್ರಂ., ಪು. 138. ಮೊದಲನೆಯ ಅಡಿ ಟಿಪ್ಪಣಿಯನ್ನು ನೋಡಿ.

ಕಮಲ, ಡಮರು ಮತ್ತು ಕೊಡಲಿಗಳನ್ನು ಧರಿಸಿ ಚತುರ್ಭುಜೆಯಾದ, ಮೂರುಕಣ್ಣಿನ, ಭಯಂಕರವಾದ ಕೋರೆ ದಾಡೆಗಳನ್ನುಳ್ಳ ಶುಕ್ಲಾನ್ನಪ್ರಿಯೆಯೂ ಮೂಗಿನಿಂದ ರಕ್ತಹರಿಯುತ್ತಿರುವವಳೂ ಆದ ರಾಕಿಣೀ ಶಕ್ತಿಯಿದ್ದಾಳೆ.[298]

ಈ ಚಕ್ರವು ಪಂಚಭೂತಗಳಲ್ಲಿ ಬಿಳಿಯಬಣ್ಣದ ಆಪೋತತ್ತ್ವಕ್ಕೆ ಸೇರಿದ್ದು. ಕುಗ್ಗುವುದು, ರುಚಿ ಮತ್ತು ರಸನೇಂದ್ರಿಯಗಳಿಗೆ ಕಾರಣವಾದುದು; ವ್ಯಾಹೃತಿಗಳಲ್ಲಿ ಭುವರ್ಲೋಕಕ್ಕೆ ಸೇರಿದ್ದು. ಹಂಸಾರೂಢನಾದ ಬ್ರಹ್ಮನನ್ನು (ವಿಷ್ಣುವಿನ ಬದಲು) ಇದರ ಅಧಿದೇವತೆಯೆಂದು ಕೆಲವರು ಹೇಳುತ್ತಾರೆ. ಗರ್ಭಕೋಶವನ್ನುಳ್ಳ ಸ್ಥಾನದಲ್ಲಿರುವ ಈ ಚಕ್ರವು ಸೃಷ್ಟಿಗೆ ಅಧಿಪತಿಯಾದ ಬ್ರಹ್ಮನನ್ನು ಅಧಿದೇವತೆಯಾಗಿ ಪಡೆದಿರುವುದು ಒಂದು ರೀತಿಯಲ್ಲಿ ಸಮರ್ಥನೀಯವೇ ಆಗಿದೆ. ಅಲ್ಲದೆ ಭ್ರೂಣವು ಕಲಲಾವಸ್ಥೆಯಲ್ಲಿ ಹಾಲಿನ ಹಾಗೆ ಇರುವುದನ್ನೂ ಆಪೋತತ್ತ್ವಕ್ಕೆ ಅನ್ವಯಿಸಬಹುದು. ಈ ಚಕ್ರವು ದೇಹದಲ್ಲಿರುವ ಮೇದೋ ಧಾತುವಿಗೆ ಆಶ್ರಯಸ್ಥಾನ.

ಅಧಿಷ್ಠಾನವೆಂದರೆ ನಿವಾಸ, ಶಕ್ತಿ, ಎಂದು ಅರ್ಥ. ದೇಹದಲ್ಲಿರುವ ಎಪ್ಪತ್ತೆರಡುಸಾವಿರ ಯೋಗನಾಡಿಗಳೂ ವಿಕಿರಣವಾಗುವುದು ಬ್ರಹ್ಮಗ್ರಂಥಿಯಿಂದ. ಈ ಚಕ್ರದ ಪ್ರದೇಶದಲ್ಲಿರುವುದರಿಂದ ಅದು ಸ್ವ-ಅಧಿಷ್ಠಾನವಾಯಿತು. ಮೂಲಾಧಾರ ಮತ್ತು ಸ್ವಾಧಿಷ್ಠಾನಗಳಲ್ಲಿರುವ ನಾಡೀ ಜಾಲಗಳು ಪರಸ್ಪರ ಗಂಟುಬಿದ್ದು ಬ್ರಹ್ಮಗ್ರಂಥಿಯಾಗುತ್ತವೆ. ಸ್ವಾಧಿಷ್ಠಾನ ಎನ್ನುವ ಶಬ್ದಕ್ಕೆ ರುದ್ರಯಾಮಲತಂತ್ರವು ಪರಲಿಂಗದ, ಎಂದರೆ ಪರಶಿವನ, ಅಧಿಷ್ಠಾನ ಎಂದು ಹೇಳುತ್ತದೆ :

ಸ್ವಶಬ್ದೇನ ಪರಂ ಲಿಂಗಂ ಸ್ವಾಧಿಷ್ಠಾನಂ ತತೋ ವಿದುಃ ।[299]

ಶ್ರೀ ಶಂಕರಭಗವತ್ಪಾದಾಚಾರ್ಯರು ಈ ಚಕ್ರಕ್ಕೆ ಶ್ರೀವಿದ್ಯಾಪರವಾದ ಲಕ್ಷಣಗಳನ್ನು ಶ್ಲೇಷೆಯಲ್ಲಿ ಹೀಗೆ ಹೇಳುತ್ತಾರೆ :

ತವ ಸ್ವಾಧಿಷ್ಠಾನೇ ಹುತವಹಮಧಿಷ್ಠಾಯ ನಿರತಂ
ತಮೀಡೇ ಸಂವರ್ತಂ ಜನನಿ ಮಹತೀಂ ತಾಂ ಚ ಸಮಯಾಮ್ ।
ಯದಾಲೋಕೇ ಲೋಕಾನ್ ದಹತಿ ಮಹತಿ ಕ್ರೋಧಕಲಿತೇ
ದಯಾರ್ದ್ರಾ ಯಾ ದೃಷ್ಟಿಃ ಶಿಶಿರಮುಪಚಾರಂ ರಚಯತಿ ॥[300]

ಸ್ವಶಬ್ದಕ್ಕೆ ಪ್ರಾಣವೆಂದು ಸಂಜ್ಞೆ; ಜನನಾಂಗದ ಮೂಲದಲ್ಲಿರುವ ಈ ಚಕ್ರದಲ್ಲಿ—ನಾಭಿಕಂದಪ್ರದೇಶದಲ್ಲಿ—ಪ್ರಾಣವಾಯುವು ನೆಲಸಿರುವುದರಿಂದ ಇದಕ್ಕೆ ಸ್ವಾಧಿಷ್ಠಾನವೆಂದು ಹೆಸರು ಎಂದು ಧ್ಯಾನಬಿಂದೂಪನಿಷತ್ತು, ಯೋಗಚೂಡಾಮಣ್ಯುಪನಿಷತ್ತು, ಎರಡೂ ಸಮಾನ ಪಾಠದ ಒಂದೇ ಶ್ಲೋಕವನ್ನು ಒಳಗೊಂಡಿವೆ.

ಸ್ವಶಬ್ದೇನ ಭವೇತ್ಪ್ರಾಣಃ ಸ್ವಾಧಿಷ್ಠಾನಂ ತದಾಶ್ರಯಮ್ ।
ಸ್ವಾಧಿಷ್ಠಾನಂ ತತಶ್ಚಕ್ರಂ ಮೇಢ್ರಮೇವ ನಿಗದ್ಯತೇ ॥[301]
ಸ್ವಶಬ್ದೇನ ಭವೇತ್ಪ್ರಾಣಃ ಸ್ವಾಧಿಷ್ಠಾನಂ ತಥಾಶ್ರಯಃ ।
ಸ್ವಾಧಿಷ್ಠಾನಾಶ್ರಯಾದಸ್ಮಾನ್ಮೇಢ್ರಮೇವಾಭಿಧೀಯತೇ ॥[302]

---

298 ಪೂರ್ಣಾನಂದಸ್ವಾಮಿ, ಉ. ಗ್ರಂ., 14.18 ; ಪು. 24.28.

299 ರುದ್ರಯಾಮಲತಂತ್ರ, XXVII, 58.

300 ಶ್ರೀ ಶಂಕರಭಗವತ್ಪಾದಾಚಾರ್ಯ, ಉ. ಗ್ರಂ., 38.

301 ಧ್ಯಾನಬಿಂದೂಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 340.

302 ಯೋಗಚೂಡಾಮಣ್ಯುಪನಿಷತ್, ಅದೇ ಗ್ರಂಥ, ಪು. 405.

ಸ್ವಾಧಿಷ್ಠಾನವು ನಾದೋತ್ಪತ್ತಿಗೆ ಮೂಲಸ್ಥಾನವಾದ ಬಿಂದುಪೀಠ :

ಶಿವಸ್ಯ ಬಿಂದುರೂಪಸ್ಯ ಸ್ಥಾನಂ ತದ್ಧಿ ಪ್ರಕಾಶಕಮ್ ।
ಯತ್ರ ಕುಂಡಲಿನೀ ನಾಮ ಪರಾಶಕ್ತಿಃ ಪ್ರತಿಷ್ಠಿತಾ ॥
ಯಸ್ಮಾದುತ್ಪದ್ಯಂತೇ ಬಿಂದುರ್ಯಸ್ಮಾನ್ನಾದಃ ಪ್ರವರ್ಧತೇ ।

ಎಂಬ ಶ್ರುತ್ಯಾಧಾರದಿಂದ ಸ್ವಾಧಿಷ್ಠಾನವು ಪರಾ ನಾದಕ್ಕೆ ಆವಾಸಸ್ಥಾನವಾಗಿದೆ.

ಸ್ಥೂಲಶರೀರದಲ್ಲಿರುವ ಹೈಪೋಗ್ಯಾಸ್ಟ್ರಿಕ್ ನರಜಾಲವು ಸೂಕ್ಷ್ಮದೇಹದ ಸ್ವಾಧಿಷ್ಠಾನಕ್ಕೆ ಸಮಾನಾಂತರವಾಗಿದೆ :

The **hypogasric plexus** is situated in front of the left common iliac vein, the last lumbar vertebra and the promontory of the sacrum, between the two common iliac arteries. It is formed by the union of numerous filaments—the so-called 'presacral nerves'—which descend on each side from the aortic plexus and from the lumbar ganglia. It divides below into two portions which are named the *right* and *left pelvic plexuses*.[303]

ವ್ರಜೇಂದ್ರನಾಥಸೀಲ್ ಈ ಚಕ್ರವನ್ನು ಸೇಕ್ರಲ್ ಜಾಲಕ್ಕೆ ಅನ್ವಯಿಸುತ್ತಾನೆ.[304]

ಮಣಿಪೂರಕಚಕ್ರ

**ಸುಷುಪ್ತಿರತ್ರ ತೃಷ್ಣಾ ಸ್ಯಾದೀರ್ಷ್ಯಾ ಪಿಶುನತಾ ತಥಾ ।**
**ಲಜ್ಜಾ ಭಯಂ ಘೃಣಾ ಮೋಹಃ ಕಷಾಯೋ ऽಥ[58] ವಿಷಾದಿತಾ ॥ 125 ॥** 174

ಅದರಲ್ಲಿ ಗಾಢನಿದ್ರೆ, ಬಯಕೆ, ಹೊಟ್ಟೆಕಿಚ್ಚು, ಹಾಗೆಯೆ ಚಾಡಿಕೋರತನ, ನಾಚಿಕೆ, ಹೆದರಿಕೆ, ದಯೆ, ಮೋಹ, ಪಾಪಕಾರ್ಯಗಳಲ್ಲಿ ತೊಡಗುವ ಪ್ರವೃತ್ತಿ <ಕಷಾಯ>, ನಂತರ ವಿಷಾದ,

**ಕ್ರಮಾತ್ ಪೂರ್ವಾದಿಪತ್ರೇ ತು[59] ಸ್ಯಾದ್ಭಾನುಭವನಂ ಚ ತತ್ ।**
**ಹೃದಯೇ ऽನಾಹತಂ ಚಕ್ರಂ ಶಿವಸ್ಯ ಪ್ರಣವಾಕೃತೇಃ ॥ 126 ॥** 175

—[ಇವುಗಳು] ಕ್ರಮವಾಗಿ ಪೂರ್ವದಿಂದ ಮೊದಲಾಗುವ ದಳಗಳಲ್ಲಿ [ಫಲಗಳಾಗುತ್ತವೆ]. ಮತ್ತು ಅದು ಸೂರ್ಯನ ಆವಾಸ್ಥಾನ. ಹೃದಯದಲ್ಲಿ ಅನಾಹತಚಕ್ರವು ಓಂಕಾರಸ್ವರೂಪನಾಗಿರುವ ಶಿವನ—

ತೃಷ್ಣಾ ಎಂಬುದಕ್ಕೆ ಬಾಯಾರಿಕೆಯೆಂದೂ, ಪಿಶುನತಾ ಎಂಬುದಕ್ಕೆ ಅಲ್ಪತನವೆಂದೂ, ಕಷಾಯವೆಂದರೆ ಕೊಳೆಯೆಂದೂ ಕುನ್ಹನ್‌ರಾಜಾ ಅಪಾರ್ಥಗಳನ್ನು ಕಲ್ಪಿಸಿದ್ದಾನೆ.[305] ಮೋಹ ಎನ್ನುವುದಕ್ಕೆ ಇಲ್ಲಿ ರಾಗೋದ್ರೇಕದಿಂದ ಮತಿಭ್ರಂಶವಾಗುವುದು ಎಂಬರ್ಥವು ಸರಿಯಾಗುತ್ತದೆ.

---

58 ಅ : ऽಸ್ಯವಿಷಾದಿತಾ. 59 ಅ, ಕ : ಪತ್ರೇಷು.

---

303 ಗ್ರೇ, ಉ. ಗ್ರಂ., ಪು. 1181.

304 ವ್ರಜೇಂದ್ರನಾಥಸೀಲ್, ಉ. ಗ್ರಂ., ಉದ್ಧೃತಿ, ಅವಲಾನ್, ಉ. ಗ್ರಂ., ಪು. 154.

305 ಕುನ್ಹನ್‌ರಾಜಾ, ಉ. ಗ್ರಂ., ಪು. 37.

ಮೇಘದ ಬಣ್ಣಕ್ಕಿರುವ, ನಾಭಿಪದ್ಮವಾದ ಮಣಿಪೂರಕಚಕ್ರವು ಕಾಂತಿಯುಕ್ತ ನೀಲಿಬಣ್ಣದಲ್ಲಿರುವ ಡಂ, ಢಂ, ಣಂ, ತಂ, ಥಂ, ದಂ, ಧಂ, ನಂ, ಪಂ, ಫಂ ಎಂಬ ವರ್ಣಗಳನ್ನುಳ್ಳ ಹತ್ತು ದಳಗಳನ್ನು ಹೊಂದಿದೆ. ಇದರ ಬೀಜಕೋಶದಲ್ಲಿ ಕೆಂಪುಬಣ್ಣದ, ತನ್ನ ಮೂರೂ ಭುಜಗಳಲ್ಲಿ ಹೊರಗಡೆ ಸ್ವಸ್ತಿಕಾಕೃತಿಯುಳ್ಳ, ತ್ರಿಕೋಣ ರೂಪದ ಅಗ್ನಿಬೀಜವಿದೆ. ಈ ದೇವನು ವಜ್ರ, ಶಕ್ತಿಗಳನ್ನೂ, ವರ, ಅಭಯ ಮುದ್ರೆಗಳನ್ನೂ ಧರಿಸಿದ್ದಾನೆ. ಅವನು ಚತುರ್ಭುಜನು, ಕೆಂಪುಬಣ್ಣದವನು ಮತ್ತು ರಂ ಎಂಬ ಬೀಜಾಕ್ಷರದಮೇಲೆ ಉಪಸ್ಥಿತನಾದವನು. ಇವನ ತೊಡೆಯ ಮೇಲೆ ಧವಳಭಸ್ಮೋದ್ಧೂಳಿತನೂ, ವೃಷಭವಾಹನನೂ, ವೃದ್ಧನೂ, ರಕ್ತವರ್ಣನೂ ಆಗಿರುವ ರುದ್ರನಿದ್ದಾನೆ. ಇದರ ಬೀಜಕೋಶದಲ್ಲಿರುವ ಕೆಂದಾವರೆಯಲ್ಲಿ ನೀಲವರ್ಣಳೂ, ಮೂರು ಮೂರು ಕಣ್ಣುಗಳಿರುವ ಮೂರು ಮುಖಗಳನ್ನುಳ್ಳವಳೂ, ವಜ್ರ, ಶಕ್ತಿ, ವರ ಮತ್ತು ಅಭಯಗಳನ್ನು ಧರಿಸಿ ಚತುರ್ಭುಜಳೂ, ಕೋರೆದಾಡೆಗಳನ್ನುಳ್ಳವಳೂ ಖೇಚರಾನ್ನಪ್ರಿಯಳೂ ಆಗಿರುವ ಲಾಕಿನಿಯೆಂಬ ಶಕ್ತಿಯಿದ್ದಾಳೆ.[306]

ಇದು ಅಗ್ನಿತತ್ತ್ವಕ್ಕೆ ಸೇರಿದ ಮತ್ತು ಸಪ್ತವ್ಯಾಹೃತಿಗಳಲ್ಲಿ ಸ್ವರ್ಗಕ್ಕೆ ಸೇರಿದ ಚಕ್ರ. ವಿಷ್ಣುವು ಇದರ ಅಧಿಪತಿಯೆಂದು ಹೇಳುವುದೂ ಉಂಟು. ಈ ಚಕ್ರವು ಜಠರಸ್ಥಾನದಲ್ಲಿದ್ದು ಆಹಾರವನ್ನು ಪಾಕಮಾಡುವ ಅಗ್ನಿತತ್ತ್ವರೂಪದಲ್ಲಿದೆಯೆಂಬುದನ್ನೂ ಪೋಷಣೆಯಿಂದ ಸ್ಥಿತಿಯನ್ನು ಉಂಟುಮಾಡುವ ವಿಷ್ಣುವು ಅಧಿದೇವತೆ ಯೆಂಬುದನ್ನೂ ಗಮನಿಸಬೇಕು. ದೇಹದಲ್ಲಿರುವ ಮಾಂಸಧಾತುವಿಗೆ ಇದು ಆಶ್ರಯಸ್ಥಾನ. ನಿದ್ರಾಸ್ವರೂಪವಾದ ತಮಸ್ಸಿನಿಂದ ಕುಂಡಲಿನಿಯು ಮುಕ್ತವಾಗುವುದು ಈ ಚಕ್ರದಲ್ಲಿಯೇ. ಶ್ರೇಷ್ಠವಾದ ರತ್ನಗಳಂತೆ ಹೊಳೆಯುವುದರಿಂದ ಇದು ಮಣಿಪೂರಕಚಕ್ರ. ಈ ಪ್ರಕಾಶದಿಂದಲೇ ಇಲ್ಲಿ ಕುಂಡಲಿನಿಗೆ ಅಂಧಕಾರಸ್ವರೂಪದ ತಮಸ್ಸು ನಿರಸನವಾಗು ವುದು. ಹಿಗ್ಗುವುದು, ಶಾಖವನ್ನುಂಟುಮಾಡುವುದು, ದೃಷ್ಟಿ, ಬಣ್ಣ ಮತ್ತು ಆಕಾರಗಳು ಇದರ ತತ್ತ್ವಗಳು. ಇವುಗಳ ಬಣ್ಣ ಕೆಂಪು.

ನಾಭಿಕಂದವಾದ ಭಾನುಭವನವು ಇರುವುದು ಇಲ್ಲಿಯೇ.

ಸ್ಥೂಲದೇಹದಲ್ಲಿ ಮಣಿಪೂರಕಚಕ್ರವು ಸೂಕ್ಷ್ಮಶರೀರದ ಸೋಲಾರ್ ನರಜಾಲಕ್ಕೆ ಪರಸ್ಪರವಾಗಿದೆ :

The **coeliac** or **solar plexus**, the largest of the three great sympathetic plexuses, is situated at the level of the upper part of the first lumbar vertebra and is composed of a dense net-work of nerve-fibres which unite together two large ganglia termed the cœliac ganglia. It surrounds the cœliac artery and the root of the superior mesenteric artery. It lies behind the stomach and the lesser sac, in front of the crura of the diaphragm and the commencement of the abdominal aorta, and between the suprarenal glands. The plexus and the ganglia receive the greater and lesser splanchnic nerves of both sides and some filaments from the right vagus, and give off numerous secondary plexuses along the neighbouring arteries.[307]

ಅವಲಾನನೂ, ವ್ರಜೇಂದ್ರನಾಥಸೀಲನೂ, ವಸಂತರೆಲೆಯೂ ಈ ಸಮಿಾಕರಣವನ್ನೊಪ್ಪಿದ್ದಾರೆ.

---

306 ಪೂರ್ಣಾನಂದಸ್ವಾಮಿ, ಉ. ಗ್ರಂ., 19-21, ಪು. 29-31.

307 ಗ್ರೇ, ಉ. ಗ್ರಂ., ಪು. 1179.

ಅನಾಹತಚಕ್ರ

**ಪೂಜಾಸ್ಥಾನಂ ತದಿಚ್ಛಂತಿ ದಲೈರ್ದ್ವಾದಶಭಿರ್ಯುತಮ್ ।**
**ಲೌಲ್ಯಪ್ರಣಾಶಃ[58]ಪ್ರಕಟೋ[59] ವಿತರ್ಕೋ ऽಪ್ಯನುತಾಪಿತಾ ॥ 127 ॥** 176

—ಆರಾಧನಾಸ್ಥಾನವಾಗಿದೆ ; ಅದು ಹನ್ನೆರಡು ದಳಗಳಿಂದ ಕೂಡಿದ್ದು. ಸುಖೇಚ್ಛೆಯ ನಾಶ, ಮುಚ್ಚುಮರೆಯಿಲ್ಲದಿರುವುದು, ಆಲೋಚನಾಪರತೆ, ಪಶ್ಚಾತ್ತಾಪ,—

ಇಲ್ಲಿ ಸಿಂಹಭೂಪಾಲನ ಪ್ರಕಾರ ಪ್ರಕಟೋ ಎನ್ನುವುದು ವಿತರ್ಕಕ್ಕೆ ವಿಶೇಷಣ. ಹೀಗಾದರೆ ಸ್ಪಷ್ಟವಾಗಿ ಆಲೋಚನೆಮಾಡುವ ಶಕ್ತಿಯೆಂದಾಗುತ್ತದೆ.[308] ಪಶ್ಚಾತ್ತಾಪವೆಂದರೆ ಮತ್ತೊಬ್ಬರ ಕಷ್ಟಸ್ಥಿತಿಯನ್ನು ನೋಡಿ ಮರುಕಪಡುವುದು. ಲೌಲ್ಯವೆನ್ನುವುದಕ್ಕೆ ಕುನ್ಹನ್‌ರಾಜಾ ಅಸ್ಥಿರತೆಯೆಂದು ಅರ್ಥಮಾಡುತ್ತಾನೆ.[305]

**ಆಶಾ ಪ್ರಕಾಶಶ್ಚಿಂತಾ ಚ ಸಮೀಹಾ ಸಮತಾ ತತಃ ।**
**ಕ್ರಮೇಣ ದಂಭೋ ವೈಕಲ್ಯಂ ವಿವೇಕೋ ऽಹಂಕೃತಿಸ್ತಥಾ ॥ 128 ॥** 177

—ಆಸೆ, ಬೆಳಕಿಗೆ ಬರುವುದು, ಯೋಚನೆ ಮತ್ತು ಹಂಬಲಿಸುವಿಕೆ, ನಂತರ ಎಲ್ಲವೂ ಸಮವೆಂಬ ಭಾವನೆ, ಕ್ರಮವಾಗಿ ಸೊಕ್ಕು, ಅಸಮರ್ಥತೆ, ವಿಮರ್ಶಾಶಕ್ತಿ, ಹಾಗೆಯೇ ತಾನು ಎನ್ನುವ ಭಾವನೆ,—

**ಫಲಾನ್ಯೇತಾನಿ ಪೂರ್ವಾದಿದಲಸ್ಥಸ್ಯಾತ್ಮನೋ ಜಗುಃ ।**
**ಕಂಠೇ ऽಸ್ತಿ ಭಾರತೀಸ್ಥಾನಂ ವಿಶುದ್ಧಿಃ ಷೋಡಶಚ್ಛದಮ್ ॥ 129 ॥** 178

—ಈ ಫಲಗಳು ಪೂರ್ವದಿಂದ ಮೊದಲಾಗುವ ದಳಗಳ[ಲ್ಲಿರುವ] ಆತ್ಮನು ಹೊಂದುವಂತವುಗಳು ಎಂದು ಹೇಳುತ್ತಾರೆ. ಹದಿನಾರು ದಳಗಳ, ಸರಸ್ವತಿಯ ಆವಾಸಸ್ಥಾನವಾದ ವಿಶುದ್ಧಿಚಕ್ರವು ಕಂಠದಲ್ಲಿದೆ.

ಪ್ರಕಾಶವೆನ್ನುವುದಕ್ಕೆ ಕುನ್ಹನ್‌ರಾಜಾ ಹೊಳೆಯುವುದು (brightness) ಎಂದು ಅರ್ಥಮಾಡಿದ್ದಾನೆ.[309] ಸಿಂಹಭೂಪಾಲನ 'ಆಕಾರಗುಪ್ತೇರಭಾವಃ' ಎಂಬ ಅರ್ಥವನ್ನು ಇಲ್ಲಿ ಸ್ವೀಕರಿಸಿದೆ. ಇಲ್ಲಿ ಅನಾಹತನಾದವು ಯೋಗಿಗಳಿಗೆ ಗೋಚರವಾಗುವುದರಿಂದ ಈ ಚಕ್ರಕ್ಕೆ ಅನಾಹತವೆಂದು ಹೆಸರು. ಈಹಾ ಎಂದರೆ ಅನಿಷ್ಟಗಳು ದೂರವಾಗಲಿ ಎಂಬ ಇಚ್ಛೆ.

ಎದೆಯಲ್ಲಿ ಹೃದಯಪ್ರಾಂತದಲ್ಲಿರುವ ಅನಾಹತಚಕ್ರವು ಬಂಧೂಕ ಪುಷ್ಪದ ಬಣ್ಣದ್ದು. ಇದರಲ್ಲಿರುವ ಹನ್ನೆರಡುದಳಗಳಲ್ಲಿ ಕುಂಕುಮವರ್ಣದ ಕಂ, ಖಂ, ಗಂ, ಘಂ, ಙಂ, ಚಂ, ಛಂ, ಜಂ, ಝಂ, ಞಂ, ಟಂ ಮತ್ತು ಠಂ ಎಂಬ ಹನ್ನೆರಡು ವರ್ಣಗಳಿವೆ. ಹೊಗೆಯಬಣ್ಣದ, ಷಟ್ಕೋಣಾಕಾರದ ವಾಯುಮಂಡಲವೇ ಇದರ ಬೀಜ. ಇದರ ಮೇಲೆ ತ್ರಿಕೋಣದಲ್ಲಿ ಕೋಟಿಮಿಂಚಿನ ಪ್ರಕಾಶವಿರುವ ಸೂರ್ಯಮಂಡಲವಿದೆ. ಇದರ ಮೇಲೆ ವಾಯುಬೀಜವು ಅಂಕುಶಧಾರಿಯಾಗಿ ಕಪ್ಪುಜಿಂಕೆಯನ್ನೇರಿದೆ. ಈ ದೇವತೆಯ ತೊಡೆಯ ಮೇಲೆ ಹಂಸಸ್ವರೂಪನಾಗಿ ವರ, ಅಭಯ ಮುದ್ರೆಗಳನ್ನು ಧರಿಸಿದ ಮುಕ್ಕಣ್ಣನಾದ ಈಶ್ವರನಿದ್ದಾನೆ. ಈ ಚಕ್ರದ ಆವರಣದೊಳಗೆ ಪದ್ಮಾಸನಸ್ಥಳಾಗಿ, ಪಾಶ, ಕಪಾಲ, ಅಭಯ, ವರಗಳನ್ನು ಧರಿಸಿ ಚತುರ್ಭುಜೆಯಾಗಿರುವ, ಸುವರ್ಣಕಾಂತಿಭರಿತಳಾಗಿ, ಪೀತಾಂಬರ

58 ಅ : ಲೌಲ್ಯಂ ಪ್ರಣಾಶಂ; ಅಧ್ಯಾತ್ಮವಿವೇಕ : ಲೌಲ್ಯಂ; 59 ಅ, ಅಧ್ಯಾತ್ಮವಿವೇಕ : ಕಪಟೋ.

308 ಸಿಂಹಭೂಪಾಲ, ಉ. ಗ್ರಂ., ಪು. 54. 309 ಕುನ್ಹನ್‌ರಾಜಾ, ಉ. ಗ್ರಂ., ಪು. 38.

ಧರಳಾಗಿ, ಅಸ್ಥಿಮಾಲೆಯನ್ನೂ ಆಭರಣಾದಿಗಳನ್ನು ಧರಿಸಿ, ಅಮೃತದಿಂದ ತೋಯುತ್ತಿರುವ ಹೃದಯವುಳ್ಳವಳಾಗಿ ಕಾಕಿನೀ ಶಕ್ತಿಯಿದ್ದಾಳೆ. ಈ ತ್ರಿಕೋಣಮಧ್ಯದಲ್ಲಿ ಅರ್ಧಚಂದ್ರನನ್ನೂ ಬಿಂದುವನ್ನೂ ಧರಿಸಿ ಸುವರ್ಣಕಾಂತಿಭರಿತ ನಾದ, ಬಾಣಲಿಂಗಕಾರದಲ್ಲಿರುವ ಶಿವನಿದ್ದಾನೆ.[310]

ಪಂಚಭೂತಗಳಲ್ಲಿ ವಾಯುತತ್ತ್ವಕ್ಕೂ ವ್ಯಾಹೃತಿಗಳಲ್ಲಿ ಮಹಸ್ತತ್ತ್ವಕ್ಕೂ ಈ ಚಕ್ರವು ಸೇರಿದೆ. ಬಣ್ಣ ಹೊಗೆಯಂತೆ ; ದೇಹದಲ್ಲಿ ಇದು ಪ್ರಾಣಮಯಕೋಶ ಮತ್ತು ರಕ್ತಧಾತುವಿನ ಆಶ್ರಯಸ್ಥಾನ. ಅನಾಹತವೂ ವಿಶುದ್ಧಿಯೂ ಸಂಧಿಸುವುದೇ ವಿಷ್ಣುಗ್ರಂಥಿ. ಯಂ ಎಂಬುದು ಇದರ ಬೀಜಾಕ್ಷರ. ಚಲನೆ, ಸ್ಪರ್ಶ, ಸ್ಪರ್ಶೇಂದ್ರಿಯ ಜನನೇಂದ್ರಿಯಗಳು ಇದರ ದೈಹಿಕತತ್ತ್ವಗಳು. ಅನಾಹತನಾದವು ನಾದಬ್ರಹ್ಮದ ಕಳಾ (ಎಂದರೆ ಸೂಕ್ಷ್ಮಾತ್–ಸೂಕ್ಷ್ಮತರ) ಸ್ವರೂಪವಾಗಿಯೂ, ಆಕಾಶಾಂತರ್ಗತವಾಗಿಯೂ (ಎಂದರೆ ಶ್ರವಣಶಕ್ತಿಗೆ ಮೀರಿದ ಸ್ಪಂದಶಕ್ತಿಯನ್ನುಳ್ಳದ್ದಾಗಿಯೂ) ಆನಂದಮಯವಾಗಿಯೂ ಇದೆ.

ಸ್ಥೂಲದೇಹದಲ್ಲಿ ಅನಾಹತಚಕ್ರವು ಕಾರ್ಡಿಯಾಕ್ ನರಜಾಲಕ್ಕೆ ಸಮಾನಾಂತರವಾಗಿದೆ :

The **deep part of the cardiac plexus** is situated in front of the bifurcation of the trachea, above the point of division of the pulmonary trunk, and behind the aortic arch. It is formed by the cardiac nerves derived from the cervical and upper thoracic ganglia of the sympathetic trunk, and the cardiac branches of the vagus and recurrent laryngeal nerves. The only cardiac nerves which do not join the deep part of the cardiac plexus are those which pass to the superficial part of the plexus.[311]

ವಿಶುದ್ಧಿ ಚಕ್ರ

**ತತ್ರ ಪ್ರಣವ ಉದ್ಗೀಥೋ ಹುಂಫಡ್ ವಷಡಥ ಸ್ವಧಾ ।**
**ಸ್ವಾಹಾ ನಮೋಽಮೃತಂ ಸಪ್ತ ಸ್ವರಾಃ ಷಡ್ಜಾದಯೋ ವಿಷಮ್ ॥ 130 ॥** 179

ಅಲ್ಲಿ ಪ್ರಣವ, ಉದ್ಗೀಥ, ಹುಂಫಟ್, ವಷಟ್, ಸ್ವಧಾ, ಸ್ವಾಹಾ, ನಮಃ, ಅಮೃತ, ಷಡ್ಜವೇ ಮೊದಲಾದ ಏಳು ಸ್ವರಗಳು, ವಿಷ––

ವರ್ಣಾತ್ಮಕ ಶಬ್ದವೂ ತನ್ಮೂಲಕ ವರ್ಣಾತ್ಮಕ ಜ್ಞಾನವೂ ಹುಟ್ಟುವುದು ಕಂಠದಲ್ಲಿ ; ಆದುದರಿಂದ ಜ್ಞಾನಕ್ಕೆ ಅಧಿದೇವತೆಯಾದ ಭಾರತಿಯೇ ಕಂಠಪ್ರದೇಶದಲ್ಲಿರುವ ವಿಶುದ್ಧಿಚಕ್ರಕ್ಕೆ ಅಧಿದೇವತೆ.

ಪ್ರಣವವೆಂದರೆ ಓಂಕಾರ. ಅದು ಪೂರ್ವದ ದಳದಲ್ಲಿರುತ್ತದೆ. ಯಜ್ಞಯಾಗಾದಿಗಳನ್ನು ಮಾಡುವಾಗ ಹಾಡಬೇಕಾದ ಸಾಮಗಾನಕ್ಕೆ ಮೊದಲು ಅದನ್ನು ಉಚ್ಚರಿಸಬೇಕು. ಉದ್ಗೀಥವೆನ್ನುವುದು ಸಾಮಗಾಯನದಲ್ಲಿ ಗೀತಿಯ ಗೇಯಾಂಶಗಳಾದ ಪ್ರಸ್ತಾವ, ಉದ್ಗೀಥ, ಪ್ರತಿಹಾರ, ಉಪದ್ರವ, ನಿಧನ ಎಂಬವುಗಳಲ್ಲಿ ಎರಡನೆಯದು. ಹುಂಫಟ್ ಮೊದಲಾದವು ವಿವಿಧ ಯಾಗಕಾರ್ಯಗಳಲ್ಲಿ ಇಷ್ಟದೇವತೆಯ ಪ್ರಸನ್ನತೆಗಾಗಿ ಹೇಳುವ ಉದ್ಗಾರಗಳು. ಹೀಗೆ ಪೂರ್ವದಿಂದ ಮೊದಲನೆಯ ದಳವನ್ನು ಯಜ್ಞಯಾಗಾದಿಗಳ ಸಾಮಗಾಯನದಲ್ಲಿ ಓಂಕಾರವನ್ನು

310 ಪೂರ್ಣಾನಂದಸ್ವಾಮಿ, ಉ. ಗ್ರಂ., ಪು. 32–38.

311 ಗ್ರೇ, ಉ. ಗ್ರಂ., ಪು. 1178–1179.

ಹೇಳಬೇಕಾದಾಗ ಧ್ಯಾನಿಸಿದರೆ ಶ್ರೇಯಸ್ಸುಂಟಾಗುತ್ತದೆ. ಉದ್ಗೀಥವನ್ನು ಹೇಳಬೇಕಾದಾಗ ಎರಡನೆಯದನ್ನು ಧ್ಯಾನಿಸಬೇಕು. ದೇವತೆಗಳಿಗೆ ಹವಿಸ್ಸನ್ನು ಕೊಡುವಾಗ(ಹುಂಫಟ್, ವಷಟ್ ಎಂಬ) ಮೂರು ಮತ್ತು ನಾಲ್ಕನೆಯ ದಳಗಳನ್ನು ಧ್ಯಾನಿಸಬೇಕು. ಪಿತೃಗಳಿಗೆ ಹವಿಸ್ಸನ್ನು ಕೊಡುವಾಗ (ಸ್ವಧಾ ಎಂಬ) ಐದನೆಯ ದಳವನ್ನು ಧ್ಯಾನಿಸಬೇಕು. ಅಗ್ನಿಗೆ ಹವಿಸ್ಸನ್ನು ಕೊಡುವಾಗ (ಸ್ವಾಹಾ ಎಂಬ) ಆರನೆಯದನ್ನೂ, ನಮಸ್ಕಾರಮಾಡುವಾಗ ಏಳನೆಯ ನಮಃ ಎಂಬುದನ್ನೂ ಧ್ಯಾನಿಸಬೇಕು. ಆತ್ಮನು ಎಂಟನೆಯ ದಳದಲ್ಲಿ ಉಪಸ್ಥಿತನಾದಾಗ ಆನಂದವೂ ಅಮೃತವೂ ಉಂಟಾಗುತ್ತವೆ. ಒಂಬತ್ತನೆಯದರಲ್ಲಿ ಷಡ್ಜ, ಹತ್ತನೆಯದರಲ್ಲಿ ರಿಷಭ, ಹನ್ನೊಂದನೆಯದರಲ್ಲಿ ಗಾಂಧಾರ, ಹನ್ನೆರಡನೆಯದರಲ್ಲಿ ಮಧ್ಯಮ, ಹದಿಮೂರನೆಯದರಲ್ಲಿ ಪಂಚಮ, ಹದಿನಾಲ್ಕನೆಯದರಲ್ಲಿ ಧೈವತ, ಹದಿನೈದನೆಯದರಲ್ಲಿ ನಿಷಾದ, ಹೀಗೆ ಸಪ್ತಸ್ವರಗಳು ಉಂಟಾಗುತ್ತವೆ. ಹದಿನಾರನೆಯ ಚಕ್ರದಲ್ಲಿ ದುಃಖವು ಉತ್ಪನ್ನವಾಗುತ್ತದೆ.

**ಇತಿ ಪೂರ್ವಾದಿಪತ್ರಸ್ಥೇ ಫಲಾನ್ಯಾತ್ಮನಿ ಷೋಡಶ ।**
**ಲಲನಾಽಽಖ್ಯಂ ಘಂಟಿಕಾಯಾಂ ಚಕ್ರಂ ದ್ವಾದಶಪತ್ರಕಮ್** ॥ 131 ॥ 180

—ಹೀಗೆ ಪೂರ್ವವೇ ಮೊದಲಾದ ಹದಿನಾರು ದಳಗಳಲ್ಲಿ ಆತ್ಮನ ಫಲಗಳು. ನಾಲಿಗೆಯ ಮೂಲದಲ್ಲಿ ಲಲನಾ ಎಂಬ ಹನ್ನೆರಡು ದಳಗಳ ಚಕ್ರವು [ಇದೆ.]

ವಿಶುದ್ಧಿಚಕ್ರವು ಕಂಠಮೂಲದಲ್ಲಿ (ಹೆಡಕಿನಲ್ಲಿ)ದೆ. ಇದರಲ್ಲಿ ಕಪ್ಪುಮಿಶ್ರಿತ ಕೆಂಪು ಬಣ್ಣದ ಹದಿನಾರು ದಳಗಳಿವೆ. ಅದರ ನಾಡಿಗಳು ಕೆಂಪಗಿವೆ. ಕೆಂಪುವರ್ಣದ ಅಕಾರಾದಿಯಾದ ಹದಿನಾರು ಸ್ವರಗಳು ಬಿಂದುಸಮೇತವಾಗಿ ಈ ದಳಗಳಲ್ಲಿವೆ. ಇದರ ಆವರಣದಲ್ಲಿ ವೃತ್ತಾಕಾರದ, ಬಿಳುಪು ಬಣ್ಣದ ನಭೋಮಂಡಲವಿದೆ. ಇದರೊಳಗೆ ಚಂದ್ರಮಂಡಲವಿದೆ. ಈ ಮಂಡಲದಮೇಲೆ ಹಂ ಬೀಜವಿದೆ. ಇದು ಶ್ವೇತಾಂಬರಧಾರಿಯೂ, ಗಜಾರೂಢವೂ, ಪಾಶ, ಅಂಕುಶ, ವರ, ಅಭಯಗಳನ್ನು ಧರಿಸಿ ಚತುರ್ಭುಜವೂ ಆಗಿದೆ. ಈ ದೇವತೆಯ ತೊಡೆಯಲ್ಲಿ ವೃಷಭದ ಮೇಲಿರಿಸಿದ ಮಹಾಸಿಂಹಾಸನದಲ್ಲಿ ಸದಾಶಿವನು ಕುಳಿತಿದ್ದಾನೆ. ಇವನು ಅರ್ಧನಾರೀಶ್ವರನೂ ಹೌದು; ಇವನ ದೇಹವು ಅರ್ಧಭಾಗ ಹಿಮದಂತೆ ಬಿಳುಪೂ, ಇನ್ನರ್ಧವು ಬಂಗಾರದಂತೆ ಹಳದಿಯೂ ಆಗಿದೆ. ಈ ಸದಾಶಿವನು ಪಂಚಮುಖನೂ ದಶಭುಜನೂ ಆಗಿದ್ದಾನೆ; ಶೂಲ, ಕೊಡಲಿ, ಕತ್ತಿ, ವಜ್ರ, ಆಗ್ನೇಯಾಸ್ತ್ರ, ನಾಗೇಂದ್ರ, ಘಂಟೆ, ಅಂಕುಶ, ಅಭಯಮುದ್ರೆ ಮತ್ತು ಪಾಶಗಳನ್ನು ಧರಿಸಿದ್ದಾನೆ. ಅವನು ಹುಲಿಯ ಚರ್ಮವನ್ನುಟ್ಟಿದ್ದಾನೆ; ಭಸ್ಮೋದ್ಧೂಳಿತನಾಗಿದ್ದಾನೆ; ಅವನ ಕಂಠಪ್ರದೇಶದಲ್ಲಿ ಹಾವು ಸುತ್ತಿಕೊಂಡಿದೆ. ಅಮೃತವನ್ನು ಸುರಿಸುತ್ತಿರುವ, ಕೆಳಮುಖವಾಗಿರುವ ಅರ್ಧಚಂದ್ರನು ಅವನ ಹಣೆಯಲ್ಲಿದ್ದಾನೆ. ಈ ಆವರಣದಲ್ಲಿ, ಚಂದ್ರಮಂಡಲದೊಳಗೆ, ಮೂಳೆಗಳ ಆಸನದಮೇಲೆ ಕುಳಿತು ಶಾಕಿನೀ ಶಕ್ತಿಯು ಶ್ವೇತವರ್ಣಳೂ, ಚತುರ್ಭುಜೆಯೂ, ಪಂಚಮುಖಿಯೂ, ತ್ರಿಣೇತ್ರೆಯೂ, ಪೀತಾಂಬರಧಾರಿಯೂ ಆಗಿದ್ದು ಬಿಲ್ಲು, ಬಾಣ, ಪಾಶ, ಅಂಕುಶಗಳನ್ನು ಧರಿಸಿದ್ದಾಳೆ.[312]

ಈ ಚಕ್ರವು ನೀಲವರ್ಣದ (ಬಿಳಿಯಬಣ್ಣದ?[313]) ಆಕಾಶತತ್ತ್ವಕ್ಕೂ ವ್ಯಾಹೃತಿಗಳಲ್ಲಿ ಜನಸ್ತತ್ವಕ್ಕೂ ಸೇರಿದೆ. ಇದರ ಬೀಜಾಕ್ಷರ ಹಂ. ಸರಸ್ವತಿಯು ಇದರ ಅಧಿದೇವತೆ. ದೇಹದಲ್ಲಿ ಮನೋಮಯಕೋಶಕ್ಕೆ ಸೇರಿದ್ದು, ಚರ್ಮಧಾತುವಿಗೆ ಆಶ್ರಯವಾಗಿದೆ. ಶಬ್ದ, ಶ್ರವಣ, ವದನಗಳು ಇವುಗಳ ದೈಹಿಕತತ್ತ್ವಗಳು.

312 ಪೂರ್ಣಾನಂದಸ್ವಾಮಿ, ಉ. ಗ್ರಂ., 28-31; ಪು. 39-44.

313 ಅವಲಾನ್, ಉ. ಗ್ರಂ., ಪು. 142.

2, ಪಿಂಡೋತ್ಪತ್ತಿ ಪ್ರಕರಣ

ವಿಶುದ್ಧಿಚಕ್ರವು ಸ್ಥೂಲದೇಹದಲ್ಲಿರುವ ಸರ್ವಿಕಲ್ ನರಜಾಲಕ್ಕೆ ಪರಸ್ಪರವಾದುದು :

The **cervical plexus** is formed by the anterior primary rami of the upper four cervical nerves; each nerve, except the first, divides into an upper and a lower branch and these unite to form three loops. The plexus is situated opposite the upper four cervical vertebrœ, in front of the levator scapulae and scalenous medius and under cover of the internal jugular vein and sternomastoid muscle.[314]

ಲಲನಾಚಕ್ರ

**ಮದೋ ಮಾನಸ್ತತಃ ಸ್ನೇಹಃ ಶೋಕಃ ಖೇದಶ್ಚ ಲುಬ್ಧತಾ ।**
**ಅರತಿಃ ಸಂಭ್ರಮಶ್ಚೋರ್ಮಿಃ ಶ್ರದ್ಧಾ ತೋಷೋಪರೋಧಿತಾಃ ॥132॥** 181

ಅಮಲು, ಮಾನ, ಆಮೇಲೆ ಸ್ನೇಹ, ಶೋಕ, ಮತ್ತು ಖೇದ, ಆಸೆಪಾತಕತನ, ಕೊರಗು, ಸಡಗರ, ಊರ್ಮಿ, ಶ್ರದ್ಧೆ, ಸಂತೋಷ, ತಡೆಯಲ್ಪಡುವುದು,

ಮದವೆಂದರೆ ಮತ್ತತೆ ; ಪರರಿಂದ ಮರ್ಯಾದೆಯನ್ನು ಅಪೇಕ್ಷಿಸುವುದು ಮಾನ ; ತಾನು ಹೆಚ್ಚೆಂಬ ಭಾವದಿಂದ ಕಾರ್ಯಾಕಾರ್ಯಗಳನ್ನು ಗಮನಿಸದಿರುವುದು ಎಂದು ಸಿಂಹಭೂಪಾಲನ ಅರ್ಥವಿದೆ.[315] ಉದ್ದೇಶ, ಅಹಂಕಾರ, ಗೌರವ, ಮರ್ಯಾದೆ ಅಥವಾ ಇವುಗಳ ಭಂಗದಿಂದಾದ ಕೋಪ ಮುಂತಾದ ರೂಢಾರ್ಥಗಳೂ ಈ ಶಬ್ದಕ್ಕಿವೆ. ನಯವಾದ ನಡೆವಳಿಕೆಗೆ ಸ್ನೇಹವೆಂದು ಅರ್ಥ. ಚೆನ್ನಾಗಿ ತಿಳಿದ ಕಾರಣಕ್ಕಾಗಿ ಪಡುವ ದುಃಖವು ಶೋಕ. ಚೆನ್ನಾಗಿ ತಿಳಿಯದ ಕಾರಣಕ್ಕಾಗಿ ಪಡುವ ದುಃಖವೇ ಖೇದ. ಸುಖವನ್ನು ಸಾಧಿಸಿಕೊಳ್ಳುವುದರಲ್ಲಿ ತೋರಿಸುವ ಹಂಬಲ, ಗೀಳು ಅಥವಾ ಕೊರಗಿಗೆ ಅರತಿಯೆಂದು ಹೆಸರು. ಹಸಿವು, ನೀರಡಿಕೆ, ಶೋಕ, ಮೋಹ, ಮುಪ್ಪು, ಸಾವು ಎಂಬುದಾಗಿ ಪ್ರಾಣ, ಬುದ್ಧಿ ಮತ್ತು ದೇಹಗಳಲ್ಲಿ ಅಡಗಿರುವ ಆರು ದುರ್ಬಲತೆಗಳೇ ಊರ್ಮಿಗಳು. ಊರ್ಮಿಗಳ ಈ ನಿರೂಪಣೆಯನ್ನು ಸಿಂಹಭೂಪಾಲನು ಷಡಾಗಮಶಾಸ್ತ್ರ ಪ್ರಸಿದ್ಧವೆನ್ನುತ್ತಾನೆ. ಇದನ್ನೇ ವಿಷ್ಣುಪುರಾಣವೇ ಮೊದಲಾದ ಗ್ರಂಥಗಳಲ್ಲಿಯೂ ಹೇಳಿದೆ. ಸುಭಾಷಿತಾದಿಗಳಲ್ಲಿ ದೇಹದ ಶೀತೋಷ್ಣಗಳು, ಜೀವಿತದ ಹಸಿವು-ನೀರಡಿಕೆಗಳು, ಮನಸ್ಸಿನ ಮೋಹ-ಲೋಭಗಳು ಎಂದೂ ಹೇಳಿದೆ. ಊರ್ಮಿಯೆನ್ನುವುದಕ್ಕೆ ಅಲೆ ಎಂದು ಅಕ್ಷರಾರ್ಥ ; ಅಸ್ತಿತ್ವದ ಅಲೆಗಳು ಎಂದು ಇಲ್ಲಿ ಅನ್ವಯ. ಊರ್ಮಿಯೆಂದರೆ ವೇಗವೆಂದು ಅರ್ಥವಿದ್ದರೂ[316] ಇಲ್ಲಿ ಈ ಅರ್ಥವು ಸಲ್ಲುವುದಿಲ್ಲ. ನಂಬಿಕೆಯಿರುವುದೇ ಶ್ರದ್ಧೆ. ಉಪರೋಧಿತಾ ಎಂದರೆ ದಾಕ್ಷಿಣ್ಯವೆಂದೂ ಸಿಂಹಭೂಪಾಲನು ಅರ್ಥಮಾಡುತ್ತಾನೆ.[315]

**ಫಲಾನಿ ಲಲನಾಚಕ್ರೇ ಸ್ಯುಃ ಪೂರ್ವಾದಿದಲೇಷ್ವಿತಿ ।**
**ಭ್ರೂಮಧ್ಯೇ ತ್ರಿದಲಂ ಚಕ್ರಮಾಜ್ಞಾಸಂಜ್ಞಂ ಫಲಾನಿ ತು ॥ 133 ॥** 182

ಹೀಗೆ ಲಲನಾಚಕ್ರದಲ್ಲಿ ಪೂರ್ವವೇ ಮೊದಲಾದ ದಳಗಳಲ್ಲಿ ಫಲಗಳು. ಹುಬ್ಬುಗಳ ನಡುವೆ ಮೂರು ದಳಗಳ ಆಜ್ಞಾ ಎಂಬ ಹೆಸರಿನ ಚಕ್ರ[ವಿದೆ]. [ಅದರ] ಫಲಗಳಾದರೋ—

ಲಲನಾ ಚಕ್ರವು ವಿಶುದ್ಧಿ ಮತ್ತು ಆಜ್ಞಾಚಕ್ರಗಳ ನಡುವೆಯಿದೆ. ಹಂ, ಸಂ, ಕ್ಷಂ, ಮಂ, ಲಂ, ವಂ, ರಂ, ಯಂ, ಹಂ, ಸಂ, ಖಂ, ಫ್ರೆಂ (?) ಎಂಬ ವರ್ಣಗಳು ಅದರ ಹನ್ನೆರಡು ದಳಗಳಲ್ಲಿವೆ. ಓಂಕಾರವೇ ಇದರ

---

314 ಗ್ರೇ, ಉ. ಗ್ರಂ., ಪು. 1116.

315 ಸಿಂಹಭೂಪಾಲ, ಉ. ಗ್ರಂ., ಪು. 55.

316 ತೈತ್ತಿರೀಯಬ್ರಾಹ್ಮಣ, II, 5, 7, 1 ; ಮಾಘ, ಶಿಶುಪಾಲವಧೆ : V, 4.

2. ಪಿಂಡೋತ್ಪತ್ತಿ ಪ್ರಕರಣ

ಬೀಜ. ಗುರುವಿಗೆ ಇದು ಅಧಿಷ್ಠಾನ. ಪಂಚೇಂದ್ರಿಯಗಳ ಮೇಲೆ ಮಿದುಳು ಹತೋಟಿಯಿಡುವ ಹನ್ನೆರಡು ಯಮಳ ನರಗಳಿಗೆ ಇದು ನಿಯಾಮಕವಾಗಿದೆ.

ಸ್ಥೂಲದೇಹದಲ್ಲಿ ಲಲನಾಚಕ್ರವು ಆಂತರಿಕ ಕ್ಯಾರೋಟಿಡ್ ನರಜಾಲಕ್ಕೆ ಪರಸ್ಪರವಾದುದು :

The **internal carotid plexus** surrounds the internal carotid artery, and occasionally presents a small gangliform swelling on the underside of the vessel, sometimes termed the *carotid ganglion*. The lateral part of the plexus communicates with the trigeminal and sphenopalatine ganglia and with the abducent nerve and the tympanic branch of the glossopharyngeal nerve; it distributes filaments to the wall of the carotid artery.[317]

ವ್ರಜೇಂದ್ರನಾಥಸೀಲನು ಲಲನಾ ಚಕ್ರವನ್ನು ಹೀಗೆ ವರ್ಣಿಸುತ್ತಾನೆ :

The Lalana Chakra, opposite the uvula which has twelve leaves (or lobes), supposed to be the tract affected in the production of ego-altruistic sentiments and affections, like self-regard, pride, affection, grief, regret, respect, reverence, contentment, etc.[318]

ಆಜ್ಞಾ ಚಕ್ರ

**ಆವಿರ್ಭಾವಾಃ ಸತ್ತ್ವರಜಸ್ತಮಸಾಂ ಕ್ರಮತೋ ಮತಾಃ ।**
**ತತೋಽಪ್ಯಸ್ತಿ ಮನಶ್ಚಕ್ರಂ ಷಡ್ದಲಂ ತತ್ಫಲಾನಿ ತು ॥ 134 ॥** 183

ಕ್ರಮವಾಗಿ ಸತ್ತ್ವ, ರಜಸ್ಸು ಮತ್ತು ತಮಸ್ಸು, [ಈ ಗುಣ]ಗಳ ವ್ಯಕ್ತತೆಯೆಂದು ಸಮ್ಮತಿಸಿದೆ. ಆಮೇಲಾದರೋ ಆರುದಳಗಳ ಮನಶ್ಚಕ್ರವಿದೆ. ಅದರ ಫಲಗಳು,—

ಶಾರ್ಙ್ಗದೇವನು ಆಜ್ಞಾಚಕ್ರಕ್ಕೆ ಮೂರು ದಳಗಳನ್ನು ಹೇಳಿದರೆ ಷಟ್‌ಚಕ್ರನಿರೂಪಣವೇ ಮೊದಲಾದ ಅನೇಕ ಯೋಗಶಾಸ್ತ್ರಗ್ರಂಥಗಳು ಎರಡೇ ದಳಗಳನ್ನು ಹೇಳುತ್ತವೆ. ಅವುಗಳ ಪ್ರಕಾರ, ಈ ಎರಡು ಬಿಳಿಯ ದಳಗಳಲ್ಲಿ ಹಂ ಮತ್ತು ಕ್ಷಂಗಳೆಂಬ ಬಿಳಿಯ ಬಣ್ಣದ ಅಕ್ಷರಗಳಿವೆ. ಇದರ ಆವರಣದಲ್ಲಿ ಅಧಿಷ್ಠಾನದೇವತೆಯಾದ ಹಾಕಿನಿಯಿದ್ದಾಳೆ. ಬಿಳಿಯ ಬಣ್ಣದ ಅವಳಿಗೆ ಪ್ರತಿಯೊಂದರಲ್ಲೂ ಮೂರು ಕಣ್ಣುಗಳಿರುವ ಆರು ಮುಖಗಳೂ ಆರು ಭುಜಗಳೂ ಇವೆ. ಅವಳು ಬಿಳಿದಾವರೆಯ ಮೇಲೆ ಕುಳಿತಿದ್ದಾಳೆ. ಈ ಹಾಕಿನೀ ಶಕ್ತಿಯು ಕೈಗಳಲ್ಲಿ ವರ, ಅಭಯ ಮುದ್ರೆಗಳನ್ನೂ, ರುದ್ರಾಕ್ಷಮಾಲೆ, ಕಪಾಲ, ಡಮರು ಮತ್ತು ಪುಸ್ತಕಗಳನ್ನೂ ಧರಿಸಿದ್ದಾಳೆ. ಈ ಆವರಣ ಮೇಲೆ ತ್ರಿಕೋಣದಲ್ಲಿ ಮಿಂಚಿನಂತೆ ಹೊಳೆಯುವ ಇತರಲಿಂಗವಿದೆ. ಇದರ ಮೇಲೆ ಮತ್ತೊಂದು ತ್ರಿಕೋಣದಲ್ಲಿ ಜ್ವಾಲೆಯಂತೆ ಹೊಳೆಯುವ ಅಂತರಾತ್ಮವಿದೆ. ಇದರ ನಾಲ್ಕು ಪಾರ್ಶ್ವಗಳಲ್ಲಿಯೂ ಗಾಳಿಯಲ್ಲಿ ತೇಲಾಡುತ್ತಾ ಜ್ಯೋತಿಯೊಂದನ್ನು ಆವರಿಸಿಕೊಂಡಿರುವ ಬೆಳಕಿನ ಕಣಗಳಿರುತ್ತವೆ. ಈ ಜ್ಯೋತಿಯು ಮೂಲಾಧಾರ ಮತ್ತು ಬ್ರಹ್ಮರಂಧ್ರಗಳ ನಡುವೆ ಇರುವ ಪ್ರದೇಶವನ್ನು ಬೆಳಕಿನಿಂದ ತುಂಬುತ್ತದೆ. ಇದರ ಮೇಲೆ ಮನಶ್ಚಕ್ರವೂ ಅದರ ಮೇಲೆ ಚಂದ್ರಮಂಡಲದಲ್ಲಿ ಹಂಸವೂ ಇರುತ್ತವೆ. ಇದರಲ್ಲಿ ಪರಮಶಿವನೂ ಶಕ್ತಿಯೂ ಒಟ್ಟಿಗೆ ಇರುತ್ತಾರೆ.[319]

---

317 ಗ್ರೇ, ಉ. ಗ್ರಂ., ಪು. 1171 ಮತ್ತು ಮುಂದಕ್ಕೆ.

318 ವ್ರಜೇಂದ್ರನಾಥಸೀಲ್, ಉ. ಗ್ರಂ., ಉದ್ಧೃತಿ, ಅವಲಾನ್, ಉ. ಗ್ರಂ., ಪು. 155.

319 ಪೂರ್ಣಾನಂದಸ್ವಾಮಿ, ಉ. ಗ್ರಂ., 32-38, ಪು. 45-54.

## 2. ಪಿಂಡೋತ್ಪತ್ತಿ ಪ್ರಕರಣ

ಆಜ್ಞಾಚಕ್ರವಿರುವ ಪ್ರಾಂತಕ್ಕೆ ತ್ರಿಕೂಟವೆಂದೂ ಹೆಸರು. ಇದು ರುದ್ರಗ್ರಂಥಿಸ್ಥಾನ. ಪರಮಶಿವನೇ ಇದರ ಅಧಿದೇವತೆ. ಓಂಕಾರಸ್ಥಾನವಾದ ಇಲ್ಲಿ ಓಂಕಾರಕ್ಕೆ ಕಾರಣವಾದ ಅ, ಉ, ಮತ್ತು ಮ, ಎಂದರೆ ಸತ್ತ್ವ ರಜಸ್ಸು, ತಮಸ್ಸುಗಳು ಮೊದಲು ಗೋಚರವಾಗುತ್ತವೆ. ಹೀಗೆ ಬಿಂದು, ನಾದ ಮತ್ತು ಶಕ್ತಿಗಳು ಸೇರಿರುವುದು ಇಲ್ಲಿಯೇ. ಆಕಾಶಾಂತರ್ಗತವಾದ ಶುದ್ಧಸತ್ತ್ವವೇ ಇದರ ತತ್ತ್ವ. ವ್ಯಾಹೃತಿಗಳಲ್ಲಿ ತಪೋತತ್ತ್ವಕ್ಕೆ ಸೇರಿದ್ದು; ವರ್ತುಲಾಕಾರದಲ್ಲಿರುವ ಈ ಚಕ್ರಕ್ಕೆ ಸಂಕಲ್ಪ ವಿಕಲ್ಪಗಳೇ ಗುಣಗಳು. ಇದರ ಬೀಜವು ಓಂಕಾರ. ದೇಹದಲ್ಲಿ ವಿಜ್ಞಾನಮಯಕೋಶಕ್ಕೆ ಸೇರಿದೆ. ಸಕಲ ಕಾರ್ಯಕ್ಕೂ ಮೂಲಸ್ಥಾನವಾಗಿ (ಮಿದುಳು) ಆಜ್ಞಾರೂಪದಲ್ಲಿರುವುದರಿಂದ ಇದು ಆಜ್ಞಾಚಕ್ರವಾಯಿತು. ಇದರ ಧ್ಯಾನದಿಂದ ರುದ್ರಗ್ರಂಥಿಯ ಛೇದನವಾಗಿ ಯೋಗಿಯು ಜೀವನ್ಮುಕ್ತನಾಗುವನು. ಈ ಚಕ್ರದಲ್ಲಿ ಅಣಿಮಾದಿ ಅಷ್ಟಸಿದ್ಧಿಗಳೂ ಉಳಿದ ಮೂವತ್ತೆರಡು ಇತರ ಸಿದ್ಧಿಗಳೂ ಉಂಟಾಗುತ್ತವೆ. ಇದು ದೇಹದ ಮಜ್ಜಾ ಧಾತುವಿಗೆ ಆಶ್ರಯ.

ವ್ರಜೇಂದ್ರನಾಥಸೀಲನು ಆಜ್ಞಾಚಕ್ರದ ವಿಷಯದಲ್ಲಿ ಹೀಗೆ ಹೇಳುತ್ತಾನೆ:

The sensory-motor tract, comprising two chakras: (*a*) the Ajna Chakra (*lit*., the circle of command over movements) with its two lobes (the cerebellum); and (*b*) the Manas Chakra, the sensorium, with its six lobes (five special sensory for peripherally initiated sensations, and one common sensory for centrally initiated sensations as in dreams and hallucinations.) The Ajnavaha Nadis, efferent or motor nerves, communicate motor impulses to the periphery from this Ajna Chakra, this centre of command over movements; [320]

ಹೀಗೆ ಈತನು ಮಿದುಳಿನ ಭಾಗಕ್ಕೇ ಆಜ್ಞಾಚಕ್ರವನ್ನು ಅನ್ವಯಿಸುತ್ತಾನೆ. ಆದರೆ ಅದರ ಗುಣಗಳಿಂದಲೂ ಮಿದುಳಿನ ಸೆರಬೆಲ್ಲಂ ಎಂಬುದರ ಗುಣಗಳಿಗೂ ಯಾವ ಸಾದೃಶ್ಯವೂ ಇಲ್ಲವೆಂಬುದು ಶರೀರಶಾಸ್ತ್ರಾಭ್ಯಾಸಿಗಳಿಗೆ ತಿಳಿದ ವಿಷಯವೇ ಆಗಿದೆ. ವಸಂತರೆಲೆಯು ಈ ಚಕ್ರಕ್ಕೆ ನೇಸೋಸಿಲಿಯರಿ ಜಾಲವೆನ್ನುತ್ತಾನೆ. ಆದರೆ ಇದು ಮುಖದಲ್ಲಿನ ಒಂದು ಪ್ರಧಾನ ನರವೇ ಹೊರತು ನರಜಾಲವಲ್ಲವೆಂಬುದು ಶರೀರಶಾಸ್ತ್ರದಿಂದ ತಿಳಿದುಬರುತ್ತದೆ. [321]

ಅಲೆಕ್ಸಿಸ್ ಕ್ಯಾರೆಲ್ಲನು ಆಜ್ಞಾಚಕ್ರದಂತಹುದೇ ಒಂದು ಕೇಂದ್ರವನ್ನು ಹೀಗೆ ಗುರುತಿಸುತ್ತಾನೆ:

The autonomous apparatus is linked as we know, to the central nervous system, supreme coordination of all organic activity. It is represented by a centre situated in the base of the brain. This centre determines the manifestation of emotions.[322]

ಸ್ಥೂಲಶರೀರದಲ್ಲಿ ಆಜ್ಞಾಚಕ್ರವು ರೆಡ್ ನ್ಯೂಕ್ಲಿಯಸ್ ಎಂಬುದಕ್ಕೆ ಪರಸ್ಪರವಾಗಿದೆ:

The *red nucleus* is a large ovoid mass of grey matter which occupies most of the medial part of the tegmentum of the upper half of the midbrain and extends upwards into the subthalamic region . . .

320 ವ್ರಜೇಂದ್ರನಾಥಸೀಲ್, ಉ. ಗ್ರಂ., ಉದ್ಧೃತಿ, ಅವಲಾನ್, ಉ. ಗ್ರಂ., ಪು. 155.

321 ಗ್ರೇ, ಉ. ಗ್ರಂ., ಪು. 1071

322 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 103.

It is not homogeneous in structure, and the cells of the upper two-thirds, which are small in size, bear no resemblance to the large cells which are found in its lower third.

*Afferent* fibres reach the red nucleus from the superior cerebellar peduncle, and the globus pallidus of the lentiform nucleus (pallido-rubral fibres), the subthalamic nucleus, and possibly, direct from the cerebral cortex. The origin of the cortical fibres has been variously ascribed to the frontal, temporal and parietal lobes.

The *efferent* fibres from the red nucleus connect it with (1) the anterior column of the grey matter of the spinal cord (rubro-spinal tract), (2) the nuclei of the reticular formation of the pons and the medulla oblongata (rubroreticular tract), (3) the substantia nigra and (4) the thalamus.

The red nucleus constitues an important cell-station on the extrapyramidal system. It is clear from its connexious that the red nucleus plays an important part in the nervous mechanism of movements. It is connected to the anterior column of the grey matter of the spinal cord by the rubro-spinal tract, but it is not at all certain that this the principal pathway involved, for although the rubro spinal tract is a large bundle in many lower mammals, it is relatively small in man. It is possible that the rubroreticular tract, which is relatively large in man, may transmit impulses from the corpus striatum and also, perhaps, from the cerebellum, through a series of relay stations in their reticular formation in the hind brain to the spinal cord. Rademaker, as a result of a long series of experiments, came to the conclution that the red nuclens acts as a centre for the distribution of muscle tonus and that an intact red nucleus is an essential part of the arc concerned in the labyrinth-righting and body-righting reflexes. On the other hand, current opinion regards the red nucleus as inhibitary in function. (ರುದ್ರಗ್ರಂಥಿಯ ಭೇದನವು ಐಹಿಕ ವ್ಯಾಪಾರಗಳನ್ನೂ ನಾನು ಎಂಬ ಅಹಂಪ್ರಜ್ಞೆಯನ್ನೂ ಇಲ್ಲದಂತೆ ಮಾಡುತ್ತದೆಂಬುದನ್ನು ಇಲ್ಲಿ ಸ್ಮರಿಸಬಹುದು).

Although it is clear that the large-celled lower portion of the red nucleus is derived from the basal lamina of the midbrain, it would appear that the small-celled upper portion is a derivative of the diencephalon. This part of the nuclens becomes developed and elaborated *pari passu* with the expansion of the cerebellar hemispheres and the frontal lobes of the cerebrum, with which, according to Monakow, the red nucleus is freely connected.[323]

---

323 ಗ್ರೇ, ಉ. ಗ್ರಂ., ಪು. 970-971 ; ಪು. 969-971 ರಲ್ಲಿರುವ ಚಿತ್ರಗಳನ್ನು ಅವಲೋಕಿಸಿ.

## 2. ಪಿಂಡೋತ್ಪತ್ತಿ ಪ್ರಕರಣ

ಈ ಎರಡು ಉದ್ಧೃತಿಗಳಿಂದ ಆಜ್ಞಾಚಕ್ರದಸ್ಥಾನವು ಸ್ಥೂಲದೇಹದಲ್ಲಿ (ಪರಸ್ಪರತೆಯ ಮೂಲಕ) ನಿರ್ವಿವಾದವಾಗಿ ಸ್ಥಾಪಿತವಾಗುತ್ತದೆ.

ಮನಶ್ಚಕ್ರ

**ಸ್ವಪ್ನೋ ರಸೋಪಭೋಗಶ್ಚ, ಘ್ರಾಣಂ ರೂಪೋಪಲಂಭನಮ್ ।**
**ಸ್ಪರ್ಶನಂ ಶಬ್ದಬೋಧಶ್ಚ ಪೂರ್ವಾದಿಷು ದಲೇಷ್ವಿತಿ ॥ 135 ॥** 184

ಕನಸು, ರಸವನ್ನು ಅನುಭವಿಸುವುದು, ವಾಸನೆಯನ್ನು ಗ್ರಹಿಸುವಿಕೆ, ನೋಡುವಿಕೆ, ಮುಟ್ಟುವಿಕೆ ಮತ್ತು ಶಬ್ದದ ಅರಿವು[ಇವುಗಳು]ಪೂರ್ವವೇ ಮೊದಲಾದ ದಳಗಳಲ್ಲಿ[ಉಂಟಾಗುತ್ತವೆ] ಎಂದು [ಹೇಳಿದೆ].

ಮನಶ್ಚಕ್ರವನ್ನೂ ಮುಂದೆ ಹೇಳುವ ಸೋಮಚಕ್ರವನ್ನೂ ನಾನು ಅವಲೋಕಿಸಿದ ಯಾವ ಯೋಗಶಾಸ್ತ್ರ ಗ್ರಂಥಗಳಲ್ಲೂ ಕೊಟ್ಟಿಲ್ಲ. ಅವಲಾನನು ಇವುಗಳನ್ನು ವ್ರಜೇಂದ್ರನಾಥಸೀಲನಿಂದ ಸಂಗ್ರಹಿಸಿದ್ದಾನೆ. ವ್ರಜೇಂದ್ರನಾಥನಿಗೆ ಆಕರವು ಶಾರ್ಙ್ಗದೇವನೆಂದೇ ಕಾಣುತ್ತದೆ. ಮನಶ್ಚಕ್ರವನ್ನು ಅವನು ಹೀಗೆ ವರ್ಣಿಸಿದ್ದಾನೆ :

Above the Lalana are the Ajna Chakra with its two lobes and the Manas Chakra with its six lobes, which it has been suggested are represented in the physical body by the Cerebellum and Sensorium respectively.[324] The afferent or sensory nerves of the special senses, in pairs, the Gandhavaha Nadi (olfactory sensory), the Rupavaha Nadi (optic), the Shabdavaha Nadi (auditory), the Rasavaha Nadi (gustatory), and the Sparshavaha Nadi (tactile), come from the periphery (the peripheral organs of the special senses) to this Manas Chakra, the sensory tract at the base of the brain. The Manas Chakra also receives the Manovaha Nadi, a generic name for the channels along which centrally initiated presentations (as in dreaming or hallucination) come to the sixth lobe of the Manas Chakra.[325]

ಹೀಗೆ ಪಂಚೇಂದ್ರಿಯಗಳಿಂದ ಉಂಟಾಗುವ ವೇದನೆ ಮತ್ತು ಜ್ಞಾನಗಳಿಗೆ, ಮಿದುಳಿಗೆ ಪ್ರವೇಶ ದೊರಕಿಸಿ ಅಹಂಪ್ರಜ್ಞೆಗೆ ಸಂಬಂಧಿತವಾಗುವುದು ಮನಶ್ಚಕ್ರವೆಂಬ ದ್ವಾರದಿಂದಲೇ ಎಂಬುದು ಸ್ಪಷ್ಟವಾಗುತ್ತದೆ. ಬಾಹ್ಯೇಂದ್ರಿಯಗಳು ನಿಷ್ಕ್ರಿಯಗಳಾಗಿರುವಾಗಲೂ ಚಿತ್ತವು ಕ್ರಿಯಾಪರವಾಗಿದ್ದಾಗ ಕನಸು ಉಂಟಾಗುತ್ತದೆಂಬ ಗಾಢಮನೋವೈಜ್ಞಾನಿಕ ತತ್ತ್ವವನ್ನು ಶಾರ್ಙ್ಗದೇವನು ಈಗಾಗಲೇ ಹೇಳಿದ್ದಾನೆ.[326] ಕನಸಿಗೂ ನೈಜವ್ಯವಹಾರಕ್ಕೂ ಇಂದ್ರಿಯಗಳು ಸಂಗ್ರಹಿಸಿದ ಅನುಭವ ಮುದ್ರೆಗಳು ಮತ್ತು ವೇದನೆಗಳೇ ಆಕರವಾಗಿವೆ. ಹೀಗೆ ಮನಶ್ಚಕ್ರವು ಬಾಹ್ಯಪ್ರಪಂಚದ ಮತ್ತು ಮನಸಿನ ವಿಷಯಗಳಾದ ಇಂದ್ರಿಯ, ಅಂತಃಕರಣ, ಬುದ್ಧಿ, ಅಹಂಕಾರ ಮೊದಲಾದವುಗಳ ಕೇಂದ್ರವಾಗಿದೆ. ಈ ಚಕ್ರವನ್ನು ಭೇದಿಸುವುದರಿಂದ ಇಂದ್ರಿಯ ಸಂಪರ್ಕವು ಕಡಿದುಹೋಗುತ್ತದೆ. ಆದುದರಿಂದ ವಿಷಯದ ಅಭಾವವಾಗಿ ಚಿತ್ತವೃತ್ತಿಯ ನಿರೋಧವು ಸಾಧ್ಯವಾಗುತ್ತದೆ. ಈ ವೇಳೆಗೆ ಆಜ್ಞಾ

---

324 ವ್ರಜೇಂದ್ರನಾಥಸೀಲ್, ಉದ್ಧೃತಿ, ಅವಲಾನ್, ಉ. ಗ್ರಂ., ಪು. 149.

325 ಅದೇ ಗ್ರಂಥ, ಪು. 155-156.

326 ಶಾರ್ಙ್ಗದೇವ, ಉ. ಗ್ರಂ., I, 2, 85, ಪು. 46.

ಮುಂತಾದ ಕೆಳಗಿನ ಚಕ್ರಗಳೂ ಭೇದಿಸಲ್ಪಟ್ಟಿರುವುದರಿಂದ ಜೀವನಿಗೆ ಈ ಚಕ್ರದಿಂದ ಕೆಳಕ್ಕೆ ಚಲಿಸುವುದು ಅಸಾಧ್ಯವಾಗಿ ಊರ್ಧ್ವಗಮನವು-ಎಂದರೆ ಮೋಕ್ಷಮಾರ್ಗವಾದ ಸುಷುಮ್ನೆಯ ಮೂಲಕ ಮೋಕ್ಷಸ್ಥಾನವಾದ ಸಹಸ್ರಾರಚಕ್ರದ ದಿಕ್ಕಿನಲ್ಲಿ ಮಾತ್ರ ಆಗುತ್ತದೆ. ಹೀಗೆ ಈ ಚಕ್ರದ ಪ್ರಾಮುಖ್ಯವನ್ನು ಸುಲಭವಾಗಿಯೇ ಊಹಿಸಿ ಕೊಳ್ಳಬಹುದು. ಮುಂದೆ ವಿವರಿಸುವ ರುದ್ರಗ್ರಂಥಿಯನ್ನು ಬಿಟ್ಟು ಅದಕ್ಕಿಂತ ಮುಖ್ಯವೂ ಉಚ್ಚವೂ ಆಗಿರುವ ಶಕ್ತಿಕೇಂದ್ರವಾದ ಮನಃಚಕ್ರವನ್ನು ಶಾರ್ಙ್ಗದೇವನು ಹೇಳುವುದು ಅವನ ಅಧ್ಯಾತ್ಮಜ್ಞಾನಕ್ಕೂ ಶರೀರಶಾಸ್ತ್ರ ಜ್ಞಾನಕ್ಕೂ ಜೀವಂತ ಉದಾಹರಣೆಯಾಗಿದೆ.

ಇದು ಸ್ಥೂಲಶರೀರದಲ್ಲಿರುವ ಥ್ಯಾಲಮಸ್ ಎಂಬ ಭಾಗಕ್ಕೆ ಪರಸ್ಪರವೆಂಬುದು ನಿರ್ವಿವಾದವಾಗಿದೆ :

The *thalami* are two large ovoid masses situated one on each side of the third ventricle and reaching for some distance behind that cavity. Each thalamus is about 4 cm. long, and has two ends and four surfaces.[327]

The thalamus is the most important of the subcortical correlation centres. Into it stream the impulses from the olfactory apparatus, the somatic receptors of all kinds and the splanchnic receptors. In the thalamus these impulses are correlated with one another before they are transmitted to the cerebral cortex, but the correlation which occurs in the thalamus is something more than the simple interaction of nervous impulses, for there is good ground for supposing that the activities of the lamus enter into and are appreciated by consciousness. It is certain that the higher forms of sensibility require the cooperation of the cerebral cortex, but cruder forms, especially pain, are consciously experienced when the connexions existing between thalamus and the cortex have been destroyed.

As already stated, the medial nucleus of the thalamus receives afferents from the hypothalamus, which contains higher centres associated with the viscera. The cortical connexions of this nucleus bring visceral activities under the influence of the cortex and so provide a means whereby the cortex is enabled to control or inhibit emotional and instinctive reactions which would otherwise result from the visceral stimuli.[328]

In man, the thalamus is a large cell station interposed on the sensory path to the cortex and short-circuiting a number of different impulses to the corpus striatum. It receives *afferents* from 1) the medial lemniscus (proprioceptive and tactile sensibility); 2) the spinal lemniscus (pain and temperature); 3) the trigeminal lemniscus (all varieties of sensibility from the trigeminal area); 4) the mamillo-

327 ಗ್ರೇ, ಉ. ಗ್ರಂ., ಪು. 977. 328 ಗ್ರೇ, ಉ. ಗ್ರಂ., ಪು. 982.

thalamic tract; 5) the hypothalamus (visceral sensibility); 6) the superior cerebellar peduncle of the opposite side; 7) the rubro-thalamic tract of the same side; and 8) all parts of the cerebral cortex.

Its *efferents* proceed through the internal capsule to reach: 1) all parts of the cerebral cortex, but especially the post-central gyrus and the parietal and frontal association areas; 2) the caudate nucleus; 3) the putamen of the lentiform nucleus; and 4) the globus pallidus of the lentiform nucleus (*et seq.*).[329]

ಥ್ಯಾಲಮಸ್‌ನಿಂದ ನಡೆಯುವ ಕ್ರಿಯೆಗಳನ್ನೂ ಸ್ವಭಾವಗಳನ್ನೂ ಎಡಿತ್‌ಸ್ಮಾಲ್ ಇದೇ ರೀತಿಯಲ್ಲಿ ವಿವರಿಸುತ್ತಾಳೆ.[330]

ಸೋಮಚಕ್ರ

ತತೋಽಪಿ ಷೋಡಶದಲಂ ಸೋಮಚಕ್ರಮಿತೀರಿತಮ್ ।
ದಲೇಷು ಷೋಡಶಸ್ತಸ್ಯ ಕಲಾಃ ಷೋಡಶ ಸಂಸ್ಥಿತಾಃ ॥ 136 ॥ 185

ಆಮೇಲಾದರೋ ಹದಿನಾರುದಳಗಳ ಸೋಮಚಕ್ರವೆಂದು ಹೇಳಲ್ಪಡುತ್ತದೆ. ಅದರ ಹದಿನಾರು ದಳಗಳಲ್ಲಿ ಹದಿನಾರು ಕಲೆಗಳು ನೆಲಸಿವೆ.

ಕೃಪಾ ಕ್ಷಮಾ[60] ಽಽರ್ಜವಂ[61] ಧೈರ್ಯಂ ವೈರಾಗ್ಯಂ ಧೃತಿಸಂಮುದೌ[62] ।
ಹಾಸ್ಯಂ ರೋಮಾಂಚನಿಚಯೋ[63] ಧ್ಯಾನಾಶ್ರು ಸ್ಥಿರತಾ[64] ತತಃ ॥ 137 ॥ 186

ಕೃಪೆ, ಕ್ಷಮೆ, ಸರಳಬುದ್ಧಿ, ಹೆದರಿಕೆಯಿಲ್ಲದಿರುವುದು, ವೈರಾಗ್ಯ, ಧಾರಣಶಕ್ತಿ, ಹರ್ಷ, ಹಾಸ್ಯ, ಪುಲಕಿತವಾಗುವಿಕೆ, ಧ್ಯಾನಮಾಡುವಾಗ ಉಂಟಾಗುವ ಆನಂದಬಾಷ್ಪ, ಆಮೇಲೆ ನಿಶ್ಚಲತೆ,

ಕೃಪೆಯೆಂದರೆ ಪರರಲ್ಲಿ ಅನುಗ್ರಹಮಾಡುವುದು ; ಕ್ಷಮೆಯೆಂದರೆ ಕೋಪಬರುವಂತಹ ಸಂದರ್ಭದಲ್ಲಿ ಕೋಪಗೊಳ್ಳದೆ ಇರುವುದು ; ಆರ್ಜವವೆಂದರೆ ವಕ್ರವಲ್ಲದ (ಸರಳವಾದ) ಬುದ್ಧಿ ; ಧೈರ್ಯವೆಂದರೆ ಕದಲಿ ಸೋರಿಹೋಗದ ಚೈತನ್ಯ ; ವೈರಾಗ್ಯವೆಂದರೆ ಪ್ರಾಪಂಚಿಕ ವ್ಯವಹಾರಗಳಲ್ಲಿ ಬುದ್ಧಿಯು ಪ್ರವರ್ತಿಸದಿರುವುದು ; ಧೃತಿಯೆಂದರೆ ಉಳಿಸಿಕೊಳ್ಳುವ ಶಕ್ತಿ, ಸಮ್ಮದವೆಂದರೆ ಹರ್ಷ; ಉದ್ಯಮವೆಂದರೆ ಉದ್ಯೋಗ, ಅಚ್ಛತ್ವವೆಂದರೆ ಕೊಳೆಯಾಗದ ಮನಸ್ಸು ; ಔದಾರ್ಯವೆಂದರೆ ಸ್ವಭಾವದಿಂದಲೇ ದಾನಮಾಡುವ ಪ್ರವೃತ್ತಿಯಿರುವುದು ಎಂದು ಸಿಂಹಭೂಪಾಲನು ಅರ್ಥಗಳನ್ನು ಹೇಳುತ್ತಾನೆ.[331]

ಗಾಂಭೀರ್ಯಮುದ್ಯಮೋಽಚ್ಛತ್ವಮೌದಾರ್ಯೈಕಾಗ್ರತೇ ಕ್ರಮಾತ್[65] ।
ಫಲಾನುದ್ಯಂತಿ[66] ಜೀವಸ್ಯ ಪೂರ್ವಾದಿದಲಗಾಮಿನಃ ॥ 138 ॥ 187

---

60 ಅಧ್ಯಾತ್ಮವಿವೇಕ : ಮೃದುತಾ ; 61 ಅಧ್ಯಾತ್ಮವಿವೇಕದಲ್ಲಿಲ್ಲ. 62 ಅಧ್ಯಾತ್ಮವಿವೇಕ : ಸಂಪದ.
63 ಕ ಮತ್ತು ಅಧ್ಯಾತ್ಮವಿವೇಕ : ರೋಮಾಂಚವಿನಯೋ. 64 ಗ ಮತ್ತು ಅಧ್ಯಾತ್ಮವಿವೇಕ : ಧ್ಯಾನ ಸುಸ್ಥಿರತಾ.
65 ಕ : ಗಾಂಭೀರಮುದ್ಯಮೌದಾರ್ಯಮಚ್ಛತ್ವೈಕಾಗ್ರತಾಃ ಕ್ರಮಾತ್ । 66 ಕ : ಫಲಂ ಭಿದ್ಯಂತಿ.

---

329 ಅದೇ ಗ್ರಂಥ, ಪು. 979–980. 330 ಸ್ಮಾಲ್, ಉ. ಗ್ರಂ., ಪು. 154, 155, 158, 159.
331 ಸಿಂಹಭೂಪಾಲ, ಉ. ಗ್ರಂ., ಪು. 56.

ಗಂಭೀರವಾಗಿರುವಿಕೆ, ಕಾರ್ಯಶೀಲತೆ, ನಿರ್ಮಲವಾದ ಮನಸ್ಸು, ಔದಾರ್ಯ, ಏಕಾಗ್ರತೆ ಇವುಗಳಲ್ಲಿ ಕ್ರಮವಾಗಿ ಪೂರ್ವವೇ ಮೊದಲಾದ ದಳಗಳಲ್ಲಿ ಹೋಗಿರುವ (ಪ್ರವೇಶಿಸಿರುವ) ಜೀವನ ಫಲಗಳು ಉದಯಿಸುತ್ತವೆ.

ನನಗೆ ಉಪಲಬ್ಧವಾಗಿರುವ ಯಾವ ಯೋಗಶಾಸ್ತ್ರಗ್ರಂಥವೂ ಸೋಮಚಕ್ರವನ್ನು ಹೇಳುವುದಿಲ್ಲ. ವ್ರಜೇಂದ್ರನಾಥಸೀಲನು (ಬಹುಶಃ) ಅಧ್ಯಾತ್ಮವಿವೇಕವನ್ನು ಅವಲಂಬಿಸಿ ಹೀಗೆ ಬರೆಯುತ್ತಾನೆ:

The Soma Chakra above this (Manas Chaka), with its sixteen "petals," has been said to comprise the centres in the middle of the cerebrum above the Sensorium.[332] The Soma Chakra, a sixteen lobed ganglion, comprising the cenrres in the middle of cerebrum, above the Sensorium; the seat of the altruistic sentiments and volitional control—*e.g.*, compassion, gentleness, patience, renunciation, meditativeness, gravity, earnestness, resolution, determination, magnanimity, etc.,[333]

ಸ್ಥೂಲದೇಹದಲ್ಲಿ ಸೋಮಚಕ್ರಕ್ಕೆ ಪರಸ್ಪರವಾಗಿರುವುದು ಮೆದುಳಿನ ಅತ್ಯಂತ ಊರ್ಧ್ವಪ್ರದೇಶದಲ್ಲಿರುವ ಕೊರಾಯಿಡ್ ನರಜಾಲವೆಂಬುದು ಸ್ಪಷ್ಟವಾಗಿದೆ:

The *choroid plexus* of the lateral ventricle is a highly vascular fringe of pia mater which projects into the ventricular cavity, invaginating the ependymal medial wall of the venticle before it and receiving from it a complete investment. It extends as far forwards as the interventricular foramen, where it is continuous with the corresponding plexus of the opposite side. Posteriorly it is carried round the posterior end of the thalamus into the inferior horn as far as the pes hippocampi. The ependyma which covers the choroid plexus is an infolded part of the medial wall of the hemisphere, and this infolding constitutes the *choroid fissure*. The lips of the fissure are the lateral edge of the fornix and the upper surface of the thalamus, in the central part of the ventricle, and the edge of the fimbria and the stria semicircularis in the inferior horn. The two parts of the fissure are directly continuous with each other round the posterior end of the thalamus. It will be remembered that the choroid fissure is the first fissure to appear on the surface of the hemisphere.

The ependyma which covers the choroid plexus is of the nature of a secretory epithelium and plays an important part in the secretion of the cerebrospinal fluid.[334]

---

332 ವ್ರಜೇಂದ್ರನಾಥಸೀಲ್, ಉ. ಗ್ರಂ., ಉದ್ಧೃತಿ, ಅವಲಾನ್, ಉ. ಗ್ರಂ., ಪು. 149. ಇದಕ್ಕೆ ಅವಲಾನನ ಸಮ್ಮತಿಯಿದೆ.

333 ಅದೇ ಗ್ರಂಥ, ಪು. 155. 334 ಗ್ರೇ, ಉ. ಗ್ರಂ., ಪು. 1038-1040.

## 2. ಪಿಂಡೋತ್ಪತ್ತಿ ಪ್ರಕರಣ

(ಈ ಪ್ರದೇಶದಿಂದ ಅಮೃತವು ಹರಿದು ಇಳಿದು ಬಂದು ಅದರಿಂದ ದೇಹವು ಬೆಳೆಯುತ್ತದೆಂಬ ಶಾರ್ಙ್ಗದೇವನ ಹೇಳಿಕೆಯನ್ನು ಹೋಲಿಸಿ ; ಈ ಅಮೃತವು ಉಂಟಾಗುವುದು ಸುಧಾಂಶುವಾದ ಚಂದ್ರನಿಂದ ಎಂಬುದನ್ನೂ, ಈ ಚಕ್ರಕ್ಕೆ ಸೋಮವೆಂದು ಹೆಸರೆಂಬುದನ್ನೂ ಗಮನಿಸಿ.)

ಸಹಸ್ರಾರ ಚಕ್ರ

**ಚಕ್ರಂ ಸಹಸ್ರಪತ್ರಂ ತು ಬ್ರಹ್ಮರಂಧ್ರೇ ಸುಧಾಧರಮ್** [67] **।**
**ತತ್ ಸುಧಾಸಾರಧಾರಾಭಿರಭಿವರ್ಧಯತೇ ತನುಮ್** ॥ 139 ॥ 188

ಬ್ರಹ್ಮರಂಧ್ರದಲ್ಲಾದರೋ ಅಮೃತವನ್ನು ಧರಿಸಿರುವ ಸಾವಿರದಳಗಳ ಚಕ್ರ[ವಿದೆ]. ಆ ಅಮೃತಸಾರದ ಧಾರೆಗಳಿಂದ ದೇಹವು ಬೆಳೆಯುತ್ತದೆ.

ಸುಷುಮ್ನಾ ನಾಡಿಯ ಕೊನೆಯಲ್ಲಿ ಸಹಸ್ರದಳಗಳ ಕಮಲವಿದೆ. ಬಿಳಿಯ ಬಣ್ಣದ ಈ ಕಮಲವು ಅಧೋಮುಖವಾಗಿದೆ. ಅದರ ಕೇಸರಗಳು ಕೆಂಪುಬಣ್ಣದ್ದಾಗಿವೆ. ವರ್ಣಮಾಲೆಯಲ್ಲಿ ಅಕಾರದಿಂದ ಲಕಾರದವರೆಗೂ ಇರುವ ಐವತ್ತು ವರ್ಣಗಳೇ ಇಪ್ಪತ್ತುಬಾರಿ ಪುನರಾವರ್ತಿತವಾಗಿ ಸಾವಿರದಳಗಳಲ್ಲೂ ತುಂಬಿವೆ. ಅದರ ಆವರಣದಲ್ಲಿ ಹಂಸವಿದೆ. ಅದರ ಮೇಲೆ ಗುರುವಾದ ಪರಮಶಿವನಿದ್ದಾನೆ. ಗುರುವಿನ ಮೇಲೆ ಸೂರ್ಯ ಚಂದ್ರರ ಮಂಡಲಗಳಿವೆ ; ಇವುಗಳ ಮೇಲೆ ಮಹಾವಾಯು ; ಮಹಾವಾಯುವಿನ ಮೇಲೆ ಬ್ರಹ್ಮರಂಧ್ರವೂ ಅದರ ಮೇಲೆ ಮಹಾಶಂಖಿನಿಯೂ ಇವೆ. ಚಂದ್ರಮಂಡಲದಲ್ಲಿ ಮಿಂಚಿನಂತೆ ಹೊಳೆಯುವ ತ್ರಿಕೋಣವೂ ಅದರಲ್ಲಿ ತಾವರೆದಂಟಿನ ತಂತುವಿನ ನೂರರಷ್ಟು ತೆಳುವಾದ, ಕೆಂಪು ಬಣ್ಣದ ಹಾಗೂ ಕೆಳಮುಖವಾದ ಚಂದ್ರನ ಹದಿನಾರನೆಯ ಕಲೆಯಿದೆ. ಇದರಲ್ಲಿ ನಿರ್ವಾಣಕಲೆಯಿದೆ. ಅದು ಕೆಳಮುಖವಾಗಿದ್ದು ಕೂದಲು ತುದಿಯ ಸಾವಿರದರಲ್ಲಿ ಒಂದರಷ್ಟು ಸೂಕ್ಷ್ಮವಾಗಿದೆ. ಅದರ ಬಣ್ಣ ಕೆಂಪು. ಈ ಕಲೆಯ ಕೆಳಗೆ ಅವ್ಯಕ್ತನಾದದ ರೂಪಿನಲ್ಲಿರುವ ನಿಬೋಧಿಕಾ ಎಂಬ ಅಗ್ನಿಯಿದೆ. ಇದರ ಮೇಲೆ ನಿರ್ವಾಣಕಲೆಯಲ್ಲಿ ಶಿವಶಕ್ತಿರೂಪದ ಪರಬಿಂದುವಿದೆ. ಅದು ತೇಜೋರೂಪದ್ದು ಹಾಗೂ ಹಂಸರೂಪದ ನಿರ್ವಾಣಶಕ್ತಿ. ಅದು ಕೂದಲು ತುದಿಯ ಕೋಟಿಯಲ್ಲೊಂದರಷ್ಟು ತೆಳುವಾದುದು. ಈ ಹಂಸನೇ ಜೀವ. ಬಿಂದುವಿನಲ್ಲಿ ಬ್ರಹ್ಮಸ್ಥಾನವಾದ ಶೂನ್ಯವಿದೆ. [335]

ಸಹಸ್ರಾರ ಚಕ್ರವು ನೆತ್ತಿಯಲ್ಲಿದೆ. ಸಹಸ್ರ, ಎಂದರೆ ಅಸಂಖ್ಯಾತ, ಎಂದರ್ಥಮಾಡಿ ಭೌತಿಕವಾದ ಅನುರೂಪತೆಯನ್ನು ಕಾಣಬೇಕು. ಇದು ಸಪ್ತವ್ಯಾಹೃತಿಗಳಲ್ಲಿ ಸತ್ಯಲೋಕಕ್ಕೂ ದೇಹದಲ್ಲಿ ವೀರ್ಯರಸ, ಜೀವರಸಗಳಿಗೂ ಆಶ್ರಯವಾಗಿದೆ. ಇದು ಪರಬ್ರಹ್ಮದ ಸ್ಥಾನವಾದುದರಿಂದ ನಿರುಪಾಧಿಕವಾದುದು.

ಬ್ರಹ್ಮರಂಧ್ರವು ನೆತ್ತಿಯಪ್ರದೇಶದಲ್ಲಿರುತ್ತದೆ : ತಲೆಯ ಮೇಲ್ಭಾಗದ ಮಧ್ಯದಲ್ಲಿ, ಹೆಡತಲೆಯ ಮೂಳೆಗಳಿಗೂ (occipital) ಮತ್ತು ಕಪಾಲದ ಪಾರ್ಶ್ವ ಮತ್ತು ಮೇಲುಗಡೆಯಿರುವ ಜೋಡಿ ಮೂಳೆಗಳಿಗೂ ಮಧ್ಯೆ ಟೊಳ್ಳಾಗಿರುವ ಪ್ರದೇಶವೇ ಬ್ರಹ್ಮರಂಧ್ರ ಅಥವಾ ಸುಳಿನೆತ್ತಿ (anterior fontanelle). ಇದು ಬ್ರಹ್ಮವಸ್ತುವಿನ ಆವಾಸವಾದುದರಿಂದ ದಶಮದ್ವಾರವೆಂದೂ ರೂಢಿಯಲ್ಲಿ ಹೆಸರುಂಟು. ದೇಹವು ಬೆಳೆದಹಾಗೆಲ್ಲ ಈ ದ್ವಾರವು ಮುಚ್ಚುತ್ತಬರುತ್ತದೆ. ಜೀವವು ದೇಹವನ್ನು ಪ್ರವೇಶಿಸುವುದು ಇದರ ಮೂಲಕವೇ. ಈ ಸಹಸ್ರಾರ ಚಕ್ರದಿಂದ ಕೆಳಗಿಳಿಯುತ್ತ ಬಂದ ಹಾಗೆಲ್ಲ ಅದಕ್ಕೆ ತತ್ತ್ವಗಳ ಮತ್ತು ಉಪಾಧಿಗಳ ಸಂಪರ್ಕವು ಹೆಚ್ಚುತ್ತಹೋಗಿ ಮೂಲಾಧಾರದ ಬಳಿಯಿರುವ ಬ್ರಹ್ಮಗ್ರಂಥಿಯನ್ನು ತಲುಪುವ ವೇಳೆಗೆ ಅವಿದ್ಯಾಸ್ವರೂಪವಾಗಿಬಿಟ್ಟು ಮೂಲಾಧಾರ

67 ಗ : ಸುಧಾಧರೇ.

335 ಪೂರ್ಣಾನಂದಸ್ವಾಮಿ, ಉ. ಗ್ರಂ., 39–49, ಪು. 56–75.

ದಲ್ಲಿ ನಿದ್ರಿಸತೊಡಗುತ್ತದೆ. ಆದುದರಿಂದ ಬ್ರಹ್ಮಸಾಕ್ಷಾತ್ಕಾರವಾಗಬೇಕಾದರೆ ಈ ಶಕ್ತಿಯನ್ನು ಇದೇ ದಾರಿಯಲ್ಲಿ ಹಿಂದಕ್ಕೆ ನಡೆಸಿಕೊಂಡುಹೋಗಿ ಬ್ರಹ್ಮರಂಧ್ರದ ಮೂಲಕ ದಾಟಿಸಬೇಕು. ಆದುದರಿಂದ ಯೋಗಿಗಳು ಕುಂಡಲಿನಿಯನ್ನು ಜಾಗೃತಗೊಳಿಸಿ ಮೂಲಾಧಾರದಿಂದ ಬ್ರಹ್ಮರಂಧ್ರದವರೆಗಿನ ಸುಷುಮ್ನಾ ಮಾರ್ಗವನ್ನೂ ಇತರ ನಾಡಿಗಳನ್ನೂ ಶುದ್ಧಿಗೊಳಿಸಿ, ಸುಷುಮ್ನೆಯಲ್ಲಿ ಪ್ರಾಣವು ನಿರರ್ಗಳವಾಗಿ ಸಂಚರಿಸುವಂತೆ ಮಾಡಿಕೊಳ್ಳುತ್ತಾರೆ; ಹಾಗೂ ದೇಹವನ್ನು ವಿಸರ್ಜಿಸುವಾಗ ಅವರ ಪ್ರಾಣವಾಯುವು ಬ್ರಹ್ಮರಂಧ್ರವನ್ನು ಭೇದಿಸಿ ವಿಮೋಚನೆಪಡೆಯುತ್ತದೆ.

ಸ್ಥೂಲಶರೀರದಲ್ಲಿ ಸಹಸ್ರಾರ ಚಕ್ರಕ್ಕೆ ಪರಸ್ಪರವಾದುದು ಸೆರಬ್ರಲ್ ಗೋಳಗಳು. ಅದನ್ನು ಆಧುನಿಕ ಶರೀರ ಶಾಸ್ತ್ರಜ್ಞರು ಹೀಗೆ ವರ್ಣಿಸಿದ್ದಾರೆ :

Our intelligence can no more realise the immensity of the brain than the extent of the sidereal universe. The cerebral substance contains more than twelve thousand millions of cells. These cells are connected with one another by fibrils, and each fibril possesses several branches. By means of these fibrils, they associate several trillions of times. And this prodigious crowd of tiny individuals and invisible fibrils, despite its undreamed of complexity, works as it were essentially one. [336]

The *cerebral hemispheres* form the largest part of the brain, and when viewed together from above, assume the outline of an ovoid mass broader behind than in front, the greatest transverse diameter corresponding with a line connecting the two parietal tuberosites. The hemispheres are incompletely separated by a deep median cleft named the longitudinal cerebral fissure and each possesses a central cavity termed the lateral ventricle. [337]

ಸಹಸ್ರಾರವನ್ನು ವರ್ಣಿಸುವ ಸಂದರ್ಭದಲ್ಲಿ ಸಂಮೋಹನ ತಂತ್ರವು ಸಹಸ್ರಾರಕ್ಕೂ ಅದರ ಕೆಳಗಿನ ಎಲ್ಲಾ ಚಕ್ರಗಳಿಗೂ ನಾಡಿಗಳಿಗೂ ಅಮೃತವನ್ನು ಸುರಿಸುವ ಅರ್ಧಚಂದ್ರನನ್ನು ವರ್ಣಿಸುತ್ತದೆ :

ಇಂದುರ್ಲಲಾಟದೇಶೇ ಚ ತದೂರ್ಧ್ವೇ ಬೋಧಿನೀ ಸ್ವಯಮ್ ।
ತದೂರ್ಧ್ವೇ ಭಾತಿ ನಾದೋಽಸಾವರ್ಧಚಂದ್ರಾಕೃತಿಃ ಪರಃ ॥
ತದೂರ್ಧ್ವೇ ಚ ಮಹಾನಾದೋ ಲಾಂಗಲಾಕೃತಿರುಜ್ವಲಃ ।
ತದೂರ್ಧ್ವೇ ಚ ಕಲಾಪ್ರೋಕ್ತಾ ಆಂಜೀತಿ ಯೋಗಿವಲ್ಲಭಾ ।
ಉನ್ಮನೀ ತು ತದೂರ್ಧ್ವೇ ಚ ಯದ್ ಗತ್ವಾ ನ ನಿವರ್ತತೇ ॥ [338]

ಆಗಮಕಲ್ಪದ್ರುಮ ಪಂಚಶಾಖಾದಿಯಲ್ಲಿ ಇದನ್ನೇ ಹೀಗೆ ಹೇಳಿದೆ :

ತದಂತರೇ ಪರಂ ಶೂನ್ಯಂ ವಿಸರ್ಗಾಧೋ ವ್ಯವಸ್ಥಿತಮ್ ।
ಬಾಲಾದಿತ್ಯಪ್ರಭಾ ತತ್ರ ಕಲಾ ಷೋಡಶ್ಯಧೋಮುಖೀ ॥
ಸ್ರವಂತೀ ಸೌಧಧಾರಾಂ ವೈ ಚಂದ್ರಾರ್ಧಾಂಗವಿಭುಂಗುರಾ । [339]

336 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 97–98.    337 ಗ್ರೇ, ಉ. ಗ್ರಂ., ಪು. 997.

338 ಸಮ್ಮೋಹನತಂತ್ರ, ಉದ್ಧೃತಿ, ಪೂರ್ಣಾನಂದಸ್ವಾಮಿ, ಉ. ಗ್ರಂ., 39 ಮತ್ತು ಭಾಷ್ಯ, ಪು. 59.

339 ಆಗಮಕಲ್ಪದ್ರುಮ ಪಂಚಶಾಖಾದಿ, ಉದ್ಧೃತಿ, ಪೂರ್ಣಾನಂದಸ್ವಾಮಿ, ಉ. ಗ್ರಂ., 49, ಭಾಷ್ಯ, ಪು. 78.

ಈ ಚತುರ್ಥೀಚಂದ್ರನ (ಕುಡುಗೋಲಿನ) ಆಕಾರದ ಕುಹರವನ್ನು ಆಧುನಿಕ ಶರೀರಶಾಸ್ತ್ರಜ್ಞರೂ ಗುರುತಿಸುತ್ತಾರೆ :

The **longitudinal fissure of the cerebrum** contains a sickle-shaped process of dura mater, named falx cerebri and the anterior cerebral vessels. In front and behind, the fissure completely separates the cerebral hemispheres from each other; in the middle, however, it only extends down to a great central white commissure, named the *corpus callosum*, which connects the hemispheres across the median plane.[340]

ಅವಲಾನನು ಸಹಸ್ರಾರವನ್ನು ಕುರಿತು ಹೀಗೆ ಬರೆಯುತ್ತಾನೆ :

Lastly, the thousand petalled lolus Sahasrara corresponds to the upper cerebrum of the physical body, with its cortical convolutions. . . . Just as all powers exist in the seat of voluntary action, so it is said that all the fifty "letters" which are distributed throughout the spinal centres of the Sushumna exist here in multiplied form-that is, 50×20. The nectar-rayed moon is possibly the underpart of the brain, the convolution or lobes of which, resembling half-moons, are called Chandrakala, and the mystic mount Kailasa is undoubtedly the upper brain. The ventrical connected with the spinal cord is also semilunar in shape.[341]

ವ್ರಜೇಂದ್ರನಾಥನು ಹೀಗೆ ತಿಳಿಸುತ್ತಾನೆ :

And lastly, the Sahasrara Chakra, thousand lobed, the upper cerebrum with its lobes and convolutions, the special and highest seat of Jiva, the soul.[342]

ಕುಂಡಲಿನೀಮತದಲ್ಲಿ ಚಕ್ರಗಳಂತೆಯೇ ನಾಡೀಗ್ರಂಥಿಗಳನ್ನೂ ಆಧಾರಪ್ರತಿಜ್ಞೆಗಳಾಗಿ ಸ್ವೀಕರಿಸಿದೆ. ಬ್ರಹ್ಮಗ್ರಂಥಿ, ವಿಷ್ಣುಗ್ರಂಥಿ ಮತ್ತು ರುದ್ರಗ್ರಂಥಿಗಳೆಂಬ ಈ ಮೂರನ್ನೂ ಸುಷುಮ್ನಾ ಮಾರ್ಗದಲ್ಲಿ ಭೇದಿಸಿ ಸಹಸ್ರಾರವನ್ನು ಕುಂಡಲಿನಿಯು ತಲುಪಿದರೆ ಮೋಕ್ಷಪ್ರಾಪ್ತಿಯಾಗುತ್ತದೆ. ಈ ನಾಡೀಗ್ರಂಥಿಗಳಿಗೆ ಸ್ಥೂಲದೇಹದಲ್ಲಿ ಸಮಾನಾಂತರವಾದ ನರಗ್ರಂಥಿಗಳಿವೆ. ಅವುಗಳನ್ನು ಆಧುನಿಕ ಶರೀರಶಾಸ್ತ್ರವು ಹೀಗೆ ವರ್ಣಿಸುತ್ತದೆ :

**Ganglia** are aggregations of nerve cells found on some peripheral nerves. They are present on the posterior roots of the spinal nerves . . . . Each ganglion is invested by a smooth, firm, membranous envelope consisting of fibro-areolar tissue; this envelope is continuous with the perineurium of the nerves and sends numerous processes into the

340 ಗ್ರೇ, ಉ. ಗ್ರಂ., ಪು. 997.

341 ಅವಲಾನ್, ಉ. ಗ್ರಂ., ಪು. 149.

342 ವ್ರಜೇಂದ್ರನಾಥಸೀಲ್, ಉ. ಗ್ರಂ., ಉದ್ಧೃತಿ, ಅವಲಾನ್, ಉ. ಗ್ರಂ., ಪು. 156.

interior of the ganglion ... In the spinal ganglia the cells are large, unipolar and occur in groups round the periphery.[343]

ಯೋಗದೇಹದಲ್ಲಿರುವ ಎಪ್ಪತ್ತೆರಡುಸಾವಿರ ನಾಡಿಗಳಲ್ಲಿ ಇಡಾ, ಪಿಂಗಳಾ ಮತ್ತು ಸುಷುಮ್ನಾಗಳೇ ಅತ್ಯಂತ ಪ್ರಧಾನವಾದವುಗಳು. ಈ ಎಪ್ಪತ್ತೆರಡುಸಾವಿರ ನಾಡಿಗಳೂ ದೇಹಮಧ್ಯದಲ್ಲಿರುವ ಗೆಡ್ಡೆಯೊಂದರಿಂದ ದೇಹದಲ್ಲೆಲ್ಲಾ ವಿಕಿರಣಹೊಂದುತ್ತವೆ. ಇದೇ ಇಡಾ, ಪಿಂಗಳಾ ಮತ್ತು ಸುಷುಮ್ನಾಗಳು ಕೂಡುವಸ್ಥಾನ. ಇದಕ್ಕೆ ಬ್ರಹ್ಮಗ್ರಂಥಿ ಯೆಂದು ಹೆಸರು. ಇದನ್ನೇ ನಾಭಿಕಂದವೆಂದೂ ಕರೆಯುತ್ತಾರೆ. ಈ ಮೂರು ನಾಡಿಗಳು ಮತ್ತೆರಡುಬಾರಿ ಎಂದರೆ ಹೃದಯಪ್ರದೇಶದಲ್ಲಿ ಮತ್ತು ಲಲಾಟಪ್ರದೇಶದಲ್ಲಿ ಪುನಃ ಸಂಧಿಸುತ್ತವೆ. ಇವುಗಳಿಗೆ ಕ್ರಮವಾಗಿ ವಿಷ್ಣುಗ್ರಂಥಿ ಮತ್ತು ರುದ್ರಗ್ರಂಥಿಗಳೆಂದು ಹೆಸರು. ಈ ಮೂರು ಗ್ರಂಥಿಗಳು ತಮ್ಮ ಕೆಳಗಿನ ಮತ್ತು ಮೇಲಿನ ನಾಡೀ ಚಕ್ರ ಗಳಿಗೆ ಸಂಬಂಧಿತವಾಗಿಯೇ ಇರುತ್ತವೆ. ಹೀಗೆ ಲಿಂಗದ ಮೂಲದಲ್ಲಿ ಕಾಮಸೂಚಕವಾದ ನಾಭಿಚಕ್ರದ ಬಳಿಯಿರುವ ಬ್ರಹ್ಮಗ್ರಂಥಿಯು (ಮುಕ್ತತ್ರಿವೇಣಿ) ಸೃಷ್ಟಿತತ್ತ್ವವನ್ನೂ, ರಕ್ತಪರಿಚಲನೆಯ ಮೂಲಕ ದೇಹದ ಎಲ್ಲಾ ಅಂಗಪ್ರತ್ಯಂಗಗಳಿಗೂ, ಆಹಾರವನ್ನೂ, ಪೋಷಣೆಯನ್ನೂ ಒದಗಿಸುವ ಹೃದಯದ ಸ್ಥಾನದಲ್ಲಿನ ಅನಾಹತ ಚಕ್ರದಲ್ಲಿರುವ ವಿಷ್ಣುಗ್ರಂಥಿಯು ಸ್ಥಿತಿತತ್ತ್ವವನ್ನೂ, ಎಲ್ಲ ಪ್ರಾಣಶಕ್ತಿಗಳ ಕೇಂದ್ರವಾಗಿ, ಅದರ ಸಾವಿನೊಡನೆ ಇಡೀ ದೇಹಕ್ಕೆ ಸಾವನ್ನುಂಟುಮಾಡುವ ಮಿದುಳಿನ ಪ್ರಾಂತದಲ್ಲಿ (ಹಣೆಯ ಸ್ಥಾನದಲ್ಲಿ) ಆಜ್ಞಾಚಕ್ರಾಂತರ್ಗತ ವಾಗಿರುವಾಗ ಸಂಹಾರವನ್ನೂ ಈ ಗ್ರಂಥಿಗಳು ಸೂಚಿಸುತ್ತವೆ. ಕುಂಡಲಿನಿಯು ಮೋಕ್ಷಮಾರ್ಗದಲ್ಲಿ ಸಂಚರಿಸುವಾಗ ಕ್ರಮವಾಗಿ ಈ ಮೂರು ಗ್ರಂಥಿಗಳನ್ನೂ ಭೇದಿಸುತ್ತಾಳೆ.

ವಿಶ್ವತ್ವ, ತೈಜಸ ಮತ್ತು ಪ್ರಾಜ್ಞಗಳೆಂಬ ತತ್ತ್ವಗಳಲ್ಲಿ ಕುಂಡಲಿನೀ ಮತದಂತೆ ಶ್ರೀ ಶಂಕರಭಗವತ್ಪಾದರು ಸೃಷ್ಟಿಸಂಹಾರಗಳನ್ನು ಸೌಂದರ್ಯಲಹರಿಯಲ್ಲಿ ಹೇಳಿದ್ದಾರೆ. ಶ್ರೀದೇವಿಯು ಕುಂಡಲಿನೀಯೆಂಬ ಹೆಸರಿನಿಂದ ದೇಹವನ್ನು ವ್ಯಾಪಾರಕ್ಕೋಸ್ಕರ ಧರಿಸಿ ಮೂಲಾಧಾರ ಚಕ್ರದಲ್ಲಿ ನೆಲೆಸುತ್ತಾಳೆ. ಅಲ್ಲಿ ಪರಬ್ರಹ್ಮವಸ್ತುವೇ ತಾನೆಂದು ಸಾಧಕನು ಧ್ಯಾನಮಾಡುವಾಗ ಮೂಲಾಧಾರದಲ್ಲಿರುವ ಬ್ರಹ್ಮಗ್ರಂಥಿಯು ಭೇದಿಸಲ್ಪಟ್ಟು ವಿಶ್ವತ್ವವೆನಿಸುವ ಬಹಿರ್ವ್ಯಾಪಾರವು ಉಪಸಂಹೃತವಾಗುವುದು. ನಂತರ ಕುಂಡಲಿನಿಯು ಮಣಿಪೂರಕಚಕ್ರದ ಅಂತ್ಯಕ್ಕೆ ಬಂದಾಗ-ಅನಾಹತಚಕ್ರದಲ್ಲಿ-ವಿಷ್ಣುಗ್ರಂಥಿಯು ಭೇದಿಸಲ್ಪಡುವುದು. ಅಂದರೆ ಅಲ್ಲಿ ತೈಜಸತ್ವವೆಂಬ ಸ್ವಪ್ನಸದೃಶವಾದ ಸವಿಕಲ್ಪಸಮಾಧಿ ಸ್ಥಿತಿಯು ಉಪಸಂಹಾರವಾಗುತ್ತದೆ. ಈ ಸಮಾಧಿಯ ಅಭ್ಯಾಸವು ಬೆಳೆದಂತೆಲ್ಲ, ಕುಂಡಲಿನಿಯು ಆಜ್ಞಾಚಕ್ರವನ್ನು ಸೇರಿದಾಗ ರುದ್ರಗ್ರಂಥಿಯು ಭೇದಿಸಲ್ಪಡುವುದು. ಇಲ್ಲಿ ಸ್ವಪ್ನಸಾದೃಶ್ಯವೂ ನಾಶವಾಗಿ ನಾನು ಎಂಬುದು ಹೋಗುವುದರಿಂದ ಪ್ರಾಜ್ಞತ್ವವೂ ಭೇದಿಸಲ್ಪಡುವುದು. ಆಗ ಕುಂಡಲಿನಿಯು ಸಹಸ್ರಾರದಲ್ಲಿ ನೆಲಸಿ ಅಮೃತತತ್ವವನ್ನುಂಟು ಮಾಡುತ್ತಾಳೆ.

ಬ್ರಹ್ಮಗ್ರಂಥಿಯೆಂಬ ಕಂದಕ್ಕೆ ಸ್ಥೂಲದೇಹದಲ್ಲಿ ಪರಸ್ಪರವಾದುದು ಕಾಡ ಈಕ್ಕಿನ. ಮಿದುಳುಬಳ್ಳಿಯು ಕಶೇರುವಿನ ಅಂತ್ಯದಲ್ಲಿ ಸೂಕ್ಷ್ಮವಾದ ತಂತುವಾಗುವುದಕ್ಕಿಂತ (filum terminale) ಮೊದಲು ಅಸಂಖ್ಯಾತ ಎಳೆಗಳು ಸೇರಿ ಕುದುರೆಯ ಬಾಲದಂತಹ ಒಂದು ಗೊಂಚಲನ್ನು ಉಂಟುಮಾಡುತ್ತವೆ. ಈ ಗೊಂಚಲಿಗೆ ಕಾಡ ಈಕ್ಕಿನ ಎಂದು ಹೆಸರು. ಅದನ್ನು ಹೀಗೆ ವರ್ಣಿಸಿದೆ:

As already explained, the nerve roots of the lumbar and sacral nerves are almost vertical in direction. On this account, they form a

343 ಗ್ರೇ, ಉ. ಗ್ರಂ., ಪು. 1060.

sheaf surrounding the filum terminale in the lower part of the subarachnoid space. This sheaf bears a resemblance to a horse's tail and is called cauda equina on this account.[344]

ಅನಾಹತಚಕ್ರದಲ್ಲಿ ವಿಷ್ಣುಗ್ರಂಥಿಗೆ ಸ್ಥೂಲದೇಹದಲ್ಲಿ ಪರಸ್ಪರವಾದುದು ಇನ್‌ಫೀರಿಯರ್ ಸರ್ವಿಕಲ್ ಗ್ಯಾಂಗ್ಲಿಯನ್.[345]

ಆಜ್ಞಾಚಕ್ರದಲ್ಲಿರುವ ರುದ್ರಗ್ರಂಥಿಗೆ ಸ್ಥೂಲದೇಹದಲ್ಲಿ ಸಮಾನಾಂತರವಾದುದು ಸ್ಫೀನೋಪೆಲಟೈನ್ ಗ್ಯಾಂಗ್ಲಿಯನ್. ಅದು ಹೀಗೆ ವರ್ಣಿತವಾಗಿದೆ :

The **sphenopalatine ganglion** is the largest of the peripheral ganglia of the parasympathetic system. It is deeply placed in the pterygopalatine fossa, close to the sphenopalatine foramen and in front of the pterygoid canal. It is somewhat flattened, of a reddish-grey colour, and is situated just below the maxillary nerve as it crosses the fossa. Although it is *connected functionally with the facial nerve,* its topographical relations with the maxillary nerve and its branches are intimate.

The *motor* or *parasympathetic root* is formed by the *nerve of the pterygoid canal,* which enters the ganglion posteriorly. Its fibres are believed to arise from a special lacrimatory nucleus in the lower part of the pons and they run in the facial nerve and its greater superficial petrosal branch before the latter unites with the deep petrosal nerve to form the nerve of the pterygoid canal. These preganglionic fibres are relayed in the ganglion and the postganglionic fibres follow a complicated course to gain their destination. Leaving the ganglian in one of the ganglionic branches, they join the maxillary nerve and pass into its zygomatic branch. Thence they run in the zygomatic temporal nerve and later leave it in the communicating branch by which it is connected to the lacrimal nerve. In this way, they reach the lacrimal gland, to which they supply secreto-motor fibres.

The *sympathetic root* is also incorporated in the nerve of the pterygoid canal. Its fibres, which are postganglionic, arise in the superior cervical ganglion and travel in the internal carotid plexus and the deep petrosal nerve.

The *branches* which appear to arise from the sphenopalatine ganglion are, for the most part, derived from the maxillary nerve through its ganglionic branches, and, though intimately related to the ganglion, have no functional connection with it. They include orbital, palatine, nasal, and pharyngeal branches. (*et seq.*)[346]

---

344 ಗ್ರೇ, ಉ. ಗ್ರಂ., ಪು. 909. 345 ಅದೇ ಗ್ರಂಥ, ಪು. 1174. 346 ಅದೇ ಗ್ರಂಥ, ಪು. 1074.

ಗೀತದಸಿದ್ಧಿ-ನಾಶ ಸ್ಥಾನಗಳು

**ಅನಾಹತದಲೇ ಪೂರ್ವೇ ಽಷ್ಟಮೇ ಚೈಕಾದಶೇ ತಥಾ ।**
**ದ್ವಾದಶೇ ಚ ಸ್ಥಿತೋ ಜೀವೋ ಗೀತಾದೇಃ ಸಿದ್ಧಿಮೃಚ್ಛತಿ ॥ 140 ॥** 189

ಅನಾಹತಚಕ್ರದಲ್ಲಿ ಪೂರ್ವದಿಂದ ಎಂಟನೆಯ ಮತ್ತು ಹಾಗೆಯೇ ಹನ್ನೊಂದನೆಯ ಮತ್ತು ಹನ್ನೆರಡನೆಯ ದಳಗಳಲ್ಲಿ ಇರುವ ಜೀವನು ಗೀತ ಮೊದಲಾದವುಗಳಲ್ಲಿ ಸಿದ್ಧಿಯನ್ನು ಪಡೆಯುತ್ತಾನೆ.

ಮನುಷ್ಯದೇಹದ ವರ್ಣನೆಯನ್ನು ಮಾಡಲು ಕಾರಣವಾಗಿದ್ದ 'ತತ್ರ ನಾದೋಪಯೋಗಿತ್ವಾನ್ಮಾನುಷಂ ದೇಹಮುಚ್ಯತೇ' ಎಂಬ ಪ್ರತಿಜ್ಞಾವಾಕ್ಯವನ್ನು ಶಾರ್ಙ್ಗದೇವನು ಈಗ ಸಮರ್ಥಿಸಿಕೊಳ್ಳಲು ಉಪಕ್ರಮಿಸಿದ್ದಾನೆ. ಮೇಲೆ ಹೇಳಿದ ಚಕ್ರಗಳಲ್ಲಿ ಯಾವ ಯಾವ ದಳಗಳಲ್ಲಿ ಜೀವನು ಉಪಸ್ಥಿತನಾಗಿದ್ದರೆ ಅವನಿಗೆ ಗೀತಾದಿಗಳ ಜ್ಞಾನವು ಉಂಟಾಗುತ್ತದೆ ಅಥವಾ ನಾಶವಾಗುತ್ತದೆ ಎಂಬುದನ್ನು ಇನ್ನುಮುಂದೆ ವರ್ಣಿಸಲಾಗುವುದು. ಗೀತಾದಿಗಳು ಎಂದರೆ ಗೀತ, ವಾದ್ಯ ಮತ್ತು ನೃತ್ಯಗಳು.

ಹೀಗೆ ಈಹಾ, ವಿವೇಕ ಮತ್ತು ಅಹಂಕಾರಗಳು ಉಪಸ್ಥಿತವಾಗಿರುವ ದಳಗಳನ್ನು ಧ್ಯಾನಿಸುತ್ತಿರುವಾಗ ಜೀವನು ದೇಹಧಾರಣೆಮಾಡಿದರೆ ಆ ದೇಹಕ್ಕೆ ಸಂಗೀತದಲ್ಲಿ ಜ್ಞಾನವೂ ಅಭಿಲಾಷೆಯೂ ಉಂಟಾಗುತ್ತವೆ; ಇವು ಜಂ, ಟಂ ಮತ್ತು ಠಂ ಎಂಬ ಮಂತ್ರಗಳ ಧ್ಯಾನಕ್ಕೆ ಆಸ್ಪದವಾದವುಗಳು. ಪಶ್ಚಾತ್ತಾಪ, ಪ್ರಕಾಶ ಮತ್ತು ದಂಭಗಳೆಂಬ ತತ್ತ್ವಗಳು ಪ್ರಕಟವಾಗುವ ಎಂದರೆ ಘಂ, ಚಂ, ಞಂ ಎಂಬ ಮಂತ್ರಗಳನ್ನುಳ್ಳ ದಳಗಳಲ್ಲಿ ಧ್ಯಾನಿಸುತ್ತಾ ಮಗ್ನನಾಗಿರುವಾಗ ಜೀವನು ದೇಹಧಾರಣೆಮಾಡಿದರೆ ಆ ದೇಹಕ್ಕೆ ಸಂಗೀತದಲ್ಲಿ ಜ್ಞಾನವೂ ಅಭಿಲಾಷೆಯೂ ನಾಶವಾಗುತ್ತವೆ.

ಇಂತಹ ವಿವರಗಳನ್ನು ಶಾರ್ಙ್ಗದೇವನನ್ನುಳಿದು ಬೇರೆ ಯೋಗಶಾಸ್ತ್ರಜ್ಞರು ಹೇಳುವುದಿಲ್ಲ. ಇವುಗಳನು ಅವನು ತನ್ನ ಅಧ್ಯಾತ್ಮವಿವೇಕದಿಂದಲೇ ಉದ್ಧರಿಸಿರುವಂತೆ ಕಾಣುತ್ತದೆ.

**ಚತುರ್ಥಷಷ್ಠದಶಮೈರ್ದಲೈರ್ಗೀತಾದಿ ನಶ್ಯತಿ ।**
**ವಿಶುದ್ಧೇರಷ್ಟಮಾದೀನಿ ದಲಾನ್ಯಷ್ಟೌ ಶ್ರಿತಾನಿ ತು ॥ 141 ॥** 190

ನಾಲ್ಕು, ಆರು [ಮತ್ತು] ಹತ್ತನೆಯ ದಳಗಳಿಂದ (ದಳಗಳಲ್ಲಿ ಜೀವನಿರುವುದರಿಂದ) ಗೀತ ಮೊದಲಾದವುಗಳು ನಾಶವಾಗುತ್ತವೆ. ವಿಶುದ್ಧಿಚಕ್ರದಲ್ಲಿ ಎಂಟನೆಯದರಿಂದ ಪ್ರಾರಂಭವಾದ ಎಂಟು ದಳಗಳು [ಜೀವನೊಡನೆ] ಸೇರಿದರಾದರೋ—

**ದದ್ಯುರ್ಗೀತಾದಿಸಂಸಿದ್ಧಿಂ ಷೋಡಶಂ ತದ್ವಿನಾಶಕಮ್ ।**
**ದಶಮೈಕಾದಶೇ ಪತ್ರೇ ಲಲನಾಯಾಂ ತು ಸಿದ್ಧಿದೇ ॥ 142 ॥** 191

—ಗೀತವೇ ಮೊದಲಾದವುಗಳಲ್ಲಿ ಸಿದ್ಧಿಯನ್ನು ಕೊಡುತ್ತವೆ. ಹದಿನಾರನೆಯದಾದರೋ ಅದರ(ಸಂಗೀತದ)ನಾಶವನ್ನುಂಟುಮಾಡುವಂತಹುದು. ಲಲನಾಚಕ್ರದಲ್ಲಾದರೋ ಹತ್ತು [ಮತ್ತು] ಹನ್ನೊಂದನೆಯ ದಳಗಳು (ಅದರ) ಸಿದ್ಧಿಯನ್ನು ಕೊಡುತ್ತವೆ.

ವಿಶುದ್ಧಿ ಚಕ್ರದಲ್ಲಿ ಅಮೃತವನ್ನೂ ಷಡ್ಜಾದಿ ಸಪ್ತಸ್ವರಗಳನ್ನೂ ಜೀವನು ಧ್ಯಾನಮಾಡುವಾಗ ದೇಹವು ಹುಟ್ಟಿದರೆ ಅದಕ್ಕೆ ಸಂಗೀತದ ಪ್ರಾಪ್ತಿಯೆಂದೂ, ವಿಷದಲ್ಲಿ ಮಗ್ನವಾಗಿರುವಾಗ ಹುಟ್ಟಿದರೆ ಸಂಗೀತದ ನಾಶವೆಂದೂ ತಿಳಿಯಬೇಕು.

## 2. ಪಿಂಡೋತ್ಪತ್ತಿ ಪ್ರಕರಣ

**ನಾಶಕಂ ಪ್ರಥಮಂ ತುರ್ಯಂ ಪಂಚಮಂ ಚ ದಲಂ ವಿದುಃ ।**
**ಬ್ರಹ್ಮರಂಧ್ರಸ್ಥಿತೋ ಜೀವಃ ಸುಧಯಾ ಸಂಪ್ಲುತೋ ಯಥಾ[68] ॥143॥** 192

ಮೊದಲನೆಯ, ನಾಲ್ಕನೆಯ ಮತ್ತು ಐದನೆಯ ದಳಗಳು (ಸಂಗೀತದ) ನಾಶವನ್ನುಂಟು ಮಾಡುವಂತಹವೆಂದು ತಿಳಿಯುತ್ತಾರೆ. ಬ್ರಹ್ಮರಂಧ್ರದಲ್ಲಿರುವ ಜೀವನು ಅಮೃತದಲ್ಲಿ ಮುಳುಗಿದ್ದೇ ಆದರೆ—

ಲಲನಾಚಕ್ರದಲ್ಲಿ ಶ್ರದ್ಧೆ ಮತ್ತು ಸಂತೋಷಗಳ ಸ್ಥಾನವಾಗಿರುವ ದಳಗಳನ್ನು ಜೀವನು ಧ್ಯಾನಮಾಡುತ್ತಿರುವಾಗ ದೇಹವು ಜನಿಸಿದರೆ ಅದಕ್ಕೆ ಸಂಗೀತದಲ್ಲಿ ವೃತ್ತಿಯೂ, ಮದ, ಶೋಕ ಮತ್ತು ಖೇದಗಳೆಂಬ ದಳಗಳನ್ನು ಧ್ಯಾನಿಸುತ್ತಿರುವಾಗ ಹುಟ್ಟಿದರೆ ಸಂಗೀತನಾಶವೂ ಆಗುತ್ತವೆ.

**ತುಷ್ಟೋ ಗೀತಾದಿಕಾರ್ಯಾಣಿ ಸಪ್ರಕರ್ಷಾಣಿ ಸಾಧಯೇತ್[69] ।**
**ಏಷಾಂ ಶೇಷೇಷು ಪತ್ರೇಷು ಚಕ್ರೇಷ್ವನ್ಯೇಷು ಚ ಸ್ಥಿತಃ[70] ॥ 144 ॥** 193

—ತೃಪ್ತಿಹೊಂದಿ ಅತ್ಯುತ್ತಮವಾಗಿ ಪಡೆಯಬೇಕಾದ ಗೀತವೇ ಮೊದಲಾದ ಕೆಲಸಗಳನ್ನು ಸಾಧಿಸುತ್ತಾನೆ. ಮತ್ತು [ಇವುಗಳನ್ನುಳಿದ] ಬೇರೆಯ ಚಕ್ರಗಳಲ್ಲಿ ಮಿಕ್ಕ ದಳಗಳಲ್ಲಿ ಇರುವ—

ದೇಹಮಧ್ಯ

**ಜೀವೋ ಗೀತಾದಿಸಂಸಿದ್ಧಿಂ ನ ಕದಾಚಿದವಾಪ್ನುಯಾತ್ ।**
**ಆಧಾರಾದ್ ದ್ವ್ಯಂಗುಲಾದೂರ್ಧ್ವಂ ಮೇಹನಾದ್**
**ದ್ವ್ಯಂಗುಲಾದಧಃ ॥ 145 ॥** 194

—ಜೀವನು ಗೀತವೇ ಮೊದಲಾದವುಗಳಲ್ಲಿ ಸಿದ್ಧಿಯನ್ನು ಎಂದೆಂದಿಗೂ ಪಡೆಯನು. ಆಧಾರ [ಚಕ್ರ] ದಿಂದ ಎರಡು ಅಂಗುಲಗಳಷ್ಟು ಮೇಲೆ, ಜನನಾಂಗದಿಂದ ಎರಡು ಅಂಗುಲಗಳಷ್ಟು ಕೆಳಗೆ—

ಮೇಲೆ ಹೇಳಿದ ಚಕ್ರಗಳಲ್ಲಿ ನಿರ್ದಿಷ್ಟವಾದ ದಳಗಳಲ್ಲಿ ಮಾತ್ರ ಜೀವನಿಗೆ ಸಂಗೀತದಲ್ಲಿ ಸಿದ್ಧಿಯೆಂದೂ, ಉಳಿದ ಯಾವ ಚಕ್ರದಲ್ಲಾಗಲೀ ಸಂಗೀತದ ಸಂಪರ್ಕವಿಲ್ಲವೆಂದೂ ಇಲ್ಲಿನ ತಾತ್ಪರ್ಯ. ಇಲ್ಲಿಂದ ಮುಂದೆ ಈ ಪ್ರಕರಣದ ಕಡೆಯ ವಿಷಯವನ್ನು ಹೇಳಲಾಗುವುದು. ಅನಾಹತನಾದವನ್ನು ಯೋಗಮಾರ್ಗದಲ್ಲಿ ಉಪಾಸನೆ ಮಾಡಿ ಮೋಕ್ಷ ದೊರಕಿಸುವುದೇ ಈ ವಿಷಯ. ಇದನ್ನು ಯೋಗನಾಡಿಗಳ ಸ್ವಾಧೀನದಿಂದ ನಡೆಸಬೇಕು.

ಗ್ರಂಥದ ಉಳಿದ ಭಾಗದಲ್ಲಿ ಆಹತನಾದದ ವಿಷಯವನ್ನೇ ಹೇಳಿದೆ.

ನಾಭಿಕಂದ

**ಏಕಾಂಗುಲಂ ದೇಹಮಧ್ಯಂ ತಪ್ತಜಾಂಬೂನದಪ್ರಭಮ್ ।**
**ತತ್ರಾಸ್ತೇಽಗ್ನಿಶಿಖಾ ತನ್ವೀ ಚಕ್ರಾತ್ತಸ್ಮಾನ್ನವಾಂಗುಲೇ ॥ 146 ॥** 195

—ಒಂದು ಅಂಗುಲದಷ್ಟು [ವಿಸ್ತಾರವಾಗಿ] ಪುಟವಿಟ್ಟ ಚಿನ್ನದಂತೆ ಹೊಳೆಯುವ ದೇಹಮಧ್ಯ [ವಿದೆ]. ಅದರಲ್ಲಿ ತೆಳುವಾದ ಅಗ್ನಿಶಿಖೆಯಿದೆ. ಆ ಚಕ್ರದಿಂದ ಒಂಬತ್ತು ಅಂಗುಲಗಳ [ದೂರ]ದಲ್ಲಿ—

ಯೋಗದೇಹದಲ್ಲಿರುವ ಎಲ್ಲಾ ನಾಡಿಗಳಿಗೂ ಉಪಕ್ರಮಸ್ಥಾನವಾಗಿರುವ ನಾಭಿಕಂದವನ್ನೂ ಅದಕ್ಕೆ ಆಶ್ರಯವಾದ ದೇಹಮಧ್ಯವನ್ನೂ ಇಲ್ಲಿ ವರ್ಣಿಸಿದೆ. ಈ ವರ್ಣನೆಯನ್ನು ಶಾರ್ಙ್ಗದೇವನು ಶ್ರುತಿಗೆ ಅನುಸಾರವಾಗಿಯೇ ಮಾಡಿದ್ದಾನೆ :

---

68 ಗ : ಯಥಾ ; ಅ : ಯದಾ. 69 ಗ : ಕಾರಯೇತ್. 70 ಕ : ಅನ್ಯೇಷ್ವವಸ್ಥಿತಃ.

ದೇಹಮಧ್ಯೇ ಶಿಖಿಸ್ಥಾನಂ ತಪ್ತಜಾಂಬೂನದಪ್ರಭಮ್ ।
(ಅಷ್ಟಾಶ್ರಂ ಸ್ವೇದಜಾನಾಂತು) ತಸ್ಮಿನ್ದೀಪವದುಜ್ಜ್ವಲಮ್ ।
ಕಂದಸ್ಥಾನಂ ಮನುಷ್ಯಾಣಾಂ ದೇಹಮಧ್ಯಂ ನವಾಂಗುಳಮ್ ।
ಚತುರಂಗಳಮುತ್ಸೇಧಂ ಚತುರಂಗಳಮಾಯತಮ್ ।
ಅಂಡಾಕೃತಿ ತಿರಶ್ಚಾಂಚ ದ್ವಿಜಾನಾಂ ಚ ಚತುಷ್ಪದಾಮ್ ॥ [347]
ದೇಹಮಧ್ಯೇ ಶಿಖಿಸ್ಥಾನಂ ತ್ರಿಕೋಣಂ ತಪ್ತಜಾಂಬೂನದಪ್ರಭಂ, ಮನುಷ್ಯಾಣಾಂ । [348]

ಜಾಂಬೂನದವೆಂದರೆ ಜಾಂಬೂನದಿಯಲ್ಲಿ (ಎಂದರೆ ಅದು ಕೊಚ್ಚಿಕೊಂಡು ಬರುತ್ತಿದ್ದ ಮಣ್ಣಿನಲ್ಲಿ) ದೊರಕುತ್ತಿದ್ದ ಚಿನ್ನವೆಂದರ್ಥ. ಸುವರ್ಣಕ್ಕೆ ಈ ಪರ್ಯಾಯ ಶಬ್ದವನ್ನು ಋಗ್ವೇದ ಮತ್ತು ಮಹಾಭಾರತಗಳಲ್ಲಿ ಹೇಳಿದೆ.

ಅಗ್ನಿಶಿಖೆಯ ಸ್ಥಾನವನ್ನು ಕೆಲವರು ಹೃದಯವೆಂದೂ ಮತ್ತೆ ಕೆಲವರು ದೇಹಮಧ್ಯವೆಂದೂ ಹೇಳುತ್ತಾರೆ :

ಹೃದಬ್ಜಕೋಶೋರ್ಧ್ವಂ ಪ್ರಸ್ಫುರತ್ಯಾನಲಃ ಕಣಃ ।
ಹೇಮಭ್ರಮರವತ್ಸಾಂಧ್ಯವಿದ್ಯುಲ್ಲವ ಇವಾಂಬುದೇ ॥ [349]
ತಸ್ಯಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಾ ।
ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವಭಾಸ್ವರಾ ॥
ನೀವಾರಶೂಕವತ್ ತನ್ವೀ ಪೀತಾ ಭಾಸ್ವತ್ಯಣೂಪಮಾ ।
ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಾ ॥ [350]
ಅಷ್ಟಪತ್ರಂತು ಹೃತ್ಪದ್ಮಂ ದ್ವಾತ್ರಿಂಶತ್ಕೇಸರಾನ್ವಿತಮ್ ।
ತಸ್ಯಮಧ್ಯೇ ಸ್ಥಿತೋ ಭಾನುರ್ಭಾನುಮಧ್ಯೇ ಗತಶ್ಶಶೀ ।
ಶಶಿಮಧ್ಯಗತೋ ವಹ್ನಿರ್ವಹ್ನಿಮಧ್ಯಗತಾ ಪ್ರಭಾ ॥ [351]

**ದೇಹಸ್ಯ ಕಂದೋಽಸ್ತ್ಯುತ್ಸೇಧಾಯಾಮಾಭ್ಯಾಂ [71] ಚತುರಂಗುಲಃ ।**
**ಬ್ರಹ್ಮಗ್ರಂಥಿರಿತಿ ಪ್ರೋಕ್ತಂ ತಸ್ಯ ನಾಮ ಪುರಾತನೈಃ ॥ 147 ॥** 196

—ಎತ್ತರ, ಅಗಲಗಳಲ್ಲಿ ನಾಲ್ಕು ಅಂಗುಲಗಳಿರುವ, ದೇಹದ ಕಂದವಿದೆ. ಅದರ ಹೆಸರು ಬ್ರಹ್ಮಗ್ರಂಥಿಯೆಂದು ಪುರಾತನರಿಂದ (ಋಷಿಗಳಿಂದ) ಹೇಳಲ್ಪಡುತ್ತದೆ

71 ಕ : ಹ್ಯುತ್ಸೇಧೋ ಯನ್ನಾಭ್ಯಾಮ್ ;

347 ತ್ರಿಶಿಖಿಬ್ರಾಹ್ಮಣೋಪನಿಷತ್ತು, ಅಷ್ಟೋತ್ತರಶತ ಉಪನಿಷತ್, ಪು. 395.
348 ಶಾಂಡಿಲ್ಯೋಪನಿಷತ್ತು, ಅದೇ ಗ್ರಂಥ, ಪು. 496.
349 ಯೋಗವಾಸಿಷ್ಠ, ನಿರ್ವಾಣ ಪ್ರಕರಣ, 82, 2, ಪು 139.
350 ತೈತ್ತಿರೀಯ ಆರಣ್ಯಕ, X, 13, 2.
351 ಧ್ಯಾನಬಿಂದೂಪನಿಷತ್ತು, ಅಷ್ಟೋತ್ತರಶತ ಉಪನಿಷತ್, ಪು. 339.

ಬ್ರಹ್ಮಗ್ರಂಥಿಗೆ ಸ್ಥೂಲದೇಹದಲ್ಲಿ ಪರಸ್ಪರವಾಗಿರುವ ಕಾಡ ಈಕ್ವಿನ ಎಂಬುದನ್ನು ಇದೇ ಪ್ರಕರಣದ 139 ನೇ ಶ್ಲೋಕದ ವ್ಯಾಖ್ಯಾನದಲ್ಲಿ ವರ್ಣಿಸಿದೆ. ಅದನ್ನು ಉಪನಿಷತ್ತುಗಳು ವರ್ಣಿಸಿರುವ ರೀತಿಯೊಡನೆ ಹೋಲಿಸಿ :

ಸ ಜೀವಃ ಪ್ರಾಣ ಇತ್ಯುಕ್ತೋ ವಾಲಾಗ್ರಶತಕಲ್ಪಿತಃ |
ನಾಭಿಸ್ಥಾನೇ ಸ್ಥಿತಂ ವಿಶ್ವಂ ಶುದ್ಧತತ್ತ್ವಂ ಸುನಿರ್ಮಲಂ || [352]

ಇಲ್ಲಿ 'ಸ ಜೀವಃ ಪ್ರಾಣ ಇತ್ಯುಕ್ತೋ' ಎನ್ನುವುದನ್ನು 'ಬ್ರಹ್ಮಗ್ರಂಥಿಜಮಾರುತಃ' ಎಂದು ಶಾರ್ಙ್ಗದೇವನು ಪ್ರಾಣವಾಯುವನ್ನು ಗ್ರಂಥಾರಂಭದ ಮಂಗಳಾಚರಣೆಯಲ್ಲಿ ವರ್ಣಿಸುವುದರೊಡನೆ ಅನ್ವಯ ಮಾಡಿಕೊಳ್ಳಬೇಕು.

ಕಂದವು ಗುದದ್ವಾರ ಮತ್ತು ಜನನಾಂಗಮೂಲದ ಪ್ರದೇಶದಲ್ಲಿದೆ. ಅಂಡಾಕಾರವಾಗಿದ್ದು ಪೊರೆಗಳಿಂದಾವೃತ ವಾಗಿರುವ ಇದು ಮೂಲಾಧಾರದಿಂದ ಒಂಬತ್ತು ಅಂಗುಲಗಳ ಎತ್ತರದಲ್ಲಿದ್ದು ಆ ಚಕ್ರದ ನಾಲ್ಕು ದಳಗಳನ್ನು ಪಾರ್ಶ್ವದಲ್ಲಿ ಹೊಂದಿದೆ. ಇದರಲ್ಲಿಯೇ ಇಡಾಪಿಂಗಳಾ ನಾಡಿಗಳು ಸುಷುಮ್ನೆಯನ್ನು ಸಂಧಿಸುವುದು. ಇದು ಅವಿದ್ಯೆಯ ಆವಾಸಸ್ಥಾನವಾಗಿದೆ. ಜಾಗೃತವಾದ ಕುಂಡಲಿನಿಯು ಮೋಕ್ಷಮಾರ್ಗದಲ್ಲಿ ಚಲಿಸುವಾಗ ಬ್ರಹ್ಮಗ್ರಂಥಿ ಯನ್ನು ಮೊದಲು ಭೇದಿಸಿ ಅವಿದ್ಯಾನಾಶವನ್ನುಂಟುಮಾಡುತ್ತದೆ. ಯೋಗಶರೀರದಲ್ಲಿ ಪ್ರವಹಿಸುವ ಎಲ್ಲಾ ನಾಡಿಗಳೂ ಇದರಿಂದಲೇ ಹೊರಡುತ್ತವೆ. ಮಿದುಳಿನ ಬಳ್ಳಿಯು ಸ್ಥೂಲದೇಹದಲ್ಲಿ ಮಿದುಳಿನಿಂದ ಕಶೇರುವಿನ ಕೊನೆಯವರೆಗೂ ಹರಡಿದೆ. ಅದರ ಕೊನೆಯು ಕ್ರಮವಾಗಿ ಮೊನೆಯಾಗುತ್ತಬಂದು ಒಂದು ಸೂಕ್ಷ್ಮತಂತು ವಾಗಿಬಿಡುತ್ತದೆ (filum terminale). ಇದರ ಮೊದಲು ಇರುವ ನರಗ್ರಂಥಿಗೇ ಬ್ರಹ್ಮಗ್ರಂಥಿಯೆಂದು ಹೆಸರು.

**ತನ್ಮಧ್ಯೇ ನಾಭಿಚಕ್ರಂ ತು ದ್ವಾದಶಾರಮವಸ್ಥಿತಮ್ |**
**ಲೂತೇವ ತಂತುಜಾಲಸ್ಥಾ ತತ್ರ ಜೀವೋ ಭ್ರಮತ್ಯಯಮ್** || 148 || 197

ಅದರ ಮಧ್ಯದಲ್ಲಿ ಹನ್ನೆರಡು ದಳಗಳ ನಾಭಿಚಕ್ರವಿದೆ. ಅಲ್ಲಿ ಬಲೆಯಲ್ಲಿರುವ ಜೇಡರ ಹುಳುವಿನಂತೆ ಜೀವವು ತಿರುಗುತ್ತದೆ.

ಇದು ಬಹು ಸುಂದರವಾದ ಪ್ರೌಢಪ್ರಾಚೀನ ಉದಾಹರಣೆ. ಜೇಡನು ತನ್ನಿಂದಲೇ ಬಲೆಯನ್ನು ಸೃಷ್ಟಿಸಿ ಕೊಂಡು ಅದನ್ನು ಆವಾಸಸ್ಥಾನವಾಗಿ ಮಾಡಿಕೊಳ್ಳುತ್ತದೆ; ಹಾಗೂ ತನ್ನ ಚಲನೆಗೆ ಈ ಬಲೆಯ ತಂತುಗಳನ್ನು ಮಾರ್ಗವಾಗಿ ಉಪಯೋಗಿಸಿಕೊಳ್ಳುತ್ತದೆ. ಹಾಗೆಯೇ ಜೀವನೂ ಸಾವಿರಾರು ನಾಡಿಗಳಿಂದ ನಾಭಿಚಕ್ರವೆಂಬ ಬಲೆಯನ್ನು (ತನ್ಮೂಲಕ ಪ್ರಾಣಕ್ಕೆ ಆಶ್ರಯವನ್ನು) ಸೃಷ್ಟಿಸುತ್ತದೆ. ಇದರ ಮೂಲಕ ಬ್ರಹ್ಮರಂಧ್ರದವರೆಗೂ ಚಲಿಸಿ ಆಧ್ಯಾತ್ಮಿಕ, ಮಾನಸಿಕ ಮತ್ತು ಶಾರೀರಕ ವ್ಯಾಪಾರಗಳನ್ನು ನಡೆಸುತ್ತದೆ. ಈ ಉದಾಹರಣೆಗೆ ಶಾರ್ಙ್ಗದೇವನು ಉಪನಿಷತ್ತುಗಳಿಗೆ ಋಣಿಯಾಗಿದ್ದಾನೆ :

ದ್ವಾದಶಾರೇ ಮಹಾಚಕ್ರೇ ಪುಣ್ಯಪಾಪವಿವರ್ಜಿತೇ |
ತಾವಜ್ಜೀವೋ ಭ್ರಮತ್ಯೇವಂ ಯಾವತ್ತತ್ತ್ವಂ ನ ವಿಂದತಿ || [353]
ತುಂದಮಧ್ಯಂ ತದಿಷ್ಟಂ ವೈ ತನ್ಮಧ್ಯಂ ನಾಭಿರಿಷ್ಯತೇ |
ತತ್ರ ಚಕ್ರಂ ದ್ವಾದಶಾರಂ ತೇಷು ವಿಷ್ಣ್ವಾದಿ ಮೂರ್ತಯಃ ||

---

352 ಬ್ರಹ್ಮವಿದ್ಯೋಪನಿಷತ್ತು, ಅದೇ ಗ್ರಂಥ, ಪು. 346.

353 ಯೋಗಚೂಡಾಮಣಿ ಉಪನಿಷತ್ತು, ಅದೇ ಗ್ರಂಥ, ಪು. 405.

## 2. ಪಿಂಡೋತ್ಪತ್ತಿ ಪ್ರಕರಣ

ಅಹಂ ತತ್ರ ಸ್ಥಿತಶ್ಚಕ್ರಂ ಭ್ರಾಮಯಾಮಿ ಸ್ವಮಾಯಯಾ ।
ಅರೇಷು ಭ್ರಮತೇ ಜೀವಃ ಕ್ರಮೇಣ ದ್ವಿಜಸತ್ತಮ ।
ತಂತುಪಂಜರಮಧ್ಯಸ್ಥಾ ಯಥಾ ಭ್ರಮತಿ ಲೂತಿಕಾ ॥
ಪ್ರಾಣಾಧಿರೂಢಶ್ಚರತಿ ಜೀವಂ ತೇ ಸ ವಿನಾ ನಹಿ । [354]

ತನ್ಮಧ್ಯೇ ನಾಭಿಃ । ತತ್ರ ದ್ವಾದಶಾರಯುತಂ ಚಕ್ರಂ । ತತ್ರ ಮಧ್ಯೇ ಪುಣ್ಯಪಾಪಪ್ರಚೋದಿತೋ ಜೀವೋ ಭ್ರಮತಿ । ತಂತುಪಂಜರಮಧ್ಯಸ್ಥಲೂತಿಕಾ ಯಥಾ ಭ್ರಮತಿ ತಥಾ ಽಸೌ ತತ್ರ ಪ್ರಾಣಶ್ಚರತಿ । [355]

ತತ್ರ ಸಂಚಾರಯೇತ್ಪ್ರಾಣಾನ್ ಊರ್ಣನಾಭೀವತಂತುನಾ ॥ [356]

ಜೀವನಿಗೆ ಚಲನೆ

**ಸುಷುಮ್ಣಯಾ ಬ್ರಹ್ಮರಂಧ್ರಮಾರೋಹತ್ಯವರೋಹತಿ ।**
**ಜೀವಃ ಪ್ರಾಣಸಮಾರೂಢೋ ರಜ್ಜ್ವಂ ಕೋಹ್ಲಾಟಿಕೋ ಯಥಾ॥149॥** 198

ಕೋಲಾಟದವನು (ಐಂದ್ರಜಾಲಿಕನು) ಹಗ್ಗವನ್ನೇರಿ ಇಳಿಯುವಂತೆ ಜೀವವು ಪ್ರಾಣವನ್ನೇರಿ ಸುಷುಮ್ನಾನಾಡಿಯಿಂದ ಬ್ರಹ್ಮರಂಧ್ರವನ್ನು ಹತ್ತಿ ಇಳಿದು ಮಾಡುತ್ತದೆ.

ಭಾರತೀಯ ಐಂದ್ರಜಾಲಿಕರು ಹಗ್ಗವು ತನ್ನಷ್ಟಕ್ಕೆ ತಾನೇ ನೆಟ್ಟಗೆ ನಿಲ್ಲುವಂತೆ ಮಾಡುವ ಪ್ರಸಿದ್ಧವಾದ ರೋಪ್‌ಟ್ರಿಕ್ ಎಂಬ ಚಮತ್ಕಾರವೊಂದಿದೆ. ಈ ಡೊಂಬರು ಹೀಗೆ ನಿಂತ ಹಗ್ಗವನ್ನು ಹಿಡಿದು ಜೇಡನು ತನ್ನ ಬಲೆಯ ಸೂಕ್ಷ್ಮತಂತುವನ್ನು ಹಿಡಿದುಕೊಂಡು ಹತ್ತಿ ಇಳಿಯುವ ಹಾಗೆ ಸಂಚರಿಸುತ್ತಾರೆ.

**ಸುಷುಮ್ಣಾಂ ಪರಿತೋ ನಾಡ್ಯಃ ಕಂದಾದಾಬ್ರಹ್ಮರಂಧ್ರತಃ ।**
**ಕಂದೀಕೃತ್ಯ[72] ಸ್ಥಿತಾಃ ಕಂದಂ ಶಾಖಾಭಿಸ್ತನ್ವತೇ[73] ತನುಮ್ ॥ 150 ॥** 199

[ನಾಭಿ]ಕಂದದಿಂದ ಬ್ರಹ್ಮರಂಧ್ರದವರೆಗೆ ಸುಷುಮ್ನಾನಾಡಿಯನ್ನು ಸುತ್ತಿಕೊಂಡಿರುವ ನಾಡಿಗಳು ಕಂದವನ್ನು ಗೆಡ್ಡೆಯನ್ನಾಗಿ ಮಾಡಿವೆ ; [ಮತ್ತು] ಕವಲೊಡೆದು ದೇಹದಲ್ಲಿ ಹರಡಿಕೊಂಡಿವೆ.

ಮುಖ್ಯನಾಡಿಗಳು

**ತಾಶ್ಚ ಭೂರಿತರಾಸ್ತಾಸು ಮುಖ್ಯಾಃ ಪ್ರೋಕ್ತಾಶ್ಚತುರ್ದಶ ।**
**ಸುಷುಮ್ಣೇಡಾ ಪಿಂಗಲಾ ಚ ಕುಹೂರಥ ಸರಸ್ವತೀ ॥ 151 ॥** 200

ಅವು ಹೇರಳವಾಗಿವೆ. ಅವುಗಳಲ್ಲಿ [ಈ] ಹದಿನಾಲ್ಕು ಮುಖ್ಯವೆಂದು ಹೇಳಲ್ಪಡುತ್ತವೆ : ಸುಷುಮ್ನಾ, ಇಡಾ, ಮತ್ತು ಪಿಂಗಳಾ, ಆಮೇಲೆ ಕುಹೂ, ಸರಸ್ವತೀ,

**ಗಾಂಧಾರೀ ಹಸ್ತಿಜಿಹ್ವಾ ಚ ವಾರುಣೀ ಚ ಯಶಸ್ವಿನೀ ।**
**ವಿಶ್ವೋದರಾ ಶಂಖಿನೀ ಚ ತತಃ ಪೂಷಾ ಪಯಸ್ವಿನೀ ॥ 152 ॥** 201

---

72 ಅ, ಕ : ಕ್ರೋಡೀಕೃತ್ಯ. 73 ಕ : ಶಾಖಾಭಿಸ್ತನುತೇ.

---

354 ತ್ರಿಶಿಖಿಬ್ರಾಹ್ಮಣೋಪನಿಷತ್ತು, ಅದೇ ಗ್ರಂಥ, ಪು. 395.

355 ಶಾಂಡಿಲ್ಯೋಪನಿಷತ್ತು, ಅದೇ ಗ್ರಂಥ, ಪು. 496.

356 ಕ್ಷುರಿಕೋಪನಿಷತ್ತು, ಅದೇ ಗ್ರಂಥ, ಪು. 297.

2. ಪಿಂಡೋತ್ಪತ್ತಿ ಪ್ರಕರಣ

ಗಾಂಧಾರೀ ಮತ್ತು ಹಸ್ತಿಜಿಹ್ವಾ, ಮತ್ತು ವಾರುಣೀ, ಯಶಸ್ವಿನೀ, ವಿಶ್ವೋದರಾ, ಮತ್ತು ಶಂಖಿನೀ, ಆ ಮೇಲೆ ಪೂಷಾ, ಪಯಸ್ವಿನೀ,

ಸುಷುಮ್ನಾ

**ಅಲಂಬುಸೇತಿ[74] ತತ್ರಾದ್ಯಾಸ್ತಿಸ್ರೋ ಮುಖ್ಯತಮಾ ಮತಾಃ ।**
**ಸುಷುಮ್ಣಾ ತಿಸೃಷು ಶ್ರೇಷ್ಠಾ ವೈಷ್ಣವೀ ಮುಕ್ತಿಮಾರ್ಗಗಾ[75] ॥ 153 ॥** 202

[ಮತ್ತು] ಅಲಂಬುಸಾ. ಅವುಗಳಲ್ಲಿ ಮೊದಲನೆಯ ಮೂರು ಅತ್ಯಂತ ಮುಖ್ಯವೆಂದು ಅಭಿಪ್ರಾಯಪಡಲಾಗಿದೆ. ವಿಷ್ಣುವು ಅಧಿದೇವತೆಯಾಗಿರುವ ಹಾಗೂ ಮೋಕ್ಷಕ್ಕೆ ದಾರಿಯಾದ ಸುಷುಮ್ನೆಯು [ಈ] ಮೂರರಲ್ಲಿಯೂ ಶ್ರೇಷ್ಠವಾದುದು.

ಮೂಲಾಧಾರ ಚಕ್ರದಿಂದ ಸಹಸ್ರಾರದವರೆಗೂ ಇರುವ ಸುಷುಮ್ನಾನಾಡಿಯಲ್ಲಿ ಕುಂಡಲಿನೀ ಶಕ್ತಿಯು ಜಾಗೃತವಾಗಿ ಬ್ರಹ್ಮರಂಧ್ರವನ್ನು ತಲುಪಿದರೆ ಮೋಕ್ಷವು ಸಿದ್ಧಿಸುತ್ತದೆ. ಆದುದರಿಂದಲೇ ಅದು 'ಮುಕ್ತಿ-ಮಾರ್ಗಗಾ.' ಅದರ ನಾಮಾಂತರಗಳನ್ನು ಹಠಯೋಗಪ್ರದೀಪಿಕೆಯಲ್ಲಿ ಹೀಗೆ ಹೇಳಿದೆ:

ಸುಷುಮ್ನಾ ಶೂನ್ಯಪದವೀ ಬ್ರಹ್ಮರಂಧ್ರಂ ಮಹಾಪಥಃ ।
ಶ್ಮಶಾನಂ ಶಾಂಭವೀ ಮಧ್ಯಮಾರ್ಗಶ್ಚೇತ್ಯೇಕವಾಚಕಾಃ ॥ [357]

ಸುಷುಮ್ನಾನಾಡಿಯನ್ನು ತಂತ್ರಶಾಸ್ತ್ರವು ಹೀಗೆ ವರ್ಣಿಸುತ್ತದೆ:

ಮೂಲಾಧಾರಾತ್ ಸಹಸ್ರಾರಸ್ತದಂತರ್ಬ್ರಹ್ಮನಾಡಿಕಾ ।
ಸಿರಾ ಸ್ಯಾತ್ ಬ್ರಹ್ಮಪರ್ಯಂತಂ ತದಂತರ್ದ್ವಾರಮುತ್ತಮಮ್ ॥ [358]
ಯೇನ ದ್ವಾರೇಣ ಗಂತವ್ಯಂ ಬ್ರಹ್ಮಸ್ಥಾನಂ ನಿರಾಮಯಮ್ ।
ಮುಖೇನಾಚ್ಛಾದ್ಯ ತದ್‌ದ್ವಾರಂ ಪ್ರಸುಪ್ತಾ ಪರಮೇಶ್ವರೀ ॥ [359]

ಸುಷುಮ್ನಾನಾಡಿಯ ಒಳಗಡೆ ವಜ್ರಾ ಎಂಬ ನಾಡಿಯೂ, ಅದರ ಒಳಗಡೆ ಚಿತ್ರಿಣೀ ಎಂಬ ನಾಡಿಯೂ ಇವೆಯೆಂದು ತಂತ್ರದಲ್ಲಿ ಹೇಳಿದೆ. ಕುಂಡಲಿನಿಯು ಬ್ರಹ್ಮದ್ವಾರವನ್ನು ಪ್ರವೇಶಿಸುವುದು ಈ ಚಿತ್ರಿಣಿಯಿಂದಲೇ ; ಅಲ್ಲದೆ ನಾಡೀ ಚಕ್ರಗಳೆಲ್ಲವೂ ಸಂಬದ್ಧವಾಗಿರುವುದೂ ಇದರಿಂದಲೇ. ಈ ನಾಡಿಯನ್ನು ಹೀಗೆ ವರ್ಣಿಸಿದೆ :

ಮಧ್ಯೇ ಸುಷುಮ್ಣಾ ತನ್ಮಧ್ಯೇ ವಜ್ರಾಖ್ಯಾ ಲಿಂಗಮೂಲತಃ ।
ತನ್ಮಧ್ಯೇ ಚಿತ್ರಿಣೀ ಸೂಕ್ಷ್ಮಾ ಬಿಸತಂತುಸಹೋದರಾ ॥ [360]
ತಸ್ಯಾ ಮಧ್ಯೇ ವಿಚಿತ್ರಾಖ್ಯಾ ಅಮೃತಸ್ರಾವಿಣೀ ಶುಭಾ ।
ಸರ್ವತೇಜೋಮಯಿಣಾ ಸಾ ತು ಯೋಗಿನೀಹೃದಯಂಗಮಾ ।

---

74 ಗ ; ಆದರೆ 'ಅ' ಆಕರದಲ್ಲಿ ಇದನ್ನು ಅಲಂಬುಷಾ ಎಂದೇ ವ್ಯವಹರಿಸಿದೆ.

75 ಅ : ಮಾರ್ಗಗಾ ; ಆದರೆ, ಗ : ಮಾರ್ಗದಾ.

---

357 ಸ್ವಾತ್ಮಾರಾಮಮುನಿ, ಹಠಯೋಗಪ್ರದೀಪಿಕಾ, ಪು. 81.

358 ಮಾಯಾತಂತ್ರ, ಉದ್ಧೃತಿ, ಪೂರ್ಣಾನಂದಸ್ವಾಮಿ, ಉ. ಗ್ರಂ., ಪು. 102.

359 ಗೋರಕ್ಷಸಂಹಿತಾ, ಉದ್ಧೃತಿ, ಅದೇ ಗ್ರಂಥ, ಪು. 103.

360 ಮಾಯಾತಂತ್ರ, ಅದೇ ಗ್ರಂಥ, ಪು, 101.

## 2. ಪಿಂಡೋತ್ಪತ್ತಿ ಪ್ರಕರಣ

ವಿಸರ್ಗಾದ್ ಬಿಂದುಪರ್ಯಂತಂ ವ್ಯಾಪ್ಯ ತಿಷ್ಠತಿ ತತ್ತ್ವತಃ ॥ [361]
ತಸ್ಯಾಶ್ಚಾಂತರ್ಗತಾ ತಿಷ್ಠೇತ್ ಚಿತ್ರಾಖ್ಯಾ ಯೋಗಿವಲ್ಲಭಾ ।
ಪಂಚವರ್ಣೋಜ್ಜ್ವಲಾ ದೇವಿ ಪಂಚಭೂತಪ್ರಕಾಶಿನೀ ।
ಪಂಚದೇವಾಃ ಪರ್ವಲಗ್ನಾಃ ಸಪ್ತಾನ್ಯಾ ನಾಡಯೋ ಮತಾಃ ॥ [362]

ಸುಷುಮ್ನಾ, ವಜ್ರಾ, ಚಿತ್ರಿಣೀ ನಾಡಿಗಳಿಗೆ ದೈಹಿಕ ಪರಸ್ಪರತೆಯು ಹೀಗೆ ದೊರಕುತ್ತದೆ :

The central canal (ಸುಷುಮ್ನಾನಾಡಿಯನ್ನು ಹೋಲಿಸಿ) traverses the entire length of the spinal cord. It is continued upwards through the lower part of the medulla oblongata and opens into the fourth ventricle of the brain; below, it reaches for a short distance (5-6 cm.) into the filum terminale. In the lower part of the conus medullaris it exhibits a fusiform dilation (the *terminal ventricle*), which has a vertical measurement of from 8 to 10 mm., is triangular on cross-section with its base directed forwards, and tends to undergo obliteration after the age of forty years . . . . It is filled with cerebrospinal fluid and is lined with ciliated columnar epithelium (*ependyma*) (ಚಿತ್ರಾನಾಡಿಯೊಡನೆ ಹೋಲಿಸಿ), which is encircled by a band of gelatinous substance termed the *substanta gelatinosa centralis* . . . . (ವಜ್ರಾನಾಡಿಯೊಡನೆ ಹೋಲಿಸಿ). The part in front of the canal is thin and in contact with the white commissure: it contains a pair of longitudinal veins, one on each side of the medial plane.[363] (ಇಡಾಪಿಂಗಳಾಗಳೊಡನೆ ಹೋಲಿಸಿ).

ಇಡಾ-ಪಿಂಗಳಾ

**ಕಂದಮಧ್ಯೇ ಸ್ಥಿತಾ ತಸ್ಯಾ ಇಡಾ ಸವ್ಯೇಽಥ ದಕ್ಷಿಣೇ ।**
**ಪಿಂಗಲೇಡಾಪಿಂಗಲಯೋಶ್ಚರತಶ್ಚಂದ್ರಭಾಸ್ಕರೌ ॥ 154 ॥** 203

[ನಾಭಿ] ಕಂದದ ಮಧ್ಯದಲ್ಲಿರುವ ಅದರ ಎಡಕ್ಕೆ ಇಡಾ ; ಆಮೇಲೆ ಬಲಕ್ಕೆ ಪಿಂಗಳಾ [ಇದೆ]. ಇಡಾ ಪಿಂಗಳಾಗಳಲ್ಲಿ ಸೂರ್ಯ ಚಂದ್ರರು ಸಂಚರಿಸುತ್ತಾರೆ.

**ಕ್ರಮಾತ್ ಕಾಲಗತೇರ್ಹೇತೂ [76] ಸುಷುಮ್ನಾ ಕಾಲಶೋಷಿಣೀ ।**
**ಸರಸ್ವತೀ ಕುಹೂಶ್ಚಾಸ್ತೇ ಸುಷುಮ್ನಾಯಾಸ್ತು ಪಾರ್ಶ್ವಯೋಃ ॥ 155 ॥** 204

[ಇವುಗಳು] ಕ್ರಮವಾಗಿ ಕಾಲದ ಚಲನೆಗೆ ಕಾರಣಗಳು. ಸುಷುಮ್ನೆಯು ಕಾಲವನ್ನು ನಾಶ ಮಾಡುವಂತಹುದು. ಸರಸ್ವತೀ [ಮತ್ತು] ಕುಹೂ ನಾಡಿಗಳು ಸುಷುಮ್ನೆಯ ಪಕ್ಕಗಳಲ್ಲಿವೆ.

ಸುಷುಮ್ನಾ ನಾಡಿಯೇ ಯೋಗಶರೀರದಲ್ಲಿ ಅತ್ಯಂತ ಪ್ರಧಾನವಾದುದು. ಇದು ಸೊಂಟದಲ್ಲಿ ಎರಡನೆಯ ಕಶೇರುಖಂಡದಿಂದ ಪ್ರಾರಂಭವಾಗಿ ನೆತ್ತಿಯವರೆಗೂ ವ್ಯಾಪಿಸಿದೆ. ಮಿದುಳು ಬಳ್ಳಿಯ ಮಧ್ಯಭಾಗವಾದ ಇದರ

76 ಕ : ಹೇತುಃ ?

361 ಗೌತಮತಂತ್ರ, ಅದೇ ಗ್ರಂಥ, ಪು. 101. 362 ಶ್ರೀಕ್ರಮ, ಅದೇ ಗ್ರಂಥ, ಪು. 102.
363 ಗ್ರೇ, ಉ. ಗ್ರಂ., ಪು. 912.

ಬಣ್ಣ ಕೆಂಪು. ಅದರೊಳಗಡೆ ಸೂರ್ಯನಂತೆ ಪ್ರಕಾಶಿಸುವ ರಜೋಗುಣಪ್ರಧಾನವಾದ ವಜ್ರಾನಾಡಿಯಿದೆ. ವಜ್ರಾನಾಡಿಯಲ್ಲಿ ಸೌಮ್ಯತೇಜಸ್ಸಿನ ಹಾಗೂ ಸಾತ್ತ್ವಿಕಗುಣಪ್ರಧಾನವಾದ ಚಿತ್ರಿಣಿಯಿದೆ. ಹೀಗೆ ಅಗ್ನಿ, ಸೂರ್ಯ ಮತ್ತು ಚಂದ್ರರುಗಳ ತತ್ತ್ವಗಳೆಲ್ಲ ಸುಷುಮ್ನಾ, ವಜ್ರಾ ಮತ್ತು ಚಿತ್ರಾನಾಡಿಗಳಲ್ಲಿದ್ದಂತಾಯಿತು. ಸೂರ್ಯಚಂದ್ರರು ಕಾಲಗತಿಯನ್ನು ನಿರ್ಧರಿಸುವ ರೀತಿಯಲ್ಲಿ ಇಡಾಪಿಂಗಳಾಗಳು ಕಾಲಗತಿಸೂಚಕವಾಗಿವೆ. ಭೂತಕಾಲದಲ್ಲಿ ಸೂಚ್ಯವಾಗುವ ಹುಟ್ಟನ್ನೂ ವರ್ತಮಾನದಲ್ಲಿ 'ನಾನು' ಎಂಬ ಪ್ರಜ್ಞೆಯನ್ನೂ (ತನ್ಮೂಲಕ ಎಲ್ಲ ಲೋಕವ್ಯವಹಾರವನ್ನೂ), ಭವಿಷ್ಯದಲ್ಲಿ ಸೂಚ್ಯವಾದ ಸಾವನ್ನೂ ಇಲ್ಲದಂತೆ ಮಾಡಿ ಕಾಲಾತೀತವಾದ ಬ್ರಾಹ್ಮೀ ಸ್ಥಿತಿಯನ್ನುಂಟುಮಾಡಿ ಮೋಕ್ಷವನ್ನು ಕೊಡುವುದರಿಂದ ಸುಷುಮ್ನೆಯು ಕಾಲಶೋಷಿಣೀ. ಪ್ರಾಣವಾಯುವು ತಾವರೆಯ ತೆಳುವಾದ ನಾಳದಂತಿರುವ ಚಿತ್ರಾನಾಡಿಯಲ್ಲಿ ಪ್ರವಹಿಸಿದಾಗ ಯೋಗಿಗೆ ಉನ್ಮನೀ ಅವಸ್ಥೆಯುಂಟಾಗುತ್ತದೆ.

ಅಲ್ಲದೆ ಅಲೆಕ್ಸಿಸ್ ಕ್ಯಾರೆಲ್ಲನು ಶಾರೀರಕ ಕಾಲಗತಿಯ ವಿಷಯದಲ್ಲಿ ಹೇಳುವುದನ್ನು ಗಮನಿಸಿದರೆ, ಶರೀರದ ಬೆಳವಣಿಗೆಯು ಸಿಂಪತೆಟಿಕ್ ಮತ್ತು ಪ್ಯಾರಾಸಿಂಪತೆಟಿಕ್ ಎಂಬ ನರಶ್ರೇಣಿಗಳನ್ನೂ ಅಂಗಪ್ರತ್ಯಂಗಗಳ ಅಂತಃಕಾಲಗತಿಯನ್ನೂ ಅವಲಂಬಿಸುತ್ತದೆಂಬುದು ಸ್ಪಷ್ಟವಾಗುತ್ತದೆ.[364] ಈ ಎರಡು ನರಶ್ರೇಣಿಗಳ ಪರಸ್ಪರ ವಿರುದ್ಧವಾದ ಕ್ರಿಯೆಗಳನ್ನು (ಇಡಾ ಮತ್ತು ಪಿಂಗಳಾಗಳೊಡನೆ ಹೋಲಿಸಿ.) ನಿಲ್ಲಿಸಿಬಿಟ್ಟರೆ, ಬೆಳವಣಿಗೆಯೂ ನಾಶವೂ ಇಲ್ಲದೆ ದೇಹವು ಕಾಲದ್ರವ್ಯಕ್ಕೆ ಅತೀತವಾಗುತ್ತದೆ. ಕಾಲವನ್ನು ಬೆಳವಣಿಗೆ, ವಿಕಾಸ ಅಥವಾ ವ್ಯತ್ಯಾಸದಿಂದ ಗುರುತಿಸುವುದರಿಂದ ಮಾತ್ರ ಅಳೆಯಬೇಕಾಗಿರುವುದರಿಂದ ಇವುಗಳನ್ನೆಲ್ಲ ದೇಹದವಟ್ಟಿಗೆ ಇಲ್ಲವಾಗಿಸುವ ಶಕ್ತಿಯು ಸುಷುಮ್ನೆಯನ್ನು ಅಭ್ಯಾಸಮಾಡಿ ಅಧೀನಪಡಿಸಿಕೊಳ್ಳುವುದರಿಂದ ಸಾಧ್ಯವಾಗುತ್ತದೆ.

ನಾಡಿಗಳ ಸ್ಥಾನಗಳು

**ಇಡಾಯಾಃ ಪೃಷ್ಠಪೂರ್ವಸ್ಥೇ ಗಾಂಧಾರೀಹಸ್ತಿಜಿಹ್ವಕೇ ।**
**ಕ್ರಮಾತ್ ಪೂಷಾಯಶಸ್ವಿನ್ಯೌ ಪಿಂಗಲಾಪೃಷ್ಠಪೂರ್ವಯೋಃ** ॥156॥ 205

ಗಾಂಧಾರೀ [ಮತ್ತು] ಹಸ್ತಿಜಿಹ್ವಾನಾಡಿಗಳು ಇಡಾ ನಾಡಿಯ ಹಿಂದೆ ಮತ್ತು ಮುಂದೆ ಇರುವಂತಹವುಗಳು. ಪೂಷಾ [ಮತ್ತು] ಯಶಸ್ವಿನಿಗಳು ಕ್ರಮವಾಗಿ ಪಿಂಗಳಾನಾಡಿಯ ಹಿಂದೆ ಮತ್ತು ಮುಂದೆ ಇವೆ.

**ವಿಶ್ವೋದರಾ ಮಧ್ಯದೇಶೇ ಸ್ಯಾತ್ ಕುಹೂಹಸ್ತಿಜಿಹ್ವಯೋಃ ।**
**ಮಧ್ಯೇ ಕುಹೂಯಶಸ್ವಿನ್ಯೋರ್ವಾರುಣೀ[77] ಸಂಸ್ಥಿತಾ ಮತಾ** ॥ 157 ॥ 206

ಕುಹೂ [ಮತ್ತು] ಹಸ್ತಿಜಿಹ್ವಾನಾಡಿಗಳ ನಡುವೆ ವಿಶ್ವೋದರಾ ಇದೆ. ಕುಹೂ [ಮತ್ತು] ಯಶಸ್ವಿನೀ ನಾಡಿಗಳ ಮಧ್ಯದಲ್ಲಿ ವಾರುಣೀ ಇದೆ[ಯೆಂದು] ಸಮ್ಮತಿಸಿದೆ.

**ಪೂಷಾಸರಸ್ವತೀಮಧ್ಯಮಧಿಶೇತೇ ಪಯಸ್ವಿನೀ ।**
**ಗಾಂಧಾರಿಕಾಸರಸ್ವತ್ಯೋರ್ಮಧ್ಯೇ ವಸತಿ ಶಂಖಿನೀ** ॥ 158 ॥ 207

ಪಯಸ್ವಿನಿಯು ಪೂಷಾ [ಮತ್ತು] ಸರಸ್ವತೀ ನಾಡಿಗಳ ಮಧ್ಯದಲ್ಲಿ ನೆಲಸಿದೆ. ಶಂಖಿನಿಯು ಗಾಂಧಾರೀ [ಮತ್ತು] ಸರಸ್ವತೀ ನಾಡಿಗಳ ನಡುವೆ ಇರುತ್ತದೆ.

77 ಅ ಮತ್ತು ಕ ಗಳಲ್ಲಿ ವಾರಣಾ ಎಂದೇ ವ್ಯವಹರಿಸಿದೆ.

364 ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 103, 154–182.

**ಅಲಂಬುಸಾ ಕಂದಮಧ್ಯೇ ತತ್ರೇಡಾಪಿಂಗಲೇ ಕ್ರಮಾತ್ ।**
**ಸವ್ಯದಕ್ಷಿಣನಾಸಾಂತಂ ಕುಹೂರಾಮೇಹನಂ ಪುರಃ [78] ॥ 159 ॥** 208

ಅಲಂಬುಸಾ ನಾಡಿಯು ಕಂದಮಧ್ಯದಲ್ಲಿದೆ ; ಇದರಲ್ಲಿ ಇಡಾ ಮತ್ತು ಪಿಂಗಳಾಗಳು ಕ್ರಮವಾಗಿ ಎಡಗಡೆಯ ಮತ್ತು ಬಲಗಡೆಯ ಮೂಗಿನ ಹೊಳ್ಳೆಗಳ ಅಂಚಿನವರೆಗೂ (ವ್ಯಾಪಿಸಿವೆ). ಕುಹೂ ನಾಡಿಯು [ಇವುಗಳ] ಮುಂಭಾಗದಲ್ಲಿ ಜನನಾಂಗದವರೆಗೂ ಇದೆ.

**ಸರಸ್ವತ್ಯೂರ್ಧ್ವಮಾಜಿಹ್ವಂ ಗಾಂಧಾರ್ಯಾ[79] ಪೃಷ್ಠತಃ ಸ್ಥಿತಾ ।**
**ಆವಾಮನೇತ್ರಮಾಸವ್ಯಪಾದಾಂಗುಷ್ಠಂ ತು ಸಂಸ್ಥಿತಾ ॥ 160 ॥** 209

ಸರಸ್ವತಿಯು ಮೇಲುಮುಖವಾಗಿ ನಾಲಿಗೆಯವರೆಗೆ ; ಗಾಂಧಾರಿಯು ಬೆನ್ನಿನವರೆಗೆ ಇದೆ ಎಡಗಣ್ಣಿನಿಂದ ಎಡಗಾಲಿನ ಹೆಬ್ಬೆಟ್ಟಿನವರೆಗಾದರೋ—

**ಹಸ್ತಿಜಿಹ್ವಾ ಸರ್ವಗಾ ತು ವಾರುಣ್ಯಥ ಯಶಸ್ವಿನೀ ।**
**ಆ ಽಂಗುಷ್ಠಾದ್ ದಕ್ಷಿಣಾಂಘ್ರಿಸ್ಥಾ ದೇಹೇ ವಿಶ್ವೋದರಾ ಽಖಿಲೇ ॥161॥** 210

—ಹಸ್ತಿಜಿಹ್ವಾ ಇರುತ್ತದೆ. ವಾರುಣಿಯಾದರೋ ಎಲ್ಲೆಲ್ಲಿಯೂ (ದೇಹದಲ್ಲಿ ವ್ಯಾಪಿಸಿದೆ). ಆಮೇಲೆ ಯಶಸ್ವಿನಿಯು ಹೆಬ್ಬೆಟ್ಟಿನಿಂದ ಬಲಗಾಲಿನವರೆಗೂ (ಇರುತ್ತದೆ). ವಿಶ್ವೋದರಾ ದೇಹದಲ್ಲೆಲ್ಲ ಇದೆ.

**ಶಂಖಿನೀ ಸವ್ಯಕರ್ಣಾಂತಂ[80] ಪೂಷಾ ತ್ವಾಯಾಮ್ಯನೇತ್ರತಃ ।**
**ಪಯಸ್ವಿನೀ ತು ವಿತತಾ ದಕ್ಷಿಣಶ್ರವಣಾವಧಿ ॥ 162 ॥** 211

ಶಂಖಿನೀ ನಾಡಿಯು ಎಡಕಿವಿಯ ಕೊನೆಯವರೆಗೂ [ಇದೆ] ; ಪೂಷಾನಾಡಿಯಾದರೋ ಬಲಗಣ್ಣಿನವರೆಗೆ ; ಪಯಸ್ವಿನಿಯಾದರೋ ಬಲಕಿವಿಯವರೆಗೂ ಹರಡಿದೆ.

**ಅಲಂಬುಸಾ ಪಾಯುಮೂಲಮುಪವಷ್ಟಭ್ಯ [81] ವ್ಯವಸ್ಥಿತಾ ।**
**ಏವಂವಿಧೇ ತು ದೇಹೇ ಽಸ್ಮಿನ್‌ಮಲಸಂಚಯಸಂವೃತೇ ॥ 163 ॥** 212

ಅಲಂಬುಸಾನಾಡಿಯು ಆಸನದ್ವಾರದ ಬುಡವನ್ನು ಭದ್ರವಾಗಿ ಹಿಡಿದುಕೊಂಡು ನೆಲಸಿದೆ. ಇಂತಹ ಕಶ್ಮಲಸಂಗ್ರಹಗಳಿಂದ ಆವೃತವಾದ ಈ ತೆರನ ದೇಹದಲ್ಲಿ—

ಪ್ರಾಚೀನಭಾರತದ ಶರೀರಶಾಸ್ತ್ರಜ್ಞರೂ ತಾಂತ್ರಿಕರೂ ನಿಷ್ಕೃಷ್ಟವಾದ ನಾಡೀಜ್ಞಾನವನ್ನು ಪಡೆದಿದ್ದರು. ಸಾಮಾನ್ಯವಾಗಿ ದೇಹವ್ಯಾಪಕವಾದ ಎಪ್ಪತ್ತೆರಡುಸಾವಿರ ನಾಡಿಗಳನ್ನೂ ಅವುಗಳಲ್ಲಿ ಪ್ರಧಾನವಾದ ಹದಿನಾಲ್ಕನ್ನೂ ಆಚಾರ್ಯರುಗಳು ಹೇಳಿದರೂ ಕೆಲವರು ಮೂರುಲಕ್ಷ, ಮೂರೂವರೆ ಲಕ್ಷ ಅಥವಾ ಒಂದೂವರೆಕೋಟಿ ಸಂಖ್ಯೆಯ ನಾಡಿಗಳಿವೆಯೆಂದು ತಿಳಿಯುತ್ತಾರೆ. ಕೆಲವರು ಪ್ರಧಾನವಾದವುಗಳು ಹತ್ತೇ ಎಂದೆನ್ನುತ್ತಾರೆ. ಇಂತಹವರು ಸರಸ್ವತೀ, ವಾರುಣೀ, ವಿಶ್ವೋದರೀ ಮತ್ತು ಪಯಸ್ವಿನೀಗಳನ್ನು ಪ್ರಧಾನವೆಂದು ಭಾವಿಸುವುದಿಲ್ಲ. ಈ ಹತ್ತು ಅಥವಾ ಹದಿನಾಲ್ಕು ಪ್ರಧಾನ ನಾಡಿಗಳು ವ್ಯಾಪಿಸಿರುವ ದೇಹಭಾಗಗಳ ವಿಷಯದಲ್ಲಿಯೂ ತಂತ್ರಶಾಸ್ತ್ರಗ್ರಂಥಗಳಲ್ಲಿ ಮತ್ತು ಯೋಗಶಾಸ್ತ್ರಪರವಾದ ಉಪನಿಷತ್ತುಗಳಲ್ಲಿ ಭಿನ್ನಾಭಿಪ್ರಾಯಗಳಿವೆ:

78 ಕ : ಪುನಃ ! 79 ಅ, ಕ : ಗಾಂಧಾರೀ. 80 ಕ : ಕರ್ಣಾಂತ್ರಂ ! 81 ಅ, ಕ :_ಮುವಲಂಬ್ಯ.

2. ಪಿಂಡೋತ್ಪತ್ತಿ ಪ್ರಕರಣ

ಮಧ್ಯಸ್ಥಕುಂಡಲಿನೀಮಾಶ್ರಿತ್ಯ ಮುಖ್ಯಾ ನಾಡ್ಯಶ್ಚತುರ್ದಶ ಭವಂತಿ । ಇಡಾಪಿಂಗಳಾಸುಷುಮ್ನಾ ಸರಸ್ವತೀವಾರುಣೀಪೂಷಾಹಸ್ತಿಜಿಹ್ವಾಯಶಸ್ವಿನೀವಿಶ್ವೋದರೀಕುಹೂಶ್ಶಂಖಿನೀಪಯಸ್ವಿನೀಅಲಂಬುಸಾಗಾಂಧಾರೀತಿ ನಾಡ್ಯಶ್ಚತುರ್ದಶ ಭವಂತಿ । ತತ್ರ ಸುಷುಮ್ನಾ ವಿಶ್ವಾಧಾರಿಣೀ ಮೋಕ್ಷಮಾರ್ಗೇತಿ ಚಾಚಕ್ಷತೆ ॥ 365

ವಜ್ರದಂಡಸಮುದ್ಭೂತಾ ಮಣಯಶ್ಚೈಕವಿಂಶತಿಃ ।
ಸುಷುಮ್ನಾಯಾಂ ಸ್ಥಿತಾಸ್ಸರ್ವೇ ಸೂತ್ರೇ ಮಣಿಗಣಾ ಇವ ।
ಮೋಕ್ಷಮಾರ್ಗೇ ಪ್ರತಿಷ್ಠಾ ಸಾ ಸುಷುಮ್ನಾ ವಿಶ್ವರೂಪಿಣೀ ॥ 366
ತತ್ರ ಕಂದಸ್ಥಾನೇ ನಾಡ್ಯಸ್ಸಮುತ್ಪನ್ನಾಸ್ಸಹಸ್ರಾಣಾಂ ದ್ವಿಸಪ್ತತಿಃ ।
ತೇಷು ನಾಡೀಸಹಸ್ರೇಷು ದ್ವಿಸಪ್ತತಿರುದಾಹೃತಾಃ ॥
ಪ್ರಧಾನಾಃ ಪ್ರಾಣವಾಹಿನ್ಯೋ ಭೂಯಸ್ತಾಸು ದಶ ಸ್ಮೃತಾಃ ।
ಇಡಾ ಪಿಂಗಳಾ ಚೈವ ಸುಷುಮ್ನಾ ಚ ತೃತೀಯಕಾ ॥
ಗಾಂಧಾರೀ ಹಸ್ತಿಜಿಹ್ವಾ ಚ ಪೂಷಾ ಚೈವ ಯಶಸ್ವಿನೀ ।
ಅಲಂಬುಸಾ ಕುಹೂಶ್ಚೈವ ಶಂಖಿನೀ ದಶಮಿಾ ಸ್ಮೃತಾ ॥ 367

ಹದಿನಾಲ್ಕು ಪ್ರಧಾನ ನಾಡಿಗಳು ದೇಹದಲ್ಲಿ ಹರಡಿರುವ ಬಗೆಯನ್ನು ಶಾಂಡಿಲ್ಯೋಪನಿಷತ್ತು ರತ್ನಾಕರದಂತೆಯೇ ವರ್ಣಿಸುತ್ತದೆ :

ಸುಷುಮ್ನಾಪೃಷ್ಠಪಾರ್ಶ್ವಯೋಃ ಸರಸ್ವತೀಕುಹೂ ಭವತಃ ।
ಯಶಸ್ವಿನೀಕುಹೂಮರ್ಧ್ಯೇ ವಾರುಣೀ ಪ್ರತಿಷ್ಠಿತಾ ಭವತಿ ।
ಪೂಷಾಸರಸ್ವತೀಮಧ್ಯೇ (ಚ) ಪಯಸ್ವಿನೀ ಭವತಿ ।
ಗಾಂಧಾರೀಸರಸ್ವತೀಮಧ್ಯೇ ಯಶಸ್ವಿನೀ ಭವತಿ ।
ಕಂದಮಧ್ಯೇ ಅಲಂಬುಸಾ ಭವತಿ ।
ಸುಷುಮ್ನಾಪೂರ್ವಭಾಗೇ ಮೇಢ್ರಾಂತಂ ಕುಹೂರ್ಭವತಿ ।
ಯಶಸ್ವಿನೀಸೌಮ್ಯಾ ಚ ಪಾದಾಂಗುಷ್ಠಾಂತಮಿಷ್ಯತೇ ।
ಪಿಂಗಳಾ ಚೋರ್ಧ್ವಗಾಯಾಮ್ಯನಾಸಾಂತಾ ಭವತಿ ।
ಯಾಮ್ಯಕರ್ಣಾಂತಂ ಯಶಸ್ವಿನೀ ಭವತಿ ।
ಜಿಹ್ವಾಯಾ ಊರ್ಧ್ವಾಂತಂ ಸರಸ್ವತೀ ಭವತಿ ।
ಆಸವ್ಯಕರ್ಣಾಂತಂ ಊರ್ಧ್ವಗಾ ಶಂಖಿನೀ ಭವತಿ ।
ಇಡಾಪೃಷ್ಠಭಾಗಾತ್ ಸವ್ಯನೇತ್ರಾಂತಂ ಗಾಂಧಾರೀ ಚ ಭವತಿ ।
ಪಾಯುಮೂಲಾದಧೋರ್ಧ್ವಗಾ ಅಲಂಬುಸಾ ಭವತಿ ।
ಏತಾಸು ಚತುರ್ದಶನಾಡೀಷ್ವನ್ಯಾ ನಾಡ್ಯಸ್ಸಂಭವಂತಿ ॥ 368

---

365 ಶಾಂಡಿಲ್ಯೋಪನಿಷತ್ತು, ಅಷ್ಟೋತ್ತರಶತ ಉಪನಿಷತ್, ಪು. 497.

366 ಯೋಗಶಿಖೋಪನಿಷತ್ತು, ಅದೇ ಗ್ರಂಥ, ಪು. 556.

367 ಯೋಗಚೂಡಾಮಣ್ಯುಪನಿಷತ್ತು, ಅದೇ ಗ್ರಂಥ, ಪು. 405.

368 ಶಾಂಡಿಲ್ಯೋಪನಿಷತ್ತು, ಅದೇ ಗ್ರಂಥ, ಪು. 497.

## 2. ಪಿಂಡೋತ್ಪತ್ತಿ ಪ್ರಕರಣ

ಈ ನಾಡಿಗಳನ್ನು ದರ್ಶನೋಪನಿಷತ್ತೂ ಹೀಗೆಯೇ ವರ್ಣಿಸಿದೆ.[369] ಆದರೆ ಯೋಗಚೂಡಾಮಣಿಯು ದಶನಾಡಿಗಳನ್ನು ಹೀಗೆ ಹೇಳುತ್ತದೆ :

ಇಡಾ ವಾಮೇ ಸ್ಥಿತಾ ಭಾಗೇ ದಕ್ಷಿಣೇ ಪಿಂಗಳಾ ಸ್ಥಿತಾ ।
ಸುಷುಮ್ನಾ ಮಧ್ಯದೇಶೇತು ಗಾಂಧಾರೀ ವಾಮಚಕ್ಷುಷಿ ॥
ದಕ್ಷಿಣೇ ಹಸ್ತಿಜಿಹ್ವಾ ಚ ಪೂಷಾ ಕರ್ಣೇ ಚ ದಕ್ಷಿಣೇ ।
ಯಶಸ್ವಿನೀ ವಾಮಕರ್ಣೇ ಚಾನನೇ ಚಾಪ್ಯಲಂಬುಸಾ ॥
ಕುಹೂಶ್ಚ ಲಿಂಗದೇಶೇತು ಮೂಲಸ್ಥಾನೇ (ಚ) ಶಂಖಿನೀ ।
ಏವಂ ದ್ವಾರಂ ಸಮಾಶ್ರಿತ್ಯ ತಿಷ್ಠ್ಯ ನಾಡಯಃ ಕ್ರಮಾತ್ (?) ॥[370]

ಯೋಗಶಿಖೋಪನಿಷತ್ತಿನಲ್ಲಿ ಚತುರ್ದಶ ನಾಡಿಗಳಿಗೆ ದೈಹಿಕಕ್ರಿಯೆಗಳನ್ನೂ ಹೀಗೆ ಹೇಳಿದೆ :

ಅತಃ ಪರಂ ಪ್ರವಕ್ಷ್ಯಾಮಿ ನಾಡೀಚಕ್ರಸ್ಯ ನಿರ್ಣಯಮ್ ।
ಮೂಲಾಧಾರತ್ರಿಕೋಣಸ್ಥಾ ಸುಷುಮ್ನಾ ದ್ವಾದಶಾಂತಗಾ ॥
ಮೂಲಾರ್ಧಭಿನ್ನವಂಶಾಭಾ ಬ್ರಹ್ಮನಾಡೀತಿ ಸಾ ಸ್ಮೃತಾ ।
ಇಡಾ ಚ ಪಿಂಗಳಾ ಚೈವ ತಸ್ಯಾಃ ಪಾರ್ಶ್ವದ್ವಯಸ್ಥಿತೇ ॥
ವಿಲಂಬಿನ್ಯಾಮನುಸ್ಯೂತೇ ನಾಸಿಕಾಂತಮುಪಾಗತೇ ।
ಇಡಾಯಾಂ ಹೇಮರೂಪೇಣ ವಾಯುರ್ಹೇಮೇನ ಗಚ್ಛತಿ ॥
ಪಿಂಗಳಾಯಾಂ ತು ಸೂರ್ಯಾತ್ಮಾ ಯಾತಿ ದಕ್ಷಿಣಪಾರ್ಶ್ವತಃ ।
ವಿಳಂಬಿನೀತಿ ಯಾ ನಾಡೀ ಪ್ರೋಕ್ತಾ ನಾಭೌ ಪ್ರತಿಷ್ಠಿತಾ ॥
ತತ್ರ ನಾಡ್ಯಸ್ಸಮುತ್ಪನ್ನಾಸ್ತಿರ್ಯಗೂರ್ಧ್ವಮಧೋಮುಖಾಃ ।
ತನ್ನಾಭಿಚಕ್ರಮಿತ್ಯುಕ್ತಂ ಕುಕ್ಕುಟಾಂಡಮಿವ ಸ್ಥಿತಮ್ ॥
ಗಾಂಧಾರೀ ಹಸ್ತಿಜಿಹ್ವಾ ಚ ತಸ್ಮಾನ್ನೇತ್ರದ್ವಯಂ ಗತೇ ।
ಪೂಷಾ ಚಾಲಂಬುಸಾ ಚೈವ ಶ್ರೋತ್ರದ್ವಯಮುಪಾಗತೇ ॥
ಶೂರಾನಾಮ ಮಹಾನಾಡೀ ತಸ್ಮಾದ್ ಭ್ರೂಮಧ್ಯಮಾಶ್ರಿತಾ ।
ವಿಶ್ವೋದರೀ ತು ಯಾ ನಾಡೀ ಸಾ ಭುಂಕ್ತೇಽನ್ನಂ ಚತುರ್ವಿಧಮ್ ॥
ಸರಸ್ವತೀ ತು ಯಾ ನಾಡೀ ಜಿಹ್ವಾಂತಂ ಪ್ರಸರ್ಪತಿ ।
ನಾಕಾಹ್ವಯಾ ತು ಯಾ ನಾಡೀ ಪೀತ್ವಾತು ಸಲಿಲಂ ಕ್ಷಣಾತ್ ॥
ಕ್ಷುತಮುತ್ಪಾತಯೇದ್ ಘ್ರಾಣೇ ಶ್ಲೇಷ್ಮಾಣಂ ಸಂಚಿನೋತಿ ಚ ।
ಕಂಠಕೂಪೋದ್ಭವಾ ನಾಡೀ ಶಂಖಿನ್ಯಾಖ್ಯಾ ಅಧೋಮುಖೀ ॥
ಅನ್ನಸಾರಂ ಸಮಾದಾಯ ಮೂರ್ಧ್ನಿಸಂಚಿನುತೇ ಸದಾ ।
ನಾಭೇರಧೋಗತಾಸ್ತಿಸ್ರೋ ನಾಡಯಸ್ಸ್ಯುರಧೋಮುಖಾಃ ॥

369 ದರ್ಶನೋಪನಿಷತ್ತು, ಅದೇ ಗ್ರಂಥ, ಅನುಬಂಧ, ಪು. 74-75.

370 ಯೋಗಚೂಡಾಮಣ್ಯುಪನಿಷತ್ತು, ಅದೇ ಗ್ರಂಥ, ಪು. 406.

## 2. ಪಿಂಡೋತ್ಪತ್ತಿ ಪ್ರಕರಣ

ಮಲಂ ತ್ಯಜೇತ್ ಕುಹೂರ್ನಾಡೀ ಮೂತ್ರಂ ಮುಂಚತಿ ವಾರುಣೀ |
ಚಿತ್ರಾಖ್ಯಾ ಸೀವನೀನಾಡೀ ಶುಕ್ಲಮೋಚನಕಾರಿಣೀ ||[371]

ಮೇಲೆ ಹೇಳಿದ ನಾಡಿಗಳಲ್ಲಿ ಮುಖ್ಯವಾದವುಗಳಿಗೆ ಸ್ಥೂಲದೇಹದಲ್ಲಿರುವ ಈ ನರಗಳನ್ನು ಸಮಾನಾಂತರವಾಗಿ ಹೇಳಬಹುದು :

1) ಸುಷುಮ್ನಾ : Canalis centralis in the spinal cord.
2) ವಜ್ರಾ : Substanta gelatinosa centralis ; Fibre of Reissner ?
3) ಚಿತ್ರಾ : Ciliated columnar epithelium ependyma.
4) ಇಡಾ : Left sympathetic chain.
5) ಪಿಂಗಳಾ : Left gangliated cord of the (parasympathetic) chain.
6) ಗಾಂಧಾರೀ : Ilio hypogastric nerve ( ? )
7) ಹಸ್ತಿಜಿಹ್ವಾ : Left optic nerve.
8) ಕುಹೂ : Pubic nerve.
9) ಪೂಷಾ : Right optic nerve.
10) ಅಲಂಬುಸಾ : Inferior haemorrhoidal nerve (?) coccygeal nerve (?)
11) ಯಶಸ್ವಿನೀ : Medial plantal nerve.
12) ಶಂಖಿನೀ : Left auditory nerve.
13) ಪಯಸ್ವಿನೀ : Right auditory nerve.
14) ಸರಸ್ವತೀ : Lingual nerve.
15) ವಿಶ್ವೋದರಾ: Right vagus nerve (?)
16) ವಾರುಣೀ : Left vagus nerve (?)

ವ್ರಜೇಂದ್ರನಾಥನು ಸಂಗೀತರತ್ನಾಕರದ I, 2, 144-156 ಶ್ಲೋಕಗಳನ್ನೇ ಆಧಾರವಾಗಿಟ್ಟುಕೊಂಡು ಮೇಲ್ಕಂಡ ನಾಡಿಗಳಿಗೆ ಈ ಕ್ರಮದಲ್ಲಿ ಸಮಾನಾಂತರಗಳನ್ನು ಹೇಳುತ್ತಾನೆ :

1, 2, 3) Sushumna ; in the central channel of the spinal cord. 4) Ida, the left sympathetic chain, stretching from under the left nostril to below the left kidney in the form of a bent bow. 5) Pingala, the corresponding chain on the right. 6) Gandhari, to the back of the left sympathetic chain, supposed to stretch from below the corner of the left eye to the left leg. It was evidently supposed that some nerves of the cervical plexus came down through the spinal cord and joined on to the great sciatic nerve of the sacral plexus. 7) Hastijihva, to the front of the left sympathetic chain, stretching from below the corner of the left eye to the great toe of the left foot, on the same supposition as before.

371 ಯೋಗಶಿಖೋಪನಿಷತ್ತು, ಅದೇ ಗ್ರಂಥ, ಪು. 565.

## 2. ಪಿಂಡೋತ್ಪತ್ತಿ ಪ್ರಕರಣ

Pathological facts were believed to point to a special nerve connectoin between the eyes and the toes. 8) Kuhu, the pubic nerve of the sacral plexus to the left of the spinal cord. 9) Pusha, to the back of the right sympathetic chain, stretching from below the corner of the right eye to the abdomen (a connected chain of cervical and lumbar nerves). 10) Alumbusha, the coccygeal nerves, proceeding from the sacral vertebrae to the urinogenitory organs. 11) Yashasvini, to the front of the right sympathetic chain stretching from the right thumb to the left leg (the radial nerve of the brachial plexus continued on to certain branches of great sciatic). 12) Shankhini, auricular branch of the cervical plexus on the left. 13) Payasvini, between Pusha and Sarasvati auricular branch of the cervical plexus on the left. 14) Sarasvati, to the right of the Sushumna, the hypoglossal nerve of the cervical plexus. 15) Visvodara, the nerves of the lumbar plexus ramifying over the lower trunk and limbs. 16) Varuni, the nerves of the sacral plexus ramifying over the lower trunk and limbs.[372]

ಇವುಗಳಲ್ಲಿ ಬಹುನರಗಳು ಅನೇಕವಾದುದರಿಂದಲೂ ಆಯಾ ನಾಡಿಗಳಿಗೆ ಹೇಳಿರುವ ಕ್ರಿಯೆಗಳಿಗೆ ಕಾರಣ ವಲ್ಲದುದರಿಂದಲೂ ನನ್ನ ಸಮಿಾಕರಣಗಳೇ ಹೆಚ್ಚು ಸಮಿಾಚೀನವೆಂದು ತೋರುತ್ತದೆ.

ದೇಹವು ಭುಕ್ತಿ ಮುಕ್ತಿಗಳ ಉಪಾಯ

**ಪ್ರಸಾಧಯಂತಿ ಧೀಮಂತೋ ಭುಕ್ತಿಂ ಮುಕ್ತಿಮುಪಾಯತಃ ।**
**ತತ್ರ ಸ್ಯಾತ್ ಸಗುಣಾದ್ ಧ್ಯಾನಾದ್ ಭುಕ್ತಿರ್ಮುಕ್ತಿಸ್ತು**
**ನಿರ್ಗುಣಾತ್ ॥ 164 ॥** 213

—ಬುದ್ಧಿವಂತರಾದವರು ಐಹಿಕಭೋಗ ಮತ್ತು ಮೋಕ್ಷಗಳೆರಡನ್ನೂ [ತಕ್ಕ] ಉಪಾಯದಿಂದ ಸಾಧಿಸುತ್ತಾರೆ. ಅದರಲ್ಲಿ ಸಗುಣಬ್ರಹ್ಮದ ಧ್ಯಾನದಿಂದ ಐಹಿಕಭೋಗವು ಉಂಟಾಗುತ್ತದೆ; ಮೋಕ್ಷ ವಾದರೋ ನಿರ್ಗುಣಬ್ರಹ್ಮದ[ಧ್ಯಾನ]ದಿಂದ.

ದೇಹವು ಇಷ್ಟೊಂದು ಕಶ್ಮಲಗಳಿಂದ ತುಂಬಿದೆಯಲ್ಲ, ಅವಿದ್ಯೆಯ ನಾಶಮಾಡಿ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಇದನ್ನು ಉಪಯೋಗಿಸುವುದಾದರೂ ಹೇಗೆ, ಇಷ್ಟೊಂದು ಶೋಕಮೋಹಾದಿ ಶತ್ರುವರ್ಗಗಳಿಂದ ಬಾಧಿತವಾದ ಇದನ್ನು ಐಹಿಕ ಸುಖೋಪಭೋಗಕ್ಕಾಗಿ ಬಳಸುವುದಾದರೂ ಹೇಗೆ ಎಂದು ನಿರಾಶರಾಗಬೇಕಾಗಿಲ್ಲ. ಬುದ್ಧಿವಂತ ರಾದವರು, ಎಂದರೆ ತಕ್ಕ ಉಪಾಯ ತಿಳಿದವರು, ಇದನ್ನೇ ಮೋಕ್ಷಸಾಧನೆಗೂ ಐಹಿಕಭೋಗಕ್ಕೂ ಸಾಧನವನ್ನಾಗಿ ಬಳಸಬಹುದು. ಪ್ರಾಪಂಚಿಕ ಸುಖಗಳನ್ನು-ಎಂದರೆ ದೇಹದಲ್ಲಿರುವ (ಜ್ಞಾನ, ಕರ್ಮ ಇತ್ಯಾದಿಗಳ) ಪಂಚೇಂದ್ರಿಯ ಗಳು, ಮನಸ್ಸು, ಅಂತಃಕರಣ, ಬುದ್ಧಿ ಮೊದಲಾದವುಗಳಿಗೆ ವಿಷಯಗಳಾದ ಸುಖಗಳನ್ನು ಸಗುಣಬ್ರಹ್ಮೋ ಪಾಸನೆಯಿಂದ, ಎಂದರೆ ವಿಗ್ರಹಪೂಜೆ ಮೊದಲಾದವುಗಳಿಂದ ಸಾಧಿಸಬಹುದು. ಹಾಗೆಯೇ ಲಯಯೋಗವೇ ಮುಂತಾದ ಕ್ರಮಗಳಿಂದ ದೇಹವನ್ನು ಉಪಕರಣವಾಗಿ ಉಪಯೋಗಿಸಿ ನಿರ್ಗುಣಬ್ರಹ್ಮದ ಉಪಾಸನೆ ಮಾಡಿದರೆ ಮೋಕ್ಷಪ್ರಾಪ್ತಿಯಾಗುತ್ತದೆ.

---

372 ವ್ರಜೇಂದ್ರನಾಥಸೀಲ್, ಉ. ಗ್ರಂ., ಉದ್ಧೃತಿ, ಅವಲಾನ್, ಉ. ಗ್ರಂ., ಪು. 113-114.

2. ಪಿಂಡೋತ್ಪತ್ತಿ ಪ್ರಕರಣ

**ಧ್ಯಾನಮೇಕಾಗ್ರಚಿತ್ತೈಕಸಾಧ್ಯಂ ನ ಸುಕರಂ ನೃಣಾಮ್ ।**
**ತಸ್ಮಾದತ್ರ ಸುಖೋಪಾಯಂ ಶ್ರೀಮನ್ನಾದಮನಾಹತಮ್ ॥ 165 ॥** 214

[ಇವುಗಳ ಸಾಧನೆಗೆ ಆವಶ್ಯಕವಾದ] ಧ್ಯಾನವು ಏಕಾಗ್ರಚಿತ್ತದಿಂದ ಮಾತ್ರ ಸಾಧ್ಯವಾಗುತ್ತದೆ. [ಆದುದರಿಂದ ಸಾಮಾನ್ಯ] ಮನುಷ್ಯರಿಗೆ ಸುಲಭಸಾಧ್ಯವಲ್ಲ. ಆದುದರಿಂದ ಶ್ರೀ ಅನಾಹತ ನಾದವು ಸುಖವನ್ನೂ ಕೊಡುವ ಉಪಾಯವಾಗಿದೆ.

ಸಗುಣಬ್ರಹ್ಮ ಮತ್ತು ನಿರ್ಗುಣಬ್ರಹ್ಮ ಉಪಾಸನೆಯನ್ನು ಮಾಡಬೇಕಾದರೆ ಸಂಯಮ, ಅಭ್ಯಾಸ, ಧ್ಯಾನ, ನಿಯಮ, ಏಕಾಗ್ರತೆ, ತ್ರಿಕರಣಶುದ್ಧಿ ಮೊದಲಾದ ಅರ್ಹತೆಗಳಿರಬೇಕು. ಇದು ಕೇವಲ ಯೋಗಿಗಳಿಗೆ ಸಾಧ್ಯವೇ ಹೊರತು ಸಾಮಾನ್ಯ ಮನುಷ್ಯರಿಗಲ್ಲ. ಹಾಗಾದರೆ ಈ ದುರ್ಗಮವೂ ಕಷ್ಟಸಾಧ್ಯವೂ ಆದ ದಾರಿಯನ್ನು ಬಿಟ್ಟರೆ ಬೇರೆ ಗತಿಯಿಲ್ಲವೇ, ಎಂದರೆ, ಶಾರ್ಙ್ಗದೇವನು ಉತ್ತರಕೊಡುತ್ತಾನೆ: ಇದೆ; ನಾದವನ್ನು ಉಪಾಸಿಸುವುದರಿಂದ ಯಾವ ಕಷ್ಟಗಳೂ ಇಲ್ಲದೆ ಸಾಧಿಸಬಹುದು; ಇದಕ್ಕೆ ನಾದಯೋಗವೆಂದು ಹೆಸರು. ಇದು ಅನಾಹತನಾದಯೋಗವೆಂದೂ ಆಹತನಾದಯೋಗವೆಂದೂ ಎರಡು ವಿಧ. ಈ ಎರಡು ಬಗೆಯ ಉಪಾಸನೆಗಳೂ ಸುಖವನ್ನು ಕೊಡಬಲ್ಲವು. ಸುಖ ಎಂದರೆ ಆನಂದ. 'ವಿಜ್ಞಾನಮಾನಂದಂ ಬ್ರಹ್ಮ' ಎಂಬ ಶ್ರುತಿವಾಕ್ಯದಂತೆ ಬ್ರಹ್ಮವಸ್ತುವು ಆನಂದಸ್ವರೂಪವಾಗಿರುವುದು. ಸುಖ ಎಂದರೆ ಬ್ರಹ್ಮಸಾಕ್ಷಾತ್ಕಾರ ಎಂದು ಇಲ್ಲಿ ವಿವಕ್ಷೆ.

ನಾದಯೋಗ

**ಗುರೂಪದಿಷ್ಟಮಾರ್ಗೇಣ ಮುನಯಃ ಸಮುಪಾಸತೇ ।**
**ಸೋಽಪಿ ರಕ್ತಿವಿಹೀನತ್ವಾನ್ನ ಮನೋರಂಜಕೋ ನೃಣಾಮ್ ॥ 166 ॥** 215

[ಈ ಅನಾಹತನಾದವನ್ನು] ಗುರುವು ಹೇಳಿಕೊಟ್ಟ ಮಾರ್ಗದಲ್ಲಿ ಮುನಿಗಳು ಉಪಾಸನೆ ಮಾಡುತ್ತಾರೆ. ಅದೂ ಸಹ ರಂಜಕತ್ವವಿಲ್ಲವಾದುದರಿಂದ [ಸಾಮಾನ್ಯ]ಜನರ ಮನಸ್ಸನ್ನು ರಂಜಿಸುವುದಿಲ್ಲ.

ಅನಾಹತನಾದದ ಉಪಾಸನೆಯನ್ನಾದರೂ ಯೋಗ್ಯಗುರುವು ತೋರಿದ ದಾರಿಯಲ್ಲಿ ನಡೆದು ಅನನ್ಯಮನಸ್ಕರಾಗಿ ಮಾಡಬೇಕು. ಗ್ರಂಥಾದಿಗಳಿಂದ ಕಲಿಯಬಹುದಾದ ಮಾರ್ಗವು ಇದಲ್ಲ. ಏಕೆಂದರೆ ಅದರ ಸಾಧನೆಯಲ್ಲಿ ಗುರುವಿನ ಮಾರ್ಗದರ್ಶನವು ಅಡಿಗಡಿಗೂ ಬೇಕಾಗುತ್ತಿರುತ್ತದೆ. ಉಳಿದೆಲ್ಲ ಯೋಗಮಾರ್ಗಗಳಿಗಿಂತಲೂ ಇದು ಸುಲಭವೂ, ಆಕರ್ಷಕವೂ ಆದದು; ಮುನಿಗಳು ಸಾಧಿಸುವಂತಹುದು. ಆದರೆ ಮನಸ್ಸಿಗೆ ರಂಜನೆಯನ್ನೂ ಆಹ್ಲಾದವನ್ನೂ ಇದು ಉಂಟುಮಾಡಲಾರದುದರಿಂದ ಸಾಮಾನ್ಯ ಮನುಷ್ಯರಿಗೆ ಈ ಮಾರ್ಗವು ಅಷ್ಟು ಆಕರ್ಷಕವಲ್ಲ. ಏಕೆಂದರೆ ಇದರಲ್ಲಿ ಗೋಚರವಾಗುವ ಅನಾಹತನಾದಕ್ಕೆ ಸ್ಥೂಲೇಂದ್ರಿಯ ಗ್ರಾಹ್ಯತೆಯಿಲ್ಲ ಹಾಗೂ ಸ್ವರತ್ವವಿಲ್ಲ. ಆದುದರಿಂದ ಇದಕ್ಕೆ ರಕ್ತಿಯಿಲ್ಲ. ಇದು ಯೋಗಿಹೃದ್ಧ್ಯಾನಗಮ್ಯವಾಗಿ ಮಾತ್ರ ಇದೆ. ಯೋಗಶಾಸ್ತ್ರದಲ್ಲಿ ಸ್ವಾನುಭವದಿಂದ ಪರಿಣತನಾದ ಗುರುವಿನಿಂದ ಉಪದೇಶವೂ ದೊರೆತು ಅಭ್ಯಾಸಿಯ ಸಂಸ್ಕಾರವೂ ಹದವಾಗಿದ್ದರೆ ಮಾತ್ರ ಈ ಅನಾಹತನಾದಯೋಗವು ಸಿದ್ಧಿಸುತ್ತದೆ. ಹೀಗೆ ಪ್ರಾಣಾಯಾಮುಮಾದಿ ನಿಯಮುಗಳಿಂದ ಚಿತ್ತವನ್ನು ಹೃದಯದಲ್ಲಿ ರಾಶಿಮಾಡಿ ಧ್ಯಾನಿಸುತ್ತಿರುವಾಗ ಅನಾಹತನಾದವು ಓಂಕಾರಸ್ವರೂಪದಲ್ಲಿ ಗೋಚರಿಸುತ್ತದೆ. ಎಲ್ಲ ಪ್ರಾಣಿರಾಶಿಯ ಹೃದಯಗಳಲ್ಲಿಯೂ ಸುಪ್ತವಾಗಿರುವ, ಚಿತ್‌ಸ್ವರೂಪವಾದ ಪ್ರಣವವು ಅನಾಹತನಾದದ ರೂಪದಲ್ಲಿ ಹೃದಯಪ್ರದೇಶದಲ್ಲಿ ಯೋಗಾಭ್ಯಾಸದಿಂದ ಗೋಚರವಾಗುತ್ತದೆ. ಆದುದರಿಂದಲೇ ಹೃದಯಪ್ರದೇಶಕ್ಕೆ ಗುಹೆಯೆಂದೂ, ದಹರಾಕಾಶವೆಂದೂ ಯೋಗಶಾಸ್ತ್ರದಲ್ಲಿ ಸಂಜ್ಞೆಯಿದೆ. ಬಾಹ್ಯ ಶ್ರೋತ್ರೇಂದ್ರಿಯಕ್ಕೂ ಗೋಚರ

ವಾಗಿ, ಸುಖವನ್ನೂ ಉಂಟುಮಾಡಿ, ಪುರುಷಾರ್ಥ ಚತುಷ್ಟಯವನ್ನೂ ಸಾಧಿಸಿಕೊಡಬಲ್ಲುದು ಆಹತನಾದ ಯೋಗವೊಂದೇ. ಈ ಆಹತನಾದವೇ ತೌರ್ಯತ್ರಿಕಸ್ವರೂಪದಲ್ಲಿ ಎಂದರೆ ಗೀತವಾದಿತ್ರ ನೃತ್ಯಗಳ ರೂಪದಲ್ಲಿ, ಶಬಳಿತ ವಾಗಿದೆ. ಆದುದರಿಂದ ಸಂಗೀತಶಾಸ್ತ್ರವನ್ನು ನಾದಯೋಗವಾರ್ಗವೆಂದು ತಿಳಿಯಬೇಕು. ಆದುದರಿಂದಲೇ ಸಂಗೀತ ರತ್ನಾಕರವನ್ನು ಸುಲಭವೂ ಆಕರ್ಷಕವೂ ಆದ ಈ ಮಾರ್ಗದಿಂದ ಲೋಕೋಪಕಾರಕ್ಕಾಗಿ ರಚಿಸಲಾಗಿದೆ, ಎಂದು ಇಲ್ಲಿ ಧ್ವನಿ.

ಅನಾಹತನಾದಯೋಗವನ್ನು ಸಂಗೀತರತ್ನಾಕರವಲ್ಲದೆ ಬೇರೆ ಸಂಗೀತಶಾಸ್ತ್ರಗ್ರಂಥಗಳು ಹೇಳುವುದಿಲ್ಲ. ಈ ಯೋಗವು ಬಹು ಮಹತ್ವವುಳ್ಳದುದು. ಇದನ್ನು ಶ್ರೀ ಶಂಕರಭಗವತ್ಪಾದಾಚಾರ್ಯರು ಯೋಗತಾರಾವಳಿ ಯಲ್ಲಿಯೂ, ಗೋರಕ್ಷನಾಥನು ಗೋರಕ್ಷಶತಕ, ಗೋರಕ್ಷಸಂಹಿತಾ ಮುಂತಾದ ಗ್ರಂಥಗಳಲ್ಲಿಯೂ ವರ್ಣಿಸಿದ್ದಾರೆ. ಹಂಸ, ನಾದಬಿಂದು ಮೊದಲಾದ ಉಪನಿಷತ್ತುಗಳೂ ಸ್ವಚ್ಛಂದವೇ ಮೊದಲಾದ ತಂತ್ರಗಳೂ ತ್ರಿಪುರಾಸಾರ ಸಮುಚ್ಚಯ, ಹಠಯೋಗಪ್ರದೀಪಿಕಾ, ಘೇರಂಡಸಂಹಿತಾ ಮೊದಲಾದ ಯೋಗಶಾಸ್ತ್ರ ಗ್ರಂಥಗಳೂ ಇದನ್ನು ವರ್ಣಿಸುತ್ತವೆ. ಶ್ರೀ ಶಾರ್ಙ್ಗದೇವನು ಅಬಲಾಬಾಲಗೋಪಾಲರಾದಿಯಾಗಿ ಎಲ್ಲರಿಗೂ ಪ್ರಿಯವೆನಿಸುವ ಆಹತನಾದ ಯೋಗವನ್ನು ವಿಸ್ತಾರವಾಗಿಯೂ ಕಷ್ಟಸಾಧ್ಯವಾದ ಅನಾಹತನಾದಯೋಗವನ್ನು ಕೇವಲ ಮೂರು ಸಾಲುಗಳಲ್ಲಿ ಬಹು ಸಂಕ್ಷೇಪವಾಗಿಯೂ ಹೇಳಿದ್ದಾನೆ. ಗ್ರಂಥಪೂರ್ತಿಗಾಗಿ ಅನಾಹತನಾದಯೋಗವನ್ನು ಸ್ವಲ್ಪ ವಿಸ್ತರಿಸಿ ಇಲ್ಲಿ ಹೇಳಲಾಗುವುದು.

ಆದಿನಾಥನಾದ ಸದಾಶಿವನು ಕಾಲುಕೋಟಿ ಸಂಖ್ಯೆಯಲ್ಲಿ ಚಿತ್ತವನ್ನು ಲಯಮಾಡುವ ಮೋಕ್ಷಮಾರ್ಗಗಳನು ಲೋಕೋಪಕಾರಕ್ಕಾಗಿ ಹೇಳಿದ್ದಾನೆಂದೂ ಅವುಗಳಲ್ಲೆಲ್ಲಾ ನಾದಾನುಸಂಧಾನವೇ ಅತ್ಯಂತ ಗ್ರಾಹ್ಯವಾದುದೆಂದೂ ಶ್ರೀ ಶಂಕರಭಗವತ್ಪಾದರು ಹೇಳುತ್ತಾರೆ. ಮೂಢರಿಗೂ ಎಂದರೆ ನಿದ್ರೆ, ಆಲಸ್ಯ, ತಾಮಸ, ವೃತ್ತಿ ಮುಂತಾದವು ಗಳಲ್ಲಿಯೇ ಮಗ್ನರಾದವರಿಗೂ ಸಹ ಈ ನಾದೋಪಾಸನಕ್ರಮವು ಸಾಧ್ಯವೆಂದು ಗೋರಕ್ಷನಾಥನು ತನ್ನ ಗೋರಕ್ಷ ಸಂಹಿತೆಯಲ್ಲಿ ಹೇಳುತ್ತಾನೆ:

ಅಶಕ್ಯತತ್ತ್ವಬೋಧಾನಾಂ ಮೂಢಾನಾಮಪಿ ಸಮ್ಮತಮ್ ।  
ಪ್ರೋಕ್ತಾಂ ಗೋರಕ್ಷನಾಥೇನ ನಾದೋಪಾಸನಮುಚ್ಯತೇ ।  
ಶ್ರೀ ಆದಿನಾಥೇನ ಸಪಾದಕೋಟಿ ಲಯಃಪ್ರಕಾರಾಃ ಕಥಿತಾ ಜಯಂತಿ ।  
ನಾಧಾನುಸಂಧಾನಕಮೇಕಮೇವ ಮನ್ಯಾಮಹೇ ಮುಖ್ಯತಮಂ ಲಯಾನಾಮ್ । [373]

ನಾದಬ್ರಹ್ಮವು ವಿವಿಧಅವಸ್ಥೆಗಳಲ್ಲಿ ವಿವಿಧರೂಪಗಳಲ್ಲಿ ಪಿಂಡದಲ್ಲಿ ವಿವಕ್ಷಮಾಣವಾಗಿರುತ್ತದೆಂಬುದೂ ಯೋಗಶಾಸ್ತ್ರದಲ್ಲಿ ವಿಧಿಸಿದ ಕೆಲವು ಮುದ್ರೆ, ಆಸನ ಮುಂತಾದವುಗಳನ್ನು ಆಚರಿಸಿ ಪ್ರಾಣಾಯಾಮ ಮಾಡಿದರೆ ನಾದಬ್ರಹ್ಮದ ಶಬಳಿತ ರೂಪಗಳು ಗೋಚರವಾಗುತ್ತದೆಂಬುದೂ ಅನಾಹತನಾದಯೋಗದ ಆಧಾರಪ್ರತಿಜ್ಞೆ. ಬ್ರಹ್ಮಾಂಡದಲ್ಲಿರುವ ತತ್ತ್ವಗಳೇ ಪಿಂಡಾದಲ್ಲಿಯೂ ಸೂಕ್ಷ್ಮರೂಪದಲ್ಲಿರುತ್ತವೆ. ಅನುಲೋಮಕ್ರಮದಲ್ಲಿ ನಾದಬ್ರಹ್ಮವು ಅವಿದ್ಯೆಯಿಂದ ಉಪಹಿತವಾಗಿ ಈ ತತ್ತ್ವಗಳಿಂದ ಕ್ರಮವಾಗಿ ಆರೋಪಿತವಾಗಿ ವಿವಿಧ ನಾದರೂಪ ಗಳೆಂಬ ರೂಪದಲ್ಲಿ ವೃಷ್ಟಿಯಾಗಿ ಪಿಂಡರೂಪದಲ್ಲಿ ಇರುತ್ತದೆಂದೂ ನಾದಯೋಗದ ವಿವಿಧ ಅಭ್ಯಾಸಗಳಿಂದ ಈ ತತ್ತ್ವಗಳನ್ನು ಎಂದರೆ ಬಾಹ್ಯೇಂದ್ರಿಯ ಗೋಚರವಲ್ಲದ, ಕೇವಲ ಸ್ವಾನುಭವಗಮ್ಯವಾದ ಈ ನಾದಪ್ರಕಾರಗಳನ್ನು

---

373 ಗೋರಕ್ಷನಾಥ, ಗೋರಕ್ಷಸಂಹಿತಾ, ಉದ್ಧೃತಿ, ಸ್ವಾತ್ಮಾರಾಮಯೋಗಿ, ಹಠಯೋಗಪ್ರದೀಪಿಕಾ, IV, 65–66, ಪು. 150–151.

ಸಾಕ್ಷಾತ್ಕರಿಸಿಕೊಂಡು ಅವುಗಳನ್ನು ವಿಲೋಮಕ್ರಮದಲ್ಲಿ ಲಯಿಸುತ್ತಾ ಬಂದರೆ ಕಡೆಯಲ್ಲಿ ಬ್ರಾಹ್ಮೀಸ್ಥಿತಿಯು ಉಂಟಾಗುವುದೆಂದೂ ಈ ಶಾಸ್ತ್ರವು ತಿಳಿಸುತ್ತದೆ.

ಇಂತಹ ನಾದಯೋಗವನ್ನು ಬೇರೆಬೇರೆ ಕ್ರಮಗಳಿಂದ ಸಾಧಿಸಬಹುದು.

ಮುಕ್ತಾಸನವೆಂದೂ ಸಿದ್ಧಾಸನವೆಂದೂ ಪ್ರಸಿದ್ಧವಾಗಿರುವ ಭಂಗಿಯಲ್ಲಿ ಯೋಗಿಯು ಕುಳಿತು ಶಾಂಭವೀ ಮುದ್ರೆಯನ್ನು ಆಚರಿಸುತ್ತಾನೆ. ದೇಹದ ಹೊರಗಡೆ ಎಲ್ಲಿಯಾದರೂ ದೃಷ್ಟಿಯನ್ನು ನೆಟ್ಟು ಎವೆಮುಚ್ಚದೆ ಒಂದೇ ಸಮನೆ ನೋಡುತ್ತಿದ್ದರೆ, ಕಾಲಕ್ರಮದಲ್ಲಿ ಬಾಹ್ಯದೃಷ್ಟಿಯು ಕಣ್ಣು ತೆರೆದಿದ್ದರೂ ಇರುವುದಿಲ್ಲ. ಇದಕ್ಕೆ ಶಾಂಭವೀ ಮುದ್ರೆಯೆಂದು ಹೆಸರು. ಈ ಸ್ಥಿತಿಯಲ್ಲಿ ಬಲಗಿವಿಯಲ್ಲಿ ಗೋಚರಿಸುವ ನಾದವಿಶೇಷಗಳನ್ನು ಅವಧಾನದಿಂದ ಕೇಳಬೇಕು. ಆಗ ಮೊದಲು ಮತ್ತದುಂಬಿಗಳ, ಕೊಳಲಿನ, ಘಂಟೆಯ, ಮೇಘದ, ಸಮುದ್ರದ ಘೋಷಗಳನ್ನು ಹೋಲುವ ನಾದಗಳು ಕೇಳಿಸುತ್ತವೆಂದು ತ್ರಿಪುರಸಾರಸಮುಚ್ಚಯವು ತಿಳಿಸುತ್ತದೆ. ಇದರ ನಂತರ ಷಣ್ಮುಖೀ ಮುದ್ರೆಯಿಂದ ಹೆಬ್ಬೆಟ್ಟುಗಳಿಂದ ಕಿವಿಯ ರಂಧ್ರಗಳನ್ನೂ, ತೋರ್ಬೆರಳುಗಳಿಂದ ಕಣ್ಣುಗಳನ್ನೂ, ಮಧ್ಯದ ಬೆರಳುಗಳಿಂದ ಮೂಗಿನ ಹೊಳ್ಳೆಗಳನ್ನೂ, ಉಳಿದ ಬೆರಳುಗಳಿಂದ ಬಾಯನ್ನೂ ಮುಚ್ಚಿಕೊಂಡು ಪ್ರಾಣಾಯಾಮದಲ್ಲಿ ನಿರತನಾಗಿದ್ದಾಗ ಸುಷುಮ್ನಾ ನಾಡಿಯಲ್ಲಿ ಅನಿರ್ವಚನೀಯವಾದ ನಾದವು ಗೋಚರಿಸುತ್ತದೆ.

ನಾದಯೋಗವು ಆರಂಭ, ಘಟ, ಪರಿಚಯ ಮತ್ತು ನಿಷ್ಪತ್ತಿ ಎಂಬ ನಾಲ್ಕು ಅವಸ್ಥೆಗಳಲ್ಲಿ ಸಿದ್ಧಿಸುತ್ತದೆ. ಆರಂಭಾವಸ್ಥೆಯಲ್ಲಿ ಬ್ರಹ್ಮಗ್ರಂಥಿಯನ್ನು ಭೇದಿಸುವುದರಿಂದ ವಿಚಿತ್ರವಾದ ಆಭರಣಾದಿಗಳ ಶಬ್ದವನ್ನು ಹೋಲುವ ಅನಾಹತನಾದವು ಅನಾಹತಚಕ್ರಪ್ರದೇಶವಾದ ಶೂನ್ಯದಲ್ಲಿ ಎಂದರೆ ಹೃದಯಪ್ರದೇಶದಲ್ಲಿ ಗೋಚರಿಸುತ್ತದೆ. ಈ ಅವಸ್ಥೆಯಲ್ಲಿ ಯೋಗಿಯು ಆರೋಗಿಯೂ, ದಿವ್ಯದೇಹಿಯೂ, ಸುಗಂಧಭರಿತಕಾಯನೂ ಆಗುತ್ತಾನೆ. ಘಟಾವಸ್ಥೆಯಲ್ಲಿ ಪ್ರಾಣವಾಯುವು ಆತ್ಮ, ನಾದ, ಬಿಂದು ಈ ಮೂರನ್ನೂ ಘಟೀಕರಿಸುತ್ತದೆ, ಎಂದರೆ ಒಂದುಗೂಡಿಸುತ್ತದೆ. ಈ ಅವಸ್ಥೆಯಲ್ಲಿ ಯೋಗಿಯು ಸ್ಥಿರಾಸನದಲ್ಲಿ ಇರಬೇಕು. ಈ ಅವಸ್ಥೆಯಲ್ಲಿ ಯೋಗಿಯು ಜ್ಞಾನಿಯೂ ದೇವಪುರುಷರಿಗೆ ಸಮನಾಗಿಯೂ ಇರುತ್ತಾನೆ. ವಿಷ್ಣುಗ್ರಂಥಿಯನ್ನು ಭೇದಿಸಿದಾಗ ವಿಶುದ್ಧಿಚಕ್ರ ಸ್ಥಾನವಾದ, ಅತಿಶೂನ್ಯವೆಂದು ಯೋಗಿಗಳು ಕರೆಯುವ ಕಂಠಸ್ಥಾನದಲ್ಲಿ ಭೇರಿಯ ಶಬ್ದವು ಗೋಚರಿಸುತ್ತದೆ. ಇಲ್ಲಿ ಪರಮಾನಂದವೆಂಬ ಆನಂದವಿಧವು ಯೋಗಿಗೆ ಲಭಿಸುತ್ತದೆ. ಮೂರನೆಯ ಪರಿಚಯಾವಸ್ಥೆಯಲ್ಲಿ ರುದ್ರಗ್ರಂಥಿಯ ಭೇದನದಿಂದಾಗಿ ಆಜ್ಞಾಚಕ್ರಸ್ಥಾನವಾದ, ಮಹಾಶೂನ್ಯವೆಂದು ಯೋಗಿಗಳು ಹುಬ್ಬುಗಳ ಮಧ್ಯದ ಪ್ರದೇಶದಲ್ಲಿ ಮದ್ದಳೆಯ ಧ್ವನಿಯು ಗೋಚರವಾಗುತ್ತದೆ. ಈ ಅವಸ್ಥೆಯಲ್ಲಿ ಯೋಗಿಗೆ ಅಣಿಮಾದಿ ಅಷ್ಟಸಿದ್ಧಿಗಳೂ ಪ್ರಾಪ್ತವಾಗುತ್ತವೆ. ಇದೇ ಕಾಲದಲ್ಲಿ ಯೋಗಿಯು ಚಿತ್ತಾನಂದವನ್ನು ಸ್ವಾಧೀನಪಡಿಸಿಕೊಂಡು ಸಹಜವೆಂಬ ಆನಂದಸ್ಥಿತಿಯನ್ನು ಪಡೆಯುತ್ತಾನೆ. ಆಗ ಅವನಿಗೆ ವಾತಪಿತ್ತಕಫಾದಿ ದೋಷಗಳೂ ದುಃಖ, ಮುಪ್ಪು, ರೋಗ, ಹಸಿವು, ನಿದ್ರೆಗಳೂ ಇಲ್ಲವಾಗುತ್ತವೆ. ನಾಲ್ಕನೆಯ ನಿಷ್ಪತ್ತಿ ಎಂಬ ಅವಸ್ಥೆಯಲ್ಲಿ ಪ್ರಾಣವಾಯುವು ಸಹಸ್ರಾರ ಕಮಲದ ಸ್ಥಾನದಮೇಲಿರುವ ಬ್ರಹ್ಮರಂಧ್ರವನ್ನು ತಲುಪುತ್ತದೆ. ಆಗ ಯೋಗಿಗೆ ಕೊಳಲು, ವೀಣೆಗಳ ಶಬ್ದಗಳು ಅಲ್ಲಿ ಗೋಚರವಾಗುತ್ತವೆ. ಅವನಿಗೆ ಚಿತ್ತವು ಸಹಜವಾಗಿಯೇ ಏಕಾಗ್ರವಾಗುತ್ತದೆ; ಅವನು ಸೃಷ್ಟಿಸಂಹಾರಗಳನ್ನು ಮಾಡುವ ಶಕ್ತಿಯನ್ನು ಪಡೆಯುತ್ತಾನೆ. ಮೋಕ್ಷವು ಲಭಿಸಲಿ, ಲಭಿಸದಿರಲಿ, ಈ ಸ್ಥಿತಿಯಲ್ಲಿ ಅವನು ಅಖಂಡಿತವಾದ ಸುಖವನ್ನು ಅನುಭವಿಸುತ್ತಾನೆ. ಇದಕ್ಕೆ ಮುಖ್ಯಾನಂದವೆಂದೂ ಹೆಸರು.

ಚಕ್ರಗಳನ್ನೂ ಗ್ರಂಥಿಗಳನ್ನೂ ಭೇದಿಸುವುದು ಎಂದರೆ, ಪ್ರಾಣಾಯಾಮಕ್ರಮದಿಂದ ಪ್ರಾಣವಾಯುವನ್ನು ಸುಷುಮ್ನಾ ನಾಡಿಯಲ್ಲಿ ತುಂಬಿ ಊರ್ಧ್ವಮುಖವಾಗಿ ನಡೆಸಿಕೊಂಡು ಬರುತ್ತಿರುವಾಗ ಆಯಾ ಚಕ್ರಗಳನ್ನೂ ಗ್ರಂಥಿಗಳನ್ನೂ ಸೀಳಿ, ದಾಟಿ ಮುನ್ನಡೆಯುವುದು ಎಂದು ಅರ್ಥ.

## 2. ಪಿಂಡೋತ್ಪತ್ತಿ ಪ್ರಕರಣ

ನಿಷ್ಪತ್ತ್ಯವಸ್ಥೆಯಲ್ಲಿ ನಾದವು ಮೊದಮೊದಲು ಜೋರಾಗಿ ಕೇಳಿಸುತ್ತದೆ, ಅನಂತರ ಕಾಲಕ್ರಮದಲ್ಲಿ ಸೂಕ್ಷ್ಮವಾಗುತ್ತಾ ನಡೆಯುತ್ತದೆ. ಈ ಸಮಯದಲ್ಲಿ ಚಿತ್ತವು ಬಾಹ್ಯವಿಷಯಗಳಲ್ಲಿ ಪ್ರವರ್ತಿಸದಂತೆ ನಿರೋಧಿಸಿ ಸ್ಥೂಲವಾದ ಈ ನಾದಗಳಲ್ಲಿ, ಅನಂತರ ಸೂಕ್ಷ್ಮನಾದಗಳಲ್ಲಿ ಕೇಂದ್ರೀಕರಿಸಬೇಕು. ಆಗ ಚಿತ್ತವು ಈ ನಾದಗಳಲ್ಲಿಯೇ ಲಯಿಸಿಹೋಗಿ ಅಲ್ಲಿಯೇ ನಿಂತುಬಿಡುತ್ತದೆ. ಆಗ ಜೇನುಕುಡಿದ ದುಂಬಿಗೆ ಆ ಹೂವಿನ ವಾಸನೆಯಲ್ಲಿ ಹೇಗೆ ಆಸಕ್ತಿಯುಂಟಾಗುವುದಿಲ್ಲವೋ, ಹಾಗೆಯೇ ಬ್ರಹ್ಮಾನಂದವೆಂಬ ಅಮೃತವನ್ನು ಪಾನಮಾಡಿದ ಚಿತ್ತಕ್ಕೆ ವಿಷಯ, ವಾಸನೆಗಳಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ. ಮನಸ್ಸೆಂಬ ಮದಿಸಿದ ಆನೆಯು ವಿಷಯಗಳೆಂಬ ಉದ್ಯಾನವನದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿರುವಾಗ ಅನಾಹತನಾದವೆಂಬ ಅಂಕುಶವು ಮಾತ್ರ ಅದನ್ನು ನಿಶ್ಚಲವಾಗಿ ಮಾಡಬಲ್ಲುದು. ಅಂತಃಕರಣವೆಂಬುದು ನಿಂತಲ್ಲಿ ನಿಲ್ಲದ ಜಿಂಕೆಯಂತೆ. ಘಂಟಾನಾದದಿಂದ ಜಿಂಕೆಯು ನಿಶ್ಚಲವಾಗಿ ನಿಲ್ಲುವಂತೆ ಮಾಡಿ ತನ್ನ ಬಾಣದಿಂದ ಬೇಟೆಗಾರನು ಅದನ್ನು ಕೊಲ್ಲುವಂತೆಯೇ ಯೋಗಿಯು ಸುಷುಮ್ನೆಯ ಮೂಲಕ ಪ್ರಾಣವಾಯುವೆಂಬ ಬಾಣವನ್ನು ಬ್ರಹ್ಮರಂಧ್ರದೆಡೆಗೆ ಗುರಿಯಿಟ್ಟು ಬಿಡುವುದರಿಂದ ಅಂತಃಕರಣವನ್ನು ನಾಶಗೊಳಿಸುತ್ತಾನೆ.

ಈ ವಿಧದ ನಾದಗಳು ಚಿಚ್ಛಕ್ತಿಗಳು. ಚಿತ್ ಮತ್ತು ನಾದ(ಶಕ್ತಿ)ಗಳ ಸಂಯೋಗದಿಂದ ಸ್ವಯಂಪ್ರಕಾಶವಾದ ಚೈತನ್ಯವು ಉಂಟಾಗುತ್ತದೆ. ಆದುದರಿಂದಲೇ ನಾದಬ್ರಹ್ಮವನ್ನು ಶ್ರೀ ಶಾರ್ಙ್ಗದೇವನು ಮೂರನೆಯ ಪ್ರಕರಣದ ಮಂಗಳಾಚರಣೆಯಲ್ಲಿ 'ಚೈತನ್ಯಂ ಸರ್ವಭೂತಾನಾಂ' ಎಂದು ಸ್ತುತಿಸಿ ನಾದಯೋಗದಿಂದ ಬ್ರಹ್ಮಸಾಕ್ಷಾತ್ಕಾರವನ್ನು ವಿವಕ್ಷಿಸಿದ್ದಾನೆ, ಹಾಗೂ 'ಯೋಽಯಂ ಸ್ವಯಂರಾಜತೇ' ಎಂದು ಗ್ರಂಥಾರಂಭದಲ್ಲಿ ನಾದಬ್ರಹ್ಮವನ್ನು ಸ್ತುತಿಸಿದ್ದಾನೆ.

ಮೇಲೆ ಹೇಳಿದ ನಾದಗಳು ಗೋಚರವಾಗುತ್ತಿರುವವರೆಗೂ ಆತ್ಮನು ಶಕ್ತಿಯೊಡನೆ ಸೇರಿರುತ್ತಾನೆ, ಎಂದರೆ ಜಗತ್ತಿನ ವಿವರ್ತತ್ವವು ಉಳಿದಿರುತ್ತದೆ. ನಿಷ್ಪತ್ತ್ಯವಸ್ಥೆಯಲ್ಲಿ ಕೇಳಿಸುವ ನಾದಗಳು ಸೂಕ್ಷ್ಮಾತಿಸೂಕ್ಷ್ಮಗಳಾಗಿ ಕಡೆಯಲ್ಲಿ ನಿಃಶಬ್ದವಾಗಿಬಿಡುತ್ತವೆ. ಈ ನಾದರಹಿತ ಸ್ಥಿತಿಯೇ ಲಯವು ಎಂದರೆ ಬ್ರಾಹ್ಮೀಸ್ಥಿತಿಯು ಸಿದ್ಧಿಸುವುದು.

ಈ ಬಗೆಯ ನಾದಯೋಗವು ಪ್ರಾಣಾಯಾಮಕ್ರಮದಿಂದ ಸಮಾಧಿಸ್ಥಿತಿಯಲ್ಲಿ ಸಿದ್ಧಿಸುವಂತಹುದು. ಹಠಯೋಗಪ್ರದೀಪಿಕೆಯಲ್ಲಿ ಸ್ವಾತ್ಮಾರಾಮಯೋಗಿಯು ಭ್ರೂಮಧ್ಯಪ್ರದೇಶದ ಧ್ಯಾನದಿಂದ ತುರೀಯಾವಸ್ಥೆಯಾದ ಉನ್ಮನೀಸ್ಥಿತಿಯನ್ನು ನಾದಯೋಗದಿಂದ ಎಲ್ಲರೂ ಸುಲಭವಾಗಿ ಸಾಧಿಸಬಹುದೆಂದು ಅಭಿಪ್ರಾಯ ಪಡುತ್ತಾನೆ.

ಸಮಾಧಿಯೋಗವು ಧ್ಯಾನ, ನಾದ, ರಸಾನಂದ, ಲಯಸಿದ್ಧಿ, ಭಕ್ತಿ ಮತ್ತು ರಾಜ ಎಂಬ ಆರು ಬಗೆಯೆಂದು ಘೇರಂಡಸಹಿತೆಯ ಏಳನೆಯ ಉಪದೇಶದಲ್ಲಿ ಹೇಳಿದೆ. ಇದರಲ್ಲಿ ನಾದಯೋಗವನ್ನು ಖೇಚರೀ ಮುದ್ರೆಯಿಂದ ಸಾಧಿಸಬೇಕು. ಈ ಮುದ್ರೆಯಲ್ಲಿ ನಾಲಿಗೆಯನ್ನು ದೀರ್ಘಗೊಳಿಸಿ ಹುಬ್ಬುಗಳ ನಡುವೆ ಇರುವ ಸ್ಥಾನವನ್ನು ಮುಟ್ಟುವಂತೆ ಮಾಡಬೇಕು. ಆಮೇಲೆ ಅದನ್ನು ಹಿಂತಿರುಗಿಸಿ ಬಾಯಲ್ಲಿ ತೆಗೆದುಕೊಂಡಾಗ ಪ್ರಾಣಾಯಾಮದಿಂದ ವಾಯುನಿರೋಧವೂ ಅದರಿಂದ ಚಿತ್ತವೃತ್ತಿ ನಿರೋಧವೂ ಆಗಿ ಸುಷುಮ್ನೆಯಲ್ಲಿ ಪ್ರಾಣವಾಯುವು ಊರ್ಧ್ವಮುಖವಾಗಿ ಚಲಿಸತೊಡಗುತ್ತದೆ. ಈ ಕ್ರಮದಲ್ಲಿಯೂ ವಿವಿಧ ನಾದಗಳು ಗೋಚರವಾಗುತ್ತವೆ.

ಯೋಗಾಂಗವಾದ ಪ್ರಾಣಾಯಾಮದಿಂದ ನಾದಯೋಗವನ್ನು ಸಾಧಿಸುವಂತೆಯೇ ಮತ್ತೊಂದು ಯೋಗಾಂಗವಾದ ಪ್ರತ್ಯಾಹಾರದಿಂದಲೂ ಸಾಧಿಸಬಹುದು. ಪ್ರಾಣಾಯಾಮವೆನ್ನುವುದು ಚಿತ್ತದ ಚಾಂಚಲ್ಯಕ್ಕೆ ಕಾರಣವಾಗಿರುವ ವಾಯುವನ್ನು ನಿರೋಧಿಸುವುದು. ಪ್ರತ್ಯಾಹಾರವೆಂದರೆ ವಿಷಯಗಳಿಂದ ಇಂದ್ರಿಯಗಳನ್ನು

ವಿಮುಖವಾಗಿಸುವುದು, ಇರುವುದೆಲ್ಲವೂ ಬ್ರಹ್ಮವೇ ಎಂದು ತಿಳಿದುಕೊಳ್ಳುವುದು, ನಿತ್ಯಕರ್ಮಗಳ ಫಲದಿಂದ ನಿವೃತ್ತನಾಗುವುದು, ಎಂದು ಮುಂತಾಗಿ ಅರ್ಥಗಳಿವೆ

. ಪ್ರತ್ಯಾಹಾರದಲ್ಲಿ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು ಚಿತ್ತವನ್ನು ಸ್ಥಿರಗೊಳಿಸಿ ದೇಹದಲ್ಲಿ ವಿವಿಧ ನಾದಗಳನ್ನು ಕೇಳುವುದರಿಂದ ನಾದಯೋಗವನ್ನು ಸಾಧಿಸಬೇಕು. ಹೀಗೆ ಕೇಳಿಸಿದ ಅನಾಹತನಾದವು ಬಾಹ್ಯ ಪ್ರಪಂಚದಲ್ಲಿರುವ ಆಹತನಾದವನ್ನು ಆವರಿಸಿಬಿಡುತ್ತದೆ; ಕೇವಲ ಹದಿನೈದುದಿವಸಗಳ ಅಭ್ಯಾಸದಿಂದ ಯೋಗಿಯು ಎಲ್ಲಾ ಚಿತ್ತಚಾಂಚಲ್ಯವನ್ನು ಜಯಿಸಿ ತುರೀಯಾವಸ್ಥೆಯನ್ನು ಪಡೆಯುತ್ತಾನೆ. ಹೀಗೆ ಪ್ರಥಮಾ-ಭ್ಯಾಸ ಕಾಲದಲ್ಲಿ ಅನೇಕ ನಾದಗಳು ಮಹತ್ತಾಗಿ ಎಂದರೆ ಬಹು ಸ್ಥೂಲವಾಗಿ ಗೋಚರಿಸುತ್ತವೆ; ನಂತರ ಅಭ್ಯಾಸವು ವೃದ್ಧಿಯಾದಂತೆಲ್ಲ ಸೂಕ್ಷ್ಮವಾಗುತ್ತಾಬಂದು ಕಡೆಯಲ್ಲಿ ಅತ್ಯಂತ ಸೂಕ್ಷ್ಮವಾಗಿಬಿಡುತ್ತವೆ. ಅಭ್ಯಾಸದ ಮೊದಲಿನಲ್ಲಿ ಸಮುದ್ರ, ಮೇಘ, ಭೇರಿ, ಝುರ್ಝರ, ಇವುಗಳ ಮಹತ್ತಾದ ನಾದವೂ, ಅಭ್ಯಾಸದ ಮಧ್ಯದಲ್ಲಿ ಇವುಗಳಿಗಿಂತ ಅಲ್ಪವಾದ ಗೋಚರವುಳ್ಳ ಮದ್ದಲೆ, ಶಂಖ, ಘಂಟೆ, ಕಹಳೆ ಇವುಗಳ ನಾದಗಳೂ, ಸಿದ್ಧಿಯಾಗುವ ಕಾಲವು ಸಮಾಪಿಸಿದಂತೆಲ್ಲ ಗೆಜ್ಜೆ, ಕೊಳಲು, ವೀಣೆ, ದುಂಬಿಯ ಝೇಂಕಾರ ಹೀಗೆ ಬಹು ಸೂಕ್ಷ್ಮಗೋಚರವಾದ ನಾದಗಳೂ ಯೋಗಿಗೆ ನಾಭಿಸ್ಥಾನದಲ್ಲಿ ಕೇಳಿಸುತ್ತವೆ.

ದೇಹದ ಯಾವ ಯಾವ ಭಾಗದಲ್ಲಿ ಯಾವ ಶಬ್ದವು ಕೇಳಿಸುವುದೋ ಅಲ್ಲಲ್ಲಿ ಮನಸ್ಸನ್ನು ನಿಲ್ಲಿಸಿ ಕೇಳುವ ಅಭ್ಯಾಸಮಾಡಬೇಕು, ಹಾಗೂ ಅದರಲ್ಲೇ ಮನಸ್ಸನ್ನು ಕರಗಿಸಿಬಿಡಬೇಕು. ಬಾಹ್ಯಪ್ರಪಂಚವನ್ನೆಲ್ಲ ಮರೆತು ಈ ನಾದಸುಧಾಂಬುಧಿಯಲ್ಲೇ ಅವನು ಮುಳುಗಿದರೆ ಉನ್ಮನೀ ಸ್ಥಿತಿಯನ್ನು ಪಡೆಯುತ್ತಾನೆ. ಇದೇ ವಿಷಯವನ್ನು ನಾದಬಿಂದೂಪನಿಷತ್ತು ಈ ಮಾತುಗಳಲ್ಲಿ ವರ್ಣಿಸಿದೆ[374] :

ಶ್ರೂಯತೇ ಪ್ರಥಮಾಭ್ಯಾಸೇ ನಾದೋ ನಾನಾವಿಧೋ ಮಹಾನ್ ।
ವರ್ಧಮಾನಸ್ತಥಾಭ್ಯಾಸೇ ಶ್ರೂಯತೇ ಸೂಕ್ಷ್ಮಸೂಕ್ಷ್ಮತಃ ।
ಆದೌ ಜಲಧಿಜೀಮೂತಭೇರೀನಿರ್ಝರಸಂಭವಃ ।
ಮಧ್ಯೇ ಮರ್ದಳಶಬ್ದಾಭೋ ಘಂಟಾಕಾಹಳಜಸ್ತಥಾ ।
ಅಂತೇ ತು ಕಿಂಕಿಣೀವಂಶವೀಣಾಭ್ರಮರನಿಸ್ವನಃ ।
ಇತಿ ನಾನಾವಿಧಾ ನಾದಾಃ ಶ್ರೂಯಂತೇ ಸೂಕ್ಷ್ಮಸೂಕ್ಷ್ಮತಃ ।
ಮಹತಿ ಶ್ರೂಯಮಾಣೇ ತು ಮಹಾಭೇರ್ಯಾದಿಕಧ್ವನೌ ।
ತತ್ರ ಸೂಕ್ಷ್ಮಂ ಸೂಕ್ಷ್ಮತರಂ ನಾದಮೇವ ಪರಾಮೃಶೇತ್ ।
ಘನಮುತ್ಸೃಜ್ಯ ವಾ ಸೂಕ್ಷ್ಮೇ ಸೂಕ್ಷ್ಮಮುತ್ಸೃಜ್ಯ ವಾ ಘನೇ ।
ರಮಮಾಣಮಪಿ ಕ್ಷಿಪ್ತಂ ಮನೋ ನಾನ್ಯತ್ರ ಚಾಲಯೇತ್ ।
ಯತ್ರಕುತ್ರಾಪಿ ವಾ ನಾದೇ ಲಗತಿ ಪ್ರಥಮಂ ಮನಃ ।
ತತ್ರ ತತ್ರ ಸ್ಥಿರೀ ಭೂತ್ವಾ ತೇನ ಸಾರ್ಧಂ ವಿಲೀಯತೇ ।[375]

374 ನಾದಬಿಂದೂಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 336-337.

375 ಹಠಯೋಗಪ್ರದೀಪಿಕೆ (IV, 84-89, ಪು. 156-157) ಯಲ್ಲಿ ಈ ಶ್ಲೋಕಗಳ ಶುದ್ಧಪಾಠವು ಹೀಗೆ ದೊರೆಯುತ್ತದೆ. ಇದರಲ್ಲಿ ಆಕರಸ್ಮರಣೆಯಿಲ್ಲವಾದುದರಿಂದ ನಾದಬಿಂದೂಪನಿಷತ್ತೇ ಇದಕ್ಕೆ ಮೂಲವೋ ಅಲ್ಲವೋ ಎಂದು ಹೇಳಲಾಗುವುದಿಲ್ಲ :

2, ಪಿಂಡೋತ್ಪತ್ತಿ ಪ್ರಕರಣ

ಇದೇ ರೀತಿಯಲ್ಲಿ ಇನ್ನೊಂದು ಯೋಗಾಂಗವಾದ ಧಾರಣದಿಂದಲೂ ನಾದಯೋಗವನ್ನು ಸಾಧಿಸಬಹುದು. ಆತ್ಮದಲ್ಲಿ ಇಂದ್ರಿಯಗಳನ್ನೂ ಮನಸ್ಸನ್ನೂ ಲಯಗೊಳಿಸುವುದಕ್ಕೆ ಧಾರಣವೆಂದು ಸಂಜ್ಞೆ. ಇಂದ್ರಿಯಾದಿಗಳು ಹೀಗೆ ಲಯಿಸಿಹೋದಾಗ ಮನಸ್ಸಿಗೆ ರೆಕ್ಕೆಗಳು ಕತ್ತರಿಸಿಹೋಗಿರುವ ಪಕ್ಷಿಯಂತೆ ನಿಶ್ಚಲತೆಯು ಲಭಿಸುತ್ತದೆ. ಈ ಸ್ಥಿತಿಯಲ್ಲಿಯೂ ವಿವಿಧ ನಾದಗಳ ಅನುಸಂಧಾನದಿಂದ ತುರೀಯಾವಸ್ಥೆಯು ಲಭಿಸುತ್ತದೆ.

ಬದ್ಧಂ ತು ನಾದಬಂಧೇನ ಮನಃ ಸಂತ್ಯಕ್ತ ಚಾಪಲಮ್ ।
ಪ್ರಯಾತಿ ಸುತರಾಂ ಸ್ಥೈರ್ಯಂ ಛಿನ್ನಪಕ್ಷಃ ಖಗೋ ಯಥಾ ॥[376]

ಎಂದು ಹಠಯೋಗಪ್ರದೀಪಿಕೆಯು ಈ ವಿಧಧ ನಾದಯೋಗವನ್ನು ಬಣ್ಣಿಸುತ್ತದೆ. ಕಡೆಯದಾಗಿ ಧ್ಯಾನ ದಿಂದಲೂ ನಾದಯೋಗವು ಸಾಧ್ಯವೆಂಬುದನ್ನು ಅದೇ ಗ್ರಂಥವು ಹೀಗೆ ಹೇಳುತ್ತದೆ :

ಸರ್ವಚಿಂತಾಂ ಪರಿತ್ಯಜ್ಯ ಸಾವಧಾನೇನ ಚೇತಸಾ ।
ನಾದ ಏವಾನುಸಂಧೇಯೋ ಯೋಗಸಾಮ್ರಾಜ್ಯಮಿಚ್ಛತಾ ॥ [377]

ಎಲ್ಲಾ ಚಿಂತೆಗಳನ್ನೂ ಮನಸ್ಸಿನಿಂದ ದೂರಮಾಡಿ ಪ್ರಜ್ಞೆಯನ್ನೆಲ್ಲ ರಾಶಿಮಾಡಿ, ಎಂದರೆ ಏಕಾಗ್ರಮನಸ್ಸಿ ನಿಂದ ನಾದವನ್ನೇ ಅನುಸಂಧಾನಮಾಡಿದರೆ ಈ ಯೋಗವು ಸಿದ್ಧಿಸುವುದು.

ಶ್ರೀ ಶಾರ್ಙ್ಗದೇವನ 'ತಸ್ಮಾದತ್ರಸುಖೋಪಾಯಂ ಶ್ರೀಮನ್ನಾದಮನಾಹತಮ್' ಎಂಬ ಮಾತಿನಿಂದ ನಾದಯೋಗದಲ್ಲಿ ದೊರೆಯುವ ಅನಿರ್ವಚನೀಯ ಸುಖವನ್ನು, ಎಂದರೆ ಬ್ರಹ್ಮಾನಂದವನ್ನು, ಸ್ಮರಿಸುತ್ತಾ ಈ ಯೋಗಮಾರ್ಗವಿಧದ ವರ್ಣನೆಯನ್ನು ಮುಗಿಸಬಹುದು.

ನಾದಾನುಸಂಧಾನಸಮಾಧಿಭಾಜಾಂ ಯೋಗೀಶ್ವರಾಣಾಂ ಹೃದಿವರ್ಧಮಾನಮ್ ।
ಆನಂದಮೇಕಂ ವಚಸಾಽಧಿಗಮ್ಯಂ ಜಾನಾತಿ ತಂ ಶ್ರೀ ಗುರುನಾಥಏಕಃ ॥ [378]

---

ಶ್ರೂಯತೇ ಪ್ರಥಮಾಭ್ಯಾಸೇ ನಾದೋ ನಾನಾವಿಧೋ ಮಹಾನ್ ।
ತತೋಽಭ್ಯಾಸೇ ವರ್ಧಮಾನೇ ಶ್ರೂಯತೇ ಸೂಕ್ಷ್ಮಸೂಕ್ಷ್ಮಕಃ ॥
ಆದೌ ಜಲಧಿಜೀಮೂತಭೇರೀಝರ್ಝರಸಂಭವಾಃ ।
ಮಧ್ಯೇ ಮರ್ದಲಶಂಖೋತ್ಥಾ ಘಂಟಾಕಾಹಳಜಸ್ತಥಾ ॥
ಅಂತೇ ತು ಕಿಂಕಿಣೀವಂಶವೀಣಾಭ್ರಮರನಿಸ್ವನಾಃ ।
ಇತಿ ನಾನಾವಿಧಾ ನಾದಾಃ ಶ್ರೂಯಂತೇ ದೇಹಮಧ್ಯಗಾಃ ॥
ಮಹತಿ ಶ್ರೂಯಮಾಣೋಽಪಿ ಮೇಘಭೇರ್ಯಾದಿಕೇ ಧ್ವನೌ ।
ತತ್ರ ಸೂಕ್ಷ್ಮಾತ್ ಸೂಕ್ಷ್ಮತರಂ ನಾದಮೇವ ಪರಾಮೃಶೇತ್ ॥
ಘನಮುತ್ಸೃಜ್ಯ ವಾ ಸೂಕ್ಷ್ಮೇ ಸೂಕ್ಷ್ಮಮುತ್ಸೃಜ್ಯ ವಾ ಘನೇ ।
ರಮಮಾಣಮಪಿ ಕ್ಷಿಪ್ತಂ ಮನೋ ನಾನ್ಯತ್ರ ಚಾಲಯೇತ್ ॥
ಯತ್ರ ಕುತ್ರಾಪಿ ವಾ ನಾದೇ ಲಗತಿ ಪ್ರಥಮಂ ಮನಃ ।
ತತ್ರೈವ ಸುಸ್ಥಿರೀಭೂಯ ತೇನ ಸಾರ್ಧಂ ವಿಲೀಯತೇ ॥

376 ಸ್ವಾತ್ಮಾರಾಮಯೋಗಿ, ಉ. ಗ್ರಂ., IV, 92, ಪು. 159.
377 ಅದೇ ಗ್ರಂಥ, IV, 93, ಪು. 161.
378 ಅದೇ ಗ್ರಂಥ, IV, 81, ಪು. 155.

## 2. ಪಿಂಡೋತ್ಪತ್ತಿ ಪ್ರಕರಣ

ನಾದಯೋಗದಲ್ಲಿ ಅಂತರ್ಗೋಚರವಾಗುವ ವಿವಿಧ ನಾದಗಳನ್ನು ಕೆಲವು ಗ್ರಂಥಗಳು ಅಲ್ಲಲ್ಲಿ ಬೇರೆಬೇರೆಯಾಗಿ ಹೇಳುತ್ತವೆ. ಹೀಗೆ ನಿಜಗುಣನು ವಿವೇಕಚಿಂತಾಮಣಿಯಲ್ಲಿ

ಮತ್ತಮಾ ಓಂಕಾರವೆಂಬ ನಾದದಿಂ ಸ್ವರನಿರ್ಘೋಷ, ನಿರ್ಣಯ (? ನಿರ್ಝರ) ಧ್ವನಿ, ಘಂಟಾಧ್ವನಿ, ಕಾಹಳಧ್ವನಿ, ಶಂಖಧ್ವನಿ, ಮೇಘಧ್ವನಿ, ಮೃದಂಗಧ್ವನಿ, ಭೇರೀಧ್ವನಿ, ಮಂತ್ರ(?)ಧ್ವನಿ, ಅವ್ಯಕ್ತಪ್ರಣವ ಧ್ವನಿಯೆಂಬ ದಶವಿಧ ನಾದಂಗಳಾದವು . . . .[379] ಎನ್ನುತ್ತಾನೆ.

ಸ್ವಚ್ಛಂದತಂತ್ರವು ಯೋಗಿಧ್ಯಾನಗವ್ಯವಾದ ನವವಿಧ ನಾದಗಳನ್ನು ಬೇರೆಯಾಗಿ ಘೋಷ, ರಾವ, ಸ್ವನ, ಶಬ್ದ, ಸ್ಫೋಟ, ಧ್ವನಿ, ಝುಂಕಾರ, ಧಂಕಾರ ಮತ್ತು ಮಹಾಶಬ್ದ ಎಂಬವುಗಳನ್ನು ಹೇಳುತ್ತದೆ.[380]

ಹಂಸೋಪನಿಷತ್ತಿನಲ್ಲಿ ಇವುಗಳನ್ನು ಹೀಗೆ ವರ್ಣಿಸಿದೆ :

ಏವಂ ಹಂಸವಶಾತ್ ತಸ್ಮಾನ್ಮನೋವಿಚಾರ್ಯ ತಸ್ಯೈವ ಜಪಕೋಟ್ಯಾ ನಾದಮನುಭವತಿ—ಸ ಚ ದಶವಿಧ ಉಪಜಾಯತೇ—ಚಿಣಿತಿ ಪ್ರಥಮಃ—ಚಿಣಿಚಿಣಿತಿ ದ್ವಿತೀಯಃ—ಘಂಟಾನಾದಸ್ತೃತೀಯಃ—ಶಂಖಾನಾದಶ್ಚತುರ್ಥಃ—ಪಂಚಮಸ್ತಂತ್ರೀನಾದಃ—ಷಷ್ಠಸ್ತಾಳನಾದಃ—ಸಪ್ತಮೋ ವೇಣುನಾದಃ—ಅಷ್ಟಮೋ ಭೇರೀನಾದಃ—ನವಮೋ ಮೃದಂಗನಾದಃ—ದಶಮೋ ಮೇಘನಾದಃ—ನವಮಂ ಪರಿತ್ಯಜ್ಯ ದಶಮೋ ವಾಭ್ಯಸೇತ್ । ಪ್ರಥಮೇ ಚಿಂಚಿಣಿ ಗಾತ್ರಂ ದ್ವಿತೀಯೇ ಗಾತ್ರಭಂಜನಂ । ತೃತೀಯೇ ಭೇದನಂ ಯಾತಿ ಚತುರ್ಥೇ ಕಂಪತೇ ಶಿರಃ । ಪಂಚಮೇ ಸ್ರವತಿ ತಾಲೂ ಷಷ್ಠೇಽಮೃತನಿಷೇವಣಂ । ಸಪ್ತಮೇ ಗೂಢವಿಜ್ಞಾನಂ ಪರಾವಾಚಾ ತಥಾಷ್ಟಮೇ । ಅದೃಶಂ ನವಮೇ ದೇಹಂ ದಿವ್ಯಂ ಚಕ್ಷುಸ್ತಥಾಮಲಂ । ದಶಮಂ ಚ ಪರಂಬ್ರಹ್ಮ ಭವೇದ್ ಬ್ರಹ್ಮಾತ್ಮಸನ್ನಿಧೌ ॥[381]

ಮುದ್ದುಸ್ವಾಮಿದೀಕ್ಷಿತನು ಆದಿಶಕ್ತಿಸ್ವರೂಪಿಣಿಯಾದ ಕಾಮಾಕ್ಷಿಯನ್ನು ಕುರಿತು 'ನವನಾದಾಂತಃಕರಣೇ' ಎಂದು ಹೇಳಿರುವುದೂ ಬಹುಶಃ ಈ ಭಾವದಲ್ಲಿಯೇ.[382] ಸುಬ್ಬರಾಮದೀಕ್ಷಿತನು 'ನವನಾಥಾಂತಃಕರಣೇ' ಎಂದು ಕೊಡುವ ಪಾಠಾಂತರವು[383] ಗೋರಕ್ಷಾದಿ ನವನಾಥರ ಅಂತಃಕರಣ ಸ್ವರೂಪಿಣಿ ಎಂಬ ಅರ್ಥದಲ್ಲಿ ಗ್ರಾಹ್ಯವಾದರೂ ನಾಥಪಂಥದ ಯೋಗಮಾರ್ಗವು ಇಲ್ಲಿ ವಿವಕ್ಷಿತವೇ ಎಂಬುದು ಸಂದೇಹಾಸ್ಪದವಾಗಿದೆ.

**ತಸ್ಮಾದಾಹತನಾದಸ್ಯ[82] ಶ್ರುತ್ಯಾದಿದ್ವಾರತೋಽಖಿಲಮ್ ।**
**ಗೇಯಂ ವಿತನ್ವತೋ ಲೋಕರಂಜನಂ ಭವಭಂಜನಮ್ ॥ 167 ॥** 216
**ಉತ್ಪತ್ತಿಮಭಿಧಾಸ್ಯಾಮಸ್ತಥಾ[83] ಶ್ರುತ್ಯಾದಿ ಹೇತುತಾಮ್ ।**

ಆದುದರಿಂದ ಶ್ರುತಿ ಮೊದಲಾದವುಗಳ ಮೂಲಕ ಎಲ್ಲಾ ಗೇಯತೆ (ಗೀತವಾದ್ಯ) ಯನ್ನು ಸೃಷ್ಟಿಮಾಡುವ, ಸಾಮಾನ್ಯ ಜನರಿಗೂ ರಂಜನೆಯನ್ನುಂಟುಮಾಡುವ, ಸಂಸಾರ ದುಃಖಗಳನ್ನು

82 ಕ : ನಾದಸ್ಥಂ. 83 ಕ :– ಸ್ಯಾಮಿ ತಥಾ.

379 ನಿಜಗುಣಶಿವಯೋಗಿ, ವಿವೇಕಚಿಂತಾಮಣಿ, ಪ್ರಕರಣ IV, ಪು. 401-402.

380 ಸ್ವಚ್ಛಂದತಂತ್ರ, XI, 5, 8.

381 ಹಂಸೋಪನಿಷತ್ತು, ಅಷ್ಟೋತ್ತರಶತ ಉಪನಿಷತ್, ಪು. 200.

382 ಮುದ್ದುಸ್ವಾಮಿದೀಕ್ಷಿತ, ಹಿಂದೋಳರಾಗದ, ರೂಪಕತಾಳದ ನೀರಜಾಕ್ಷಿ ಕಾಮಾಕ್ಷಿ ಎಂಬ ಕೃತಿ.

383 ಸುಬ್ಬರಾಮದೀಕ್ಷಿತ, ಸಂಗೀತಸಂಪ್ರದಾಯಪ್ರದರ್ಶಿನೀ, ಭಾಗ I, ಪು. 405.

## 2. ಪಿಂಡೋತ್ಪತ್ತಿ ಪ್ರಕರಣ

ನಾಶಮಾಡುವ ಆಹತನಾದದ ಉತ್ಪತ್ತಿಯನ್ನೂ ಹಾಗೆಯೇ ಶ್ರುತಿ ಮೊದಲಾದವುಗಳಿಗೆ ಅದು ಕಾರಣವಾಗಿರುವುದನ್ನೂ ವರ್ಣಿಸುತ್ತೇವೆ.

ಧರ್ಮಾರ್ಥ ಕಾಮಗಳೆಂಬ ತ್ರಿವರ್ಗವನ್ನೂ ಮೋಕ್ಷವೆಂಬ ಅಪವರ್ಗವನ್ನೂ ಸಾಧಿಸುವುದು ಮಾನವ ಜೀವಿತದ ಧ್ಯೇಯವೆಂದು ಸನಾತನ ಧರ್ಮವು ಹೇಳುತ್ತದೆ. ಇದರ ಸಾಧನೆಗೆ ಸಗುಣ, ಬ್ರಹ್ಮ, ನಿರ್ಗುಣಬ್ರಹ್ಮ ಅಥವಾ ಅನಾಹತ ನಾದದ ಉಪಾಸನೆಗಳು ಉಪಾಯಗಳು. ಆದರೆ ಇವು ಕಷ್ಟಸಾಧ್ಯಗಳಾದುದರಿಂದಲೂ ರಕ್ತಿ ಹೀನವಾದುದರಿಂದಲೂ ಎಲ್ಲರಿಗೂ ಸುಲಭಸಾಧ್ಯವಲ್ಲ. ಸಾಮಾನ್ಯರಿಗೂ ಸಹ ಸುಲಭಸಾಧ್ಯವೂ, ಆಕರ್ಷಕವೂ, ಪ್ರಿಯವೂ ಆದ ಆಹತನಾದದಿಂದಲೇ ಇದನ್ನು ಸಾಧಿಸಬಹುದು. ಆದುದರಿಂದಲೇ 'ಧರ್ಮಾರ್ಥಕಾಮಮೋಕ್ಷಣಾಮಿದಮೇವೈಕ ಸಾಧನಮ್' ಎಂದು ಸಂಗೀತವನ್ನು ಲಕ್ಷಿಸಿದ ಶ್ರೀ ಶಾರ್ಙ್ಗದೇವನು ಈ ಆಹತನಾದವೇ ಶ್ರುತಿ, ಸ್ವರ, ಅಲಂಕಾರ, ವರ್ಣ, ತಾನ, ಮೂರ್ಛನೆ, ಗ್ರಾಮ, ಜಾತಿಗಳಾಗಿ ವಿಕಾಸಪಡೆದು ಆಗುವ ಸಂಗೀತವನ್ನು ವರ್ಣಿಸತೊಡಗಿದ್ದಾನೆ. ಹೀಗೆ ಈ ಪ್ರಕರಣವು ಪ್ರತಿಜ್ಞೆಯನ್ನೂ ಪ್ರಯೋಜನವನ್ನೂ ಒಳಗೊಂಡಿದೆ.

ಈ ಪ್ರಕರಣದ ಅಂತ್ಯಶ್ಲೋಕದ ಅಂತಿಮ ಚರಣವಾದ 'ಉತ್ಪತ್ತಿಮಭಿಧಾಸ್ಯಾಮಸ್ತಥಾ ಶ್ರುತ್ಯಾದಿ ಹೇತುತಾಮ್' ಎಂಬ ಮಾತು ಮುಂದಿನ ಪ್ರಕರಣವು ನಿರೂಪಿಸುವ ವಿಷಯಗಳ ಪರಿವಿಡಿಯನ್ನು ಬೀಜರೂಪದಲ್ಲಿ ಒಳಗೊಂಡಿದೆ: ಮೂರನೆಯ ಪ್ರಕರಣದಲ್ಲಿ ಮೊದಲನೆಯ ಶ್ಲೋಕವು ನಾದಬ್ರಹ್ಮವನ್ನೂ ಎರಡನೆಯದು ಅದರ ಸಗುಣಪ್ರತೀಕಗಳಾದ ತ್ರಿಮೂರ್ತಿಗಳನ್ನೂ ನಾದಬ್ರಹ್ಮೋಪಾಸನೆಯನ್ನೂ ಇಷ್ಟದೇವತಾ ವಂದನಾಸ್ವರೂಪದಲ್ಲಿ ಹೇಳುತ್ತವೆ. ತತ್‌ಕ್ಷಣವೇ 3-7 ಶ್ಲೋಕಗಳು ನಾದೋತ್ಪತ್ತಿ, ನಾದವಿಧಗಳನ್ನೂ, 8-22 ಶ್ಲೋಕಗಳು ತಜ್ಜನ್ಯವಾದ ಶ್ರುತಿಗಳನ್ನೂ ಪ್ರಕರಣದ ಉಳಿದ ಭಾಗವು (23-59) ಶ್ರುತಿಜನ್ಯಗಳಾದ ಸ್ವರಗಳನ್ನೂ ಹೇಳುವುವು.

ಸ್ವರದಿಂದ ಗ್ರಾಮ, ಗ್ರಾಮದಿಂದ ಮೂರ್ಛನೆ, ಮೂರ್ಛನೆಯಿಂದ ಕ್ರಮ, ಇವುಗಳಿಂದ ತಾನ; ಈ ವಿಷಯಗಳನ್ನು ಇದೇ ಕ್ರಮದಲ್ಲಿ ನಾಲ್ಕನೆಯ ಪ್ರಕರಣವು ಹೇಳುತ್ತದೆ. ಲಕ್ಷ್ಯಪ್ರಸಿದ್ಧಪ್ರಯೋಗಗಳನ್ನು ಇವುಗಳಿಂದ ಶಾಸ್ತ್ರೀಯವಾಗಿ ಪಡೆಯಲು ಬೇಕಾದ ಸಾಧಾರಣವೆಂಬ ಪ್ರಕ್ರಿಯೆಯು ಐದನೆಯ ಪ್ರಕರಣದ ವಸ್ತು. ಈ ಎಲ್ಲಾ ತತ್ತ್ವಗಳೂ ತಮ್ಮ ಸಮಷ್ಟಿಸಾಮಾನ್ಯಸ್ವರೂಪದಲ್ಲಿ ಗಾನಪ್ರಪಂಚಸರ್ವಸ್ವದಲ್ಲಿ ಗೋಚರಿಸುವುದು ವರ್ಣಾಲಂಕಾರಗಳಲ್ಲಿ ಇವನ್ನು ಆರನೆಯ ಪ್ರಕರಣದಲ್ಲಿ ಹೇಳಿದೆ. ವರ್ಣಾಲಂಕಾರಗಳೂ, ಇತರ ಶಾಸ್ತ್ರೀಯ ಪ್ರಮೇಯಗಳೂ ಗಾನವ್ಯವಹಾರದಲ್ಲಿ ಸುವ್ಯವ್ಯವಸ್ಥಿತವಾಗಿ ಏರ್ಪಟ್ಟಿರುವುದು ಗೀತವಿಶ್ಲೇಷಣಾಪ್ರಯೋಜಕಗಳೂ ಗಾನದ ಸಾಮಾನ್ಯಸ್ವರೂಪಗಳೂ ಆದ ಜಾತಿ, ಕಪಾಲ-ಕಂಬಲಗಳಲ್ಲಿ. ಆದುದರಿಂದ ಇವುಗಳನ್ನು ಕ್ರಮವಾಗಿ ಏಳು, ಎಂಟನೆಯ ಪ್ರಕರಣಗಳಲ್ಲಿ ಹೇಳಿದೆ. ಇವು ಬ್ರಹ್ಮಾದಿಗಳು ಸೃಷ್ಟಿಸಿದ ಶಿವಸ್ತುತಿಗಳೂ ಹೌದು. ಇದರಿಂದಲೇ ಇವುಗಳ ವರ್ಣನೆಗೆ ಆದ್ಯತೆ. ಮಾರ್ಗ, ದೇಶೀ ಎಂಬ ಸಂಗೀತದ ಎರಡು ಪ್ರಕಾರಗಳಲ್ಲಿ ಮಾರ್ಗ ಎಂಬುದೇ ಪ್ರಾಚೀನಗೌರವಿತ ಅಧುನಾಪ್ರಸಿದ್ಧಿಯಿಲ್ಲದ ವಸ್ತುಕೋಶವೂ ಹೌದು. ಮಾರ್ಗಸಂಗೀತದಲ್ಲಿಯೇ ಗ್ರಾಮ ಮೊದಲಾದ ಪ್ರಮೇಯಗಳ ಗೋಚರ. ಆದುದರಿಂದಲೇ ಅದನ್ನು ಮೊದಲು ಮುಗಿಸಿ ಗ್ರಂಥದ ಮುಖ್ಯ ಪ್ರಯೋಜನವೂ, ಪ್ರತಿಜ್ಞೆಯೂ ಆದ ದೇಶೀಸಂಗೀತದ ವರ್ಣನೆ. ಹೀಗಾಗಿ ರಾಗಪ್ರಬಂಧಾದಿಗಳ ವರ್ಣನೆ ಮುಂದಿನ ಅಧ್ಯಾಯಗಳಲ್ಲಿ.

ಆದುದರಿಂದ ಈ ಪಙ್ಕ್ತಿಯು ಇಡೀ ಅಧ್ಯಾಯದ ಬೀಜವೂ ಹೌದು.

**ಪಿಂಡೋತ್ಪತ್ತಿಪ್ರಕರಣವು ಮುಗಿಯಿತು.**

# ಮೂರನೆಯ
# ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ನಾದಬ್ರಹ್ಮಕ್ಕೆ ವಂದನೆ

**ಚೈತನ್ಯಂ ಸರ್ವಭೂತಾನಾಂ ವಿವೃತ್ತಂ[1] ಜಗದಾತ್ಮನಾ ।**
**ನಾದಬ್ರಹ್ಮ ತದಾನಂದಂ ಅದ್ವಿತೀಯಮುಪಾಸ್ಮಹೇ ॥ 1 ॥** 217

ಎಲ್ಲ ಭೂತಗಳ ಚೈತನ್ಯವೂ ಜಗತ್ತನ್ನೇ ತನ್ನ ಪ್ರಕಟ ಸ್ವರೂಪವಾಗಿ ಉಳ್ಳದ್ದೂ ಆನಂದವೂ ಸಾಟಿಯಿಲ್ಲದುದೂ ಆಗಿರುವ ನಾದಬ್ರಹ್ಮವನ್ನು ಉಪಾಸಿಸುತ್ತೇವೆ.

ಹಿಂದಿನ ಪ್ರಕರಣದ ಅಂತ್ಯದಲ್ಲಿ ಧರ್ಮಾರ್ಥಕಾಮಮೋಕ್ಷಗಳ ಸಾಧನೆಗೆ ಸಾಮಾನ್ಯಮನುಷ್ಯರಿಗೂ ಸಹ ಮನೋರಂಜಕವೂ ಸುಲಭವೂ ಆದ ಉಪಾಯವಾಗಿರುವ ಆಹತನಾದವನ್ನು ಹೇಳುವುದಾಗಿ ಶಾರ್ಙ್ಗದೇವನು ಪ್ರತಿಜ್ಞೆಮಾಡಿದ್ದನಷ್ಟೆ. ಈಗ ಅಂತಹ ನಾದವನ್ನು ಈ ಮಂಗಳಶ್ಲೋಕದಲ್ಲಿ ಶುಭವುಂಟಾಗಲೆಂದು ವಂದಿಸಿ ವರ್ಣನೆಗೆ ತೊಡಗುತ್ತಾನೆ. ಈ ಶ್ಲೋಕವು ಬ್ರಹ್ಮಪರವಾಗಿಯೂ ಆಹತನಾದಪರವಾಗಿಯೂ ಶ್ಲೇಷಾಲಂಕಾರವನ್ನೊಳಗೊಂಡಿದೆ. ಜಗತ್ತಿನಲ್ಲಿ ಎಲ್ಲ ಪ್ರಾಣಿಗಳಿಗೂ ಹೊಸ ಹುರುಪನ್ನುಂಟುಮಾಡುವ, ಇಡೀ ಜಗತ್ತಿನ ಹೃದಯವನ್ನೇ ತೆರೆದು ಪ್ರಸನ್ನಗೊಳಿಸುವ, ಆನಂದವನ್ನುಂಟುಮಾಡುವ, ಎಣೆಯಿಲ್ಲದ, ಬ್ರಹ್ಮಸ್ವರೂಪವಾದ, ಎಂದರೆ ಬೃಹತ್ತಾದ, ಗೇಯಾಧಾರವಾದ ಆಹತನಾದವನ್ನು ಉಪಾಸಿಸುತ್ತೇವೆ, ಎಂದು ಒಂದು ಅರ್ಥ. ಬ್ರಹ್ಮಪರವಾದ ಅರ್ಥವು ಸ್ಪಷ್ಟವಾಗಿಯೇ ಇದೆ.

ಹಿಂದೂಸಂಸ್ಕೃತಿಯು ನಾದವನ್ನು ಪರಬ್ರಹ್ಮಸ್ವರೂಪವೆಂದು ತಿಳಿಯುತ್ತದೆ. ವೈಯಾಕರಣರು ಅಕ್ಷರಾಮ್ನಾಯವೂ ತನ್ಮೂಲಕ ಜಗದ್ವ್ಯಾಪಾರವೂ ಪರಶಿವನ ಢಕ್ಕಾನಾದದಿಂದ ಹುಟ್ಟಿತೆಂದು ತಿಳಿಯುತ್ತಾರೆ. ವೈಯಾಕರಣ ಸ್ಫೋಟವಾದಿಗಳು ಬ್ರಹ್ಮವು, ಸರ್ವವ್ಯಾಪಕಶಬ್ದವೂ, ಅಭಿನ್ನವೂ, ಅವ್ಯಕ್ತವೂ, ನಾದ-ಬಿಂದುಗಳ ಸ್ವಭಾವವಾಗಿಯೂ, ಪರಶಿವನ ಸೃಷ್ಟಿಗೆ ಪ್ರಚೋದನೆಯೂ ಶಬ್ದಾರ್ಥಗಳ ಕಾರಣವೂ ಆಗಿದೆ; ಇದೇ ನಿತ್ಯವೂ ಅಭಿನ್ನವೂ ಆದ ಸ್ಫೋಟ; ಈ ಸ್ಫೋಟದಿಂದಲೇ ಶಬ್ದವೂ ಅರ್ಥವೂ ಉಂಟಾಗುವುದು, ಎನ್ನುತ್ತಾರೆ. ಶಾಕ್ತಮತದ ಪ್ರಕಾರ (ತಂತ್ರಶಾಸ್ತ್ರದಲ್ಲಿ) ನಾದ ಮತ್ತು ಬಿಂದುಗಳು ಶಕ್ತಿಯ ತತ್ತ್ವಗಳು. ಮೊದಲು ಬ್ರಹ್ಮತತ್ತ್ವದಲ್ಲಿ ಗುಣಕ್ಷೋಭವಾಗಿ ಅದರಿಂದ ಸ್ಪಂದವಾಗುತ್ತದೆ. ಇದಕ್ಕೆ ಶಕ್ತಿ, ಮಾಯಾ, ದೇವೀ ಎಂದೂ ಹೆಸರುಗಳುಂಟು. ಸ್ಪಂದದಿಂದ ಧ್ವನಿ, ವಾಕ್‌ತತ್ತ್ವಗಳ ಮೂಲಕ ಅಖಿಲ ವಾಙ್ಮಯವು ಉಂಟಾಗುತ್ತದೆ. ಅದೇ ಸ್ಪಂದದ ಒತ್ತಡ, ಘನೀ ಭಾವಗಳಿಂದ ಪಂಚಭೂತಗಳ ಮೂಲಕ ಆ ವಾಙ್ಮಯಕ್ಕೆ ಅರ್ಥವಾದ ಈ ಪ್ರಪಂಚವು ಉಂಟಾಗುತ್ತದೆ. ಬ್ರಹ್ಮತತ್ತ್ವವೇ ಜೀವರೂಪದಿಂದ ಇದನ್ನು ಪ್ರವೇಶಿಸಿ ಸಾಂಸಾರಿಕ ವ್ಯವಹಾರದಲ್ಲಿ ತೊಡಗುತ್ತದೆ. ಪ್ರತ್ಯಭಿಜ್ಞಾ (ಅಥವಾ ಕಾಶ್ಮೀರಶೈವ) ಶಾಸ್ತ್ರದಲ್ಲಿ ವಾಕ್ಕು-ಅರ್ಥಗಳಂತೆ ಶಿವ-ಶಕ್ತಿಯರಲ್ಲಿ ಭೇದವಿಲ್ಲ. ಆದರೆ ಜೀವನು ಆಣವ, ಕಾರ್ಯ, ಮತ್ತು ಮಾಯಿಕವೆಂಬ ಮೂರು ಮಲಗಳಿಗೆ ಅಧೀನನಾಗಿ ಈ ಅಭೇದ ಜ್ಞಾನವನ್ನು ಮರೆಯುತ್ತಾನೆ. ಈ ಮಲಗಳನ್ನು ಕಳೆದುಕೊಂಡು ಜೀವನು ತನ್ನ ನಿಜಸ್ವರೂಪವಾದ ಶಿವತ್ವವನ್ನು ಪಡೆದು ಐಕ್ಯವಾಗುವುದೇ ಮೋಕ್ಷ. ಸೃಷ್ಟಿಯ ಆರಂಭದಲ್ಲಿ ಸ್ಪಂದವುಂಟಾಗಿ, ಸ್ಪಂದದಿಂದ ನಾದವೂ, ನಾದದಿಂದ

---

1 ಅ : ವಿವೃತಂ.

ಶಬ್ದವೂ, ಶಬ್ದದಿಂದ ಮಲಗಳೂ ಉಂಟಾಗುವುವು. ಇವುಗಳಿಂದಲೇ ಜೀವನಿಗೆ ಸಂಸಾರಬಂಧನ. ಗಾಣಪತ್ಯವೇ ಮೊದಲಾದ ಶಾಕ್ತಮತಗಳಲ್ಲಿಯೂ ನಾದವನ್ನು ಬ್ರಹ್ಮವನ್ನಾಗಿ ಹೇಳಿದೆ. ಉದಾಹರಣೆಗೆ, ಅಥರ್ವ ಶೀರ್ಷ ಗಣಪತ್ಯುಪನಿಷತ್ತಿನಲ್ಲಿ ಗಣಪತಿಯನ್ನು "ತ್ವಂ ಚತ್ವಾರಿ ವಾಕ್ ಪದಾ ಪರಿಮಿತಾನಿ" ಎಂದು ಹೇಳಿ ನಾದವೇ ಗಣಪತಿಸಾಕ್ಷಾತ್ಕಾರಕ್ಕೆ ಅನುಸಂಧಾನಮಾರ್ಗ ಎಂದು ಸೂಚಿಸುತ್ತದೆ.* ಶ್ರೀವಿದ್ಯೆಯ ಕ ಏ ಈ ಲ ಹ್ರೀಂ ಸಕಲ ಹ್ರೀಂ ಹಸಕಹಲ ಹ್ರೀಂ ಎಂಬ ಮಂತ್ರದಲ್ಲಿ ಪ್ರಥಮ ಖಂಡದ 'ಕೇ' ಸಪ್ತಮ್ಯಂತವೆಂದೂ—ಕಾಯತೀತಿ ಕಃ—, ಕ ಶಬ್ದಕ್ಕೆ ವಿಷ್ಣು, ಆಹತಶಬ್ದ ಮತ್ತು ಸಮುದ್ರಗಳೆಂಬ ಅರ್ಥಗಳೆಂದೂ ತಿಳಿದುಬರುತ್ತದೆ.[1] ದೇವಿಯು ಯೋಗಶಾಸ್ತ್ರಾಭ್ಯಾಸಿಗೆ ಚಿತ್ರಾಮುದ್ರೆಯನ್ನು ಧರಿಸಿರುವ ಕಾಲದಲ್ಲಿ ಗೋಚರವಾಗುವ ನವವಿಧ ನಾದಸ್ವರೂಪಳು, ಎಂದೂ ಅರ್ಥವಿದೆ.[2] ವರಿವಸ್ಯಾರಹಸ್ಯವು ಹ್ರೀಂಕಾರದ ಕೊನೆಯಲ್ಲಿ ಕೇಳಿಸುವ ನಾದವು ಒಂಬತ್ತುವಿಧವೆಂದೂ ಹ್ರೀಂಕಾರದ ಸ್ವರೂಪದಲ್ಲಿ ನಾದವು ಸಮಷ್ಟಿರೂಪದಲ್ಲಿದೆಯೆಂದೂ ಹೇಳುತ್ತದೆ.[3] ಲಲಿತಾಸಹಸ್ರನಾಮದಲ್ಲಿ ಶ್ರೀದೇವಿಯು ನಾದಸ್ವರೂಪಳೆಂದು ವರ್ಣಿಸಿದೆ.[4] ಲಲಿತಾತ್ರಿಶತಿಗೆ ಭಾಷ್ಯವನ್ನು ಬರೆಯುವ ಸಮಯದಲ್ಲಿ ಶ್ರೀ ಶಂಕರಭಗವತ್ಪಾದರು ಲಲಿತೆಯು ಹೇಗೆ ಚೈತನ್ಯಸ್ವರೂಪಳೆಂದೂ, ನಾದಾತ್ಮಕಳೆಂದೂ ತಿಳಿಸುತ್ತಾರೆ.[5] ಮೀಮಾಂಸಕರು ಆಕಾಶಗುಣವಾದ ಶಬ್ದವು ಆಹತ ಅನಾಹತಗಳೆಂದು ಎರಡುವಿಧವೆಂದೂ ಅನಾಹತಶಬ್ದವು ನಿತ್ಯವೆಂದೂ ಬ್ರಹ್ಮವೆಂದೂ ಹೇಳುತ್ತಾರೆ. ನೈಯಾಯಿಕರು ಈ ಅಭಿಪ್ರಾಯವನ್ನು ಖಂಡಿಸಿ ಶಬ್ದವು ಅನಿತ್ಯ (ಕ್ಷಣಿಕ)ವೆನ್ನುತ್ತಾರೆ. ಆದರೆ, ವರ್ಣಾತ್ಮಕ ಶಬ್ದಕ್ಕೂ ಅದರ ಗೋಚರಕ್ಕೂ ವ್ಯತ್ಯಾಸವಿದೆ; ಗೋಚರವು ಕ್ಷಣಿಕವೇ ಹೊರತು ಶಬ್ದವಲ್ಲ; ಎಂದು ಘಟಪ್ರದೀಪ ನ್ಯಾಯದಂತೆ ಮೀಮಾಂಸಕರು ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುತ್ತಾರೆ. ಉಪನಿಷತ್ತುಗಳು ನಾದವನ್ನು ಬ್ರಹ್ಮವೆಂದೇ ಹೇಳುತ್ತವೆ :

ಬ್ರಹ್ಮಪ್ರಣವಸಂಧಾನನಾದೋ ಜ್ಯೋತಿರ್ಮಯಶ್ಶಿವಃ |
ಸ್ವಯಮಾವಿರ್ಭವೇದಾತ್ಮಾ ಮೇಘಾಪಾಯೇಂಶುಮಾನಿವ ||[6]
ಬ್ರಹ್ಮಪ್ರಣವಸಂಲಗ್ನನಾದೋ ಜ್ಯೋತಿರ್ಮಯಾತ್ಮಕಃ |
ಮನಸ್ತತ್ರ ಲಯಂ ಯಾತಿ ತದ್ವಿಷ್ಣೋಃ ಪರಮಂ ಪದಮ್ |
ತಾವದಾಕಾಶಸಂಕಲ್ಪೋ ಯಾವಚ್ಛಬ್ದಃ ಪ್ರವರ್ತತೇ ||[7]

ಸರ್ವಭೂತಾನಾಂ ಚೈತನ್ಯಂ, ಎಂದರೆ ಎಲ್ಲ ಸ್ಥಾವರಜಂಗಮ ವಸ್ತುಗಳ ಇರುವಿಕೆಯ ಸಾರರೂಪವಾಗಿರುವ ಮತ್ತು ಎಲ್ಲ ಕರ್ಮದ ಚಾಲಕಶಕ್ತಿಯೂ, ದೇಹದ ವ್ಯಾಪಾರಗಳಿಗೆ ಉತ್ಪತ್ತಿಸ್ಥಾನವೂ ಆಗಿರುವ ತತ್ತ್ವ.

* ಗಣಪತ್ಯುಪನಿಷತ್ತು, ಅಷ್ಟೋತ್ತರ ಶತಉಪನಿಷತ್, ಅನುಬಂಧ, ಪು. 69.

1 ವೀರರಾಘವಶಾಸ್ತ್ರಿ, ತ್ರಿಕಾಂಡಸಾರಾರ್ಥಬೋಧಿನೀ, ಪು. 182.

2 ಅದೇ ಗ್ರಂಥ, ಪು. 183.

3 ಭಾಸ್ಕರಮಖಿ, ವರಿವಸ್ಯಾರಹಸ್ಯ, I, 12-13.

4 ಲಲಿತಸಹಸ್ರನಾಮ : ನಾಮಗಳು 236, 237, 299, 328, 350, 366-371, 455, 457, 630, 640, 678, 833, 846, 850, 851, 901, 909.

5 ಶ್ರೀಶಂಕರಭಗವತ್ಪಾದಾಚಾರ್ಯ, ಲಲಿತಾತ್ರಿಶತೀಭಾಷ್ಯ, ಪು. 32 ಇತ್ಯಾದಿ.

6 ನಾದಬಿಂದೂಪನಿಷತ್, ಅಷ್ಟೋತ್ತರಶತ ಉಪನಿಷತ್, ಪು. 336.

7 ಅದೇ ಗ್ರಂಥ, ಪು. 337.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ವಿವೃತ್ತಂ, ಎಂದರೆ ಮುಚ್ಚಲ್ಪಡದಿರುವುದು—ಎಂದರೆ ಅವಿದ್ಯೆಯಿಂದ ಅಬಾಧಿತವಾಗಿರುವುದು, ಎಂದು ಒಂದು ಅರ್ಥ. ಇಲ್ಲಿ ಪ್ರಕಟವಾಗಿರುವುದು, ಎಂದರೆ ಉಪಾಧಿಗಳಿಂದ ಕೂಡಿ ವ್ಯಷ್ಟಿರೂಪದ ಪ್ರಪಂಚವಾಗಿ ವ್ಯಕ್ತವಾಗಿರುವುದು ಎಂಬ ಅರ್ಥವು ಹೆಚ್ಚು ಸಮಂಜಸವಾಗಿದೆ. ' ವಿವೃತಂ ' ಎಂಬ ಆ ಆಕರದ ಪಾಠವನ್ನು ಬಿಟ್ಟು, **ಅ, ಕ, ಗ,** ಮೂಲಗಳಲ್ಲಿರುವ ಮತ್ತು ಸಿಂಹಭೂಪಾಲ, ಕಲ್ಲಿನಾಥರುಗಳಿಂದ ಸ್ವೀಕೃತವಾದ ' ವಿವೃತ್ತಂ ' ಎಂಬ ಪಾಠವನ್ನೇ ಹೆಚ್ಚಿ ವಿಶ್ವಾಸಾರ್ಹವೆಂದು ಇಲ್ಲಿ ಇಟ್ಟುಕೊಂಡಿದ್ದೇನೆ. ಈ ಶಬ್ದಕ್ಕೆ ' ಸ್ಫೋಟವಾಗುವಿಕೆ ' ಎಂಬ ಅರ್ಥವೂ ಇದೆ. ಈ ಅರ್ಥವೂ ಇಲ್ಲಿ ಹೇಗೆ ಧ್ವನಿತವಾಗಿದೆ ಎಂಬುದನ್ನು ಮೇಲೆ ಸೂಚಿಸಿದೆ.

ಆಹತನಾದವು ವಾಗರ್ಥಕ್ಕೂ ಗೇಯಾರ್ಥಕ್ಕೂ ಆಶ್ರಯವಾದುದು. ಎರಡನೆಯ ಪ್ರಕರಣದ ಎರಡನೆಯ ಶ್ಲೋಕದ ವ್ಯಾಖ್ಯಾನದಲ್ಲಿ ಹೇಳಿರುವ ಚತ್ವಾರಿವಾಕ್ ಎನ್ನುವ ಅರ್ಥದಲ್ಲಿ, ಅಥವಾ ವಾಕ್ಕೇ ಬ್ರಹ್ಮ: ' ಬ್ರಹ್ಮ ವಾಗ್‌ಬ್ರಹ್ಮ ಸತ್ಯಂ ಚ ಬ್ರಹ್ಮ ಸರ್ವಮಿದಂ ಜಗತ್ ' ಎಂಬ ಶೌನಕನ ಉಕ್ತಿಯಿಂದಲೂ[8] ' ಬ್ರಹ್ಮ ವೈ ಬ್ರಹ್ಮಣಸ್ಪತಿಃ ವಾಗ್ವೈ ರಾಷ್ಟ್ರೀ ' ಎಂಬ ಐತರೇಯ ಬ್ರಾಹ್ಮಣದ ಉಕ್ತಿಯಿಂದಲೂ[9] ಸಿದ್ಧವಾಗುವ ಅರ್ಥದಲ್ಲಿ ಆಹತನಾದವು ಅದ್ವಿತೀಯವೇ. ಗೇಯಾರ್ಥಸದೃಶವಾದ ಅನುಭವವು ಮತ್ತೆಲ್ಲಿಯೂ ಇಲ್ಲವಾದುದರಿಂದಲೂ ಅದು ಅದ್ವಿತೀಯವೇ. ಬ್ರಹ್ಮವಸ್ತು ಎಂಬ ಪಕ್ಷದಲ್ಲಿ ಅದ್ವಿತೀಯ ಎಂಬ ಅರ್ಥವು ಉಪನಿಷದ್ವಾಕ್ಯದಿಂದಲೇ ಸಿದ್ಧವಾಗುತ್ತದೆ :

ಸದೇವ ಸೋಮ್ಯ ಇದಮಗ್ರ ಆಸೀತ್ ಏಕಮೇವಾದ್ವಿತೀಯಂ
. . . . ಸತ್ತ್ವೇವ ಸೋಮ್ಯ ಇದಮಗ್ರ ಆಸೀತ್ ಏಕಮೇವಾದ್ವಿತೀಯಮ್ |[10]

ಬ್ರಹ್ಮದ ಮೂರು ಸ್ವರೂಪಗಳಾದ ಸತ್, ಚಿತ್ ಮತ್ತು ಆನಂದ ಈ ಮೂರನ್ನೂ ಒಂದೇ ಸಂದರ್ಭದಲ್ಲಿ ಗ್ರಂಥಕಾರನು ಉಪಾಸಿಸಲು ತೊಡಗಿದ್ದಾನೆ : ಅದ್ವಿತೀಯ ಶಬ್ದದಿಂದ, ಮೇಲೆ ಉದ್ಧರಿಸಿರುವ ಛಾಂದೋಗ್ಯ ಉಪನಿಷತ್ತಿನ ವಾಕ್ಯದಲ್ಲಿ ಸೂಚಿತವಾದ ಸತ್ ; ಚೈತನ್ಯವೆಂಬ ಶಬ್ದಕ್ಕೂ ಅದರ ದ್ರವ್ಯಕ್ಕೂ ಆಶ್ರಯವಾದ ಚಿತ್ ; ಮತ್ತು ಶ್ಲೋಕದಲ್ಲಿಯೇ ಹೇಳಿದ ಆನಂದ –ಈ ಮೂರೂ ಇಲ್ಲಿ ವಿವಕ್ಷಿತಗಳು. ಪ್ರಸ್ತುತ ವಿಷಯವಾದ ಆಹತನಾದದ ಗೇಯಾರ್ಥಕ್ಕೆ ಆನಂದವೇ ಮುಖ್ಯ ಪ್ರಯೋಜನವಾದುದರಿಂದ ಸತ್ ಮತ್ತು ಚಿತ್‌ಗಳು ಇಲ್ಲಿ ಕೇವಲ ಸೂಚ್ಯ, ಆನಂದವೇ ಪ್ರಕಟ. ಆದುದರಿಂದಲೇ ಆನಂದವನ್ನು ಈ ಶ್ಲೋಕದಲ್ಲಿ ಪ್ರಕಟವಾಗಿ ಹೇಳಿದೆ.

ನಾಟ್ಯಶಾಸ್ತ್ರವನ್ನು ಪಂಚಮವೇದವೆಂದೂ ಪುರುಷಾರ್ಥಚತುಷ್ಟಯಸಾಧನವೆಂದೂ ಭರತಮುನಿಯು ಹೇಳಿ ಸನಾತನಧರ್ಮದ ಹಿನ್ನಲೆಯಲ್ಲಿ ಅದಕ್ಕೆ ಪ್ರಯೋಜನವನ್ನು ನಿರೂಪಿಸಿದ್ದರೂ ಸಂಗೀತಕ್ಕೆ ಪ್ರತ್ಯೇಕ ಸ್ಥಾನಮಾನಗಳನ್ನು ಯಾವ ಲಾಕ್ಷಣಿಕನೂ ಕೊಟ್ಟಿರಲಿಲ್ಲ. ಸಂಗೀತವೂ ಸಾಮವೇದದಂತೆಯೇ ವೇದವೆಂದೂ—' ಸಾಮವೇದಾದಿದಂ ಗೀತಂ ಸಂಜಗ್ರಾಹ ಪಿತಾಮಹಃ ',—ನಾಲ್ಕು ಪುರುಷಾರ್ಥಗಳನ್ನು ಪಡೆಯುವ ಉಪಾಯವೆಂದೂ, ವೇದದ ಅರ್ಥವು ಹೇಗೆ ಬ್ರಹ್ಮವಸ್ತುವೋ ಹಾಗೆಯೇ ಗಾಂಧರ್ವವೇದದ ಅರ್ಥವಾದ ನಾದವು ನಾದಬ್ರಹ್ಮವೆಂದೂ— ' ನಾದಬ್ರಹ್ಮ ತದಾನಂದಂ ಅದ್ವಿತೀಯಮುಪಾಸ್ಮಹೇ '—ಅದು ನಿರ್ಗುಣನಿರಾಕಾರಗಳಲ್ಲಿ ಸಮಷ್ಟಿರೂಪದ ಅನಾಹತ ಸ್ವರೂಪದಲ್ಲಿರುವುದೆಂದೂ ಇದರ ಧ್ಯಾನದಿಂದ ಎಂದರೆ ಅನಾಹತನಾದಯೋಗದಿಂದ, ಅಪವರ್ಗ ಸಾಧನೆಯೂ, ಸಗುಣಸಾಕಾರಗಳಲ್ಲಿ ವ್ಯಷ್ಟಿರೂಪದಲ್ಲಿ ಶಬಳಿತವಾಗಿ ಅದು ಆಹತರೂಪದಲ್ಲಿರುವುದೆಂದೂ, ಇದರ ಧ್ಯಾನದಿಂದ ತ್ರಿವರ್ಗಸಾಧನೆಯೆಂದೂ ಇಲ್ಲಿ ತಿಳಿಯಬೇಕು. ಸಂಗೀತಶಾಸ್ತ್ರವು ವೇದದಿಂದ ಅಭಿನ್ನವಾದುದು ಎಂದು

---

8 ಶೌನಕ, ಬೃಹದ್ದೇವತಾ, II, 40. 9 ಐತರೇಯಬ್ರಾಹ್ಮಣ, I, 19. 10 ಛಾಂದೋಗ್ಯ ಉಪನಿಷತ್, VI, 2, 1.2.

ಶ್ರೀಶಾರ್ಙ್ಗದೇವನು ಅದಕ್ಕೆ ಮೊಟ್ಟಮೊದಲಬಾರಿಗೆ ಸರ್ವೋತ್ಕೃಷ್ಟಸ್ಥಾನಮಾನಗಳನ್ನೂ ತಾತ್ತ್ವಿಕ ಹಿನ್ನೆಲೆಯನ್ನೂ ಇಂದ್ರಿಯಸುಖವನ್ನು ಮೀರಿದ ಕ್ರಿಯೆಗಳನ್ನೂ ಭಾರತೀಯ ಸಂಸ್ಕೃತಿಯ ಪರಮಧ್ಯೇಯಗಳನ್ನೂ, ಆದರ್ಶಗಳನ್ನೂ ಹಾಗೂ ಅವುಗಳ ಸಾಧನೆಗೆ ಬೇಕಾದ ಉಪಕರಣಗಳನ್ನೂ ಸಂಗೀತಶಾಸ್ತ್ರದಲ್ಲಿ ಹೇಳಿದ್ದಾನೆ. ಅವನಿಂದ ಈ ಶಾಸ್ತ್ರಕ್ಕೆ ಆಗಿರುವ ಉಪಕಾರಗಳಲ್ಲಿ ಇದೇ ಅತ್ಯಂತ ಮಹತ್ವವುಳ್ಳದುದು. ಆದುದರಿಂದ ಶ್ರೀ ಶಾರ್ಙ್ಗದೇವನು ಪ್ರಾತಃ ಸ್ಮರಣೀಯ ಋಷಿಗಳ ಶ್ರೇಣಿಗೆ ಸೇರತಕ್ಕವನು. ಈ ಸಾಮರ್ಥ್ಯವನ್ನು ಅವನು ಸಂಗೀತಶಾಸ್ತ್ರಕ್ಕೆ ಹೇಳಿರುವುದಾದರೂ ಕೇವಲ ತಾನು ಪ್ರತಿಪಾದಿಸುತ್ತಿರುವ ಶಾಸ್ತ್ರವೆಂಬ ದುರಭಿಮಾನದಿಂದ ಹುಟ್ಟಿದ ಉತ್ಪ್ರೇಕ್ಷೆಯಿಂದಲ್ಲ. ಅನಾಹತನಾದ ಯೋಗವು ಹೇಗೆ ಋಷಿಪ್ರಣೀತವಾದ, ವೈಜ್ಞಾನಿಕ ಕ್ರಮದಲ್ಲಿ ಅಧ್ಯಯನಮಾಡಲ್ಪಟ್ಟ, ನಿಸ್ಪೃಷ್ಟಜ್ಞಾನವುಳ್ಳ, ಪ್ರಾಯೋಗಿಕ ಸತ್ಯಗಳೆಂದು ಸ್ವಂತ ಅನುಭವದ ಪರೀಕ್ಷೆಯಿಂದ ಕಂಡುಕೊಳ್ಳಬಹುದಾದ, ಶಾಸ್ತ್ರವಾಗಿದೆಯೆಂಬುದನ್ನು ಎರಡನೆಯ ಪ್ರಕರಣದ ಕಡೆಯಲ್ಲಿ ಹೇಳಿದೆ. ಆಹತನಾದದ ಯೋಗವಾದರೂ ಸಾಕಷ್ಟು ಪ್ರಯತ್ನದಿಂದ ಸುಲಭಸಾಧ್ಯವೇ ಎಂಬುವನ್ನು ಈಚೆಗೆ ನಾದಯೋಗಿಯಾದ ಶ್ರೀ ಮುದ್ದುಸ್ವಾಮಿದೀಕ್ಷಿತನೂ ಶ್ರೀ ತ್ಯಾಗರಾಜನೂ ತಮ್ಮ ಸ್ವಂತ ಜೀವನದಿಂದ ತೋರಿಸಿಕೊಟ್ಟಿದ್ದಾರೆ.

ಹೀಗೆ ಈ ಶ್ಲೋಕದಲ್ಲಿ ಸಂಗೀತಶಾಸ್ತ್ರದ ಹಿರಿಮೆಯನ್ನು ಸೂಚಿಸುವ ಧ್ವನಿಯಿದೆ.

**ನಾದೋಪಾಸನಯಾ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।**
**ಭವಂತ್ಯುಪಾಸಿತಾ ನೂನಂ ಯಸ್ಮಾದೇತೇ ತದಾತ್ಮಕಾಃ ॥ 2 ॥** 218

[ತಾವು] ನಾದಸ್ವರೂಪರೇ ಆದುದರಿಂದ ದೇವರುಗಳಾದ ಬ್ರಹ್ಮಾ ವಿಷ್ಣು ಮಹೇಶ್ವರರು ನಾದೋಪಾಸನೆಯಿಂದಲೇ ಚೆನ್ನಾಗಿ ಪೂಜಿತರಾಗುತ್ತಾರೆ.

ಬ್ರಹ್ಮಾ ವಿಷ್ಣು ಮಹೇಶ್ವರರು ಗೀತಪ್ರಿಯರೆಂಬ ಮಾತನ್ನು ಶ್ರೀ ಶಾರ್ಙ್ಗದೇವನು ಈಗಾಗಲೇ ಹೇಳಿರುವುದನ್ನು ಇಲ್ಲಿ ನೆನೆಯಬೇಕು : ‘ ಸಾಮಗೀತಿರತೋ ಬ್ರಹ್ಮಾ’, ‘ ಗೋಪೀಪತಿರನಂತೋ ಽಪಿ ವಂಶಧ್ವನಿವಶಂ ಗತಃ’, ‘ ಗೀತೇನ ಪ್ರೀಯತೇ ದೇವಃ ಸರ್ವಜ್ಞಃ ಪಾರ್ವತೀಪತಿಃ’.[11] ಈ ತ್ರಿಮೂರ್ತಿಗಳು ಸಗುಣಬ್ರಹ್ಮಾರಾಧನೆಯ ಪ್ರತೀಕಗಳೇ ಆದುದರಿಂದ ನಾದಸ್ವರೂಪರೇ ಆಗಿದ್ದಾರೆ. ಅಲ್ಲದೆ ಚತುರ್ಮುಖಬ್ರಹ್ಮನು–ಶಬ್ದಬ್ರಹ್ಮವನ್ನೇ ಹೇಳುವ, ಓಂಕಾರವೆಂಬ ನಾದವೇ ಅರ್ಥವಾಗಿ ಉಳ್ಳ,—ನಾಲ್ಕು ವೇದಗಳಲ್ಲಿರುವ ಶಬ್ದಗಳನ್ನು ಸ್ಮರಿಸಿಕೊಂಡು ನಾಲ್ಕು ಮುಖಗಳಿಂದ ಪ್ರಳಯಾನಂತರದಲ್ಲಿ ಹೇಳಿ ಅವುಗಳ ಅರ್ಥವಾದ ವಿಶ್ವವನ್ನು ಸೃಷ್ಟಿಸುತ್ತಾನೆಂದೂ, ವಿಷ್ಣುವು ವೇದಪುರುಷನೆಂದೂ ಪ್ರಲಯಕಾಲಾನಂತರದಲ್ಲಿ ಪರಶಿವನ ತಾಂಡವನೃತ್ತಾವಸಾನಕಾಲದಲ್ಲಿ ವ್ಯವಹಾರ ಸರ್ವಸ್ವದ ಮೂಲವೂ ವೇದಶಬ್ದಗಳಿಗೆ ಆಕರವೂ ಆಗಿರುವ ಅಕ್ಷರಸಮಾಮ್ನಾಯವನ್ನು ಹೊರಪಡಿಸುತ್ತಾನೆಂದೂ ಸನಾತನಿಗಳು ನಂಬುತ್ತಾರೆ. ಆದುದರಿಂದ ಇವರೆಲ್ಲರೂ ನಾದಾತ್ಮಕರೇ. ‘ ತಸ್ಮಾನ್ನಾದಾತ್ಮಕಂ ಜಗತ್ ’ ಎಂದು ಹಿಂದಿನ ಪ್ರಕರಣದ ಪ್ರಾರಂಭದಲ್ಲಿ ರತ್ನಾಕರಕಾರನು ಈ ಅರ್ಥದಲ್ಲಿಯೂ ಹೇಳಿದ್ದಾನೆ. ಇದನ್ನೇ ಜಗದೇಕಮಲ್ಲನು

ಸ್ವರಾದಿಗೀತವಾದ್ಯಂ ಚ ತಾಲಶ್ಚೇತಿ ಚತುಷ್ಟಯಮ್ ।
ಸಿಧ್ಯಂತಿ ನ ವಿನಾ ನಾದಾತ್ ತಸ್ಮಾನ್ನಾದಾತ್ಮಕಂ ಜಗತ್ ।[12]
ಬಿಂದುರುತ್ಪದ್ಯತೇ ನಾದಾನ್ನಾದಾನ್ನಿಖಿಲವಾಙ್ಮಯಮ್ ।[12]

11 ಶಾರ್ಙ್ಗದೇವ, ಸಂಗೀತರತ್ನಾಕರ, I, 1, 26-27.

12 ಜಗದೇಕಮಲ್ಲ, ಸಂಗೀತಚೂಡಾಮಣಿ, ಶ್ರೀ ವರಲಕ್ಷ್ಮೀ ಅಕಾಡೆಮಿಯ ಗ್ರಂಥಭಂಡಾರದ ಹಸ್ತಪ್ರತಿ, ಪು. 4-5.

ತ್ರಿಮೂರ್ತಿಗಳು ತದ್(ನಾದ-) ಆತ್ಮಕಾಃ ಎಂಬ ಮಾತಿಗೆ ಶ್ರೀ ಶಾರ್ಙ್ಗದೇವನು ಮತಂಗನಿಂದ ಸ್ಫೂರ್ತಿ ಪಡೆದಿರಬಹುದು :

ನಾದರೂಪಃ ಸ್ಮೃತೋ ಬ್ರಹ್ಮಾ ನಾದರೂಪೋ ಜನಾರ್ದನಃ |
ನಾದರೂಪಾ ಪರಾಶಕ್ತಿರ್ನಾದರೂಪೋ ಮಹೇಶ್ವರಃ |[13]

ಈ ವರ್ಣನೆ ಜಗದೇಕಮಲ್ಲನಲ್ಲಿಯೂ ಉಂಟು ;

ನಾದಾತ್ಮಾನಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ |
ಓಂಕಾರಶ್ಚ ಪರಾಶಕ್ತಿರ್ನಾದರೂಪಮಿದಂ ದ್ವಯಮ್ |[12]

ಆದುದರಿಂದ ನಾದೋಪಾಸನೆ ಮಾಡಿದರೆ ತ್ರಿಮೂರ್ತಿಗಳನ್ನು ಆರಾಧಿಸಿದಂತೆ, ಓಂಕಾರವನ್ನೂ ಪರಾಶಕ್ತಿಯನ್ನೂ ಸಾಕ್ಷಾತ್ಕರಿಸಿಕೊಂಡಂತೆ. ಮೊದಲನೆಯದರಿಂದ ತ್ರಿವರ್ಗಫಲಪ್ರಾಪ್ತಿ ; ಎರಡನೆಯದಿಂದ ಅಪವರ್ಗ ಫಲಪ್ರಾಪ್ತಿ. ಈ ಅರ್ಥವನ್ನು, ಸಗುಣಬ್ರಹ್ಮೋಪಾಸನೆಯಿಂದ ಐಹಿಕಭೋಗಗಳ ಪ್ರಾಪ್ತಿಯುಂಟಾಗುವುದೆಂಬ 'ತತ್ರ ಸ್ಯಾತ್ ಸಗುಣಾದ್‌ಧ್ಯಾನಾದ್ ಭುಕ್ತಿಃ'[14] ಮತ್ತು ನಿರ್ಗುಣಬ್ರಹ್ಮೋಪಾಸನೆಯಿಂದ ಮೋಕ್ಷವುಂಟಾಗುವುದೆಂಬ 'ಮುಕ್ತಿಸ್ತು ನಿರ್ಗುಣಾತ್'[14] ಎಂಬುದನ್ನು ಹಾಗೂ ಸಂಗೀತದಿಂದ ಇವೆರಡೂ ದೊರೆಯುತ್ತವೆಂಬುದನ್ನು—'ಧರ್ಮಾರ್ಥಕಾಮಮೋಕ್ಷಾಣಾಮಿದಮೇವೈಕಸಾಧನಮ್'[15]— ಈ ಶ್ಲೋಕದೊಡನೆ ಅನ್ವಯ ಮಾಡಿಕೊಂಡರೆ ಗ್ರಂಥಪ್ರಯೋಜನ ಮತ್ತು ಶಾಸ್ತ್ರಪ್ರಯೋಜನಗಳೆರಡೂ ಸ್ಫುರಿಸುತ್ತವೆ.

ಬಹ್ಮಾ ವಿಷ್ಣು ಮಹೇಶ್ವರರು ನಾದಾತ್ಮಕರೂ ನಾದೋಪಾಸನೆಯಿಂದ ಪ್ರೀತರೂ ಎಂಬ ಶ್ರೀ ಶಾರ್ಙ್ಗದೇವನ ಮಾತನ್ನು ಅರ್ವಾಚೀನನಾದ ತ್ಯಾಗರಾಜನೂ 'ನಾದೋಪಾಸನಚೆ ಶಂಕರ ನಾರಾಯಣ ವಿಧುಲು ವೆಲಸಿರಿ'[16] 'ಹರಿಹರಾತ್ಮಭೂ . . . . ವರ ಮೌನುಲುಪಾಸಿಂಪರೇ'[17] 'ಶ್ರೀ ವಿಶ್ವನಾಥಾದಿ ಶ್ರೀಕಾಂತ ವಿಧುಲು ಪಾವನ ಮೂರ್ತುಲುಪಾಸಿಂಚಲೇದಾ ?[18] ಇತ್ಯಾದಿಯಾಗಿ ಹೇಳಿದ್ದಾನೆ.

| ನಾದೋತ್ಪತ್ತಿ |

**ಆತ್ಮಾ ವಿವಕ್ಷಮಾಣೋಽಯಂ ಮನಃ ಪ್ರೇರಯತೇ ಮನಃ |**
**ದೇಹಸ್ಥಂ ವಹ್ನಿಮಾಹಂತಿ ಸ ಪ್ರೇರಯತಿ ಮಾರುತಮ್ ॥ 3 ॥** 219

ವ್ಯಕ್ತತೆಯನ್ನು (ಅಭಿವ್ಯಕ್ತಿಯನ್ನು) <ವಿವಕ್ಷಾ> ಬಯಸುವ ಈ ಆತ್ಮನು ಮನಸ್ಸನ್ನು ಪ್ರೇರಿಸುತ್ತಾನೆ. ಮನಸ್ಸು ದೇಹದಲ್ಲಿರುವ ಅಗ್ನಿಯನ್ನು ಹೊಡೆದೆಬ್ಬಿಸುತ್ತದೆ. ಅದು ವಾಯುವನ್ನು ಉದ್ದೀಪನಗೊಳಿಸುತ್ತದೆ (ಕೆರಳಿಸುತ್ತದೆ).

---

13 ಮತಂಗ, ಬೃಹದ್ದೇಶೀ, 11-18, ಪು. 3.

14 ಶಾರ್ಙ್ಗದೇವ, ಉ. ಗ್ರಂ., I, 2, 164.

15 ಅದೇ ಗ್ರಂಥ, I, 1, 30.

16 ತ್ಯಾಗರಾಜ, ನಾದೋಪಾಸನಚೆ ಶಂಕರ ನಾರಾಯಣ ವಿಧುಲು ವೆಲಸಿರಿ ಎಂಬ ಬೇಗಡೆ ರಾಗದ, ದೇಶಾದಿತಾಳದ ಕೃತಿ.

17 ಅದೇ, ನಾದಲೋಲುಡೈ ಬ್ರಹ್ಮಾನಂದಮೊಂದವೇ ಮನಸಾ ಎಂಬ ಕಲ್ಯಾಣವಸಂತ ರಾಗದ, ರೂಪಕತಾಳದ ಕೃತಿ.

18 ಅದೇ, ಆನಂದಸಾಗರಮೀದದ ಎಂಬ ಗರುಡಧ್ವನಿ ರಾಗದ, ದೇಶಾದಿತಾಳದ ಕೃತಿ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ದೇಹಸ್ಥಂ ವಹ್ನಿಂ, ಎಂದರೆ ದೇಹಮಧ್ಯದಲ್ಲಿರುವ ಅಗ್ನಿಶಿಖೆಯೆಂದು ತಿಳಿಯಬೇಕು. ಬ್ರಹ್ಮಗ್ರಂಥಿಯಲ್ಲಿ ಹುಟ್ಟುವ ಪ್ರಾಣವಾಯುವು ಕಂದಮಧ್ಯದಲ್ಲಿರುವ ಅಗ್ನಿಶಿಖೆಯೊಡನೆ ಸೇರಿ ಚಿತ್ತದೊಡನೆ ಊರ್ಧ್ವಮುಖವಾಗಿ ಚಲಿಸಿದಾಗ ನಾದವು ಉತ್ಪತ್ತಿಯಾಗುತ್ತದೆಂಬುದನ್ನು ನೆನೆಯಬೇಕು :

'ಬ್ರಹ್ಮಗ್ರಂಥಿಜಮಾರುತಾನುಗತಿನಾ ಚಿತ್ತೇನ ಹೃತ್ಪಂಕಜೇ ಸೂರೀಣಾಮನುರಂಜಕಃ '[19]

'ವಿವಕ್ಷಮಾಣಃ' ಎಂದರೆ ಮಾತನ್ನಾಡುವ ಇಚ್ಛೆಯುಳ್ಳ, ಎಂಬ ಅರ್ಥದಲ್ಲಿ 'ವಿವಕ್ಷಮಾಣ ಇತಿ ಬ್ರುವ ಇಚ್ಛಾಯಾಂ ಸನಿ' ಎಂದು ಕಲ್ಲಿನಾಥನೂ,[20] 'ವಕ್ತುಮಿಚ್ಛನ್ ವಿವಕ್ಷಮಾಣಃ' ಎಂದು ಸಿಂಹಭೂಪಾಲನೂ[21] ಹೇಳುತ್ತಾರೆ. ಆದರೆ ಈ ಉದ್ಧೃತಿಗಳಲ್ಲಿನ ಬ್ರುವ ಮತ್ತು ವಕ್ತುಂ ಎಂಬುದಕ್ಕೆ ಸಹಜವಾಗಿ ಮಾತು ಎಂದು ಅರ್ಥಮಾಡಿದರೆ ಗ್ರಂಥಕಾರನ ಉಕ್ತಿಯನ್ನು ವಾಗರ್ಥಯುಕ್ತ ಸನ್ನಿವೇಶಗಳಿಗೆ ಮಾತ್ರ ಸೀಮಿತಗೊಳಿಸಿದಂತಾಗುತ್ತದೆ. ವಾಙ್ಮೂಲವಾದ ಅಭಿವ್ಯಕ್ತಿಗೆ ಅತೀತವಾದ ಅನುಭವಗಳನ್ನು ಪ್ರಕಟಪಡಿಸುವುದು ಎಂಬ ಅರ್ಥಕ್ಕೆ ಇದು ಸಾಕಾಗುವುದಿಲ್ಲ. ಆದುದರಿಂದಲೇ ವಿವಕ್ಷಾ ಎಂಬುದನ್ನು ಅದರ ಸಾಮಾನ್ಯಾರ್ಥದಲ್ಲಿ ಇಲ್ಲಿ ಅನುವಾದ ಮಾಡಿದ್ದೇನೆ. ಅಲ್ಲದೆ ಆತ್ಮನು ತನ್ನ ದೇಹದಿಂದ ನಾದವನ್ನು ಹೊರಡಿಸುವುದಕ್ಕೆ ಮಾತ್ರ ಈ ಮಾತು ಮಿತವಾಗುತ್ತದೆ ; ಬಾಹ್ಯೋಪಕರಣಗಳಿಂದ, ಉದಾಹರಣೆಗೆ ಸಂಗೀತವಾದ್ಯಗಳಿಂದ, ನಾದೋತ್ಪತ್ತಿಮಾಡುವುದಕ್ಕೆ ಅನ್ವಯಿಸುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಯಾವ ನಾದವನ್ನು ಬಾಹ್ಯೋಪಕರಣಗಳಿಂದ ಹೊರಡಿಸಬೇಕೆಂಬ ವಿವಕ್ಷೆ ಆತ್ಮನಿಗೆ ಉಂಟಾಗುತ್ತದೆಯೋ ಅದನ್ನು ಉಪಾಂಶುವನ್ನಾಗಿ ಸ್ವದೇಹದಲ್ಲಿ ಆಭಾಸರೂಪದಲ್ಲಿ ಪಡೆದು ನಂತರ ಉಚ್ಚಾರಣಪ್ರಸಕ್ತಿ ಮೊದಲಾದವುಗಳಿಂದ ಅದನ್ನು ಹೊರಗೆ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಈ ಅರ್ಥವನ್ನೂ ಸೇರಿಸಿ ವಿವಕ್ಷಾ ಎನ್ನುವುದಕ್ಕೆ ಪ್ರಕಟನೆಯ ಇಚ್ಛೆ, ಅಭಿವ್ಯಕ್ತಿಯ ಆಕಾಂಕ್ಷೆ ಎಂಬ ಸಾಮಾನ್ಯಾರ್ಥವೇ ಇಲ್ಲಿ ಪ್ರಶಸ್ತವಾಗಿದೆ.

ವಿವಕ್ಷಮಾಣವಾದ ಆತ್ಮನು ಅಭಿವ್ಯಕ್ತಿಯನ್ನು ಪಡೆಯುವುದು ಈ ಶ್ಲೋಕದಲ್ಲಿ ಹೇಳಿರುವ ರೀತಿಯಲ್ಲಿಯೇ ಎಂದು ನಮ್ಮ ಪ್ರಾಚೀನಾಚಾರ್ಯರು ಹಲವು ಶಾಸ್ತ್ರಗಳಲ್ಲಿ ಸಮ್ಮತಿಸಿದ್ದಾರೆ. ಉದಾಹರಣೆಗೆ, ಆಯುರ್ವೇದಶಾಸ್ತ್ರ ಪ್ರವರ್ತಕನಾದ ಚರಕನು ಈ ಅಭಿಪ್ರಾಯವನ್ನು ಹೆಚ್ಚುಕಡಿಮೆ ಇದೇ ಮಾತುಗಳಲ್ಲಿ ಹೇಳಿದ್ದಾನೆ.[22] ನಾಭಿಸ್ಥವಾದ ಕಂದದಲ್ಲಿರುವ ಅಗ್ನಿಯನ್ನು ಪ್ರಾಣವಾಯುವು ಹೊಡೆದೆಬ್ಬಿಸಿ ಅದರೊಡನೆ ಸೇರಿದಾಗ ನಾದವು ಹುಟ್ಟುವುದೆಂಬ ಈ ಮಾತನ್ನು ಮತಂಗನೂ ಒಪ್ಪುತ್ತಾನೆ :

ಯದುಕ್ತಂ ಬ್ರಹ್ಮಣಃಸ್ಥಾನಂ ಬ್ರಹ್ಮಗ್ರಂಥಿಶ್ಚ ಯಃ ಸ್ಮೃತಃ ।
ತನ್ಮಧ್ಯೇ ಸಂಸ್ಥಿತಃ ಪ್ರಾಣಃ ಪ್ರಾಣಾದ್ ವಹ್ನಿಸಮುದ್ಗಮಃ ।
ವಹ್ನಿಮಾರುತಸಂಯೋಗಾನ್ನಾದಃ ಸಮುಪಜಾಯತೇ ।[23]
ಕಂದಸ್ಥಾನಸಮುತ್ಥೋಽಪಿ ಸ ಚ ಪಂಚವಿಧೋ ಭವೇತ್ ।

---

19 ಶಾರ್ಙ್ಗದೇವ, ಉ. ಗ್ರಂ., I, 1, 1.

20 ಕಲ್ಲಿನಾಥ, ಸಂಗೀತಕಲಾನಿಧಿ, ಸಂಗೀತರತ್ನಾಕರವ್ಯಾಖ್ಯಾ, ಪು. 64.

21 ಸಿಂಹಭೂಪಾಲ, ಸಂಗೀತಸುಧಾಕರ, ಸಂಗೀತರತ್ನಾಕರವ್ಯಾಖ್ಯಾ, ಪು. 65.

22 ಚರಕ, ಚರಕಸಂಹಿತೆ, XXVIII, 6, 7.

23 ಮತಂಗ, ಉಂ. ಗ್ರಂ., 18-21, ಪು. 3.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸೂಕ್ಷ್ಮಶ್ಚೈವಾತಿಸೂಕ್ಷ್ಮಶ್ಚ ಸವಿಾರಃ ಸಂಚರನ್ನಧಃ ।
ಊರ್ಧ್ವಂ ಚ ಕುರುತೇ ಸರ್ವಾಂ ನಾದಪದ್ಧತಿಮುದ್ಧತಾನ್ । [23]

ನಾನ್ಯದೇವನು ಈ ವಿಷಯದಲ್ಲಿ ಪಾಣಿನಿಯನ್ನು ಉದ್ಧರಿಸಿ [24] ಹೀಗೆಯೇ ಹೇಳಿದ್ದಾನೆ :

ಆತ್ಮಾ ಬುದ್ಧ್ಯಾ ಸಮೇತ್ಯಾರ್ಥಾನ್ ಮನೋ ಯುಙ್ಕ್ತೇ ವಿವಕ್ಷಯಾ ।
ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್ ।
ಮಾರುತಸ್ತೂರಸಿ ಚರನ್ ಮಂದ್ರಂ ಜನಯತಿ ಸ್ವರಮ್ । [25]

ಜಗದೇಕಮಲ್ಲನೂ ಇದೇ ಅರ್ಥವನ್ನು ಹೇಳಿದರೂ ಪ್ರಾಣವಾಯುವು ಅಗ್ನಿಯನ್ನು ಹೊಡೆಯುತ್ತದೆಂದು ಹೇಳುವುದಿಲ್ಲ :

ನಾಭೌ ಯದ್ಬ್ರಹ್ಮಣಃಸ್ಥಾನಂ ಬ್ರಹ್ಮಗ್ರಂಥಿಶ್ಚ ಯೋ ಮತಃ ।
ಪ್ರಾಣಸ್ತನ್ಮಧ್ಯವರ್ತಿಃ ಸ್ಯಾದಗ್ನೇಃ ಪ್ರಾಣಸಮುದ್ಭವಃ ।
ಅಗ್ನಿಮಾರುತಸಂಯೋಗಾದ್ ಭವೇನ್ನಾದಸ್ಯ ಸಂಭವಃ । [12]

**ಬ್ರಹ್ಮಗ್ರಂಥಿಸ್ಥಿತಃ ಸೋಽಥ ಕ್ರಮಾದೂರ್ಧ್ವಪಥೇ ಚರನ್ ।**
**ನಾಭಿಹೃತ್ಕಂಠಮೂರ್ಧಾಸ್ಯೇಷ್ವಾವಿರ್ಭಾವಯತಿ [2] ಧ್ವನಿಮ್ ॥ 4 ॥** 220

ಬ್ರಹ್ಮಗ್ರಂಥಿಯಲ್ಲಿರುವ ಅದು [ಆ ಪ್ರಾಣವಾಯುವು] ಕ್ರಮವಾಗಿ ಮೇಲುದಿಕ್ಕಿನಲ್ಲಿ ನಡೆದು ಹೊಕ್ಕಳು, ಹೃದಯ, ಕಂಠ, ಅಂಗಳು [ಮತ್ತು] ಮುಖಗಳಲ್ಲಿ ನಾದವನ್ನು ಗೋಚರವಾಡಿಸುತ್ತದೆ.

ಬ್ರಹ್ಮಗ್ರಂಥಿಯ ವಿವರಗಳಿಗೆ ಇದೇ ಅಧ್ಯಾಯದ ಎರಡನೆಯ ಪ್ರಕರಣದ 146-150ನೆಯ ಶ್ಲೋಕಗಳನ್ನು ನೋಡಬೇಕು. ಕುನ್ಹನ್‌ರಾಜಾ ಊರ್ಧ್ವಪಥೇ ಎನ್ನುವುದಕ್ಕೆ ಊರ್ಧ್ವಮಾರ್ಗಗಳಲ್ಲಿ ಎಂದು ಬಹುವಚನವನ್ನು ಹೇಳಿ ಪ್ರಾಣವಾಯುವು ಇಡಾಪಿಂಗಳಾ ಸುಷುಮ್ನಾಗಳಲ್ಲಿ ಪ್ರವಹಿಸುತ್ತದೆಂದು ಸೂಚಿಸುತ್ತಾನೆ.[26] ಆದರೆ ಪ್ರಾಣವಾಯುವು ಊರ್ಧ್ವಮುಖವಾಗಿ ಚಲಿಸುವುದು ಸುಷುಮ್ನಾನಾಡಿಯಲ್ಲಿ ಮಾತ್ರ. ಗ್ರಂಥಕಾರನು ಹೇಳಿರುವ 'ಊರ್ಧ್ವಪಥೇ ಚರನ್' ಎಂಬ ಮಾತಿಗೆ ವ್ಯಾಖ್ಯಾನಮಾಡುತ್ತಾ ಸಿಂಹಭೂಪಾಲನು, ಪ್ರಾಣವಾಯುವು ನಾಭಿಕಂದದಿಂದ (ಅಗ್ನಿಯಿಂದ ಪ್ರೇರಿತವಾಗಿ) ಕೆಳಮುಖವಾಗಿ ಚಲಿಸಿದರೆ ಅನಾಹತನಾದವೂ, ಮೇಲುಮುಖವಾಗಿ ಚಲಿಸಿದರೆ ಪ್ರಕೃತ ಗಾನೋಪಯೋಗಿಯಾದ ಆಹತನಾದವೂ ಹುಟ್ಟುತ್ತವೆಂದು ಹೇಳಿ ಆಕರವನ್ನು ಹೆಸರಿಸದೆ ಪ್ರಮಾಣಶ್ಲೋಕವೊಂದನ್ನು ಮತಂಗನಿಂದ ಉದ್ಧರಿಸುತ್ತಾನೆ :

ಸ ಪೂರ್ವಂ ಬ್ರಹ್ಮಗ್ರಂಥಿಸ್ಥಿತೇನ ವಹ್ನಿನಾ ಪ್ರೇರಿತಃ ಸನ್ ಊರ್ಧ್ವಮಾರ್ಗೇ ಗಚ್ಛನ್ನಾಘಾತೇನ ನಾಭಿಹೃದಯಕಂಠಮೂರ್ಧಮುಖೇಷು ಧ್ವನಿಂ ಪ್ರಕಟಯತಿ । ಊರ್ಧ್ವಪಥ ಇತಿ ಪ್ರಕೃತಗಾನೋಪಯೋಗಾರ್ಥಂ, ಅಧೋಽಪ್ಯನಾಹತಸ್ಯ ನಾದಸ್ಯೋತ್ಪತ್ತೇಃ ; ತದುಕ್ತಂ [21]—

2 ಕ, ಗ : ಆವಿರ್ಭಾವಯತೇ.

24 ಪಾಣಿನಿ, ಪಾಣಿನೀಯಶಿಕ್ಷಾ, 6, 7.

25 ನಾನ್ಯದೇವ, ಭರತಭಾಷ್ಯ, I, 2, 9-10, ಪು. 16.

26 ಕುನ್ಹನ್‌ರಾಜಾ, ಸಂಗೀತರತ್ನಾಕರದ ಆಂಗ್ಲಾನುವಾದ, ಪು. 46.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಕಂದಸ್ಥಾನಸಮುತ್ಥೋಽಪಿ ಸಮೀರಃ ಸಂಚರನ್ನಧಃ ।
ಊರ್ಧ್ವಂ ಚ ಕುರುತೇ ಸರ್ವಾನ್ನಾದಾನ್ ಮೂರ್ಧನಿ ತೊದ್ಧತಾನ್ ।[25]

ಹಾಗೆಯೇ 'ಆಸ್ಯ' ಎನ್ನುವುದಕ್ಕೆ ಬಾಯಿ ಎಂದೂ ಕುನ್ಹನ್‌ರಾಜಾ ಅರ್ಥಮಾಡುತ್ತಾನೆ.[26] ಈ ಅರ್ಥವು ಇಲ್ಲಿ ಸರಿಹೊಂದುವುದಿಲ್ಲವೆಂಬುದು ಸ್ಪಷ್ಟವಾಗಿದೆ. ಆಸ್ಯಪ್ರಾಂತದಲ್ಲಿ ಉದ್ಭವವಾಗುವುದು ಮುಂದಿನ ಶ್ಲೋಕದಲ್ಲಿ ಹೇಳಲಿರುವ ಕೃತ್ರಿಮನಾದ. ಇದು ಬಾಯಿಯಲ್ಲಿ ಹುಟ್ಟುವುದಿಲ್ಲ ; ಬಾಯಿಮುಚ್ಚಿಕೊಂಡು ಶಬ್ದವನ್ನು ಹೊರಡಿಸಿದರೆ ಆ ಶಬ್ದದೊಡನೆ ಮುಖದ ಮಾಂಸಖಂಡಗಳೂ ಮುಖದಲ್ಲಿ ಅನುನಾದಕಗಳಾದ (resonators) ಮೇಲು ದವಡೆಯ ಮತ್ತು ಕಣ್ಣುಗಳ ಮೇಲಿನ ಕುಹರಗಳು (maxillary sinuses and frontal sinuses) ಸ್ಪಂದಿಸುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ನಾದದ ಸಾಮಾನ್ಯ ಉದಯಕ್ಕೆ ಕಾರಣವಾದ ತೆರೆದ ಬಾಯಿ ಮತ್ತು ಗಂಟಲುಗಳನ್ನು ಇಲ್ಲಿ ಬಳಸುವುದಿಲ್ಲವಾದುದರಿಂದಲೂ ಸಾಮಾನ್ಯ ನಾದಕ್ಕಿರುವ ಅಭಿವ್ಯಕ್ತಿಶಕ್ತಿಯು ಇದಕ್ಕಿಲ್ಲದಿರುವುದರಿಂದಲೂ ಇದನ್ನು ಕೃತ್ರಿಮನಾದವೆನ್ನುತ್ತಾರೆ. ಮೂರ್ಧಾ ಎಂಬುದಕ್ಕೆ ತಲೆಯೆಂಬ ಅರ್ಥವಿದ್ದರೂ, ಅನುರಣನ ಕ್ರಿಯೆಯನ್ನುಂಟುಮಾಡುವ ವಾಯುಕೋಶವು ತಲೆಯಲ್ಲಿಲ್ಲದ್ದರಿಂದ ಮೂರ್ಧ ಎಂಬುದಕ್ಕೆ ಪಾಣಿನಿಯನ್ನು ಅನುಸರಿಸಿ (ಪಾಣಿನೀಯಶಿಕ್ಷಾ, I, 9) ನಾಲಿಗೆಯ ಅಂಗಳು ಎಂದು ಅರ್ಥಮಾಡಬಹುದು ; ಅದು ವಾಯುಕೋಶವನ್ನೊಳಗೊಂಡಿರುವುದರಿಂದ ಅದೇ ಇಲ್ಲಿ ಸರಿಯಾದ ಅರ್ಥವೆಂದು ಕಾಣುತ್ತದೆ.

ನಾದದ ಐದು ವಿಧಗಳು

**ನಾದೋಽತಿ ಸೂಕ್ಷ್ಮಃ ಸೂಕ್ಷ್ಮಶ್ಚ ಪುಷ್ಟೋಽಪುಷ್ಟಶ್ಚ ಕೃತ್ರಿಮಃ ।**
**ಇತಿ ಪಂಚಾಭಿಧಾಂ[3] ಧತ್ತೇ ಪಂಚಸ್ಥಾನಸ್ಥಿತಃ ಕ್ರಮಾತ್** ॥ 5 ॥ 221

ನಾದವು [ಈ] ಐದು ಸ್ಥಾನಗಳಲ್ಲಿದ್ದುಕೊಂಡು ಕ್ರಮವಾಗಿ ಅತಿಸೂಕ್ಷ್ಮ, ಮತ್ತು ಸೂಕ್ಷ್ಮ, ಪುಷ್ಟ ಮತ್ತು ಅಪುಷ್ಟ, ಕೃತ್ರಿಮವೆಂಬ ಐದು ಹೆಸರುಗಳನ್ನು ಪಡೆಯುತ್ತದೆ.

ಹೀಗೆ, ನಾದವು ನಾಭಿಯಲ್ಲಿ ಹುಟ್ಟಿ ಶ್ರವಣ ಗೋಚರವಾದಾಗ ಅತಿಸೂಕ್ಷ್ಮವೂ, ಹೃದಯದಲ್ಲಿ ಸೂಕ್ಷ್ಮವೂ, ಗಂಟಲಲ್ಲಿ ಪುಷ್ಟವೂ, ತಲೆಯಲ್ಲಿ ಅಪುಷ್ಟವೂ, ಮುಖದಲ್ಲಿ ಕೃತ್ರಿಮವೂ, ಆಗಿರುತ್ತದೆ. ಇವು ಆಧ್ಯಾತ್ಮಿಕತತ್ತ್ವಗಳಾದ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀಗಳಲ್ಲ ; ಕೇವಲ ಭೌತಿಕಶ್ರವಣಶಕ್ತಿಯ ವಿವಿಧ ವ್ಯಾಪ್ತಿಗಳಲ್ಲಿ ಗೋಚರವಾಗುವ ನಾದಾವಸ್ಥೆಗಳು. ಇವುಗಳನ್ನು ಸೂಕ್ಷ್ಮ, ಅತಿಸೂಕ್ಷ್ಮ, ವ್ಯಕ್ತ, ಅವ್ಯಕ್ತ, ಕೃತ್ರಿಮವೆಂದು ಮತಂಗನು ಕರೆದಿದ್ದಾನೆ.[27] ಇವುಗಳ ಕಲ್ಪನೆಯನ್ನು ಅನೇಕ ಅರ್ವಾಚೀನ ಗ್ರಂಥಕಾರರೂ ಬಳಸಿಕೊಂಡಿದ್ದಾರೆ. ಆದರೆ ಇವುಗಳ ಉತ್ಪತ್ತಿಯನ್ನು ಮತಂಗನು ಸ್ವಲ್ಪ ಭಿನ್ನವಾಗಿ ಹೇಳಿದ್ದಾನೆ :

ಸೂಕ್ಷ್ಮೋ ನಾದೋ ಗುಹಾವಾಸೀ ಹೃದಯೇ ಚಾತಿ ಸೂಕ್ಷ್ಮಕಃ ।
ಕಂಠಮಧ್ಯೇ ಸ್ಥಿತೋ ವ್ಯಕ್ತಃ ಅವ್ಯಕ್ತಸ್ತಾಲುದೇಶಗಃ ॥
ಕೃತ್ರಿಮೋ ಮುಖದೇಶೇ ತು ಜ್ಞೇಯಃ ಪಂಚವಿಧೋ ಬುಧೈಃ ।[28]

ಇವುಗಳನ್ನೇ ಜಗದೇಕಮಲ್ಲನು ಮತಂಗಮುನಿ ಸಮ್ಮತವೆಂದು ಹೇಳಿ,

3 ಇ : ಪಂಚಾಭಿಧಾ.

27 ಮತಂಗ, ಉ. ಗ್ರಂ., 23, ಪು. 3. 28 ಅದೇ ಗ್ರಂಥ, 24-25, ಪು. 3.

ಸ ತು ಪಂಚವಿಧೋ ನಾದೋ ಮತಂಗಮುನಿ ಸಮ್ಮತಃ |
ಅತಿಸೂಕ್ಷ್ಮಸ್ಸೂಕ್ಷ್ಮಶ್ಚ ಪುಷ್ಟೋಽಪುಷ್ಟಶ್ಚ ಕೃತ್ರಿಮಃ || [12]

ಎನ್ನುತ್ತಾನೆ. ಇವನು ಈ ವಿಧಗಳಿಗೆ ಹೇಳುವ ಉತ್ಪತ್ತಿ ಸ್ಥಾನಗಳನ್ನೇ ಶಾರ್ಙ್ಗದೇವನೂ ಒಪ್ಪಿದ್ದಾನೆ.

ನಾದಶಬ್ದದ ವ್ಯುತ್ಪತ್ತಿ

**ನಕಾರಂ ಪ್ರಾಣನಾಮಾನಂ ದಕಾರಮನಲಂ ವಿದುಃ |**
**ಜಾತಂ ಪ್ರಾಣಾಗ್ನಿಸಂಯೋಗಾತ್ತೇನ ನಾದೋಽಭಿಧೀಯತೇ || 6 ||** 222

'ನ'ಕಾರವನ್ನು ಪ್ರಾಣವೆಂಬ ಹೆಸರಿನದೆಂದೂ 'ದ'ಕಾರವನ್ನು ಅಗ್ನಿಯೆಂದೂ ತಿಳಿಯುತ್ತಾರೆ. ಪ್ರಾಣ ಮತ್ತು ಅಗ್ನಿಯ ಸೇರುವಿಕೆಯಿಂದ ಹುಟ್ಟಿದುದು ನಾದವೆಂದು ಕರೆಯಲ್ಪಡುತ್ತದೆ.

ನಾದವೆಂಬ ಶಬ್ದದ ಈ ನಿಷ್ಪತ್ತಿಗೆ ಶಾರ್ಙ್ಗದೇವನು ಮತಂಗನಿಗೆ ಋಣಿಯಾಗಿದ್ದಾನೆ :

ನಕಾರಃ ಪ್ರಾಣ ಇತ್ಯಾಹುರ್ದಕಾರಶ್ಚಾನಲೋ ಮತಃ | [29]
ವಹ್ನಿಮಾರುತಸಂಯೋಗಾನ್ನಾದಃ ಸಮುಪಜಾಯತೇ | [30]
ನಾದಸ್ಯ ಹಿ ಪದಾರ್ಥೋಽಯಂ ಸಮೀಚೀನೋ ಮಯೋದಿತಃ | [29]

ಅಲ್ಲದೆ, ಅವನು ನಾದಶಬ್ದಕ್ಕೆ 'ನಾದೋಽಯಂ ನದತೇರ್ಧಾತೋಃ' ಎಂಬ ನಿಷ್ಪತ್ತಿಯನ್ನೂ ಹೇಳುತ್ತಾನೆ.[27] 'ನದ್' ಎಂದರೆ ಶಬ್ದಮಾಡುವಿಕೆ ಎಂಬ ಅರ್ಥವಿದೆ.[31] ಮೊದಲಿನಲ್ಲಿ ಹೇಳಿದ ನಿಷ್ಪತ್ತಿಯು ತಂತ್ರಶಾಸ್ತ್ರಾಂತರ್ಗತವಾದುದು. ಕಲ್ಲಿನಾಥನು ಈ ಶ್ಲೋಕಕ್ಕೆ ವ್ಯಾಖ್ಯಾನ ಬರೆಯುವಾಗ, 'ವಿದುಃ, ಮಾಂತ್ರಿಕಾ ಇತಿ ಶೇಷಃ' ಎಂದು ಸ್ಪಷ್ಟಪಡಿಸುತ್ತಾನೆ.[32] ಸಿಂಹಭೂಪಾಲನು ಮಾತ್ರ 'ನಾಮಲಿಂಗಾನುಶಾಸನವಿದೋ ನಕಾರಂ ಪ್ರಾಣನಾಮಾನಂ ವಿದುರ್ದಕಾರಂ ಚಾಗ್ನಿಮ್' [21] ಎನ್ನುತ್ತಾನೆ.

ಜಗದೇಕಮಲ್ಲನೂ ನಾದ ಎಂಬ ಶಬ್ದಕ್ಕೆ ಇದೇ ವ್ಯುತ್ಪತ್ತಿಯನ್ನು ಕೊಡುತ್ತಾನೆ :

ನಕಾರಃ ಪ್ರಾಣ ಇತ್ಯುಕ್ತೋ ದಕಾರೋ ವಹ್ನಿರುಚ್ಯತೇ |
ಅರ್ಥೋಽಯಂ ನಾದಶಬ್ದಸ್ಯ ಸಂಕೇತಾತ್ ಪರಿಕೀರ್ತಿತಃ || [12]

ಅರ್ವಾಚೀನರಲ್ಲಿ ತ್ಯಾಗರಾಜನು ಪ್ರಾಣಾಗ್ನಿಸಂಯೋಗದಿಂದ ನಾದವು ಹುಟ್ಟುತ್ತದೆಂಬುದನ್ನು 'ಪ್ರಾಣಾನಲಸಂಯೋಗಮುವಲ್ಲ ಪ್ರಣವನಾದಮು ಸಪ್ತಸ್ವರಮುಲೈ ಬರಗ' [33] ಎನ್ನುವಲ್ಲಿ ಸೂಚಿಸಿದ್ದಾನೆ.

ಮಂತ್ರಶಾಸ್ತ್ರದಪ್ರಕಾರ, ಶಬ್ದಬ್ರಹ್ಮದ ವ್ಯಕ್ತಸ್ವರೂಪವಾದ ಶಬ್ದವು ಆಕಾಶದಗುಣ. ಇದು ವರ್ಣ ಮತ್ತು ಧ್ವನಿಯೆಂದು ಎರಡು ವಿಧ. ಧ್ವನಿಯಲ್ಲಿ ಅರ್ಥವಿಲ್ಲ ; ಅದು ಎರಡು ವಸ್ತುಗಳ ಸಂಘಾತದಿಂದ ಮಾತ್ರ ಜನಿಸಿದ್ದು. ವರ್ಣಕ್ಕೆ ಸ್ಥೂಲ ಮತ್ತು ಸೂಕ್ಷ್ಮಗಳೆಂಬ ಎರಡು ಅರ್ಥಗಳುಂಟು. ಈ ಅರ್ಥದ್ಯೋತನದಲ್ಲಿ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ಅವಸ್ಥೆಗಳಲ್ಲಿ ಶಬ್ದವು ವರ್ಣ, ಪದ ಮತ್ತು ವಾಕ್ಯಗಳಾಗಿ ವಿಕಾಸಪಡೆದು ವಾಙ್ಮಯ-ಸರ್ವಸ್ವಕ್ಕೂ ಆದುದರಿಂದ ಪ್ರಾಪಂಚಿಕವ್ಯವಹಾರಗಳಿಗೂ ಮೂಲವಾಗುತ್ತದೆ. ಇಷ್ಟೇ ಅಲ್ಲದೆ ಸಮಷ್ಟಿಯಲ್ಲಿರುವ ಬ್ರಹ್ಮಾಂಡವು ಪಿಂಡಾಂಡದಲ್ಲೂ ಪ್ರತಿಬಿಂಬಿಸಿರುವುದರಿಂದ, ಸೃಷ್ಟಿಕ್ರಮದಲ್ಲಿ ಬ್ರಹ್ಮತತ್ತ್ವವು ನಿರ್ಗುಣ-ನಿರಾಕಾರ

29 ಅದೇ ಗ್ರಂಥ, 22, ಪು. 3. 30 ಅದೇ ಗ್ರಂಥ, 19, ಪು. 3. 31 ಧಾತುಪಾಠ, iii, 7.
32 ಕಲ್ಲಿನಾಥ, ಉ. ಗ್ರಂ., ಪು. 65. 33 ತ್ಯಾಗರಾಜ, ಸಾರಮತಿರಾಗದ, ಆದಿತಾಳದ ಮೋಕ್ಷಮುಗಲದಾ ಎಂಬ ಕೃತಿ.

ಸ್ಥಿತಿಯಿಂದ ಸಗುಣ–ಸಾಕಾರಸ್ಥಿತಿಗೆ ಮಾರ್ಪಾಟಾಗುವಾಗ ಅನುಭವಿಸುವ ಉಪಾಧಿಗಳನ್ನೆಲ್ಲಾ ಪಿಂಡಾಂಡವೂ–ಎಂದರೆ ದೇಹವೂ–ಪಡೆದಿರುತ್ತದೆ. ಈ ತತ್ತ್ವಗಳನ್ನು ವರ್ಣಮಾಲೆಯಿಂದ ಸಂಕೇತಿಸುವುದು ಮಂತ್ರಶಾಸ್ತ್ರದ ಪ್ರಾಥಮಿಕ ಆಧಾರಪ್ರತಿಜ್ಞೆ. ಹಿಂದಿನ ಪ್ರಕರಣದಲ್ಲಿ ಹೇಳಿದ ಷಟ್‌ಚಕ್ರಗಳಲ್ಲಿ ಅಕಾರಾದಿಯಾಗಿ ಕ್ಷಕಾರಾಂತವಾದ ಐವತ್ತು ವರ್ಣಗಳು ವಿಲೋಮಕ್ರಮದಲ್ಲಿ ಹರಡಿಕೊಂಡಿವೆ. ಇವುಗಳನ್ನು ದೈವೀಶಕ್ತಿಗಳಿಗೆ ಅನ್ವಯಿಸುವುದು ಮಂತ್ರಶಾಸ್ತ್ರದಲ್ಲಿ ಉಪಾಸನೆಯ ಕಾರ್ಯವಿಧಾನ. ಈ ವರ್ಣಗಳಿಗೆ ಮಂತ್ರಗಳೆಂದು ಹೆಸರು. ಇವುಗಳನ್ನು ಗುರೂಪದಿಷ್ಟಮಾರ್ಗದಲ್ಲಿ ಸಾಧಿಸಿದರೆ ಆಯಾ ತತ್ತ್ವಗಳು ಸಾಧಕನ ಸ್ವಾಧೀನವಾಗುತ್ತವೆ.[34] ಈ ಕ್ರಮದಲ್ಲಿ ನಕಾರವು ಪ್ರಾಣತತ್ತ್ವವನ್ನೂ ದಕಾರವು ಅಗ್ನಿತತ್ತ್ವವನ್ನೂ ಸಂಕೇತಿಸುತ್ತವೆ. ಪ್ರಾಣವಾಯು ಎನ್ನುವುದಕ್ಕೆ ಉಸಿರು ಎಂದೂ ಅಗ್ನಿ ಎನ್ನುವುದಕ್ಕೆ ಎಲ್ಲಾ ಜೈವಿಕವ್ಯಾಪಾರಗಳಿಗೆ ಆಧಾರವಾದ ಕ್ರಿಯಾಶಕ್ತಿ (energy) ಎಂದೂ ಸ್ಥೂಲವಾಗಿ ಅರ್ಥಮಾಡಿದರೆ ಎದೆಯಲ್ಲಿರುವ ಉಸಿರನ್ನು ಪ್ರಯತ್ನಪೂರ್ವಕವಾಗಿಯೂ, ವಿವಿಧ ರೀತಿಯಲ್ಲಿಯೂ ಗಂಟಲಲ್ಲಿರುವ ಎಪಿಗ್ಲಾಟಿಸ್ ಎಂಬ ಮಾಂಸಪೇಶಿಯಲ್ಲಿರುವ ಕಂಠವಿವರದ ಮೂಲಕ ಹೊರಡಿಸಿದಾಗ ನಾದವು ಹುಟ್ಟುತ್ತದೆ, ಎಂಬ ಭೌತಿಕಾರ್ಥವೂ ಇಲ್ಲಿ ಅನ್ವಯವಾಗುತ್ತದೆ.

ತ್ರಿಸ್ಥಾನಗಳು

**ವ್ಯವಹಾರೇ ತ್ವಸೌ ತ್ರೇಧಾ ಹೃದಿ ಮಂದ್ರೋಽಭಿಧೀಯತೇ ।**
**ಕಂಠೇ ಮಧ್ಯೋ ಮೂರ್ಧ್ನಿ ತಾರೋ ದ್ವಿಗುಣಶ್ಚೋತ್ತರೋತ್ತರಃ ॥ 7 ॥ 223**

[ಸಾಮಾನ್ಯ] ವ್ಯವಹಾರದಲ್ಲಾದರೋ ಅದು ಮೂರು ವಿಧ : ಹೃದಯದಲ್ಲಿ ಮಂದ್ರವೆಂದು ಕರೆಯಲ್ಪಡುತ್ತದೆ ; ಗಂಟಲಿನಲ್ಲಿ ಮಧ್ಯ ; ತಲೆಯಲ್ಲಿ ತಾರ. [ಈ ಪ್ರತಿಯೊಂದು ವಿಧವೂ] ಉತ್ತರೋತ್ತರವಾಗಿ [ಹಿಂದಿನದಕ್ಕಿಂತ] ಎರಡರಷ್ಟು [ಇರುತ್ತದೆ].

ವ್ಯವಹಾರ ಎನ್ನುವುದಕ್ಕೆ ಗೀತೋಪಯೋಗಿತ್ವ ಎಂದು ಕಲ್ಲಿನಾಥನು ವ್ಯಾಖ್ಯೆಮಾಡುತ್ತಾನೆ.[35] ಸಿಂಹಭೂಪಾಲನು ಇದನ್ನು ಇನ್ನೂ ಸ್ಪಷ್ಟಪಡಿಸುತ್ತಾನೆ : 'ವ್ಯವಹಾರೇ, ಗಾನವ್ಯವಹಾರೇ ; ಘಟಪಟಾದ್ಯಭಿಧಾನ-ವ್ಯವಹಾರೇ ತು ಮುಖೋತ್ಪನ್ನಸ್ಯಾಪಿ ಧ್ವನೇರುಪಯೋಗಿತ್ವಾತ್ |'[36] ಗೀತವ್ಯವಹಾರಕ್ಕೆ ಮಾತ್ರ ಹೃದಯ, ಕಂಠ ಮತ್ತು ಶಿರಸ್ಸು– ಈ ಮೂರು ಸ್ಥಾನಗಳಲ್ಲಿ ಉತ್ಪತ್ತಿಯಾಗಿ ಕ್ರಮವಾಗಿ ಮಂದ್ರ, ಮಧ್ಯ ಮತ್ತು ತಾರಗಳೆಂಬ ಸಂಜ್ಞೆಗಳನ್ನುಳ್ಳ ಮೂರು ನಾದಪ್ರದೇಶಗಳು ಬೇಕಾಗುತ್ತವೆಂಬುದೂ ಭಾಷಾಮೂಲವಾದ ವ್ಯವಹಾರಕ್ಕೆಲ್ಲ ಇವುಗಳಲ್ಲಿ ಕಂಠಪ್ರದೇಶೋದ್ಭವವಾದುದು ಮಾತ್ರ ಸಾಕಾಗುತ್ತದೆಂಬುದೂ ಅನುಭವ ವೇದ್ಯವೇ ಆಗಿದೆ. 'ತತ್ರ ನಾದೋಪಯೋಗಿತ್ವಾನ್ಮಾನುಷಂ ದೇಹಮುಚ್ಯತೇ' ಎಂಬ ತನ್ನ ಪ್ರತಿಜ್ಞಾವಾಕ್ಯವನ್ನು[37] ಅನುಸರಿಸಿ ಶ್ರೀಮತ್ ಶಾರ್ಙ್ಗದೇವನು ಮಾನುಷದೇಹ ಸಹಜಮಾತ್ರವಾದ ಹೃದಯ ಕಂಠ ಮೂರ್ಧ ಪ್ರದೇಶಗಳಲ್ಲಿ ಉದ್ಭವವಾಗುವ ನಾದವನ್ನು ಹೇಳುತ್ತಿದ್ದರೂ, ಈ ಅಂಗಗಳನ್ನು ಪಡೆಯದ ವಾದ್ಯಗಳಿಗೂ ಈ ನಾದಪ್ರದೇಶಗಳ ವಿವಕ್ಷೆ ಸಲ್ಲುತ್ತದೆ. ಏಕೆಂದರೆ ಇವುಗಳಲ್ಲಿ ಉಂಟಾಗುವ ಸಂಗೀತೋಪಯೋಗಿ ನಾದವನ್ನೂ ಮೇಲೆ ಹೇಳಿದ ಸ್ಥಾನಗಳಿಗೆ ಪರಸ್ಪರವಾದ ಮೂರು ಪ್ರದೇಶಗಳಲ್ಲಿ ವಿಂಗಡಿಸಬಹುದು. ಭಾರತೀಯ ಸಂಗೀತವಾದ್ಯಗಳ ಮಟ್ಟಿಗೆ ಈ ಮಾತು ಚೆನ್ನಾಗಿ ಅನ್ವಯಿಸುತ್ತದೆ. 'ತು' ಎಂಬ ನಿಪಾತವನ್ನು ಇಲ್ಲಿ ವಿಶೇಷಾರ್ಥದಲ್ಲಿ ಗ್ರಹಿಸಬೇಕು. ಏಕೆಂದರೆ ಹಲವು ಪಾಶ್ಚಾತ್ಯ ಸಂಗೀತ ವಾದ್ಯಗಳಲ್ಲಿ ಇದಕ್ಕೆ ಮೀರಿದ ನಾದ ವ್ಯಾಪ್ತಿಯಿದೆ. ಉದಾಹರಣೆಗೆ ಪಿಯಾನೋ ವಾದ್ಯದಲ್ಲಿ ಇಂತಹ

34 Arthur Avalon : The Serpent Power, Ch. V. (Mantra) ; pp. 83-102.

35 ಕಲ್ಲಿನಾಥ, ಉ. ಗ್ರಂ. ಪು. 66. 36 ಸಿಂಹಭೂಪಾಲ, ಉ. ಗ್ರಂ., ಪು. 66.

37 ಶಾರ್ಙ್ಗದೇವ, ಉ. ಗ್ರಂ., I, 2, 17.

ಏಳು ಸ್ಥಾಯಿಗಳನ್ನು (34.7 ರಿಂದ 4186.0 ಕಂಪನಮಾನದವರೆಗೆ) ಪಡೆಯಬಹುದು. ಅಲ್ಲದೆ ಮಾನವಶಾರೀರ ಸಹಜವಾದ ಸುಮಾರು ಮೂರು ಸ್ಥಾಯಿಗಳ ವ್ಯಾಪ್ತಿಯನ್ನು ಉಳಿದು ಅದಕ್ಕೆ ನೀಚವಾಗಿ ಬೇಸ್ ವಯೊಲ್, ಕೆಟ್ಲ್ ಡ್ರಮ್, ಬೇಸ್‌ಟ್ಯೂಬಾ, ಚೆಲ್ಲೊ, ಬೆಸ್ಸೂನ್, ಬೇಸ್ ಕ್ಲಾರಿನೆಟ್, ಫ್ರೆಂಚ್ ಹಾರ್ನ್, ಟೆನರ್ ಟ್ರಾಂಬೋನ್, ಮೊದಲಾದ ವಾದ್ಯಗಳ ನಾದವ್ಯಾಪ್ತಿಯು ಇರುತ್ತದೆ; ಅದಕ್ಕೆ ಉಚ್ಚವಾಗಿ ವಯೊಲಿನ್, ಓಬೋ, ಫ್ಲೂಟ್, ಪಿಕೋಲೋ ಮೊದಲಾದವುಗಳ ನಾದವ್ಯಾಪ್ತಿಯು ಇರುತ್ತದೆ. ಮಾನವಶಾರೀರವ್ಯಾಪ್ತಿಯು ಆಯಾ ವ್ಯಕ್ತಿಗಳನ್ನು ಅವಲಂಬಿಸಿ ಸ್ವಲ್ಪ ವ್ಯತ್ಯಾಸವಾಗುವುದೂ ಉಂಟು. ಆದುದರಿಂದ ಅದರ ಕನಿಷ್ಠ ಹಾಗೂ ಗರಿಷ್ಠ ಮಿತಿಗಳು ವಿವಿಧ ಆಕರಗಳಲ್ಲಿ ಬೇರೆಯಾಗಿರುತ್ತವೆ. ಅಲೆಕ್ಸಾಂಡರ್ ವುಡ್ ಪುರುಷ ಶಾರೀರ ಹಾಗೂ ಸ್ತ್ರೀ ಶಾರೀರಗಳ ಸರಾಸರಿ ಆಧಾರಸ್ವರವು ಕ್ರಮವಾಗಿ ಸೆಕಂಡಿಗೆ 145 ಮತ್ತು 230 ಕಂಪನಗಳೂ, ವ್ಯಾಪ್ತಿಯು ಹನ್ನೆರಡು ಪೂರ್ಣ ಸ್ವರಗಳಷ್ಟೂ ಇರುತ್ತವೆನ್ನುತ್ತಾನೆ. ಗಾಯನಸಂದರ್ಭದಲ್ಲಿ ಕನಿಷ್ಠದಲ್ಲಿ 66, ಗರಿಷ್ಠದಲ್ಲಿ 1056 ಎಂದು ಒಟ್ಟು ಸುಮಾರು ನಾಲ್ಕು ಸ್ಥಾಯಿಗಳ ವ್ಯಾಪ್ತಿಯನ್ನು ಅವನು ಹೇಳಿದರೂ § ಇದರ ಮಧ್ಯದ ಮೂರೇ ಸಾಮಾನ್ಯ ಗಾನವ್ಯವಹಾರ ಯೋಗ್ಯವಾದುದು. ವಿವಿಧ ಸಂಗೀತವಾದ್ಯಗಳ ನಾದವ್ಯಾಪ್ತಿಯನ್ನು ಈ ಕೆಳಗಿನ ಪಥಕ (1) ರಲ್ಲಿ ತೋರಿಸಿದೆ. ಈ ವಿಶಾಲವ್ಯಾಪ್ತಿಯ ನಾದವು ಸಂಗೀತೋಪಯೋಗಿಯಾದರೂ ಪುಷ್ಟಿ, ಪ್ರಸನ್ನತೆ, ಕಾಂತಿ, ಲಾಲಿತ್ಯ ಮೊದಲಾದ ಸ್ವರಗುಣಗಳು ವಿಶೇಷವಾಗಿ ದೊರೆಯುವುದು ಮಾನವ ಕಂಠಧ್ವನಿಗೆ ಪರಸ್ಪರವಾದ ನಾದಪ್ರದೇಶದಲ್ಲಿಯೇ. ಆದುದರಿಂದಲೇ ಗ್ರಂಥಕಾರನು 'ವ್ಯವಹಾರೇ ತು' ಎಂದಿದ್ದಾನೆ. ಗೀತ ಎನ್ನುವುದಕ್ಕೆ ಇಲ್ಲಿ ವಾದ್ಯವನ್ನೂ ಸೇರಿಸಿದರೆ ಈ ನಾದದ ವ್ಯಾಪ್ತಿ ಹೆಚ್ಚುತ್ತದೆ. ಹಾಗಲ್ಲದೆ ಸಾಹಿತ್ಯಾರ್ಥವುಳ್ಳ ಹಾಡು ಎಂದು ಅರ್ಥಮಾಡಿದರೆ (ಅದು ಪ್ರಧಾನವಾಗಿ ಉತ್ಪತ್ತಿಯಾಗುವ) ಮನುಷ್ಯ ಶಾರೀರದ ವ್ಯಾಪ್ತಿ ಎಂಬ ತಾತ್ಪರ್ಯ ಬರುತ್ತದೆ. ಹೀಗಾದರೆ ಸ್ತ್ರೀ ಪುರುಷ ಭೇದವೂ ಸೇರಿ ಮನುಷ್ಯ ಶಾರೀರದ (ಕಂಠಧ್ವನಿಯ) ವ್ಯಾಪ್ತಿ ಸಾಮಾನ್ಯವಾಗಿ ಮೂರು ಸ್ಥಾಯಿಗಳಷ್ಟು. ಇದರಲ್ಲಿ ನೀಚನಾದಪ್ರದೇಶವನ್ನು ಮಂದ್ರವೆಂದೂ, ಉಚ್ಚನಾದ ಪ್ರದೇಶವನ್ನು ತಾರವೆಂದೂ ಇವೆರಡೂ ಅಲ್ಲದೆ ಮಧ್ಯಪ್ರದೇಶದಲ್ಲಿರುವುದನ್ನು ಮಧ್ಯವೆಂದೂ ಸ್ಥಾಯಿಗೆ—ಎಂದರೆ ನಾದವು ಅಭಿವ್ಯಕ್ತವಾಗುವ ಮಟ್ಟಕ್ಕೆ—ಸಂಜ್ಞೆ. ಇದು ಪ್ರಯೋಗಸಿದ್ಧವೂ ಲೋಕರೂಢವೂ ಆಗಿರುವ ವಿಷಯವೇ. ಹಾಗಲ್ಲದೆ ಸಿಂಹಭೂಪಾಲನು ಹೇಳುವ ಭಾಷಾದ್ರವ್ಯವಾದ ಧ್ವನಿ ಎಂಬರ್ಥವಾದರೆ ಆಧಾರ ನಾದಮಟ್ಟದಿಂದ ಪಂಚಮ ಅಥವಾ ಆವರ್ತನಸ್ವರದ ವರೆಗೆ ಮಾತ್ರ ಇದರ ವ್ಯಾಪ್ತಿ. ಶಾರ್ಙ್ಗದೇವನು ಗಾನಯೋಗ್ಯನಾದವನ್ನು ವರ್ಣಿಸುತ್ತಿರುವುದರಿಂದ ಈ ವ್ಯಾಖ್ಯಾನವು ಇಲ್ಲಿಗೆ ಸಲ್ಲುವುದಿಲ್ಲ.

ಈ ಶ್ಲೋಕದಲ್ಲಿ 'ತು' ಎಂಬ ನಿಪಾತಕ್ಕೆ ಇನ್ನೂ ಒಂದು ವಿಶೇಷಾರ್ಥವಿದೆ. ಅತಿಸೂಕ್ಷ್ಮ, ಸೂಕ್ಷ್ಮ, ಪುಷ್ಟ, ಅಪುಷ್ಟ, ಕೃತ್ರಿಮ ಎಂಬ ಘಟ್ಟಗಳಲ್ಲಿಯೂ ಪ್ರಾತಿಶಾಖ್ಯಾದಿಗಳಲ್ಲಿ ಹೇಳುವ ಉಪಾಂಶು, ಧ್ವಾನ, ನಿಮದ, ಉಪಬ್ದಿಮತ್, ಮಂದ್ರ, ಮಧ್ಯ ಮತ್ತು ತಾರಗಳೆಂಬ ಸ್ಥಾನಗಳಲ್ಲಿಯೂ ನಾದವು ಪ್ರಕಟವಾಗುತ್ತದೆ, ನಿಜ; ಆದರೆ ಇಷ್ಟೆಲ್ಲವೂ ಶ್ರವಣಯೋಗ್ಯವಲ್ಲ. ಶ್ರವಣಯೋಗ್ಯವಾದ ನಾದವು ಸುಮಾರು 16 ರಿಂದ 20,000ರ ವರೆಗಿರುವ ಕಂಪನವ್ಯಾಪ್ತಿಯಲ್ಲಿರುತ್ತದೆ. ಮಾನವ ಶರೀರದಲ್ಲಿ ಇದರಲ್ಲಿ ಮಧ್ಯಭಾಗವನ್ನು ಕೇಳಲಾಗುತ್ತದೆಯೇ ಹೊರತು ಈ ವ್ಯಾಪ್ತಿಯನ್ನು ಒಂದೇ ಕಂಠವು ಪಡೆಯಲಾರದು. ಅಲ್ಲದೆ ಈ ಮಿತಿಗಳ ಬಳಿಯಲ್ಲಿ ಮಾನವನ ಸಹಿಷ್ಣುತೆಯೂ ಗ್ರಹಣಶಕ್ತಿಯೂ ಬಹುಬೇಗ ಅಳಿಯುತ್ತ ಹೋಗುತ್ತವೆ; ಇದಕ್ಕೆ ಕಾರಣ ನಾದವು ತನ್ನ ರಂಜಕತ್ವವನ್ನು ಕಳೆದುಕೊಳ್ಳುವುದೇ ಆಗಿದೆ. ಆದ್ದರಿಂದ ತಾತ್ತ್ವಿಕವಾಗಿ ನಾದವ್ಯಾಪ್ತಿಯನ್ನು ವಿಶಾಲವೆಂದು ಹೇಳಿದರೂ ವ್ಯವಹಾರಯೋಗ್ಯವಾದ ನಾದವೆಲ್ಲ ಮೂರು ಸ್ಥಾಯಿಗಳ ವ್ಯಾಪ್ತಿಯಲ್ಲೇ ಅಡಗಿರುತ್ತದೆ.

§ Alexander wood, the Physics of Music, p. 133.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## ಪಟ್ಟಿಕೆ (1) ವಿವಿಧ ಸಂಗೀತವಾದ್ಯಗಳ ನಾದವ್ಯಾಪ್ತಿ

| ಕ್ರಮ ಸಂಖ್ಯೆ | ಸಂಗೀತವಾದ್ಯ | ಕಂಪನಸಂಖ್ಯೆ[1] ರಿಂದ | ರವರೆಗೆ | ಸ್ಥಾಯಿಗಳು : ಸುಮಾರು |
|---|---|---|---|---|
| 1 | ಶ್ರಾವ್ಯತೆಯ ನೀಚಮಿತಿ : 32 ಅಂಗುಲದ ಆರ್ಗನ್ ಕೊಳವೆ | 16·4 | — | — |
| 2 | ಪಿಯಾನೋ .... | 34·7 | 4186·0 | 7· 0 |
| 3 | ಬೇಸ್ ವಯೋಲ್ .... | 41·2 | 246·9 | 2· 5 |
| 4 | ಬೇಸ್ ಟ್ಯೂಬಾ .... | 43·7 | 349·2 | 3· 0 |
| 5 | ಫ್ರೆಂಚ್ ಹಾರ್ನ್ .... | 61·7 | 698·4 | 3·25 |
| 6 | ಚೆಲ್ಲೋ .... | 65·4 | 880·0 | 3·75 |
| 7 | ಬೇಸ್ ಕ್ಲಾರಿನೆಟ್ .... | 73·4 | 698·4 | 3·25 |
| 8 | ಟೆನರ್ ಟ್ರಾಂಬೋನ್ .... | 82·4 | 493 9 | 2· 5 |
| 9 | ಕೆಟ್ಲ್ ಡ್ರಮ್ .... | 87·3 | 174·6 | 1· 0 |
| 10 | ಮಾನವ ಕಂಠಧ್ವನಿ : | | | |
| | a ಬೇಸ್ .... | 82·4 | 349·2 | 2· 0 |
| | b ಬ್ಯಾರಿಟೋನ್ .... | 98·0 | 392·0 | 2· 0 |
| | c ಟೆನರ್ .... | 130·8 | 523·2 | 2· 0 |
| | d ಆಲ್ಟೋ .... | 174·6 | 698·4 | 2· 0 |
| | e ಸೋಪ್ರಾನೋ .... | 246·9 | 1174·7 | 2·25 |
| 11 | ವಯೊಲಾ .... | 130 8 | 1318·5 | 2·25 |
| 12 | ಟ್ರಂಪೆಟ್ .... | 164·8 | 1046 5 | 2· 5 |
| 13 | ಸೋಪ್ರಾನೋ ಕ್ಲಾರಿನೆಟ್ .... | 164·8 | 1568·0 | 3 25 |
| 14 | ವಯೊಲಿನ್ .... | 196·0 | 3135·9 | 4· 0 |
| 15 | ಫ್ಲೂಟ್ .... | 261·6 | 2249 3 | 3· 0 |
| 16 | ಓಬೋ .... | 261·6 | 1568·0 | 2· 5 |
| 17 | ಪಿಕೋಲೋ .... | 523 2 | 4498·6 | 3· 0 |
| 18 | ಉಚ್ಚತಮ : 0·75 ಅಂಗುಲದ ಆರ್ಗನ್ ಕೊಳವೆ | 8372·0 | — | — |
| 19 | ಸಂಗೀತೋಪಯುಕ್ತ ಆವರ್ತನ ಸ್ವರಗಳ ಉಚ್ಚಮಿತಿ .... | 10,000 | — | — |
| 20 | ಶ್ರಾವ್ಯತೆಯ ಮಿತಿ .... | 16,000 | — | — |

1 ನಾದವನ್ನು ಕರ್ಣಕುಹರಗಳಿಗೆ ಒಯ್ಯುವ ಗಾಳಿಯ ಅಣುಗಳು ಒಂದು ಸೆಕೆಂಡಿನ ಕಾಲದಲ್ಲಿ ಕಂಪಿಸುವ ಸಂಖ್ಯೆ.

ಮಾನವದೇಹದಲ್ಲಿ ಉತ್ಪತ್ತಿಯಾಗುವ ನಾದದ್ರವ್ಯವನ್ನು ಭಾರತೀಯರು ಬಹು ಪ್ರಾಚೀನಕಾಲದಿಂದಲೂ ಸ್ಥಾನಗಳಲ್ಲಿ ವಿಂಗಡಿಸುತ್ತಾ ಬಂದಿದ್ದಾರೆ. ಇದು ಬಹು ತಾರ್ಕಿಕವಾಗಿಯೂ, ವೈಜ್ಞಾನಿಕವಾಗಿಯೂ ಇದೆ. ನಾದದ ಕಾರಣ, ಸಂಕಲ್ಪ, ವ್ಯಕ್ತತಾರೀತಿ, ಘಟ್ಟಗಳು, ಇವುಗಳನ್ನು ಆಧರಿಸಿಕೊಂಡಿದೆ ಈ ಸ್ಥಾನತತ್ತ್ವ. ಇಂತಹ ಏಳು ಸ್ಥಾನಗಳನ್ನು ಪ್ರಾತಿಶಾಖ್ಯೆಗಳು ವರ್ಣಿಸುತ್ತವೆ :

1) ಇಂದ್ರಿಯ ವ್ಯಾಪಾರದಿಂದ ಕೂಡಿಯೂ ಶ್ರವಣಗೋಚರವಿಲ್ಲದೆ, ಉತ್ಪಾದಕನು ಮಾತ್ರ ಗ್ರಹಿಸ ಬಹುದಾದ ನಾದಸ್ಥಾನಕ್ಕೆ ಉಪಾಂಶುವೆಂದು ಹೆಸರು. ಇಲ್ಲಿ ನಾದವು ಗುಪ್ತ ಅಥವಾ ಸುಪ್ತ ಅವಸ್ಥೆಯಲ್ಲಿರುತ್ತದೆ. 'ಅ' ಎನ್ನಬೇಕು ಎಂದಿಟ್ಟುಕೊಳ್ಳೋಣ. ಇದರ ಸಂಕಲ್ಪವಾದ ಕೂಡಲೇ ನಮ್ಮ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳು ಇದರ ಉಚ್ಚಾರಣೆಯಲ್ಲಿ ಪ್ರಸಕ್ತವಾಗುತ್ತವೆ ; ತಕ್ಷಣ ಮನಸ್ಸಿಗೆ ಈ ಶಬ್ದವು 'ಕೇಳಿಸುತ್ತದೆ'. ಆದರೆ ಈ ಶಬ್ದವು ಸಂಕಲ್ಪಮಾತ್ರದಲ್ಲಿ ಉಳಿದಿದ್ದು, ಬಾಹ್ಯೇಂದ್ರಿಯ ಗೋಚರಕ್ಕೆ ಆವಶ್ಯಕವಾದಷ್ಟು ಸ್ಥೂಲ ವಾಗಿರುವುದಿಲ್ಲ. ಇದನ್ನೇ ಉಪಾಂಶು ನಾದ ಎನ್ನುವುದು. ಅಭಿವ್ಯಕ್ತಿಯ ಬಯಕೆಯುಳ್ಳ ಆತ್ಮನು ಮನಸ್ಸನ್ನು ಪ್ರೇರಿಸಿ, ಅದು ನಾಭಿಯಲ್ಲಿರುವ ಅಗ್ನಿಯನ್ನು ಹೊಡೆದು ಎಬ್ಬಿಸಿ, ಅಗ್ನಿಯು ಪ್ರಾಣವಾಯುವನ್ನು ಕೆರಳಿಸಿದಾಗ, ಪ್ರಾಣವು ಮೇಲುದಿಕ್ಕಿನಲ್ಲಿ ಸಂಚರಿಸುತ್ತದೆಂದು ಇದೇ ಪ್ರಕರಣದ ಮೂರನೆಯ ಶ್ಲೋಕದಲ್ಲಿ ಹೇಳಿದೆ. ಈ ಊರ್ಧ್ವಪಥ ಸಂಚಾರದ ಪ್ರಥಮ ಘಟ್ಟವನ್ನು ಉಪಾಂಶುವೆಂದು ಸ್ಥೂಲವಾಗಿ ತಿಳಿಯಬಹುದು. 2) ಅಕ್ಷರ, ವ್ಯಂಜನಗಳ ಉಪಾಧಿಯಿಲ್ಲದೆ ಇರುವ, ಕೇವಲ ಉಚ್ಚಾರಣ ಪ್ರಯತ್ನಮಾತ್ರವಿದ್ದು, ನಿರಪೇಕ್ಷವೂ ಸಾಮಾನ್ಯವೂ ಆಗಿರುವ ನಾದಸ್ಥಾನಕ್ಕೆ ಧ್ವಾನವೆಂದು ಹೆಸರು. ಇದು ನಾದದ ಶುದ್ಧವಾದ, ಆದರೆ ಅತ್ಯಂತ ಅಂತಃಶ್ರವಣ ಗೋಚರವಾದ, ರೂಪು. 3) ಅಕ್ಷರ ಮತ್ತು ವ್ಯಂಜನಗಳು ಸೇರಿ ನಾದವು ಅಂತರ್ಗೋಚರವಾದರೆ ಈ ಸ್ಥಾನಕ್ಕೆ ನಿಮದವೆಂದು ಹೆಸರು. ಈ ಮೂರೂ ನಾದದ ನಿಃಶಬ್ದ ಹಂತಗಳು. ಎಂದರೆ, ಉಚ್ಚಾರಣ ಪ್ರಸಕ್ತಿಯ ಸಂಕಲ್ಪ, ವರ್ಣರಹಿತನಾದ, ವರ್ಣಸಹಿತವಾದ ನಾದ ಇವುಗಳ ಅಂತರ್ವ್ಯಾಪಾರಗಳಾಗಿದ್ದು, ಬಾಹ್ಯಗೋಚರಕ್ಕೆ ನಿಲುಕದೆ ಇರುತ್ತವೆ ; ಉತ್ಪಾದಕನು ಮಾತ್ರ ಗ್ರಹಿಸಬಲ್ಲ ಸ್ಥಿತಿಯಲ್ಲಿರುತ್ತವೆ. 4) ಅಕ್ಷರ ಮತ್ತು ವ್ಯಂಜನಗಳು ಕೂಡಿ, ಅತ್ಯಂತ ನೀಚಮಟ್ಟದಲ್ಲಿ ವ್ಯಕ್ತವಾದ, ಆದರೆ ಬಾಹ್ಯಶ್ರವಣೇಂದ್ರಿಯದ ಅತಿ ಸೂಕ್ಷ್ಮ ಗೋಚರಕ್ಕೆ ಸಿಕ್ಕುವ, ನಾದಸ್ಥಾನಕ್ಕೆ ಉಪಬ್ದಿಮತ್ ಎಂದು ಹೆಸರು. ಇದು ಬಹುಶಃ ನಾಭಿಸ್ಥಾನದಲ್ಲಿ ವ್ಯಕ್ತವಾಗುವ ಸಶಬ್ದನಾದ. ಹೃದಯಪ್ರಾಂತದಲ್ಲಿ ಅದು ಹುಟ್ಟಿದಾಗ ಮಂದ್ರವೆಂದೂ, ಕಂಠದಲ್ಲಿ ಮಧ್ಯಮವೆಂದೂ, ಶಿರಸ್ಸಿನಲ್ಲಿ ತಾರವೆಂದೂ ಕರೆಯಲ್ಪಡುತ್ತದೆ. ಈ ಕಡೆಯ ಮೂರೇ ಗಾನವ್ಯವಹಾರಕ್ಕೆ ಯೋಗ್ಯವಾಗಿವೆ ; ಒಂದು ವ್ಯಕ್ತಿಯ ಸಾಮಾನ್ಯ ವಾಚಿಕ ವ್ಯವಹಾರಕ್ಕೆ ಒಂದು ಸ್ಥಾನದ ವ್ಯಾಪ್ತಿ ಸಾಕಾದರೂ, ಎಲ್ಲಾ ವ್ಯಕ್ತಿಗಳ ಎಲ್ಲಾ ವಾಚಿಕ ವ್ಯವಹಾರವನ್ನೂ ಸೇರಿಸಿದರೆ ಮೂರು ಸ್ಥಾನಗಳ ವ್ಯಾಪ್ತಿ ಬೇಕಾಗುತ್ತದೆ.

ಈ ಏಳೂ ಸ್ಥಾನಗಳನ್ನು ತೈತ್ತಿರೀಯ ಪ್ರಾತಿಶಾಖ್ಯ ಸೂತ್ರಗಳು ಹೀಗೆ ಹೇಳುತ್ತವೆ :

ಸಪ್ತವಾಚಸ್ಥಾನಾನಿ ಭವಂತಿ । ಉಪಾಂಶುಧ್ವಾನನಿಮದಉಪಬ್ದಿಮತ್‌ಮಂದ್ರಮಧ್ಯಮತಾರಾಣಿ । ಕರಣವದ ಶಬ್ದಂ ಅಮನಃ ಪ್ರಯೋಗಂ ಉಪಾಂಶು । ಅಕ್ಷರವ್ಯಂಜನಾನಾಂ ಅನುಪಲಬ್ಧಿರ್ಧ್ವಾನಃ । ಉಪಲಬ್ಧಿರ್ನಿಮದಃ । ಸಶಬ್ದಂ ಉಪಬ್ದಿಮತ್ । ಉರಸಿ ಮಂದ್ರಮ್ । ಕಂಠೇ ಮಧ್ಯಮಮ್ । ಶಿರಸಿ ತಾರಮ್ ।[38]

ವ್ಯವಹಾರ ಯೋಗ್ಯವಾಗಿರುವುದು ಮೂರೇ ಸ್ಥಾನಗಳು ಎಂಬುದನ್ನು ವೈದಿಕಸಾಹಿತ್ಯವು ಪುನಃ ಪುನಃ ಗುರುತಿಸುತ್ತದೆ : ಉದಾಹರಣೆಗೆ,

---

38 ತೈತ್ತಿರೀಯ ಪ್ರಾತಿಶಾಖ್ಯ, XXIII, 4.9.

ಉಪಾಂಶು ವ್ಯತಿರಿಕ್ತಾಃ ಸರ್ವಾವಾಚೋ ಮಂದ್ರಮಧ್ಯಮೋತ್ತಮಭೇದೇನ ತ್ರಿಸ್ಥಾನಾಭವಂತಿ[39]

ತ್ರೀಣಿ ಮಂದ್ರಮಧ್ಯಮೋತ್ತಮ ಸ್ಥಾನಾನ್ಯಾಹುಃ ।
ಸಪ್ತಯಮಾನಿ ವಾಚಃ ।
ಅಂತರಶ್ಚ ಅತ್ರ ಯಮೋ ಅವಶಿಷ್ಟಃ ।
ಸಪ್ತಸ್ವರಾ ಯೇ ಯಮಾಸ್ತೇ ।
ಪೃಥಗ್ವಾ ।[40]

ಪಾಣಿನೀಯ ಶಿಕ್ಷೆಯೂ ಇದೇ ಮೂರು ನಾದಸ್ಥಾನಗಳನ್ನು ಅದೇ ದೈಹಿಕಸ್ಥಾನಗಳಲ್ಲಿ ಗುರುತಿಸುತ್ತದೆ :

ಮಾರುತಸ್ತೂರಸಿ ಚರನ್ ಮಂದ್ರಂ ಜನಯತಿ ಸ್ವರಮ್ ।
ಪ್ರಾತಃ ಸವನ ಯೋಗಂ ತಂ ಛಂದೋ ಗಾಯತ್ರಮಾಶ್ರಿತಮ್ ।
ತಾರಂ ತಾರ್ತೀಯ ಸವನಂ ಶೀರ್ಷಣ್ಯಂ ಜಗತಾನುಗಮ್ ।[41]

ಪಾಣಿನಿಯಿಂದಲೇ ಈ ವಿಷಯವನ್ನು ಉದ್ಧರಿಸಿಕೊಂಡರೂ ನಾನ್ಯದೇವನು ಸ್ವಲ್ಪ ಭಿನ್ನವಾಗಿ ಹೇಳುತ್ತಾನೆ.[42] ನಾರದೀಯ ಶಿಕ್ಷೆಯಿಂದಲೂ[43] ಅವನು ಈ ಸ್ಥಾನತ್ರಯವನ್ನು ಹೀಗೆ ಉದ್ಧರಿಸುತ್ತಾನೆ :

ಉರಃ ಕಂಠಃ ಶಿರಶ್ಚೈವ ಸ್ಥಾನಾನಿ ತ್ರೀಣಿ ವಾಙ್ಮಯೇ ।
ಸವನಾನ್ಯಾಹುರೇತಾನಿ ಸಾಮ ವಾಪ್ಯರ್ಥತೋಽಂತರಮ್ ।
(ಸವನಾನ್ಯಾಹುರೇತಾನಿ ಸಾಮ್ನಶ್ಚಾಪ್ಯಧರೋತ್ತರೇ) ।[44]

ಪಾಣಿನೀಯಶಿಕ್ಷೆಯಂತೆಯೇ ಅಕ್ಷರಮಾಲೆಯ ವರ್ಣಗಳ ಉತ್ಪತ್ತಿಸ್ಥಾನಗಳನ್ನು ಹೇಳಲುದ್ಯುಕ್ತವಾಗಿ ಮಾಂಡೂಕ್ಯಶಿಕ್ಷೆಯೂ ಈ ಮೂರು ಸ್ಥಾನಗಳನ್ನು ಗುರುತಿಸುತ್ತದೆ :

ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಂಠಃ ಶಿರಸ್ತಥಾ ।
ಜಿಹ್ವಾಮೂಲಂ ಚ ದಂತಾಶ್ಚ ನಾಸಿಕೋಷ್ಠೌ ಚ ತಾಲು ಚ ।[45]

ವಿಷ್ಣುಧರ್ಮೋತ್ತರಪುರಾಣದಲ್ಲಿ 'ಅಥ ಗೀಥಲಕ್ಷಣಂ ಭವತಿ ; ತಸ್ಯ ತ್ರೀಣಿ ಸ್ಥಾನಾನಿ ಉರಃ ಕಂಠಃ ಶಿರಶ್ಚ ; ತೇಭ್ಯೋ ಮಂದ್ರಮಧ್ಯತಾರೋತ್ಪತ್ತಿಃ'[46] ಎಂದೂ ವಾಯುಪುರಾಣದಲ್ಲಿ 'ಸ್ಥಾನಾನಿ ತ್ರೀಣಿ ಜಾನೀಯಾದುರಃ ಕಂಠಃ ಶಿರಸ್ತಥಾ । ಏತೇಷು ತ್ರಿಷು ಸ್ಥಾನೇಷು ಪ್ರವೃತ್ತೋ ವಿಧಿರುತ್ತಮಃ'[47] ಎಂದೂ ಪಂಚತಂತ್ರದಲ್ಲಿ 'ಸ್ಥಾನತ್ರಯಂ'[48] ಎಂದೂ ಅಮರಕೋಶದಲ್ಲಿ

---

39 ಸಾಮವಿಧಾನಬ್ರಾಹ್ಮಣ, ಸಾಯಣಭಾಷ್ಯ.

40 ಋಗ್ವೇದ ಪ್ರಾತಿಶಾಖ್ಯ, XIII, 41-45. ಇದರ ಉವಟಭಾಷ್ಯವನ್ನೂ ಓದಿಕೊಳ್ಳಬೇಕು.

41 ಪಾಣಿನೀಯಶಿಕ್ಷಾ, 7-8.

42 ನಾನ್ಯದೇವ, ಉ. ಗ್ರಂ., II, 9-11, ಪು. 16.

43 ನಾರದೀಯಶಿಕ್ಷಾ, I, 1, 7.

44 ನಾನ್ಯದೇವ, ಉ. ಗ್ರಂ., II, 18, ಪು. 17.

45 ಮಾಂಡೂಕ್ಯಶಿಕ್ಷಾ, 68.

46 ವಿಷ್ಣುಧರ್ಮೋತ್ತರಪುರಾಣ, III, 18, 1.

47 ವಾಯುಪುರಾಣ, XXV, 4.

48 ವಿಷ್ಣುಶರ್ಮ, ಪಂಚತಂತ್ರ, V ಅಪರೀಕ್ಷಿತಕಾರಕಂ, ಗೀತರತಗರ್ದಭ–ಸೃಗಾಲಕಥಾ (6), 53.

ಕಲೋ ಮಂದ್ರಸ್ತು ಗಂಭೀರೇ ತಾರೋ ಽತ್ಯುಚ್ಚೈಸ್ತ್ರಯಸ್ತ್ರಿಷು ।
' ನೃಣಾಮುರಸಿ ಮಧ್ಯಸ್ಥೋ ದ್ವಾವಿಂಶತಿವಿಧೋ ಧ್ವನಿಃ ।
ಸ ಮಂದ್ರಃ ಕಂಠಮಧ್ಯಸ್ಥಸ್ತಾರಃ ಶಿರಸಿ ಗೀಯತೇ । '[49]

ಎಂದು ದತ್ತಿಲನ

' ನೃಣಾಮುರಸಿ ಮಂದ್ರಸ್ತು ದ್ವಾವಿಂಶತಿವಿಧೋ ಧ್ವನಿಃ ।
ಸ ಏವ ಕಂಠೇ ಮಧ್ಯಃ ಸ್ಯಾತ್ ತಾರಃ ಶಿರಸಿ ಗೀಯತೇ । '[50]

ಎಂಬ ಶ್ಲೋಕದ ಭ್ರಷ್ಟಪಾಠವೂ ಇದೆ.

ನಾದವು ಅಭಿವ್ಯಕ್ತವಾಗುವ ಮಟ್ಟಕ್ಕೂ ದೇಹದ ಅಂಗಗಳಿಗೂ ಇರುವ ಸಂಬಂಧದ ಬಗ್ಗೆ ಆಧುನಿಕರು ವಿಪುಲವಾಗಿ ಸಂಶೋಧಿಸಿದ್ದಾರೆ. ರಿವೆಜ್ ಮಂದ್ರಮಧ್ಯತಾರಸ್ಥಾಯಿಗಳಲ್ಲಿ ಗೋಚರವಾಗುವ ಸ್ವರಗಳಿಗೂ, ದೇಹದ ಎದೆ, ಗಂಟಲು, ತಲೆಗಳಿಗೂ ಸಂಬಂಧವಿದೆಯೆಂದು ಒಪ್ಪಿಕೊಳ್ಳುತ್ತಾನೆ. ಆದರೆ ನಾದಮಟ್ಟಕ್ಕೂ ದೇಹದಲ್ಲಿ ಅವಯವಗಳ ವೇದನೆಗೂ ಪರಸ್ಪರ ಪ್ರತ್ಯಕ್ಷದೇಶಸಂಬಂಧವನ್ನು ಅವನು ಅಂಗೀಕರಿಸುವುದಿಲ್ಲ :

However, if we compare the tone sensations with the actual spatial impressions (optical and tactual), we soon find that there is not the slightest phenomenological similarity between the spatial and the acoustical concepts of " height " and " distance ", let alone ideational identity.[51]

ಅಲ್ಲದೆ, ಈ ಸಂಬಂಧವನ್ನು ಅವನು ಕೇವಲ ಸಾಮ್ಯದಿಂದುಂಟಾದ ಭಾವಸಾಹಚರ್ಯವೆಂದು ತಿಳಿಯುತ್ತಾನೆ (association by anology). ಹಾರ್ನ್‌ಬಾಸ್ಟಲ್[52] ಮತ್ತು ಕೋಹ್ಲರ್[53] ರವರುಗಳು ನಾದವು ಸ್ಥಾಯಿಭೇದದಿಂದ ಉಂಟುಮಾಡುವ ಉಚ್ಚನೀಚಭಾವವನ್ನು ದೇಶಕ್ಕೆ ಸಂಬಂಧಿಸದೆಯೇ ಅದು ಸ್ವರಪ್ರಕಾಶದ ತೀಕ್ಷ್ಣತೆ ಅಥವಾ ಮಂದತೆಯೆಂದು ಹೇಳುತ್ತಾರೆ.

ಆದರೆ ಈ ಅಭಿಪ್ರಾಯಗಳು ನಿರ್ದುಷ್ಟವಾಗಿಲ್ಲ. ತಾರಸ್ಥಾಯಿ ಸ್ವರಗಳು ' ಮೇಲೆ ' ಮತ್ತು ಮಂದ್ರಸ್ಥಾಯಿ ಸ್ವರಗಳು ' ಕೆಳಗೆ ' ಎಂದು ಸರ್ವತ್ರ ಮಾನ್ಯವಾಗಿರುವ ದೇಶಸಂಬಂಧಿತ್ವವು ನಿರಪೇಕ್ಷವಲ್ಲದಿರಬಹುದು. ಆದರೆ ದೇಹಸಂಬಂಧಿತ್ವ ಎಂಬ ಪರಿಮಿತಾರ್ಥದಲ್ಲಿ ಅದು ದೇಶಾವಲಂಬಿಯೆಂಬುದು ನಿಸ್ಸಂಶಯವಾದುದು. ಮಂದ್ರಸ್ವರವು ಉತ್ಪನ್ನವಾಗುವುದು ಮಂದ್ರಸ್ಪಂದನದಿಂದಲೂ ತಾರಸ್ವರವು ಉತ್ಪನ್ನವಾಗುವುದು ತೀವ್ರ ಸ್ಪಂದನದಿಂದಲೂ ಎಂಬುದು ನಾದಶಾಸ್ತ್ರದಲ್ಲಿ ಪ್ರಯೋಗಸಿದ್ಧವಾದ ವಿಷಯ. ಗಂಟಲಲ್ಲಿರುವ ಎಪಿಗ್ಲಾಟಿಸ್ ಎಂಬ ಮಾಂಸಪೇಶಿಯ ಮೂಲಕ ನುಗ್ಗಿಸಿದ ಗಾಳಿಯ ವೇಗ, ಗಾತ್ರ, ಒತ್ತಡಗಳನ್ನು ಅನುಸರಿಸಿ ಆಯಾ ನಾದವಿಶೇಷದ ಕಂಪನಶಕ್ತಿಯು ನಿರ್ಧಾರವಾಗುತ್ತದೆ. ಶ್ವಾಸಕೋಶದ ಬುಡದವರೆಗೂ, ಎಂದರೆ ನಾಭಿಪ್ರದೇಶದವರೆಗೂ, ವಿಶಾಲವಾಗಿ ಹರಡಿದ

49 ಅಮರಸಿಂಹ, ನಾಮಲಿಂಗಾನುಶಾಸನಂ, I, 6, ನಾಟ್ಯವರ್ಗ, 2.

50 ದತ್ತಿಲ, ದತ್ತಿಲಂ, 8.

51 Revesz : Introduction to the Psychology of Music, p. 68.

52 E. von Hornbostel : Musicalische Tonsysteme, *cit. ibid., loc. cit.*

53 W. Koehler : Akustische Untersuchungen, *cit. ibid., loc. cit.*

ಗಾಳಿಯನ್ನು ಕುಗ್ಗಿಸದೆ ಹೊರಡಿಸಿದರೆ ಅಲ್ಪ ಸ್ಪಂದವಾಗುವುದು ತರ್ಕಬದ್ಧವಾಗಿದೆ. ಇದೇ ಗಾಳಿಯನ್ನು ಮೊದಲು ಕಂಠಪ್ರದೇಶದವರೆಗೆ ಕುಗ್ಗಿಸಿ, ಅಥವಾ ಅತ್ಯಲ್ಪವಾಗುವಂತೆ ಕುಗ್ಗಿಸಿದರೆ, ನುಗ್ಗುವ ಭರವು ತೀವ್ರವಾಗಿ ಸ್ಪಂದವು ಹೆಚ್ಚುತ್ತದೆ. ಬಹುತೀವ್ರವಾಗಿ ನುಗ್ಗಿಬಂದ ಗಾಳಿಯು ಹೆಚ್ಚು ಒತ್ತಡದ ಕಾರಣದಿಂದ ಪಾರ್ಶ್ವಗಳಲ್ಲಿ ಹೆಚ್ಚಾಗಿ ಹರಡಿಕೊಳ್ಳದೆ ನೇರವಾಗಿ ಏರಿ ನೆತ್ತಿಯನ್ನು ಮುಟ್ಟುತ್ತದೆ; ಇದನ್ನೇ 'ಮೂರ್ಧ್ನಿ ತಾರೋ' ಎಂದು ನಮ್ಮ ಸಂಗೀತಾಚಾರ್ಯರು ಹೇಳುವುದು. ಹೀಗೆ ಸ್ಥಾಯಿಗಳು ದೇಹಪರಿಮಿತವಾದ ದೇಶಕ್ಕೆ ಸಂಬಂಧಿತಗಳೇ ಆಗುತ್ತವೆ. ಇದೇ ಭಾವಸಾಹಚರ್ಯದಿಂದ ವಾದ್ಯದಲ್ಲಿ ಉತ್ಪತ್ತಿಯಾಗುವ ಸ್ವರಗಳನ್ನು ಈ ವರ್ಗೀಕರಣದಲ್ಲಿ ಸೇರಿಸಿದೆ. ಈ ಭೌತಿಕವಾದವಷ್ಟೇ ಅಲ್ಲದೆ ಶಬ್ದೋತ್ಪತ್ತಿಯ ಅಂತಃಪ್ರವೃತ್ತಿಯು ಮನುಷ್ಯನಲ್ಲಿ ನಾಭಿಯಲ್ಲಿ ಮೊದಲಾಗುತ್ತದೆಂದು ನಮ್ಮ ತತ್ತ್ವಶಾಸ್ತ್ರವು ಬೋಧಿಸುತ್ತದೆಂಬ ಹಿನ್ನೆಲೆಯಲ್ಲಿಯೂ ಇದನ್ನು ಅಧ್ಯಯನ ಮಾಡಬೇಕು. ನೀಚತಮವಾದ ಸ್ವರಗಳನ್ನು ಹಾಡಿದಾಗ ಅವು ನಾಭಿಯಿಂದ ಮೇಲಕ್ಕೆ ಹುಟ್ಟುವಂತೆಯೂ ತಾರಸ್ವರಗಳನ್ನು ಹಾಡಿದಾಗ ನೆತ್ತಿಯಲ್ಲಿ ಚುರುಕು ಕಾಣಿಸಿಕೊಳ್ಳುವುದೂ ಗಾಯಕರಿಗೆಲ್ಲ ಅನುಭವವೇದ್ಯವೇ ಆಗಿದೆ. ಹಾರ್ನ್-ಬಾಸ್ಟಲ್ ಮತ್ತು ಕೋಹ್ಲರ್‌ರವರ ವಾದದಲ್ಲಿಯೂ ತಿರುಳಿಲ್ಲವೆಂಬುದು ಸ್ಪಷ್ಟವಾಗಿದೆ. ಏಕೆಂದರೆ ಸ್ವರಪ್ರಕಾಶವೆನ್ನುವುದು ಸ್ವರಸ್ವಭಾವದಲ್ಲಿ ಅನಿವಾರ್ಯವೂ, ಬೇರ್ಪಡಿಸಲಾಗದುದೂ, ವ್ಯಕ್ತಿತ್ವಪ್ರಬೋಧಕವೂ ಆಗಿರುವ ಅಂಶ. ಅಲ್ಲದೆ ಅವರು ಭಾವಿಸಿರುವ ಹಾಗೆ ನಾದದ ಉಚ್ಚತೆಯೊಡನೆ ಪ್ರಕಾಶವೂ ಹೆಚ್ಚುತ್ತದೆಂಬುದು ಪ್ರಶ್ನಾರ್ಹವಾಗಿದೆ. ಪಾಶ್ಚಾತ್ಯ ಸಂಗೀತದಲ್ಲಿ ಮಂದ್ರಸ್ವರಗಳು ಮಂದಪ್ರಕಾಶವೆಂದೂ ಉಚ್ಚಸ್ವರಗಳು ತೀಕ್ಷ್ಣಪ್ರಕಾಶವೆಂದೂ ಸಾಮಾನ್ಯವಾಗಿ ನಂಬಲಾಗಿದೆ. ಇದು ನಮ್ಮ ಸಂಗೀತದ ಮಟ್ಟಿಗಂತೂ ನಿರ್ವಿವಾದವಲ್ಲ. ಸ್ವರಪ್ರಕಾಶವು ನಾದಪುಷ್ಟಿಯನ್ನೂ ಅವಲಂಬಿಸುತ್ತದೆಂಬುದು ನಮ್ಮ ಅನುಭವ. ಹೀಗಾಗಿ ಶಾರೀರಧರ್ಮ, ನಾದಗುಣ ಮುಂತಾದವುಗಳ ಸಾಹಚರ್ಯದಿಂದ ಸಾಪೇಕ್ಷವಾದ ಈ ಅಂಶವು ನಾದಪ್ರದೇಶಕ್ಕೆ ಸಂಬಂಧಿತವಲ್ಲವೆಂದು ತೋರುತ್ತದೆ. ಅಲ್ಲದೆ ಸ್ವಭಾವದಲ್ಲಿಯೇ ಭಿನ್ನವಾದ ಬೇರೊಂದು ಇಂದ್ರಿಯಾನುಭವದಲ್ಲಿ ಉಪಮೆಯನ್ನು ಪಡೆದಿರುವ ಈ ಕಲ್ಪನೆಯು ಅಷ್ಟು ವೈಜ್ಞಾನಿಕವಲ್ಲವೆಂದು ಆಕ್ಷೇಪಣೀಯವಾಗಿದೆ.

ದ್ವಿಗುಣಶ್ಚೋತ್ತರೋತ್ತರಃ ಎನ್ನುವಲ್ಲಿ ಸ್ಥಾಯಿಗಳ ಭೌತಿಕ ಪ್ರಮಾಣವನ್ನು ಹೇಳಿದೆ. 'ಗುಣ' ಎನ್ನುವುದನ್ನು ಉಚ್ಚಾರಣ ಪ್ರಯತ್ನದೊಡನೆ ಕಲ್ಲಿನಾಥನು ಸಂಬಂಧಿಸಿದ್ದಾನೆ. ಸ್ಥಾನವೆನ್ನುವುದನ್ನು ಉಚ್ಚಾರಣಪ್ರಸಕ್ತಿ ಎಂದು ಪಾಣಿನಿಯು (ಸ್ಥಾನೇ ಽಂತರತಮಃ) ವಿವರಿಸುತ್ತಾನೆ.[54] ಮಂದ್ರಸ್ವರಕ್ಕೆ ಬೇಕಾಗುವ ಉಚ್ಚಾರಣ ಪ್ರಸಕ್ತಿಯ ಎರಡರಷ್ಟು ಮಧ್ಯಸ್ಥಾಯಿಯಲ್ಲಿನ ಅದೇ ಸ್ವರಕ್ಕೂ, ಮಧ್ಯಸ್ಥಾಯಿ ಸ್ವರಕ್ಕೆ ಬೇಕಾಗುವ ಎರಡರಷ್ಟು ತಾರಸ್ಥಾಯಿಯಲ್ಲಿರುವ ಅದೇ ಸ್ವರಕ್ಕೂ ಬೇಕಾಗುತ್ತದೆಂದು ಇಲ್ಲಿ ತಾತ್ಪರ್ಯ. ಭೌತಿಕವಾಗಿ, ದ್ವಿಗುಣವೆಂದರೆ ಸ್ಪಂದ ಶಕ್ತಿಯಲ್ಲಿ ಎರಡರಷ್ಟು ಎಂದರ್ಥ. ಎಂದರೆ ಮಧ್ಯಸ್ಥಾನಷಡ್ಜದಲ್ಲಿ ಉಂಟಾಗುವ ಕಂಪನವು ಮಂದ್ರಸ್ಥಾನಷಡ್ಜದ ಕಂಪನದ ಎರಡರಷ್ಟೂ, ತಾರಸ್ಥಾನಷಡ್ಜದ ಕಂಪನವು ಮಧ್ಯಸ್ಥಾನಷಡ್ಜದ ಕಂಪನದ ಎರಡರಷ್ಟೂ ಇರುತ್ತದೆ. ಉದಾಹರಣೆಗೆ ಮಧ್ಯಸ್ಥಾಯಿಷಡ್ಜವನ್ನು ನುಡಿಯಲು ತಂತಿಯ ಎಷ್ಟು ಉದ್ದವು ಬೇಕಾಗುತ್ತದೋ ಅದರ ಎರಡರಷ್ಟು, ಅರ್ಧದಷ್ಟು ಮತ್ತು ಕಾಲುಭಾಗದಷ್ಟು (ಉಳಿದ ಪ್ರಯೋಗಸಂದರ್ಭಗಳು ವ್ಯತ್ಯಾಸವಾಗದಿದ್ದರೆ), ಕ್ರಮವಾಗಿ ಮಂದ್ರಷಡ್ಜ, ತಾರಷಡ್ಜ ಹಾಗೂ ಅತಿತಾರಷಡ್ಜಗಳನ್ನು ನುಡಿಯಲು ಬೇಕಾಗುತ್ತದೆ. ಆದರೆ ಸ್ವರದ ಪೂರ್ಣವ್ಯಕ್ತಿತ್ವವನ್ನು ಪರಿಶೀಲಿಸುವಾಗ ಈ ಲಕ್ಷಣ ನಿರೂಪಣೆಯು ಆಂಶದೃಷ್ಟಿಯಿಂದ ಬಾಧಿತವಾಗುತ್ತದೆ; ಎಂದರೆ, ಆಯಾ ಸ್ವರವನ್ನು ಅದರ ಕಂಪಶಕ್ತಿಯ ಪೂರ್ಣಾಂಕಗುಣಕಗಳಲ್ಲಿ ಪಡೆದರೆ ಅವು ಅದರ ಪೂರ್ಣ ಪ್ರತಿ

54 ಪಾಣಿನಿ, ಅಷ್ಟಾಧ್ಯಾಯೀ, I, 1, 50.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಬಿಂಬಗಳನ್ನು ಕೊಡುತ್ತವೆಂಬ ತಪ್ಪು ಕಲ್ಪನೆಗೆ ಇಲ್ಲಿ ಅವಕಾಶವಾದೀತು. ಇಂತಹ ಆವರ್ತನ ಸ್ವರಗಳು ತಮ್ಮ ಆಧಾರಸ್ವರಗಳೊಡನೆ ಅತ್ಯಂತ ಗುಣಸಾಮ್ಯವನ್ನೂ ಸಾದೃಶ್ಯವನ್ನೂ ವಾದೀತ್ವವನ್ನೂ ಪಡೆದಿದ್ದರೂ, ಅವು ಪ್ರತಿಬಿಂಬಗಳಲ್ಲ; ತಮ್ಮದೇ ವೈಶಿಷ್ಟ್ಯವನ್ನು ಉಳಿಸಿಕೊಂಡ ಮತ್ತು ನಿರ್ದಿಷ್ಟ ಕಲಾತ್ಮಕವೂ ಮನೋವೈಜ್ಞಾನಿಕವೂ ಆಗಿರುವ ಕರ್ತವ್ಯಗಳನ್ನುಳ್ಳ ವ್ಯಕ್ತಿಗಳು. ಈ ಆಕ್ಷೇಪವನ್ನು ಮತಂಗನೇ ಸ್ವಲ್ಪಮಟ್ಟಿಗೆ ನಿವಾರಿಸುತ್ತಾನೆ; ಸ್ವರಾಷ್ಟಕದಲ್ಲಿರುವ ಪ್ರತಿಯೊಂದು ಶ್ರುತಿಯೂ (ತನ್ಮೂಲಕ ಸ್ವರಸ್ಥಾನವೂ) ಮಂದ್ರ, ಮಧ್ಯ ಮತ್ತು ತಾರಸ್ಥಾನಗಳಲ್ಲಿ ಬೇರೆ ಬೇರೆಯಾದ ವ್ಯಕ್ತಿತ್ವವನ್ನು ಪಡೆಯುತ್ತದೆಂಬ (ಬಹುಶಃ ಅವನಿಗಿಂತ ಹಿಂದಿನವರ) ಒಂದು ಅಭಿಪ್ರಾಯವನ್ನು ಅವನು ಉದ್ಧರಿಸುತ್ತಾನೆ :

ಕೇಚಿತ್ ಸ್ಥಾನತ್ರಯಯೋಗಾತ್ ತ್ರಿವಿಧಾಂ ಶ್ರುತಿಂ ಪ್ರತಿಪದ್ಯಂತೆ । [55]

ಕೋಹಲನು ಹೇಳುವ ಅರವತ್ತಾರು ಶ್ರುತಿಗಳೂ ಇದನ್ನೇ ಪ್ರತಿಪಾದಿಸುತ್ತವೆ.[56] ಇವನ ಪ್ರಕಾರ, ಸ್ವರಾಷ್ಟಕದಲ್ಲಿರುವ ಇಪ್ಪತ್ತೆರಡು ಶ್ರುತಿಗಳಲ್ಲಿ ಪ್ರತಿಯೊಂದೂ ಬೇರೆ ಬೇರೆ ವ್ಯಕ್ತಿತ್ವವನ್ನು (ಬಹುಶಃ ಭೌತಿಕ ಪ್ರಮಾಣ, ನಾದಗುಣ, ಪ್ರಕಾಶ ಇತ್ಯಾದಿಗಳ ಸಮುಚ್ಚಯವನ್ನು) ಪಡೆದಿರುತ್ತದೆ. ಅಷ್ಟೇ ಅಲ್ಲದೆ ಇವುಗಳಲ್ಲಿ ಪ್ರತಿಯೊಂದೂ ಮಂದ್ರ, ಮಧ್ಯ ಮತ್ತು ತಾರಸ್ಥಾನಗಳಲ್ಲಿ ಪ್ರತ್ಯೇಕವಾದ ಅಭಿವ್ಯಕ್ತಿ ವೌಲ್ಯವನ್ನು ಪಡೆದಿರುತ್ತದೆ. ಕೋಹಲ ಮತಂಗರ ಈ ಉಕ್ತಿಗಳು ಪ್ರಯೋಗಸಿದ್ಧವೆಂಬುದು ಸ್ಪಷ್ಟವಾಗಿಯೇ ಇದೆ. ಒಂದೇ ಸ್ವರವು ಮತ್ತು ಒಂದೇ ಸ್ವರಸಮುಚ್ಚಯ ಅಥವಾ ಸಂಗತಿಯು ಕೇಳುವವರ ಮನಸ್ಸಿನಮೇಲೆ ವಿವಿಧ ಸ್ಥಾಯಿಗಳಲ್ಲಿ ವಿವಿಧ ಪರಿಣಾಮಗಳನ್ನು ಉಂಟುಮಾಡುವುದು ಅಲ್ಪಪರೀಕ್ಷೆಯಿಂದಲೇ ತಿಳಿಯುತ್ತದೆ. ನೀಚಸ್ಥಾನದಲ್ಲಿ ಸ್ವರವು ಸಾಂದ್ರತೆ, ಘನತ್ವ ಹಾಗೂ ಪುಷ್ಟಿಯನ್ನೂ, ಮಧ್ಯಸ್ಥಾನದಲ್ಲಿ ಪ್ರಸನ್ನತೆಯನ್ನೂ, ಉಚ್ಚಸ್ಥಾನದಲ್ಲಿ ಟೊಳ್ಳುತನ ಮುಂತಾದವುಗಳ ಭಾವನೆಯನ್ನೂ ಉಂಟುಮಾಡುತ್ತದೆ.

ವಿವಿಧ ಸ್ಥಾಯಿಗಳಲ್ಲಿ ಸ್ವರಗಳ ಆವರ್ತನವನ್ನು ಆಧುನಿಕವಾದ ರೆವೆಜ್ ಪ್ರಣೀತ ದ್ವಿಘಟಕ (ಅಥವಾ ದ್ವಂದ್ವಾಂಗ) ವಾದವು ಮುಖ್ಯಾಂಶಗಳಲ್ಲಿ ಸಮರ್ಪಕ ರೀತಿಯಲ್ಲಿ ತಾತ್ತ್ವಿಕವಾಗಿ ವಿವರಿಸುತ್ತದೆ. ನಾದವು ಉಚ್ಚ-ನೀಚ ಭಾವಗಳಲ್ಲಿ ಚಲಿಸುವಾಗ ಅದರ ಎರಡು ಮುಖ್ಯ ತತ್ತ್ವಗಳೂ ಅದರೊಡನೆಯೇ ಚಲಿಸುತ್ತಿರುತ್ತವೆ; ಎಂದರೆ ವ್ಯತ್ಯಾಸವಾಗುತ್ತಾ ಬರುತ್ತವೆ. ಮೊದಲನೆಯದು ಉಚ್ಚತೆಗೆ-ಎಂದರೆ ಮುಖ್ಯವಾಗಿ ಕಂಪನಶಕ್ತಿಗೆ-ಸಂಬಂಧಿಸಿದುದು. ಎರಡನೆಯದು ಅದರ ಆಯಾ ಮಟ್ಟಕ್ಕೆ ಸಂಬಂಧಿಸಿದ ವ್ಯಕ್ತಿತ್ವ, ಗುಣಗಳಿಗೆ ಸಂಬಂಧಿಸಿದ್ದು. ನಾದವು ಹೀಗೆ ಚಲಿಸುತ್ತಿರುವಾಗ ಉಚ್ಚ-ನೀಚಭಾವವು ಏಕಮುಖವಾಗಿ ಮಾತ್ರ ಚಲಿಸಿ ಸ್ವರವನ್ನು ಆಧಾರ ಸ್ವರಕ್ಕಿಂತ ದೂರದೂರವಾಗಿ ಒಯ್ಯುತ್ತಿರುತ್ತದೆ. ಎರಡನೆಯ ತತ್ತ್ವವು ಸಮಾನಾಂತರ ರೂಪದಲ್ಲಿ ಸುರುಳಿ ಸುರುಳಿಯಾಗಿ ವೃತ್ತಾಕಾರದಲ್ಲಿ ಚಲಿಸುತ್ತದೆ. ಆದುದರಿಂದ ಆಧಾರಸ್ವರದೊಡನೆ ಸಾದೃಶ್ಯವು ಚಾಕ್ರಿಕವಾಗಿ ಉಂಟಾಗುತ್ತಿರುತ್ತದೆ. ಹೀಗೆ ಕಂಪನಶಕ್ತಿಯಲ್ಲಿ ಭಿನ್ನವಾಗಿದ್ದು ಮೂಲಸ್ವರದೊಡನೆ ಗುಣದಲ್ಲಿ ಅತ್ಯಂತ ಸಾದೃಶ್ಯವನ್ನು ಪಡೆದಿರುವುದೇ ಆವರ್ತನಸ್ವರ. ಮೂಲಸ್ವರಕ್ಕೂ ಅದರ ಅತ್ಯಂತ ಸಮೀಪಸ್ಥ ಆವರ್ತನಸ್ವರಕ್ಕೂ ನಡುವೆ ಇರುವ ನಾದಾಂತರವೇ ಸ್ಥಾನ ಅಥವಾ ಸ್ಥಾಯಿ. ಇದೇ ದ್ವಂದ್ವಾಂಗ ವಾದದ (Two Component Theory) ಸಾರಾಂಶ.[57] ಸ್ವರದ ಈ ಎರಡು ಗುಣಗಳೂ ಅದರ ಅವಿಭಾಜ್ಯ ಅಂಗಗಳೇ. ಅದನ್ನು ತಾತ್ತ್ವಿಕ ಕಾರಣಗಳಿಗಾಗಿ ವಿಭಜಿಸಿ ಪರಿಶೀಲಿಸುವುದು ಈ ವಾದದಲ್ಲಿರುವ ತಾಂತ್ರಿಕದೋಷ. ಒಂದೆರಡು ಸಣ್ಣದೋಷಗಳನ್ನು ಬಿಟ್ಟರೆ ಈ ವಾದವು ಗ್ರಾಹ್ಯವಾಗಿದೆ.

55 ಮತಂಗ, ಉ. ಗ್ರಂ., ಪು. 4.　56 ಅದೇ ಗ್ರಂಥ, ಪು. 7.　57 ರೆವೆಜ್, ಉ. ಗ್ರಂ., ಪು. 59–76.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇಂತಹ ಕೆಲವು ದೋಷಗಳನ್ನಿಲ್ಲಿ ಹೆಸರಿಸಬಹುದು. ಉದಾಹರಣೆಗೆ, ಸ್ವರಗುಣ (tone quality) ವೆಂದರೆ ಏನೆಂಬುದನ್ನು ಅವನೆಲ್ಲಿಯೂ ಖಚಿತವಾಗಿ ನಿರೂಪಿಸಿಲ್ಲ; ಅದನ್ನು ಅನಾಂತರಿಕ, ವೈಜ್ಞಾನಿಕ ವಿಧಾನ ದಿಂದ ಹೇಗೆ ಅಳೆಯಬಹುದೆಂದೂ ಅವನು ಹೇಳುವುದಿಲ್ಲ. ಆಯಾ ಸ್ವರವು ತನ್ನಿಂದಲೇ ಉತ್ಪಾದಿಸುವ, ಮತ್ತು ಅದರೊಡನೆ ಅನುಸ್ಪಂದಿಸುವ ಆವರ್ತನಗಳ ಸಂಖ್ಯೆ ಮತ್ತು ಅವುಗಳ ಪರಸ್ಪರ ತೀವ್ರ-ಮಂದ ವೇದನೆಯಶಕ್ತಿಯ ವಿತರಣ (distribution of overtones and their intensities) ಇವುಗಳ ಸಮುದಾಯವೇ ಸ್ವರಗುಣವೆನ್ನುವುದಾದರೆ, ಸ್ವರದ ಉಚ್ಚತೆಯು ಹೆಚ್ಚಾದಂತೆಲ್ಲ ಉಚ್ಚ ಆವರ್ತನಸ್ವರದ ಈ ವಿತರಣವು ಅದರ ಆಧಾರವಾದ ನೀಚಸ್ವರದ ವಿತರಣಕ್ಕಿಂತ ಸ್ವಲ್ಪ ಭಿನ್ನವಾಗಿರುತ್ತದೆ. ಆದುದರಿಂದಲೇ ಬಹು ಉಚ್ಚ ಆವರ್ತನ ಸ್ವರವೊಂದು ತನ್ನ ಆಧಾರ ಸ್ವರದೊಡನೆ ಪಡೆದಿರುವ ಸಾದೃಶ್ಯ ಸಾಮ್ಯಗಳು ಸ್ವಲ್ಪ ಭಗ್ನವಾಗಿರುತ್ತವೆ. ಆದುದರಿಂದ ಸ್ವರಗುಣವು ಶುದ್ಧವಾಗಿಯೂ ಸಂಪೂರ್ಣವಾಗಿಯೂ ಚಾಕ್ರಿಕವಾಗಿರುವ ತತ್ತ್ವವೆಂಬುದು ಅಷ್ಟು ಗ್ರಾಹ್ಯವಲ್ಲ. ಅಲ್ಲದೆ ಸ್ವರಗುಣವು ಬಹುಮಟ್ಟಿಗೆ ಒಂದು ಮಾನಸಿಕ ಉಪಾಧಿಯೆಂಬುದನ್ನಿಲ್ಲಿ ಗಮನಿಸಬೇಕು. ಎಂದರೆ, ಆಯಾ ಸ್ವರದ ವ್ಯಕ್ತಿತ್ವ, ವೈಶಿಷ್ಟ್ಯಗಳನ್ನು ಉದ್ಬೋಧಗೊಳಿಸುವ ಸಂದರ್ಭಗಳು ಸ್ವರದ ಭೌತಿಕ ಉಪಾಧಿಗಳಲ್ಲಿರುವುದಿಲ್ಲ. ಸ್ವರವು ಉತ್ಪಾದಿಸಿಕೊಂಡ ಅನುಸ್ಪಂದಕ ಆವರ್ತನಗಳು, ಇವು ಎಷ್ಟು ಹುಟ್ಟುತ್ತವೆ, ಇವುಗಳಲ್ಲಿ ಎಷ್ಟು ಆಧಾರ ಸ್ವರದೊಡನೆ ವಿವಾದಿಗಳು, ಅಥವಾ ಸಂವಾದಿಗಳು, ಇವುಗಳ ಪರಸ್ಪರ ತೀಕ್ಷ್ಣತೆ, ಸ್ವರದ ಗಾತ್ರ, ಒತ್ತಡ, ಶಕ್ತಿ, ಬಿಗುವು ಮುಂತಾದ ಸಂದರ್ಭಗಳೇ ಸ್ವರವು ನೈಜವಾಗಿ ಪಡೆದಿರುವ ಸಾಮಗ್ರಿಗಳು. ಇವು ಆಯಾ ಸ್ವರದ ಭೌತಿಕ ವಾಸ್ತವಿಕತೆಗೂ ಅದು ಕೇಳಿಸುವ ರೀತಿಗೂ ಸೇತುವೆಗಳಂತೆ ಇರುತ್ತವೆ. ಬಾಹ್ಯಪ್ರಪಂಚದ ಭೌತಿಕ ಸಂವೇದನೆಗಳನ್ನು ಇಂದ್ರಿಯಗಳಿಂದ ಸ್ವೀಕರಿಸಿ, ಅವುಗಳಲ್ಲಿ ಒಂದು ನಿರ್ದಿಷ್ಟಮಾದರಿ (Pattern) ಯೊಂದನ್ನು ಮಾನವನ ಮನಸ್ಸು ಮೊದಲು ಎತ್ತಿ ತೆಗೆಯುತ್ತದೆ. ನಂತರ ಈ ಮಾದರಿಯಲ್ಲಿರುವ ವಿವಿಧ ಸಂಕೇತಗಳನ್ನು ತನಗೆ ವಿಶಿಷ್ಟವಾದ ರೀತಿಯಲ್ಲಿ ಪರಿವರ್ತನಗೊಳಿಸಿಕೊಂಡು ಆಯಾ ಮಾದರಿಯಲ್ಲಿ ಸಂಕೀರ್ಣವಾದ ಅರ್ಥವನ್ನು ಸಾಕ್ಷಾತ್ಕರಿಸಿಕೊಳ್ಳುತ್ತದೆ. ಈ ಪರಿವರ್ತನೆಗೆ ಮಾನವನ ಮಿದುಳಿನ ವಿನ್ಯಾಸವಿಶೇಷತೆಯೇ ಕಾರಣ. ಕೇವಲ ಭೌತಿಕ ನಿಯಮಗಳಿಗೆ ಒಳಪಟ್ಟು ಜಗತ್ತಿನಲ್ಲಿ ಉಂಟಾಗುವ ಕಂಪನಗಳೇ ಮೊದಲಾದ ಅನಾಂತರಿಕ ಘಟನೆಗಳನ್ನೂ ಸಂವೇದನೆಗಳನ್ನೂ ತನಗೆ ಅರ್ಥಪೂರ್ಣವಾದ ರೀತಿಯಲ್ಲಿ ಹೀಗೆ ಅದ್ಭುತ ರಮಣೀಯವಾಗಿ ಪರಿವರ್ತಿಸಿಕೊಂಡು ಸಂವೇದನೆಯನ್ನು ಅನುಭವವಾಗಿ ಪರಿಣಾಮಗೊಳಿಸುವುದು ಮಾನವನು ಪಡೆದುಕೊಂಡಿರುವ ಮಹಾವರಪ್ರಸಾದ. ಇದನ್ನು ಸಂಕೇತ ವಾದದಲ್ಲಿ (symbolistic philosophy) ಸಂಕೇತ ಪರಿಣಾಮ (symbolic transformation) ಎನ್ನುತ್ತಾರೆ.

ಮೇಲೆ ಹೇಳಿದ ಸಾಮಗ್ರಿಗಳಲ್ಲಿ ಸ್ವರದ ಭೌತಿಕ ಉಪಾಧಿಗಳು ಸಂಕೇತ ಪರಿಣಾಮವನ್ನು ಹೊಂದಿ ನಮಗೆ ಸ್ವರಗಳಾಗಿ ಕೇಳಿಸುತ್ತವೆ. ಇಂತಹ ಪರಿವರ್ತನೆಗಾಗಿ ಮಿದುಳಿನಲ್ಲಿ ವಿಶೇಷವಾದ ಕೇಂದ್ರವೇ ಇದೆ. ಈ ಭಾಗವು ರೋಗಗ್ರಸ್ತವಾದರೆ ಪ್ಯಾರಾಕ್ಯೂಸಿಸ್ ಎಂಬ ದೂಷಿತ ಶ್ರವಣಶಕ್ತಿಯ ತೊಂದರೆ ಉಂಟಾಗುತ್ತದೆ. ಮೇಲೆ ಹೇಳಿದ ಪರಿವರ್ತನೆಯಲ್ಲಿ ಒಳ ಕಿವಿಯಲ್ಲಿರುವ ಬೇಸಿಲಾರ್ ಮೆಂಬ್ರೇನ್ ಮತ್ತು ಇದರ ಸಂವೇದನಗಳನ್ನು ಮಿದುಳಿಗೆ ಒಯ್ಯುವ ನರಗಳೂ ಸ್ವಲ್ಪಮಟ್ಟಿಗೆ ಪಾತ್ರವಹಿಸಬಹುದು. ಹೀಗೆ ಶ್ರವಣೇಂದ್ರಿಯಗಳೂ ತತ್ಸಂಬಂಧಿತವಾದ ಮಿದುಳಿನ ಕೇಂದ್ರವೂ ಸಂಗೀತವಾದ್ಯಗಳಂತೆ ವರ್ತಿಸುತ್ತವೆ. ಹೇಗೆ ಮತ್ತು ಏಕೆ ಎಂಬುದು ತಿಳಿದಿಲ್ಲ. ಒಟ್ಟಿನಲ್ಲಿ ನಾದಗುಣವು ಮುಖ್ಯವಾಗಿ ಮಾನಸಿಕವ್ಯಾಪಾರವೇ ಆಗಿದೆ. ಇಂತಹ ವಿಷಯವನ್ನು ಖಚಿತವಾದ ವೈಜ್ಞಾನಿಕ ಪ್ರಮೇಯವನ್ನಾಗಿ ಪಡೆಯುವುದು ಸ್ವಲ್ಪಮಟ್ಟಿಗೆ ಪ್ರಶ್ನಾರ್ಹವೇ ಆಗಿದೆ. ಆದರೂ ನಮ್ಮ ಆಧುನಿಕ ಜ್ಞಾನದ

ಮಿತಿಯಲ್ಲಿ ಈ ವಾದವು ತಿಳಿದ ಸಂಗತಿಗಳನ್ನು ವಿವರಿಸುವುದರಲ್ಲಿ ಯಶಸ್ವಿಯಾಗಿರುವುದರಿಂದ ಅದನ್ನು ಸ್ವೀಕರಿಸ ಬಹುದೆಂದು ತೋರುತ್ತದೆ.

ಇದನ್ನು ಈ ಕೆಳಗಿನ ಚಿತ್ರದಿಂದ [ನಕ್ಷೆ(1)] ಸ್ಪಷ್ಟಪಡಿಸಬಹುದು.

ಈ ನಕ್ಷೆಯಲ್ಲಿ ಕಾಣುವ ಮೇಲಿನ ಚಿತ್ರವನ್ನು ಒಂದು ಉರುಳೆ ಅಥವಾ ವರ್ತುಲಸ್ತಂಭ (cylinder) ಎಂದು ಭಾವಿಸಬೇಕು. ಇದು ನಾದವು ಬಿಂದುರೂಪದಲ್ಲಿ ಸ್ವರಸಪ್ತಕದ ರೂಪದಲ್ಲಿ ವರ್ತುಲಾಕಾರದಲ್ಲಿ ಕ್ರಮವಾಗಿ ಕಂಪನ ಶಕ್ತಿಯಲ್ಲಿ ಏರುತ್ತಾ ನಡೆದು ಹೀಗೆ ಆದ ವಕ್ರರೇಖೆಯು ಎಂದರೆ ಸ್ವರಸಪ್ತಕವು, ತನಗೆ ಸಮಾನಾಂತರವಾಗಿ (parallel) ಚಲಿಸಿದುದ ರಿಂದ, ಎಂದರೆ ಇದರಲ್ಲಿರುವ ಪ್ರತಿ ಬಿಂದುವೂ ನಿಯತವಾದ ಒಂದೇ ದೂರ ದಲ್ಲಿ ಪುನಃ ಪುನಃ ಊರ್ಧ್ವಸ್ಪರ್ಶವನ್ನು ಪಡೆಯುವುದರಿಂದ ಈ ಆಕೃತಿಯು ಲಭಿಸುತ್ತದೆ. ಇದನ್ನು ಒಂದು ಕೊಳವೆಯಂತೆ ಭಾವಿಸಿಕೊಳ್ಳಬಹುದು. ಇದನ್ನು ಎದುರಿಗಿಟ್ಟುಕೊಂಡು ನೋಡಿದರೆ ಮೇಲಿನ ಚಿತ್ರದಂತೆಯೂ, ಮೇಲಿನಿಂದ ನೋಡಿದರೆ ಅಡ್ಡಕೊಯ್ತ (cross section) ದಲ್ಲಿ ವರ್ತುಲಾಕಾರದಲ್ಲಿ ಕೆಳಗಿನ ಚಿತ್ರದಂತೆಯೂ ಕಾಣಿಸುತ್ತದೆ.



ನಕ್ಷೆ (1) : ಸ್ವರದ ಆವರ್ತಕತ್ವ (ದ್ವಿಘಟಕವಾದ)

ಹೀಗೆ ಸ್ಥಾಯಿಯ ವ್ಯಾಪ್ತಿಯಲ್ಲಿ ಪ್ರಯುಕ್ತವಾಗುವ ಪ್ರಕೃತಿ ವಿಕೃತಿ ಸ್ವರಗಳ ಮೊತ್ತವಾದ ಹನ್ನೆರಡು ಸ್ವರಸ್ಥಾನಗಳನ್ನು ಕೆಳಗಿನ ಚಿತ್ರದಲ್ಲಿ ಹನ್ನೆರಡು ತ್ರಿಜ್ಯ (radius) ಗಳಿಂದ ತೋರಿಸಿದೆ. ಇವುಗಳಲ್ಲಿ ಸಪ್ತಸ್ವರ ಗಳನ್ನು ಈ ಸಮೀಕರಣಗಳಿಂದ ತೋರಿಸಿದೆ :

c : ಷಡ್ಜ, d : ಪಂಚಶ್ರುತಿ ರಿಷಭ, e : ಅಂತರಗಾಂಧಾರ, f : ಶುದ್ಧ ಮಧ್ಯಮ, g : ಪಂಚಮ, a : ಪಂಚಶ್ರುತಿಧೈವತ, b : ಕಾಕಲಿ ನಿಷಾದ.

ಇದಕ್ಕೆ ಮೇಲಿನ ಸ್ಥಾಯಿಯಲ್ಲಿರುವ ಇದೇ ಸ್ವರಗಳನ್ನು ಕ್ರಮವಾಗಿ c', d', e', f ', g', a', b', ಎಂದು ಸಂಕೇತಿಸಿದೆ. ಮೇಲಿನ ಚಿತ್ರ ದಲ್ಲಿ ಎದುರಿಗಿರುವ ಭಾಗವನ್ನು ಪೂರ್ಣವಾದ ರೇಖೆ (—) ಯಿಂದಲೂ, ಕಾಣದೆ ಆಚೆಯ ಭಾಗದಲ್ಲಿರುವುದನ್ನು ಒಡೆದ ರೇಖೆ (- - - -) ಯಿಂದಲೂ ತೋರಿಸಿದೆ.

ಹೀಗೆ ನಾದವು ಕಂಪನಶಕ್ತಿಯಲ್ಲಿ ಕ್ರಮವಾಗಿ ಮೇಲು ಮೇಲಕ್ಕೆ ನಡೆದರೂ ಲಂಬಾಕ್ಷವಾದ oy ಗೆ ಸಮಾನಾಂತರವಾಗಿ ಎಂದರೆ ಊರ್ಧ್ವ ಮುಖದ ಸರಳರೇಖೆಯಾಗಿ ಇರುವುದಿಲ್ಲವೆಂಬುದನ್ನು ಈ ನಕ್ಷೆಯಲ್ಲಿ ಗಮನಿಸಬೇಕು. ನಾದಗುಣವು ವರ್ತುಲಾಕಾರದಲ್ಲಿ ಪುನರಾವರ್ತಿತವಾಗು ವುದರಿಂದ ಸ್ವರದ ಕಂಪನ ಶಕ್ತಿಯ ಮತ್ತು ನಾದಗುಣದ ಮೊತ್ತವು a b c d e f g a' b' c' d' e' f' g' ಎಂಬ ವಕ್ರರೇಖೆಯನ್ನು ಅನುಸರಿಸಿ ಮೇಲಿನ ಚಿತ್ರದಲ್ಲಿ ಚಲಿಸುತ್ತದೆ. ಇದರಲ್ಲಿ ಆಚೆಯ ಪಾರ್ಶ್ವದಲ್ಲಿದ್ದು ಕಾಣದೆ ಇರುವ a b, g a' b' ಮತ್ತು g' ಎಂಬ ಭಾಗಗಳನ್ನು ಸುಲಭವಾಗಿ ತಿಳಿಯಲೆಂದು ಒಡೆದ ರೇಖೆಯಿಂದ ತೋರಿಸಿದೆ. ನಾದಬಿಂದುವು

ಕಂಪನ ಶಕ್ತಿಯಲ್ಲಿ ಕ್ರಮವಾಗಿ ಏರುತ್ತಾ ನಡೆದಾಗ ಸುರುಳಿಯಾಕಾರದ a b c d e f g a′ b′ ಇತ್ಯಾದಿಯಾಗಿ ಇರುವುದರಲ್ಲಿ aa′, bb′, cc′ ಮುಂತಾದ ಸ್ವರಯುಗ್ಮಗಳು ಸಮಾನಾಂತರಗಳಾದ ಸರಳರೇಖೆಗಳ ಮೇಲೆ ಬೀಳುವುದನ್ನು ಇಲ್ಲಿ ಗಮನಿಸಬೇಕು. ಮೇಲಿನ ಚಿತ್ರದ ಉರುಳೆಯನ್ನು ಮೇಲಿನಿಂದ ನೋಡಿದಾಗ ಈ ಎಲ್ಲ ಸರಳರೇಖೆಗಳೂ (ಊರ್ಧ್ವಾಧೋಮುಖವಾದ ಇವುಗಳನ್ನು ಒಡೆದ ರೇಖೆಗಳಿಂದ ಎರಡೂ ಚಿತ್ರಗಳಲ್ಲಿ ತೋರಿಸಿದೆ; ಉದಾ a′aa, b′bb, c′cc, ಇತ್ಯಾದಿ) ಕೆಳಗಿನ ಚಿತ್ರದ a, b, c ಎಂದು ಮುಂತಾಗಿ ಆಯಾ ಆಧಾರಸ್ವರದ ಬಿಂದುಗಳಲ್ಲಿ ಪರ್ಯವಸಾನವಾಗುವುದು ಸ್ಪಷ್ಟವಾಗುತ್ತದೆ. ಆದುದರಿಂದ ಆಯಾ ಸ್ವರದ ನಾದಗುಣವು ಸಮಾನಾಂತರದಲ್ಲಿ ಚಾಕ್ರಿಕರೂಪದಲ್ಲಿ ಪುನರಾವರ್ತಿತವಾಗುತ್ತಿರುವುದೆಂಬ ಸಿದ್ಧಾಂತವು ಈ ಪ್ರಯೋಗದಿಂದ ದೊರೆಯುತ್ತದೆ. ಕಂಪನಶಕ್ತಿಯು ಆಯಾ ಸ್ವರಕ್ಕೆ ಸಾಪೇಕ್ಷವಾಗಿ ಉತ್ತರೋತ್ತರವಾಗಿ ದ್ವಿಗುಣಹೊಂದಿದಂತೆಲ್ಲ ಇದು ನಾದಗುಣದ ಪುನರಾವರ್ತನೆಯನ್ನು ಸೇರಿಕೊಂಡಾಗ ಅದೇ ಸ್ವರವು ಮೇಲುಮೇಲಿನ ಸ್ಥಾಯಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಹೀಗೆ aa′, bb′, cc′ ಮುಂತಾದ ಸರಳರೇಖೆಗಳ ಪ್ರಮಾಣಗಳು ಪರಸ್ಪರ ಸಮವಾಗಿದ್ದು ಇದರಲ್ಲಿ ಪ್ರತಿಯೊಂದೂ ಒಂದು ಸ್ಥಾಯಿಯ ಭೌತಿಕ ಪ್ರಮಾಣವನ್ನು ಕೊಡುತ್ತದೆ. ಇದೇ ದ್ವಿಘಟಕವಾದದ ಸಾರಾಂಶ.

ಸ್ಥಾಯಿಯಲ್ಲಿರುವ ಹನ್ನೆರಡು ಸ್ವರಸ್ಥಾನಗಳನ್ನು ಹೇಗೆ ಪಡೆಯಬಹುದೆಂಬುದನ್ನು ತೋರಿಸುವುದು ಈ ವಾದದ ಇನ್ನೊಂದು ಪ್ರಯೋಜನ. ಕೆಳಗಿನ ಚಿತ್ರದಲ್ಲಿ ದೊರೆಯುವ ಏಳು ಸ್ವರಸ್ಥಾನಗಳನ್ನು ತೋರಿಸುವ a,b,c ಮುಂತಾದ ಏಳು ಬಿಂದುಗಳಿಂದ ಈ ವರ್ತುಲದಲ್ಲಿ ವ್ಯಾಸಗಳನ್ನೆಳೆದರೆ, ಆಯಾ ಸ್ವರಕ್ಕೆ ಆರನೆಯ ಮೆಟ್ಟಲಿನಲ್ಲಿ ಇನ್ನೊಂದು ಸ್ವರಸ್ಥಾನವು ಲಭಿಸುವುದು. ಶುದ್ಧ ಮಧ್ಯಮ ಮತ್ತು ಕಾಕಲೀ ನಿಷಾದಗಳು ಮಾತ್ರ ಅನ್ಯತರವಾದವುಗಳನ್ನೇ ಕೊಡುವುದು ಇದಕ್ಕೆ ಗಮನಾರ್ಹವಾದ ಅಪವಾದವಾಗಿದೆ. ಇದಕ್ಕೆ ಕಾರಣವು ಕಾಕಲೀ ನಿಷಾದವು ಮುಂದಿನ ಸ್ವರವಾದ ಷಡ್ಜಕ್ಕೆ ಉಳಿದ ಸ್ವರಗಳಂತಲ್ಲದೆ ಒಂದೇ ಮೆಟ್ಟಲಿನಷ್ಟು ದೂರವಾಗಿರುವುದು. ಆರು ಮೆಟ್ಟಲುಗಳ ದೂರದಲ್ಲಿ ಸ್ವರಗಳು ಊರ್ಧ್ವಸ್ಪರ್ಶವನ್ನು ಪಡೆಯುವ ಸ್ವಭಾವವನ್ನು ಪಡೆದಿರುವುದರಿಂದಲೂ ಈ ಕಾರಣದಿಂದಲೂ ಸ್ಥಾಯಿಯಲ್ಲಿ ಹನ್ನೆರಡು ಸ್ವರಸ್ಥಾನಗಳು ಮಾತ್ರವೇ ಸಾಧ್ಯ.

ಇದಲ್ಲದೆ ಹೆಲ್ಮ್‌ಹೋಲ್ಟ್ಸ್‌ನು ಆವರ್ತನಸ್ವರವು ಆಧಾರಸ್ವರದೊಡನೆ ಅತ್ಯಂತ ಸಾದೃಶ್ಯವನ್ನು ಹೊಂದಿರುವುದಕ್ಕೆ ಅದರ ಅನುರಣನ ಶಕ್ತಿಯ ವ್ಯಾಪ್ತಿಯು ಆಧಾರಸ್ವರದ ಅನುರಣನ ಶಕ್ತಿಯ ವ್ಯಾಪ್ತಿಯಲ್ಲಿ ಅಡಗಿರುವುದೇ ಕಾರಣ, ಎನ್ನುತ್ತಾನೆ.[58] ಇವನು ಈ ಭೌತಿಕ ವಾದದಲ್ಲಿ ರೇಮೋ, ಡ್ಯಾಲೆಂಬರ್ಟ್ ಮತ್ತು ಟಾರ್ಟಿನಿ ಮುಂತಾದವರ ಅಭಿಪ್ರಾಯಗಳನ್ನು ಕ್ರೋಡೀಕರಿಸಿದ್ದಾನೆ. ಲಿಯೋನಾರ್ಡ್ ಆಯ್ಲರನು ಗಣಿತಶಾಸ್ತ್ರವನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ಸಾದೃಶ್ಯಕ್ಕೆ ಈ ಸ್ವರಗಳ ನಡುವೆ ಇರುವ ಅತ್ಯಂತ ಸರಳಾಪೂರ್ಣಾಂಕಗಳ ಅನುಪಾತ (ratio)ವೇ ಕಾರಣ ಎನ್ನುತ್ತಾನೆ.[59] ಮನೋವೈಜ್ಞಾನಿಕ ದೃಷ್ಟಿಯಿಂದ, ಕಾರ್ಲ್ ಸ್ಟಂಫನು ಆವರ್ತನಸ್ವರ ಮತ್ತು ಆಧಾರ ಸ್ವರಗಳು ಅತ್ಯಂತ ಹೆಚ್ಚಾಗಿ ಬೆಸುಗೆಯಾಗುವುದೇ ಇದಕ್ಕೆ ಕಾರಣವೆನ್ನುತ್ತಾನೆ.[60]

---

58 Hermann von Helmholtz: Sensations of Tone, *cit. ibid.*, p. 82.

59 Leonhard Euler, *cit.* Revesz, *op. cit.*, p. 80.

60 Karl Stumpf: a) Tonpsychologie b) Ueber neuere Untersuchungen zur Tonlehre, *cit. ibid.*, pp. 85–86.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

'ದ್ವಿಗುಣಶ್ಚೋತ್ತರೋತ್ತರಃ' ಎಂಬ ಮಾತಿನಲ್ಲಿರುವ ವಿಶೇಷ ಧ್ವನಿಯನ್ನು ಇಲ್ಲಿ ಗಮನಿಸಬೇಕು. ಮೊದಲನೆಯದಾಗಿ ದ್ವಿಗುಣವೆಂದರೆ ಉಚ್ಚಾರಣಪ್ರಸಕ್ತಿಯ ಎರಡರಷ್ಟು ಎಂದು ಅರ್ಥಮಾಡಬಹುದು. ಹೀಗೆ, ಆವರ್ತನ ಸ್ವರದ ಅನುಭವವನ್ನುಂಟುಮಾಡುವ ಗಾಳಿಯ ಅಭಿಘಾತದ ತೀವ್ರತೆಯು ಆಧಾರಸ್ವರವನ್ನುಂಟು ಮಾಡುವುದರ ಎರಡರಷ್ಟು ಎಂದು ನಮ್ಮ ಪೂರ್ವಾಚಾರ್ಯರ ಮತ. ಈ ದ್ವೈಗುಣ್ಯವನ್ನು ಗಂಟಲಲ್ಲಿರುವ ವಾಯುರಂಧ್ರ(ಕಂಠವಿವರ)ವನ್ನು ಸಂಕುಚಿತಗೊಳಿಸಿ ಉಸಿರನ್ನು ಅದರ ಮೂಲಕ ಒತ್ತಿ ಹೊರಪಡಿಸುವುದರಿಂದ ಸಾಧಿಸಬಹುದೆಂದು ನಾನ್ಯದೇವನು ನಾರದನದೆಂದು ಹೇಳಿ ಕೆಲವು ಶ್ಲೋಕಗಳನ್ನು ಉದ್ಧರಿಸುತ್ತಾನೆ :

ತೀವ್ರಪ್ರಯತ್ನ ಉಚ್ಚೈಃ ಸರ್ವಶಾರೀರಾಂಗಸಂಧಿಸಂಚಾರೀ ।
ಗಾತ್ರಾಣಾಂ ನಿಗ್ರಹಃ ಸ್ಯಾತ್ ಸಂವೃತತಾ ಚ ಕಂಠವಿವರಸ್ಯ ।
ವಾಯೋಃ ಸ್ವರಸ್ಯ ಚ ತಥಾ ಗತಾಗತೇ ರೂಕ್ಷತಾ ಚ ವರ್ಣಸ್ಯ ।
ಮುನಯಸ್ತಮೇವಮೇನಂ ಸ್ವರಮಾಹುರುದಾತ್ತನಾಮಾನಮ್ । [61]

ನೀಚಸ್ವರವು ಕಂಠವಿವರವನ್ನು ದೊಡ್ಡದುಮಾಡುವುದರಿಂದ ಆಗುತ್ತದೆಂಬುದಕ್ಕೂ ನಾನ್ಯದೇವನು ಅದೇ ಆಕರದಿಂದಲೇ ಉದ್ಧರಿಸಿ ಹೇಳುತ್ತಾನೆ :

ಕಂಠವಿವರಸ್ಯ ಪೃಥುತಾ ವಾಯೋಃ ಸ್ವರಸ್ಯ ಚ ಹೀನಗಾಮಿತ್ವಾತ್ ।
ಸ್ನಿಗ್ಧತ್ವಮೇವಮೇನಂ ವಿದುರನುದಾತ್ತಂ ತದಾ ಮುನಯಃ । [62]

ಇಲ್ಲಿ ಮುಖ್ಯವಾಗಿ ತಿಳಿಯಬೇಕಾದುದು ಮೊದಲನೆಯ ಆವರ್ತನ ಸ್ವರವು ಆಧಾರಸ್ವರಕ್ಕೆ ಕರಾರುವಾಕ್ಕಾಗಿ ಎರಡರಷ್ಟಿರುತ್ತದೆಂಬ, ಎರಡನೆಯ ಆವರ್ತದ ಸ್ವರವು ಮೊದಲನೆಯದರ ಖಚಿತ ದ್ವಿಗುಣವೆಂಬ, ಇತ್ಯಾದಿ ತತ್ತ್ವ. ಆಯಾ ಆವರ್ತನ ಸ್ವರಗಳ ಕಂಪಮಾನಗಳನ್ನಳೆದು ಆಧುನಿಕ ನಾದಶಾಸ್ತ್ರವು ಈಚೆಗೆ ತಾನೇ ಕಂಡುಹಿಡಿದಿರುವ ಈ ತತ್ತ್ವವನ್ನು ಸುಮಾರು ಸಾವಿರ ವರ್ಷಗಳಷ್ಟು ಹಿಂದೆಯೇ ನಮ್ಮ ಸಂಗೀತ ಶಾಸ್ತ್ರಜ್ಞರು ಕಂಡುಹಿಡಿದಿದ್ದರೆಂಬುದು ವಿಸ್ಮಯಕರವಾಗಿದೆ. ಎಲ್ಲ ಸಂಗೀತ ಪದ್ಧತಿಗಳಿಗೂ ಆಯಾ ಸ್ವರಾಷ್ಟಕದಲ್ಲಿ ಭೌತಿಕವಾಸ್ತವತೆಯನ್ನೂ ಪರಸ್ಪರತೆಯನ್ನೂ ಉಳ್ಳ, ಗೇಯಾರ್ಥಸಹಜವಾದ, ನೆಲೆಯಾದ ಸ್ವರಭಾವಗಳು ಅತ್ಯಾವಶ್ಯಕವಾಗಿರುತ್ತವೆ. ಸ್ವರಾಷ್ಟಕದ ಭಾವವನ್ನು ಪೂರ್ಣಗೊಳಿಸುವ ಆವರ್ತನಸ್ವರವೇ ಇವುಗಳಲ್ಲಿ ಅತ್ಯಂತ ಮುಖ್ಯವಾದುದು. ಇದರ ನಂತರ ಸ್ವರಾಷ್ಟಕದಲ್ಲಿ ಕರಾರುವಾಕ್ಕಾಗಿ ಭೌತಿಕವಾಗಿ ಅರ್ಧಭಾಗವಾದ, ಹಾಗೂ ಸಪ್ತಸ್ವರಗಳ ಮಧ್ಯದಲ್ಲಿರುವ ಮಧ್ಯಮವು ಮುಖ್ಯವಾದುದು. ಇವೆರಡರ ಪ್ರಾಮುಖ್ಯವನ್ನೂ ನಮ್ಮ ಪ್ರಾಚೀನ ಲಾಕ್ಷಣಿಕರು ಸಾವಿರಾರು ವರ್ಷಗಳಿಂದ ಹೇಳುತ್ತಲೇ ಇದ್ದಾರೆ. ಇವೆರಡನ್ನು ಆಧರಿಸಿಯೇ ಸ್ವರಾಷ್ಟಕದಲ್ಲಿರುವ ಎಲ್ಲಾ ಸ್ವರಾಂತರಗಳೂ ಅವುಗಳ ವಾದಿಯೇ ಮೊದಲಾದ ಪರಸ್ಪರ ಭಾವಗಳೂ ಉಂಟಾಗುತ್ತವೆ.

ಎರಡನೆಯದಾಗಿ, 'ದ್ವಿಗುಣಶ್ಚೋತ್ತರೋತ್ತರಃ' ಎಂಬ ನಾದಶಾಸ್ತ್ರಪ್ರಮೇಯವನ್ನು ಶ್ರೀ ಶಾರ್ಙ್ಗದೇವನು 'ವ್ಯವಹಾರೇ ತ್ವಸೌ ತ್ರೇಧಾ' ಎಂಬ ಗಾನವಾದನವ್ಯವಹಾರಪ್ರಯೋಜಕವಾದ ಮಂದ್ರಮಧ್ಯತಾರಸ್ಥಾಯಿಗಳಿಗೆ ಮಾತ್ರ ಮಿತಿಗೊಳಿಸಿರುವುದನ್ನು ಗಮನಿಸಬೇಕು. ಉತ್ತರೋತ್ತರವಾಗಿ ಎಂದರೆ ಮುಂದುಮುಂದಕ್ಕೆ. ಪರಸ್ಪರವಾಗಿ ದ್ವಿಗುಣವಾದ ಪ್ರಯತ್ನದಿಂದ ಆವರ್ತನಸ್ವರಗಳು ಶ್ರಾವ್ಯನಾದದ ಸಮಗ್ರವ್ಯಾಪ್ತಿಯಲ್ಲೆಲ್ಲಾ ದೊರೆಯುತ್ತವೆಂಬ

61 ನಾನ್ಯದೇವ, ಉ. ಗ್ರಂ., II, 42-43, ಪು. 20.

62 ಅದೇ ಗ್ರಂಥ, II, 44-45, ಪು. 20.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಭೌತಿಕತತ್ತ್ವವನ್ನು ತಿಳಿದಿದ್ದರೂ ಶಾರ್ಙ್ಗದೇವನು ವ್ಯವಹಾರಪ್ರಸಿದ್ಧವಾದ ಮೂರು ಸ್ಥಾಯಿಗಳಿಗೆ ಮಾತ್ರ ಏಕೆ ಸೀಮಿತಗೊಳಿಸಿದ್ದಾನೆ? ಏಕೆಂದರೆ ಕೇವಲ ದ್ವೈಗುಣ್ಯದಿಂದ ಸ್ವರಕ್ಕೆ ಆವರ್ತಕತ್ವವು ಸಿದ್ಧಿಸುವುದಿಲ್ಲ. ಶ್ರಾವ್ಯನಾದಕ್ಕೆ ಸ್ವರತ್ವವನ್ನುಂಟುಮಾಡುವ ಹಲವು ಭೌತಿಕ ಹಾಗೂ ಮಾನಸಿಕ ಉಪಾಧಿಗಳನ್ನು ಈ ಮೇಲೆ ಹೇಳಿದೆಯಷ್ಟೆ. ಇವುಗಳೂ ಆವರ್ತಕತ್ವವನ್ನುಂಟುಮಾಡುವ ದ್ವೈಗುಣ್ಯವೂ ಉಚ್ಚನೀಚಕ್ರಮಗಳಲ್ಲಿ ಸ್ವಸ್ವಭಾವನಿಷ್ಠವಾದ ಚಾಕ್ರಿಕಗತಿಯಿಂದ ಚಲಿಸಿದರೂ ಈ ಗತಿಗಳ ನಿಯತಕಾಲಿಕತೆಯ ಪ್ರಮಾಣವು ನಾದದ ಅತ್ಯುಚ್ಚ ಹಾಗೂ ಅತಿ ನೀಚ ಕ್ಷೇತ್ರಗಳಲ್ಲಿ ಸ್ವಲ್ಪಮಟ್ಟಿಗೆ ಬೇರೆಯಾಗಿರುತ್ತವೆ. ಇವೆರಡು ಗತಿಗಳೂ ಒಂದೇ ಪ್ರಮಾಣದಲ್ಲಿರುವುದು ಗಾನಾದಿವ್ಯವಹಾರಪ್ರಯೋಜಕವಾದ ಮಂದ್ರಾದಿ ಮೂರು ಸ್ಥಾನಗಳಲ್ಲಿಯೇ. ಇದಕ್ಕೆ ಕಾರಣವೇನೆಂದರೆ ಪ್ರತಿಯೊಂದು ಸ್ವರವೂ ತನ್ನ ಹುಟ್ಟಿನೊಡನೆಯೇ ಎಡಬಿಡದೆ ಸಹಸ್ಪಂದಿಸುವ ಮತ್ತು ಅನುಸ್ಪಂದಿಸುವ ತನ್ನ ಎರಡರಷ್ಟು, ಮೂರರಷ್ಟು, ನಾಲ್ಕರಷ್ಟು, ಐದರಷ್ಟು, ಇತ್ಯಾದಿಯಾಗಿ ಆವರ್ತನಸ್ವರಗಳನ್ನು ಉಂಟುಮಾಡುತ್ತದೆ. ಇವುಗಳಿಂದಲೇ ಶ್ರುತಿಗೆ ಸ್ವರದ ರಕ್ತತಾ ಧರ್ಮವುಂಟಾಗುವುದು. ಇಂತಹ ಅನುರಣನಾತ್ಮಕಗಳ ಶ್ರಾವ್ಯತಾ ಮಿತಿಯು ಸೆಕಂಡಿಗೆ 10,000 ಕಂಪನಗಳೆಂದು ಪಥಕ (1) ರಲ್ಲಿ ಈಗಾಗಲೇ ನೋಡಿದ್ದೇವೆ. ಸ್ವರದ ಉಚ್ಚತೆಯು ಹೆಚ್ಚಿದಂತೆಲ್ಲ ಅದರ ಆವರ್ತಕಸ್ವರಗಳ ಅನುರಣನಗಳು ವಾದಿ, ಸಂವಾದಿ-ಅನುವಾದಿಭಾವಗಳಲ್ಲಿ ಅಲ್ಲದೆ ಕ್ಲಿಷ್ಟವಾದ, ಅಹಿತವಾದ ವಿವಾದಿಭಾವಗಳಲ್ಲಿರುತ್ತವೆ. ಆದುದರಿಂದ, ಉದಾಹರಣೆಗೆ ಯಾವುದೇ ಆಧಾರಸ್ವರದ ಏಳನೆಯ, ಎಂಟನೆಯ ಮುಂತಾದ ಆವರ್ತಕಗಳು ಅದಕ್ಕೆ ಸಂಪೂರ್ಣವಾದ ವಾದಿಭಾವದಲ್ಲಿರುವುದಿಲ್ಲ. ಸಂಪೂರ್ಣ ಸಾದೃಶ್ಯಸಾಮ್ಯಗಳ ಈ ವಾದಿತ್ವಭಗ್ನತಾಪರಿಣಾಮವು ಮಂದ್ರಮಧ್ಯತಾರಸ್ಥಾಯಿಗಳಲ್ಲಿ ಅತ್ಯಲ್ಪವಾಗಿರುತ್ತದೆ. ಪಾಶ್ಚಾತ್ಯಸಂಗೀತದಲ್ಲಿ ಇದರ ಪರಿಣಾಮವು ಹೆಚ್ಚಾಗಿ ಕಂಡುಬರುತ್ತದೆ. ಅದರಲ್ಲಿ ಸ್ಥಾಯಿಯಲ್ಲಿನ ಸ್ವರಗಳನ್ನು ಅವುಗಳ ನೈಜಸ್ಥಾನದಲ್ಲಿ ಬಿಟ್ಟು ಏಕಕಾಲಿಕವಾದ ಅನೇಕಸ್ವರೋಚ್ಚಾರಣ (polyphony)ದ ಆವಶ್ಯಕತೆಯಿಂದಾಗಿ ಸ್ವಲ್ಪ ಕದಲಿಸಬೇಕಾಗುತ್ತದೆ. ಇದು ಉಚ್ಚವಾದ ಪ್ರದೇಶದಲ್ಲಿ ಸಂಕೀರ್ಣವೂ ಅಹಿತಕರವೂ ಆದ ಪರಿಣಾಮಗಳನ್ನು ಉಂಟುಮಾಡುತ್ತದೆ ಎಂದು ಪಾಶ್ಚಾತ್ಯಸಂಗೀತಶಾಸ್ತ್ರಜ್ಞರೇ ಒಪ್ಪುತ್ತಾರೆ. ಆಧುನಿಕ ನಾದಶಾಸ್ತ್ರ ಪಂಡಿತರೂ ಮನೋವಿಜ್ಞಾನಿಗಳೂ ಆಗಿರುವ ರೆವೆಜ್, ಸ್ಟಂಫ್ ಮೊದಲಾದವರೂ ಸ್ವರದ ದ್ವೈಗುಣ್ಯ ಮತ್ತು ಅದರ ನಾದಗುಣಗಳಿಗೆ ಸಂಪೂರ್ಣ ಪರಸ್ಪರಾನುರೂಪತೆಯಿಲ್ಲವೆಂಬುದನ್ನು ಮನಗಾಣದಿರುವಾಗ ಈ ತತ್ತ್ವವನ್ನು ಏಳು ಶತಮಾನಗಳಿಗೂ ಹಿಂದೆಯೇ ಶ್ರೀಶಾರ್ಙ್ಗದೇವನು ಹೇಳಿದ್ದಾನೆಂಬುದು ಇಲ್ಲಿ ಅಭಿಮಾನಾಸ್ಪದವಾಗಿದೆ.

'ದ್ವಿಗುಣಶ್ಚೋತ್ತರೋತ್ತರಃ' ಎನ್ನುವಲ್ಲಿ ಸಂಗೀತಶಾಸ್ತ್ರದಲ್ಲಿ ಅತಿ ಮುಖ್ಯವಾದ ಇನ್ನೂ ಒಂದು ಸೂಚನೆಯನ್ನು ಕಾಣಬಹುದು: ಈ ಮಾತು ಸ್ಥಾಯಿಯಲ್ಲಿರುವ, ಸ್ವರತ್ವವನ್ನು ಹೊಂದಿರುವ ಎಲ್ಲಾ ನಾದವಿಶೇಷಗಳಿಗೂ ಅನ್ವಯಿಸುವುದಷ್ಟೆ. ಹೀಗೆ, ಪ್ರತಿಸ್ಥಾಯಿಯಲ್ಲಿಯೂ ಪ್ರತಿಸ್ವರವೂ ಉಚ್ಚನೀಚವಾದ ವಿವಿಧ ಧ್ವನಿಮಟ್ಟಗಳಲ್ಲಿ ಹೆಚ್ಚುಕಡಿಮೆ ತನ್ನದೇ ಸ್ವರೂಪದಲ್ಲಿ ಪುನಃ ಪುನಃ ಗೋಚರವಾಗುತ್ತಿರುತ್ತದೆ. ಈ ಗುಣವಿರುವುದರಿಂದಲೇ ಅದಕ್ಕೆ ಸ್ವರತ್ವವೂ ಸ್ವರಾಷ್ಟಕದಲ್ಲಿ ನೆಲೆಯಾದ ಸ್ಥಾನವೂ ಪ್ರಾಪ್ತವಾಗುವುದು. ಎಂದರೆ ತನ್ನಿಂದ ಅಷ್ಟಮ ಸ್ವರದ ದೂರದಲ್ಲಿ ವಾದಿತ್ವವನ್ನು ಅತ್ಯಂತ ಸಾದೃಶ್ಯಸಾಮ್ಯಗಳಿಂದ ಪ್ರತಿಸ್ವರವೂ ಪಡೆದುಕೊಳ್ಳುವುದರಿಂದ ಹಿಂದುಮುಂದಿನ ಸ್ವರಗಳೊಡನೆ ನಿಗದಿಯಾದ, ನಿಶ್ಚಲವೂ ನಿರ್ದಿಷ್ಟವೂ ಆದ ಅಂತರದಲ್ಲಿರುತ್ತದೆ. ಆದುದರಿಂದಲೇ, ತನ್ನ ಮತ್ತು ವಿವಿಧ ಸ್ಥಾನಗಳಲ್ಲಿ ಪುನರಭಿವ್ಯಕ್ತಿಯ ಶಕ್ತಿಯಿಂದಲೇ, ಅದಕ್ಕೆ ಸ್ವರತ್ವವು ಲಭಿಸುವುದು. ಇದರ ಅರಿವೇ ಗಾನಪ್ರಪಂಚಸರ್ವಸ್ವದ ಅಡಿಪಾಯವಾಗಿದೆ. ಏಕೆಂದರೆ ಇದರಿಂದ ಗೇಯರಚನಾಪ್ರಯೋಜಕವೂ ಮೂಲಭೂತವೂ ಆದ ಈ ಮೂರು ತತ್ತ್ವಗಳು ಇದರಿಂದ ಹೊರಪಡುತ್ತವೆ:

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

1) ಸ್ವರಾಷ್ಟಕದಲ್ಲಿ ವಿವಿಧ ಸ್ವರಗಳಲ್ಲಿ ಪೂರ್ವಾಪರ ಸಂಬಂಧಗಳನ್ನೂ, ವಿವಿಧಸ್ವರಯುಗ್ಮಗಳಲ್ಲಿ ಪರಸ್ಪರ ಭಾವಗಳನ್ನೂ, ಆಧಾರಸ್ವರದೊಡನೆ ಅಥವಾ ಉದ್ದಿಷ್ಟಸ್ವರದೊಡನೆ ಉಳಿದ ಸ್ವರಗಳಲ್ಲಿ ಪ್ರತಿಯೊಂದು ಸ್ವರವೂ ಪಡೆದಿರುವ ಅಂತರ ಮತ್ತು ಭಾವಗಳನ್ನೂ ಸಾಕ್ಷಾತ್ಕರಿಸಿಕೊಳ್ಳುವುದು.

2) ಈ ಸಾಮಗ್ರಿಯನ್ನು ವಿವಿಧ ನಾದಪ್ರದೇಶಗಳಲ್ಲಿ ಅನ್ವಯಿಸಿ ಪ್ರಯೋಗಿಸುವುದು.

3) ಈ ಸಾಮಗ್ರಿಯನ್ನು ಕಾಲಲಯಕ್ಕೆ ಅನ್ವಯಿಸಿ ಗೀತ ಅಥವಾ ಅದರ ಗೌಣಸ್ವರೂಪವಾದ ರಾಗ ಮುಂತಾದ ನಿರ್ದಿಷ್ಟ ಗೇಯಾರ್ಥಾಭಿವ್ಯಕ್ತಿಪ್ರಕಾರಗಳನ್ನು ಪಡೆದುಕೊಳ್ಳುವುದು.

ಇಪ್ಪತ್ತೆರಡು ಶ್ರುತಿಗಳು : ದೈಹಿಕ ಉತ್ಪತ್ತಿ

**ತಸ್ಯ ದ್ವಾವಿಂಶತಿರ್ಭೇದಾಃ ಶ್ರವಣಾತ್ ಶ್ರುತಯೋ ಮತಾಃ ।**
**ಹೃದ್ಯೂರ್ಧ್ವನಾಡೀ ಸಂಲಗ್ನಾ ನಾಡ್ಯೋ ದ್ವಾವಿಂಶತಿರ್ಮತಾಃ ॥ 8 ॥** 224

ಅದರ (ಮೂರು ಸ್ಥಾನಗಳಲ್ಲಿಯೂ ವ್ಯಾಪಿಸಿರುವ ನಾದದ) ಇಪ್ಪತ್ತೆರಡು ಭೇದಗಳಿವೆ. [ಅವುಗಳು] ಕೇಳಿಸುವುದರಿಂದ ಶ್ರುತಿಗಳು ಎಂದು ಅಭಿಪ್ರಾಯಪಡಲಾಗಿದೆ. ಹೃದಯದ ಮೇಲುಗಡೆ ಇರುವ ನಾಡಿಗಳಿಗೆ ಸೇರಿಸಲ್ಪಟ್ಟ ಇಪ್ಪತ್ತೆರಡು ನಾಡಿಗಳಿವೆಯೆಂದು ಅಭಿಪ್ರಾಯಪಡಲಾಗಿದೆ.

ಭರತನು ಶ್ರುತಿಶಬ್ದದ ನಿಷ್ಪತ್ತಿಯನ್ನು ಕೊಡುವುದಿಲ್ಲ.

ಭಾರತೀಯ ಸಂಗೀತದಲ್ಲಿ ಶ್ರುತಿ ಎಂಬುದಕ್ಕಿಂತ ವಿವಾದಾಸ್ಪದವೂ, ಕುತೂಹಲಕಾರಿಯೂ, ನಿಗೂಢವೂ ಆಗಿರುವ ಶಬ್ದವು ಬೇರೊಂದಿಲ್ಲ, ಎಂದರೆ ಉತ್ಪ್ರೇಕ್ಷೆಯಾಗದು. ಅತ್ಯಂತ ಪ್ರಾಚೀನಕಾಲದಿಂದಲೂ ಈ ಶಬ್ದವು ತನ್ನ ಅರ್ಥಪ್ರವಾಹದ ದಿಕ್ಕು, ಆಳ, ವೇಗ, ಗಾತ್ರ ಮತ್ತು ಗತಿಗಳನ್ನು ಇಂದಿನವರೆಗೂ ಆಗಾಗ ಬದಲಾಯಿಸಿಕೊಳ್ಳುತ್ತಲೇ ಹರಿಯುತ್ತಿದೆ. ಅದರ ಕಲ್ಪನೆಯ ಹುಟ್ಟು, ಹೆಸರು, ಸಂಖ್ಯೆ, ಬಳಕೆ, ಪ್ರಯೋಜನ ಮೊದಲಾದವುಗಳಲ್ಲಿಯೂ ಶ್ರುತಿಯು ಕಾಲದೇಶಗಳಲ್ಲಿ ಐಕ್ಯವನ್ನು ಪಡೆದಿಲ್ಲ. ಶ್ರುತಿಯನ್ನು ಸಂಗೀತಶಾಸ್ತ್ರದಲ್ಲಿ ಮೊದಲನೆಯ ಸಲ ಲಕ್ಷಿಸಿರುವುದು ದತ್ತಿಲಮುನಿ.[63]

ಶ್ರುತಿ ಎಂಬ ಶಬ್ದವು 'ಶ್ರು' ಧಾತುವು ಕರ್ಮವಿಹಿತವಾದ 'ಕ್ತಿನ್' ಪ್ರತ್ಯಯದೊಡನೆ ಸೇರುವುದರಿಂದ ಆಗಿದೆ; 'ಶ್ರು' ಧಾತುವಿಗೆ ಕೇಳು, ಅವಧಾನದಿಂದ ಕೇಳು, ಅಭ್ಯಸಿಸು ಎಂದು ಮುಂತಾದ ಅರ್ಥಗಳಿವೆ.[64] ಇದು ವೈದಿಕ ವ್ಯಾಕರಣಪ್ರಕ್ರಿಯೆಯಲ್ಲಿ ಶೃಣೋತಿ, ಶೃಣುತೇ ಮುಂತಾದ ರೂಪಗಳನ್ನೂ ಲೌಕಿಕ ಸಂಸ್ಕೃತ ಭಾಷೆಯಲ್ಲಿ ಶ್ರೂಯತೇ ಎಂದು ಮುಂತಾದ ರೂಪಗಳನ್ನೂ ಪಡೆಯುತ್ತದೆ. ಈ ಎರಡು ನಿಷ್ಪತ್ತಿಗಳನ್ನೂ ನಾನ್ಯದೇವನು ಕೊಡುತ್ತಾನೆ:

ಶ್ರುತಿಃ ಶ್ರೂಯತ ಇತ್ಯೇವಂ ಧ್ವನಿರ್ಘೋಽಭಿಧೀಯತೇ ।
ಶೃಣೋತೇಃ ಕರ್ಮವಿಹಿತೇ ಪ್ರತ್ಯಯೇ ಕ್ತಿನಿ ಜಾಯತೇ ।[65]

ಈ ರೀತಿಯ ಭಿನ್ನ ಪ್ರಯೋಗಗಳಿಂದಾಗಿ ಈ ಶಬ್ದಕ್ಕೆ ತನ್ನ ಮೂಲವಾದ ಯೌಗಿಕಾರ್ಥವೇ ಅಲ್ಲದೆ, ವೇದಮಂತ್ರಗಳು, ಬ್ರಾಹ್ಮಣಗಳು ಇತ್ಯಾದಿಯಾಗಿ ಶಬ್ದಪ್ರಮಾಣವೆಂದು ಸನಾತನರಿಂದ ಸ್ವೀಕೃತವಾದ ವೈದಿಕವಾಙ್ಮಯ

63 ದತ್ತಿಲ, ಉ. ಗ್ರಂ., 9. 64 ಧಾತುಪಾಠ, XXII, 44. 65 ನಾನ್ಯದೇವ, ಉ. ಗ್ರಂ., III, 5, 82.

ವೆಂದೂ, ಅಧ್ಯಯನಮಾಡು, (ಯಾವುದಾದರೊಂದು ಆಕರದಲ್ಲಿ ಹೀಗೆ) ಹೇಳಿದೆ ಎಂದು ಮೊದಲಾಗಿ ರೂಢಾರ್ಥವೂ ಇವೆ.

ಶ್ರುತಿಯೆಂಬ ಶಬ್ದವು ವಿಶೇಷ ಪಾರಿಭಾಷಿಕಾರ್ಥದಲ್ಲಿ ಮತ್ತು ಸ್ವಸಮಯಮಾತ್ರದಲ್ಲಿ ಸಂಗೀತಶಾಸ್ತ್ರವು ನಿರ್ಮಿಸಿಕೊಂಡುದುದಲ್ಲ. ಯಾವುದೇ ಶಾಸ್ತ್ರದಲ್ಲಿ ಬಳಕೆಯಾಗುವ ಪಾರಿಭಾಷಿಕಶಬ್ದಗಳು ಇಬ್ಬಗೆಯಾಗಿರುತ್ತವೆ: ಮೊದಲನೆಯ ಬಗೆಯಲ್ಲಿ ಆಯಾ ಭಾಷೆಯಲ್ಲಿ ಸಾಮಾನ್ಯಾರ್ಥದಲ್ಲಿ ಹುಟ್ಟಿ ಬಳಕೆಯಾಗುತ್ತಿರುವ, ಈ ಅರ್ಥದ ಪ್ರಯೋಜನಕ್ಕಾಗಿಯೇ ಆರಿಸಲ್ಪಟ್ಟು ತನ್ನ ಅರ್ಥಪರಿಮಿತಿಯಲ್ಲೇ ವಿಶೇಷ ಸೂಚನೆಯನ್ನೂ ಸಂಜ್ಞೆಯನ್ನೂ ಪಡೆಯುವಂತಹವು; ಉದಾಹರಣೆಗೆ ಸಂಗೀತಶಾಸ್ತ್ರದಲ್ಲಿ ಸ್ವರ, ಗ್ರಾಮ, ಮೂರ್ಛನೆ, ತಾನ, ಅಲಂಕಾರ, ರಾಗ, ಮೊದಲಾದವುಗಳು. ಎಂದರೆ, ಯೌಗಿಕಾರ್ಥಪ್ರಾಧಾನ್ಯದಿಂದ ಇವು ಭಾಷೆಯಿಂದ ಶಾಸ್ತ್ರಕ್ಕೆ ಬರುತ್ತವೆ. ಎರಡನೆಯ ವಿಧದಲ್ಲಿ ಆಯಾ ಶಾಸ್ತ್ರವು ತಾನೇ ನಿರ್ಮಿಸಿಕೊಂಡು ಅರ್ಥಗಳನ್ನು ರೂಢಿಯಲ್ಲಾಗಲೀ ಯೋಗದಲ್ಲಾಗಲೀ ಸೇರಿಸುವಂತಹವುಗಳು. ಉದಾಹರಣೆಗೆ ಸಂಗೀತಶಾಸ್ತ್ರದಲ್ಲಿ, ಷಡ್ಜ, ಚಚ್ಚತ್ಪುಟ, ಕೀರವಾಣಿ ಎಂದು ಮುಂತಾದವುಗಳು. ಇವುಗಳು ಶಾಸ್ತ್ರದಿಂದ ಭಾಷೆಗೆ ಬಂದಂತಹವುಗಳು. ಶ್ರುತಿಯು ಇವುಗಳಲ್ಲಿ ಮೊದಲನೆಯ ವಿಧಕ್ಕೆ ಸೇರಿದುದು. ಏಕೆಂದರೆ ತನ್ನ ಯೌಗಿಕಾರ್ಥದಲ್ಲಿಯೇ ಅದು ಮೊದಲು ವೈದಿಕಸಾಹಿತ್ಯದಲ್ಲಿ ಪ್ರಯುಕ್ತವಾಯಿತು. ನಂತರ ಈ ಅರ್ಥವು ಸಂಗೀತಶಾಸ್ತ್ರದಲ್ಲಿಯೂ ಸಾಧಾರಣವಾದುದರಿಂದ ಅದೇ ಅರ್ಥದಲ್ಲಿ ಈ ಶಾಸ್ತ್ರದಲ್ಲಿಯೂ ಬಳಸಲ್ಪಟ್ಟಿತು. ಕಾಲಕ್ರಮದಲ್ಲಿ ಈ ಅರ್ಥವು ಕೇವಲ ಗೌಣವಾಗಿ ವಿಶೇಷವೂ, ಪರಿಭಾಷಾಸಂಜ್ಞಿತವೂ ಆದ ಅರ್ಥವು ಅದಕ್ಕೆ ನೆಲೆಯಾಯಿತು. ಇದಕ್ಕೆ ವೈದಿಕ ಸಾಹಿತ್ಯದಲ್ಲಿಯೇ ವಿಪುಲವಾದ ಸಾಕ್ಷ್ಯವು ದೊರೆಯುತ್ತದೆ. ಉದಾಹರಣೆಗೆ, ವಿಶೇಷವಾಗಿ, ಪ್ರತ್ಯೇಕವಾಗಿ ಕೇಳಿಸಿದ್ದು ಶ್ರುತಿ ಎಂಬ ಅರ್ಥದಲ್ಲಿ ಪ್ರಯೋಗವು ಬಹು ಪ್ರಾಚೀನವಾದ ಋಕ್ ಪ್ರಾತಿಶಾಖ್ಯೆಯಲ್ಲಿ ದೊರೆಯುತ್ತದೆ:

ಮಾತ್ರಾ ಸಂಸರ್ಗಾದವರೇ ಪೃಥಕ್ ಶ್ರುತೀ [66]

ಇದನ್ನು ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ಉವಟಾಚಾರ್ಯನು ಮೇಲೆ ಹೇಳಿದ ಅರ್ಥವನ್ನು ಹೊರಡಿಸುತ್ತಾನೆ:

ಪೃಥಕ್ ಶ್ರೂಯೇತೇ ಇತ್ಯರ್ಥಃ । ಏವಂ ಶ್ರುತಿವಿಶೇಷೋ ಭವತಿ ।

ಪಾಣಿನಿಯು ಸ್ವರಿತಕ್ಕೆ ಮುಂಚೆ ಬರುವ ಉದಾತ್ತವನ್ನು ಕುರಿತು ಹೇಳುವಾಗ ಏಕ ಶ್ರುತಿ ಎಂದು ಸಂಖ್ಯಾಮೂಲಕವಾದ ಅಳತೆಯ ಸಂಬಂಧವನ್ನು ಹೇಳಿದಂತೆ ಭಾಸವಾದರೂ ಇದರಿಂದ ಸಪ್ತಮಸ್ವರ (ಅತಿಸ್ವಾರ್ಯ) ವು ಉದ್ದೇಶಿಸಲ್ಪಟ್ಟಿದೆಯೆಂದು ಪತಂಜಲಿಯು ಇದರ ಭಾಷ್ಯಸಂದರ್ಭದಲ್ಲಿ ತಿಳಿಸುತ್ತಾನೆ:

ಉಚ್ಚೈರುದಾತ್ತಃ । ನೀಚೈರನುದಾತ್ತಃ । ಸಮಾಹಾರಃಸ್ವರಿತಃ । ತಸ್ಯಾದಿತ ಉದಾತ್ತಮರ್ಧಹ್ರಸ್ವಮ್। ಏಕಶ್ರುತಿದೂರಾತ್ ಸಂಬುದ್ಧೌ । [67]

ಸ್ವರಿತೇ ಯ ಉದಾತ್ತಃ ಸ ಅನ್ಯೇನ ವಿಶಿಷ್ಟಃ । ಏಕಶ್ರುತಿಃ ಸಪ್ತಮಃ [68]

ಸಾಮವೇದದ ಅಂಗಗಳಾದ ಫುಲ್ಲಸೂತ್ರಗಳು, ಸಾಮವಿಧಾನ ಬ್ರಾಹ್ಮಣ ಮುಂತಾದವುಗಳಲ್ಲಿ ಶ್ರುತಿಯ ಪ್ರಸ್ತಾಪವಿಲ್ಲ. ಇದರ ಪ್ರಥಮೋಲ್ಲೇಖವು ನಮಗೆ ದೊರೆಯುವುದು ಸಾಮವೇದಶಿಕ್ಷೆಯಾದ ನಾರದೀಯಶಿಕ್ಷೆಯಲ್ಲೇ. ಇದು ಸ್ಪಷ್ಟವಾಗಿ ಸ್ವರಶಾಸ್ತ್ರವೆಂದೇ ಶಿಕ್ಷಾಕಾರನಿಂದ ವ್ಯವಹರಿಸಲ್ಪಟ್ಟಿದೆ:

66 ಋಕ್‌ಪ್ರಾತಿಶಾಖ್ಯೆ, XIII, 41.
67 ಪಾಣಿನಿ, ಅಷ್ಟಾಧ್ಯಾಯಿ, I, 2, 31-33.
68 ಪತಂಜಲಿ, ಮಹಾಭಾಷ್ಯ, ಪಾಣಿನಿಯ I, 2, 33ಕ್ಕೆ ವ್ಯಾಖ್ಯಾನ.

ಅಥಾತಃ ಸ್ವರಶಾಸ್ತ್ರಾಣಾಂ ಸರ್ವೇಷಾಂ ವೇದ ನಿಶ್ಚಯಮ್ |
ಉಚ್ಚನೀಚವಿಶೇಷಾದ್ಧಿ ಸ್ವರಾನ್ಯತ್ವಂ ಪ್ರವರ್ತತೇ | [69]

ಇದರ ಪ್ರಾಚೀನತೆಯೆಷ್ಟೆಂದು ಹೇಳಲು ಗ್ರಂಥಾಂತರ್ಗತವಾದ ಕೆಲವು ತೊಡಕುಗಳಿವೆ. ಇದು ಸಾಮವೇದ ಗಾಯನಕ್ಕೆ ಸರ್ವಸಮ್ಮತವಾದ ಪ್ರಮಾಣ ಗ್ರಂಥವಾಗಿದೆಯೆಂಬುದು ನಿರ್ವಿವಾದ. ಶ್ರುತಿಗೆ ಸಂಬಂಧಿಸಿದ ಈ ಕೆಳಗಿನ ಶ್ಲೋಕಗಳು ಸಮಾನಪಾಠದಲ್ಲಿ ನಾರದೀಯಶಿಕ್ಷೆಯಲ್ಲಿಯೂ [70] ಭಾರತೀಯ ನಾಟ್ಯಶಾಸ್ತ್ರದಲ್ಲಿಯೂ [71] ದೊರೆಯುತ್ತವೆ :

ಶ್ರುತಯೋ ಽನ್ಯಾ ದ್ವಿತೀಯಸ್ಯ ಮೃದುಮಧ್ಯಾಯತಾಃ ಸ್ಮೃತಾಃ |
ಆಯತತ್ವಂ ಭವೇನ್ನೀಚೇ ಮೃದುತ್ವಂ ತು ವಿಪರ್ಯಯೇ |
ಸ್ವೇ ಸ್ವರೇ ಮಧ್ಯಮತ್ವಂ ಚ ಮೃದುಮಧ್ಯಮಯೋಸ್ತಥಾ |
ದೀಪ್ತಾಯತೇ ಕರುಣಾನಾಂ ಶ್ರುತೀನಾಮೇಷ ನಿಶ್ಚಯಃ |

ನಾರದೀಯ ಶಿಕ್ಷೆಯಲ್ಲಿ ಈ ಶ್ಲೋಕಗಳು ಸಹಜವಾದ ಗ್ರಂಥಸಂದರ್ಭವನ್ನೂ ಅವಿಚ್ಛಿನ್ನತೆಯನ್ನೂ ಪಡೆದಿವೆ. ನಾಟ್ಯಶಾಸ್ತ್ರದ ಮೇಲೆ ಹೇಳಿದ ನಾಲ್ಕನೆಯ ಶ್ಲೋಕಾರ್ಧವು

ದೀಪ್ತಾಽಽಯತಕರುಣಾನಾಂ ಮೃದುಮಧ್ಯಮಯೋಸ್ತಥಾ |
ಶ್ರುತೀನಾಂ ಯೋ ಽವಿಶೇಷಜ್ಞೋ ನ ಸ ಆಚಾರ್ಯ ಉಚ್ಯತೇ |

ಎಂಬ ರೂಪದಲ್ಲಿ ನಾರದೀಯ ಶಿಕ್ಷೆಯಲ್ಲಿ ದೊರೆಯುತ್ತದೆ. [72] ನಾಟ್ಯಶಾಸ್ತ್ರದಲ್ಲಿ ಈ ಎರಡು ಶ್ಲೋಕಗಳು ವರ್ಣಾಲಂಕಾರವರ್ಣನಾಸಂದರ್ಭದಲ್ಲಿ ಊರ್ಮಿಯೆಂಬ ಅಲಂಕಾರದ ಮತ್ತು ಬಿಂದುವೆಂಬ ಅಲಂಕಾರದ ಲಕ್ಷಣಗಳ ನಡುವೆ ದೊರೆಯುತ್ತದೆ. ಇವುಗಳನ್ನು ಭರತಮುನಿಯು ಮೂಲಗ್ರಂಥದಲ್ಲಿ ಬರೆದಿದ್ದನೇ ಎಂಬುದು ಸಂದೇಹಾಸ್ಪದ. ಏಕೆಂದರೆ ನಾಟ್ಯಶಾಸ್ತ್ರದ ಸಂಪಾದಕನಾದ ದಿ. ರಾಮಕೃಷ್ಣ ಕವಿಯು ಅದರ ಪಾಠಶೋಧನಕ್ಕೆಂದು ಬಳಸಿದ ಹತ್ತೊಂಬತ್ತು ವಿವಿಧ ಆಕರವರ್ಗಗಳಲ್ಲಿ ಅಭಿನವಗುಪ್ತಾಚಾರ್ಯನಿಂದ ಸ್ವೀಕೃತವೂ ವ್ಯಾಖ್ಯಾತವೂ ಆದ 'ಚ' ಮಾತೃಕೆಯಲ್ಲಿ ಮಾತ್ರ ಇವು ನಾರದೀಯ ಶಿಕ್ಷೆಯಿಂದ ಉದಾಹೃತಗಳೆಂದು ವ್ಯವಹೃತವಾಗಿವೆ ; ಅಭಿನವಭಾರತೀಯಲ್ಲಿ ಇದು ವ್ಯಾಖ್ಯಾತವಾಗಿರುವುದರಿಂದ ಈ ವೇಳೆಗೆ ಈ ಪ್ರಕ್ಷಿಪ್ತಗಳು ನಾಟ್ಯಶಾಸ್ತ್ರದ ಭಾಗವೆಂದೇ ಸ್ವೀಕೃತವಾಗಿದ್ದಿರಬೇಕು. ಭರತಮುನಿಯು ಸ್ವರಗಳನ್ನು ಹೆಸರಿಸುವಾಗಲೂ ಈ ಶ್ರುತಿಗಳ ಹೆಸರುಗಳನ್ನು ಶ್ರೀಮದಭಿನವಗುಪ್ತನು ಭಾಷ್ಯಸಂದರ್ಭದಲ್ಲಿ ಪ್ರಸ್ತಾಪಿಸಿದ್ದಾನೆ.[73] ಆದರೆ ವರ್ಣಾಲಂಕಾರಲಕ್ಷಣಕ್ಕೆ ಮೇಲೆ ಹೇಳಿದ ಶ್ಲೋಕಗಳು ಪ್ರಸಕ್ತವಾಗಿ ಕಾಣುವುದಿಲ್ಲ. ಅಲ್ಲದೆ ಇಡೀ ಗ್ರಂಥದಲ್ಲಿ ಅವುಗಳ ಉಪಯೋಗವಾಗಲೀ ನಾಮನಿರ್ದೇಶವಾಗಲೀ ಬೇರೆಲ್ಲಿಯೂ ಕಾಣಸಿಗುವುದಿಲ್ಲ. ನಾರದೀಯ ಶಿಕ್ಷೆಯಲ್ಲಾದರೋ ಇವು ತುಂಬಾ ಸಹಜವಾದ, ಅವಿಚ್ಛಿನ್ನವಾದ ಹಾಗೂ ಸಕ್ರಮವಾದ ರೀತಿಯಲ್ಲಿ ಲಕ್ಷಿತವಾಗಿವೆ. ಆದುದರಿಂದ ನಾರದೀಯಶಿಕ್ಷೆಯಿಂದ ಈ

69 ನಾರದೀಯಶಿಕ್ಷಾ, I, 1, 1.

70 ಅದೇ ಗ್ರಂಥ, I, 7, 10, 11.

71 ಭರತಮುನಿ, ನಾಟ್ಯಶಾಸ್ತ್ರ, XXIX, 36, 37, ಪು. 89.

72 ನಾರದೀಯಶಿಕ್ಷಾ, I, 1, 9 ;

73 ಅಭಿನವಗುಪ್ತ, ಅಭಿನವಭಾರತೀ (ನಾಟ್ಯಶಾಸ್ತ್ರವಿವೃತಿ), XXVIII, 21, ಪು. 12 ಮತ್ತು XXIX, 36, 37, ಪು. 89.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ಲೋಕಗಳು ನಾಟ್ಯಶಾಸ್ತ್ರದಲ್ಲಿ ಪ್ರಕ್ಷಿಪ್ತವಾಗಿ ಸುಮಾರು ಕ್ರಿ.ಶ. ಹತ್ತನೆಯ ಶತಮಾನದ ವೇಳೆಗೆ ನಾಟ್ಯಶಾಸ್ತ್ರದ ಅವಿಭಾಜ್ಯಭಾಗವೆಂದೇ ಪರಿಗಣಿತವಾಗಿದ್ದಿರಬೇಕು.

ಇದು ಹೇಗೇ ಇರಲಿ, ನಾರದೀಯ ಶಿಕ್ಷೆಯು ವೈದಿಕ ಹಾಗೂ ಲೌಕಿಕ ಸಂಗೀತಗಳ ನಡುವೆ ಸೇತುವೆಯಂತಿದೆಯೆಂದೂ ಅವುಗಳಲ್ಲಿನ ಪರಸ್ಪರತೆಯನ್ನು ಪದೇ ಪದೇ ಎತ್ತಿತೋರಿಸಿ ಅವುಗಳಲ್ಲಿ ಸಾಮ್ಯವನ್ನು ಸ್ಥಾಪಿಸುತ್ತದೆಂಬುದೂ ಇಲ್ಲಿ ಸ್ಮರಣೀಯವಾಗಿದೆ. ಇಡೀ ವೇದವಾಙ್ಮಯದಲ್ಲಿ ಮತ್ತು ಸಂಗೀತಶಾಸ್ತ್ರವಾಙ್ಮಯದಲ್ಲಿ ಇದೊಂದೇ ಗ್ರಂಥವು ಈ ಅತಿಮುಖ್ಯ ಕೆಲಸವನ್ನು ಮಾಡುವುದರಿಂದ ಉಭಯ ಶಾಸ್ತ್ರಾಭ್ಯಾಸಿಗಳಿಗೂ ಇದು ಸಂಶೋಧನೆಗೆ ವಸ್ತುವನ್ನೊದಗಿಸುತ್ತದೆ. ಭಾರತೀಯ ಸಂಗೀತಶಾಸ್ತ್ರದಲ್ಲಿ ಶ್ರುತಿಯ ಕಲ್ಪನೆಯು ಪಡೆದ ರೂಪಗಳಿಗೆ ಈ ಶಿಕ್ಷಾ ಗ್ರಂಥವು ಮಾತೃಸ್ವರೂಪದಲ್ಲಿರುವಂತೆ ಕಾಣುತ್ತದೆ. ಇಲ್ಲಿ ಶ್ರುತಿಯೆಂಬುದಕ್ಕೆ ಧ್ವನಿ, ಸ್ವರ, ಸ್ವರವು ಪಡೆಯುವ ಕಂಪನಾತ್ಮಕವಾದ ಅಲಂಕಾರವಿಶೇಷ ಎಂಬ ಅರ್ಥಗಳು ಕಂಡುಬರುತ್ತವೆ. ಸಾಮಗಾನದಲ್ಲಿ ಶ್ರುತಿಗಳ ಪ್ರಾಮುಖ್ಯವೆಷ್ಟೆಂದರೆ, ಅವುಗಳನ್ನು ತಿಳಿಯದ ಸಾಮಗಾನಾಚಾರ್ಯನು ಆಚಾರ್ಯನೇ ಅಲ್ಲ, ಎಂದಿದ್ದಾನೆ ನಾರದ :

ಶ್ರುತೀನಾಂ ಯೋ ಽವಿಶೇಷಜ್ಞೋ ನ ಸ ಆಚಾರ್ಯ ಉಚ್ಯತೇ [72]

ಇಷ್ಟಾದರೂ ಸಂಗೀತಶಾಸ್ತ್ರ ಪ್ರಮೇಯಗಳ ಉದ್ದೇಶದಲ್ಲಿ ಅವನು ಶ್ರುತಿಗಳನ್ನು ಸೇರಿಸದಿರುವುದರಿಂದಲೂ[74] ಸಾಮಗಾನ ಸಂದರ್ಭಗಳಲ್ಲಿ ಮಾತ್ರ ಅವುಗಳನ್ನು ಹೇಳಿರುವುದರಿಂದಲೂ ಶ್ರುತಿಯ ಮೂಲ ಕಲ್ಪನೆಯು ಸಾಮವೇದದಲ್ಲಿ ಹುಟ್ಟಿ, ಲೌಕಿಕ ಸಂಗೀತದಲ್ಲಿ ರೂಪಾಂತರದಲ್ಲಿ ಬೆಳೆಯಿತೆಂದು ತಿಳಿಯಬೇಕು. ಶ್ರುತಿಯೆಂಬುದನ್ನು ಸ್ವರ ಅಥವಾ ಧ್ವನಿ ಎಂದು ವ್ಯವಹರಿಸಿರುವುದನ್ನು ನಾರದೀಯ ಶಿಕ್ಷೆಯ

ಶತೇಷು ಸಪವಿತ್ರೇಷು ನೀಚಾದುಚ್ಚಾರ್ಯತೇ ಶ್ರುತಿಃ [75]
ಪೂರ್ಣಂ ನಾಮ ಸ್ವರಶ್ರುತಿಪೂರಣಾತ್ ಛಂದಃ ಪಾದಾಕ್ಷರಸಂಯೋಗಾತ್ ಪೂರ್ಣಮಿತ್ಯುಚ್ಯತೇ || [76]
ಸವನೇಷು ಸಪತ್ನೀಷು ನೀಚಾದುಚ್ಚಾರ್ಯತೇ ಶ್ರುತಿಃ

ಮುಂತಾದ ಉಕ್ತಿಗಳಲ್ಲಿ ಕಾಣಬಹುದು. ಇದಲ್ಲದೆ ಸಾಮಗಾನದಲ್ಲಿ ಪ್ರಯುಕ್ತವಾಗುವ ಪ್ರಥಮಾದಿ ಸ್ವರಗಳ ಮಧ್ಯದಲ್ಲಿ ಯಾವುದರ ಉಚ್ಚಾರವು ಆದಮೇಲೆ ಯಾವ ಶ್ರುತಿಯನ್ನು ಬಳಸಬೇಕೆಂಬ ವಿಷಯದಲ್ಲಿ ಈ ಶಿಕ್ಷೆಯು ವಿವರವಾದ ನಿಯಮಗಳನ್ನು ಹೇಳುತ್ತದೆ.[77] ಈ ನಿಯಮಗಳನ್ನು ಪರಿಶೀಲಿಸಿದರೆ ಸಾಮಗಾನದಲ್ಲಿ ಬಳಕೆಯಾಗುವ ಸಪ್ತಸ್ವರಗಳು ಗಮಕಗಳಿಲ್ಲದೆ ಆಯಾ ಸ್ವರದ ಮಾತ್ರಾಕಾಲದಷ್ಟೂ ಆಯಾ ಸ್ವರವಾಗಿಯೇ ಪ್ರಯುಕ್ತವಾಗಬೇಕೆಂದೂ

ನಾವಿರತೇ ಶ್ರುತಿಂ ಕುರ್ಯಾತ್ ಸ್ವರಯೋರ್ನಾಪಿಚಾಂತರೇ | [78]

ಅದರ ಮಧ್ಯಕಾಲದಲ್ಲಿ, ಎಂದರೆ ಎರಡು ಸ್ವರಗಳ ಮಧ್ಯದಲ್ಲಿ ಗಮಕಗಳಿಗೆ ಅವಕಾಶವಿಲ್ಲವೆಂದೂ ಆದರೆ ಉದ್ದಿಷ್ಟಸ್ವರದ ಅಂತ್ಯದಲ್ಲಿ ಮಾತ್ರ ವಿವಿಧರೀತಿಯ ಸ್ವರಕಂಪಗಳು ಪ್ರಯೋಗಿಸಲ್ಪಡುತ್ತಿದ್ದವೆಂದೂ ಸ್ಪಷ್ಟವಾಗುತ್ತದೆ. ಈ ಸ್ವರಕಂಪ ವಿಧಗಳನ್ನೇ ನಾರದೀಯ ಶಿಕ್ಷೆಯು ಶ್ರುತಿಗಳೆಂದು ಕರೆದಿದೆ. ಯಾವ ಸ್ವರದ ಮುಂದೆ ಅಥವಾ ಹಿಂದೆ ಯಾವ ಸ್ವರವು ಇದ್ದರೆ, ಸ್ವರಸಮುಚ್ಚಯದ ಚಲನೆಯು ಉಚ್ಚಪ್ರವೃತ್ತಿ ಅಥವಾ ನೀಚಪ್ರವೃತ್ತಿ

74 ನಾರದೀಯ ಶಿಕ್ಷಾ, I, 2, 2–4.
75 ಅದೇ ಗ್ರಂಥ, II, 3, 3.
76 ಅದೇ ಗ್ರಂಥ, I, 3, 3.
77 ಅದೇ ಗ್ರಂಥ, I, 7, 9–18.
78 ಅದೇ ಗ್ರಂಥ, I, 7, 15.

ಯನ್ನು ತಳೆದಿದ್ದರೆ, ಯಾವ ಶ್ರುತಿಯನ್ನು ಉಪಯೋಗಿಸಬೇಕು ಎಂದು ಮುಂತಾಗಿ ಈ ಗ್ರಂಥವು ಹೇಳುವುದು ಇದನ್ನೇ ಕುರಿತು. ಸ್ವರವು ಸ್ಥಾನಾಂತರವನ್ನು ಗಮಕದ ಮೂಲಕ ಆಕ್ರಮಿಸಿ ಪಡೆಯಬಹುದಾದ ಅಲ್ಪಾಂತರವನ್ನೂ ಶ್ರುತಿ ಎಂದು ನಾರದೀಯ ಶಿಕ್ಷೆಯು ವ್ಯವಹರಿಸಿದೆ :

ಶ್ರುತಿಸ್ಥಾನೇಷ್ವಶೇಷಾಣಿ ವಿಶೇಷೇಣ ಶ್ರುತಿವತ್ ಸ್ವಾರತೋಽಭವೇತ್ ।[79]

ಇವುಗಳು (ಅಲ್ಪಾಂತರಗಳೂ ಸೂಕ್ಷ್ಮಪ್ರಕ್ರಿಯೆಯನ್ನುಳ್ಳವುಗಳೂ ಆದುದರಿಂದ) ಶ್ರುತಿಯ ಗತಿಯನ್ನು ನೀರಿನಲ್ಲಿ ಚಲಿಸುವ ಮೀನಿನ ಮಾರ್ಗದಂತೆ, ಆಕಾಶದಲ್ಲಿ ಚಲಿಸುವ ಹಕ್ಕಿಗಳ ಮಾರ್ಗದಂತೆ, ಹೀಗೆಯೇ ಎಂದು ನಿರ್ದಿಷ್ಟವಾಗಿ ಹೇಳಲಾಗದು ಎಂದು ನಾರದನು ಹೇಳಿದ್ದಾನೆ :

ಯಥಾಪ್ಸು ಚರತಾಂ ಮಾರ್ಗೋ ಮೀನಾನಾಂ ನೋಪಲಕ್ಷ್ಯತೇ ।
ಆಕಾಶೇ ವಾ ವಿಹಂಗಾನಾಂ ತದ್ವತ್ ಸ್ವರಗತಾ ಶ್ರುತಿಃ ।[80]

ಅಷ್ಟೇ ಅಲ್ಲದೆ ಹಾಲಿನಿಂದ ಬೆಣ್ಣೆಯನ್ನೂ ಕಟ್ಟಿಗೆ (ಅರಣಿ) ಯಿಂದ ಬೆಂಕಿಯನ್ನೂ ಹೇಗೆ ಪ್ರಯತ್ನಪೂರ್ವಕವಾಗಿ ಪಡೆಯಬೇಕೋ ಸ್ವರಗಳಲ್ಲಿರುವ ಶ್ರುತಿಗಳನ್ನೂ ಹಾಗೆಯೇ, ಎಂದೂ ಅವನು ಹೇಳುತ್ತಾನೆ. ಈ ಹೋಲಿಕೆಯನ್ನು ಮುಂದೆ ಚರ್ಚಿಸಲಾಗುವುದು.

ಯಥಾ ದಧ್ನಿ ಸರ್ಪಿಸ್ಸ್ಯಾತ್ ಕಾಷ್ಠಸ್ಥೋ ವಾ ಯಥಾನಲಃ ।
ಪ್ರಯತ್ನೇನೋಪಲಭ್ಯತೇ ತದ್ವತ್ ಸ್ವರಗತಾ ಶ್ರುತಿಃ ।[81]

ಈ ಎಲ್ಲಾ ಕಲ್ಪನೆಗಳನ್ನೂ ಸಂಗೀತಶಾಸ್ತ್ರವು ಅಲ್ಲಲ್ಲಿ ಸ್ವಲ್ಪ ವ್ಯತ್ಯಾಸಗಳೊಡನೆ ಬಳಸಿಕೊಂಡಿದೆ. ಉದಾಹರಣೆಗೆ ನಾನ್ಯದೇವನು ಶ್ರುತಿಗಳ ಲಕ್ಷಣಕ್ಕಾಗಿ ಈ ಶ್ಲೋಕಗಳನ್ನೇ ಉಪಯೋಗಿಸಿಕೊಂಡಿದ್ದಾನೆ ;[82] ಅಲ್ಲದೆ ಭಾರತೀಯ ನಾಟ್ಯಶಾಸ್ತ್ರವು ಒಳಗೊಂಡಿರುವುದೆಂದು ಮೇಲೆ ಹೇಳಿದ[71] ಶ್ಲೋಕಗಳನ್ನೇ ಅವನೂ ನಾರದನಿಂದ, ಆದರೆ ಸರಿಯಾಗಿ, ಉದ್ಧರಿಸುತ್ತಾನೆ.[83] ಅಲ್ಲದೆ ನಾರದೀಯನೆಂದು, ಆದರೆ ನಾರದೀಯ ಶಿಕ್ಷೆಯಲ್ಲಿ ಉಪಲಬ್ಧವಲ್ಲದ ಸ್ವಾರಸ್ಯವಾದ ಶ್ಲೋಕವೊಂದನ್ನೂ ಅವನು ಉದ್ಧರಿಸುತ್ತಾನೆ :

ಸ್ವಭಾವೇ ನೈವ ದುರ್ಲಕ್ಷ್ಯಾ ಸಾ ಚ ಸ್ವರಗತಾ ಶ್ರುತಿಃ ।
ಅವಧಾನಾದುಪಾಯೇನ ಯೋಗಿನಾಮೇವ ಲಕ್ಷ್ಯತೇ ।[84]

ಅತಿಸೂಕ್ಷ್ಮ ಪರೀಕ್ಷೆಯಿಂದಲೂ ಅವಧಾನದಿಂದಲೂ ಯೋಗಿಗಳಿಗೆ ಮಾತ್ರ ಸ್ವರದಲ್ಲಿರುವ ಶ್ರುತಿಯು ಗೋಚರವೆಂದು ಹೇಳುವ ಈ ಮಾತಿನಲ್ಲಿ ಶ್ರುತಿಯು ಅತ್ಯಲ್ಪವೂ ಕನಿಷ್ಠವೂ ಆದ ನಾದಾಂತರ ಎಂಬ ಸಂಗೀತ ಶಾಸ್ತ್ರೋಕ್ತ ಶ್ರುತಿಲಕ್ಷಣವು ಬೀಜರೂಪದಲ್ಲಿದೆಯೆಂದು ತೋರುತ್ತದೆ. ಅಷ್ಟೇ ಅಲ್ಲದೆ ಸ್ವರಗತಾ ಶ್ರುತಿಃ ಎಂಬ ಮಾತು ಪುನಃ ಪುನಃ ನಾರದೀಯ ಶಿಕ್ಷೆಯಲ್ಲಿ ಬರುತ್ತದೆ. ಇದು ಸ್ವರಗತಶ್ರುತಿ, ಅಂತರಶ್ರುತಿ ಎಂದು ವಿಶ್ವಾವಸುವು ಸಂಗೀತಶಾಸ್ತ್ರದಲ್ಲಿ ಹೇಳಿದ ಮಾತಿಗೆ ಮೂಲವಿರಬಹುದೇ ಎಂಬುದೂ ಚಿಂತ್ಯವಾಗಿದೆ. ಹಾಗೆಯೇ

ಉಚ್ಚನೀಚಸ್ಯ ಮಧ್ಯೇ ಸಾಧಾರಣಮಿತಿ ಶ್ರುತಿಃ[85]

79 ಅದೇ ಗ್ರಂಥ, 1, 7, 17.
80 ಅದೇ ಗ್ರಂಥ, I, 6, 16.
81 ಅದೇ ಗ್ರಂಥ, I, 6, 17.
82 ನಾನ್ಯದೇವ, ಉ. ಗ್ರಂ., III, 5, 85-86.
83 ಅದೇ ಗ್ರಂಥ, III, 5, 87-89.
84 ಅದೇ ಗ್ರಂಥ, III, 5, 84.
85 ನಾರದೀಯಶಿಕ್ಷಾ, I, 8, 7.

ಎಂದು ಬೇರೆ ಸಂದರ್ಭದಲ್ಲಿ ಹೇಳಿದ ವಿಧಿಯೂ ಅಂತರ ಗಾಂಧಾರ ಮತ್ತು ಕಾಕಲೀ ನಿಷಾದ ಎಂಬ ಸ್ವರಗಳ ಆವಿರ್ಭಾವಕ್ಕೆ ಕಾರಣವಾದ ಸ್ವರಸಾಧಾರಣವೆಂಬ ಶಾಸ್ತ್ರೀಯ ಪ್ರಕ್ರಿಯೆಗೆ ಸ್ಫೂರ್ತಿಯನ್ನಿತ್ತಿರಬಹುದೇ ಎಂಬುದೂ ಅಭ್ಯಾಸಾರ್ಹವಾಗಿದೆ. ಆದರೂ ಇಲ್ಲಿ ಒಂದು ಸಂಗತಿಯನ್ನು ಸ್ಪಷ್ಟವಾಗಿ ಸ್ಮರಿಸಬೇಕು : ಸಂಗೀತ ಶಾಸ್ತ್ರದಲ್ಲಿರುವ ಶ್ರುತಿಯ ಕಲ್ಪನೆಗೂ ನಾರದೀಯ ಶಿಕ್ಷೆಯದಕ್ಕೂ ಅಜ-ಗಜಗಳಷ್ಟು ಅಂತರವಿದೆ. ಸಾಮವೇದದ ಶ್ರುತಿ ಸಂಗೀತಶಾಸ್ತ್ರದ ಶ್ರುತಿಯಾಗಿ ಹೇಗೆ ಮಾರ್ಪಟ್ಟಿತು ಎಂಬ ಪ್ರಶ್ನೆಗೆ ಉತ್ತರವು ಈ ಶಿಕ್ಷೆಯ ಅಭ್ಯಾಸದಿಂದಲೇ ಹೊರಪಡಬೇಕಾಗಿದೆ. ಯಾಜ್ಞವಲ್ಕ್ಯನೂ ಈ ಐದು ಶ್ರುತಿಜಾತಿಗಳನ್ನು

ವೀಣಾವಾದನತತ್ತ್ವಜ್ಞಃ ಶ್ರುತಿಜಾತಿವಿಶಾರದಃ ।
ತಾಲಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ನಿಯಚ್ಛತಿ । [86]

ಎಂಬಲ್ಲಿ ವಿವಕ್ಷಿಸಿದ್ದಾನೆ. ದೀಪ್ತಾ, ಆಯತಾ ಮುಂತಾದವುಗಳನ್ನು ಶ್ರುತಿಯ ಜಾತಿಗಳೆಂದು ಕರೆದಿರುವ ಯಾಜ್ಞವಲ್ಕ್ಯೋಕ್ತಿಯು ಶ್ರುತಿಯು ಸ್ವರಕಂಪನವೆಂಬ ನಾರದೀಯ ಶಿಕ್ಷೆಗೂ ಶ್ರುತಿಯು ನಾದದ ಸ್ಥಾನವಿಶೇಷ ವೆಂಬ ಸಂಗೀತಶಾಸ್ತ್ರಕ್ಕೂ ಸೇತುವೆಯಂತಿದ್ದು ಶ್ರುತಿಕಲ್ಪನೆಯ ಚರಿತ್ರೆಯ ಒಂದು ನಿರ್ದಿಷ್ಟ ಹಂತವನ್ನು ಬಹುಶಃ ತೋರಿಸುತ್ತದೆ.

ಇನ್ನು ಸಂಗೀತಶಾಸ್ತ್ರದಲ್ಲಿ ಈ ಶಬ್ದದ ಅರ್ಥವನ್ನು ಪರಿಶೀಲಿಸಬೇಕು. 'ಶ್ರವಣಾತ್ ಶ್ರುತಿಸಂಜ್ಞಿತಾಃ' ಎಂಬ ಈ ಶ್ರುತಿಲಕ್ಷಣದ ಸೂತ್ರವನ್ನು ದತ್ತಿಲನೇ ಬಹುಶಃ ಮೊದಲನೆಯ ಬಾರಿಗೆ ಹೇಳುತ್ತಾನೆ.[63] ಈ ಶಬ್ದದ ನಿಷ್ಪತ್ತಿಯನ್ನು ಮತಂಗನು

ಶ್ರು ಶ್ರವಣೇ ಚಾಸ್ಯಧಾತೋಃ ಕ್ತಿನ್ಪ್ರತ್ಯಯಸಮುದ್ಭವಃ ।
ಶ್ರುತಿಶಬ್ದಃ ಪ್ರಸಾಧ್ಯೋಽಯಂ ಶಬ್ದಜ್ಞೈರ್ಭಾವಸಾಧನಃ ॥
ಶ್ರೂಯಂತ ಇತಿ ಶ್ರುತಯಃ [87]

ಎಂದು ಹೇಳಿದ್ದಾನೆ. ಈ ನಿರೂಪಣೆಗೆ ಕಲ್ಲಿನಾಥನು ಶ್ರವಣಯೋಗ್ಯವಾದ (ಎಂದರೆ ರಂಜನಾಸ್ಪದಗೇಯತೆಯುಳ್ಳ) ನಾದವಿಶೇಷವೆಂದು ಅರ್ಥ ಹೇಳುತ್ತಾನೆ; ಅಲ್ಲದೆ ಧ್ವನಿಯಲ್ಲಿ ಶ್ರವಣಯೋಗ್ಯತೆಯು ಅನುರಣನಶಕ್ತಿ (overtone formation), ದೀರ್ಘತ್ವ (continuity), ಕಂಪನಾರಂಭಕಾಲದಿಂದಲೇ ಶ್ರಾವ್ಯತೆ (ಅನಂತರತೆ) ಈ ಮೂರು ಗುಣಗಳಿಂದ ಉಂಟಾಗುವುದರಿಂದ ಶ್ರುತಿಗೂ ಇವುಗಳನ್ನೇ ಆರೋಪಿಸುತ್ತಾನೆ :

ಶ್ರವಣಾಚ್ಛ್ರವಣಯೋಗ್ಯತ್ವಾತ್ । ಶ್ರುತಯಃ, ಶ್ರೂಯಂತ ಇತಿ ವ್ಯುತ್ಪತ್ತ್ಯಾ । ಏತದುಕ್ತಂ ಭವತಿ—ಯದ್ಯಪಿ ಶ್ರವಣಯೋಗ್ಯತ್ವಮನುರಣನಾತ್ಮನಃ ಸ್ವರತಾನಾದಿರೂಪೇಣ ದೀರ್ಘದೀರ್ಘಸ್ಯಾಪಿ ಧ್ವನೇ-ರ್ವಿದ್ಯತೇ, ತಥಾಪ್ಯತ್ರ ಮಾರುತಾದ್ಯಾಹತ್ಯನಂತರೋತ್ಪನ್ನಪ್ರಥಮಕ್ಷಣವರ್ತಿಶ್ರವಣಮಾತ್ರಯೋಗ್ಯಧ್ವನೇರೇವ ಶ್ರುತಿತ್ವಮಿತಿ । [88]

---

86 ಯಾಜ್ಞವಲ್ಕ್ಯಸ್ಮೃತಿ, ಪ್ರಾಯಶ್ಚಿತ್ತಾಧ್ಯಾಯ, ಯತಿಧರ್ಮಪ್ರಕರಣ, 115.

87 ಮತಂಗ, ಉ. ಗ್ರಂ., 26-27, ವಚನ, ಪು. 4. ಇದೇ ಶ್ಲೋಕಕ್ಕೆ ಸಿಂಹಭೂಪಾಲನು (ಉ. ಗ್ರಂ., ಪು. 68) ಹೀಗೆ ಪಾಠಾಂತರವನ್ನು ಕೊಡುತ್ತಾನೆ :

ಶ್ರವಣಾರ್ಥಸ್ಯ ಧಾತೋಃ ಕ್ತಿನ್ಪ್ರತ್ಯಯೇ ಚ ಸುಸಂಶ್ರಿತೇ ।
ಶ್ರುತಿಶಬ್ದಃ ಪ್ರಸಾಧ್ಯೋಽಯಂ ಶಬ್ದಜ್ಞೈಃ ಕರ್ಮಸಾಧನಃ ॥

88 ಕಲ್ಲಿನಾಥ, ಉ. ಗ್ರಂ., ಪು. 67.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

'ಶ್ರವಣಾತ್' ಎನ್ನುವುದಕ್ಕೆ ಶ್ರವಣಗೋಚರದ ಹೊಸ್ತಿಲಲ್ಲಿ ಇರುವಂತಹುದು, ಶ್ರೋತ್ರೇಂದ್ರಿಯವು ತನ್ನ ಗ್ರಹಣಶಕ್ತಿಯ ಪರಮಾವಧಿಸಾಮರ್ಥ್ಯದಲ್ಲಿ ಕೇಳಬಲ್ಲ ಅತ್ಯಲ್ಪವಾದ ನಾದಾಂತರ ಎಂದರೆ ಮಧ್ಯದಲ್ಲಿ ಬೇರೆ ಧ್ವನಿಯನ್ನು ಗ್ರಹಿಸಲಾರದಷ್ಟು ಸಮೀಪವಾಗಿರುವ ಎರಡು ಧ್ವನಿಗಳ ಮಧ್ಯದ ಪ್ರಮಾಣ ಎಂದು ಮುಂತಾಗಿ ಅಭಿನವಗುಪ್ತ, ಶಾರ್ಙ್ಗದೇವ ಮುಂತಾದವರು ಕೊಡುವ ಶ್ರೋತ್ರೇಂದ್ರಿಯಸಾಮರ್ಥ್ಯಪರವಾದ ಅರ್ಥವನ್ನು ಕಲ್ಲಿನಾಥನು ಇಲ್ಲಿ ಮೀರಿದ್ದಾನೆ. ಮೂಲಗ್ರಂಥಕಾರನೇ 'ಸ್ಯಾನ್ನಿರಂತರತಾ ಶ್ರುತ್ಯೋರ್ಮಧ್ಯೇ ಧ್ವನ್ಯಂತರಾ–ಶ್ರುತೇಃ' ಎಂದು ಶ್ರುತಿಯನ್ನು ಲಕ್ಷಿಸುವುದನ್ನು ವ್ಯಾಖ್ಯಾನಸಂದರ್ಭದಲ್ಲಿ ಉಲ್ಲಂಘಿಸಿರುವುದು ಆಶ್ಚರ್ಯಕರವಾಗಿದೆ. ಆದರೆ ಇವುಗಳನ್ನು ವ್ಯಾಖ್ಯಾನಮಾಡುವಾಗ ಸರಿಯಾದ ಅರ್ಥವನ್ನು ಬರೆದಿದ್ದಾನೆ.

ಮನಾಗುಚ್ಚಧ್ವನಿತ್ವಸ್ಯೈವ ವ್ಯವಸ್ಥಾಪಕಮ್—**ಸ್ಯಾನ್ನಿರಂತರತೇತಿ** । ಶ್ರುತ್ಯೋಃ ಪೂರ್ವೋತ್ತರ ತಂತ್ರ್ಯುಪಪನ್ನಯೋರ್ಮಧ್ಯೇ ಧ್ವನ್ಯಂತರಾಶ್ರುತೇರ್ಧ್ವನ್ಯಂತರಸ್ಯ ಪೂರ್ವೋತ್ತರಶ್ರುತಿವಿಲಕ್ಷಣಸ್ಯ ಪೂರ್ವಶ್ರುತೇಃ ಕಿಂಚಿದುಚ್ಚಸ್ಯೋತ್ತರಶ್ರುತೇಃ ಕಿಂಚಿನ್ನೀಚಸ್ಯ ಚಾನ್ಯಧ್ವನೇರಶ್ರುತಿರಶ್ರವಣಮ್ । ಅಶ್ರುತೇರಿತಿ ಹೇತೌ ಪಂಚಮೀ । ಮಧ್ಯಗತ ಧ್ವನ್ಯಂತರಾಶ್ರವಣಂ ನಿಮಿತ್ತೀಕೃತ್ಯ ಶ್ರುತ್ಯೋರ್ನಿರಂತರತಾ ಯಥಾ ಸ್ಯಾತ್ ತಥಾ ತಂತ್ರೀಃ ಕಿಂಚಿದ್ ದೃಢೀಕರಣೇನ ಮನಾಗುಚ್ಚಧ್ವನಿಃ ಕಾರ್ಯೇತ್ಯರ್ಥಃ ।[89]

ನಿರಂತರತೆ, ಧ್ವನ್ಯಂತರಾಶ್ರುತಿ ಎಂಬ ಶ್ರುತಿಲಕ್ಷಣಗಳನ್ನು ಮುಂದೆ ಇದೇ ಪ್ರಕರಣದಲ್ಲಿ ಶ್ರುತಿನಿದರ್ಶನದ ವ್ಯಾಖ್ಯಾನಸಂದರ್ಭದಲ್ಲಿ ವಿಸ್ತಾರವಾಗಿ ಚರ್ಚಿಸಿದೆ. ಈ ಅರ್ಥಗಳನ್ನು ಕೇವಲ ನಾಲ್ಕೈದು ಶ್ಲೋಕಗಳಷ್ಟು ಮುಂದೆ ವ್ಯಾಖ್ಯಾನಮಾಡುವಾಗ ಸ್ವೀಕರಿಸಿದ ಕಲ್ಲಿನಾಥನು ಶ್ರವಣಯೋಗ್ಯತೆಯು ನಾದಕ್ಕೆ ಅನುರಣನ, ದೀರ್ಘತ್ವ ಮುಂತಾದವುಗಳಿಂದ ಉಂಟಾಗುತ್ತದೆಂದೂ ಆದರೂ ವಸ್ತುಸಂಘಾತದಿಂದಲೋ ನಾದವಾಹಕನಾಡಿಗಳಲ್ಲಿಯೋ ಮಾರುತಾಹತಿಯಿಂದ—ಎಂದರೆ ಗಾಳಿಯ ಪ್ರತಿಸ್ಪಂದನ, ಸಹಸ್ಪಂದನಗಳಿಂದ—ಪ್ರಥಮಕ್ಷಣದಲ್ಲಿ ಗೋಚರಿಸುವ ನಾದಕ್ಕೆ ಶ್ರುತಿಯೆಂದು ಶ್ರುತಿಗೆ ಕಾಲಪರವಾದ ಅರ್ಥವನ್ನು ಇಲ್ಲಿ ವಿವಕ್ಷಿಸುತ್ತಾನೆ. ಎಂದರೆ ಧ್ವನಿಯ ಪ್ರಥಮ ಗೋಚರವು ಶ್ರುತಿಯೆಂದೂ ದೀರ್ಘತ್ವ, ಅನುರಣನಾದಿ ಧರ್ಮಗಳಿಂದ ಅನಂತರ ಗೋಚರವಾಗುವುದು ಸ್ವರವೆಂದೂ ಅರ್ಥವಾಗುತ್ತದೆ. ಇದು ತುಂಬಾ ಅನುಪಪನ್ನವಾದುದು. ಅಭಿನವಗುಪ್ತನು ಶಾರ್ಙ್ಗದೇವನಿಗೆ ಸ್ಫೂರ್ತಿದಾಯಕವಾಗಿ ನಿರಂತರತೆ ಮತ್ತು ಧ್ವನ್ಯಂತರಾಶ್ರುತಿಗಳನ್ನು ಶ್ರುತಿಲಕ್ಷಣಗಳೆಂದೇ ಹೇಳಿದ್ದಾನೆ. ಒಮ್ಮೆಯೂ ಅಭಿನವಗುಪ್ತನನ್ನು ಸ್ಮರಿಸದ ಸಿಂಹಭೂಪಾಲ ಕಲ್ಲಿನಾಥರು ಅಭಿನವಭಾರತಿಯನ್ನು ಓದಿಕೊಂಡಿರಲಿಲ್ಲವೇನೋ ಎಂಬ ಸಂಶಯವು ಬರುತ್ತದೆ. ಕಾಲಪರವಾದ ಶ್ರುತಿಲಕ್ಷಣವನ್ನು ಮುಂದೆ ಚರ್ಚಿಸಿ ನಿರಾಕರಿಸಲಾಗಿದೆ.

ಭೌತಶಾಸ್ತ್ರದಲ್ಲಿ ನಾದವೆಂದರೆ ಸಾಮಾನ್ಯವಾಗಿ ಸರಳವೂ, ಏಕರೂಪವೂ, ನಿರ್ದಿಷ್ಟವೂ ಆಗಿರುವ ಕಂಪನವನ್ನು ಹೊಂದಿರುವ ಶಬ್ದವಿಶೇಷವೆಂದರ್ಥ. ರಂಜನೆಯೂ ದೂರಶ್ರಾವ್ಯತೆಯೂ ಅದರ ಉಳಿದ ಗುಣಗಳು.

'ಶ್ರೂಯಂತ ಇತಿ ಶ್ರುತಯಃ' ಎನ್ನುವುದಕ್ಕೆ 'ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್'[90] ಎಂಬ ವಿಶ್ವಾವಸುವೇ ಮೊದಲಾದ ಪ್ರಾಚೀನಾಚಾರ್ಯರ ಅರ್ಥವೂ ಇದೆ. ಇದನ್ನೇ ಶ್ರೀ ಶಾರ್ಙ್ಗದೇವನೂ ಅನುಸರಿಸಿದ್ದಾನೆ. ಗೇಯತೆಯನ್ನೂ ರಂಜನೆಯನ್ನೂ ಹೊಂದಿದ್ದು ಅತ್ಯಂತ ಕನಿಷ್ಠಾಂತರವುಳ್ಳ ಸ್ವರಪ್ರಮಾಣವೆಂದು ಇದರ ಅಭಿಪ್ರಾಯ. ಆಧುನಿಕರಾದ ಶಿವಶರಣನೇ ಮೊದಲಾದವರು ಇದನ್ನು ಅಕ್ಷರಾರ್ಥಮಾಡಿ

---

89 ಅದೇ ಗ್ರಂಥ, ಪು. 69–70.

90 ವಿಶ್ವಾವಸು, ಉದ್ಧೃತಿ, ಮತಂಗ, ಉ. ಗ್ರಂ., ಪು. 4.

ಶ್ರವಣೇಂದ್ರಿಯದ ಸಹಾಯದಿಂದ ಅಭಿವ್ಯಕ್ತಿಪಡೆಯುವುದು, ಎಂದು ತಿಳಿಯುತ್ತಾರೆ.[91] ಇಂತಹವರು ಗ್ರಾಹ್ಯತ್ವಾತ್ ಎನ್ನುವುದರಲ್ಲಿನ ಸಾಮರ್ಥ್ಯವೆಂಬ ಅಭಿಸಂಧಿಯನ್ನು ಕಾಣುವುದಿಲ್ಲ. ಇವರಿಗೆ ಕೇಳಿಸಿದ್ದೆಲ್ಲ ಶ್ರುತಿಯೇ; ಶ್ರುತಿ ಎಂಬುದಕ್ಕೆ ಸಂಗೀತಶಾಸ್ತ್ರಪ್ರಯೋಜಕವಾದ ವಿಶೇಷಾರ್ಥವೇನೂ ಇವರ ಮತದಲ್ಲಿ ಇಲ್ಲ. ಶ್ರುತಿ ಎಂಬುದು ಅತ್ಯಂತ ಕನಿಷ್ಠಸ್ವರಾಂತರವೆಂದು ಎಲ್ಲಾ ಲಾಕ್ಷಣಿಕರೂ ಸಾಮಾನ್ಯವಾಗಿ ಒಪ್ಪಿದರೂ ಒಂದು ಸ್ಥಾಯಿಯಲ್ಲಿನ ಅವುಗಳ ಸಂಖ್ಯೆಯನ್ನೂ ಸ್ಥಾನಗಳನ್ನೂ ಕುರಿತು ವಿಪುಲವಾದ ಭಿನ್ನಾಭಿಪ್ರಾಯಗಳಿವೆ. ಶಾರ್ಙ್ಗದೇವನು ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿ ಇಪ್ಪತ್ತೆರಡು ಶ್ರುತಿಗಳನ್ನು ಒಪ್ಪಿದ್ದಾನೆ.

ಶಾರ್ಙ್ಗದೇವನು ಹೇಳುವ ಹೃದ್ಯೂರ್ಧ್ವ ದ್ವಾವಿಂಶತಿನಾಡಿಗಳು ಶರೀರಶಾಸ್ತ್ರದಲ್ಲಿಯೂ ಉಕ್ತವಾಗಿವೆ:

Although no trace of transverse segmentation is visible on the surface of the spinal cord, it is convenient to regard it as being built of a series of superimposed spinal segments or neuromers, to each of which is attached a pair of spinal nerves. Thirtyone pairs of spinal nerves spring from the spinal cord, each nerve having an anterior and posterior root, the latter being characterised by the presence of an oval swelling, termed the **spinal ganglion**. Each root consists of several bundles of nerve fibres and at its attachment extends for some distance along the side of the spinal cord. The pairs of spinal nerves are grouped as follows: cervical 8, thoracic 12, lumbar 5, sacral 5, coccygial 1, and for the convenience of description the spinal cord is divided into cervical, thoracic, lumbar and sacral regions, corresponding with the attachments of the different groups of nerves.[92]

ಈ ಸಂದರ್ಭದಲ್ಲಿ ನಾದೋತ್ಪತ್ತಿಸ್ಥಾನವು ನಾಭಿಯಾದರೂ ಸೊಂಟದ ಬೆನ್ನು ಕೀಲುಗಳಲ್ಲಿ ಎರಡನ್ನು ಮಾತ್ರ ಸ್ವೀಕರಿಸಬೇಕೆಂಬುದನ್ನು ಇಲ್ಲಿ ನೆನೆಯಬೇಕು. ಈ ಪ್ರಾಂತವು ಹೃದಯಸ್ಥಾನಕ್ಕೆ ಹೆಚ್ಚುಕಡಿಮೆ ಪರಸ್ಪರವಾಗುತ್ತದೆ.

**ತಿರಶ್ಚ್ಯಸ್ತಾಸು ತಾವತ್ಯಃ ಶ್ರುತಯೋ ಮಾರುತಾಹತೇಃ ।**
**ಉಚ್ಚೋಚ್ಚತರತಾಯುಕ್ತಾಃ ಪ್ರಭವಂತ್ಯುತ್ತರೋತ್ತರಮ್ ॥ 9 ॥** 225

ಅಡ್ಡ ಅಡ್ಡಲಾಗಿರುವ ಅವುಗಳಲ್ಲಿ ವಾಯುವಿನ ಹೊಡೆತದಿಂದ ಉತ್ತರೋತ್ತರವಾಗಿ ಉಚ್ಚತೆಯನ್ನು ಹೊಂದಿದ ಅಷ್ಟೇ ಶ್ರುತಿಗಳು ಹುಟ್ಟುತ್ತವೆ.

ಹೃದಯ ಪ್ರದೇಶದಲ್ಲಿ ಊರ್ಧ್ವಮುಖವಾಗಿರುವ ನಾಡಿಗಳು ಇಡಾ, ಸುಷುಮ್ನಾ ಮತ್ತು ಪಿಂಗಳಾಗಳು. ಇವು ಬೆನ್ನುಮೂಳೆಗೆ ಸಮಾನಾಂತರವಾಗಿರುತ್ತವೆ. ಇವುಗಳಿಗೆ ಲಂಬವಾಗಿ, ಎಂದರೆ ಬೆನ್ನುಮಧ್ಯದಿಂದ ಭುಜದ ಕಡೆಗೆ ಸಮಾನಾಂತರವಾಗಿ ಇಪ್ಪತ್ತೆರಡು ನಾಡೀಯುಮಳಗಳು ಈ ಮಿದುಳುಬಳ್ಳಿಗೆ ಸಂಬಂಧಿತವಾಗಿವೆ. ಇವುಗಳ ಸ್ಥೂಲರೂಪದಲ್ಲಿ ನಾದೋತ್ಪತ್ತಿಯಾಗುವುದಿಲ್ಲವೆಂದು ಇಲ್ಲಿ ಪುನಃ ನೆನೆಯಬೇಕು. ಇದಕ್ಕೆ ಪರಸ್ಪರವಾಗಿ ಯೋಗದೇಹದಲ್ಲಿರುವ ಇಪ್ಪತ್ತೆರಡು ಜೋಡಿ ನಾಡಿಗಳಲ್ಲಿ ಪ್ರಾಣವಾಯುವು ಸಂಚರಿಸಿ ಅವುಗಳನ್ನು ಉದ್ದೀಪನಗೊಳಿಸಿದಾಗ

91 Alain Danielou, Northern Indian Music, Vol. I, pp. 45-46.

92 Gray's Anatomy, pp. 908-909.

ಶ್ರುತಿಗಳು ಹುಟ್ಟುತ್ತವೆ. ಇವುಗಳಲ್ಲಿ ಮೊದಲನೆಯ ಜೋಡಿಯಲ್ಲಿ ಪ್ರವಹಿಸಿದಾಗ ಅತ್ಯಂತ ಕನಿಷ್ಠವಟ್ಟವುಳ್ಳ ಧ್ವನಿಮಟ್ಟವಾದ ಮೊದಲನೆಯ ಶ್ರುತಿಯೂ, ಎರಡನೆಯದರಲ್ಲಿ ಅದಕ್ಕಿಂತ ಉಚ್ಚವಾದ ಶ್ರುತಿಯೂ, ಮೂರನೆಯ ಜೋಡಿಯಲ್ಲಿ ಎರಡನೆಯದಕ್ಕಿಂತ ಉಚ್ಚವಾದ ಶ್ರುತಿಯೂ ಉತ್ಪನ್ನವಾಗಿ, ಹೀಗೆ ಇಪ್ಪತ್ತೆರಡು ನಾಡೀ ಜೋಡಿಗಳಲ್ಲಿ ಇಪ್ಪತ್ತೆರಡು ಶ್ರುತಿಗಳು ಹುಟ್ಟುತ್ತವೆಂದು ಈ ಶ್ಲೋಕದ ತಾತ್ಪರ್ಯ. ಮಾನವಶರೀರದಲ್ಲಿ ನಾದೋತ್ಪತ್ತಿಯು ನಾಡಿಗಳ ಮೂಲಕ ಆಗುತ್ತದೆಂದು ಮೊದಲು ನಮ್ಮ ಸಂಗೀತಶಾಸ್ತ್ರದಲ್ಲಿ ಹೇಳಿದವನು ಕೋಹಲನೇ. ಆದರೆ ಅವನು ಸ್ವರಗಳು ಊರ್ಧ್ವನಾಡೀ ಪ್ರಯತ್ನದಿಂದ ಹುಟ್ಟುತ್ತವೆಂದು ಹೇಳುತ್ತಾನೆ :

ಊರ್ಧ್ವನಾಡೀಪ್ರಯತ್ನೇನ ಸರ್ವಭಿತ್ತಿನಿಘಟ್ಟನಾತ್ ।
ಮೂರ್ಛಿತೋ ಧ್ವನಿರಾಮೂರ್ಧ್ನಃ ಸ್ವರೋ ಽಸೌ ವ್ಯಾಪಕಃ ಪರಃ । [93]

ಆದರೆ ಮೈಸೂರಿನ ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರದಲ್ಲಿರುವ ಕೋಹಲಮತವೆಂಬ ಹಸ್ತಪ್ರತಿಯಲ್ಲಿರುವ ಗ್ರಂಥವು ಷಡ್ಜಾದಿ ಸಪ್ತಸ್ವರಗಳಿಗೆ ಶಾಸ್ತ್ರೋಕ್ತವಾದ ಶ್ರುತಿವಿನಿಯೋಗದಂತೆಯೇ ನಾಡೀವ್ಯವಸ್ಥೆಯನ್ನೂ ಹೇಳುತ್ತದೆ ; ಉಪಲಬ್ಧ ಗ್ರಂಥವು ಪ್ರಾರಂಭವಾಗುವುದು ಈ ವಿಷಯದಿಂದಲೇ ; ಈ ಸ್ವರ ವ್ಯವಸ್ಥೆಯನ್ನು ಆಗಮಸ್ಥವೆಂದು ಅದು ಹೇಳುತ್ತದೆ. ಇದನ್ನು ಯಾವ ಆಗಮವು ಹೇಳುತ್ತದೆಂಬುದು ಗೊತ್ತಿಲ್ಲ. ಇದರಲ್ಲಿನ ಮೊದಲನೆಯ ಪಙ್ಕ್ತಿಯು ಬೃಹದ್ದೇಶಿಯಲ್ಲಿ ಕಂಡುಬರುತ್ತದೆ. ಸ, ರಿ, ಗ, ಮುಂತಾದ ವರ್ಣಗಳನ್ನು ಸ್ವರ ಸಂಕೇತಗಳೆಂದು ಬಳಸುವುದರ ಔಚಿತ್ಯವನ್ನು ಸಮರ್ಥಿಸಿಕೊಳ್ಳಲು ಆಗಮಶಾಸ್ತ್ರದಿಂದ ಲಕ್ಷಿಸುವುದು ಇಲ್ಲಿನ ಗ್ರಂಥ ಸಂದರ್ಭ.

ಆಗಮಸ್ಥಸ್ವರೋದ್ಧಾರಮಿತಿ ತಾವತ್ ಪ್ರದರ್ಶಿತಮ್ ।
ಸರಿಗಮಪದನಿ . . . . . . . . . . . . . . . . . . ।
ಚತಸ್ರೋ ಜತ್ರುಬಂಧಿನ್ಯೋ ನಾಡ್ಯಃ ಕಂಠಮುಪಾಶ್ರಿತಾಃ ।
ತಾಲುಮೂಲಸ್ಯ ಬಂಧಿನ್ಯಃ ತಿಸ್ರಸ್ತತ್ರೈವ ಚ ಸ್ಥಿತಾಃ ।
ಓಷ್ಠಯೋರುಭಯೋರ್ನಾಡ್ಯಾ ಬಂಧಿನ್ಯಾ ದ್ವೇ ವ್ಯವಸ್ಥಿತೇ ।
ಚತಸ್ರೋ ಮೂರ್ಧ್ನಿ ಬಂಧಿನ್ಯೋ ನಾಡ್ಯೋ ಬ್ರಹ್ಮಪಥಾಶ್ರಯಾಃ ।
ನಾಡ್ಯಶ್ಚತಸ್ರಸ್ತಿಷ್ಠಂತಿ ದಂತಾನಾಬಧ್ಯ ಸರ್ವತಃ ।
ಕಂಠತಾಲ್ವೋರಂತರಾ ಸ್ಯುರ್ನಾಡ್ಯಸ್ತಿಸ್ರಸ್ತು ಸಂಗತಾಃ ।
ಕಂಠೋಷ್ಠಯೋರ್ದ್ವೇ ಬಂಧಿನ್ಯಾ ನಾಡ್ಯಾ ತತ್ರೈವ ವಿಸ್ಮಿತಾ ।
ಏತಾಃ (ದ್ವಾವಿಂ)ಶತಿರ್ನಾಡ್ಯೋ ಮಧ್ಯ ( ? ಮಂದ್ರ) ನಾಡ್ಯಾಂ ಹೃದಿ ಸ್ಥಿತಾಃ ।
ಯುಗಪನ್ಮರುತಾಹತ್ಯಾ ನಾದಸ್ತಾಸು ಪ್ರವೇಕ್ಷ್ಯತಿ ।
ತು (ತ್ರು)ಟಿಕಾಲಮಿತಾಃ ಸ್ಯುಸ್ತು ಶ್ರುತಯಃ ಶ್ರುತಿಗೋಚರಾಃ ।
ಯದೂರ್ಧ್ವಂ ಹೃದಯಗ್ರಂಥೇಃ ಕಪಾಲಫಲಕಾದಧಃ ।
ಪ್ರಾಣಶ್ಚರತಿ ತತ್ರೈತಾ ವ್ಯಜ್ಯಂತೇ ಶ್ರುತಯಃ ಪೃಥಕ್ ।
ವ್ಯಕ್ತಿಸ್ಥಾನೇಷು ವರ್ಣಾನಾಂ ಸ್ವರಸಂಜ್ಞಾಂ ಭಜಂತಿ ತಾಃ । [94]

93 ಕೋಹಲ, ಉದ್ಧೃತಿ, ಮತಂಗ, ಉ. ಗ್ರಂ., ಪು. 12.

94 ಕೋಹಲ, ಕೋಹಲಮತಮ್, ಶ್ರೀ ವರಲಕ್ಷ್ಮೀ ಅಕಾಡೆಮಿಯ ಗ್ರಂಥಭಂಡಾರದ ಹಸ್ತಪ್ರತಿ, ಪು. 1.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಹೀಗೆ ಶಾರ್ಙ್ಗದೇವನ ಈ ನಾದೋತ್ಪತ್ತಿ ವಿಷಯಕವಾದ ಮಾತಿಗೆ ಕೋಹಲನೇ ಆಧಾರವೆಂದು ಕಾಣುತ್ತದೆ. ಶಾರ್ಙ್ಗದೇವನು ಕೊಡದಿದ್ದ ವಿವರಗಳು ಹೀಗೆ ಕೋಹಲಮತದಲ್ಲಿ ಉಪಲಬ್ಧವಾಗಿವೆ. ಇದು ಮುಖ್ಯವಾಗಿ ಯೋಗ-ಶಾಸ್ತ್ರಪರವಾದ ಪ್ರತಿಪಾದನೆ. ಕೇವಲ ಮನುಷ್ಯದೇಹಕ್ಕೆ ಇದು ಹೇಳಲ್ಪಟ್ಟಿದ್ದರೂ ಆಯಾ ಶ್ರುತಿಯನ್ನು ಶರೀರದ ಹೊರಗಡೆ ಬಾಹ್ಯೋಪಕರಣಗಳಾದ ಸಂಗೀತವಾದ್ಯಗಳಲ್ಲಿ ಉತ್ಪಾದಿಸಬೇಕೆಂದು ಆತ್ಮನು ವಿವಕ್ಷಮಾಣವಾದರೆ ಅದನ್ನು ಮೊದಲು ತಾನು ಧರಿಸಿರುವ ದೇಹದಲ್ಲಿ ಉಪಾಂಶು ರೂಪದಲ್ಲಿ ಪಡೆದು ಆಮೇಲೆ ಅದನ್ನೇ ವಿವರ್ತರೂಪದಲ್ಲಿ ಹೊರಗೆ ಸಾಕ್ಷಾತ್ಕರಿಸಿಕೊಳ್ಳುತ್ತಾನೆಂಬ ಅರ್ಥವನ್ನು ಇಲ್ಲಿ ಇಟ್ಟುಕೊಳ್ಳಬೇಕು. ಈ ಭಾಗದಲ್ಲಿ ಸ್ವಲ್ಪವನ್ನು ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನದೆಂದು ರಾಮಕೃಷ್ಣ ಕವಿಯು ಉದ್ಧರಿಸಿ ಕೊಡುತ್ತಾನೆ.[95] ಆದರೆ ಇದು ಜಗದೇಕಮಲ್ಲ ಪ್ರಣೀತವೇ ಎಂಬುದು ಸಂದೇಹಾಸ್ಪದ. ಉಪಲಬ್ಧವಾದ ಅವನ ಗ್ರಂಥದಲ್ಲಿ ಈ ಬಗೆಯ ವರ್ಣನೆಗೆ ಅವಕಾಶ ವಿರುವಂತೆ ಕಾಣುವುದಿಲ್ಲ. ಅಲ್ಲದೆ ಜಗದೇಕಮಲ್ಲನ ಸಂಗೀತಚೂಡಾಮಣಿಯ ಮುದ್ರಿತ ಪ್ರತಿಯಲ್ಲೂ ನಾನು ಅಭ್ಯಾಸಮಾಡಿರುವ ಹಸ್ತಪ್ರತಿಗಳಲ್ಲಿಯೂ ಈ ಶ್ಲೋಕಗಳಾಗಲೀ, ಈ ವಿಷಯದ ಪ್ರಸ್ತಾಪವಾಗಲೀ ಇಲ್ಲ.

ಧ್ರುವವೀಣೆ-ಚಲವೀಣೆಗಳಲ್ಲಿ ಶ್ರುತಿನಿದರ್ಶನ

**ಏವಂ ಕಂಠೇ ತಥಾ ಶೀರ್ಷೇ ಶ್ರುತಿರ್ದ್ವಾವಿಂಶತಿರ್ಮತಾ ।**
**ವ್ಯಕ್ತಯೇ ಕುರ್ಮಹೇ ತಾಸಾಂ ವೀಣಾದ್ವಂದ್ವೇ ನಿದರ್ಶನಮ್ ॥ 10 ॥** 226

ಇದೇ ರೀತಿಯಲ್ಲಿ ಗಂಟಲಿನಲ್ಲೂ ಹಾಗೆಯೇ ತಲೆಯಲ್ಲೂ ಇಪ್ಪತ್ತೆರಡು ಶ್ರುತಿಗಳು [ಹುಟ್ಟುತ್ತವೆ] ಎಂದು ಅಭಿಪ್ರಾಯಪಡಲಾಗಿದೆ. ಇದನ್ನು ಸ್ಪಷ್ಟಗೊಳಿಸಲು ಅವುಗಳನ್ನು ಎರಡು ವೀಣೆಗಳಲ್ಲಿ ಉದಾಹರಿಸುತ್ತೇವೆ.

**ದ್ವೇ ವೀಣೇ ಸದೃಶೌ ಕಾರ್ಯೇ ಯಥಾ ನಾದಃ ಸಮೋ ಭವೇತ್ ।**
**ತಯೋರ್ದ್ವಾವಿಂಶತಿಸ್ತಂತ್ರ್ಯಃ ಪ್ರತ್ಯೇಕಂ ತಾಸು ಚಾದಿಮಾ ॥ 11 ॥** 227

ಎರಡು ವೀಣೆಗಳನ್ನು ನಾದವು ಸಮವಾಗುವಂತೆ ಒಂದೇರೀತಿಯಾಗಿರುವ ಹಾಗೆ ಮಾಡಬೇಕು. ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತೆರಡು ತಂತಿಗಳು [ಇರಬೇಕು]. ಅವುಗಳಲ್ಲಿ ಮೊದಲನೆಯದು [ಮೊದಲನೆಯ ತಂತಿಯು]—

**ಕಾರ್ಯಾ ಮಂದ್ರತಮಧ್ವಾನಾ ದ್ವಿತೀಯೋಚ್ಚಧ್ವನಿರ್ಮನಾಕ್ ।**
**ಸ್ಯಾನ್ನಿರಂತರತಾ ಶ್ರುತ್ಯೋರ್ಮಧ್ಯೇ ಧ್ವನ್ಯಂತರಾಶ್ರುತೇಃ ॥ 12 ॥** 228

—ಅತ್ಯಂತ ತಗ್ಗಿನ ನಾದಮಟ್ಟದ್ದಾಗಿ ಮಾಡಲ್ಪಡಬೇಕು. ಎರಡನೆಯದು (ತನ್ನ ಮತ್ತು ಮೊದಲನೆಯ ತಂತಿಯ ನಡುವೆ) ಬೇರೆ (ನಾದದ) ಅಂತರವೇ ಇಲ್ಲದಂತೆ [ಈ ಎರಡು] ಶ್ರುತಿಗಳ ನಡುವೆ ಬೇರೆ ಧ್ವನಿಯು ಕೇಳಿಸದಿರುವಂತೆ, ಸ್ವಲ್ಪ ಹೆಚ್ಚು ಧ್ವನಿಯದಾಗುತ್ತದೆ.

ಈ ಎರಡು ವೀಣೆಗಳಲ್ಲಿ ಪ್ರತಿಯೊಂದರಲ್ಲೂ ಇಪ್ಪತ್ತೆರಡು ತಂತಿಗಳನ್ನು, ಸಮಾನನಾದವಿರುವಂತೆ ಶ್ರುತಿ ಮಾಡಬೇಕು. ಮೊದಲನೆಯ ತಂತಿಯನ್ನು ಅತ್ಯಂತ ನೀಚವಾದ, ಆದರೆ ಗೇಯತೆಯನ್ನೂ ರಂಜಕತ್ವವನ್ನೂ ಉಳಿಸಿಕೊಂಡ ನಾದಮಟ್ಟಕ್ಕೆ ಅನುಗೊಳಿಸಬೇಕು. ಎರಡನೆಯ ತಂತಿಯನ್ನು ಎರಡನೆಯ ಶ್ರುತಿಗೆ ಅನುಗೊಳಿಸಬೇಕು.

95 ರಾಮಕೃಷ್ಣಕವಿ, (ಸಂಗ್ರಹಕಾರ), ಭರತಕೋಶ, ಪು. 355.

ಮೊದಲೆರಡು ಶ್ರುತಿಗಳಲ್ಲಿ ಮಧ್ಯೆ ಯಾವ ನಾದವೂ ಗೋಚರವಾಗಲು ಸಾಧ್ಯವಿಲ್ಲದಷ್ಟು ಸಮೀಪದಲ್ಲಿ ಎರಡನೆಯ ತಂತಿಯನ್ನು ಅನುಗೊಳಿಸಬೇಕು. ಹೀಗೆ ಮಾಡಿದರೆ ಅವುಗಳಲ್ಲಿ ನಿರಂತರತೆ (continuity) ಉಂಟಾಗುತ್ತದೆ.

ಮೇಲೆ ಹೇಳಿದ ಇಪ್ಪತ್ತೆರಡು ಶ್ರುತಿಗಳು 'ಹೃದ್ಯೂರ್ಧ್ವನಾಡೀ ಸಂಲಗ್ನ' ಗಳಾದುದರಿಂದ, ಎಂದರೆ ಹೃದಯಪ್ರಾಂತದಲ್ಲಿ ಗೋಚರಿಸುವವುಗಳಾದುದರಿಂದ ಮಂದ್ರಸ್ಥಾಯಿಯ ಶ್ರುತಿಗಳು. ಹೀಗೆಯೇ ಇಪ್ಪತ್ತೆರಡು ಕಂಠೋದ್ಭವವಾದ ಮಧ್ಯಸ್ಥಾಯಿಯಲ್ಲಿಯೂ ಬೇರೆ ಇಪ್ಪತ್ತೆರಡು ಶಿರೋದ್ಭವವಾದ ತಾರಸ್ಥಾಯಿಯಲ್ಲಿಯೂ ಇವೆ. ಭರತನು ಈ ಮಾತನ್ನು ಸ್ಪಷ್ಟವಾಗಿ ಹೇಳುವುದಿಲ್ಲ. 'ಅತ್ರಾಶ್ರಿತಾಃ ದ್ವಾವಿಂಶತಿಶ್ರುತಯಃ ಸ್ವರಮಂಡಲ-ಸಾಧಿತಾಃ' ಎಂದು ಮಾತ್ರ ಹೇಳುತ್ತಾನೆ. 'ಅತ್ರ' ಎಂದರೆ ಷಡ್ಜಗ್ರಾಮದಲ್ಲಿ ಮತ್ತು ಮಧ್ಯಮಗ್ರಾಮದಲ್ಲಿ ಪ್ರತ್ಯೇಕವಾಗಿ, ಎಂದು ಗ್ರಂಥಸಂದರ್ಭ. ಮತಂಗನಾದರೂ ತ್ರಿಸ್ಥಾನಭೇದದಿಂದ ಇಪ್ಪತ್ತೆರಡರ ಮೂರರಷ್ಟು ಎಂದರೆ ಅರವತ್ತಾರು ಶ್ರುತಿಗಳನ್ನು ಅನ್ಯರಿಂದ ಸಂಗ್ರಹಿಸಿದ್ದಾನೆ. ತ್ರಿಸ್ಥಾನಭೇದದಿಂದ ಎನ್ನುವಲ್ಲಿ ವಿಶೇಷಾರ್ಥ ವಿದೆ. ಅದನ್ನು ಶ್ರುತಿ ವಿಷಯಕವಾದ ವಿಮರ್ಶೆಯಲ್ಲಿ ಪುನಃ ಪ್ರಸ್ತಾಪಿಸಲಾಗುವುದು. ಅರವತ್ತಾರು ಶ್ರುತಿಗಳು ನಮ್ಮ ಸಂಗೀತದಲ್ಲಿ ಪ್ರಾಚೀನಪ್ರಸಿದ್ಧವಾಗಿಯೇ ಇವೆ. ಕೋಹಲನೊಬ್ಬನೇ ಇದನ್ನು ಹೇಳಿದವನಲ್ಲ. ಕೋಹಲನ ಮತವನ್ನು ಮತಂಗ, ಜಗದೇಕಮಲ್ಲ (?), ಪಾರ್ಶ್ವದೇವ, ಕಲ್ಲಿನಾಥರುಗಳು ಒಪ್ಪಿದ್ದಾರೆ. ಕೋಹಲನೂ ಇವುಗಳನ್ನು ಅನ್ಯರಿಂದ ಸಂಗ್ರಹಿಸಿದ್ದಾನೆ. ಇಪ್ಪತ್ತೆರಡು ಶ್ರುತಿಗಳಿಗೂ ಅರವತ್ತಾರು ಶ್ರುತಿಗಳಿಗೂ ತಾತ್ತ್ವಿಕ ವಾದ ಭೇದವೇನೂ ಇಲ್ಲ. ಭರತನು ಕೇವಲ ಇಪ್ಪತ್ತೆರಡನ್ನೇ ಏಕೆ ಹೇಳಿದನೆಂದರೆ ಅವನ ಈ ಶ್ರುತಿ ಇಯತ್ತೆಯು ಷಡ್ಜಗ್ರಾಮವನ್ನು ಮತ್ತು ಮಧ್ಯಮಗ್ರಾಮವನ್ನು, ಎಂದರೆ ಸ್ವರಸಪ್ತಕವನ್ನು ಸಂಬಂಧಿಸಿದುದು ; ಸ್ಥಾಯಿಸಂಬಂಧಿತ ವಲ್ಲ. ಸ್ವರಸಪ್ತಕವೂ ಸ್ಥಾಯಿಯೂ ತಾತ್ತ್ವಿಕವಾಗಿ ಬೇರೆ ಬೇರೆಯೇ ಹೌದು. ಸ್ವರಸಪ್ತಕವೆಂದರೆ ಏಳು ಸ್ವರಗಳು ಹೊಂದಿರುವ ಪರಸ್ಪರ ಸಂಬಂಧಗಳನ್ನು ತೋರಿಸುವ ವ್ಯವಸ್ಥೆ. ಇದರಲ್ಲಿ ಶುದ್ಧ ವಿಕೃತಾದಿ ವಿವಿಧ ಸ್ವರಗಳ ಪ್ರಮಾಣಗಳು ವಿವಕ್ಷಿತವಾಗಿರುತ್ತವೆ. ಸ್ಥಾಯಿಯೆಂದರೆ ಆಧಾರಸ್ವರಕ್ಕೂ ಅದರ ಪ್ರಥಮಾವರ್ತನ ಸ್ವರಕ್ಕೂ ನಡುವೆ ಇರುವ ನಾದಪ್ರದೇಶ, ಅಥವಾ ಅದರ ಪ್ರಮಾಣ. ಇವೆರಡರ ಕಲ್ಪನೆಗಳು ಒಂದನ್ನೊಂದು ಒಳಗೊಂಡಿರ ಬಹುದು ಅಥವಾ ಇಲ್ಲದಿರಬಹುದು. ಆದುದರಿಂದ ಭರತನು ಸ್ಥಾಯಿಯನ್ನು ಕುರಿತು ಶ್ರುತಿಗಳನ್ನು ಲಕ್ಷಿಸಲಿಲ್ಲ ; ಅಷ್ಟೇ ಅಲ್ಲ, ಸ್ಥಾಯಿಯ ಕಲ್ಪನೆಯನ್ನು ಶ್ರುತಿ, ಸ್ವರ, ಗ್ರಾಮ, ಮೂರ್ಛನೆ, ತಾನ, ವರ್ಣಾಲಂಕಾರ ಮೊದಲಾದವು ಗಳೊಡನೆ ಅವನು ಸಂಬಂಧಿಸಿಯೇ ಇಲ್ಲ ; ಅದನ್ನು ಅವನು ಇಲ್ಲಿ ಹೆಸರಿಸುವುದು ಸಹ ಇಲ್ಲ. ಈ ರೀತಿಯಲ್ಲಿ ಶಾರ್ಙ್ಗದೇವನಿಗೂ ಭರತನಿಗೂ ಸಂಗೀತಶಾಸ್ತ್ರತತ್ತ್ವಗಳ ಜಿಜ್ಞಾಸೆಯ ವಿಧಾನದಲ್ಲಿ ತೀವ್ರವಾದ ವ್ಯತ್ಯಾಸವಿದೆ. ಅದನ್ನು ಮುಂದೆ ಪುನಃ ಹೇಳಲಾಗುವುದು. ಮೇಲ್ಕಂಡ ಪ್ರಮೇಯಗಳನ್ನು ಶಾರ್ಙ್ಗದೇವನು ಸ್ಥಾಯಿಯಿಂದಲೇ ಪಡೆದಿರುವುದರಿಂದಲೂ, ಮೂರು ಸ್ಥಾಯಿಗಳನ್ನು ಸ್ವೀಕರಿಸಿರುವುದರಿಂದಲೂ ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತೆರಡು ಶ್ರುತಿಗಳನ್ನು ಅವನು ಹೇಳುವುದು ಅವನ ತತ್ತ್ವವಿವೇಚನಾಕ್ರಮಕ್ಕೆ ಅನುಸಾರವಾಗಿಯೇ ಇದೆ. ಬೋಧನಕ್ರಮದಲ್ಲಿನ ಈ ಭಿನ್ನತೆಯನ್ನು ಆಂಗಿರಸ, ಕಾಶ್ಯಪ ಮೊದಲಾದ ಮುನಿಗಳಲ್ಲಿಯೂ ಕಾಣಬಹುದು. ಈ ಸಂಗತಿಯನ್ನು ಅಭಿನವಗುಪ್ತನೇ ಹೇಳುತ್ತಾನೆ. ಅರವತ್ತಾರೆನ್ನದೆ ಶ್ರುತಿಗಳನ್ನು ಭರತನು ಇಪ್ಪತ್ತೆರಡೆಂದು ಏಕೆ ಎಣಿಸುತ್ತಾನೆ ಎಂಬುದರ ವ್ಯಾಖ್ಯಾನವು ಇಲ್ಲಿ ಪ್ರಸಕ್ತ ಸಂದರ್ಭ :

ನನು ಸ್ಥಾನಭೇದೇನ ಷಟ್‌ಷಷ್ಟಿಃ ತತ್ಕಥಂ ದ್ವಾವಿಂಶತಿರಿತ್ಯಾಹ—ಸ್ವರಮಂಡಲಸ್ಯ ಸ್ವರಸಮೂಹಸ್ಯ ಸಪ್ತ-ಕಸ್ಯ ದ್ವಾವಿಂಶತ್ಯೈವ ಸಿದ್ಧಿಃ । [96]

96 ಅಭಿನವಗುಪ್ತ, ಉ. ಗ್ರಂ., ಪು. 19.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸ್ವರಮಂಡಲದಲ್ಲಿ, ಎಂದರೆ ಸ್ವರಸಪ್ತಕದಲ್ಲಿ ಸಿದ್ಧಿಸುವುದು ಇಪ್ಪತ್ತೆರಡೇ ಶ್ರುತಿಗಳು. ಇವುಗಳೇ ಚಾಕ್ರಿಕವಾಗಿ ಇತರ ಸ್ಥಾನಗಳಲ್ಲಿಯೂ ಗೋಚರವಾಗುವುದರಿಂದ ಬೇರೆ ಸ್ಥಾನಗಳಲ್ಲಿರುವ ಸ್ವರಮಂಡಲಗಳನ್ನು ಚಕ್ರಗಳೆಂದು ಕರೆಯುತ್ತಾರೆ; ಇವುಗಳನ್ನೇ ಆಂಗಿರಸ, ಕಾಶ್ಯಪ ಮೊದಲಾದ ಸಂಗೀತಶಾಸ್ತ್ರಪ್ರವರ್ತಕರು ಪರಿಮಂಡಲಗಳೆಂದು ಕರೆದರು (ಹಾಗೂ ಅವುಗಳಲ್ಲಿ ಪ್ರತ್ಯೇಕವಾದ ಇಪ್ಪತ್ತೆರಡು ಶ್ರುತಿಗಳನ್ನು ಹೇಳಿದರು).

ತತ ಏವ ಸ್ಥಾನಾಂತರೇ ಸ್ವರಮಂಡಲತ್ವಮಿತಿ ಚಕ್ರಮುಚ್ಯತೇ । ತಚ್ಚ ಪರಿಮಂಡಲಂ (ಆ)ಂಗಿರಸಕಾಶ್ಯಪಾದಿಭಿರ್ಮುನಿಭಿರ್ದರ್ಶಿತಮ್ ।[96]

ಆದುದರಿಂದ ಶಾರ್ಙ್ಗದೇವನು ತತ್ತ್ವಜಿಜ್ಞಾಸಾಕ್ರಮದಲ್ಲಿ ಈ ಮಟ್ಟಿಗೆ ಕಾಶ್ಯಪನನ್ನು ಅನುಸರಿಸಿರುವಂತೆ ಕಾಣುತ್ತದೆ. ಇವನನ್ನು ಪೂರ್ವಾಚಾರ್ಯರ ಮಧ್ಯದಲ್ಲಿ ಅವನು ಸ್ಮರಿಸಿದರೂ, ಆಂಗಿರಸನನ್ನು ಹೆಸರಿಸದಿರುವುದು ವಿಸ್ಮಯಕರವಾಗಿದೆ. ಆಂಗಿರಸನೆಂಬ ಶಾಸ್ತ್ರಕಾರನ ಹೆಸರನ್ನು ಅವನು ಎಲ್ಲಿಯೂ ಹೇಳುವುದಿಲ್ಲ. ಅಭಿನವಗುಪ್ತನಲ್ಲದೆ ಇವನನ್ನು ಬೇರೆ ಯಾವ ಲಾಕ್ಷಣಿಕನೂ ಸ್ಮರಿಸಿರುವುದು ಕಂಡುಬಂದಿಲ್ಲ. ಡೇನಿಯಲೌ ಮಾತ್ರ ಇವನಿಂದ ಸಂಗೀತಶಾಸ್ತ್ರವಿಷಯಕವಾದ ಉಕ್ತಿಯು ದೊರೆತಿದೆಯೆಂದು ಹೇಳುತ್ತಾನೆ.[97] ಇದಕ್ಕೆ ಆಧಾರವೇನೋ ತಿಳಿಯದು. ಇದು ಹೇಗೇ ಇರಲಿ, ಸ್ಥಾನಾಂತರಗಳಲ್ಲಿ ಶ್ರುತಿಗಳು ಸಂಪೂರ್ಣವಾಗಿ ಅನನ್ಯಸದೃಶಗಳಲ್ಲವೆಂಬ ಮತ್ತು ಅವುಗಳನ್ನು ಬೇರೆಯಾಗಿ ಎಣಿಸಬೇಕೆಂಬ ಅರಿವು ಭಾರತೀಯ ಸಂಗೀತಶಾಸ್ತ್ರದಲ್ಲಿ ಬಹು ಹಿಂದೆಯೇ ಮೂಡಿತ್ತೆಂಬುದು ನಿರ್ವಿವಾದವಾಗಿದೆ. ಶಾರ್ಙ್ಗದೇವನೂ ಇದೇ ನಾದಶಾಸ್ತ್ರತತ್ತ್ವವನ್ನಿಲ್ಲಿ ಪ್ರತಿಪಾದಿಸುತ್ತಿದ್ದಾನೆ.

**ಅಧರಾಧರತೀವ್ರಾಸ್ತಾಸ್ತಜ್ಜೋ ನಾದಃ ಶ್ರುತಿರ್ಮತಃ ।**
**ವೀಣಾದ್ವಯೇ ಸ್ವರಾಃ ಸ್ಥಾಪ್ಯಾಸ್ತತ್ರ ಷಡ್ಜಶ್ಚತುಃಶ್ರುತಿಃ ॥ 13 ॥** 229

[ಹೀಗೆಯೇ] ಅವುಗಳು ಪ್ರತಿಯೊಂದೂ ತನ್ನ ಕೆಳಗಿನದಕ್ಕಿಂತ ತೀವ್ರವಾಗಿರುತ್ತವೆ. ಇವುಗಳಲ್ಲಿ ಹುಟ್ಟಿದ ನಾದವು ಶ್ರುತಿಯೆಂದು ಸಮ್ಮತಿಸಿದೆ. [ಈಗ] ಎರಡು ವೀಣೆಗಳಲ್ಲಿಯೂ ಸ್ವರಗಳು (ಹೀಗೆ) ಸ್ಥಾಪಿಸಲ್ಪಡುತ್ತವೆ(ನೆಲೆಗೊಳಿಸಲ್ಪಡಬೇಕು). ಅದರಲ್ಲಿ ನಾಲ್ಕು ಶ್ರುತಿಗಳುಳ್ಳ ಷಡ್ಜವು—

**ಸ್ಥಾಪ್ಯಸ್ತಂತ್ರ್ಯಾಂ ತುರೀಯಾಯಾಮೃಷಭಸ್ತ್ರಿಶ್ರುತಿಸ್ತತಃ ।**
**ಪಂಚಮ್ಯಾತಸ್ತೃತೀಯಾಯಾಂ ಗಾಂಧಾರೋ ದ್ವಿಶ್ರುತಿಸ್ತತಃ ॥ 14 ॥** 230

ನಾಲ್ಕನೆಯ ತಂತಿಯಲ್ಲಿ ಸ್ಥಾಪಿಸಲ್ಪಡುವಂತಹುದು. ಆ ಮೇಲೆ ಮೂರು ಶ್ರುತಿಗಳನ್ನುಳ್ಳ ರಿಷಭವು ಐದನೆಯದರಿಂದ ಮೂರನೆಯದರಲ್ಲಿ (ಮೂರನೆಯ ತಂತಿಯಲ್ಲಿ, ಎಂದರೆ ಏಳನೆಯ ತಂತಿಯಲ್ಲಿ) ; ಆ ಮೇಲೆ ಎರಡು ಶ್ರುತಿಗಳನ್ನುಳ್ಳ ಗಾಂಧಾರವು—

**ಅಷ್ಟಮ್ಯಾತೋ ದ್ವಿತೀಯಾಯಾಂ ಮಧ್ಯಮೋಽಥ ಚತುಃಶ್ರುತಿಃ ।**
**ದಶಮ್ಯಾತಶ್ಚತುರ್ಥ್ಯಾಂ ಸ್ಯಾತ್ ಪಂಚಮೋಽಥ ಚತುಃಶ್ರುತಿಃ ॥ 15 ॥** 231

ಎಂಟನೆಯ (ತಂತಿಯಿಂದ) ದರಿಂದ ಎರಡನೆಯದರಲ್ಲಿ (ಎಂದರೆ ಒಂಬತ್ತನೆಯದರಲ್ಲಿ) ; ಆ ಮೇಲೆ ನಾಲ್ಕು ಶ್ರುತಿಗಳನ್ನುಳ್ಳ ಮಧ್ಯಮವು ಹತ್ತನೆಯ(ತಂತಿಯಿಂದ)ದರಿಂದ ನಾಲ್ಕನೆಯದರಲ್ಲಿ (ಎಂದರೆ ಹದಿಮೂರನೆಯ ತಂತಿಯಲ್ಲಿ) ಇರುತ್ತದೆ. ಆಮೇಲೆ ನಾಲ್ಕು ಶ್ರುತಿಗಳನ್ನುಳ್ಳ ಪಂಚಮವು—

---

97 ಡೇನಿಯಲೌ, ಉ. ಗ್ರಂ., ಪು. 32-33 ರ ಮಧ್ಯದ ಪಥಕ.

**ಚತುರ್ದಶೀತಸ್ತುರ್ಯಾಯಾಂ ಧೈವತಸ್ತ್ರಿಶ್ರುತಿಸ್ತತಃ ।**
**ಅಷ್ಟಾದಶಸ್ಯಾಸ್ತೃತೀಯಾಯಾಂ ನಿಷಾದೋ ದ್ವಿಶ್ರುತಿಸ್ತತಃ ॥ 16 ॥** 232

ಹದಿನಾಲ್ಕನೆಯ (ತಂತಿಯಿಂದ)ದರಿಂದ ನಾಲ್ಕನೆಯದರಲ್ಲಿ (ಎಂದರೆ ಹದಿನೇಳನೆಯ ತಂತಿಯಲ್ಲಿ) ; ಆ ಮೇಲೆ ಮೂರು ಶ್ರುತಿಗಳನ್ನುಳ್ಳ ಧೈವತವು ಹದಿನೆಂಟನೆಯ (ತಂತಿಯಿಂದ)ದರಿಂದ ಮೂರನೆಯದರಲ್ಲಿ (ಎಂದರೆ ಇಪ್ಪತ್ತನೆಯ ತಂತಿಯಲ್ಲಿ) ; ಆಮೇಲೆ ಎರಡು ಶ್ರುತಿಗಳನ್ನುಳ್ಳ ನಿಷಾದವು—

**ಏಕವಿಂಶ್ಯಾ ದ್ವಿತೀಯಾಯಾಂ ವೀಣೈಕಾಽತ್ರ ಧ್ರುವಾ ಭವೇತ್ ।**
**ಚಲವೀಣಾ ದ್ವಿತೀಯಾ ತು ತಸ್ಯಾಂ ತಂತ್ರೀಸ್ತು ಸಾರಯೇತ್ ॥ 17 ॥** 233

ಇಪ್ಪತ್ತೊಂದನೆಯ(ತಂತಿಯಿಂದ)ದರಿಂದ ಎರಡನೆಯದರಲ್ಲಿ (ಎಂದರೆ ಇಪ್ಪತ್ತೆರಡನೆಯ ತಂತಿಯಲ್ಲಿ ಇರುತ್ತದೆ). ಅದರಲ್ಲಿ ಒಂದು ಧ್ರುವ[ಪ್ರಮಾಣಭೂತ]ವಾಗುವುದು. ಎರಡನೆಯದಾದರೋ ಚಲವೀಣೆ [ಯಾಗುವುದು]. ಇದರ ತಂತಿಗಳನ್ನಾದರೋ ಚಲಿಸಬೇಕು.

**ಸ್ವೋಪಾಂತ್ಯತಂತ್ರೀಮಾನೇಯಾಂ ಸಪ್ತಸ್ವರಾ ಬುಧೈಃ ।**
**ಧ್ರುವವೀಣಾಸ್ವರೇಭ್ಯೋಽಸ್ಯಾಂ ಚಲಾಯಾಂ ತೇ ಸ್ವರಸ್ತದಾ ॥ 18 ॥** 234

ಈ ಚಲವೀಣೆಯಲ್ಲಿ ಸಪ್ತಸ್ವರಗಳೂ ವಿದ್ವಾಂಸರಿಂದ ತಮ್ಮ ಕಡೆಯ ತಂತಿಗಿಂತ ಹಿಂದಿನ ತಂತಿಯಲ್ಲಿ ತರಲ್ಪಡಬೇಕು. ಆಗ ಆ ಸ್ವರಗಳು ಧ್ರುವವೀಣೆಯಲ್ಲಿರುವ ಸ್ವರಗಳಿಗಿಂತ—

**ಏಕಶ್ರುತ್ಯಪಕೃಷ್ಟಾಃ ಸ್ಯುರೇವಮನ್ಯಾಽಪಿ ಸಾರಣಾ[4] ।**
**ಶ್ರುತಿದ್ವಯಲಯಾದಸ್ಯಾಂ ಚಲವೀಣಾಗತೌ ಗತೇ ॥ 19 ॥** 235

ಒಂದು ಶ್ರುತಿಯಷ್ಟು ಕುಗ್ಗುತ್ತವೆ. ಉಳಿದ ಸಾರಣಾಕ್ರಿಯೆಗಳಾದರೂ ಹೀಗೆಯೇ. ಈ ಚಲವೀಣೆಯಲ್ಲಿರುವ ಗಾಂಧಾರನಿಷಾದಗಳು ಎರಡು ಶ್ರುತಿಗಳು ನಾಶವಾಗುವುದರಿಂಡ (ಕುಗ್ಗುವುದರಿಂದ)—

**ಧ್ರುವವೀಣೋಪಗತಯೋ ರಿಧಯೋರ್ವಿಶತಃ ಕ್ರಮಾತ್ ।**
**ತೃತೀಯಸ್ಯಾಂ ಸಾರಣಾಯಾಂ ವಿಶತಃ ಸಪಯೋ ರಿಧೌ ॥ 20 ॥** 236

ಧ್ರುವವೀಣೆಯಲ್ಲಿರುವ ರಿಷಭಧೈವತಗಳಲ್ಲಿ ಕ್ರಮವಾಗಿ ಪ್ರವೇಶಿಸುತ್ತವೆ. ಮೂರನೆಯ ಸಾರಣಾಕ್ರಿಯೆಯಲ್ಲಿ ರಿಷಭಧೈವತಗಳು [ಕ್ರಮವಾಗಿ] ಷಡ್ಜ-ಪಂಚಮಗಳಲ್ಲಿ ಪ್ರವೇಶಿಸುತ್ತವೆ.

**ನಿಗಮೇಷು ಚತುರ್ಥ್ಯಾಂ ತು ವಿಶಂತಿ ಸಮಪಾಃ ಕ್ರಮಾತ್ ।**
**ಶ್ರುತಿದ್ವಾವಿಂಶತಾವೇವಂ ಸಾರಣಾನಾಂ ಚತುಷ್ಟಯಾತ್ ॥ 21 ॥** 237

ನಾಲ್ಕನೆಯ [ಸಾರಣಾಕ್ರಿಯೆಯ]ದರಲ್ಲಾದರೋ ಷಡ್ಜ, ಮಧ್ಯಮ, ಪಂಚಮಗಳು ಕ್ರಮವಾಗಿ ನಿಷಾದ, ಗಾಂಧಾರ, ಮಧ್ಯಮಗಳಲ್ಲಿ ಪ್ರವೇಶಿಸುತ್ತವೆ. ಹೀಗೆ ನಾಲ್ಕು ಸಾರಣಾಕ್ರಿಯೆಗಳಿಂದ [ಚಲವೀಣೆಯ] ಇಪ್ಪತ್ತೆರಡು ಶ್ರುತಿಗಳು.

---

4 ಅ : ಮನ್ಯಾಶ್ಚ ಸಾರಣಾಃ. ಕ : ಮನ್ಯಾಽಪಿ ಸಾರಣಾಃ.

ಧ್ರುವಾಶ್ರುತಿಷು ಲೀನಾಯೊಮಿಯತ್ತಾ ಜ್ಞಾಯತೇ ಸ್ಫುಟಮ್ ।
ಅತಃ ಪರಂ ತು ರಕ್ತಿಘ್ನಂ ನ ಕಾರ್ಯಮುಪಕರ್ಷಣಮ್ ॥ 22 ॥ 238

ಧ್ರುವವೀಣೆಯ ಶ್ರುತಿಗಳಲ್ಲಿ ಲೀನವಾಗುವುದರಿಂದ [ಸ್ವರಗಳ ಶ್ರುತಿಪ್ರಮಾಣಗಳು] ಇಷ್ಟಿಷ್ಟೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಅದರ ಮುಂದಾದರೂ ರಂಜಕತ್ವವು ನಾಶವಾಗುವುದರಿಂದ ಶ್ರುತಿಗಳ ಕುಗ್ಗುವಿಕೆಯನ್ನು ಮಾಡಲಾಗದು.

## I ಶ್ರುತಿ ನಿದರ್ಶನ

ಧ್ರುವವೀಣೆ ಮತ್ತು ಚಲವೀಣೆಗಳ ಪ್ರಾಯೋಗಿಕ ನಿದರ್ಶನದಿಂದ ಏಕ, ದ್ವಿ, ತ್ರಿ ಮತ್ತು ಚತುಃ ಶ್ರುತಿಗಳ ಮೌಲ್ಯವನ್ನು ನಿರ್ಣಯಮಾಡುವ, ಅಲ್ಲದೆ ಒಂದು ಸ್ಥಾಯಿಯ ನಾದವ್ಯಾಪ್ತಿಯಲ್ಲಿ ಒಟ್ಟು ಇಪ್ಪತ್ತೆರಡು ಶ್ರುತಿಗಳಿರುತ್ತವೆಂದು ಸಿದ್ಧಪಡಿಸುವ ವಿಧಾನವನ್ನು ಶ್ರೀ ಶಾರ್ಙ್ಗದೇವನು ಭರತ ಮತ್ತು ಮತಂಗರಿಂದಲೇ ಸ್ಫೂರ್ತಿಪಡೆದು ಹೇಳಿದ್ದಾನೆ. ಪ್ರಸಿದ್ಧ ಪೂರ್ವಾಚಾರ್ಯರಾದ ದತ್ತಿಲ, ನಾನ್ಯದೇವ, ಸೋಮೇಶ್ವರ, ಜಗದೇಕಮಲ್ಲ ಮುಂತಾದವರು ಇದನ್ನು ಹೇಳಿಲ್ಲ. ಶ್ರೀ ಅಭಿನವಗುಪ್ತಪಾದಾಚಾರ್ಯನು ಉಳಿದೆಲ್ಲ ವಿಷಯಗಳಲ್ಲಿ ಪೂರ್ವಾಚಾರ್ಯರಿಂದ ಧಾರಾಳವಾಗಿ ಉದಾಹರಿಸಿಕೊಂಡಿದ್ದರೂ ಈ ವಿಷಯದಲ್ಲಿ ತನ್ನೊಬ್ಬನದೇ ವ್ಯಾಖ್ಯಾನವನ್ನು ಬರೆದಿರುವುದರಿಂದಲೂ ತನ್ನ ಅಭಿಪ್ರಾಯಗಳನ್ನು ಸಮರ್ಥಿಸುವ ಪ್ರಾಕ್ತನರನ್ನು ಹೆಸರಿಸದಿರುವುದರಿಂದಲೂ ಕೋಹಲ, ವಿಶ್ವಾವಸು, ಯಾಷ್ಟಿಕ, ಶಾರ್ದೂಲ, ದುರ್ಗಾಶಕ್ತಿ ಮುಂತಾದ ಸಂಗೀತಶಾಸ್ತ್ರಪ್ರವರ್ತಕರೂ ಇತರ ಭಾರತೀಯ ವ್ಯಾಖ್ಯಾತಾರರಾದ ಲೊಲ್ಲಟ, ಉದ್ಭಟ, ಶಂಕುಕ, ಮಾತೃಗುಪ್ತಾದಿಗಳೂ ಈ ವಿಷಯವನ್ನು ಪ್ರಸ್ತಾಪಿಸಿಲ್ಲವೆಂದು ಅನುಮಾನ ಪಡಬೇಕಾಗುತ್ತದೆ.

ಪ್ರಾಚೀನ ಭಾರತೀಯ ಸಂಗೀತ ಶಾಸ್ತ್ರದಲ್ಲಿ ಹೇಳಿರುವ ಶ್ರುತಿಗಳ ಕಲ್ಪನೆಯನ್ನು ತಿಳಿದುಕೊಳ್ಳಲು ಇಂದು ಉಳಿದುಬಂದಿರುವ ಏಕೈಕ ಸಾಧನವೆಂದರೆ ಧ್ರುವವೀಣಾ-ಚಲವೀಣಾ ನಿದರ್ಶನವೇ. ಆದುದರಿಂದ ಈ ಪ್ರಯೋಗವನ್ನು ಸ್ವಲ್ಪ ವಿಶದವಾಗಿ ಪರಿಶೀಲಿಸಲಾಗುವುದು. ಶಾರ್ಙ್ಗದೇವನು ಭರತ ಮತಂಗರಿಂದ ಭಿನ್ನವಾದ ಮಾರ್ಗದಲ್ಲಿ ನಡೆದು ದ್ವಾವಿಂಶತಿ ಶ್ರುತಿಗಳ ಹಾಗೂ ಒಂದು, ಎರಡು, ಮೂರು ಮತ್ತು ನಾಲ್ಕು ಶ್ರುತಿಗಳ ಪ್ರಮಾಣಗಳ ಪರೀಕ್ಷೆಯನ್ನು ನಡೆಸಿದ್ದಾನೆ. ಈ ಪರೀಕ್ಷೆಯ ಫಲಿತಾಂಶಗಳನ್ನು ಅದರ ಹಿನ್ನೆಲೆಯಲ್ಲಿ, ಚಾರಿತ್ರಕವಾಗಿ ವಿಮರ್ಶಿಸಿದಾಗ ಮಾತ್ರ ಅವುಗಳ ನೈಜವಾದ ಮೌಲ್ಯಗಳ ಅರಿವು ಉಂಟಾಗುತ್ತದೆ. ಆದುದರಿಂದ ಭರತಮುನಿ ಮತ್ತು ಅವನನ್ನೇ ಸಂಪೂರ್ಣವಾಗಿ ಅವಲಂಬಿಸಿದ ಮತಂಗಮುನಿ ಇವರ ಪ್ರಯೋಗವನ್ನು ಮೊದಲು ಪರೀಕ್ಷಿಸಲಾಗುವುದು.

ಷಡ್ಜಗ್ರಾಮದಲ್ಲಿನ ಶ್ರುತಿವಿನಿಯೋಗವನ್ನು (ತನ್ಮೂಲಕ ಅದರಲ್ಲಿನ ಸ್ವರವ್ಯವಸ್ಥೆಯನ್ನು) ಪ್ರಕೃತಿಯೆಂದು ವಿವಕ್ಷಿಸಿ ಭರತನು ಈ ಗ್ರಾಮದಲ್ಲಿನ ಷಡ್ಜವು ನಾಲ್ಕು, ರಿಷಭವು ಮೂರು, ಗಾಂಧಾರವು ಎರಡು, ಮಧ್ಯಮವು ನಾಲ್ಕು, ಪಂಚಮವು ನಾಲ್ಕು, ಧೈವತವು ಮೂರು ಮತ್ತು ನಿಷಾದವು ಎರಡು ಹೀಗೆ ಶ್ರುತಿಗಳನ್ನು ಪಡೆದಿರುತ್ತವೆಂಬ ಪ್ರಮೇಯವನ್ನು ಮೊದಲು ಹೇಳಿ ನಂತರ ಅದಕ್ಕೆ ಪ್ರಮಾಣವನ್ನು ಈ ಮಾತುಗಳಲ್ಲಿ ಹೇಳಿದ್ದಾನೆ :

ಮಧ್ಯಮಗ್ರಾಮೇ ತು ಪಂಚಮಃ ಶ್ರುತ್ಯಪಕೃಷ್ಟಃ । ಏವಂ ಸ್ವ[98] ಶ್ರುತ್ಯುತ್ಕರ್ಷಾದಪಕರ್ಷಾದ್ವಾ ಯದಂ-

---

98 ಮತಂಗನಿಂದ ಬೃಹದ್ದೇಶೀಯಲ್ಲಿ ಉದ್ಧೃತ (?) ಪಾಠ : ಪಂಚಮಸ್ಯ ಶ್ರುತ್ಯುತ್ಕರ್ಷಾಪಕರ್ಷಾಭ್ಯಾಂ, ಪು. 5 ಅದರೆ ಈ ಭಾಗವನ್ನು ಮತಂಗನದೆಂದು ಪಾರ್ಶ್ವದೇವನು ತನ್ನ ಸಂಗೀತಸಮಯಸಾರದಲ್ಲಿ ಭಿನ್ನವಾಗಿ ಉದ್ಧರಿಸಿರುವುದನ್ನು ಸಿಂಹಭೂಪಾಲನು ಹೀಗೆ ಕೊಡುತ್ತಾನೆ :

ತರಂ ಮಾರ್ದವಾದಾಯತತ್ವಾದ್ ವಾ ತತ್ ಪ್ರಮಾಣಂ ಶ್ರುತಿಃ (!) ನಿದರ್ಶನಂತ್ವಾಸಾಮಭಿವ್ಯಾಖ್ಯಾಸ್ಯಾಮಃ । [99]
ಯಥಾ—

ದ್ವೇ ವೀಣೇ ತುಲ್ಯಪ್ರಮಾಣತಂತ್ರ್ಯುಪವಾದನದಂಡಮೂರ್ಛನೇ ಕೃತ್ವಾ [100] ಷಡ್ಜಗ್ರಾಮಾಶ್ರಿತೇ ಕಾರ್ಯೇ । ತಯೋರನ್ಯತರಸ್ಯಾಂ ಪಂಚಮಸ್ಯಾಪಕರ್ಷೇ ಶ್ರುತಿಂ ಮಧ್ಯಮಗ್ರಾಮಿಕೀಂ ಕೃತ್ವಾ [101] ತಾಮೇವ ಚ ಪಂಚಮಸ್ಯ ಶ್ರುತ್ಯುತ್ಕರ್ಷವಶಾತ್ ಷಡ್ಜಗ್ರಾಮಿಕೀಂ ಕುರ್ಯಾತ್ । [102] ಏಕಶ್ರುತಿರಪಕೃಷ್ಟಾಭವತಿ । [103] ಪುನರಪಿ ತದ್ವದೇವಾಪಕರ್ಷೇತ್, ಯಥಾ ಗಾಂಧಾರನಿಷಾದವಂತಾವಿತರಸ್ಯಾಂ ಋಷಭಧೈವತೌ ಪ್ರವೇಕ್ಷ್ಯತಃ ದ್ವಿಶ್ರುತ್ಯಧಿಕತ್ವಾತ್ । [104] ಪುನರಪಿ ತದ್ವದೇವಾಪಕೃಷ್ಟಾಯಾಂ ಧೈವತರ್ಷಭಾವಿತರಸ್ಯಾಂ ಪಂಚಮಷಡ್ಜೌ ಪ್ರವೇಕ್ಷ್ಯತಃ ತ್ರಿಶ್ರುತ್ಯಧಿಕತ್ವಾತ್ । [105] ತದ್ವತ್ ಪುನರಪಕೃಷ್ಟಾಯಾಂ ಪಂಚಮಮಧ್ಯಮಷಡ್ಜಾ ಇತರಸ್ಯಾಂ ಮಧ್ಯಮಗಾಂಧಾರನಿಷಾದವಂತಃ ಪ್ರವೇಕ್ಷ್ಯಂತಿ ಚತುಃಶ್ರುತ್ಯಭ್ಯಧಿಕತ್ವಾತ್ । [106] ಏವಮೇತೇನ ಶ್ರುತಿ ನಿದರ್ಶನೇನ ದ್ವೌ ಗ್ರಾಮಿಕ್ಯೌ ದ್ವಾವಿಂಶತಿಶ್ರುತಯಃ ಪ್ರತ್ಯವಗಂತವ್ಯಾಃ । [107]

ಹೀಗೆ ಪ್ರಕೃತಿಯೆಂದು ಪರಿಗಣಿತವಾದ ಷಡ್ಜಗ್ರಾಮದ ಪಂಚಮವನ್ನು ಮಧ್ಯಮಗ್ರಾಮದ ಪಂಚಮದವರೆಗೆ ಇಳಿಸುವುದರಿಂದಲೂ ಅದನ್ನೇ ಪುನಃ ಷಡ್ಜಗ್ರಾಮಿಕವಾದ ಪಂಚಮದವರೆಗೆ ಏರಿಸುವುದರಿಂದಲೂ ಯಾವ ನಾದಾಂತರವು ಗೋಚರವಾಗುವುದೋ ಅದೇ ಶ್ರುತಿಯ ಪ್ರಮಾಣ. ಈ ಇಳಿಸುವಿಕೆಯನ್ನು ತಂತಿಯನ್ನು ಶಿಥಿಲ(ಸಡಿಲ)ಗೊಳಿಸುವುದರಿಂದಲೂ ಏರಿಕೆಯನ್ನು ತಂತಿಯನ್ನು ಬಿಗಿಮಾಡುವುದರಿಂದಲೂ ಸಾಧಿಸಬೇಕು.

---

ನನು ಶ್ರುತೇಃ ಕಿಂ ಮಾನಮ್ ? ಉಚ್ಯತೇ, ಪಂಚಮಸ್ತಾವದ್ ಗ್ರಾಮದ್ವಯಸ್ಥೋ ಲೋಕೇ ಪ್ರಸಿದ್ಧಃ । ತಸ್ಯೋತ್ಕರ್ಷಾ(ತಸ್ಯ ಶ್ರುತ್ಯುತ್ಕರ್ಷಾ)ಪಕರ್ಷಾಭ್ಯಾಂ ಮಾರ್ದವಾದಾಯತತ್ವಾದ್ ವಾ ಯದಂತರಂ ತತ್ಪ್ರಮಾಣಾ ಶ್ರುತಿಃ ।

ಈ ಪಾಠವು ಸಂಗೀತಸಮಯಸಾರದ ಮುದ್ರಿತ ಆಕರದಲ್ಲಾಗಲೀ ಮೈಸೂರು ಪ್ರಾಚ್ಯಸಂಶೋಧನಾಸಂಸ್ಥೆಯ ಹಸ್ತಪ್ರತಿಗಳ ಭಂಡಾರದಲ್ಲಿರುವ A 17 ಎಂಬ ಮಾತೃಕೆಯಲ್ಲಾಗಲೀ ದೊರೆಯುವುದಿಲ್ಲ.

99 ಅದೇ ಸ್ಥಾನದಲ್ಲಿ ಪಾಠಾಂತರ : ಇದಾನೀಂ ದ್ವಾವಿಂಶತಿಪ್ರಕಾರತಯಾ ನಿದರ್ಶನಂ, ಪು. 5.

100 ಅದೇ ಸ್ಥಾನದಲ್ಲಿ ಪಾಠಾಂತರ :_ತುಲ್ಯಪ್ರಮಾಣೇ ತಂತ್ರ್ಯುಪಪಾದನಂ ದಂಡಮೂರ್ಛನಾ ಸಮೇಕೃತ್ವಾ, ಪು. 5.

101 ಅದೇ ಸ್ಥಾನದಲ್ಲಿ ಪಾಠಾಂತರ : ತಯೋರನ್ಯತರಸ್ಯಾಂ ಮಧ್ಯಮಗ್ರಾಮಿಕೀಂ ಶ್ರುತಿಂ ಕೃತ್ವಾ ಪಂಚಮಸ್ಯಾಪಕರ್ಷಾತ್, ಪು. 6.

102 ಅದೇ ಸ್ಥಾನದಲ್ಲಿ ಪಾಠಾಂತರ : ತಾಮೇವ ಶ್ರುತಿಂ ಷಡ್ಜಗ್ರಾಮಿಕೀಂ ಕುರ್ಯಾತ್, ಪು. 6.

103 ಅದೇ ಸ್ಥಾನದಲ್ಲಿ ಮತ್ತು ನಾಟ್ಯಶಾಸ್ತ್ರದ 'ಭ' ಮಾತೃಕೆಯಲ್ಲಿ ಪಾಠಾಂತರ : ಏವಂ ಶ್ರುತ್ಯಪಕೃಷ್ಟಾ ಭವತಿ ; ಅಭಿನವಗುಪ್ತನಿಂದ ಪಠಿತ : ಪಂಚಮಶ್ರುತಿರಪಕೃಷ್ಟಾ ಭವತಿ (ಅಭಿನವಭಾರತೀ, ಪು. 23) ; ಮತಂಗನಿಂದ ಉಕ್ತಸ್ಥಾನದಲ್ಲಿ ಅಧಿಕ ಪಾಠ : ಪರಂ ವಿಶೇಷಲಾಭೋ ನಾಸ್ತಿ, ಉಚ್ಚನೀಚಮಾತ್ರಪ್ರತೀತೇಃ ।

104 ಅದೇ ಸ್ಥಾನದಲ್ಲಿ ಪಾಠಾಂತರ :_ಯಥಾ ಗಾಂಧಾರನಿಷಾದೌ ಕರ್ತಾರೌ ಪುನರನ್ಯತರಸ್ಯಾಂ ಸ್ಥಿರವೀಣಾಯಾಂ ಧೈವತರ್ಷಭೌ ಕರ್ಮತಾಮಾಪನ್ನೌ ಪ್ರವೇಕ್ಷ್ಯ ತದ್ದ್ವಿಶ್ರುತ್ಯೈರ್ದ್ಭ್ಯಃ ಸಿಕಲಾತ್ (?)

105 ಅದೇ ಸ್ಥಾನದಲ್ಲಿ ಪಾಠಾಂತರ :__ಯಾಂ ಚಲವೀಣಾಯಾಂ ಧೈವತ__

106 ಅದೇ ಸ್ಥಾನದಲ್ಲಿ ಪಾಠಾಂತರ :__ಷಡ್ಜಾ ಇತಿ ಅಸ್ಯಾಂ ಮಧ್ಯಮಗಾಂಧಾರನಿಷಾದಾಃ ಪ್ರವಿಶಂತಿ__

107 ಅದೇ ಸ್ಥಾನದಲ್ಲಿ ಪಾಠಾಂತರ : ಏವಮನೇನ ದರ್ಶನೇನ ದ್ವಾವಿಂಶತಿಶ್ರುತಯೋ ಭವಂತಿ । ಏವಂ ಮಧ್ಯಮಗ್ರಾಮೋ ದ್ರಷ್ಟವ್ಯಾ ।

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇವುಗಳನ್ನೇ ಕ್ರಮವಾಗಿ ಮಾರ್ದವ ಮತ್ತು ಆಯತತ್ವಗಳೆಂದು ಇಲ್ಲಿ ವ್ಯವಹರಿಸಿದೆಯೆಂದು ಅಭಿನವಗುಪ್ತನು ಸ್ಪಷ್ಟಗೊಳಿಸುತ್ತಾನೆ :

ಮಾರ್ದವಂ ತಂತ್ರ್ಯಾಃ ಶಿಥಿಲೀಕರಣಂ ವಿಪರೀತತ್ವಂ ಆಯತತ್ವಂ ಕ್ರಿಯತ ಇತ್ಯಾಹ । ಶ್ರುತೇಃ ಶಬ್ದಸ್ಯ ಶ್ರೋತ್ರಗ್ರಾಹ್ಯಸ್ಯ ಉತ್ಕರ್ಷಃ ತೀವ್ರತಾ ಅಪಕರ್ಷೋ ಮಂದತಾ, ತದ್ಧೇತುತ್ವಾತ್ ಮಾರ್ದವಾಯತೇ ತು ದ್ವೇ ಅಪಿ ತಥೋಕ್ತೇ । [108]

ಅಭಿನವಗುಪ್ತನು ಶ್ರುತಿಯನ್ನು ಲಕ್ಷಿಸುವ ರೀತಿಯು ಗಮನಾರ್ಹವಾಗಿದೆ. ಭರತನು ಶ್ರುತಿಯನ್ನು ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳ ಪಂಚಮಗಳಲ್ಲಿರುವ ಅಂತರಕ್ಕೆ ಸಾಪೇಕ್ಷವಾಗಿ ಲಕ್ಷಿಸಿದರೆ ಅಭಿನವಗುಪ್ತನು ಅದನ್ನು ಪಂಚಮ ಸ್ವರದ ಉತ್ಕರ್ಷಾಪಕರ್ಷಗಳನ್ನು ಅವಲಂಬಿಸದೆಯೇ ಹೇಳುತ್ತಾನೆ. ಹೀಗೆ ಅವನು ಮೂಲಗ್ರಂಥಕಾರನ ಮತವನ್ನು ಮೀರಿದ್ದಾನೆ. ಅವನ ಪ್ರಕಾರ ತಂತಿಯ ಸಡಿಲ ಮತ್ತು ಬಿಗಿಗಳಿಂದ (ಅಥವಾ ಸದೃಶಪರಿಣಾಮವನ್ನುಂಟುಮಾಡುವ ಬೇರೆ ಯಾವುದಾದರೂ ಸಾರಣಾಕ್ರಿಯೆಯಿಂದ) ತೀವ್ರಮಂದರೂಪದಲ್ಲಿ ಎಷ್ಟು ಹೆಚ್ಚು ಕಡಿಮೆ ಮಾಡುವುದರಿಂದ ನಾದದಲ್ಲಿ ವಿಶೇಷವು, ಎಂದರೆ ಹಿಂದಿನ ಸ್ವರದಿಂದ ಭಿನ್ನತೆಯು, ಅವಬೋಧವಾಗುತ್ತದೆಯೋ ಅದೇ ಶ್ರುತಿ ; ಹೀಗೆ ಉಂಟಾದ ಎರಡು ಧ್ವನಿಗಳಲ್ಲಿ ನಡುವೆ ಬೇರೆ ಯಾವ ಧ್ವನಿಯೂ ಗೋಚರವಾಗಲಾರದಷ್ಟು ಸಮೀಪದಲ್ಲಿ ಈ ಎರಡು ಧ್ವನಿಗಳೂ ಇರಬೇಕು :

ಏವಂ ತೀವ್ರಮಂದತ್ವಹೇತುಭ್ಯಾಂ ಮಾರ್ದವಾಯತತ್ವಾಭ್ಯಾಂ ಯದಂತರಂ ವಿಶೇಷಾವಬೋಧಃ ಪ್ರಮಾಣಂ ನಿಶ್ಚಾಯಕಂ ಯಸ್ಯಾಃ ಸಾ ಶ್ರುತಿಃ । ಪ್ರಾಕ್ತನಸ್ಯ ಧ್ವನೇರ್ವೈಲಕ್ಷಣ್ಯಂ ಯಾವತಾ ಹೀನೇನಾಧಿಕೇನ ಯಾ ತೀವ್ರ-ಮಂದಾತ್ಮನಾ ರೂಪೇಣ ಲಕ್ಷ್ಯತೇ ಸಾ ಶ್ರುತಿರಿತಿ ಯಾವತ್ । ಯದ್ಯಪಿ ಪರಮಾಣುತೋಽಪ್ಯುತ್ಕರ್ಷಾಪಕರ್ಷೋ ವಾ ಭವೇದ್ ಧ್ವನೇರ್ವಿಶೇಷಸ್ತಥಾಪಿ ನಾಸೌ ಗೃಹೀತುಂ ಪಾರ್ಯತೇ । ಅತ ಏವ ಯತ್ರೋತ್ಕರ್ಷಾಪಕರ್ಷೌ ನ ಕೌಚಿದ್ ಧ್ವನೀನಾಂ ಗ್ರಾಹ್ಯೇತೇ ತತ್ರೈಕಾ ಶ್ರುತಿರಿತಿ, ಯದಾಹ ಪರಮಾಚಾರ್ಯಃ " ಏಕ ಶ್ರುತಿದೂರಾತ್ ಸಂಬುದ್ಧಾ " [109]

ತುಲ್ಯಪ್ರಮಾಣ ಎಂಬಲ್ಲಿ ಪ್ರಮಾಣವೆಂದರೆ ಎರಡೂ ವೀಣೆಗಳ ಉದ್ದ ಸುತ್ತಳತೆಗಳಲ್ಲಿ ತಂತಿಗಳ ದಪ್ಪ, ವಿಸ್ತಾರ ಮೊದಲಾದವುಗಳಲ್ಲಿ ಲೆಕ್ಕಿಸಿದ ಎಂದರೆ ನಿಖರವಾದ ಸಮಾನತೆ ಎಂದು ಕೆಲವರ ಮತವೆಂದು ಅಭಿನವಗುಪ್ತನು ಹೇಳುತ್ತಾನೆ. ಎರಡೂ ವೀಣೆಗಳಲ್ಲಿ ತಂತಿಗಳನ್ನು ಶ್ರುತಿ ಮಾಡಿದಾಗ ಯಾವ ಅಂಶದಲ್ಲಿಯೂ ವ್ಯತ್ಯಾಸ ಬರದಂತೆಯೂ ಆಯಾ ಸ್ವರಗಳು ಸ್ವಸ್ವರೂಪದಲ್ಲಿರುವಂತೆಯೂ (ಒಟ್ಟಿನಲ್ಲಿ ಹುಟ್ಟಿದ) ಇಪ್ಪತ್ತೊಂದು ಅಂಶಗಳಲ್ಲಿಯೂ ಒಂದೇ ರೀತಿಯಾಗಿರುವಂತೆಯೂ ಇರಬೇಕು. ಹೀಗೆ ಇರುವವುಗಳಲ್ಲಿ ಎರಡನ್ನೂ ಮೊದಲು ಷಡ್ಜಗ್ರಾಮದ ಸ್ವರಗಳಿಗೆ ಶ್ರುತಿಮಾಡಬೇಕು. (ಶ್ರುತಿಮಾಡಬೇಕು ಎಂಬುದನ್ನು ಆಧುನಿಕ ಸಂಗೀತ ವಿದ್ವಾಂಸರು ವಾದ್ಯಗಳಲ್ಲಿ ನಿಯತವಾದ ಸ್ವರವ್ಯವಸ್ಥೆಯನ್ನುಂಟುಮಾಡುವಿಕೆ ಎಂದು ಸ್ವಸಮಯದಲ್ಲಿ ಬಳಸುವ ಅರ್ಥದಲ್ಲಿ ಇಲ್ಲಿ ಪ್ರಯೋಗಿಸಿದೆ). ಇದರಲ್ಲಿ ಒಂದು ವೀಣೆಯು ಧ್ರುವಸಾರಣಾ ಕ್ರಿಯೆಯನ್ನು ಉಳ್ಳದ್ದು ; ಎಂದರೆ ಅದರಲ್ಲಿರುವ ಸ್ವರಸ್ಥಾನಗಳೂ ವ್ಯವಸ್ಥೆಯೂ ಪ್ರಯೋಗದಲ್ಲಿ ಮೊದಲಿನಿಂದ ಕಡೆಯವರೆಗೆ ಧ್ರುವವಾಗಿ, ಎಂದರೆ ವ್ಯತ್ಯಾಸವಾಗದೆ, ಉಳಿದುಕೊಂಡಿರುತ್ತವೆ. ಇದಕ್ಕೆ ಧ್ರುವವೀಣೆಯೆಂದು ಹೆಸರು. ಬೇರೆಯದಾದ ಚಲನೆಯಲ್ಲಿ ಪಂಚಮ

108 ಅಭಿನವಗುಪ್ತ, ಅಭಿನವಭಾರತೀ, (ನಾಟ್ಯಶಾಸ್ತ್ರವಿವೃತಿ, XXVIII, 26 ವಚನ), ಪು. 21.

109 ಅದೇ ಗ್ರಂಥ, ಅದೇ ಸಂದರ್ಭ, ಪು. 21–22.

ವನ್ನು ನುಡಿಯುವ ತಂತಿಯನ್ನು ಒಂದು ಶ್ರುತಿಯಷ್ಟು ಕಡಿಮೆಯಾಗುವಂತೆ ಸಡಿಲಮಾಡಬೇಕು. ಆಗ ಮಧ್ಯಮ ಗ್ರಾಮವು ಹುಟ್ಟುತ್ತದೆ ; ಎಂದರೆ ಈಗ ಚಲವೀಣೆಯಲ್ಲಿ ಕೇಳಿಸತಕ್ಕ ಸ್ವರಗಳು ಮಧ್ಯಮಗ್ರಾಮದ್ದವುಗಳಾಗಿರುತ್ತವೆ. ಈಗ ಚಲವೀಣೆಯಲ್ಲಿರುವ ತ್ರಿಶ್ರುತಿ ಪಂಚಮವನ್ನೇ ಒಂದು ಶ್ರುತಿಯಷ್ಟು ಹೆಚ್ಚಾಗಿಸುವುದರ ಮೂಲಕ ಅದನ್ನು ಷಡ್ಜಗ್ರಾಮದ ಪಂಚಮವನ್ನಾಗಿ ಮಾಡಬೇಕು. ಎಂದರೆ ಈಗ ಚಲವೀಣೆಯಲ್ಲಿ ಉಪಲಬ್ಧವಾದ ತ್ರಿಶ್ರುತಿಕ ಪಂಚಮವನ್ನೇ ಚತುಃಶ್ರುತಿಕವೆಂದು ಭಾವಿಸಿ ಉಳಿದ ಸ್ವರಗಳನ್ನು ನುಡಿಯುವ ತಂತಿಗಳನ್ನು ಆಯಾ ಸ್ವರಗಳು ಈಗ ಕಡಿಮೆಯಾದ ಪಂಚಮದೊಡನೆ ಷಡ್ಜಗ್ರಾಮದಲ್ಲಿರುವ ತಮ್ಮ ಪರಸ್ಪರ ಭಾವಗಳೇ ಪುನಃ ಉಳಿಸಿಕೊಳ್ಳುವ ಮಟ್ಟಿಗೆ ಸಡಿಲಗೊಳಿಸಿ ಆಯಾ ಸ್ವರಗಳನ್ನು ನೀಚಗೊಳಿಸಬೇಕು, ಎಂದು ಅಭಿನವಗುಪ್ತನು 'ತಾಮೇವ ಚ ಪಂಚಮಸ್ಯ ಶ್ರುತ್ಯುತ್ಕರ್ಷವಶಾತ್ ಷಡ್ಜಗ್ರಾಮಿಕೀಂ ಕುರ್ಯಾತ್' ಎಂಬ ಭರತೋಕ್ತಿಗೆ ವ್ಯಾಖ್ಯಾನಮಾಡುತ್ತಾನೆ :

. . . ಅಚಲ ಸಾರಣಾ ವೀಣಾಯಾಮಪರಸ್ಯಾಂ ಪಂಚಮತಂತ್ರೀ ಶ್ರುತಿಮಾತ್ರಂ ಶಿಥಿಲೀಕಾರ್ಯಾ । ತದಾ ಮಧ್ಯಮಗ್ರಾಮೋ ಜಾಯತೇ । ಅನಂತರಂ ಮಧ್ಯಮಾದೀನಾಂ ಸರ್ವಸ್ವರಾಣಾಂ ಶ್ರುತಿಮೇಕಾಂ ಪಾತಯೇತ್, ಯೇನ ಷಡ್ಜಗ್ರಾಮ ಏವ ಭವತಿ । ಏವಂ ಧ್ರುವಕವೀಣಾಯಾಂ ಚಲವೀಣಾಯಾಂ ವಾ ಸ್ವರೇಷು ಭಣ್ಯಮಾನೇಷು ಶ್ರುತಿರಧಿಕಾ ನ್ಯೂನಾ ಚ ಪ್ರತ್ಯಕ್ಷೇಣಾನುಸಂಧಾನಬಲಾಲ್ಲಕ್ಷಣೀಯಾ ಭವತಿ । ತದಾಹ **ಪಂಚಮಶ್ರುತಿರಪಕೃಷ್ಟಾ ಭವತಿ** ಸರ್ವಸ್ವರೇಭ್ಯ ಇತಿ ಶೇಷಃ । ಸಾ ಚ ಪ್ರತ್ಯಕ್ಷಗಮ್ಯಾ ಗುಣವತೀತಿ ಭಾವಃ । [110]

ಧ್ರುವವೀಣೆ ಮತ್ತು ಚಲವೀಣೆಗಳಲ್ಲಿ ಉಪಯೋಗಿಸಿರುವ ಈ ಪ್ರಥಮಸಾರಣಾತಂತ್ರವು ಶ್ರುತಿಜ್ಞಾನ ರಹಸ್ಯಕ್ಕೆ ಬೀಗದಕೈಯಂತಿದೆ. ಆದುದರಿಂದ ಇದನ್ನು ಹೀಗೆ ಇನ್ನೂ ಸ್ಪಷ್ಟಗೊಳಿಸಬಹುದು :

ಉದ್ದ, ದಪ್ಪ ಮುಂತಾದವುಗಳಲ್ಲಿ ನಿಖರವಾಗಿ ಸಮವಾಗಿರುವ, ಏಳು ಏಳು ತಂತಿಗಳುಳ್ಳ ಎರಡು ವೀಣೆಗಳನ್ನು ತೆಗೆದುಕೊಳ್ಳಿ. [ವೀಣೆಯೆಂದರೆ ಈಗಿನ ರೂಪದಲ್ಲಿರುವ ವೀಣೆಯೆಂದು ತಪ್ಪು ತಿಳಿಯಬಾರದು. ಭರತ, ಅಭಿನವಗುಪ್ತ ಮತ್ತು ಶಾರ್ಙ್ಗದೇವರುಗಳು ಇಲ್ಲಿ ವೀಣೆಯೆಂದು ಹೇಳುತ್ತಿರುವುದು ಹಾರ್ಪ್‌ನಂತಹ ವಾದ್ಯವನ್ನು. ಇದರಲ್ಲಿ ಪ್ರತಿಯೊಂದು ತಂತಿಯನ್ನು ಮಿಡಿದಾಗಲೂ ಅದು ತನ್ನ ಇಡೀ ಉದ್ದದಲ್ಲಿ ಮುಕ್ತವಾಗಿ ಸ್ಪಂದಿಸಿ ತನ್ನ ಉದ್ದಕ್ಕೆ ಅನುಗುಣವಾದ ಸ್ವರವನ್ನು ಉಂಟುಮಾಡುತ್ತದೆ. ಮಿಕ್ಕೆಲ್ಲ ಸಂದರ್ಭಗಳೂ ಸಮನಾಗಿದ್ದರೆ ತಂತಿಯ ಉದ್ದವು ಹೆಚ್ಚಿದಷ್ಟೂ ಸ್ವರವು ಮಂದವಾಗುತ್ತದೆ ; ಉದ್ದವು ಕಡಿಮೆಯಾದಷ್ಟೂ ಸ್ವರವು ತೀವ್ರವಾಗುತ್ತದೆ. ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ—ಈ ಏಳು ಸ್ವರಗಳಲ್ಲಿ ಪ್ರತಿಯೊಂದನ್ನು ನುಡಿಯಲೂ ಒಂದೊಂದರಂತೆ ಒಟ್ಟು ಏಳು ತಂತಿಗಳು ಭರತನು ಹೇಳಿದ ಈ ಪ್ರಯೋಗದ ವೀಣೆಯಲ್ಲಿರುತ್ತವೆ. ಇವುಗಳಲ್ಲಿ ಸ, ರಿ, ಗ, ಮ, ಪ, ಧ, ನಿ—ಈ ಸ್ವರಗಳು ಕ್ರಮವಾಗಿ ತೀವ್ರವಾಗುವುದಕ್ಕೆ ಏಳು ತಂತಿಗಳಲ್ಲಿ ಆಯಾಯಾ ಸ್ವರಕ್ಕೆ ಆವಶ್ಯಕವಾದಷ್ಟು ತಂತಿಯ ಉದ್ದವನ್ನು ಕಡಿಮೆ ಮಾಡುವ ಅಥವಾ ಬಿಗಿಯನ್ನು ಹೆಚ್ಚುಮಾಡುವ ಸಾಧನವನ್ನು ಈ ವಾದ್ಯವು ಪಡೆದಿರಬೇಕು. ಈ ಸಾಧನವು ಪ್ರತಿಯೊಂದು ಸ್ವರವನ್ನೂ ಎಷ್ಟು ಬೇಕೆಂದರೆ ಅಷ್ಟು ತಗ್ಗಿಸುವ ಅಥವಾ ಏರಿಸುವ ರೀತಿಯದಾಗಿಯೂ ಸುಲಭವಾಗಿಯೂ ಇರಬೇಕು.

ಇಂತಹ ಎರಡು ವೀಣೆಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಇವುಗಳಲ್ಲಿ ಪ್ರತಿಯೊಂದನ್ನೂ ಆಯಾ ತಂತಿಯು ನುಡಿಯುವ ಸ್ವರವು ಕರಾರುವಾಕ್ಕಾಗಿ ಒಂದೇ ಮಟ್ಟದಲ್ಲಿರುವಂತೆ ಶ್ರುತಿಮಾಡಬೇಕು. ಉದಾಹರಣೆಗೆ ಒಂದು ವೀಣೆಯಲ್ಲಿ ಷಡ್ಜವನ್ನು ನುಡಿಯುವ ತಂತಿಯನ್ನೂ ಇನ್ನೊಂದರಲ್ಲಿ ಷಡ್ಜವನ್ನು ನುಡಿಯುವ ತಂತಿಯನ್ನೂ

110 ಅದೇ ಗ್ರಂಥ, ಅದೇ ಸಂದರ್ಭ, ಪು. 23.

ಒಂದಾದಮೇಲೊಂದರಂತೆ ಅಥವಾ ಒಟ್ಟಿಗೆ ಮಿಡಿದಾಗ ಉಂಟಾಗುವ ಧ್ವನಿಯು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಒಂದೇ ಆಗಿ ಕೇಳಿಸುವಂತೆ ಎರಡು ತಂತಿಗಳನ್ನು ಶ್ರುತಿಮಾಡಬೇಕು. ಮೊದಲನೆಯದರಲ್ಲಿ ಎರಡನೆಯ ತಂತಿಯನ್ನು ಮೊದಲನೆಯದಕ್ಕೆ ಶುದ್ಧ ಋಷಭ ಭಾವದಲ್ಲಿ ಇರುವಂತೆ ನಿಖರವಾಗಿ ಶ್ರುತಿಮಾಡಬೇಕು. ಎರಡನೆಯ ವೀಣೆಯಲ್ಲೂ ಎರಡನೆಯ ತಂತಿಯನ್ನು ಇದೇ ಭಾವದಲ್ಲಿ ಶ್ರುತಿಮಾಡಿ ಈ ಎರಡು ತಂತಿಗಳೂ ಪರಸ್ಪರವಾಗಿ ಒಂದೇ ಸ್ವರವನ್ನು ನುಡಿಯುವಂತೆ ಮೇಲಿನ ರೀತಿಯಲ್ಲಿ ಪರೀಕ್ಷೆಮಾಡಿ ಸಿದ್ಧಗೊಳಿಸಬೇಕು. ಇದೇ ರೀತಿಯಲ್ಲಿ ಮೊದಲನೆಯ ವೀಣೆಯಲ್ಲಿ ಷಡ್ಜಗ್ರಾಮದಲ್ಲಿರುವಂತೆ ಸ ರಿ ಗ ಮ ಪ ಧ ನಿ ಎಂಬ ಪರಸ್ಪರ ಭಾವಗಳನ್ನು ಸಿದ್ಧಗೊಳಿಸಬೇಕು. ಎರಡನೆಯ ವೀಣೆಯಲ್ಲಿಯೂ ಇದೇ ಪರಸ್ಪರ ಭಾವಗಳನ್ನು ಸಿದ್ಧಗೊಳಿಸಬೇಕು. ಈ ಎರಡು ವೀಣೆಗಳಲ್ಲಿಯೂ ಆಯಾ ಸ್ವರವನ್ನು ಉಂಟುಮಾಡುವ ಎರಡು ತಂತಿಗಳೂ ಒಂದೇ ಮಟ್ಟದ ನಾದ (pitch) ವನ್ನು ಕರಾರುವಾಕ್ಕಾಗಿ ನುಡಿಯುವಂತೆ ಶ್ರುತಿ ಮಾಡಿರಬೇಕು. ಇವುಗಳಲ್ಲಿ ಮೊದಲನೆಯದನ್ನು ಇದೇ ರೀತಿಯಲ್ಲಿ, ಎಂದರೆ ಷಡ್ಜಗ್ರಾಮದ ಸ್ವರವ್ಯವಸ್ಥೆಯಲ್ಲಿ, ಸ್ವಲ್ಪವೂ ವ್ಯತ್ಯಾಸಮಾಡದೆ ಇಡಬೇಕು. ಇದೇ ಧ್ರುವ ವೀಣೆ. ಇನ್ನೊಂದರಲ್ಲಿ ತಂತಿಗಳನ್ನು ಸಡಿಲಮಾಡುವುದರಿಂದ ಮುಂದೆ ಹೇಳುವ ರೀತಿಯಲ್ಲಿ ಸ್ವರಗಳನ್ನು ಮಂದಗೊಳಿಸುತ್ತಾ ಬರಬೇಕು. ಇದೇ ಚಲವೀಣೆ. ಹೀಗೆ ಚಲವೀಣೆಯಲ್ಲಿ ಸ್ವರವು ಯಾವುದಾದರೂ ತಂತಿಯಲ್ಲಿ ಮಂದವಾದಾಗ, ಈ ತಂತಿಯನ್ನೂ, ಧ್ರುವವೀಣೆಯಲ್ಲಿ ಅದೇ ಸ್ವರವನ್ನು ನುಡಿಯುವ ತಂತಿಯನ್ನೂ ಒಂದಾದಮೇಲೊಂದರಂತೆ ಅಥವಾ ಒಟ್ಟಿಗೆ ಮಿಡಿಯುವುದರಿಂದ, ಚಲವೀಣೆಯಲ್ಲಿ ಆಯಾ ಸ್ವರವು ಎಷ್ಟು ಮಂದವಾಗಿದೆಯೆಂಬುದನ್ನು ಅಳೆದು ಹೇಳಬಹುದು. ಈ ಹೋಲಿಕೆಯನ್ನು ಪುನಃ ಪುನಃ ಮಾಡುವುದಕ್ಕಾಗಿಯೇ ಒಂದನ್ನು ಧ್ರುವವೀಣೆಯೆಂದು ಪರಿಗಣಿಸಬೇಕು.

ಈಗ ಪ್ರಥಮಸಾರಣಾಕ್ರಿಯೆಯನ್ನು ಹೀಗೆ ಮಾಡಬೇಕು. ಚಲವೀಣೆಯಲ್ಲಿ ಪಂಚಮದ ತಂತಿಯನ್ನು ಒಂದು ಶ್ರುತಿಯು ಕಡಿಮೆಯಾಗುವಷ್ಟು ಸಡಿಲಗೊಳಿಸಬೇಕು. ಎಂದರೆ ಸ್ವರತ್ವವನ್ನು ಉಳಿಸಿಕೊಂಡು ಅತ್ಯಂತ ಕನಿಷ್ಠಗೋಚರವಾದ ಅಂತರವಿರುವಷ್ಟರಮಟ್ಟಿಗೆ ಚಲವೀಣೆಯ ಪಂಚಮವನ್ನು ಇಳಿಸಬೇಕು (ಎಂದರೆ ನೀಚಧ್ವನಿಯನ್ನು ಮಾಡಬೇಕು). ಈಗ ಧ್ರುವವೀಣೆಯ ಪಂಚಮದ ತಂತಿಯನ್ನೂ ಚಲವೀಣೆಯ ಪಂಚಮದ ತಂತಿಯನ್ನೂ ಮಿಡಿದರೆ ಇವೆರಡರ ನಡುವೆ ಯಾವ ನಾದಾಂತರವು ಗೋಚರಿಸುವುದೋ ಅದರ ಪ್ರಮಾಣವನ್ನು ಶ್ರುತಿಯೆಂದು ತಿಳಿಯಬೇಕು. ಹೀಗೆ ಚಲವೀಣೆಯ ಪಂಚಮವನ್ನು ಅಪಕೃಷ್ಟಗೊಳಿಸಿದುದರಿಂದ, ಎಂದರೆ ತಗ್ಗಿಸಿದುದರಿಂದ, ಚಲವೀಣೆಯಲ್ಲಿರುವ ಮಪಧನಿಸರಿಗ—ಈ ಸ್ವರಗಳ ತಂತಿಗಳನ್ನು ಕ್ರಮವಾಗಿ ಮಿಡಿದರೆ ಯಾವ ಸ್ವರಸಪ್ತಕವು ಲಭಿಸುವುದೋ ಅದೇ ಮಧ್ಯಮಗ್ರಾಮ.[111] ಈಗ ಧ್ರುವವೀಣೆ ಮತ್ತು ಚಲವೀಣೆಗಳ ಪಂಚಮದ ತಂತಿಗಳನ್ನು ಮಿಡಿಯುವಾಗ ಎಷ್ಟು ನಾದಾಂತರವು ಗೋಚರಿಸುವುದೋ, ನಿಖರವಾಗಿ ಅಷ್ಟೇ ಅಂತರವು ಧ್ರುವವೀಣೆಯ ಮಧ್ಯಮ—ಚಲವೀಣೆಯ ಮಧ್ಯಮ, ಧ್ರುವವೀಣೆಯ ಗಾಂಧಾರ—ಚಲವೀಣೆಯ ಗಾಂಧಾರ, ಹೀಗೆ ಇತರ ಸರಿಗಮಧನಿ ಎಂಬ ಆರು ಸ್ವರಗಳಲ್ಲಿಯೂ ಉಂಟಾಗುವಂತೆ ಚಲವೀಣೆಯ ಆಯಾ ಸ್ವರದ ತಂತಿಯನ್ನು ಸಡಿಲಗೊಳಿಸಬೇಕು. ಇದರಿಂದಾಗಿ ಚಲವೀಣೆಯಲ್ಲಿರುವ ಪ್ರತಿಯೊಂದು ಸ್ವರವೂ ಧ್ರುವವೀಣೆಯಲ್ಲಿರುವ ಆಯಾ ಸ್ವರಕ್ಕಿಂತ ಒಂದೊಂದು ಶ್ರುತಿಯಷ್ಟು ಕಡಿಮೆಯಾಗಿರುವುದು ಪ್ರತ್ಯಕ್ಷ ಪ್ರಯೋಗದಿಂದ ಸಿದ್ಧವಾಗುತ್ತದೆ. ಹೀಗೆ ಏಕಶ್ರುತಿಯ ಅಂತರವೆಂದರೆ ಎಷ್ಟು ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಇದರಲ್ಲಿ ಒಂದು ಸ್ವಾರಸ್ಯವಿರುವುದನ್ನು ಗಮನಿಸಬೇಕು. ಚಲವೀಣೆಯ ಪಂಚಮವನ್ನು ಈ ಪ್ರಥಮಸಾರಣಾಕ್ರಿಯೆಯಲ್ಲಿ ಇಳಿಸಿದ್ದರಿಂದ ಅದರಲ್ಲಿ

---

111 ಇದು ಸಂಪೂರ್ಣವಾಗಿ ಪ್ರತಿಬಿಂಬಿಸುವುದು ಭರತನ ಅಭಿಪ್ರಾಯವನ್ನಲ್ಲ, ಅಭಿನವಗುಪ್ತನವನ್ನು. ಇದರ ವಿಮರ್ಶೆಯನ್ನು ಮುಂದೆ ಮಾಡಿದೆ.

ಮಧ್ಯಮಗ್ರಾಮದ ಸ್ವರಸಪ್ತಕವು ಜನಿಸಿತೇನೋ ನಿಜ. ಇದಕ್ಕೆ ಕಾರಣವು ಎರಡೂ ಗ್ರಾಮಗಳಲ್ಲಿ ಭೇದವನ್ನು ಸ್ಪಷ್ಟಪಡಿಸುವ ಷಡ್ಜಗ್ರಾಮದ ವೈಶಿಷ್ಟ್ಯವಾದ ಚತುಃಶ್ರುತಿಕಪಂಚಮವು ಧ್ರುವವೀಣೆಯಲ್ಲಿರುವುದೂ ಮಧ್ಯಮ ಗ್ರಾಮದ ವೈಶಿಷ್ಟ್ಯವಾದ ತ್ರಿಶ್ರುತಿಕಪಂಚಮವು ಚಲವೀಣೆಯಲ್ಲಿದ್ದುದೇ ಆಗಿದೆ. ಆದರೆ ಚಲವೀಣೆಯ ಮಧ್ಯಮಕ್ಕೂ ಧ್ರುವವೀಣೆಯ ಮಧ್ಯಮಕ್ಕೂ ಈಗ ಒಂದು ಶ್ರುತಿಯ ವ್ಯತ್ಯಾಸವು ಪ್ರಾಪ್ತವಾಗಿದೆಯಷ್ಟೆ. ಪಂಚಮವೂ ಮಧ್ಯಮವೂ ಒಂದೊಂದು ಶ್ರುತಿಯಷ್ಟು ಇಳಿದುದರಿಂದ ಇವೆರಡರ ನಡುವೆ (ಮಧ್ಯಮಗ್ರಾಮ ವೈಶಿಷ್ಟ್ಯವಾದ) ತ್ರಿಶ್ರುತಿಕ ಅಂತರವು ಮಾಯವಾಗಿ ಚತುಃಶ್ರುತಿಕ ಅಂತರವೇ ಉಳಿಯಿತು. ಇದೇ ರೀತಿಯಲ್ಲಿ ಪಂಚಮವನ್ನು ಮಾತ್ರ ಇಳಿಸಿದಾಗ ಚಲವೀಣೆಯ ಪಂಚಮಧೈವತಗಳ ನಡುವೆ ಇದ್ದ (ಷಡ್ಜಗ್ರಾಮವೈಶಿಷ್ಟ್ಯ ವಾದ) ಮೂರು ಶ್ರುತಿಗಳ ಅಂತರವು ಪಂಚಮವು ಒಂದು ಶ್ರುತಿಯಷ್ಟು ಕೆಳಗೆ ಹೋಗಿದ್ದರಿಂದ, ಪಂಚಮವು ಕಳೆದುಕೊಂಡ (ನಾಲ್ಕನೆಯ) ಶ್ರುತಿಯನ್ನು ಅದರ ಮುಂದಿನ ಸ್ವರವಾದ ಧೈವತವೇ ವಹಿಸಿಕೊಂಡು ಅವುಗಳ ನಡುವೆ ಅಂತರವು ಮಧ್ಯಮಗ್ರಾಮವೈಶಿಷ್ಟ್ಯವಾದ ಚತುಃಶ್ರುತಿಯಾಗಿತ್ತು. ಆದರೆ ಪಂಚಮಕ್ಕೆ ಮಾಡಿದ ಪ್ರಥಮ ಸಾರಣಾಕ್ರಿಯೆಯನ್ನು ಧೈವತಕ್ಕೂ ಈಗ ಮಾಡುವುದರಿಂದ,—ಹಿಂದೆ ಪಂಚಮವು ಒಂದು ಶ್ರುತಿಯಷ್ಟು ಇಳಿದಿತ್ತು, ಈಗ ಧೈವತವೂ ಒಂದು ಶ್ರುತಿಯಷ್ಟು ಇಳಿಯಿತು; ಆದುದರಿಂದ—ಅವುಗಳ ನಡುವೆ ಎಂದಿನ ತ್ರಿಶ್ರುತಿಕ ಅಂತರವೇ ಉಳಿಯಿತು. ಇದು ಷಡ್ಜಗ್ರಾಮಕ್ಕೆ ವಿಶಿಷ್ಟವಾದುದು. ಇದೇ ರೀತಿಯಲ್ಲಿ ಉಳಿದ ಸ್ವರ ಗಳಲ್ಲಿ ಪ್ರತಿಯೊಂದೂ ಒಂದೊಂದು ಶ್ರುತಿಯಷ್ಟು ಇಳಿಯುವುದರಲ್ಲಿ ಅವುಗಳಲ್ಲಿ ಎಂದಿನ, ಎಂದರೆ ಪಂಚಮದ ಅಪಕೃಷ್ಟಕ್ಕಿಂತ ಮುಂಚೆ ಇದ್ದ, ಷಡ್ಜಗ್ರಾಮವೇ ಲಭಿಸಿತು. ಹೀಗೆ ಧ್ರುವವೀಣೆಯಲ್ಲಿಯೂ ಷಡ್ಜಗ್ರಾಮ, ಮಧ್ಯಮಗ್ರಾಮದಲ್ಲಿಯೂ ಷಡ್ಜಗ್ರಾಮವೇ ಆದರೂ ಸಪ್ತಸ್ವರಗಳಲ್ಲಿ ಪ್ರತಿಯೊಂದನ್ನೂ ಆಯಾಯಾ ತಂತಿ ಗಳನ್ನು ಮಿಡಿದು ನುಡಿಸಿದಾಗ ಒಂದೊಂದು ಸ್ವರದಲ್ಲಿಯೂ ಒಂದೊಂದು ಶ್ರುತಿಯ ವ್ಯತ್ಯಾಸವು ಸ್ಪಷ್ಟವಾಗಿ ಗೋಚರವಾಗುವುದು. ಇದೇ ಪ್ರಥಮಸಾರಣಾಕ್ರಿಯೆಯ ಪ್ರಯೋಜನ. ಇದು ಭಾರತೀಯ ಮೂಲಪಾಠದ 'ಏಕಶ್ರುತಿರಪಕೃಷ್ಟಾ ಭವತಿ' ಎಂಬುದರ ಅರ್ಥ.

ಹಾಗಾದರೆ ಈ ಸಂದರ್ಭದಲ್ಲಿ ಮತಂಗಮುನಿಯಿಂದ ಉದ್ಧೃತವಾದ ಭಾರತೀಯ ಪಾಠದಲ್ಲಿ 'ಪರಂ ವಿಶೇಷಲಾಭೋ ನಾಸ್ತಿ ; ಉಚ್ಚನೀಚಮಾತ್ರಪ್ರತೀತೇಃ ।'[105] ಎಂದಿದೆಯಲ್ಲ, ಇದರ ಅರ್ಥವೇನು ?

ಮೇಲೆ ಹೇಳಿದ ಸಾರಣಾಕ್ರಿಯೆಯಲ್ಲಿ ಮೂರು ವಿಧದ ಪ್ರಯೋಜನಗಳಿವೆ. ಮೊದಲನೆಯದಾಗಿ, ಷಡ್ಜ-ಗ್ರಾಮವನ್ನು ಪ್ರಕೃತಿಯೆಂದು ಭಾವಿಸಿ ಅದರ ಪಂಚಮದ ವಿಕೃತಿಯಿಂದ ಮಧ್ಯಮಗ್ರಾಮವನ್ನು ಷಡ್ಜಗ್ರಾಮದ ವಿಕೃತಿಯಾಗಿ ಪಡೆಯುವುದು ; ಮತ್ತು ಮಧ್ಯಮಗ್ರಾಮವು ಷಡ್ಜಗ್ರಾಮದಿಂದ ಹೇಗೆ ಭಿನ್ನವೆಂಬುದನ್ನು ಆಧಾರಭೂತವಾದ ಪ್ರಮೇಯವಾದ ಶ್ರುತಿಯಿಂದ—ಅದರಲ್ಲಿಯೂ ಒಂದು ಶ್ರುತಿಯಿಂದ, ಅದರಲ್ಲಿಯೂ ವಿಶೇಷ ವಾಗಿ ಸ್ವರಾಷ್ಟಕದ ಮುಖ್ಯ ಸ್ವರವಾದ ಪಂಚಮದಲ್ಲಿ ಒಂದು ಶ್ರುತಿಯ ಭಿನ್ನತೆಯಿಂದ, ತೋರಿಸಿಕೊಡುವುದು. ಎಲ್ಲಾ ಗೇಯಪ್ರಪಂಚವನ್ನೂ ಈ ಎರಡೇ ಗ್ರಾಮಗಳ ಹಾಗೂ ಅವುಗಳಿಂದ ಹುಟ್ಟಿದ ಮೂರ್ಛನೆ, ತಾನಗಳಿಂದ ಲಾಕ್ಷಣಿಕವಾಗಿ, ತಾತ್ತ್ವಿಕವಾಗಿ ಪಡೆಯಬಹುದಾದುದರಿಂದ, ಅವುಗಳಲ್ಲಿ ಒಂದನ್ನು ಮಾತ್ರ ಲಕ್ಷಣಪ್ರಮಾಣ ಭೂತವನ್ನಾಗಿ ಇಟ್ಟುಕೊಂಡು ಇನ್ನೊಂದನ್ನು ಅದರಿಂದಲೇ ಹೇಗೆ ತಾತ್ತ್ವಿಕವಾಗಿ ಪಡೆಯಬಹುದೆಂಬುದನ್ನು ತೋರಿಸುವುದೇ ಈ ಮೊದಲನೆಯ ಮುಖ್ಯ ಪ್ರಯೋಜನ. ಶುದ್ಧ ತಾತ್ತ್ವಿಕಕಲ್ಪನೆಯಾದ ಶ್ರುತಿಯ ಪ್ರಮಾಣ ವೆಷ್ಟೆಂದು ಸರ್ವಸಮ್ಮತವಾದ ರೀತಿಯಲ್ಲಿ, ಅನಾಂತರಿಕವಾದ ಕ್ರಮದಲ್ಲಿ, ಪ್ರಾಯೋಗಿಕವಾಗಿ ಅಳೆದು ತೋರಿಸು ವುದು ಎರಡನೆಯ ಪ್ರಯೋಜನ. ಮಾನವಕಂಠದಲ್ಲಾಗಲೀ, ಕೊಳಲು ಮುಂತಾದ ವಾದ್ಯಗಳಲ್ಲಾಗಲೀ ಈ ಅಂತರವನ್ನು ಹಾಡಿ, ನುಡಿಸಲು ಸಾಧ್ಯವಿಲ್ಲ. ಈ ಮಾತನ್ನು ನಾನ್ಯದೇವನೇ ಮೊದಲಾದ ಪೂರ್ವಾಚಾರ್ಯರೆಲ್ಲಾ

ಒಪ್ಪಿದ್ದಾರೆ. ಏಕೆಂದರೆ ಕಂಠದಲ್ಲಿ ಈ ಅಂತರವನ್ನು ಸ್ಥಾಪಿಸಬೇಕಾದರೆ ಒಂದೇ ಧ್ವನಿಮಟ್ಟದಲ್ಲಿ ಎರಡು ಬೇರೆ ಬೇರೆ ಕಂಠಗಳು ಷಡ್ಜಗ್ರಾಮದ ಪಂಚಮವನ್ನು ಹಾಡುತ್ತಿದ್ದು ಅನಂತರ ಅವುಗಳಲ್ಲಿ ಒಂದು ಅದೇ ಸ್ವರದಲ್ಲಿ ಮುಂದುವರಿಯುತ್ತಿರುವಾಗ ಇನ್ನೊಂದು ಕಂಠವು ಒಂದು ಶ್ರುತಿಯಷ್ಟು ಎಂದರೆ ಅತ್ಯಲ್ಪಪ್ರಮಾಣದಲ್ಲಿ ಇಳಿಸಿಕೊಂಡು ಪಂಚಮವನ್ನು ಹಾಡುತ್ತಿದ್ದಾಗ ಮಾತ್ರ ಈ ವ್ಯತ್ಯಾಸವು ಭಾಸವಾಗಬಲ್ಲುದು. ತಂತಿಯಲ್ಲಿ ಮಾಡಿದಷ್ಟು ಸುಲಭವಾಗಿ ಈ ಅಪಕೃಷ್ಟ ಕಾರ್ಯವನ್ನು ಮಾನವಶಾರೀರದಲ್ಲಿ ಮಾಡಲಾಗದೆಂದೂ, ಹಾಗೆ ಅಪಕೃಷ್ಟವಾದ ಅಂತರವನ್ನು ಸುಲಭವಾಗಿ ಉಂಟುಮಾಡಬಹುದಾದ ರೀತಿಯಲ್ಲಿ ಕಂಠವಾದ್ಯದ ಉಪಕರಣಗಳು ರಚಿತವಾಗಿಲ್ಲವೆಂದೂ, ಅಪಕೃಷ್ಟವಾದ ಅಂತರವು ಒಂದೇ ಪ್ರಮಾಣದಲ್ಲಿರುವಂತೆ ವಿವಿಧ ಶಾರೀರಗಳು ಉತ್ಪತ್ತಿಮಾಡುವುದು ದುಸ್ಸಾಧ್ಯವೆಂದೂ ಅನುಭವಸಿದ್ಧವಾಗಿದೆ. ಕೊಳಲಿನಲ್ಲಿ ಸ್ವರಗಳನ್ನುಂಟುಮಾಡುವ ರಂಧ್ರಗಳು ಒಂದೇ ಸಲಕ್ಕೆ ನಿಶ್ಚಿತವಾಗಿ ಸ್ಥಾಪಿತವಾಗಿದ್ದು ಅವುಗಳನ್ನು ಅಲ್ಪಾಂತರಗಳನ್ನುಂಟುಮಾಡುವ ರೀತಿಯಲ್ಲಿ ವ್ಯತ್ಯಾಸಮಾಡಲು ಸಾಧ್ಯವಿಲ್ಲ. ತತ, ಸುಷಿರ, ಅವನದ್ಧ ಮತ್ತು ಘನವೆಂಬ ನಾಲ್ಕೂ ವಿಧದ ಸಂಗೀತವಾದ್ಯಗಳಲ್ಲಿ ವಿವಿಧ ಗೀತಪ್ರಯುಕ್ತ ಸ್ವರಗಳನ್ನುಂಟುಮಾಡುವವುಗಳು- ಆಧುನಿಕ ತಬಲಾ ತರಂಗ್ ವಾದ್ಯವನ್ನು ಬಿಟ್ಟರೆ—ತತ ಮತ್ತು ಸುಷಿರಗಳೇ. ತಬಲಾತರಂಗಿನಲ್ಲಾದರೂ ಎಲ್ಲಾ ಸ್ವರಗಳನ್ನೂ ಒಂದೇ ವಾದ್ಯದಲ್ಲಿ ಪಡೆಯಲಾಗುವುದಿಲ್ಲವಷ್ಟೆ. ಕೊಳಲು ಮುಂತಾದ ಸುಷಿರವಾದ್ಯಗಳಿಂದ ಮೇಲಿನ ಸಾರಣಕ್ರಿಯೆಯು ಹೇಗೆ ಸುಲಭಸಾಧ್ಯವಲ್ಲವೆಂಬುದನ್ನು ಈಗಾಗಲೇ ಸೂಚಿಸಿದೆ. ಜಲತರಂಗಿನಂತಹ ವಾದ್ಯದಲ್ಲಿ ಈ ಪ್ರಯೋಗವನ್ನೇನೋ ಸುಲಭವಾಗಿಯೇ ಮಾಡಿ ತೋರಿಸಬಹುದು. ಏಕೆಂದರೆ ಅದರ ಬಟ್ಟಲುಗಳಲ್ಲಿರುವ ನೀರಿನ ಪ್ರಮಾಣವನ್ನು ಎಷ್ಟು ಬೇಕೆಂದರೆ ಅಷ್ಟು ವ್ಯತ್ಯಾಸ ಮಾಡಿಕೊಳ್ಳಬಹುದು. ಈ ವಾದ್ಯವು ಭರತನೇ ಮೊದಲಾದ ಪೂರ್ವಾಚಾರ್ಯರಿಗೆ ತಿಳಿದಿತ್ತೋ ಇಲ್ಲವೋ ನಮಗೆ ತಿಳಿಯದು. ಇದು ಹೇಗಾದರೂ ಇರಲಿ, ತಂತಿಯ ವಾದ್ಯದಲ್ಲಿ ನಾದಪ್ರಮಾಣವನ್ನು ತೈಲಧಾರೆಯಂತೆ ಅವಿಚ್ಛಿನ್ನವಾಗಿ, ಧ್ವನಿಯು ಏಕಾಂಡವಾಗಿ ಇರುವಂತೆ ವ್ಯತ್ಯಾಸಮಾಡಲು ಆಗುವಂತೆ ಜಲತರಂಗಿನಂತಹ ವಾದ್ಯಗಳಲ್ಲಿ ಆಗದು. ಇದರಿಂದಲೇ ತತವಾದ್ಯದ ಮೂಲಕ ಈ ಪ್ರಯೋಗವನ್ನು ಪೂರ್ವಾಚಾರರು ವಿವರಿಸಿರಬೇಕು. ಇಂದಿನ ರೀತಿಯಲ್ಲಿ ಮೆಟ್ಟು ಮುಂತಾದ ಉಪಕರಣಗಳಿದ್ದು ಒಂದೇ ತಂತಿಯಲ್ಲಿ ವಿವಿಧ ಸ್ವರಗಳು ಹುಟ್ಟುವ ವೀಣೆಯಲ್ಲಿ ಮೇಲ್ಕಂಡ ಅಂತರಗಳನ್ನು ಉಂಟುಮಾಡುವುದಕ್ಕಿಂತಲೂ ಇಡೀ ತಂತಿಯನ್ನೇ ಸಡಿಲಗೊಳಿಸಿ ಉಂಟುಮಾಡುವುದು ಹೆಚ್ಚು ಸುಲಭವಾದುದರಿಂದ ಹಾರ್ಪ್ ಬಗೆಯ ವಾದ್ಯವನ್ನೇ ಭರತನೂ ಅವನನ್ನು ಅನುಸರಿಸಿದ ಮತಂಗ, ಅಭಿನವಗುಪ್ತ, ಶಾರ್ಙ್ಗದೇವ ಮುಂತಾದವರೂ ಇಲ್ಲಿ ಹೇಳಿದ್ದಾರೆ. ಇದೇ ಅತ್ಯಂತ ಅನಾಂತರಿಕವಾದ ವೈಜ್ಞಾನಿಕ ಕ್ರಮವಾದುದರಿಂದ, ಏಕಶ್ರುತಿಯ ಪ್ರಮಾಣವನ್ನು ಹೀಗೆ ಬೋಧಿಸಿದೆ. ಮೂರನೆಯ ಪ್ರಯೋಜನವೆಂದರೆ ಒಂದು ಸ್ಥಾಯಿಯ ನಾದವ್ಯಾಪ್ತಿಯಲ್ಲಿ ಇಪ್ಪತ್ತೆರಡು ಶ್ರುತಿಗಳಿರುತ್ತವೆಂದು ತೋರಿಸಲು ಇದು ಮೊದಲನೆಯ ಹಂತ. ಇದು ಇಲ್ಲದಿದ್ದರೆ ಎರಡನೆಯ ಮತ್ತು ಮುಂದಿನ ಸಾರಣಾಕ್ರಿಯೆಗಳನ್ನು ಮಾಡುವುದು ಅಸಾಧ್ಯವಾಗುತ್ತದೆ. ಏಕೆಂದರೆ ಇದರಲ್ಲಿ ಸಿದ್ಧವಾದ ಪ್ರಮಾಣಭೂತವಾದ ತಂತ್ರವನ್ನೇ ಈ ಉಳಿದ ಸಾರಣಾಕ್ರಿಯೆಗಳಲ್ಲಿ ಪುನಃ ಪುನಃ ಪ್ರಯೋಗಿಸಲಾಗುವುದು. ಇಲ್ಲಿ ನಾದಾಂತರವು ಎಂದರೆ ಶ್ರುತಿಯು ಪರಮಾಣುವಿನಂತೆ ಅತ್ಯಲ್ಪ ಸ್ವರೂಪದಲ್ಲಿ ಗೋಚರಿಸಿದರೂ ದ್ವಾವಿಂಶತಿ ಶ್ರುತಿಗಳ ಪ್ರಾಯೋಗಿಕ ಜ್ಞಾನವೇ ಇದರಿಂದಾಗುವ ಪ್ರಯೋಜನ ಎಂಬುದನ್ನು ಅಭಿನವಗುಪ್ತನು 'ಯದ್ಯಪಿ ಪರಮಾಣುಮಾತ್ರೇಽಪಿ ಸ್ಥಾನಾಂತರೇ ಯೋಗಿಪ್ರಾಯ (ಸಮಾಧಿ)ಸಮಧಿಗಮ್ಯ-ಧ್ವನಿವೈಲಕ್ಷಣ್ಯಂ ಭವತಿ, ತಥಾಪಿ ಯದ್ವೈಲಕ್ಷಣ್ಯಂ ಶ್ರುತಿಶಬ್ದವಾಚ್ಯಮಿತಿ ದರ್ಶಯನ್ ಶ್ರುತಿಸಂಖ್ಯಾಪರಿಜ್ಞಾನಾರ್ಥಂ ಶ್ರುತಿ ಚತುಷ್ಟಯೋಪಲಬ್ಧಂ ದರ್ಶಯತಿ'[110] ಎಂಬ ಮಾತುಗಳಲ್ಲಿ ಹೇಳಿದ್ದಾನೆ.

ಹಾಗಾದರೆ 'ವಿಶೇಷ ಲಾಭೋ ನಾಸ್ತಿ, ಉಚ್ಚನೀಚಮಾತ್ರಪ್ರತೀತೇಃ' ಎಂದು ಏಕೆ ಹೇಳಿದೆ?

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಏಕೆಂದರೆ ಇಪ್ಪತ್ತೆರಡು ಶ್ರುತಿಗಳು ಎಂಬ ಇಯತ್ತೆ (ಇಷ್ಟೇ ಎಂದು ನಿಖರವಾಗಿ ಅಳೆದು ತೀರ್ಮಾನಿಸಿದ ಮೊತ್ತ, exactitude) ಯನ್ನೇ ಮುಖ್ಯ ಪ್ರತಿಜ್ಞೆಯನ್ನಾಗಿ ಉಳ್ಳ ಈ ಪ್ರಯೋಗದ ಸಾಧನಕ್ಕೆ ಈ ಪ್ರಥಮ ಸಾರಣಾಮಾತ್ರದಿಂದ ವಿಶೇಷ ಲಾಭವೇನೂ ಇಲ್ಲ ಎಂದು ಇಲ್ಲಿ ಅರ್ಥ ; ಏಕೆಂದರೆ ಒಂದು ಶ್ರುತಿಯ ಪ್ರಮಾಣದಲ್ಲಿ ಚಲವೀಣೆಯ ಪ್ರತಿಯೊಂದು ಸ್ವರವೂ ಧ್ರುವವೀಣೆಯ ಆಯಾ ಸ್ವರಕ್ಕಿಂತ ನೀಚವಾಗಿ ಪ್ರತೀತವಾಗಿ ಇವೆರಡರ ಉಚ್ಚನೀಚಭಾವಗಳು ಮಾತ್ರ ಪ್ರತೀತವಾಗುತ್ತವೆಯೇ ಹೊರತು, ಇಂತಹವು ಒಂದು ಸ್ಥಾಯಿಯಲ್ಲಿ ಇಪ್ಪತ್ತೆರಡು ಇವೆ ಎಂಬುದೇನೂ ಇದರಿಂದ ತಿಳಿಯುವುದಿಲ್ಲ. ಇದೇ ಈ ಮಾತಿನ ಸಾಮಾನ್ಯಾರ್ಥವಾದರೂ ಇಲ್ಲಿರುವ ವಿಶೇಷ ಅಭಿಸಂಧಿಯನ್ನು ಹೀಗೆ ಹೊರಡಿಸಬೇಕು : 'ಉಚ್ಚನೀಚಮಾತ್ರಪ್ರತೀತೇಃ' ಎಂದರೆ ಭಿನ್ನ ಸ್ವರತ್ವವನ್ನುಂಟು ಮಾಡುವಂತಹ, ಎಂದರೆ ಅಷ್ಟು, ಉಚ್ಚನೀಚಭಾವವು ಇಲ್ಲಿ ಉಂಟಾಗುವುದಿಲ್ಲ. ಎಂದರೆ ಷಡ್ಜಗ್ರಾಮದ ಪಂಚಮ ಮತ್ತು ಮಧ್ಯಮ ಗ್ರಾಮದ ಪಂಚಮಗಳು ಕ್ರಮವಾಗಿ ಹೆಚ್ಚು ಮತ್ತು ಕಡಿಮೆ ಎಂಬಷ್ಟು ಉಚ್ಚನೀಚಭಾವ ವನ್ನು ಒಳಗೊಂಡಿದ್ದರೂ ಅವು ಬೇರೆ ಬೇರೆ ಸ್ವರಗಳಲ್ಲ. ಈ ಎರಡು ಗ್ರಾಮಗಳಲ್ಲಿಯೂ ಪಂಚಮವನ್ನುಳಿದ ಇತರ ಸ್ವರಗಳು ನಾದದಲ್ಲಿ ಅನ್ಯೂನಾತಿರಿಕ್ತವಾಗಿ ಏಕೀಭಾವವನ್ನು ಹೊಂದಿವೆ. ಈ ಗ್ರಾಮಗಳಲ್ಲಿ ಭಿನ್ನತೆಯಿರು ವುದು ಪಂಚಮವೊಂದರಲ್ಲೇ. ಆದರೂ ಈ ಎರಡೂ ಪಂಚಮಗಳೂ ಬೇರೆ ಬೇರೆ ಸ್ವರಗಳು ಎನ್ನಿಸಿಕೊಳ್ಳುವಷ್ಟರ ಮಟ್ಟಿನ ಉಚ್ಚನೀಚಭಾವವನ್ನು ಪಡೆದಿಲ್ಲ. ಆದುದರಿಂದಲೇ ಮಧ್ಯಮಗ್ರಾಮದ ಪಂಚಮವು (ವಿಕೃತವಾದರೂ) ಪಂಚಮವೆಂಬ ಸಂಜ್ಞೆಯನ್ನೇ ಪಡೆದಿರುವುದು. ಎಂದರೆ ಭಿನ್ನಸ್ವರತ್ವವನ್ನು ಉಂಟುಮಾಡುವ ಎರಡು ನಾದದ ಸ್ಥಾನಗಳಲ್ಲಿ ಅತ್ಯಲ್ಪ ಪ್ರಮಾಣದ ಅಂತರವಿದ್ದರೆ, ಎಂದರೆ ಕೇವಲ ಉಚ್ಚನೀಚ ಭಾವವನ್ನು ಉಂಟುಮಾಡುವಷ್ಟು ವ್ಯತ್ಯಾಸವಿದ್ದರೆ ಸಾಲದು, ಈ ಉಚ್ಚನೀಚಭಾವವು ಕಡೆಯಪಕ್ಷದಲ್ಲಿ ಇಷ್ಟಾದರೂ ಇರಬೇಕು ಎಂದು ಇಯತ್ತೆ ಯಲ್ಲಿ ಹೇಳಬಹುದಾದ ರೀತಿಯಲ್ಲಿರಬೇಕು, ಎಂಬುದು ಇಲ್ಲಿನ ತಾತ್ಪರ್ಯ. ದ್ವಾವಿಂಶತಿ ಶ್ರುತಿಗಳನ್ನು ಅಳೆಯ ಬೇಕಾದುದು ಲಕ್ಷ್ಯಪ್ರಸಿದ್ಧವಾದ ವಿವಿಧ ಸ್ವರಗಳಲ್ಲಿ ಎಂದರೆ ಇಂತಿಂತಹ ಸ್ವರಗಳು ಇಷ್ಟಿಷ್ಟು ಶ್ರುತಿಗಳಿವೆ, ಉದಾಹರಣೆಗೆ ಈ ಈ ಸ್ವರಗಳು ದ್ವಿಶ್ರುತಿಕಗಳು, ಇವು ತ್ರಿಶ್ರುತಿಕಗಳು, ಇವು ಚತುಃಶ್ರುತಿಕಗಳು, ಇವುಗಳ ಅಂತರ ಗಳನ್ನೆಲ್ಲಾ ಕೂಡಿದರೆ ಒಟ್ಟು ಇಪ್ಪತ್ತೆರಡು ಶ್ರುತಿಗಳು ಲಭಿಸುತ್ತವೆ, ಎಂದು ಹೇಳುವುದರ ಮೂಲಕವಷ್ಟೆ. ಒಂದು ಧ್ವನಿಗೂ ಇನ್ನೊಂದಕ್ಕೂ ಮಧ್ಯದಲ್ಲಿ ಸ್ವರತ್ವಕ್ಕೆ ಬೇಕಾದಷ್ಟು ಅಂತರವು ಗೋಚರವಾಗಬೇಕಾದರೆ, ಎಂದರೆ ನಾದಕ್ಕೆ ಸ್ವರತ್ವವು ಸಿದ್ಧಿಸಬೇಕಾದರೆ, ಈ ಅಂತರವು ಎರಡು ಶ್ರುತಿಗಳಷ್ಟಾದರೂ ಇರಬೇಕು ಎಂಬುದು ಲಕ್ಷ್ಯ ಪ್ರಸಿದ್ಧವೂ ಶಾಸ್ತ್ರಸಿದ್ಧವೂ ಆದ ಪ್ರಮೇಯ. ಪ್ರಥಮ ಸಾರಣಾಕ್ರಿಯೆಯಲ್ಲಿ ಏಕಶ್ರುತಿ ವ್ಯತ್ಯಾಸವು ಮಾತ್ರ ಸಿದ್ಧಿಸುವುದರಿಂದ ಅದೇ ಸ್ವರವು ಸ್ವಲ್ಪ ಧ್ರುವವೀಣೆಯಲ್ಲಿ) ಉಚ್ಚವಾಗಿದೆ ಅಥವಾ (ಚಲವೀಣೆಯಲ್ಲಿ) ನೀಚವಾಗಿದೆ ಎಂದು ಇಲ್ಲಿ ಹೇಳಬಹುದೇ ಹೊರತು ಬೇರೆ ಸ್ವರವು ಹುಟ್ಟುವುದಿಲ್ಲ. ಹೀಗೆ ಬೇರೆ ಸ್ವರವು ಹುಟ್ಟಿದಾಗ ಮಾತ್ರ ಆಯಾ ಅಂತರವನ್ನು ಶ್ರುತಿಗಳ ಲೆಕ್ಕದಲ್ಲಿ ಅಳೆದು ಎಣಿಸುವುದು ಈ ಪ್ರಯೋಗದ ಉದ್ದೇಶ. ಉದಾಹರಣೆಗೆ ಚಲವೀಣೆಯ ಗಾಂಧಾರವನ್ನು ಈ ಸಾರಣೆಯಲ್ಲಿ ಇಳಿಸಿದಾಗ ಅದು ಬೇರೆ ಸ್ವರವಾಗುವುದಿಲ್ಲ ; ಸ್ವಸ್ಥಾನ ಸಹಜ ವಾದ ಗಾಂಧಾರಕ್ಕೆ ನೀಚಮಾತ್ರವೂ ಅದರ ಹಿಂದಿನ ಸ್ವರವಾದ ಋಷಭಕ್ಕೆ ಉಚ್ಚಮಾತ್ರವೂ ಆಗಿರುತ್ತದೆ. ಈ ಸ್ಥಾನದಲ್ಲಿ ಅದಕ್ಕೆ ಲಕ್ಷ್ಯಪ್ರಯುಕ್ತಿ ಇರುವುದಿಲ್ಲ. ಆದುದರಿಂದ ಈ ಸ್ವರದಿಂದ ಶಾಸ್ತ್ರಕ್ಕಾಗಲೀ ಲಕ್ಷ್ಯಕ್ಕಾಗಲೀ ವಿಶೇಷ ಲಾಭವೇನೂ ಇಲ್ಲ. ಹೀಗೆಯೇ ಇತರ ಸ್ವರಗಳ ಅಪಕೃಷ್ಟವನ್ನು ತಿಳಿಯಬೇಕು. ಆದುದರಿಂದಲೇ ಈ ಸಾರಣೆಯಿಂದ 'ವಿಶೇಷಲಾಭೋ ನಾಸ್ತಿ, ಉಚ್ಚನೀಚ ಮಾತ್ರಪ್ರತೀತೇಃ.'

ಇದೇ ಮಾತಿನಲ್ಲಿ ಇನ್ನೂ ಒಂದು ಮುಖ್ಯವಾದ ಧ್ವನಿಯನ್ನು ತಿಳಿಯಬಹುದು. ಧ್ವನಿಯ ಉಚ್ಚನೀಚ ಮಾತ್ರದಿಂದ ಸ್ವರತ್ವವು ಪ್ರಾಪ್ತವಾಗುವುದಿಲ್ಲವೆಂಬ ಈ ಮಾತಿನಲ್ಲಿ ಸಂಗೀತಕ್ಕೆ ಬಹು ಮುಖ್ಯವಾದ ಒಂದು

ಭೌತಿಕ ನಾದಶಾಸ್ತ್ರಪ್ರಮೇಯವನ್ನು ಹೊರಡಿಸಬಹುದು. ನಾದಕ್ಕೆ ಸ್ವರತ್ವವು ಪ್ರಾಪ್ತವಾಗುವುದು ಕೇವಲ ಒಂದೇ ರೀತಿಯ ಕಂಪನಗಳನ್ನು (oscillations) ನಿರ್ದಿಷ್ಟವೂ ಏಕರೂಪದ್ದೂ ಆಗಿರುವ ಕಂಪಮಾನವನ್ನು (frequency) ಉಂಟುಮಾಡುವ ವಸ್ತುಗಳ ಸಂಘಾತದಿಂದಾಗಲೀ, ಇಂತಹ ನಿರ್ದಿಷ್ಟ ಕಂಪಮಾನಗಳನ್ನು ವಾಯುವು ಉಪಬೃಂಹಿಸಿ ಅವುಗಳ ತೀಕ್ಷ್ಣತೆ (intensity) ಯನ್ನು ಶ್ರಾವ್ಯತೆಯ ಪರಿಮಿತಿಯೊಳಕ್ಕೆ ತಂದು ಕೊಡುವುದರಿಂದಾಗಲೀ (ಇದನ್ನು ಅಭಿನವಗುಪ್ತನು 'ಶ್ರುತಿಸ್ಥಾನೇ ಸಮಿಾರಣಾಭಿಘಾತಜಾತ್ ಶಬ್ದಾತ್' ಎಂದು ಹೇಳಿದ್ದಾನೆ) ಅಲ್ಲ. ರಕ್ತಿಯೆಂಬ ಧರ್ಮವನ್ನು ಪಡೆಯುವುದರಿಂದಲೇ ಶ್ರುತಿಗೆ ಸ್ವರತ್ವದ ಪ್ರಾಪ್ತಿಯಾಗುತ್ತದೆ. ಇದು ಉಂಟಾಗಬೇಕಾದರೆ ಶ್ರುತಿಯೊಡನೆಯೇ ಎಡೆಬಿಡದೆ ಅನುರಣನವು ಹುಟ್ಟಬೇಕು. ಇದು ಆಧಾರವೆಂದು ಪರಿಗಣಿಸಿದ ಕಂಪಮಾನವು ವಾತಾವರಣದಲ್ಲಿ ತನ್ನ ಪೂರ್ಣಾಂಕ ಗಣಕ (integral multiples) ಗಳಾದ ಅನೇಕ ಆವರ್ತನ ಕಂಪಮಾನಗಳನ್ನು ಉಂಟುಮಾಡಿಕೊಳ್ಳುತ್ತದೆ. ಇವುಗಳು ಅಲ್ಪ ತೀಕ್ಷ್ಣವೂ ಅಲ್ಪ ನಾದಕಗಳೂ ಆಗಿದ್ದರೂ ಇವುಗಳೆಲ್ಲವೂ ಮೊತ್ತದಲ್ಲಿ ಸೇರಿ ಒಂದೇ ನಾದದ ಅನುಭವವನ್ನು ತಂದುಕೊಡುತ್ತವೆ. ಇದನ್ನೇ ನಾವು ಸ್ವರವೆನ್ನುತ್ತೇವೆ. ಈ ಅನುರಣನಕಾರಣವಾದ ಆವರ್ತಕಗಳಲ್ಲಿ ಕೆಲವು ಸಂಖ್ಯೆಯಲ್ಲೂ ತೀಕ್ಷ್ಣತೆಯಲ್ಲೂ ಪ್ರಧಾನವಾಗಿದ್ದರೆ ಸ್ವರದ ರಂಜಕತ್ವವೂ ಹೆಚ್ಚಾಗುತ್ತದೆ. ಸ್ವರವು ಪುಷ್ಟಿ, ಪ್ರಕಾಶ, ಸಾಂದ್ರತೆ ಮುಂತಾದವುಗಳನ್ನು ಪಡೆಯುವುದು ಇವುಗಳ ಬಾಹುಳ್ಯ ಮತ್ತು ಆಧಿಕ್ಯದಿಂದಲೇ. ಬೇರೆ ಕೆಲವು ಆವರ್ತಕಗಳ ಬಾಹುಳ್ಯ ಮತ್ತು ಆಧಿಕ್ಯಗಳಿದ್ದರೆ ಸ್ವರವು ಅಲ್ಪರಂಜಕವಾಗುತ್ತದೆ. ಯಾವುದಾದರೊಂದು ನಾದಸ್ಥಾನವನ್ನು ಆಧಾರವಾಗಿ ಇಟ್ಟುಕೊಂಡು ಊರ್ಧ್ವಗತಿಯಲ್ಲಿ ಅದನ್ನು ತೀವ್ರಗೊಳಿಸುತ್ತಾ ನಡೆದರೆ ಉಚ್ಚನೀಚ ಭಾವಗಳಿಂದ ಪ್ರತ್ಯೇಕವಾದ ಸ್ಥಾನಗಳೆಂದು ಗುರುತಿಸಬಹುದಾದ ಅನೇಕ ಸೋಪಾನಗಳು ದೊರೆತರೂ ಇವುಗಳು ಪ್ರತ್ಯೇಕವಾಗಿ ಉಂಟುಮಾಡುವ ಆವರ್ತಕನಾದಗಳು ಸ್ವರತ್ವಕ್ಕೆ ಬೇಕಾದ ಗುಣಗಳನ್ನು ಒಟ್ಟುಗೂಡಿದಾಗ ಉಂಟುಮಾಡಲಾರವು. ಇವು ಇತರ ಸ್ಥಾಯಿಗಳಲ್ಲಿ ಪ್ರತಿಬಿಂಬರೂಪದ ಸಾದೃಶ್ಯ, ಸ್ಥಿತಿಗಳನ್ನು ಪಡೆಯಲಾರವು. ಆದುದರಿಂದಲೇ ಇವೆಲ್ಲಕ್ಕೂ ಸ್ವರವೆಂದು ಸಂಜ್ಞೆಯನ್ನು ಪಡೆಯುವ ಅರ್ಹತೆಯಿರುವುದಿಲ್ಲ. ಸ್ವರತ್ವಕ್ಕೆ ಬೇಕಾದ ಪೃಥಕ್ತ್ವವೂ, ವಾದಿ ಸಂವಾದಿ ಮೊದಲಾದ ಸಂಬಂಧಗಳೂ ಈ ಉಚ್ಚನೀಚ ಭಾವ ಮಾತ್ರದಿಂದ ಗೋಚರವಾಗುವ 'ಮೆಟ್ಟಲು'ಗಳಿಗೆ ಇರುವುದಿಲ್ಲ. ಮೆಟ್ಟಲುಗಳು ಅತಿ ಕಡಿದಾದರೆ ಹತ್ತುವುದು ಹೇಗೆ ಕಷ್ಟವೋ, ಅತಿ ಸಮಿಾಪವಾದರೂ ಅಷ್ಟೇ ಕಷ್ಟವಾಗುವುದು ಹೌದಷ್ಟೆ; ಆಗ ಸ್ವಾಭಾವಿಕವಾಗಿಯೇ ಅಂತಹ ಎರಡು, ಮೂರು, ನಾಲ್ಕನ್ನು ಒಟ್ಟೊಟ್ಟಾಗಿ ದಾಟಿಕೊಂಡುಹೋಗುವ ಪ್ರವೃತ್ತಿಯು ಹೇಗೆ ಸಹಜವೋ, ಹಾಗೆಯೇ ಅತ್ಯಂತ ಕನಿಷ್ಠಾಂತರದಲ್ಲಿ ಗೋಚರವಾಗಿರುವ ಶ್ರುತಿಗಳು ಅತ್ಯಂತ ಸಮಿಾಪದ ಮೆಟ್ಟಲುಗಳಂತೆ ಶಾರೀರವಾಗಲೀ ಕಿವಿಯಾಗಲೀ ಇವುಗಳನ್ನು ಒಂದೊಂದಾಗಿ ಏರಿಹೋದರೆ ಗ್ರಹಿಸುವುದು ಸುಲಭವೂ ಅಲ್ಲ, ಹಾಗೆ ಗ್ರಹಿಸುವುದು ಅವುಗಳ ಸಹಜ ಪ್ರವೃತ್ತಿಯೂ ಅಲ್ಲ. ಆದುದರಿಂದಲೇ ಅವುಗಳನ್ನು ಎರಡು, ಮೂರು, ನಾಲ್ಕು ಹೀಗೆ ಒಟ್ಟೊಟ್ಟಾಗಿ ದಾಟಿ ಗ್ರಹಿಸುವ ಪ್ರವೃತ್ತಿಯನ್ನು ಅವು ಹೊಂದಿರುತ್ತವೆ. ಈ ಅಂತರಗಳಲ್ಲಿ ಅಭಿವ್ಯಕ್ತವಾಗುವ ಶ್ರುತಿಸ್ಥಾನಗಳನ್ನೇ ಸ್ವರಗಳೆಂದು ವ್ಯವಹರಿಸಿದೆ. ಎರಡಕ್ಕಿಂತ ಕಡಿಮೆಯೂ ನಾಲ್ಕಕ್ಕಿಂತ ಹೆಚ್ಚೂ ಆದರೆ ಶಾರೀರದ ಏರಿಕೆ ಅಥವಾ ಇಳಿಯುವಿಕೆಯು ಅಥವಾ ಶ್ರೋತ್ರೇಂದ್ರಿಯ ಗ್ರಹಣವು ಕ್ರಮವಾಗಿ ಅತಿ ಸಮಿಾಪ ಅಥವಾ ಅತಿ ಕಡಿದು ಆಗಿ ರಂಜಕತ್ವವು ನಾಶವಾಗುತ್ತದೆ. ಆದುದರಿಂದಲೇ ಪೂರ್ವಾಚಾರ್ಯರು ಎರಡು ಶ್ರುತಿಗಳ ಅಂತರಕ್ಕಿಂತ ಕಡಿಮೆಯಾದ ಅಥವಾ ನಾಲ್ಕು ಶ್ರುತಿಗಳಿಗಿಂತ ಹೆಚ್ಚಾದ ಸ್ವರಗಳನ್ನು ಹೇಳಲಿಲ್ಲ. ಷಟ್‌ಶ್ರುತಿಕವಾದ ಋಷಭ ಧೈವತಗಳು ಲಕ್ಷ್ಯಪ್ರಯೋಗದಲ್ಲಿ ಯಾವಾಗಲೂ ಕಡಿಮೆಯಾಗಿರುವುದು ಇದಕ್ಕಾಗಿಯೇ. ಅವುಗಳು ಪ್ರಯೋಗವಾದಾಗ ರಂಜನೆಯನ್ನು ವಾದಿ ಸಂವಾದಿ ಮುಂತಾದ ಭಾವಗಳಲ್ಲಿ ಮಾಡದೆ ವೈದೃಶ್ಯ(contrast)ದಿಂದ ಮಾಡುತ್ತವೆ. ಪ್ರಕೃತದಲ್ಲಿ, ಕೇವಲ ಉಚ್ಚನೀಚಮಾತ್ರದಿಂದ

ಪ್ರತೀತವಾದರೆ ನಾದಸ್ಥಾನಗಳಲ್ಲಿ ಸ್ವರತ್ವವು ಉಂಟಾಗುವುದಿಲ್ಲ; ಪ್ರಥಮ ಸಾರಣಾಕ್ರಿಯೆಯಲ್ಲಿ ಇಲ್ಲಿಯವರೆಗೆ ಸಾಧಿಸಿರುವುದು ಉಚ್ಚನೀಚಪ್ರತೀತಿ ಮಾತ್ರವನ್ನು; ಸ್ವರಗಳುಂಟಾಗದೆ ಶ್ರುತಿಗಳನ್ನು ಎಣಿಸಿ ಹೇಳುವುದು ಸಾಧ್ಯವಿಲ್ಲ ಎಂದು ತಿಳಿಯಬೇಕು. ಆದುದರಿಂದಲೇ ಈ ಸಾರಣೆಯಲ್ಲಿ 'ವಿಶೇಷಲಾಭೋ ನಾಸ್ತಿ, ಉಚ್ಚನೀಚ-ಮಾತ್ರಪ್ರತೀತೇಃ.'

ಇಲ್ಲಿ ಭರತಮುನಿಯು ದ್ವಾವಿಂಶತಿ ಶ್ರುತಿಗಳ ಜ್ಞಾನಕ್ಕಾಗಿ ಬಳಸಿರುವ ಪ್ರಯೋಗ ತಂತ್ರವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಒಂದೊಂದುಬಾರಿಗೆ ಒಂದೊಂದು ಶ್ರುತಿಯಂತೆ ಚಲವೀಣೆಯಲ್ಲಿರುವ ಪ್ರತಿಯೊಂದು ಸ್ವರವನ್ನೂ ಮಂದಗೊಳಿಸುತ್ತಾ ಬರಬೇಕು. ಹೀಗೆ ಮಾಡುವಾಗ, ಒಂದೊಂದುಸಲವೂ ಕೆಲವು ಸ್ವರಗಳು ತಮ್ಮ ತೀವ್ರತೆಯಲ್ಲಿ ಸಾಕಷ್ಟು ಕಡಿಮೆಯಾಗಿ ತಮ್ಮ ಹಿಂದಿನ ಸ್ವರಗಳಷ್ಟೇ ನಾದವನ್ನು ಪಡೆದು ಬಿಡುತ್ತವೆ; ಎಂದರೆ ತಮ್ಮ ಹಿಂದಿನ ಸ್ವರಗಳಲ್ಲಿ ಪ್ರವೇಶಿಸಿ ಲೀನವಾಗಿಬಿಡುತ್ತವೆ. ಹೀಗೆ ಆಗಬೇಕಾದರೆ ಎಷ್ಟು ಸಾರಣಾಕ್ರಿಯೆಗಳು ಬೇಕಾದವು, ಎಂದರೆ ಎಷ್ಟು ಶ್ರುತಿಗಳು ಕಡಿಮೆಯಾಗಬೇಕಾಯಿತು ಎಂದು ಲೆಕ್ಕಹಾಕಿದರೆ ಆಯಾ ಸ್ವರಗಳಿಗೂ ಅವುಗಳ ಹಿಂದಿನ ಸ್ವರಗಳಿಗೂ ಎಷ್ಟು ಶ್ರುತಿಗಳ ಅಂತರವಿದೆ ಎಂಬುದು ತಿಳಿಯುತ್ತದೆ. ಈ ರೀತಿಯಲ್ಲಿ ಪೂರ್ವ ಸ್ವರವನ್ನು ಪ್ರವೇಶಿಸಿದ ಪ್ರತಿ ಸ್ವರಕ್ಕೂ ಎಷ್ಟು ಶ್ರುತಿಗಳಿವೆಯೆಂದು ಹೀಗೆ ಕಂಡುಹಿಡಿದರೆ ಮತ್ತು ಆಯಾ ಸಾರಣಾ ಕ್ರಿಯೆಯಲ್ಲಿ ಎಷ್ಟು ಸ್ವರಗಳು ಹೀಗೆ ಅಪಕೃಷ್ಟವಾಗಿ ಪೂರ್ವಸ್ವರಗಳಾಗಿಬಿಡುತ್ತವೆಂಬುದನ್ನು ತಿಳಿದರೆ, ಇವುಗಳನ್ನು ಪರಸ್ಪರ ಗುಣಿಸುವುದರಿಂದ ಆಯಾ ಸಾರಣಾಕ್ರಿಯೆಯಿಂದ ಎಷ್ಟು ಶ್ರುತಿಗಳು ಲಭಿಸುತ್ತವೆ ಎಂದು ತಿಳಿಯಬಹುದು. ಹೀಗೆ ಸಾಧ್ಯವಾದ ಎಲ್ಲಾ ಸಾರಣಾ ಕ್ರಿಯೆಗಳಲ್ಲೂ ಉಂಟಾಗುವ ಶ್ರುತಿಗಳನ್ನು ಎಣಿಸಬೇಕು. ಸ್ಥಾಯಿಯಲ್ಲಿರುವ ಏಳೂ ಸ್ವರಗಳೂ ಹೀಗೆ ಸಾರಣೆಗೆ ಒಳಪಟ್ಟಾಗ ಆಯಾ ಸ್ಥಾಯಿಯಲ್ಲಿರುವ ಒಟ್ಟು ಶ್ರುತಿಗಳ ಸಂಖ್ಯೆಯು ತಿಳಿಯುತ್ತದೆ. ಇದಾಗಬೇಕಾದರೆ ಒಟ್ಟು ಐದು ಸಾರಣಾಕ್ರಿಯೆಗಳಾಗಬೇಕು. ಇದರಲ್ಲಿ ಕೊನೆಯದರಲ್ಲಿ ನಾಲ್ಕು ಶ್ರುತಿಗಳ ಅಂತರಗಳು ಲಭಿಸುತ್ತವೆ. ಇದಕ್ಕಿಂತ ಮುಂದೆ ಸಾರಣಾಕ್ರಿಯೆಯಿಲ್ಲ. ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ ಮುಂದೆ ಸಾರಣಾಕ್ರಿಯೆ ಮಾಡಬೇಕಾದರೆ ಆಯಾ ಸ್ಥಾಯಿಯ ವ್ಯಾಪ್ತಿಯನ್ನು ಮೀರಬೇಕಾಗುತ್ತದೆ. ಇದು ಪ್ರಕೃತಪ್ರಯೋಗದ ಪ್ರತಿಜ್ಞೆ, ಪ್ರಯೋಜನಗಳನ್ನು ಮೀರಿದ್ದು. ಎರಡನೆಯದಾಗಿ ನಾಲ್ಕು ಶ್ರುತಿಗಳಿಗಿಂತ ಮೀರಿ ಸಾರಣೆ ಮಾಡಿದರೆ ಉಪಲಬ್ಧವಾಗುವ ಸ್ವರಗಳಲ್ಲಿ ರಕ್ತಿಯು ಅಲ್ಪವಾಗಿರುತ್ತದೆ ಹಾಗೂ ಲಕ್ಷ್ಯ ಸಮ್ಮತಿ ದೊರೆಯುವುದಿಲ್ಲ. ಈ ಎಲ್ಲ ಅಂಶಗಳನ್ನು ಲೆಕ್ಕಿಸಿಯೇ ಭರತನು ಈ ಪ್ರಯೋಗವನ್ನು ಹೇಳಿದ್ದಾನೆ.

ಈಗ ಎರಡನೆಯ ಸಾರಣಾಕ್ರಿಯೆಯನ್ನು ಪರಿಶೀಲಿಸಬಹುದು :

ಮೊದಲನೆಯ ಸಾರಣೆಯಿಂದ ಧ್ರುವವೀಣೆಯಲ್ಲಿ ಸಪ್ತಸ್ವರಗಳು ಸಹಜಸ್ಥಾನಗಳಲ್ಲಿಯೂ ಚಲವೀಣೆಯಲ್ಲಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದಗಳು ಧ್ರುವವೀಣೆಯಲ್ಲಿರುವ ಷಡ್ಜ ಇತ್ಯಾದಿ ಸ್ವರಗಳಿಗಿಂತ ಕ್ರಮವಾಗಿ ಪ್ರತಿಯೊಂದೂ ಒಂದೊಂದು ಶ್ರುತಿಯಷ್ಟು ಕಡಿಮೆಯಾಗಿರುವುವಷ್ಟೆ. ಈಗ ಚಲವೀಣೆಯ ಪ್ರತಿಯೊಂದು ತಂತಿಯನ್ನೂ ಪುನಃ ಸಡಿಲಮಾಡಿ ಸ್ವರಗಳನ್ನು ಮಂದಗೊಳಿಸಬೇಕು. ಚಲವೀಣೆಯಲ್ಲಿರುವ (ಒಂದು ಶ್ರುತಿಯಷ್ಟು ಕಡಿಮೆಯಾಗಿರುವ) ಗಾಂಧಾರವು ಧ್ರುವವೀಣೆಯ ಋಷಭಕ್ಕೆ ಸಮವಾಗುವಂತೆಯೂ ಚಲವೀಣೆಯ (ಒಂದು ಶ್ರುತಿಯಷ್ಟು ಕಡಿಮೆಯಾಗಿರುವ) ನಿಷಾದವು ಧ್ರುವವೀಣೆಯ ಧೈವತಕ್ಕೆ ಸಮವಾಗುವಂತೆಯೂ ಈ ಸ್ವರಗಳನ್ನು ಮಂದಗೊಳಿಸಬೇಕು. ಹೀಗೆ ಮಾಡಲು ಎಷ್ಟು ನಾದಾಂತರವನ್ನು ಕಡಿಮೆ ಮಾಡಬೇಕಾಗುವುದೋ ಅದೇ ಶ್ರುತಿಯ ಪ್ರಮಾಣವೆಂದು ತಿಳಿಯಬೇಕು. ಇಷ್ಟೇ ಪ್ರಮಾಣದಲ್ಲಿ ಚಲವೀಣೆಯ ಷಡ್ಜ, ಋಷಭ, ಮಧ್ಯಮ, ಪಂಚಮ, ಧೈವತಗಳನ್ನೂ ಇಳಿಸಬೇಕು. ಈಗ ಧ್ರುವವೀಣೆಯ ಷಡ್ಜ–ಚಲವೀಣೆಯ ಷಡ್ಜ, ಧ್ರುವವೀಣೆಯ ಋಷಭ–ಚಲವೀಣೆಯ ಋಷಭ ಇತ್ಯಾದಿಯಾಗಿ ನುಡಿಯುವ ಆಯಾ ತಂತಿಗಳನ್ನೂ ಒಂದಾದ

ಮೇಲೆ ಒಂದರಂತೆ ಅಥವಾ ಒಟ್ಟಿಗೆ ಮಿಡಿದರೆ ಯಾವ ನಾದಾಂತರವು ಗೋಚರವಾಗುವುದೋ ಅದೇ ದ್ವಿಶ್ರುತಿಯ ಪ್ರಮಾಣ. ಹೀಗೆ ಇಳಿಸಿದಾಗ ಒಂದು ಸ್ವರವು ಹಿಂದಿನ ಸ್ವರವು ಪ್ರವೇಶಿಸಿ ಏಕೀಭಾವವನ್ನು ಪಡೆಯುವುದು ಎರಡೇ ಸಂದರ್ಭಗಳಲ್ಲಿ—ಗಾಂಧಾರ ನಿಷಾದಗಳಲ್ಲಿ. ಆದುದರಿಂದ ರಿಷಭದಿಂದ ಗಾಂಧಾರಕ್ಕೆ ಎರಡು ಶ್ರುತಿಗಳೆಂದೂ ಧೈವತದಿಂದ ನಿಷಾದಕ್ಕೆ ಎರಡು ಶ್ರುತಿಗಳೆಂದೂ ಸಿದ್ಧವಾಗುತ್ತದೆ. ಗಾಂಧಾರವೂ ನಿಷಾದವೂ ದ್ವಿಶ್ರುತಿಕಸ್ವರಗಳೆಂದು ಹೇಳುವುದರ ಅರ್ಥವಾದರೂ ಇದೇ. ಇದನ್ನು ತಿಳಿಯದ ಕೆಲವು ಆಧುನಿಕ ಸಂಗೀತಶಾಸ್ತ್ರ ಪಂಡಿತರು ಆಯಾ ಸ್ವರಗಳ ಮುಂದಕ್ಕೆ ಆಯಾ ಸಂಖ್ಯೆಯ ಶ್ರುತಿಗಳನ್ನು ಎಣಿಸಿ ಸ್ವರದ ಶ್ರುತ್ಯವಕಾಶವು ಅದರ ಮುಂದಿನಿಂದ ಎಂಬ ಬಾಲಭ್ರಮಾದೋಷದಿಂದ ಪೀಡಿತರಾಗಿದ್ದಾರೆ. ಎರಡನೆಯದಾಗಿ, ಈ ಮೊದಲನೆಯ ಸಾರಣೆಯಿಂದ ಗಾಂಧಾರ ನಿಷಾದಗಳಿಗೆ ಒಂದೊಂದಕ್ಕೂ ಎರಡೆರಡರಂತೆ ಒಟ್ಟು ನಾಲ್ಕು ಶ್ರುತಿಗಳು ಈ ಸ್ಥಾಯಿಯಲ್ಲಿ ದೊರೆತಿವೆ. ಮೂರನೆಯದಾಗಿ ಷಡ್ಜ, ರಿಷಭ, ಮಧ್ಯಮ, ಪಂಚಮ ಮತ್ತು ಧೈವತಗಳು ಚಲವೀಣೆಯಲ್ಲಿ ಧ್ರುವವೀಣೆಯಲ್ಲಿರುವ ಆಯಾಯಾ ಸ್ವರಗಳಿಗಿಂತ ಪ್ರತಿಯೊಂದೂ ಎರಡೆರಡರಷ್ಟು ಶ್ರುತಿಗಳು ಇಳಿದಿದ್ದರೂ ಕೇವಲ ಉಚ್ಚನೀಚಭಾವಮಾತ್ರದಿಂದ ಭಿನ್ನವಾಗಿ ಕಾಣುತ್ತವೆ. ಆದರೆ ಇವುಗಳಿಗೆ ಸ್ವರತ್ವವು ಉಂಟಾಗಿರುವುದಿಲ್ಲ. ಸ್ವರತ್ವವು ಯಾವಾಗಲೂ ಎರಡು ಶ್ರುತಿಗಳ ಅಂತರದಲ್ಲಿಯೇ ಗೋಚರವಾಗುವುದಿಲ್ಲವೆಂಬ ಮುಖ್ಯ ತತ್ತ್ವವನ್ನು ತಿಳಿಸುವುದು ಈ ದ್ವಿತೀಯ ಸಾರಣಾಕ್ರಿಯೆಯ ದ್ವಿತೀಯ ಪ್ರಯೋಜನ. ಎಂದರೆ ಆಧಾರಸ್ವರದಿಂದ ಎರಡೆರಡರಂತೆ ಶ್ರುತಿ ಮೆಟ್ಟಿಲುಗಳನ್ನು ಏರುತ್ತಾ ನಡೆದರೆ ಸ್ಥಾಯಿಯಲ್ಲಿರುವ ಎಲ್ಲಾ ಸ್ವರಗಳಾಗಲೀ, ಲಕ್ಷ್ಯಪ್ರಸಿದ್ಧವಾದ ಸ್ವರಸ್ಥಾನಗಳಾಗಲೀ ದೊರೆಯುವುದಿಲ್ಲವೆಂಬುದು ಇದರ ತಾತ್ಪರ್ಯ. ಹೀಗೆ ದೊರೆಯುವುದು ಎರಡೇ ಸ್ವರಗಳು: ಇವು ಸ್ಥಾಯಿಯಲ್ಲಿ ಕ್ರಮವಾಗಿ ಮೂರನೆಯ ಮತ್ತು ಕಡೆಯ (ಏಳನೆಯ) ಸ್ಥಾನಗಳಲ್ಲಿ ಮಾತ್ರ ದೊರೆಯುತ್ತವೆ. ಸ್ವರಾಷ್ಟಕದ ಎರಡು ಸಮಪಾಲುಗಳಾದ ಸರಿಗ ಮತ್ತು ಪಧನಿ ಎಂಬ ತ್ರೈಸ್ವರ್ಯಗಳಲ್ಲಿರುವ ಅಂತ್ಯಸ್ವರಗಳು ಸ್ವರತ್ವಕ್ಕೆ ಬೇಕಾದ ಅತ್ಯಂತ ಕನಿಷ್ಠ ಶ್ರುತಿಪ್ರಮಾಣದಲ್ಲಿ, ಎಂದರೆ ದ್ವಿಶ್ರುತಿಕಗಳಾಗಿ, ಗೋಚರಿಸುತ್ತವೆ ಎಂಬ ಮೂರನೆಯ ಪ್ರಯೋಜನವನ್ನು ಇಲ್ಲಿ ಗಮನಿಸಬಹುದು.

ಇಷ್ಟೆಲ್ಲವನ್ನೂ ಭರತಮುನಿಯು ' ಪುನರಪಿ ತದ್ವದೇವಾಪಕರ್ಷೇತ್, ಯಥಾ ಗಾಂಧಾರನಿಷಾದವಂತಾವಿತರಸ್ಯಾವೃಷಭಧೈವತೌ ಪ್ರವೇಕ್ಷ್ಯತಃ ದ್ವಿಶ್ರುತ್ಯಧಿಕತ್ವಾತ್ ' ಎಂದು ಸಂಗ್ರಹವಾಗಿ ಸೂತ್ರರೂಪದಲ್ಲಿ ಹೇಳಿದ್ದಾನೆ. ಈ ರೀತಿಯಾಗಿ ಅವನ ಪ್ರತಿಮಾತಿನಲ್ಲಿಯೂ ಅರ್ಥಗೌರವ, ಅರ್ಥವಿಸ್ತಾರಗಳು ಪ್ರಕ್ಷಿಪ್ತವಾಗಿರುವುದರಿಂದಲೇ ಅವನ ಉಕ್ತಿಗಳನ್ನು ಭರತಸೂತ್ರಗಳೆಂದೂ ಅವನನ್ನು ತೌರ್ಯತ್ರಿಕ ಸೂತ್ರಕಾರನೆಂದೂ ಎಲ್ಲ ಭರತೋತ್ತರ ಪೂರ್ವಾಚಾರ್ಯರೂ ಗೌರವಿಸುತ್ತಾರೆ. ಅಭಿನವಗುಪ್ತಪಾದನು ತನ್ನ ಸಮರ್ಥವಾದ ಶೈಲಿಯಲ್ಲಿ ಮೇಲಿನ ಭರತೋಕ್ತಿಯ ಅರ್ಥವನ್ನು ಹೀಗೆ ಬಿಡಿಸಿ ಹೇಳುತ್ತಾನೆ :

ಪುನರಪಿ ಚ **ತದ್ವದೇವಾಪಕರ್ಷೇದಿತಿ** ಚಲವೀಣಾಯಾಂ ಪಂಚಮೋಪಕ್ರಮಂ ಸರ್ವ(ಸ್ವರಾಣಾ)ಮೇಕಾಂ ಶ್ರುತಿಂ ಪಾತಯೇತ್ ಯೇಷು ಚಲವೀಣಾಗತೌ ಗಾಂಧಾರನಿಷಾದೌ ಧ್ರುವವೀಣಾಗತಾಭ್ಯಾಂ ಧೈವತರ್ಷಭಾಭ್ಯಾಂ ಸಮಸ್ಥಾನತಯಾಪಕರ್ಷತ್ವಂ ಗಚ್ಛತಃ ಯತೋ ಧ್ರುವವೀಣಾಯಾಂ ದ್ವಾಭ್ಯಾಂ ಶ್ರುತಿಭ್ಯಾಂ ಸರ್ವೇಸ್ವರಾ ಅಧಿಕಾಃ। ಏವಂ ಧೈವತವೈಲಕ್ಷಣ್ಯೇನ ಗಾಂಧಾರನಿಷಾದಯೋರನ್ಯವೀಣಾಗತಧೈವತರ್ಷಭಸಾಮ್ಯಂ ಜಾಯತೇ । ತದೇವ ಶ್ರುತಿರಿತ್ಯುಕ್ತಂ ಭವತಿ । ಅತ ಏವ ಶ್ರುತ್ಯಾದಿ ವ್ಯವಹಾರೋಽಪಿ ಲಕ್ಷ್ಯೇ ಯೋ ದೃಶ್ಯತೇ ನ ಸ ನಿರ್ಮೂಲಃ । ತಥಾಹಿ ತಾವನ್ನ್ಯೂನಾಧಿಕತ್ವೇ . . . . . . . ರೇ [112] ವಿನಾಶೋ ಭವತೀತಿ ವಿಶಿಷ್ಟಪ್ರತ್ಯಪ-

112 ಈ ಭಾಗದ ವ್ಯಾಖ್ಯಾನದಲ್ಲಿ ಗ್ರಂಥಪಾತವಿದೆ.

ಯೋಗಾಚ್ಛ್ರುತಿರಿತಿ ಕಥ್ಯತೇ । ಪೂರ್ವಾದಿಷು ನೈವಮಿತಿ । ಏವಂ ಶ್ರುತೇಶ್ಚ ಸ್ವರೂಪಂ ಜ್ಞಾತವ್ಯ್ । ಗಾಂಧಾರ-ನಿಷಾದಗಂ ಪ್ರತ್ಯೇಕಂ ಯಚ್ಛ್ರುತಿದ್ವಯಂ ತಚ್ಚ ಧೈವತರ್ಷಭಮಿಶ್ರೀಭಾವಾಭಿಜ್ಞಾನೇನ ಸ್ಫುಟಮೇವೋಪಲಬ್ಧ-ಮಿತಿ ತಚ್ಛ್ರುತಯಃ ಪ್ರತ್ಯಕ್ಷೀಭೂತಾ ಭವಂತಿ ॥ 110

ಮೂರನೆಯ ಸಾರಣಾಕ್ರಿಯೆಯನ್ನು ಈಗ ಪರೀಕ್ಷಿಸಬಹುದು :

ಚಲವೀಣೆಯಲ್ಲಿರುವ ಗಾಂಧಾರನಿಷಾದಗಳು ಪ್ರತ್ಯೇಕವಾಗಿ ಎರಡು ಶ್ರುತಿಗಳ ಅಪಕರ್ಷದಿಂದ ಧ್ರುವವೀಣೆಯಲ್ಲಿನ ರಿಷಭಧೈವತಗಳನ್ನು ಪ್ರವೇಶಿಸಿವೆಯೆಂಬುದನ್ನು ಇಲ್ಲಿ ನೆನೆಯಬೇಕು. ಎಂದರೆ, ಚಲವೀಣೆಯಲ್ಲಿರುವ ತಂತಿಗಳು ಕ್ರಮವಾಗಿ ಎರಡು ಶ್ರುತಿಯಷ್ಟು ಇಳಿಸಿದ ಷಡ್ಜ, ರಿಷಭ, ರಿಷಭ, ಎರಡು ಶ್ರುತಿಯಷ್ಟು ಪ್ರತಿಯೊಂದೂ ಇಳಿಸಿದ ಮಧ್ಯಮಪಂಚಮಗಳು, ಧೈವತ, ಧೈವತ ಈ ಕ್ರಮದಲ್ಲಿ ಷಡ್ಜಗ್ರಾಮದ ಸ್ವರವ್ಯವಸ್ಥೆಯನ್ನು ಒಳಗೊಂಡಿರುತ್ತವೆ. ಈಗ ಮತ್ತೊಮ್ಮೆ ಚಲವೀಣೆಯಲ್ಲಿರುವ ಪ್ರತಿಯೊಂದು ತಂತಿಯನ್ನೂ ಸಡಿಲಿಸಿ ಆಯಾ ಸ್ವರವು ಒಂದು ಶ್ರುತಿಯಷ್ಟು ಕುಗ್ಗುವಂತೆ ಮಾಡಬೇಕು. ಹೇಗೆಂದರೆ, ಚಲವೀಣೆಯ ರಿಷಭವು ಧ್ರುವವೀಣೆಯ ಷಡ್ಜಕ್ಕೂ ಚಲವೀಣೆಯ ಧೈವತವು ಧ್ರುವವೀಣೆಯ ಷಡ್ಜಕ್ಕೂ ಸರಿಯಾಗಿ ಸಮನಾಗುವಷ್ಟರ ಮಟ್ಟಿಗೆ ಈ ಸ್ವರಗಳನ್ನು ಇಳಿಸಬೇಕು. ಹೀಗೆ ಮಾಡಲು ಎಷ್ಟು ನಾದಾಂತರವು ಬೇಕಾಗುವುದೋ ಅದೇ ಒಂದು ಶ್ರುತಿಯ ಪ್ರಮಾಣ. ರಿಷಭಧೈವತಗಳು ಪ್ರತಿಯೊಂದೂ ಈಗಾಗಲೇ ಎರಡೆರಡು ಶ್ರುತಿಗಳು ಕುಗ್ಗಿದ್ದವು ಎಂಬುದನ್ನು ಸ್ಮರಿಸಿಕೊಂಡರೆ, ಈಗ ಷಡ್ಜಪಂಚಮಗಳಿಗೆ ಸಮಾನವಾಗಲು ಅವುಗಳನ್ನು ಇನ್ನೂ ಒಂದೊಂದು ಶ್ರುತಿಯಷ್ಟು ಇಳಿಯಬೇಕಾಯಿತೆಂಬುದನ್ನೂ ಗಮನಿಸಿದರೆ, ಷಡ್ಜದಿಂದ ರಿಷಭಕ್ಕೆ ಮೂರು ಶ್ರುತಿಗಳಷ್ಟು ಅಂತರ, ಪಂಚಮದಿಂದ ಧೈವತಕ್ಕೆ ಮೂರು ಶ್ರುತಿಗಳ ಅಂತರ ಎಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ರಿಷಭಧೈವತಗಳನ್ನು ತ್ರಿಶ್ರುತಿಕಗಳೆಂದು ತಿಳಿಯಬೇಕು. ಆದುದರಿಂದ ಈ ಮೂರನೆಯ ಸಾರಣೆಯಿಂದ ಒಟ್ಟು ಆರು ಶ್ರುತಿಗಳು ಲಭಿಸಿದವು. ಇದೇ ಈ ಸಾರಣಾಕ್ರಿಯೆಯ ಮೊದಲನೆಯ ಪ್ರಯೋಜನ. ಎರಡನೆಯದು ಆಧಾರಸ್ವರದಿಂದ ದೂರ ದೂರ ಚಲಿಸಿದಂತೆಲ್ಲಾ ಸ್ವರತ್ವವುಂಟಾಗಲು ಬೇರೆ ಬೇರೆ ಸಂಖ್ಯೆಯು ಶ್ರುತಿಗಳ ಅಂತರವು ಬೇಕಾಗುತ್ತದೆ ಎಂಬ ಮುಖ್ಯ ನಾದವಿಜ್ಞಾನ ಪ್ರಮೇಯದ ತಿಳುವಳಿಕೆ. ಎಂದರೆ ತ್ರೈಸ್ವರ್ಯದಲ್ಲಿ ಕೊನೆಯ ನಾದಸ್ಥಾನವು ಸ್ವರತ್ವವನ್ನು ಎರಡು ಶ್ರುತಿಗಳ ಅಂತರದಲ್ಲೂ ಮಧ್ಯದ ನಾದಸ್ಥಾನವು ಸ್ವರತ್ವವನ್ನು ಪಡೆಯಬೇಕಾದರೆ ಇನ್ನೂ ಹೆಚ್ಚಿನ, ಎಂದರೆ ಮೂರು ಶ್ರುತಿಗಳ, ಅಂತರವು ಬೇಕಾಗುತ್ತದೆಂದೂ ತಾತ್ಪರ್ಯ. ತ್ರೈಸ್ವರ್ಯದ ಮಧ್ಯಸ್ವರವು ಶ್ರುತ್ಯಂತರಾಪೇಕ್ಷೆಯಲ್ಲೂ ಮಧ್ಯಮವಾಗಿದೆಯೆಂಬುದನ್ನು ಇಲ್ಲಿ ಗಮನಿಸಬೇಕು. ಮೂರನೆಯ ಸಾರಣೆಯ ಮೂರನೆಯ ಪ್ರಯೋಜನವು ಪರಸ್ಪರತಾಭಾವದಲ್ಲಿ ಸ್ವರತ್ವದ ಆವಿರ್ಭಾವದ ಪ್ರಬೋಧನ. ಸರಿಗ ಮತ್ತು ಪಧನಿ ಎಂಬ ಎರಡು ತ್ರೈಸ್ವರ್ಯಗಳಲ್ಲಿರುವ ಅಂತ್ಯಸ್ವರಗಳೂ ಮಧ್ಯಸ್ವರಗಳೂ ಪರಸ್ಪರವಾಗಿ ಸಮಾನಶ್ರುತಿಕಗಳಾದುದರಿಂದ, ಎಂದರೆ ಗಾಂಧಾರನಿಷಾದಗಳೆರಡೂ ದ್ವಿಶ್ರುತಿಕಗಳೂ ರಿಷಭಧೈವತಗಳೆರಡೂ ತ್ರಿಶ್ರುತಿಕಗಳೂ ಆದುದರಿಂದ ಅವುಗಳಲ್ಲಿ ಸ್ವರತ್ವವು ಪರಸ್ಪರ ಸಮಾನವಾಗಿರುತ್ತದೆಂಬ ನಾದವಿಜ್ಞಾನದ ಒಂದು ಬಹುಮುಖ್ಯ ಪ್ರಮೇಯವೊಂದು ಇಲ್ಲಿ ಧ್ವನಿತವಾಗಿದೆ. ಈ ಸಮಾನತೆಯಿಂದಾಗಿ ಧೈವತವು ರಿಷಭವೇ ಅನ್ಯಸ್ಥಾನದಲ್ಲಿ ಎಂದರೆ ಬೇರೆ ಶ್ರುತಿಸ್ಥಾನದಲ್ಲಿ ಸ್ಪರ್ಶಿಸುವುದರಿಂದ, ಎಂದರೆ ಬೇರೆ ಒಂದು ಸ್ಥಾನದಲ್ಲಿ ತನ್ನನ್ನೇ ತಾನು ಪ್ರತಿಬಿಂಬಿಸಿಕೊಂಡಂತೆ ಭಾಸವಾಗುವುದರಿಂದ ಹುಟ್ಟಿದೆಯೆಂದು ಭಾವಿಸಬಹುದು. ರಿಷಭವನ್ನೂ ಎಣಿಸಿಕೊಂಡರೆ ಧೈವತವು ಹೀಗೆ ಪಂಚಮಭಾವದಲ್ಲೂ, ಅದನ್ನು ಬಿಟ್ಟು ಎಣಿಸಿಕೊಂಡರೆ ಮಧ್ಯಮಭಾವದಲ್ಲೂ ಇರುವುದರಿಂದ, ಈ ಎರಡೂ ಭಾವಗಳು ಸ್ಥಾಯಿಯಲ್ಲಿ ಸ್ಫುರಿಸುತ್ತವೆ. ಇದನ್ನೇ ನಿಷಾದ–ಗಾಂಧಾರಗಳಿಗೂ ಅನ್ವಯಿಸಬೇಕು. ಇಂತಹ ಪಂಚಮ ಮತ್ತು ಮಧ್ಯಮ ಭಾವಗಳೆಂಬ ಇಬ್ಬಗೆಯ

ಪರಸ್ಪರ ಸಂಬಂಧವೇ ಸ್ಥಾಯಿಯಲ್ಲಿ ಸಂವಾದಭಾವವೆನ್ನಿಸಿಕೊಳ್ಳುವುದು. ಇದನ್ನೇ ಅಭಿನವಗುಪ್ತನು ಹೀಗೆ ಹೇಳಿದ್ದಾನೆ :

ತಥಾಹಿ ಚತುಃಶ್ರುತಿಕಾತ್ ಪೂರ್ಣಾದಾದ್ಯಾತ್, ತದ್ಗತರೂಪಾದೇಕೈಕಂ ನಿಷ್ಕಾಸಂ ಪ್ರಕ್ರಮೇಣ ಪುನಶ್ಚ ಪ್ರಕೃತಿಭೂತಪೂರ್ವಸ್ಪರ್ಶೈಶ್ಚತ್ವಾರಃ ಸರಿಗಮಾಃ | ತಥೈವ ಸ್ಥಾನೇ ಊರ್ಧ್ವಸ್ಪರ್ಶೇ ಪಧನಿಸಾಃ, ಕೇವಲಂ ಷಡ್ಜೇನ ದ್ವಿತೀಯಂ ಸ್ಥಾನಂ ಸ್ಪೃಶ್ಯತ ಏವ | ಮಂದ್ರಸ್ಪರ್ಶವತಃ ಸ್ಥಾನಂ ಸ್ವರಾಣಾಮ್ | ಏವಂ ಕಂಠಸ್ಥಾನೇ ಶಿರಸಿ ಚ | ತೇಷು ಸರ್ವಥಾ ತಾದ್ರೂಪ್ಯಸಂಕ್ರಮಣಾತ್ ತ್ವಂಶಾದಿವ್ಯಪದೇಶ ಏವ, ತತ್‌ಸ್ಥಾನಗತಾನಾಂ ತು ಸಾದೃಶ್ಯಪರತ ಏವಂ ಸಂವಾದತ್ವಂ ವಕ್ಷ್ಯತೇ | ತೇನ ಪರಮಾರ್ಥಃ ತ್ರಯ ಏವ ಸ್ವರಾಃ—ಸರಿಗಾಃ, ಪಧನಯಃ | ಮಧ್ಯಮಸ್ತು ಧ್ರುವಕಸ್ಥಾನೀಯೋ ಮಧ್ಯಮತ್ವಾದೇವ |[113]

ಮತಂಗನೂ ಇದನ್ನೇ ಸಂಗ್ರಹವಾಗಿ ಹೀಗೆ ಸೂಚಿಸಿದ್ದಾನೆ :

ಸಂವಾದಿನಸ್ತು ಪುನಃ ಸಮಶ್ರುತಿಕತ್ವೇ ಸತಿ ತ್ರಯೋದಶನವಾಂತರತ್ವೇನಾವಬೋದ್ಧವ್ಯಾಃ[114]

ಇಲ್ಲಿ ತನ್ನ ಸಹಜ ಶ್ರುತಿಸ್ಥಾನದಿಂದ ಹದಿಮೂರನೆಯ ಶ್ರುತಿಯಲ್ಲಿ ಸ್ಪರ್ಶಿಸಿದ ಅಥವಾ ಸಂಕ್ರಮಿಸಿದ ಯಾವುದೇ ಸ್ವರವು ಪಂಚಮ ಭಾವವನ್ನೂ ಒಂಬತ್ತನೆಯ ಶ್ರುತಿಸ್ಥಾನವನ್ನು ಸ್ಪರ್ಶಿಸಿ ಸ್ವರತ್ವವನ್ನು ಪಡೆದರೆ ಮಧ್ಯಮಭಾವವನ್ನೂ ಸಂವಾದ ರೂಪದಲ್ಲಿ ಪಡೆಯುತ್ತದೆಂಬುದು ವಿವಕ್ಷೆ. ಈ ಭಾವಗಳಲ್ಲಿ ಒಂಬತ್ತನೆಯ ಮತ್ತು ಹದಿಮೂರನೆಯ ಶ್ರುತಿಸ್ಥಾನಗಳು ಸಂವಾದ ಭಾವದಲ್ಲಿ ಹೇಗೆ ಲಭಿಸುತ್ತವೆಂದು ಮುಂದೆ ವಿವರಿಸಲಾಗುವುದು.

ಭರತಮುನಿಯು ತೃತೀಯ ಸಾರಣಾಕ್ರಿಯೆಯನ್ನು ' ಪುನರಪಿ ತದ್ವದೇವಾಪಕೃಷ್ಟಾಯಾಂ ಧೈವತರ್ಷಭಾವಿ-ತರಸ್ಯಾಂ ಪಂಚಮಷಡ್ಜೌ ಪ್ರವೇಕ್ಷ್ಯತಃ ತ್ರಿಶುತ್ಯಧಿಕತ್ವಾತ್ ' ಎಂಬ ಸೂತ್ರದಲ್ಲಿಯೂ ಅಭಿನವಗುಪ್ತನು

ಪುನರಪಿ ಚಲವೀಣಾಯಾಂ ಶ್ರುತಿರ್ಯದಾಪಕೃಷ್ಯತೇ ಸರ್ವಸ್ವರೇಭ್ಯಸ್ತದಾ ಚ ವೀಣಾಗತೌ ಧೈವತರ್ಷಭೌ ಧ್ರುವವೀಣಾಗತಾಭ್ಯಾಂ ಪಂಚಮಷಡ್ಜಾಭ್ಯಾಂ ಯಥಾಕ್ರಮಂ ಸಾಮ್ಯಂ ಗಚ್ಛತಃ | ಯತೋ ಧ್ರುವವೀಣಾಯಾಂ ಸ್ವರಾಸ್ತ್ರಿಸ್ರಃ ಶ್ರುತಿಭಿರಧಿಕಾಃ | ಏವಂ ಸ್ವರದ್ವಯೇ ಪ್ರತ್ಯೇಕಂ ಶ್ರುತಿತ್ರಯಂ ಸ್ಫುಟೀಕೃತಮಿತಿ ಷಟ್‌ಶ್ರುತಯಃ ಉಪಲಬ್ಧಾಃ[110] ಎಂಬ ವ್ಯಾಖ್ಯಾನದಲ್ಲೂ ಹೇಳಿದ್ದಾರೆ.

ಈಗ ಧ್ರುವವೀಣೆ ಮತ್ತು ಚಲವೀಣೆಗಳಲ್ಲಿರುವ ಸ್ವರಗಳ ಪರಸ್ಪರ ಸಂಬಂಧಗಳನ್ನು ಪುನಃ ಸ್ಮರಿಸಿಕೊಳ್ಳ ಬಹುದು. ಧ್ರುವವೀಣೆಯ ಷಡ್ಜಕ್ಕೆ ಪರಸ್ಪರವಾಗಿ ಚಲವೀಣೆಯ ಷಡ್ಜವು ಮೂರು ಶ್ರುತಿಗಳನ್ನು ಕಳೆದುಕೊಂಡಿದೆ. ಚಲವೀಣೆಯ ರಿಷಭವು ಮೂರು ಶ್ರುತಿಗಳನ್ನು ಕಳೆದುಕೊಂಡು ಧ್ರುವವೀಣೆಯ ಷಡ್ಜಕ್ಕೆ ಸಮವಾಗಿದೆ. ಅದರ ಗಾಂಧಾರವು ಮೂರು ಶ್ರುತಿಗಳನ್ನು ಕಳೆದುಕೊಂಡು ಪ್ರಥಮ ಸಾರಣದಲ್ಲಿ ಒಂದು ಶ್ರುತಿಯನ್ನು ಕಳೆದುಕೊಂಡಿದ್ದ ರಿಷಭಕ್ಕೆ ಸಮಾನವಾಗಿದೆ, ಎಂದರೆ ಧ್ರುವವೀಣೆಯ ರಿಷಭಕ್ಕಿಂತ ಒಂದು ಶ್ರುತಿಯಷ್ಟು ಅಪಕೃಷ್ಟವಾಗಿದೆ. ಅದರ ಮಧ್ಯಮವು ಧ್ರುವವೀಣೆಯ ಮಧ್ಯಮಕ್ಕಿಂತ ಮೂರು ಶ್ರುತಿಗಳಷ್ಟು ಕಡಿಮೆಯಿದೆ. ಅದರ ಪಂಚಮವೂ ಹಾಗೆಯೇ ಧ್ರುವವೀಣೆಯ ಪಂಚಮಕ್ಕಿಂತ ಮೂರು ಶ್ರುತಿಗಳಷ್ಟು ಕಡಿಮೆಯಾಗಿದೆ. ಅದರ ಧೈವತವು ಮೂರು ಶ್ರುತಿಗಳನ್ನು ಕಳೆದುಕೊಂಡು ಧ್ರುವವೀಣೆಯ ಪಂಚಮಕ್ಕೆ ಸಮನಾಗಿದೆ. ಅದರ ನಿಷಾದವು ಮೂರು ಶ್ರುತಿಗಳನ್ನು

113 ಅದೇ ಗ್ರಂಥ, ಪು. 14.

114 ಮತಂಗ, ಉ. ಗ್ರಂ., ಪು. 14.

ಕಳೆದುಕೊಂಡು ಪ್ರಥಮ ಸಾರಣದಲ್ಲಿ ಒಂದು ಶ್ರುತಿಯನ್ನು ಕಳೆದುಕೊಂಡಿದ್ದ ಧೈವತಕ್ಕೆ ಸಮನಾಗಿದೆ, ಎಂದರೆ ಧ್ರುವವೀಣೆಯ ಧೈವತಕ್ಕಿಂತ ಒಂದು ಶ್ರುತಿಯಷ್ಟು ಕೆಳಗಿದೆ. ಈ ಸಾಮ್ಯಗಳನ್ನು ಹೀಗೆ ಸಂಗ್ರಹಿಸಬಹುದು :

| ತಂತಿ | 1 | 2 | 3 | 4 | 5 | 6 | 7 |
|---|---|---|---|---|---|---|---|
| ಧ್ರುವವೀಣೆ | ಸ | ರಿ | ಗ | ಮ | ಪ | ಧ | ನಿ |
| ಚಲವೀಣೆ | ಸ³ | ಸ | ರಿ¹ | ಮ³ | ಪ³ | ಪ | ಧ¹ |

ರಿ,¹ ಧ,¹ ಎಂದರೆ ರಿಷಭವೂ ಧೈವತವೂ ಧ್ರುವವೀಣೆಯ ರಿಷಭ ಧೈವತಗಳೊಡನೆ ಕ್ರಮವಾಗಿ ಹೋಲಿಸಿದಾಗ ಒಂದೊಂದು ಶ್ರುತಿಯಷ್ಟು ಕಡಿಮೆಯಾಗಿರುತ್ತವೆ ಎಂದು ಸಂಜ್ಞೆ.

ಸ³ ಮ³ ಪ³ ಎಂದರೆ ಷಡ್ಜ ಮಧ್ಯಮ ಪಂಚಮಗಳು ಧ್ರುವವೀಣೆಯಲ್ಲಿರುವ ಅದೇ ಸ್ವರಗಳೊಡನೆ ಹೋಲಿಸಿದಾಗ ಪ್ರತಿಯೊಂದೂ ಮೂರು ಶ್ರುತಿಗಳಷ್ಟು ಕಡಿಮೆಯಾಗಿರುತ್ತವೆ ಎಂದು ಸಂಜ್ಞೆ.

ಈ ಮೂರು ಸಾರಣಾಕ್ರಿಯೆಗಳಲ್ಲಿಯೂ ಚಲವೀಣೆಯಲ್ಲಿರುವ ಸ್ವರಗಳಲ್ಲಿ ಪ್ರತಿಯೊಂದೂ ನಾದ ಮಟ್ಟದಲ್ಲಿ ಕ್ರಮೇಣ ಕಡಿಮೆಯಾಗುತ್ತಿದ್ದು ಅದರ ಇದರ ಇಡೀ ಸ್ವರಸಪ್ತಕವು ಧ್ರುವವೀಣೆಯ ಸ್ವರಸಪ್ತಕಕ್ಕಿಂತ ಕ್ರಮವಾಗಿ ಒಂದು, ಎರಡು, ಮತ್ತು ಮೂರು ಶ್ರುತಿಗಳಷ್ಟು ನೀಚವಾಗಿದ್ದರೂ ಅದರಲ್ಲಿನ ಸ್ವರಗಳು ಪರಸ್ಪರವಾಗಿ ತಮ್ಮ ಭಾವಗಳನ್ನು ಹಾಗೆಯೇ ಉಳಿಸಿಕೊಂಡಿವೆಯೆಂದೂ ಆದುದರಿಂದ ಪ್ರತಿ ಸಾರಣಾ ಕ್ರಿಯೆಯಿಂದಲೂ ಚಲವೀಣೆಯಲ್ಲಿ ಷಡ್ಜ ಗ್ರಾಮವೇ ಸ್ಥಾಪಿಸಲ್ಪಡುತ್ತಿದೆಯೆಂಬುದನ್ನೂ ಇಲ್ಲಿ ನೆನೆಯಬೇಕು. ಧ್ರುವವೀಣೆಯಲ್ಲಿ ಮೊದಲು ಸ್ಥಾಪಿತ ವಾದ ಷಡ್ಜಗ್ರಾಮದೊಡನೆ ಒಂದು, ಎರಡು ಮತ್ತು ಮೂರನೆಯ (ಮತ್ತು ಮುಂದೆ ಹೇಳುವ ನಾಲ್ಕನೆಯ) ಸಾರಣಾಕ್ರಿಯೆಗಳಿಂದ ಹುಟ್ಟುವ ಷಡ್ಜಗ್ರಾಮದೊಡನೆ ಹೋಲಿಸಿದಾಗ ಉಚ್ಚ ನೀಚ ಭಾವದ ಎಷ್ಟು ಅಂತರವು ಪ್ರತ್ಯಕ್ಷವಾಗಿ ಗೋಚರಿಸುವುದೋ ಅದನ್ನು ಕ್ರಮವಾಗಿ ಒಂದು, ಎರಡು, ಮತ್ತು ಮೂರು (ಮತ್ತು ನಾಲ್ಕು) ಶ್ರುತಿಗಳ ಅಂತರವೆಂದು, ಎಂದರೆ ಪ್ರಮಾಣಶ್ರುತಿಯ, ದ್ವಿಶ್ರುತಿಕ, ತ್ರಿಶ್ರುತಿಕ (ಮತ್ತು ಚತುಃಶ್ರುತಿಕ) ಸ್ವರಗಳ ಪ್ರಮಾಣಗಳೆಂದು ಸಿದ್ಧವಾಗುತ್ತದೆ.

ನಾಲ್ಕನೆಯ ಸಾರಣಾಕ್ರಿಯೆಯಲ್ಲಿ ಚಲವೀಣೆಯಲ್ಲಿರುವ ಪ್ರತಿಯೊಂದು ತಂತಿಯನ್ನೂ ಆಯಾಸ್ವರವು ಒಂದೊಂದು ಶ್ರುತಿಯಷ್ಟು ಕಡಿಮೆಯಾಗುವ ಹಾಗೆ ಸಡಿಲಗೊಳಿಸಬೇಕು. ಇದಕ್ಕೆ ಮೊದಲನೆಯ ಹಂತವಾಗಿ, ಒಂದು, ನಾಲ್ಕು ಮತ್ತು ಐದನೆಯ ತಂತಿಗಳಲ್ಲಿರುವ ಸ್ವರಗಳನ್ನು ಧ್ರುವವೀಣೆಯ 7, 3 ಮತ್ತು 4 ನೆಯಲ್ಲಿರುವವು ಗಳಿಗೆ ಸಮನಾಗಿಸಬೇಕು. ಎಂದರೆ, ಚಲವೀಣೆಯ ಮೊದಲನೆಯ ತಂತಿಯಲ್ಲಿರುವ (ಮೂರು ಶ್ರುತಿಗಳಷ್ಟು ಈಗಾಗಲೇ ಕಳೆದುಕೊಂಡಿರುವ) ಷಡ್ಜವನ್ನು ಧ್ರುವವೀಣೆಯಲ್ಲಿ ಅದರ ಹಿಂದಿನ ಸ್ವರವಾದ ನಿಷಾದಕ್ಕೆ ಸಮವಾಗುವಂತೆ ಮಾಡಲು ಎಷ್ಟು ಪ್ರಮಾಣದಲ್ಲಿ ಇಳಿಸಬೇಕಾಗುತ್ತದೆಯೋ ಅಷ್ಟನ್ನೂ ಇಳಿಸಬೇಕು. ಹಾಗೆಯೇ ಚಲವೀಣೆಯ ನಾಲ್ಕನೆಯ ತಂತಿಯಲ್ಲಿರುವ (ಈಗಾಗಲೇ ಮೂರು ಶ್ರುತಿಗಳಷ್ಟು ಅಪಕೃಷ್ಟವಾಗಿರುವ) ಮಧ್ಯಮವು ಧ್ರುವವೀಣೆಯಲ್ಲಿ ಅದರ ಹಿಂದಿನ ಸ್ವರವಾದ ಗಾಂಧಾರದಲ್ಲಿ ಪ್ರವೇಶಿಸಿ ಏಕೀಭಾವವನ್ನು ಪಡೆಯಬೇಕಾದರೆ ಎಷ್ಟು ಪ್ರಮಾಣದಲ್ಲಿ ಮಧ್ಯವನ್ನು ಇಳಿಸಬೇಕೋ ಅಷ್ಟನ್ನು ಇಳಿಸಬೇಕು. ಇದೇ ರೀತಿಯಲ್ಲಿ ಚಲವೀಣೆಯ ಐದನೆಯ ತಂತಿಯಲ್ಲಿ ಮೂರು ಶ್ರುತಿಗಳಷ್ಟು ಈಗಾಗಲೇ ಕುಗ್ಗಿರುವ ಪಂಚಮವು ಧ್ರುವವೀಣೆಯಲ್ಲಿ ಅದರ ಹಿಂದಿನ ಸ್ವರವಾದ ಮಧ್ಯಮ

ಮವನ್ನು ಪ್ರವೇಶಿಸಿ ಏಕೀಭಾವವನ್ನು ಪಡೆಯಬೇಕಾದರೆ ಎಷ್ಟು ಪ್ರಮಾಣದಲ್ಲಿ ಅದನ್ನು ಕುಗ್ಗಿಸಬೇಕೋ ಅಷ್ಟನ್ನು ಮಾಡಬೇಕು. ಈ ಮೂರು ಪ್ರಮಾಣಗಳಿಗೂ ಶ್ರುತಿಯೆಂದೇ ಸಂಜ್ಞೆ. ಚಲವೀಣೆಯ ಷಡ್ಜಮಧ್ಯಮಪಂಚಮಗಳು ಮೂರನೆಯ ಸಾರಣೆಯಿಂದ ಈಗಾಗಲೇ ಪ್ರತಿಯೊಂದೂ ಮೂರು ಶ್ರುತಿಗಳನ್ನು ಕಳೆದುಕೊಂಡಿದ್ದವು. ಈಗ ಅವು ಇನ್ನೂ ಒಂದೊಂದು ಶ್ರುತಿಯನ್ನು ಕಳೆದುಕೊಂಡು ತಮ್ಮ ಹಿಂದಿನ ಸ್ವರಗಳಾದ ನಿಷಾದ, ಮಧ್ಯಮ ಗಾಂಧಾರಗಳಾದವು. ಆದುದರಿಂದ ನಿಷಾದದಿಂದ ಷಡ್ಜಕ್ಕೆ, ಗಾಂಧಾರದಿಂದ ಮಧ್ಯಮಕ್ಕೆ, ಮಧ್ಯಮದಿಂದ ಪಂಚಮಕ್ಕೆ ನಾಲ್ಕು ನಾಲ್ಕು ಶ್ರುತಿಗಳೆಂದು ತಿಳಿಯಬೇಕು. ಆದುದರಿಂದ ಷಡ್ಜಮಧ್ಯಮಪಂಚಮಗಳು ಮೂರೂ ಚತುಃಶ್ರುತಿಕ ಸ್ವರಗಳು. ಇವುಗಳ ಸಾರಣೆಯಿಂದ ಒಟ್ಟು ಹನ್ನೆರಡು ಶ್ರುತಿಗಳು ಲಭಿಸಿದಂತಾಯಿತು. ಇದೇ ಈ ಸಾರಣೆಯ ಮೊದಲನೆಯ ಪ್ರಯೋಜನ. ಇದರ ನಂತರ ಚಲವೀಣೆಯಲ್ಲಿರುವ ಒಂದರಿಂದ ಏಳರವರೆಗಿನ ತಂತಿಗಳಲ್ಲಿ ಕ್ರಮವಾಗಿ ಧ್ರುವವೀಣೆಯ ಸ್ವರಗಳಿಗೆ ಹೋಲಿಸಿದರೆ, ಧ್ರುವವೀಣೆಯ ನಿಷಾದ, ಒಂದು ಶ್ರುತಿಯಷ್ಟು ಇಳಿದ ಷಡ್ಜ, ಎರಡು ಶ್ರುತಿಯಷ್ಟು ಇಳಿದ ರಿಷಭ, ಗಾಂಧಾರ, ಮಧ್ಯಮ, ಒಂದು ಶ್ರುತಿಯಷ್ಟು ಇಳಿದ ಪಂಚಮ ಮತ್ತು ಎರಡು ಶ್ರುತಿಗಳು ಕುಗ್ಗಿದ ಧೈವತ, ಈ ಸ್ವರಗಳು ಲಭಿಸುತ್ತವೆ.

ನಾಲ್ಕನೆಯ ಸಾರಣಾಕ್ರಿಯೆಯಿಂದ ಆದ ಎರಡನೆಯ ಪ್ರಯೋಜನವೆಂದರೆ ಸ್ಥಾನಾಂತರಪ್ರಾಪ್ತಿ. ಷಡ್ಜವನ್ನು ಧ್ರುವವೀಣೆಯ ನಿಷಾದವನ್ನು ಪ್ರವೇಶಿಸುವ ಹಾಗೆ ಇಳಿಸಬೇಕು, ಎಂದರೆ ಆಯಾ ಸ್ಥಾಯಿ ಷಡ್ಜಕ್ಕಿಂತಲೂ ನೀಚವಾದ ನಿಷಾದದಲ್ಲಿ ಎಂದು ಅರ್ಥವಷ್ಟೆ. ಮೂರು ಸಾರಣೆಗಳಿಂದಲೂ ಮೂರು ಶ್ರುತಿಗಳ್ನು ಕಳೆದುಕೊಂಡಿರುವ ಚಲವೀಣೆಯ ಷಡ್ಜದಲ್ಲಿ ಈಗ ಇನ್ನೂ ಒಂದು ಶ್ರುತಿಯನ್ನು ಕಳೆದುದರಿಂದ ಲಭಿಸುವ ನಿಷಾದವು ಧ್ರುವವೀಣೆಯಲ್ಲಿರುವ ನಿಷಾದಕ್ಕೆ ಖಚಿತವಾಗಿ ಒಂದು ಸ್ಥಾಯಿಯ ದೂರದಲ್ಲಿದೆ. ಇಲ್ಲಿಯವರೆಗೆ ಈ ಶ್ರುತಿನಿದರ್ಶನ ಪ್ರಯೋಗದಿಂದ ಸರಿಗಮಪಧನಿ ಎಂಬ ಸ್ವರಗಳನ್ನುಳ್ಳ ಸ್ವರಸಪ್ತಕವನ್ನು ಪರಿಶೀಲಿಸಿದಾಗ ಮೇಲಿನ ಮೂರು ಸಾರಣೆಗಳಿಂದಲೂ ಹುಟ್ಟಿದ ಇತರ ಸ್ವರಗಳೂ ಶ್ರುತಿಸ್ಥಾನಗಳೂ ಒಂದೇ ಸ್ಥಾಯಿಯ ವ್ಯಾಪ್ತಿಯಲ್ಲಿದ್ದವು. ಆದರೆ ಈಗ ನಿಷಾದಕ್ಕೆ ನೀಚಪ್ರಥಮಾವರ್ತನ ಸ್ವರವು ಲಭಿಸಿದುದರಿಂದ ಎರಡೂ ವೀಣೆಗಳಿಂದ ನಿಸರಿಗಮಪದನಿ ಎಂಬ ಸ್ವರಾಷ್ಟಕವು ಉಂಟಾಯಿತು. ಇದರಿಂದ ತಾತ್ವಿಕವಾದ ಹಲವು ಪ್ರಯೋಜನಗಳಿವೆ. ಮೊದಲನೆಯದಾಗಿ, ಅಷ್ಟಮಸ್ವರವು ನಾಲ್ಕೂ ಸಾರಣೆಗಳಿಂದ ಲಭಿಸಿದ ಇಪ್ಪತ್ತೆರಡು ಶ್ರುತಿಗಳ ಅಂತರದಲ್ಲಿ ದೊರೆಯುತ್ತದೆ ಎಂಬ ಪ್ರಮೇಯ. ಇದು ಪ್ರಥಮಸ್ವರದೊಡನೆ ಅತ್ಯಂತ ಸಾದೃಶ್ಯ ಸಾಮ್ಯಗಳನ್ನು ಪಡೆದಿರುತ್ತದೆ ಎಂಬ ಪ್ರಾಯೋಗಿಕವಾದ ಅರಿವು ಹಾಗೂ ಈ ಲಕ್ಷ್ಯಪ್ರಸಿದ್ಧ ಸಂಗತಿಯನ್ನು ಶುದ್ಧವಾಗಿ ತಾತ್ತ್ವಿಕವಾದ ಶ್ರುತಿಯ ಕಲ್ಪನೆಯಿಂದ ಹೊರಡಿಸುವುದು ಈ ಸಾರಣೆಯ ಸಾಧನೆ. ಇದರಿಂದಾಗಿ ಸ್ಥಾಯಿಯಲ್ಲಿ ಮೇಲೆ ಹೇಳಿದ ಏಳು ಸ್ವರಗಳೇ ಪ್ರಕೃತಿಗಳು ; ಇವುಗಳು ಹಿಂದಿನ ಅಥವಾ ಮುಂದಿನ ಶ್ರುತಿಸ್ಥಾನಗಳಲ್ಲಿ ಉಪಸ್ಥಿತವಾಗುವುದು ಎರಡು ರೀತಿಯಲ್ಲಿ ಸಾಧ್ಯ: ಸ್ವರತ್ವವನ್ನು ಪಡೆದಿರುವ ಶ್ರುತಿಸ್ಥಾನಗಳಲ್ಲಿ, ಹಾಗೂ ಸ್ವರತ್ವವನ್ನು ಪಡೆಯದ ಶ್ರುತಿಸ್ಥಾನಗಳಲ್ಲಿ ; ಇವುಗಳನ್ನು ಕ್ರಮವಾಗಿ ಸ್ವರಗತಶ್ರುತಿಗಳು, ಅಂತರಶ್ರುತಿಗಳು ಎಂದು ವಿಶಾಖಿಲಾಚಾರ್ಯನು ಮತಂಗನಿಗಿಂತ ಹಿಂದೆಯೇ ಹೇಳಿದ್ದಾನೆ :

ತತ್ರ ಗಾಂಧರ್ವೇ ಶ್ರುತಾವೇವಾಂತ್ಯಯೋಂ ಸ್ವರಸ್ಫುಟತಾಂ ದಾಯಿನ್ಯಾಮನಧಾತವ್ಯ ಇತಿ ವಿಶಾಖಿಲಾಚಾರ್ಯಪ್ರಭೃತಯ ಊಚುಃ "ಶ್ರುತಯಃ ಸ್ವರಾಂತರಗತಾ" ಇತಿ, "ಸಪ್ತಾಶ್ರಯತಯಾ ಸ್ವರಗತಾ" ಇತಿ, "ಅಂತರಗತಾಸ್ತ್ವನ್ಯಾ" ಇತಿ, ಗಾನೇ ತು ಶ್ರೋತೃಸುಖಾವಹೋ ಽನೇನ ವಿಭಾಗೇನ ಪ್ರಯೋಜನಮ್ ।[115]

115 ವಿಶಾಖಿಲ, ಅಭಿನವಗುಪ್ತನಿಂದ ಉ. ಗ್ರಂ., ದಲ್ಲಿ ಉದ್ಧೃತಿ, ಪು. 21.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇಲ್ಲಿ 'ಶ್ರೋತ್ರಸುಖಾವಹೋ ಽನೇನ ವಿಭಾಗೇನ ಪ್ರಯೋಜನಮ್' ಎಂಬ ಅಭಿನವಗುಪ್ತನ ಮಾತನ್ನು ಗಮನಿಸಬೇಕು. ಈ ಶ್ರುತಿಗಳಲ್ಲಿ ಯಾವ ಸ್ಥಾನಗಳಲ್ಲಿ ಸ್ವರತ್ವವು ಸಾಧ್ಯವೋ ಅಲ್ಲಿ ಶ್ರೋತ್ರಸುಖಾವಹ, ಎಂದರೆ ರಕ್ತಿ, ಉಳಿದವುಗಳಲ್ಲಿ ಇಲ್ಲ, ಎಂಬುದು ಇದರ ತಾತ್ಪರ್ಯ. ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿ ಒಟ್ಟಿನಲ್ಲಿ ಎಷ್ಟೇ ಅತ್ಯಲ್ಪವೂ ಕನಿಷ್ಠಾಂತರ ಗೋಚರಗಳೂ ಆದ ಮೆಟ್ಟಿಲುಗಳಿದ್ದರೂ ಅವುಗಳೆಲ್ಲ ಗಾನಪ್ರಪಂಚದಲ್ಲಿ ವ್ಯವಹಾರ ಯೋಗ್ಯತೆಯನ್ನು ಪಡೆದಿರುವುದಿಲ್ಲ ಎಂದು ಆಧುನಿಕ ನಾದವಿಜ್ಞಾನದ ಸಂಶೋಧನೆಯು ಸಿದ್ಧಪಡಿಸಿರುವ ಸಂಗತಿಯನ್ನು ನಮ್ಮ ಪೂರ್ವಾಚಾರ್ಯರು ಸಾವಿರ ವರ್ಷಗಳಿಗಿಂತಲೂ ಮುಂಚೆಯೇ ಇಷ್ಟು ಸ್ಪಷ್ಟವಾಗಿ ಹೇಳಿರುವುದು ಅದ್ಭುತರಮಣೀಯವಾಗಿದೆ. ಇದೇ ವಿಷಯವನ್ನು ಅಭಿನವಗುಪ್ತನು ತನಗಿಂತ ಪ್ರಾಚೀನ ಭರತಭಾಷ್ಯಕಾರನಾಗಿದ್ದ ಮಾತೃಗುಪ್ತನಿಂದ ಹೀಗೆ ಉದ್ಧರಿಸಿ ಹೇಳುತ್ತಾನೆ :

ಹೀಯಮಾನೇ ಸ್ವರೇ ಶ್ರೋತುಃ ಸ್ವಸಂವೇದ್ಯೋಽಣುಶಃ ಕ್ರಮಃ |
ಶ್ರೂಯಮಾಣಃ ಪುನರ್ನಾದ ಏಕ ಏವಾದ್ಯ ರಂಜಿತಃ || [115]

ಇದೇ ಅಭಿಪ್ರಾಯವನ್ನು ಮತಂಗಮುನಿಯು ತನ್ನ ಪೂರ್ವಾಚಾರ್ಯನಾದ ವಿಶ್ವಾವಸುವಿನಿಂದ ಹೀಗೆ ಸಂಗ್ರಹಿಸುತ್ತಾನೆ :

ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್ |
ಸಾ ಚೈಕಾಪಿ ದ್ವಿಧಾ ಜ್ಞೇಯಾ ಸ್ವರಾಂತರವಿಭಾಗತಃ ||
ನಿಯತಶ್ರುತಿಸಂಸ್ಥಾನಾದ್ ಗೀಯತೇ ಸಪ್ತ ಗೀತಿಷು ।
ತಸ್ಮಾತ್ ಸ್ವರಗತಾ ಜ್ಞೇಯಾಃ ಶ್ರುತಯಃ ಸ್ವರವೇದಿಭಿಃ ||
ಅಂತರಸ್ವರವರ್ತಿನ್ಯೋ [116] ಹ್ಯಂತರಶ್ರುತಯೋ ಮತಾಃ | [117]

ಹೀಗೆ ದೊರೆಯುವ ಸ್ವರಗತ ಮತ್ತು ಅಂತರಸ್ವರವರ್ತಿಗಳಾದ ಎಲ್ಲಾ ಶ್ರುತಿಸ್ಥಾನಗಳನ್ನೂ ಸ್ಥಾಯಿಯ ನಾದವ್ಯಾಪ್ತಿಯಲ್ಲಿ ಕಂಡುಹಿಡಿದು ನಿರ್ಧರಿಸುವುದೇ ಈ ಶ್ರುತಿನಿದರ್ಶನದ ಪ್ರತಿಜ್ಞೆ ಮತ್ತು ಪ್ರಯೋಜನ. ಅಲ್ಲದೆ ಈ ಶ್ರುತಿಸ್ಥಾನಗಳಲ್ಲಿ ಪ್ರಕೃತಿರೂಪವಾದ ಸಪ್ತಸ್ವರಗಳು ಅಭಿವ್ಯಕ್ತವಾಗುವ ಏಳು, ಈ ಸ್ವರಗಳೇ ವಿಕೃತರೂಪದಲ್ಲಿ ಅಭಿವ್ಯಕ್ತವಾಗುವ ಇನ್ನು ಕೆಲವು (ಇವುಗಳನ್ನು ಮುಂದೆ ಹೇಳಲಾಗುವುದು), ಸ್ವರದ ಉಪಸ್ಥಿತಿಗೆ ಸಾಧ್ಯವೇ ಅಲ್ಲದ ಮತ್ತೆ ಕೆಲವು, ಎಂಬ ಮೂರು ಬಗೆಯ ಶ್ರುತಿಸ್ಥಾನಗಳು ಈ ನಿದರ್ಶನದಿಂದ ಸಿದ್ಧವಾಗುವುದಷ್ಟೇ ಅಲ್ಲದೆ ಸ್ವರಗಳು ಏಕೆ ಏಳೇ ಇವೆ ಎಂಬುದರ ಧ್ವನಿಯನ್ನೂ ಇದು ಒಳಗೊಂಡಿದೆ. ಪ್ರಮಾಣಭೂತವಾಗಿ ಮೊದಲು ಸ್ವೀಕರಿಸಲಾದ (ಪಂಚಮಾಪಕೃಷ್ಟದಿಂದ ಬಂದ) ಶ್ರುತಿಯ ಪ್ರಮಾಣ, ನಂತರ ನಾಲ್ಕು ಸಾರಣೆಗಳಿಂದ ಒದಗಿದ ಶ್ರುತಿಪ್ರಮಾಣಗಳು, ಇಯತ್ತೆಯಿಂದ ಲಕ್ಷ್ಯದಲ್ಲೂ ಶಾಸ್ತ್ರದಲ್ಲಿಯೂ ಸಿದ್ಧವಾಗುವ ಪ್ರಥಮಸ್ವರ— ಅದರ ಆವರ್ತಕ ಸ್ವರ ಇವುಗಳ ನಡುವೆಯಿರುವ ನಾದವ್ಯಾಪ್ತಿ ಇವುಗಳನ್ನು ಗಣನೆಗೆ ತೆಗೆದುಕೊಂಡಾಗ ಮತ್ತು ಸಾರಣಾ ಕ್ರಿಯೆಗಳಿಂದ ಪ್ರಕೃತಿಭೂತವಾದ ಈ ಏಳು ಮಾತ್ರ ದೊರೆಯಿತೆಂಬುದನ್ನು ನೆನೆದಾಗ ಸ್ವರಗಳು ಏಳೇ ಎಂಬ ಪ್ರಯೋಗಸಿದ್ಧವಾದ ಅಂಶವು ಹೊರಪಡುವುದು ಈ ಶ್ರುತಿನಿದರ್ಶನದ ಮತ್ತೊಂದು ಪ್ರಯೋಜನ.

ಸ್ಥಾಯಿಯ ವ್ಯಾಪ್ತಿಯ ಪ್ರಬೋಧವು ಆಗುವಂತೆಯೇ ಈ ಚತುರ್ಥಸಾರಣದಲ್ಲಿನ ಸ್ಥಾನಾಂತರಸ್ಥಿತ

116 ಮತಂಗೋದ್ಧೃತಿಯಾದ 'ಅಂತಃಶ್ರುತಿವಿವರ್ತಿನ್ಯೋ' ಎಂಬ ಭ್ರಷ್ಟಪಾಠವನ್ನು ಬಿಟ್ಟು ಕಲ್ಲಿನಾಥ (ಉ. ಗ್ರಂ., ಪು. 71) ನಿಂದ ಉದ್ಧೃತವಾದ ಈ ಸಮೀಚೀನ ಪಾಠವನ್ನು ಇಲ್ಲಿ ಸ್ವೀಕರಿಸಿದೆ.

117 ವಿಶ್ವಾವಸು, ಉದ್ಧೃತಿ, ಮತಂಗ, ಉ. ಗ್ರಂ., ಪು. 4.

ನಿಷಾದಪ್ರಾಪ್ತಿಯಿಂದ ಮತ್ತೂ ಒಂದು ಬಹುಮುಖ್ಯ ಪ್ರಯೋಜನವಿದೆ; ಲಕ್ಷ್ಯಪ್ರಸಿದ್ಧವೂ ಲಕ್ಷ್ಯೋಪಕಾರಕವೂ ಆಗಿರುವ ತತ್ತ್ವವೊಂದನ್ನೂ, ಶಾಸ್ತ್ರದಲ್ಲಿ ಅದನ್ನು ತರ್ಕಬದ್ಧವಾಗಿ ಪಡೆಯುವ ವಿಧಾನವನ್ನೂ ಅದು ತೋರಿಸಿಕೊಡುತ್ತದೆ. ಯಾವುದಾದರೊಂದು ಸ್ವರವು ತನ್ನಿಂದ ಚತುರ್ಥಸ್ವರದ ಅಂತರದಲ್ಲಿರುವ ಶ್ರುತಿಸ್ಥಾನವನ್ನು ಸ್ಪರ್ಶಿಸಿ ಸಮಶ್ರುತಿಕವಾಗಿಯೇ ಉಳಿದಿದ್ದರೆ ಮಧ್ಯಮಭಾವವೆಂಬ ಸಂವಾದಿತ್ವವನ್ನೂ ಹಾಗೆಯೇ ಪಂಚಮಸ್ವರದ ಅಂತರದಲ್ಲಿರುವ ಸಮಶ್ರುತಿಕರೂಪದಲ್ಲಿ ಸ್ಪರ್ಶಿಸಿದಾಗ ಪಂಚಮಭಾವದ ಸಂವಾದಿತ್ವವನ್ನು ಪಡೆಯುವುದೆಂಬ ಊರ್ಧ್ವಸ್ಪರ್ಶ ತತ್ವವನ್ನು ಮೂರನೆಯ ಸಾರಣಾಕ್ರಮದಲ್ಲಿ ಹೇಳಿದೆ. ನಾಲ್ಕನೆಯ ಸಾರಣೆಯಲ್ಲಿ ಮತ್ತೊಂದು ಬಗೆಯ ಊರ್ಧ್ವಸ್ಪರ್ಶವನ್ನು ಹೇಳಿದೆ. ಇದೇ ಆವರ್ತನ ಸ್ವರದ ಅಥವಾ ಅಷ್ಟಮಸ್ವರದ ಆವಿರ್ಭಾವಕ್ಕೆ ಕಾರಣವಾದುದು. ಎರಡು, ಮೂರು ಅಥವಾ ನಾಲ್ಕು ಶ್ರುತಿಗಳ ಪ್ರಮಾಣವುಳ್ಳ ಯಾವುದೋ ಸ್ವರವು ಆಯಾ ಶ್ರುತಿ ಸಂಖ್ಯೆಗೆ ಅನುಗುಣವಾಗಿ ಸಹಜಸ್ವಭಾವಸಿದ್ಧವಾದ ಗುಣದಲ್ಲಿ ಮೂರು ಬಗೆಯ ನಾದಾಂತರಗಳಲ್ಲಿ ಬಿಂಬ-ಪ್ರತಿಬಿಂಬ ಭಾವದಲ್ಲಿ ವಿವರ್ತಿತವಾಗುತ್ತದೆ. ಈ ಅಂತರಗಳ ಪ್ರಮಾಣವನ್ನು ಅವಲಂಬಿಸಿ ಊರ್ಧ್ವಸ್ಪರ್ಶದಿಂದ ಉದ್ಭವಿಸಿದ ಮೂರು ಸ್ವರಗಳು ಆಯಾ ಸ್ವರದೊಡನೆ ವಿವಿಧ ಸಾದೃಶ್ಯ-ವೈದೃಶ್ಯಗಳ ಮಿಶ್ರಣವನ್ನು ಪಡೆದಿರುತ್ತದೆ. ಇವುಗಳಲ್ಲಿ ಅಷ್ಟಮಸ್ವರದ ಭಾವದಲ್ಲಿ ಹುಟ್ಟುವುದೇ ಅತ್ಯಂತ ಸದೃಶವಾದುದು. ಈ ಬಿಂಬ-ಪ್ರತಿಬಿಂಬ ವಾದವನ್ನು ಇಲ್ಲಿ ಸ್ಥೂಲವಾಗಿ ಮಾತ್ರ ತಿಳಿಯಬೇಕು ಏಕೆಂದರೆ ಬಿಂಬ-ಪ್ರತಿಬಿಂಬಗಳಲ್ಲಿರುವ ಅವಿನಾಭಾವವು ಸ್ವರ-ಅಷ್ಟಮಸ್ವರಗಳಲ್ಲಿಲ್ಲ—ಇವೆರಡೂ ಸ್ವತಂತ್ರವಾದ ಅಸ್ತಿತ್ವವನ್ನೇ ಪಡೆದಿವೆ; ಅಲ್ಲದೆ ಪ್ರತಿಬಿಂಬದಂತೆ ಊರ್ಧ್ವಸ್ಪರ್ಶೋದ್ಭವವಾದ ಸ್ವರವು ಭ್ರಾಂತಿಜನ್ಯವಲ್ಲ. ಬಿಂಬ ಪ್ರತಿಬಿಂಬಗಳಲ್ಲಿ ಬಲ-ಎಡ ಎಂಬ ಪಾರ್ಶ್ವಗಳ ವೈಪರೀತ್ಯದಿಂದ ಸ್ವಲ್ಪ ಮಟ್ಟಿಗೆ ವೈದೃಶ್ಯವು ಕಂಡುಬರುವಂತೆಯೇ ಊರ್ಧ್ವಸ್ಪರ್ಶೋದ್ಭವ ಸ್ವರಗಳಲ್ಲಿ ಸ್ವಲ್ಪಮಟ್ಟಿನ ವೈದೃಶ್ಯವು ಉಂಟಾಗುತ್ತದೆ. ಇಂತಹ ವೈದೃಶ್ಯವು ಅತ್ಯಂತ ಅಲ್ಪವಾಗಿರುವುದು ಅಷ್ಟಮಸ್ವರ ಸ್ಥಾನದಲ್ಲಿ, ಎಂದರೆ ಇಪ್ಪತ್ತೆರಡು ಶ್ರುತಿಗಳ ಅಂತರದಲ್ಲಿ. ಹೀಗೆ ಹುಟ್ಟಿದ ಸ್ವರವನ್ನೇ ವಾದಿಯೆಂಬ ಹೆಸರಿನಿಂದ ಸ್ವರಾಷ್ಟಕದಲ್ಲಿಯೂ ಅಂಶವೆಂಬ ಹೆಸರಿನಿಂದ ಗೇಯ ಸಂದರ್ಭದಲ್ಲಿಯೂ ನಮ್ಮ ಶಾಸ್ತ್ರವು ವ್ಯವಹರಿಸುತ್ತದೆ.

ಹೀಗೆ ಸ್ವರವು ಸಮಶ್ರುತಿಕವಾಗಿ ತ್ರಿವಿಧವಾದ ಊರ್ಧ್ವಸ್ಪರ್ಶವನ್ನು ಪಡೆಯುವುದರಿಂದ ಸ್ಥಾಯಿಯಲ್ಲಿ ಲಕ್ಷ್ಯಪ್ರಸಿದ್ಧವಾಗಿರುವ ಆಧಾರಸ್ವರ, ಮಧ್ಯಮ, ಪಂಚಮ, ಆವರ್ತಕ, ಈ ಸ್ವರಗಳು ನೆಲೆಯಾಗಿ ದೊರೆತು ಸ್ವರಾಷ್ಟಕದ ಸ್ಥಿರಬಿಂದುಗಳ ಬೆನ್ನೆಲುಬು ಏರ್ಪಡುತ್ತದೆ. ಇದರಿಂದ ಆಧಾರಸ್ವರ—ಮಧ್ಯಮ, ಆವರ್ತಕಸ್ವರ—ಪಂಚಮ ಈ ಭಾವಗಳೂ, ಆಧಾರಸ್ವರ—ಪಂಚಮ, ಆವರ್ತಕಸ್ವರ—ಮಧ್ಯಮ ಈ ಭಾವಗಳೂ ಪರಸ್ಪರ ಸಮವಾಗಿದ್ದು ಪರಸ್ಪರ ವಿಪರ್ಯಾಸ (inverted) ಭಾವದಲ್ಲಿವೆ. ಇದು ಊರ್ಧ್ವಸ್ಪರ್ಶತತ್ತ್ವದಿಂದ ನೇರವಾಗಿ ಉಂಟಾದ ಜ್ಞಾನ. ಈ ಇಬ್ಬಗೆಯ ಭಾವಗಳ ಕ್ರಮವಾದ ಚಾಕ್ರಿಕ ಚಲನೆಯಿಂದ ಎಂದರೆ ಪಂಚಮಭಾವದ ಊರ್ಧ್ವಮುಖ ನಡೆಯಿಂದಲೂ, ಮಧ್ಯಮಭಾವದ ಅಧೋಮುಖ ನಡೆಯಿಂದಲೂ ಲಕ್ಷ್ಯಪ್ರಸಿದ್ಧವಾದ ಎಲ್ಲಾ ಸ್ವರಾಂತರಗಳೂ ದೊರೆಯುತ್ತವೆ. ಈ ಪ್ರಯೋಜನವನ್ನು ನಾವು ಚತುರ್ಥಸಾರಣಾಕ್ರಿಯೆಯಿಂದ ಹೊರಡಿಸಬಹುದಾದರೂ, ಭರತಾದಿ ಪೂರ್ವಾಚಾರ್ಯರಿಂದ ಇದು ವಿವಕ್ಷಿತವೇ ಎಂಬುದು ಸಂದೇಹಾಸ್ಪದ. ಏಕೆಂದರೆ ಈ ವಿಧಾನಕ್ಕೆ ಬೇಕಾಗುವ ಏಳು ಸ್ಥಾಯಿಗಳ ವ್ಯಾಪ್ತಿಯನ್ನು ಅವರು ವಾದ್ಯದಲ್ಲಿಯಾಗಲೀ ಮನುಷ್ಯಶಾರೀರದಲ್ಲಿಯಾಗಲೀ ಹೇಳಿಲ್ಲ. ಅಲ್ಲದೆ ಸ್ವರಾಷ್ಟಕದಲ್ಲಿನ ಸ್ವರವ್ಯವಸ್ಥೆಯನ್ನು ಈ ಇಬ್ಬಗೆಯ ಚಾಕ್ರಿಕ ಚಲನೆಯಿಂದ ಪಡೆದಾಗ ಅದರಲ್ಲಿ ಅನೇಕ ಓರೆಕೋರೆಗಳಾಗುತ್ತವೆ. ಇದನ್ನು ಮುಂದೆ ವಿವರಿಸಲಾಗುವುದು. ಸ್ವರಾಷ್ಟಕದ ಸ್ವರವ್ಯವಸ್ಥೆಯನ್ನು ಪ್ರಾಚೀನಾಚಾರ್ಯರು ಹೇಳಿದ್ದು ಗ್ರಾಮ, ಶ್ರುತಿಗಳಮೂಲಕ. ಇವೆರಡನ್ನೂ ಅವರು ಚಾತುಃಸ್ವರ್ಯದಿಂದಲೇ ಪಡೆದಿರಬಹುದೆಂಬುದನ್ನು ಮುಂದೆ ಚರ್ಚಿಸಲಾಗುವುದು.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ರುತಿನಿದರ್ಶನ ಪ್ರಯೋಗವು ಬಳಸುವ ತಂತ್ರದ ವಿಷಯದಲ್ಲಿ ಇನ್ನೂ ಒಂದು ಸಂಗತಿಯನ್ನಿಲ್ಲಿ ಗಮನಿಸಬಹುದು. ಪ್ರಮಾಣಭೂತವೂ ಗ್ರಾಮಾಂತರವ್ಯವಸ್ಥೆಗೆ ಕಾರಣಭೂತವೂ ಆಗಿರುವ ಅಪಕೃಷ್ಟ ಪಂಚಮ ಸಂಬಂಧಿಯಾದ ಶ್ರುತಿಯನ್ನು ಹೇಳಿರುವುದರಿಂದ ಮಧ್ಯಮಗ್ರಾಮದ ಪ್ರಯೋಜನವನ್ನು ಪ್ರಥಮ ಸಾರಣಾಕ್ರಿಯೆಯಲ್ಲಿ ಪಡೆದುಕೊಂಡರೂ, ಸ್ಥಾಯಿಯ ಎಲ್ಲಾ ಸ್ವರಾಂತರಗಳನ್ನು ತಾತ್ವಿಕವಾಗಿ ಪಡೆದಿರುವುದು ಪ್ರಕೃತಿಯಾದ ಷಡ್ಜಗ್ರಾಮದಿಂದಲೇ. ಹೀಗೆ ಮಾಡುವುದರಲ್ಲಿ ಪೂರ್ವಾಚಾರ್ಯರ ಉದ್ದೇಶವು ಸ್ವರಾಷ್ಟಕವನ್ನು ಪರಸ್ಪರಾನುರೂಪತೆಯುಳ್ಳ (symmetrical) ಎರಡು ಅಂಗಗಳ, ಎಂದರೆ ಚಾತುಃಸ್ವರ್ಯಗಳ ರೂಪದಲ್ಲಿ ಪಡೆಯುವುದೇ ಆಗಿರಬಹುದು. ಮಧ್ಯಮಗ್ರಾಮದಿಂದ ಇದು ಸಾಧ್ಯವಾಗುವುದಿಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು. ಈ ಎರಡು ಚಾತುಃಸ್ವರ್ಯಗಳಲ್ಲಿಯೂ ಪರಸ್ಪರಾನುರೂಪತೆಯಿರುವುದರಿಂದಲೇ ಸಂವಾದಭಾವಗಳನ್ನೂ, ಸಂವಾದಿಗಳ ಸಮಶ್ರುತಿಕತ್ವವು ಇದಕ್ಕೆ ಕಾರಣವಾಗಿರುವುದನ್ನೂ, ಊರ್ಧ್ವಸ್ಪರ್ಶ ತತ್ತ್ವವನ್ನೂ, ಆದುದರಿಂದ ಸ್ವರಾಷ್ಟಕದಲ್ಲಿ ಸ್ವರವ್ಯವಸ್ಥೆಯನ್ನೂ, ಅದರಿಂದ ಹುಟ್ಟುವ ರಕ್ತಿತತ್ತ್ವವನ್ನೂ ಶಾಸ್ತ್ರದಲ್ಲಿ ಹೇಳಲು ಸಾಧ್ಯವಾಗುತ್ತದೆ.

ಸರಿಗ ಮತ್ತು ಪಧನಿ ಎಂಬ ಎರಡು ತ್ರೈಸ್ವರ್ಯಗಳಲ್ಲಿಯೂ ಸ್ವರಗಳು 4, 3, 2 ಎಂಬ ಸಂಖ್ಯೆಗಳ ಶ್ರುತಿ ಪ್ರಮಾಣವನ್ನು ಕ್ರಮವಾಗಿ ಪಡೆದಿರುವುದು ಇಲ್ಲಿ ವಿವೇಚನೀಯವಾಗಿದೆ. ತ್ರೈಸ್ವರ್ಯದ ಅಂತ್ಯದಲ್ಲಿ ಕನಿಷ್ಠ ಪ್ರಮಾಣದ ಸ್ವರಗಳು, ಬುಡದಲ್ಲಿ ಗರಿಷ್ಠ—ಎಂದರೆ ನಾಲ್ಕು ಶ್ರುತಿಗಳ–ಪ್ರಮಾಣದ ಸ್ವರಗಳು ಮತ್ತು ಮಧ್ಯದಲ್ಲಿ ಇವೆರಡರ ಮಧ್ಯವರ್ತಿಯೂ ಸರಾಸರಿಯೂ ಆಗಿರುವ ಸ್ವರಗಳು, ಹೀಗೆ ಈ ತ್ರೈಸ್ವರ್ಯಗಳ ಸ್ವರವ್ಯವಸ್ಥೆ. ಇವೆರಡನ್ನೂ ಸಂಬಂಧಿಸುವುದು ಚತುಃಶ್ರುತಿಕವಾದ, ಎಂದರೆ ಷಡ್ಜ ಪಂಚಮಗಳ ಜಾತಿಗೆ ಸೇರಿದ, ಮಧ್ಯಮ ಸ್ವರ. ಊರ್ಧ್ವಸ್ಪರ್ಶದಿಂದ ಅನ್ಯಸ್ವರಭಾವದ ಬೋಧೆಯು ಸ್ವರಾಷ್ಟಕದಲ್ಲಿ ಉಂಟಾಗುವುದೂ, ಸಂವಾದ ಭಾವಗಳ ಸ್ಫುರಣೆಯಾಗುವುದೂ ಈ ಮಧ್ಯಮಸ್ವರವು ಎರಡೂ ತ್ರೈಸ್ವರ್ಯಗಳನ್ನು ಸೇರಿಸುವುದರಿಂದ. ಅದಕ್ಕೆ ಈ ಸಾಮರ್ಥ್ಯವು ಬರುವುದು ಷಡ್ಜಪಂಚಮ ಸದೃಶವಾದ ಪ್ರಮಾಣವೂ (ಸಮಶ್ರುತಿಕತ್ವವೂ) ತಜ್ಜನ್ಯವಾದ ಸದೃಶವಾದ ಗುಣವೂ ಇರುವುದರಿಂದ. ಹೀಗೆ ಸ್ಥಾಯಿಯಲ್ಲಿ ಮಧ್ಯಮವು ಅತ್ಯಂತ ಮುಖ್ಯವಾದ ಸ್ವರ. ಇದನ್ನು ಮುಂದೆ ಇನ್ನಷ್ಟು ವಿವರಿಸಲಾಗುವುದು. ಇಲ್ಲಿ ಪ್ರಕೃತವಾದುದು ಏನೆಂದರೆ ಮಧ್ಯಮವು ಚತುಃಶ್ರುತಿಕವೆಂದೂ ಷಡ್ಜ ಪಂಚಮಗಳೊಡನೆ ಸಮಶ್ರುತಿಕವಾಗಿದೆಯೆಂದೂ ಚತುರ್ಥಸಾರಣದಿಂದ ಸಿದ್ಧವಾಗುವುದರಿಂದ ಷಡ್ಜಗ್ರಾಮದ ಸ್ವರಗಳ ಶ್ರುತಿವಿನಿಯೋಗವು ರೀತಿಯಲ್ಲಿ ನಿರ್ಧರವಾಗುತ್ತದೆ :

| ಸ್ವರ | ಸ | ರಿ | ಗ | ಮ | ಪ | ಧ | ನಿ |
|---|---|---|---|---|---|---|---|
| ಶ್ರುತಿಗಳ ಸಂಖ್ಯೆ | 4 | 3 | 2 | 4 | 4 | 3 | 2 |

ಇದರಲ್ಲಿ ಸಮಶ್ರುತಿಕಗಳಾದ ಸ್ವರಗಳು ಸ್ವಶ್ರುತಿಸ್ಥಾನದಿಂದ ಹದಿಮೂರನೆಯ ಶ್ರುತಿಸ್ಥಾನದಲ್ಲಿ ಊರ್ಧ್ವಸ್ಪರ್ಶದಿಂದ ಪುನರಾವರ್ತಿತವಾಗುವುದು ಸ್ಪಷ್ಟವಾಗಿಯೇ ಇದೆ. ಮಧ್ಯಮಭಾವಕಾರಣವಾದ ಒಂಬತ್ತನೆಯ ಶ್ರುತಿಸ್ಥಾನವನ್ನು ಮುಂದೆ ಪ್ರತ್ಯೇಕವಾಗಿ ವಿವೇಚಿಸಲಾಗುವುದು. ಮೂರನೆಯ ಸಾರಣೆಯಲ್ಲಿ ಹೇಳಿದ ಒಂದು ಮಾತು ಇಲ್ಲಿ ಪುನರುಕ್ತಿಗೆ ಯೋಗ್ಯವಾಗಿದೆ. ಸ್ವರತ್ವದ ಗೋಚರವು ನಾದದ ಊರ್ಧ್ವಮುಖ ಚಲನೆಯಲ್ಲಿ ವಿವಿಧ ಅಂತರಗಳಲ್ಲಿ—ಮುಖ್ಯವಾಗಿ ಮೂರು ಅಂತರಗಳಲ್ಲಿ—ಗೋಚರವಾಗುವುದು. ತ್ರೈಸ್ವರ್ಯವೊಂದರಲ್ಲಿ ನಾದವು ಮೇಲುಮೇಲಕ್ಕೆ ನಡೆದಂತೆಲ್ಲಾ ಸ್ವರತ್ವಪ್ರಾಪ್ತಿಗೆ ಬೇಕಾದ ಶ್ರುತ್ಯಂತರವು ಕಡಿಮೆಯಾಗುತ್ತಾ ಬರುತ್ತದೆ. ಗರಿಷ್ಠ ಪ್ರಮಾಣವನ್ನುಳ್ಳ ಷಡ್ಜಮಧ್ಯದ ಪಂಚಮಗಳು ಅತ್ಯಂತ ಬಲಿಷ್ಠ ಸ್ವರಗಳಾಗಿಯೂ ಕನಿಷ್ಠ ಪ್ರಮಾಣಗಳ

ನ್ನುಳ್ಳ ಗಾಂಧಾರ ನಿಷಾದಗಳು ಅಲ್ಪರಂಜಕಗಳಾಗಿ ವಿವಾದಿಗಳೆಂದು ಪ್ರಸಿದ್ಧವಾಗಿರುವುದೂ, ಇವುಗಳ ಮಧ್ಯವರ್ತಿಗಳಾದ ರಿಷಭಧೈವತಗಳು ಗಾನಸಂದರ್ಭದಲ್ಲಿ ಷಡ್ಜ ಮಧ್ಯಮಪಂಚಮಗಳು ಅಂಶಗಳಾಗಿರುವಾಗ ಸ್ವರಪ್ರವಾಹದ ಅವಿಚ್ಛಿನ್ನತೆ ಮತ್ತು ಶಕ್ತಿಗಳಿಗೆ ಕೇವಲ ಉಪಕಾರಕಗಳೂ ಉಪಷ್ಟಂಭಕಗಳೂ ಆಗಿರುವ ಅನುವಾದಿ ಭಾವಗಳಲ್ಲಿರುವುದೂ ಈ ಸ್ವರಗಳ ಗಾತ್ರಕ್ಕೂ ಅವುಗಳಲ್ಲಿರುವ ರಕ್ತಿಧರ್ಮಕ್ಕೂ ಇರುವ ಪರಸ್ಪರ ಸಂಬಂಧವನ್ನು ತಿಳಿಸುತ್ತವೆ.

ಷಡ್ಜಗ್ರಾಮವಾಗಲೀ ಮಧ್ಯಮಗ್ರಾಮವಾಗಲೀ ಒಂದು ಸ್ಥಾಯಿಯಲ್ಲಿರುವ ನಾದವ್ಯಾಪ್ತಿಯಲ್ಲಿ ಸ್ವರವ್ಯವಸ್ಥೆಯನ್ನು ಒಳಗೊಂಡಿರುವುದರಿಂದಲೂ, ಇವೆರಡರ ಮಧ್ಯದಲ್ಲಿನ ವ್ಯತ್ಯಾಸವು ಕೇವಲ ಪಂಚಮದ ವಿಕೃತಿಯಿಂದ ಉಂಟಾಗುವುದರಿಂದಲೂ, ಈ ವಿಕೃತಿಯನ್ನು ಪ್ರಥಮ ಸಾರಣಾಕ್ರಿಯೆಯಲ್ಲಿ ಪರಿಗಣಿಸಿರುವುದರಿಂದಲೂ ಈ ಶ್ರುತಿ ನಿದರ್ಶನದಿಂದ ಸ್ಥಾಯಿಯ ವ್ಯಾಪ್ತಿಯನ್ನೇ ಹೇಳಿದೆ. ಇದು ದ್ವಾವಿಂಶತಿ ಶ್ರುತಿಗಳ ಪ್ರಮಾಣದಲ್ಲಿರುತ್ತದೆ ಎಂದು ತೋರಿಸುವುದೇ ಈ ಶ್ರುತಿನಿದರ್ಶನದ ಮುಖ್ಯ ಪ್ರಯೋಜನ. ಅದಕ್ಕೆಂದೇ ಸ್ಥಾಯಿಯಲ್ಲಿ ಸ್ವರವ್ಯವಸ್ಥೆಯನ್ನು ಹೇಳಿದಕೂಡಲೇ ಭರತನೂ, ಸ್ಥಾಯಿಗಳನ್ನು ವಿವರಿಸಿದಕೂಡಲೇ ಶಾರ್ಙ್ಗದೇವನೂ ಶ್ರುತಿನಿದರ್ಶನಗಳನ್ನು ಕೊಟ್ಟಿದ್ದಾರೆ.

ನಾಲ್ಕನೆಯ ಸಾರಣಾವಿಧಿಯನ್ನು ಭರತಮುನಿಯು 'ತದ್ವತ್ ಪುನರಪಕೃಷ್ಟಾಯಾಂ ಪಂಚಮಮಧ್ಯಮ-ಷಡ್ಜಾ ಇತರಸ್ಯಾಂ ಮಧ್ಯಮಗಾಂಧಾರನಿಷಾದವಂತಃ ಪ್ರವೇಕ್ಷ್ಯಂತಿ ಚತುಃಶ್ರುತ್ಯಭ್ಯಧಿಕತ್ವಾತ್' ಎಂದು ಹೇಳಿದ್ದಾನೆ. ಇದನ್ನು ಅಭಿನವಗುಪ್ತನು ಹೀಗೆ ವಿವರಿಸಿದ್ದಾನೆ:

ತ್ರಯೋ ಧ್ರುವವೀಣಾಯಾಂ ಸರ್ವಸ್ವರೇಭ್ಯಃ ಶ್ರುತಿಮಪಕರ್ಷಣೇನ ತದ್ಗತಾಃ ಪಂಚಮಮಧ್ಯಮಷಡ್ಜಾ ಧ್ರುವವೀಣಾಗತೈರ್ಯಥಾಕ್ರಮಂ ಮಧ್ಯಮಗಾಂಧಾರನಿಷಾದೈಃ ಸ್ಥಾನಸಾಮ್ಯಂ ಮಿಲಂತಿ । ಯತಸ್ತಸ್ಯಾ ವೀಣಾಯಾಃ ಸರ್ವೇ ಸ್ವರಾಶ್ಚತಸೃಭಿಃ ಶ್ರುತಿಭಿರಧಿಕಾಃ । ಏವಂ ಸ್ವರತ್ರಯೇ ಪ್ರತ್ಯೇಕಂ ಚತಸ್ರಃ ಶ್ರುತಯಃ ಸ್ಫುಟೀಕೃತಾ ಇತಿ ದ್ವಾದಶ ಶ್ರುತಯ ಉಪಲಬ್ಧಾ ಭವಂತಿ ।[110]

ಈ ನಾಲ್ಕು ಸಾರಣಾಕ್ರಿಯೆಗಳಿಂದಲೂ ಒಟ್ಟು ಇಪ್ಪತ್ತೆರಡು ಶ್ರುತಿಗಳು ಹೀಗೆ ಲಭಿಸುತ್ತವೆ:

| | | |
|---|---|---|
| ಎರಡನೆಯ ಸಾರಣೆಯಿಂದ ಗಾಂಧಾರ ನಿಷಾದಗಳಲ್ಲಿ ಪ್ರತಿಯೊಂದಕ್ಕೂ ಎರಡರಂತೆ | ಒಟ್ಟು | 4 ಶ್ರುತಿಗಳು |
| ಮೂರನೆಯ ಸಾರಣೆಯಿಂದ ರಿಷಭಧೈವತಗಳಲ್ಲಿ ಪ್ರತಿಯೊಂದಕ್ಕೂ ಮೂರರಂತೆ | ಒಟ್ಟು | 6 ಶ್ರುತಿಗಳು |
| ನಾಲ್ಕನೆಯ ಸಾರಣೆಯಿಂದ ಷಡ್ಜ ಮಧ್ಯಮ ಪಂಚಮಗಳಲ್ಲಿ ಪ್ರತಿಯೊಂದಕ್ಕೂ ನಾಲ್ಕರಂತೆ | ಒಟ್ಟು | 12 ಶ್ರುತಿಗಳು |
| | ಮೊತ್ತ | 22 ಶ್ರುತಿಗಳು |

ಇದನ್ನೇ ಸಂಗ್ರಹವಾಗಿ ಭರತನು 'ಏವಮೇತೇನ ಶ್ರುತಿನಿದರ್ಶನೇನ ದ್ವೌ ಗ್ರಾಮಿಕ್ಯೌ ದ್ವಾವಿಂಶತಿಶ್ರುತಯಃ ಪ್ರತ್ಯವಗಂತವ್ಯಾಃ' ಎಂದಿದ್ದಾನೆ. ಅಭಿನವಗುಪ್ತನು ಈ ಅರ್ಥವನ್ನು ಹೀಗೆ ವಿಶದಗೊಳಿಸಿದ್ದಾನೆ:

ತೇನ ಚತಸ್ರಃ ಷಟ್ ದ್ವಾದಶೇತಿ ದ್ವಾವಿಂಶತೇಃ ಉಪಲಭ್ಯೋ ಜಾತಃ । ಋಷಭ(ಧೈವತಾ)ಭ್ಯಾಂ ಚ ಗನೀ ದ್ವಿಶ್ರುತ್ಯಧಿಕಾವಿತಿ ಶ್ರುತಿದ್ವಯಪಾತನೇ ಽವಶ್ಯಂ ತಯೋಸ್ತತ್ರ ಪ್ರವೇಶಃ । ರಿಧೌ ಚ ಸಪಾಭ್ಯಾಂ ದ್ವಿ (! ತ್ರಿ-)ಶ್ರುತ್ಯಧಿಕೌ ಧ (! ಸ)ಮಪಾಶ್ಚ ನಿಗಮೇಭ್ಯಃ ಚತುಃಶ್ರುತ್ಯಧಿಕಾ ಇತಿ ತಾವತೀಕಾನಾಂ ಶ್ರುತೀನಾಂ ......[112] ಪರವರ್ತಿನಿ ಸ್ವರೇ ಪ್ರವೇಶಯೇತ್ । ಸ ತು ದ್ವಿಶ್ರುತ್ಯಧಿಕತ್ವಾದಿತ್ಯಾದಯಸ್ತ್ರಯೋ ಹೇತವಃ ಪ್ರವೇಶನೀಯಸ್ವರವಿಶೇಷಾದಪಿ ವ್ಯಾಖ್ಯಾತ ಏವ । ತದಾಹ **ಏವಮೇತೇನ ಶ್ರುತಿನಿದರ್ಶನೇನೇತಿ ।** ತ ......[112] ಸ್ಯಾದಿತ್ಯೇವ ದ್ವಿಶ್ರುತಿಃ । ಏವಂ ಶ್ರುತೇಃ ಸ್ವರೂಪಮುಪಲಬ್ಧಮ್ । ಅತ್ರ **ದ್ವೇ ದ್ವಯೋರಿತಿ**

ತಾಃ ಶ್ರುತಿಷು ತ್ರಿಷು । ಏವಂ ಧ್ರುವವೀಣಾಶ್ರುತೇರಿಯತ್ತಾತ್ರ (ಸ್ಫುಟೀಕೃತಾ) ಭವತಿ । ದ್ವಿಶ್ರುತಿಭಿಸ್ತ್ರಿಶ್ರುತಿಚತುಃ-ಶ್ರುತಿಸ್ವರಸ್ವರೂಪಂ ಚ ಶ್ರುತೇರಿಯತ್ತಾ (ನಿರ್ಧಾರಣಾ) ಸ್ಫುಟೀಕರಣಾರ್ಥಂ ಪ್ರಸ್ತಾರಾದೇವ ದೃಶ್ಯತೇ । [118]

ಶ್ರುತಿನಿದರ್ಶನದ ಈ ಪ್ರಯೋಗಸಂದರ್ಭದಲ್ಲಿ ಒಂದು ಪ್ರಶ್ನೆಯು ಸಹಜವಾಗಿಯೇ ಏಳುತ್ತದೆ. ಇದಕ್ಕೆ ನಾಲ್ಕೇ ಸಾರಣಾಕ್ರಿಯೆಗಳೇಕೆ ?

• ನಾಲ್ಕಕ್ಕಿಂತ ಕಡಿಮೆಯಾದ ಸಾರಣಾಕ್ರಿಯೆಗಳಿದ್ದರೆ ಸ್ವರವು ಪಡೆಯಬಹುದಾದ ಎಲ್ಲಾ ಶ್ರುತಿಸ್ಥಾನಗಳೂ ಸ್ಥಾಯಿಯಲ್ಲಿ ದೊರೆಯುವುದಿಲ್ಲವೆಂಬುದಂತೂ ಸ್ಪಷ್ಟವಾಗಿಯೇ ಇದೆ. ಪ್ರಥಮಸಾರಣೆಯಲ್ಲಿ ಶ್ರುತಿಯ ವಿಶೇಷ ಲಾಭವೇನೂ ಇಲ್ಲ ; ಎರಡನೆಯದರಲ್ಲಿ ನಾಲ್ಕು ಶ್ರುತಿಗಳುಮಾತ್ರ, ಮೂರನೆಯದರಲ್ಲಿ ಆರು ಮತ್ತು ನಾಲ್ಕನೆಯದರಲ್ಲಿ ಹನ್ನೆರಡು—ಹೀಗೆ ಒಟ್ಟು ಇಪ್ಪತ್ತೆರಡು ಶ್ರುತಿಗಳು ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿ ಲಭಿಸುತ್ತವೆ. ಹಾಗಾದರೆ ಐದು, ಆರು ಮುಂತಾಗಿ ಸಾರಣಾಕ್ರಿಯೆಗಳಿದ್ದರೆ ಇನ್ನೂ ಹೆಚ್ಚು ಶ್ರುತಿಗಳು ಲಭಿಸಬಹುದಲ್ಲ, ಅದನ್ನೇಕೆ ಇಲ್ಲಿ ಹೇಳಿಲ್ಲ ? ಮೊದಲನೆಯದಾಗಿ, ಇನ್ನೂ ಹೆಚ್ಚು ಗಾನೋಪಯೋಗೀಶ್ರುತಿಗಳು ದೊರೆಯುವುದಿಲ್ಲ. ಏಕೆಂದರೆ ಶ್ರುತಿಯ ಅಪಕರ್ಷಣದಿಂದ ಹಿಂದಿನ ಸ್ವರವನ್ನು ಪ್ರವೇಶಿಸಿ ಏಕೀಭಾವವನ್ನು ಪಡೆಯುವಂತಹ ಯಾವ ಸ್ವರವೂ ಸ್ಥಾಯಿಯಲ್ಲಿ ಉಳಿದಿಲ್ಲ. ಹಾಗೆ ಪುನಃ ಸರ್ವತ್ರವಾಗಿ ಒಂದು, ಎರಡು, ಹೀಗೆ ಶ್ರುತಿಗಳನ್ನು ಅಪಕರ್ಷಿಸಿದರೂ ಹಿಂದೆ ಲಭಿಸಿದ ಶ್ರುತಿಸ್ಥಾನಗಳೇ ಸ್ವರಗತವಾಗಿ ಅಥವಾ ಅಂತರವರ್ತಿಗಳಾಗಿ ದೊರೆಯುತ್ತವೆಯೇ ಹೊರತು ಸ್ವರತ್ವವನ್ನು ಉಂಟುಮಾಡಬಲ್ಲ ಎಂದರೆ ಮೇಲೆ ಹೇಳಿದ ಅನುರಣನ ಮುಂತಾದವುಗಳನ್ನೂ ಸ್ಥಾನಾಂತರದಲ್ಲಿ ಪರಸ್ಪರತೆಯನ್ನೂ, ರಕ್ತಿಯನ್ನೂ ಉಂಟುಮಾಡಬಲ್ಲ ಯಾವ ಹೊಸ ಶ್ರುತಿಸ್ಥಾನವೂ ದೊರೆಯುವುದಿಲ್ಲ. ಉದಾಹರಣೆಗೆ ಐದನೆಯ ಶ್ರುತಿಯಷ್ಟನ್ನು ಸರ್ವಸ್ವರಗಳಲ್ಲಿಯೂ ಅಪಕರ್ಷಿಸಲು ತೊಡಗಿದರೆ ಎಷ್ಟು ಪ್ರಮಾಣದಲ್ಲಿ ಇದನ್ನು ಮಾಡಬೇಕು, ಗಾನವ್ಯವಹಾರದಲ್ಲಿಯಾಗಲೀ, ಶ್ರೋತ್ರೇಂದ್ರಿಯ ಗ್ರಹಣಶಕ್ತಿಯ ಪರಿಮಿತಿಯಲ್ಲಾಗಲೀ, ಸಾಧಾರಣ ವಾಗ್ವ್ಯವಹಾರದಲ್ಲಿಯಾಗಲೀ ಇದಕ್ಕೆ ಮಾತೃಕೆ ಉಂಟೇ, ಅದಕ್ಕೆ ಶ್ರುತಿಯೆಂದು ಕರೆಯಬಹುದಾದ ಗುಣ, ಪ್ರಮಾಣಗಳು ಇವೆಯೇ ಎಂದು ಮುಂತಾದ ಪ್ರಶ್ನೆಗಳು ಎದ್ದು ನಿಲ್ಲುತ್ತವೆ. ಇವಕ್ಕೆ ಉತ್ತರವಿಲ್ಲ. ಹೋಗಲಿ, ಇಂತಹ ಮುಂದುವರಿದ ಸಾರಣೆಯಿಂದ ಶಾಸ್ತ್ರಕ್ಕಾಗಲೀ ಲಕ್ಷ್ಯಕ್ಕಾಗಲೀ ಕಿಂಚಿತ್ತಾದರೂ ಪ್ರಯೋಜನವುಂಟೇ ಎಂದರೆ ಅದೂ ಇಲ್ಲ. ಅಷ್ಟೇ ಅಲ್ಲ, ಹೀಗೆ ಮುಂದುವರೆದ ಸಾರಣಾಕ್ರಿಯೆಯು ಈ ಪ್ರಯೋಗದ ಪ್ರಯೋಜನ ಪ್ರತಿಜ್ಞೆಗಳನ್ನು ಮೀರಿದೆ. ನಾಲ್ಕೂ ಸಾರಣೆಗಳಿಂದ ಎರಡು ಶ್ರುತಿಗಳಿಗಿಂತ ಕಡಿಮೆಯಾದ ಮತ್ತು ನಾಲ್ಕು ಶ್ರುತಿಗಳಿಗಿಂತ ಹೆಚ್ಚಾದ ಸ್ವರವು ಪ್ರಕೃತಿಭೂತವಾದ ಸ್ವರಾಷ್ಟಕದಲ್ಲಿ ಇಲ್ಲವೆಂದು ಸಿದ್ಧವಾಗಿದೆಯಷ್ಟೆ. ಈ ನಿಯಮವು ಪ್ರಾಚೀನಭಾರತೀಯ ಸಂಗೀತಶಾಸ್ತ್ರದಲ್ಲಿ ಕಟ್ಟುನಿಟ್ಟಾಗಿ ಪಾಲಿಸಲ್ಪಟ್ಟಿದೆ. ಒಂದು ಶ್ರುತಿಯ ಹಾಗೂ ಐದು, ಆರು ಮುಂತಾದ ಶ್ರುತಿಗಳ ಸ್ಥಾನಗಳಲ್ಲಿ ಸ್ವರದ ಸ್ಪರ್ಶವು ರಕ್ತಿವಿಹೀನವಾಗಿರುತ್ತದೆಂಬ, ಎಂದರೆ ಸ್ವರತ್ವವನ್ನು ಪಡೆದಿರುವುದಿಲ್ಲವೆಂಬ ಪ್ರಮೇಯವು ಅಲ್ಲಿ ಸ್ವೀಕೃತವಾಗಿತ್ತು. ನಾಲ್ಕೂ ಸಾರಣೆಗಳಿಂದ ಒಟ್ಟು ನಾಲ್ಕು ಶ್ರುತಿಗಳಷ್ಟು ಅಂತರವು ಚಲವೀಣೆಯ ಪ್ರತಿಯೊಂದು ಸ್ವರದಲ್ಲಿಯೂ ಕಡಿಮೆಯಾಗಿದೆ. ಐದನೆಯ ಶ್ರುತಿಗಾಗಿ ಪುನಃ ಅಪಕರ್ಷಿಸಿದರೆ ಈ ಅಂತರವು ಐದು ಶ್ರುತಿಗಳಷ್ಟಾಗುತ್ತದೆ. ಆಗ ಆಯಾ ಸ್ವರಗಳನ್ನು ಪರಸ್ಪರವಾಗಿ ಹೋಲಿಸಿ ತಿಳಿಯಬಹುದಾದ ಯಾವ ಅಂತರವೂ ಇಡೀ ಸ್ವರಾಷ್ಟಕದಲ್ಲಿ ದೊರೆಯುವುದಿಲ್ಲ. ಐದು ಶ್ರುತಿಗಳ ಅಂತರವನ್ನು ರಿಷಭ ಮತ್ತು ಗಾಂಧಾರಗಳಿಂದ ಕೂಡಿದ ಅಂತರವೆಂದೂ ಆರು ಶ್ರುತಿಗಳ ಅಂತರವನ್ನು ಎರಡು ರಿಷಭಗಳ ಅಥವಾ ಗಾಂಧಾರ ಮತ್ತು ಮಧ್ಯಮಗಳ ಸಂಕಲನದಿಂದ ಹುಟ್ಟಿದ ಅಂತರವೆಂದೂ, ಏಳು ಶ್ರುತಿಗಳ ಅಂತರವನ್ನು ಷಡ್ಜ ಮತ್ತು ರಿಷಭ, ರಿಷಭ ಮತ್ತು

118 ಅಭಿನವಗುಪ್ತ, ಉ. ಗ್ರಂ., ಪು. 23-24.

ಎರಡು ಗಾಂಧಾರ ಮುಂತಾದವುಗಳ ಸಂಕಲನದಿಂದ ಹುಟ್ಟಿದ ಅಂತರವೆಂದೂ, ಇತ್ಯಾದಿಯಾಗಿ ತಿಳಿಯಬೇಕಾಗುತ್ತದೆ. ಇದು ಯಾವುವೇ ಸಂಗೀತ ಪದ್ಧತಿಯ ಶಾಸ್ತ್ರಮರ್ಯಾದೆಯನ್ನು ಮೀರಿದುದು. ದ್ವಿ, ತ್ರಿ ಮತ್ತು ಚತುಃಶ್ರುತಿಕ ಅಂತರಗಳನ್ನು ಅವಿಭಾಜ್ಯವೂ, ಏಕಾಂಡವೂ, ಸಮಗ್ರವೂ ಆಗಿರುವ ಸ್ವರಗಳೆಂದು ವ್ಯವಹರಿಸುವುದು ಭಾರತೀಯ ಸಂಗೀತದ ಪ್ರಾಥಮಿಕ ತತ್ತ್ವಗಳಲ್ಲಿ ಒಂದು. ವಿವಿಧ ಸ್ವರಗಳ ಪ್ರಮಾಣದ ಸಂಕಲನದಿಂದ ಉದ್ಭವಿಸುವ ಸಂಕೀರ್ಣ ಶ್ರುತಿಪ್ರಮಾಣಗಳನ್ನು ಸ್ವರಗಳೆಂದು ಪ್ರಾಚೀನ ಭಾರತೀಯ ಸಂಗೀತಾಚಾರ್ಯರು ಒಪ್ಪಲಿಲ್ಲ. ಹಾಗಾದರೆ ಷಡ್ಜ, ಮಧ್ಯಮ, ಪಂಚಮಗಳ ಶ್ರುತಿಪ್ರಮಾಣಗಳನ್ನು ಗಾಂಧಾರ ಅಥವಾ ನಿಷಾದದ ಪ್ರಮಾಣದ ಎರಡರಷ್ಟು ಎಂದೇಕೆ ಭಾವಿಸಬಾರದು ? ಇದರ ಉತ್ತರವು ಶಾಸ್ತ್ರದಲೂ ಲಕ್ಷ್ಯದಲ್ಲೂ ದೊರೆಯುತ್ತದೆ. ಮೇಲೆ ಹೇಳಿದ ಸಾರಣಾಕ್ರಿಯೆಗಳಲ್ಲಿ ಗಾಂಧಾರವು ಋಷಭದಲ್ಲಿಯೂ ನಿಷಾದವು ಧೈವತದಲ್ಲಿಯೂ ಪ್ರವೇಶಿಸುವುದಕ್ಕೆ ಯಾವ ಯಾವ ಶ್ರುತಿಗಳೂ ಅವುಗಳ ಪ್ರಮಾಣಗಳೂ ಬೇಕಾಗಿವೆಯೋ ಅವುಗಳ ದ್ವಿಗುಣದಿಂದ ಅಥವಾ ಆಯಾ ಪ್ರಮಾಣದ ದ್ವಿಗುಣದಿಂದ ಷಡ್ಜ ಮಧ್ಯಮ ಪಂಚಮಗಳು ಕ್ರಮವಾಗಿ ನಿಷಾದ ಗಾಂಧಾರ ಮಧ್ಯಮಗಳಲ್ಲಿ ಪ್ರವೇಶಿಸುವಾಗ ಕಳೆದುಕೊಳ್ಳುವ ನಾಲ್ಕು ಶ್ರುತಿಗಳು ಉಂಟಾಗುವುದಿಲ್ಲ. ಈ ಕಾರಣದಿಂದಲೇ ಅವು ಭಿನ್ನ ಭಿನ್ನವಾದ ವ್ಯಕ್ತಿತ್ವವಾದ ಪಡೆದಿರುವುದು. ಪ್ರಾಯೋಗಿಕವಾಗಿ ಸಹ ವೀಣೆಯ ತಂತಿ ಮುಂತಾದ ಸಾಧನಗಳಿಂದ ಅಳೆದು ನೋಡಿದಾಗಲೂ ಚತುಃಶ್ರುತಿಕಸ್ವರಗಳು ದ್ವಿಶ್ರುತಿಕಗಳ ಎರಡರಷ್ಟಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಹಾಗಾದರೆ ಇದೇ ವಾದವನ್ನು ಐದು, ಆರು ಮುಂತಾದ ಶ್ರುತಿಗಳ ಪ್ರಮಾಣಕ್ಕೂ ಅನ್ವಯಿಸಿ ಅವುಗಳು ವಿಶಿಷ್ಟ ವ್ಯಕ್ತಿತ್ವವುಳ್ಳವುಗಳೆಂದೂ ಅವುಗಳಲ್ಲಿ ಸ್ವರತ್ವವಿದೆಯೆಂದೂ ಏಕೆ ವಾದಿಸಬಾರದು ? ಹೀಗೆ ಮಾಡಬಹುದು; ಆಧುನಿಕ ಕರ್ಣಾಟಕ ಸಂಗೀತ ಶಾಸ್ತ್ರದಲ್ಲಿ ಮಾಡಿಯೂ ಇದೆ. ಆದರೆ ಇದರಿಂದ ಇಪ್ಪತ್ತೆರಡಕ್ಕಿಂತ ಹೆಚ್ಚು ಶ್ರುತಿಗಳು ಸ್ಥಾಯಿಯಲ್ಲಿ ಲಭಿಸುವುದಿಲ್ಲ. ಅಲ್ಲದೆ ಪ್ರಾಚೀನ ಸಂಗೀತ ಶಾಸ್ತ್ರವನ್ನು ಅಭ್ಯಾಸಮಾಡುತ್ತಿರುವಾಗ ಅದರ ಮರ್ಯಾದೆಗೆ ಹೊರಪಡದೆ ಸಾವಿರಾರು ವರ್ಷಗಳ ನಂತರ ಹುಟ್ಟಿಕೊಂಡ ತತ್ತ್ವವೊಂದನ್ನು ಅದಕ್ಕೆ ಅನ್ವಯಿಸುವುದು ಸಾಧುವಾದ ಅಭ್ಯಾಸಕ್ರಮವಾಗಲಾರದು. ನಾಲ್ಕು ಶ್ರುತಿಗಳ ಪ್ರಮಾಣಕ್ಕಿಂತ ಹೆಚ್ಚಿನ, ಎರಡು ಶ್ರುತಿಗಳ ಪ್ರಮಾಣಕ್ಕಿಂತ ಕಡಿಮೆಯ ಸ್ವರಸ್ಥಾನಗಳಿಲ್ಲ ಎಂಬ ಮಾತನ್ನು ಶ್ರೀಮದಭಿನವಗುಪ್ತಾಚಾರ್ಯನು ಸಂದೇಹಕ್ಕೆಡೆಯೇ ಇಲ್ಲದಷ್ಟು ಸ್ಪಷ್ಟವಾಗಿಯೂ ಖಚಿತವಾಗಿಯೂ ಹೇಳಿದ್ದಾನೆ :

ಚತುಃಶ್ರುತಿರುದಾತ್ತಃ ಉಚ್ಚತ್ವಾತ್, ದ್ವಿಶ್ರುತಿರನುದಾತ್ತಃ ನೀಚೈಸ್ತ್ವಾತ್ । ತ್ರಿಶ್ರುತಿಃ ಸ್ವರಿತಃ ಮಧ್ಯವರ್ತಿತಯಾ ಸಮಾಹಾರತ್ವಾತ್ । ತಥಾ ಹಿ—ಸ್ವರಿತ ಏವ ಕಂಪಿತತ್ವಂ ವ್ಯವಹಾರಂತಿ ಶ್ರೋತ್ರಿಯಾಃ । ಇಹಾಪ್ಯಲಂಕಾರೇಷು ತ್ರಿಶ್ರುತೇಃ ಕಂಪನಂ ವಕ್ಷ್ಯತೇ । ತಸ್ಯೋರ್ಧ್ವಾಧಃಸ್ವರಸ್ಯ ಸ್ಪರ್ಶನೇ ಽಪಿ ಸ್ವರತಾಕ್ಷಮತ್ವಾತ್ ಚತುಃಶ್ರುತೇರ್ಹಿ ನೋರ್ಧ್ವಮಸ್ತಿ, ದ್ವಿಶ್ರುತೇರ್ನಾಧರಮಿತಿ . . . .[113]

ಶ್ರೀ ಶಾರ್ಙ್ಗದೇವನೂ ಈ ನಾಲ್ಕನ್ನು ಮೀರಿ ಸಾರಣಾಕ್ರಿಯೆಯಿಲ್ಲ ಎಂಬುದನ್ನೇ

ಅತಃ ಪರಂ ತು ರಕ್ತಿಘ್ನಂ ನ ಕಾರ್ಯಮುಪಕರ್ಷಣಮ್

ಎಂಬ ಮಾತುಗಳಿಂದ ಈಗ ವ್ಯಾಖ್ಯಾತವಾಗುತ್ತಿರುವ ಶ್ಲೋಕದಲ್ಲಿ ಹೇಳಿದ್ದಾನೆ. ಇದನ್ನು ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಕಲ್ಲಿನಾಥನು ಬಹಳ ಚೆನ್ನಾಗಿ ಮನದಟ್ಟಾಗುವಂತೆ ವಿವರಿಸಿದ್ದಾನೆ. ' ಇದೇ ರೀತಿಯಲ್ಲಿ ಐದು, ಏಳು ಮುಂತಾದ ಸಾರಣೆಗಳನ್ನು ಮಾಡಿದರೆ ಸ್ವರಗಳಲ್ಲಿ ಇಪ್ಪತ್ತೊಂಬತ್ತು ಶ್ರುತಿಗಳ ಇಯತ್ತೆ ಲಭಿಸುವುದಲ್ಲ ; ಹಾಗೇಕೆ ಮಾಡಕೂಡದು ? ಎಂದರೆ, ಹಾಗಲ್ಲ, ಸ್ವರಗಳು ಶ್ರುತಿಯನ್ನವಲಂಬಿಸಿ ಅನುರಣನವನ್ನು, ಎಂದರೆ ರಕ್ತಿಯನ್ನು ಪಡೆದಿರುತ್ತವೆ. ಷಡ್ಜಾದಿಸ್ವರಗಳಾದರೋ ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ ನಾಲ್ಕನೆಯ ಮುಂತಾದ ಶ್ರುತಿಗಳಲ್ಲಿ ನವಿಲೇ ಮೊದಲಾದ ಪ್ರಾಣಿಗಳಲ್ಲಿ ಪರಸ್ಪರಭಾವದಿಂದ ಹುಟ್ಟತಕ್ಕವುಗಳೆಂದು ಪ್ರಸಿದ್ಧವೇ

ಆಗಿವೆ. ಅವುಗಳನ್ನು ಮೇಲೆ ಹೇಳಿದ ರೀತಿಯಲ್ಲಿ ಐದನೆಯ ಮೊದಲಾದ ಶ್ರುತಿಗಳಷ್ಟು ಹೆಚ್ಚಿಸುವುದರಿಂದ ಎಂದಿನಂತೆ ಅನುರಣನವು ಇರುವುದಿಲ್ಲ; ಮಂದ್ರಮಧ್ಯಸ್ಥಾಯಿಗಳಲ್ಲಿ (ಹೀಗೆ) ಮುಂದುಮುಂದಿನ ಶ್ರುತಿಸ್ಥಾನಗಳನ್ನು ಆಕ್ರಮಿಸುವುದರಿಂದ ತಾರಮಂದ್ರವ್ಯವಸ್ಥೆಗೆ, ಎಂದರೆ ತಾರಸ್ಥಾಯಿ ಮತ್ತು ಮಂದ್ರಸ್ಥಾಯಿಗಳಲ್ಲಿ ಅದೇ ಸ್ವರವು ಸಂಪೂರ್ಣ ಸಾದೃಶ್ಯಸಾಮ್ಯಗಳೊಡನೆ ಉಚ್ಚನೀಚಭಾವಮಾತ್ರದಿಂದ ಭಿನ್ನವಾಗಿ ಪ್ರಕಟವಾಗುವುದಕ್ಕೆ ಅಪಾಯವಿದೆ; ಏಕೆಂದರೆ ಇಂತಹ ಸ್ವರಗಳಲ್ಲಿ ರಕ್ತಿಯು ಇರುವುದಿಲ್ಲ; ಆದುದರಿಂದ ಬೇರೆ ಸಾರಣೆಗಳನ್ನು ಮಾಡಬಾರದು' ಎಂಬ ತಾತ್ಪರ್ಯವುಳ್ಳ ಮಾತುಗಳನ್ನು ಹೀಗೆ ಬರೆದಿದ್ದಾನೆ:

ಯದ್ಯೇವಂ ಸ್ಯಾದೇತದನಾವೃತ್ತಿಮತಾನುಸಾರೇಣ ಸಾರಣಾಪಂಚಕೇನಾಪಿ ಸಪ್ತಾನಾಮಪಿ ಸ್ವರಾಣಾಮೇಕೋನತ್ರಿಂಶಚ್ಛ್ರುತೀಯತ್ತಾನಿಶ್ಚಯಃ ಕರ್ತುಂ ಶಕ್ಯತ ಇತಿ। ನೈವಮ್। ಸ್ವರಾಸ್ತಾವಚ್ಛ್ರುತ್ಯನುರಣನಾತ್ಮಕಾಃ। ತೇ ಚ ಷಡ್ಜಾದಯೋ ಲೋಕೇ ಶಾಸ್ತ್ರೇ ಚ ಚತುರ್ಥ್ಯಾದಿಶ್ರುತಿಷು ಮಯೂರಾದಿಸ್ವರಸಂವಾದಿತ್ವೇನಾಭಿವ್ಯಕ್ತಾಃ ಸಿದ್ಧಾಃ। ತೇಷಾಂ ತದುಕ್ತರೀತ್ಯೋತ್ಕರ್ಷಣೇನ ಪಂಚಮ್ಯಾದಿಷು ಶ್ರುತಿಷು ಪ್ರಾಪಣೇ ಕೃತೇತಾದೃಶಾನುರಣನಾಭಾವಾನ್ಮಂದ್ರಮಧ್ಯಮಯೋರುತ್ತರೋತ್ತರಸ್ಥಾನಾಕ್ರಮಣೇ ತಾರಮಂದ್ರವ್ಯವಸ್ಥಿತೇರಪಾಯಾಚ್ಚ ಯತೋ ರಕ್ತಿಘಾತಃ, ಅತಃ ಸಾರಣಾಂತರಂ ನ ಕರ್ತವ್ಯಮಿತ್ಯಭಿಸಂಧಾನೋಕ್ತಮ್— **ಅತಃ ಪರಂತ್ವಿತಿ** ।[119]

ಐದು, ಆರು ಮುಂತಾದ ಶ್ರುತಿಗಳಷ್ಟು ಸಾರಣೆಮಾಡದಿರುವುದಕ್ಕಾಗಿ ಈ ಇಬ್ಬರು ವ್ಯಾಖ್ಯಾನಕಾರರೂ ಹೇಳದ ಮತ್ತೆರಡು ಕಾರಣಗಳನ್ನು ಇಲ್ಲಿ ಸೂಚಿಸಬಹುದು. ಮೊದಲನೆಯದಾಗಿ ಹೀಗೆ ಮಾಡಿದರೆ ಲಭಿಸುವ ಸ್ಥಾನಗಳು ಲಕ್ಷ್ಯಪ್ರಸಿದ್ಧಿವೈಧುರ್ಯವನ್ನು ಪಡೆದಿರುತ್ತವೆ; ಎಂದರೆ ಪ್ರಚಲಿತಗಾನಪ್ರಪಂಚದಲ್ಲಿರುವ ಸ್ವರಸ್ಥಾನಗಳಿಗೆ ಹೋಲಿಸಿದಾಗ ಅತ್ಯುಚ್ಚವಾಗಿಯೋ ಅತಿ ನೀಚವಾಗಿಯೋ ಇರುತ್ತವೆ. ಇವುಗಳಲ್ಲಿ ರಕ್ತಿಯೂ ಉಂಟಾಗದು. ಎರಡನೆಯದಾಗಿ, ಹೀಗೆ ಸಾರಣೆಮಾಡಿದರೆ ಒಂದು ಸ್ಥಾಯಿಯನ್ನು ಮೀರಬೇಕಾಗುತ್ತದೆ. ನಾಲ್ಕಕ್ಕಿಂತ ಹೆಚ್ಚಾಗಿ ಎಷ್ಟೆಷ್ಟು ಶ್ರುತಿಗಳನ್ನು ಉದ್ದೇಶಿಸಿ ಹೀಗೆ ಅಪಕರ್ಷದ ಸಾರಣಾವಿಧಿಯನ್ನು ಆಚರಿಸಿದರೆ ಅಷ್ಟಷ್ಟು ಶ್ರುತಿಗಳ ಪ್ರಮಾಣದಲ್ಲಿ ಒಂದು ಸ್ಥಾಯಿಯ ಅವಧಿಯನ್ನು ಮೀರಬೇಕಾಗುತ್ತದೆ. ಇದು ಈ ಪ್ರಯೋಗದ ಮೂಲಭೂತವಾದ ಉದ್ದೇಶಕ್ಕೆ ವಿರುದ್ಧವಾಗಿದೆಯೆಂದು ಈಗಾಗಲೇ ಹೇಳಿದೆ.

ಹಾಗಾದರೆ ಕಡೆಯ ಸಾರಣೆಯಲ್ಲಿ ಸ್ಥಾಯಿಯಲ್ಲಿ ಒಂದು ಶ್ರುತಿಯಷ್ಟನ್ನು ಮೀರಿದುದರಿಂದ ನಿಷಾದದ ನೀಚಪ್ರಥಮಾವರ್ತನವು ದೊರೆಯಿತಲ್ಲ, ಇಪ್ಪತ್ತೆರಡು ಶ್ರುತಿಗಳ ವ್ಯಾಪ್ತಿಯನ್ನು ಇಲ್ಲಿ ಮೀರಿದಂತಾಗಲಿಲ್ಲವೇ, ಎಂಬ ಪ್ರಶ್ನೆಯು ಇಲ್ಲಿ ಹುಟ್ಟುತ್ತದೆ. ಇದು ನಿಜವೇ; ಆದರೂ ಸ್ವರಾಷ್ಟಕದ ನಾದವ್ಯಾಪ್ತಿಯು ಇಷ್ಟೇ ಎಂದು ತಿಳಿಸಲು, ಎಂದರೆ, ಸ್ಥಾಯಿಯಲ್ಲಿ ಮತ್ತು ಸ್ವರಾಷ್ಟಕದಲ್ಲಿ, ಇಪ್ಪತ್ತೆರಡು ಶ್ರುತಿಗಳೇ ಎಂಬ ಇಯತ್ತೆಯನ್ನು ತಿಳಿಸಬೇಕಾದರೆ ಅದರ ಮೊದಲು ಮತ್ತು ಕೊನೆಗಳನ್ನು ಇಯತ್ತೆಯಿಂದ ನಿರ್ಧರಿಸಿ ಹೇಳಿದಲ್ಲದೆ ಹೇಗೆ ಸಾಧ್ಯ? ಯಾವುದೇ ಅಳೆಯುವ ವಿಧಾನಕ್ಕಾದರೂ ಆದ್ಯಂತಗಳು ಬೇಕೇ ಬೇಕಷ್ಟೆ. ಸ್ವರಾಷ್ಟಕದ ಇಯತ್ತೆಯನ್ನು ಹೇಳಬೇಕಾದರೆ ಅದರಲ್ಲಿನ ಸ್ವರಗಳ ಇಯತ್ತೆಯನ್ನು ಹೇಳಬೇಕು, ಹಾಗೂ ಮೊದಲಿನ ಮತ್ತು ಕಡೆಯ ಸ್ವರಗಳ ಪ್ರಮಾಣಗಳನ್ನು ಖಚಿತವಾಗಿ ಅಳೆದು ಹೇಳಬೇಕು. ಸ್ವರಗಳು ಹೇಗೆ ಅಷ್ಟಮ ಸ್ವರದ ದೂರದಲ್ಲಿ ಪುನರಾವರ್ತಿತವಾಗುತ್ತವೆ ಎಂಬ ಲಕ್ಷ್ಯಪ್ರಸಿದ್ಧ ಸಂಗತಿಯ ವಿವರವನ್ನು ದ್ವಿಘಟಕವಾದದಲ್ಲಿ (ಪು. 190–196) ಹೇಳಿದೆ. ಸ್ವರಾಷ್ಟಕದ ಮತ್ತು ಸ್ಥಾಯಿಯ ಅಂತ್ಯಸ್ವರವಾದ ನಿಷಾದದ ವಿಸ್ತಾರವನ್ನು ಇಯತ್ತೆಯಿಂದ ಹೇಳಬೇಕಾದರೆ ಅದರ ಮುಂದಿನ ಸ್ವರವಾದ ಷಡ್ಜದ ಆದಿಭಾಗವನ್ನು ಪುನಃ ತೋರಿಸಿದಲ್ಲದೆ ಆಗದು. ಅಂತೆಯೇ ಆದಿಸ್ವರವಾದ ಷಡ್ಜದ ವಿಸ್ತಾರದ

119 ಕಲ್ಲಿನಾಥ, ಉ. ಗ್ರಂ., ಪು. 78.

ಇಯತ್ತೆಯನ್ನು ನಿಷಾದದ ಅಂತ್ಯದಿಂದಲೇ ತೋರಿಸಬೇಕು. ಎಂದೇ ಈ ಅತಿಕ್ರಮಣ. ಹೀಗೆ ಇದು ಈ ಶ್ರುತಿ ನಿದರ್ಶನದ ದೌರ್ಬಲ್ಯವಲ್ಲ, ಶಕ್ತಿ.

ಈಗ ಭರತಮುನಿಪ್ರಣೀತವೆಂದು ಅಭಿನವಗುಪ್ತನು ಹೇಳುವ ಎಲ್ಲಾ ಸಾರಣಾಕ್ರಿಯೆಗಳನ್ನೂ ಮುಂದಿನ ಪಥಕದಲ್ಲಿ ಸಂಗ್ರಹಿಸಬಹುದು. ಇಲ್ಲಿ ಪ್ರತಿಸಾರಣೆಯನ್ನೂ ಸುಲಭವಾಗಿ ತಿಳಿಯಲೆಂದು ಎರಡು ಹಂತಗಳಲ್ಲಿ ತೋರಿಸಿದೆ. 'ಅ' ಎಂಬ ಮೊದಲನೆಯ ಹಂತದಲ್ಲಿ ಧ್ರುವವೀಣೆಯ ಯಾವ ಸ್ವರದಿಂದ ಚಲವೀಣೆಯ ಆಯಾ ಸ್ವರಕ್ಕೆ ಇಳಿಸುವುದರಿಂದ ಆಯಾ ಪ್ರಮಾಣಭೂತ ಶ್ರುತಿಯ ಜ್ಞಾನವು ಹುಟ್ಟುತ್ತದೆಯೋ ಆ ಅಪಕರ್ಷಣವನ್ನು ತೋರಿಸಿದೆ. 'ಆ' ಎಂಬ ಎರಡನೆಯ ಹಂತದಲ್ಲಿ ಈ ಪ್ರಮಾಣಭೂತಶ್ರುತಿಯ ಅಪಕರ್ಷವನ್ನು ಉಳಿದ ಸ್ವರಗಳಲ್ಲಿಯೂ ಮಾಡಿ ಆಯಾ ಸಾರಣಾಕ್ರಿಯೆಯನ್ನು ಸಂಪೂರ್ಣಗೊಳಿಸಿದೆ. ಈ ಪಥಕದಲ್ಲಿ ಸ್ವರದ ಬಲಗಡೆ ಮೇಲುಭಾಗದಲ್ಲಿ ಯಾವ ಸಂಖ್ಯೆಯಿದೆಯೋ ಆ ಸಂಖ್ಯೆಯಷ್ಟು ಶ್ರುತಿಗಳಷ್ಟು ಚಲವೀಣೆಯಲ್ಲಿರುವ ಆಯಾ ಸ್ವರವು ಧ್ರುವವೀಣೆಯಲ್ಲಿರುವ ಅದೇ ಸ್ವರಕ್ಕಿಂತ ಕಡಿಮೆಯಾಗಿದೆ, ಎಂದು ಸಂಜ್ಞೆ. ಉದಾಹರಣೆಗೆ ಮ² ಎಂದರೆ ಚಲ ವೀಣೆಯ ಮಧ್ಯಮವು ಈ ಸಾರಣೆಯಲ್ಲಿ ಧ್ರುವವೀಣೆಯ ಮಧ್ಯಮಕ್ಕಿಂತ ಎರಡು ಶ್ರುತಿಗಳಷ್ಟು ಕಡಿಮೆಯಾಗಿದೆ ಎಂದು ಅರ್ಥ.

| ಕ್ರಮ ಸಂಖ್ಯೆ | ಸಾರಣಾ ಸಂಖ್ಯೆ | ಹಂತ | ಸ | ರಿ | ಗ | ಮ | ಪ | ಧ | ನಿ |
|---|---|---|---|---|---|---|---|---|---|
| | ಧ್ರುವವೀಣೆ | – | ಸ | ರಿ | ಗ | ಮ | ಪ | ಧ | ನಿ |
| | ಚಲವೀಣೆ : | | ಸ | ರಿ | ಗ | ಮ | ಪ | ಧ | ನಿ |
| 1 | ಪ್ರಥಮ | ಅ | | | | | ಪ¹ | | |
| | | ಆ | ಸ¹ | ರಿ¹ | ಗ¹ | ಮ¹ | ಪ¹ | ಧ¹ | ನಿ¹ |
| 2 | ದ್ವಿತೀಯ | ಅ | | | ರಿ | | | | ಧ |
| | | ಆ | ಸ² | ರಿ² | ರಿ | ಮ² | ಪ² | ಧ² | ಧ |
| 3 | ತೃತೀಯ | ಅ | | ಸ | | | | ಪ | |
| | | ಆ | ಸ³ | ಸ | ರಿ¹ | ಮ³ | ಪ³ | ಪ | ಧ¹ |
| 4 | ಚತುರ್ಥ | ಅ | ನಿ | | | ಗ | ಮ | | |
| | | ಆ | ನಿ | ಸ¹ | ರಿ² | ಗ | ಮ | ಪ¹ | ಧ² |

**ಶ್ರುತಿ ನಿದರ್ಶನ ಪಥಕ (3) : ಸಾರಣಾಚತುಷ್ಟಯ**

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಕ್ರ. ಸಂ. | ಸಾರಣಾ ಸಂಖ್ಯೆ | ಹಂತ | 22 | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಧ್ರುವವೀಣೆ | | (ನಿ) | | | | ಸ | | | ರಿ | | ಗ | | | | ಮ | | | | ಪ | | | ಧ | | ನಿ |
| | ಚಲವೀಣೆ | | (ನಿ) | | | | ಸ | | | ರಿ | | ಗ | | | | ಮ | | | | ಪ | | | ಧ | | ನಿ |
| 1 | ಪ್ರಥಮ | ಅ | | | | | | | | | | | | | | | | | ಪ | | | | | | |
| | | ಆ | | | | ಸ | | | ರಿ | | ಗ | | | | ಮ | | | | ಪ | | | ಧ | | ನಿ | |
| 2 | ದ್ವಿತೀಯ | ಅ | | | | | | | | ಗ | | | | | | | | | | | | | ನಿ | | |
| | | ಆ | | | ಸ | | | ರಿ | | ಗ | | | | ಮ | | | | ಪ | | | ಧ | | ನಿ | | |
| 3 | ತೃತೀಯ | ಅ | | | | | ರಿ | | | | | | | | | | | | | ಧ | | | | | |
| | | ಅ | | ಸ | | | ರಿ | | ಗ | | | | ಮ | | | | ಪ | | | ಧ | | ನಿ | | | |
| 4 | ಚತುರ್ಥ | ಅ | ಸ | | | | | | | | | ಮ | | | | ಪ | | | | | | | | | (ಸ) |
| | | ಆ | ಸ | | | ರಿ | | ಗ | | | | ಮ | | | | ಪ | | | ಧ | | ನಿ | | | | (ಸ) |

**ಶ್ರುತಿ ನಿದರ್ಶನ**

**ಪಥಕ (4) : ಸಾರಣಾಚತುಷ್ಟಯ**

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಭರತಮುನಿಪ್ರಣೀತವಾದ ಸಾರಣಾಕ್ರಮದಿಂದ ಶ್ರುತಿಗಳ ಪ್ರಮಾಣಗಳ ವಿಷಯದಲ್ಲಿ ಮುಖ್ಯವಾದ ಒಂದು ಅನುಮಿತಿಯು ಸಿದ್ಧವಾಗುತ್ತದೆ : ಷಡ್ಜಗ್ರಾಮದ ಪಂಚಮವನ್ನು ಸ್ವರತ್ವವು ಉಳಿದುಕೊಂಡಿರುವ ಹಾಗೆ ಅತ್ಯಂತ ಕನಿಷ್ಠನಾದಾಂತರದಷ್ಟು ಇಳಿಸಿ ಮಧ್ಯಮಗ್ರಾಮದ ಪಂಚಮದ ಉಪಲಬ್ಧಿಗಾಗಿ ಒಂದು ಶ್ರುತಿಯನ್ನು ಪಡೆಯ್ಯಲಾಯಿತಷ್ಟೆ. ಈ ಶ್ರುತಿಯಿಂದಲೇ ಉಳಿದ ಎಲ್ಲಾ ಸ್ವರಗಳೂ ಚಲವೀಣೆಯ ಪ್ರಥಮಸಾರಣೆಯಲ್ಲಿ ಅಪಕೃಷ್ಟವಾದರೂ ಉಳಿದ ಸ್ವರಗಳಲ್ಲಿ ಇದರ ಪ್ರಮಾಣವು ಮಾನಸಿಕಸಮಾನತೆ (psychic equality) ಅಥವಾ ಗೇಯಾರ್ಥ ಸಮಾನತೆಯನ್ನು (musical equality) ಯನ್ನು ಪಡೆದಿದ್ದರೂ ಇರಬಹುದೇ ಹೊರತು ಭೌತಿಕ ಸಮಾನತೆಯನ್ನು ಸರ್ವತ್ರವಾದ ಅಪಕರ್ಷಣ ಕ್ರಿಯೆಯಲ್ಲಿ ಪಡೆದಿರುವುದಿಲ್ಲ. ಎಂದರೆ, ಕಿವಿಗೆ ಸಮಾನಪ್ರಮಾಣವೆಂದು ತೋರುವುದು, ಗೇಯಾರ್ಥದಲ್ಲಿ ಅವಧಾನಹೊಂದಿದ ಮನಸ್ಸಿಗೆ ಸಮಾನವೆಂದು ತೋರುವುದು, ಗೀತಸಂದರ್ಭತಂತ್ರಗಳಲ್ಲಿ ಸಮಾನವೆಂದು ತೋರುವುದು, ಭೌತಿಕವಾಗಿ ಸಂಖ್ಯೆಯಿಂದ ಎಣಿಸಿ ಹೇಳಬಹುದಾದ ಸಮಾನತೆ—ಎಂದು ನಾದಪ್ರಮಾಣಗಳಲ್ಲಿ ನಾಲ್ಕು ಬಗೆಯ ಸಮಾನತೆಗಳುಂಟು. ಒಂದು ಬಗೆಯ ಸಮಾನತೆಯನ್ನು ಪಡೆದಿರುವ ಎರಡು ದ್ರವ್ಯಗಳು ಬೇರೆ ವಿಧದಲ್ಲಿ ಸಮಾನತೆಯನ್ನು ಪಡೆಯದಿರಬಹುದು—ಸಾಮಾನ್ಯವಾಗಿ ಪಡೆದಿರುವುದೂ ಇಲ್ಲ. ಈ ಗಾನಶಾಸ್ತ್ರಪ್ರಮೇಯವು ಸೂಕ್ಷ್ಮಪರಿಶೀಲನೆಯಿಂದ ತಿಳಿಯುತ್ತದೆ. ಈ ಬಗೆಯ ಭಿನ್ನತೆಯಿಂದಾಗಿ, ಶ್ರೋತ್ರೇಂದ್ರಿಯಗ್ರಹಣದಲ್ಲಿ ಸಮಾನವಾಗಿರುವಂತಹುದು ಅದೇ ಪ್ರಮಾಣದಲ್ಲಿ ಇತರ ಸ್ವರಗಳಲ್ಲಿ ಇಳಿಸಿದಾಗ ಬೇರೆ ವಿಧದಲ್ಲಿ ಸಮಾನತೆಯು ಇಲ್ಲದೆ ಹೋಗಬಹುದು. ಆಗ ಭೌತಿಕದೃಷ್ಟಿಯಲ್ಲಿನ ಸಮಾನತೆಯು ಸಾಮಾನ್ಯವಾಗಿ ಉಳಿಯುವುದಿಲ್ಲ. ಅಲ್ಲದೆ ಶುದ್ಧಪಂಚಮ—ವಿಕೃತಪಂಚಮಗಳ ನಡುವಣ ಈ ನಾದಾಂತರವು ಒಂದೇ ಶ್ರುತಿಯಾದರೂ ಸ್ವರತ್ವವನ್ನುಂಟುಮಾಡುವ ಶಕ್ತಿಯನ್ನು ಪಡೆದಿದೆ. ಆದರೆ ಅದನ್ನು ಬೇರೆ ಸ್ವರಗಳಿಗೆ ಅನ್ವಯಮಾಡಿದರೆ ಈ ಶ್ರುತಿಯ ಅಂತರದಲ್ಲಿ ಉಚ್ಚನೀಚ ಮಾತ್ರದ ಪ್ರತೀತಿಯೆಂದೂ ಮಧ್ಯಮವೇ ಮೊದಲಾದ ಇತರ ಆರು ಸ್ವರಗಳಲ್ಲಿ ಸ್ವರತ್ವವನ್ನು ಉಂಟುಮಾಡುವುದಿಲ್ಲವೆಂದೂ ಪ್ರಥಮಸಾರಣಾಕ್ರಿಯೆಯಲ್ಲಿ ಈಗಾಗಲೇ ಹೇಳಿದೆ. ಆದುದರಿಂದ ಈ ಶ್ರುತಿಯೊಂದೇ ಪಂಚಮದಲ್ಲಿ ಒಂದು, ಉಳಿದ ಸ್ವರಗಳಲ್ಲಿ ಒಂದು-ಹೀಗೆ ಎರಡು ರೂಪಗಳಲ್ಲಿ ಭಾಸವಾಗುತ್ತದೆಂದು ತಿಳಿಯಬೇಕು. ಇದೊಂದು ಶ್ರುತಿಗೆ ಮಾತ್ರ ತನ್ನಿಂದಲೇ ಸ್ವರತ್ವವನ್ನುಂಟುಮಾಡುವ ಶಕ್ತಿಯಿರುವುದರಿಂದಲೋ ಏನೋ, ಪೂರ್ವಾಚಾರ್ಯರು ಅದನ್ನು ವಿಶೇಷವೆಂದು ವ್ಯವಹರಿಸಿ ಪ್ರಮಾಣಶ್ರುತಿಯೆಂದು ಕರೆದಿದ್ದಾರೆ. ಎರಡನೆಯ ಸಾರಣೆಯಲ್ಲಿ ಚಲವೀಣೆಯ ಗಾಂಧಾರವು ಧ್ರುವವೀಣೆಯ ರಿಷಭದಲ್ಲಿ ಏಕೀಭಾವವನ್ನು ಪಡೆಯುವಷ್ಟು, ಚಲವೀಣೆಯ ನಿಷಾದವು ಧ್ರುವವೀಣೆಯ ಧೈವತದಲ್ಲಿ ಏಕೀಭಾವವನ್ನು ಪಡೆಯುವಷ್ಟು, ಪ್ರಮಾಣದಲ್ಲಿ ಇಳಿಸಲು ಬೇಕಾದ ನಾದಾಂತರವು ಮೂರನೆಯ ಬಗೆಯ ಶ್ರುತಿಪ್ರಮಾಣ. ಈ ಎರಡು ಪ್ರಮಾಣಗಳನ್ನೂ ಸಮಾನವೆಂದೂ, ಹಾಗೂ ಇತರ ಸ್ವರಗಳಲ್ಲಿ ಅಪಕರ್ಷಿಸಿದಾಗಲೂ ಒಂದೇ ಪ್ರಮಾಣದಲ್ಲಿರುತ್ತದೆಂಬುದನ್ನೂ ವಿವಕ್ಷಿಸಿ ಭರತಾಚಾರ್ಯನು ಈ ಪ್ರಮಾಣವನ್ನು ಸಮುಚ್ಚಯವಾಗಿಯೇ ವ್ಯವಹರಿಸಿದ್ದಾನೆ. ಇಲ್ಲಿ ಎರಡು ಸಂದೇಹಗಳು ಮೂಡಬಹುದು : ಪಂಚಮಸಂಬಂಧಿಯಾದ ಪ್ರಮಾಣಶ್ರುತಿಗೂ ಇದೇ ವಾದವನ್ನು ಅನ್ವಯಿಸಬಹುದಲ್ಲ ? ಅಥವಾ ಈ ಗಾಂಧಾರ–ರಿಷಭ ಸಂಬಂಧಿತ ಶ್ರುತಿಯ ಅಪಕರ್ಷಣದಿಂದಲೂ ಸ್ವರತ್ವವು ಹುಟ್ಟುವುದರಿಂದ ಪಂಚಮಸಂಬಂಧಿತ ಶ್ರುತಿಯನ್ನು ವಿಶೇಷವೆಂದು ಏಕೆ ವ್ಯವಹರಿಸಬೇಕು ?

ಮೊದಲನೆಯದಾಗಿ, ಪಂಚಮಸಂಬಂಧಿತ ಶ್ರುತಿಯ ಪ್ರಮಾಣದಲ್ಲಿ ಇತರ ಸ್ವರಗಳ ಅಪಕರ್ಷಣವು ಆದಾಗ ಆಯಾಸ್ವರಗಳಲ್ಲಿ ಸ್ವರತ್ವವು ನಾಶವಾಗಿಬಿಡುತ್ತದೆ ; ಆದರೂ ಪಂಚಮದಲ್ಲಿ ಮಾತ್ರ ಸ್ವರತ್ವವು ಉಳಿದೇ ಇರುತ್ತದೆ—ಇದೇ ಮಧ್ಯಮಗ್ರಾಮದ ವೈಶಿಷ್ಟ್ಯವನ್ನು ಸಿದ್ಧಪಡಿಸುವ ಹಾಗೂ ಲಕ್ಷ್ಯಪ್ರಸಿದ್ಧಿಯನ್ನು ಶಾಸ್ತ್ರದಲ್ಲಿ ಪ್ರತಿಬಿಂಬಿಸುವ ವಿಕೃತ ಪಂಚಮ. ಇಂತಹ ಪ್ರಮಾಣವು ಇಡೀ ಸ್ವರಾಷ್ಟಕದಲ್ಲಿಯೇ ಎಲ್ಲಿಯೂ ದೊರೆಯುವುದಿಲ್ಲವಾದುದ

ರಿಂದ ಕೇವಲ ಪಂಚಮದಲ್ಲಿ ಮಾತ್ರ ಅದನ್ನು ಹೇಳಿದೆ. ಆದರೆ ಈ ಪ್ರಮಾಣದ ಶ್ರುತಿಯು (ಬಹುಶಃ) ಬೇರೆ ಪ್ರಮಾಣವನ್ನು ಇತರ ಸ್ವರಗಳಲ್ಲಿ ಪಡೆದು ಆಯಾ ಸ್ವರದ ನಾದಾಂತರದಲ್ಲಿ ಅವಿಭಾಜ್ಯ ಅಂಗವಾಗಿರುತ್ತದೆ. ಆದುದರಿಂದ ಅದನ್ನು ಪ್ರತ್ಯೇಕವಾಗಿ ಎರಡು ಬಗೆಯೆಂದು ವ್ಯವಹರಿಸುವುದೇ ಸರಿಯಾದ ತರ್ಕ. ಎರಡನೆಯದಾಗಿ, ಗಾಂಧಾರ-ರಿಷಭ ಸಂಬಂಧಿತ ಶ್ರುತಿಯು ಕೇವಲ ಸ್ವಂತಯೋಗ್ಯತೆಯಿಂದಲೇ ಸ್ವರತ್ವವನ್ನು ಆಯಾ ಸ್ಥಾನಕ್ಕೆ ತಂದುಕೊಡುವುದಿಲ್ಲ ; ಪಂಚಮಸಂಬಂಧಿತ ಶ್ರುತಿಯ ಬೆಂಬಲದಿಂದ, ಅದನ್ನೂ ಸೇರಿಸಿಕೊಂಡಾಗ ಮಾತ್ರ ಸ್ವರತ್ವ ವನ್ನು ಉಂಟುಮಾಡುತ್ತದೆ. ಹೀಗೆ ಒಂದೇ ಶ್ರುತಿಯಿದ್ದಾಗಲೂ ಸ್ವರತ್ವವನ್ನುಂಟುಮಾಡುವ ಒಂದು ಬಗೆ, ಇದರ ನಂತರ ಎರಡನೆಯಾದಾಗ ಮಾತ್ರ ಸ್ವರತ್ವವನ್ನು ಉಂಟುಮಾಡುವ ಒಂದು ಬಗೆ, ಹೀಗೆ ಇವುಗಳನ್ನು ಪ್ರತ್ಯೇಕ ವೆಂದೇ ತಿಳಿಯಬೇಕು. ಇದೇ ರೀತಿಯಲ್ಲಿ ರಿಷಭ-ಷಡ್ಜ, ಧೈವತ-ಪಂಚಮ ಸಂಬಂಧಿತ ಶ್ರುತಿಯು ನಾಲ್ಕ ನೆಯ ಬಗೆಯೆಂದು ತಿಳಿಯಬೇಕು. ಏಕೆಂದರೆ ಪಂಚಮಸಂಬಂಧಿತ ಶ್ರುತಿಯೂ ಗಾಂಧಾರ-ರಿಷಭ ಸಂಬಂಧಿತ ಶ್ರುತಿಯೂ ಇರಲಾಗಿ, ಅವುಗಳ ಹಿನ್ನೆಲೆಯಲ್ಲಿ, ಅವುಗಳನ್ನು ಕೂಡಿಕೊಂಡಾಗ ಮಾತ್ರ ಅದು ಸ್ವಸ್ಥಾನದಲ್ಲಿ ಸ್ವರತ್ವವನ್ನು ಉಂಟುಮಾಡುತ್ತದೆ. ಕೇವಲ ಆ ಸ್ಥಾನಕ್ಕೆ ಎಂದರೆ, ಸ್ವಸ್ಥಾನಬಲಮಾತ್ರದಿಂದ ಸ್ವರತ್ವವನ್ನುಂಟು ಮಾಡುವ ಶಕ್ತಿಯಿಲ್ಲವೆಂಬುದು ಇತರ ಸಾರಣಾಕ್ರಿಯೆಗಳಿಂದ ಸ್ಪಷ್ಟವಾಗಿದೆಯಷ್ಟೆ. ಈ ಶ್ರುತಿಪ್ರಮಾಣವು ಒಂದೇ ಬಗೆಯದೆಂದು ವಿವಕ್ಷಿಸಲು ಅದರ ಪ್ರಮಾಣವನ್ನು ಭರತಾಚಾರ್ಯನು ಸಮುಚ್ಚಯ ಪ್ರಯೋಗದಲ್ಲಿ ವ್ಯವ ಹರಿಸಿದ್ದಾನೆ. ಕಡೆಯದಾಗಿ, ಚತುರ್ಥಸಾರಣೆಗೆ ಆಶ್ರಯಭೂತವಾದ ಷಡ್ಜ-ನಿಷಾದ, ಮಧ್ಯಮ-ಗಾಂಧಾರ, ಪಂಚಮ-ಮಧ್ಯಮ ಸಂಬಂಧಿತ ಶ್ರುತಿಯು ಐದನೆಯ ಬಗೆಯದು. ಸ್ವರಸ್ಥಾನವಾದ ಶ್ರುತಿಯಿಂದ ಎರಡನೆಯ ಶ್ರುತಿಯೂ ಮೂರನೆಯ ಶ್ರುತಿಯೂ ಕೇವಲ ಸ್ವಸ್ಥಾನಬಲದಿಂದ ಸ್ವರತ್ವವನ್ನು ಉಂಟುಮಾಡಲಾರದೆಂಬುದಕ್ಕೆ, ಎಂದರೆ, ಪಂಚಮಸಂಬಂಧಿತ ಶ್ರುತಿ + ಗಾಂಧಾರ-ರಿಷಭ ಸಂಬಂಧಿತ ಶ್ರುತಿ ಮತ್ತು ಪಂಚಮಸಂಬಂಧಿತ ಶ್ರುತಿ + ಗಾಂಧಾರ-ರಿಷಭ ಸಂಬಂಧಿತ ಶ್ರುತಿ + ರಿಷಭ-ಷಡ್ಜ ಸಂಬಂಧಿತ ಶ್ರುತಿ ಇವುಗಳ ಮೊತ್ತವು ಸ್ವಸಂದರ್ಭಗಳಲ್ಲಿ ಮಾತ್ರ, ಎಂದರೆ ರಿಷಭ, ಷಡ್ಜ ಎಂಬ ವಿಶಿಷ್ಟವ್ಯಕ್ತಿತ್ವ ಪ್ರಬೋಧಕ ಸಂದರ್ಭಗಳಲ್ಲಿ ಮಾತ್ರ ಸ್ವರತ್ವಕ್ಕೆ ಪ್ರಯೋ ಜಕವೇ ಹೊರತು, ಹಿಂದುಮುಂದಿನ ಸ್ವರಗಳ ಅಥವಾ ಆಧಾರಸ್ವರದೊಡನೆ ಪಡೆದಿರುವ ದೂರವನ್ನು ಅವಲಂಬಿಸಿದ ಹೊರತು, ಕೇವಲ ಈ ದ್ವಿಶ್ರುತಿಕ ಅಥವಾ ತ್ರಿಶ್ರುತಿಕವೆಂಬ ಪ್ರಮಾಣಗಳಲ್ಲಿ ಇರುವುದರಿಂದ ಮಾತ್ರ ಸ್ವರತ್ವಕ್ಕೆ ಪ್ರಯೋಜಕಗಳಾಗಲಾರವೆಂಬ, ಮುಖ್ಯತತ್ತ್ವವು ನಮಗೆ ತಿಳಿಯುವುದಕ್ಕೆ ಷಡ್ಜ-ಮಧ್ಯಮ-ಪಂಚಮಗಳ ಪ್ರಮಾಣಗಳೇ ಸಾಕ್ಷಿ. ಮೇಲೆ ಹೇಳಿದ ಮೂರು ಬಗೆಯ ಶ್ರುತಿಗಳೂ ಅದೇ ಅನುಕ್ರಮದಲ್ಲಿ ಇದ್ದು, ಇವುಗಳ ಹಿನ್ನೆಲೆಯಲ್ಲಿ ಮತ್ತು ಅವುಗಳನ್ನು ಕೂಡಿಕೊಂಡಾಗ ಮಾತ್ರ ಈ ಐದನೆಯ ಬಗೆಯ ಶ್ರುತಿಗೆ ಸ್ವಸ್ಥಾನದಲ್ಲಿ ಷಡ್ಜ, ಮಧ್ಯಮ ಮತ್ತು ಪಂಚಮಗಳೆಂಬ ಸ್ವರತ್ವವು ಪ್ರಾಪ್ತವಾಗುತ್ತದೆ. ಈ ತತ್ವದ ಪರಿಣಾಮವಾಗಿಯೇ, ಎಂದರೆ ಮೇಲೆ ಹೇಳಿದ ಐದು ಬಗೆಯ ಶ್ರುತಿಗಳ ಪ್ರತ್ಯೇಕ ವೈಶಿಷ್ಟ್ಯದಿಂದಲೇ, ಸ್ವರಾಷ್ಟಕದ ಸ್ವರಗಳಿಗೆ ವಿಶಿಷ್ಟ ವ್ಯಕ್ತಿತ್ವವು ಲಭಿಸುವುದು ; ತ್ರೈಸ್ವರ್ಯದಲ್ಲಿರುವ ಸರಿಗ ಅಥವಾ ಪದನಿ ಗಳಲ್ಲಿ ಪ್ರತಿಯೊಂದೂ ಬೇರೆ ಬೇರೆ ಗುಣ ವನ್ನೂ ಪೃಥಕ್‌ತನವನ್ನೂ ಸಾಧಿಸುವುದು ಈ ಕಾರಣದಿಂದ. ಈ ಕಾರಣದಿಂದಲೇ ನಮ್ಮ ಪೂರ್ವಾಚಾರ್ಯರು ಗಾಂಧಾರ ನಿಷಾದಗಳಿಗೆ ದ್ವಿಶ್ರುತಿಕಗಳೆಂಬುದನ್ನೂ ರಿಷಭ ಧೈವತಗಳಿಗೆ ತ್ರಿಶ್ರುತಿಕಗಳೆಂಬುದನ್ನೂ ಷಡ್ಜ ಮಧ್ಯಮ ಪಂಚಮಗಳಿಗೆ ಚತುಃಶ್ರುತಿಕಗಳೆಂಬುದನ್ನೂ ಆಯಾ ವ್ಯಕ್ತಿತ್ವಬೋಧಕಗಳೆಂದು ತಿಳಿದು ಪರ್ಯಾಯನಾಮಗಳಾ ಗಿಯೇ ಹಲವೆಡೆಯಲ್ಲಿ ಬಳಸಿದ್ದಾರೆ. ಇವುಗಳನ್ನು ಊರ್ಧ್ವಸ್ಪರ್ಶದಿಂದ ಸಂಬಂಧಿಸುವ ಪಂಚಮವು ಷಡ್ಜ, ಮಧ್ಯಮಗಳಂತೆಯೇ ಚತುಃಶ್ರುತಿಕವಾದರೂ, ಇದರ ನಿರ್ಮಾಣದಲ್ಲಿ ಈ ಶ್ರುತಿ ಜಾತಿಗಳು ಸ್ವಲ್ಪ ಬೇರೆಯಾಗಿ ಸೇರಿರುವುದರಿಂದ ಲಕ್ಷ್ಯದಲ್ಲಿ ನಿಷಾದ-ಷಡ್ಜ, ಗಾಂಧಾರ-ಮಧ್ಯಮ ಅಂತರಗಳು ಪರಸ್ಪರ ಸಮಾನವಾಗಿರುವು

ದನ್ನೂ ಮಧ್ಯಮ—ಪಂಚಮ ಈ ಅಂತರವು ಲಕ್ಷ್ಯದಲ್ಲಿ ಇವೆರಡಕ್ಕಿಂತ ಭಿನ್ನವಾಗಿರುವುದನ್ನೂ ವಿವರಿಸಬಹುದು.

ಪ್ರಥಮ ತ್ರೈಸ್ವರ್ಯದಲ್ಲಿರುವ ಸ್ವರಗಳು ಪಂಚಮಭಾವದಲ್ಲಿ ಊರ್ಧ್ವಸ್ಪರ್ಶಮಾಡುವುದರಿಂದ ದ್ವಿತೀಯ ತ್ರೈಸ್ವರ್ಯದಲ್ಲಿರುವ ಸ್ವರಗಳು ಉದ್ಭವಿಸುವುವೆಂದೂ, ಮಧ್ಯಮಭಾವದಲ್ಲಿ ಪಂಚಮವೂ ಪಂಚಮಭಾವದಲ್ಲಿ ಮಧ್ಯಮವೂ ಅಥವಾ ಅಷ್ಟಮಭಾವದಲ್ಲಿ ಆಧಾರಸ್ವರವೂ ಊರ್ಧ್ವಸ್ಪರ್ಶಮಾಡುವುದರಿಂದ ಆವರ್ತಕಸ್ವರವು ಹೇಗೆ ಉದ್ಭವಿಸುವುದೆಂದೂ, ಮಧ್ಯಮಭಾವ, ಪಂಚಮಭಾವ ಮತ್ತು ಅಷ್ಟಮಭಾವಗಳ ಕ್ರಮವಾದ ಊರ್ಧ್ವಗತಿಯಿಂದ ಮತ್ತು ಅಧೋಗತಿಯಿಂದ ಸ್ವರಾಷ್ಟಕದ ಇತರ ಸ್ವರಗಳು ಹೇಗೆ ಉದ್ಭವಿಸುವುವೆಂದೂ ಈಗಾಗಲೇ ಸೂಚಿಸಿದೆ. ಇದೆಲ್ಲಕ್ಕೂ ಕಾರಣವಾದ ಐದು ಶ್ರುತಿ ಜಾತಿಗಳನ್ನು ಶಾರ್ಙ್ಗದೇವನು ದೀಪ್ತಾ, ಆಯತಾ, ಕರುಣಾ, ಮೃದು, ಮಧ್ಯಾ ಎಂಬ ಹೆಸರಿನಿಂದ ವ್ಯವಹರಿಸಿ ನಾದಶಾಸ್ತ್ರಕ್ಕೂ ಸಂಗೀತಶಾಸ್ತ್ರಕ್ಕೂ ಎಣೆಯಿಲ್ಲದ ಕಾಣಿಕೆಯನ್ನು ನೀಡಿದ್ದಾನೆ. ಇವುಗಳು ಸಂಗೀತಶಾಸ್ತ್ರದಲ್ಲಿ ಪ್ರವೇಶಮಾಡಿದ ರೀತಿಯನ್ನು ಈಗಾಗಲೇ ಸಂಕ್ಷೇಪವಾಗಿ ತಿಳಿಸಿದೆ. ಭರತಮುನಿಯು ನಾರದೀಯಶಿಕ್ಷೆಯಿಂದ ಸಂಗ್ರಹಿಸಿ ಹೇಳಿರಬಹುದಾದ (ಹೇಳಿದ್ದಾನೆಯೇ ಎಂಬುದೇ ಹೇಗೆ ಸಂದೇಹಾಸ್ಪದವೆಂದೂ ಇದೇ ಸಂದರ್ಭದಲ್ಲಿ ಸೂಚಿಸಿದೆ.) ಇವುಗಳನ್ನು ಅಭಿನವಗುಪ್ತನು ಪಠಿಸಿದರೂ, ಈ ಶಬ್ದಗಳಿಗೆ ಸಂಗೀತಶಾಸ್ತ್ರದಲ್ಲಿ ವಿಶಿಷ್ಟಾರ್ಥಗಳೂ ಪ್ರಯೋಜನಗಳೂ ಇರಲಿಲ್ಲವೆಂಬುದನ್ನೂ ಹೇಳಿದೆ. ಗಾನಶಾಸ್ತ್ರಕ್ಕೆ ತಳಹದಿಯಂತಿರುವ ಈ ಕಲ್ಪನೆಯ ಸೃಷ್ಟಿಗೆ ಶ್ರೀ ಶಾರ್ಙ್ಗದೇವನೇ ಸಂಪೂರ್ಣವಾಗಿ ಕಾರಣನಾದವನು. ಈ ಶ್ರುತಿ ಜಾತಿಗಳನ್ನು ಮುಂದೆ ಇನ್ನಷ್ಟು ವಿವೇಚಿಸಲಾಗುವುದು.

ಸಾರಣಾಚತುಷ್ಟಯದ ಪಠಕಗಳನ್ನು ಹೇಳುವ ಸಂದರ್ಭದಲ್ಲಿ 'ಭರತಮುನಿ ಪ್ರಣೀತವೆಂದು ಅಭಿನವಗುಪ್ತನು ಹೇಳುವ' ಎಂಬ ಮಾತುಗಳನ್ನು ಬಳಸಿರುವುದನ್ನು (ಪು. 232) ಇಲ್ಲಿ ಪುನಃ ಸ್ಮರಿಬೇಕು. ಏಕೆಂದರೆ ಈ ಮಾತುಗಳನ್ನು ಉದ್ದೇಶಪೂರ್ವಕವಾಗಿಯೇ ಬಳಸಿದೆ. ಇದಕ್ಕೆ ಕಾರಣಗಳು ಎರಡು :

ಮೊದಲನೆಯದಾಗಿ ಶ್ರುತಿನಿದರ್ಶನ ಸಂದರ್ಭದಲ್ಲಿ ಭರತೋಕ್ತವೆಂದು ದೊರೆಯುವ ಪಾಠಕ್ಕೆ ಮೇಲೆ ಹೇಳಿರುವ ಅರ್ಥವು ಎಲ್ಲಾ ರೀತಿಯಲ್ಲೂ ಸಿದ್ಧಿಸುತ್ತದೆ ಎಂದೇನೂ ಇಲ್ಲ. ಉಪಲಬ್ಧಪಾಠಕ್ಕೆ ಕೇವಲ ಅಕ್ಷರಾರ್ಥವನ್ನು ಹೀಗೆಯೂ ಹೇಳಬಹುದು :

ಆದರೆ (ಷಡ್ಜಗ್ರಾಮದಲ್ಲಿರುವಂತೆ ಅಲ್ಲದೆ) ಮಧ್ಯಮಗ್ರಾಮದ ಪಂಚಮವನ್ನು (ಒಂದು) ಶ್ರುತಿಯಷ್ಟು ಇಳಿಸಬೇಕು. ಹೀಗೆ ಅದರ ಶ್ರುತಿಯನ್ನು (ಮಧ್ಯಮಗ್ರಾಮದ ಪಂಚಮವನ್ನು ಷಡ್ಜಗ್ರಾಮದ ಪಂಚಮದವರೆಗೆ) ಏರಿಸಿ ಅಥವಾ (ಷಡ್ಜಗ್ರಾಮದ ಪಂಚಮವನ್ನು ಮಧ್ಯಮಗ್ರಾಮದ ಪಂಚಮದವರೆಗೆ) ಇಳಿಸಿದರೆ (ಉಂಟಾಗುವುದೇ) ಆ ಶ್ರುತಿಯ ಪ್ರಮಾಣ. ದಂಡದ ಉದ್ದ, ತಂತಿಯ ದಪ್ಪ ಮುಂತಾದವುಗಳಲ್ಲಿ ಸಮಾನವಾಗಿರುವ ಎರಡು ವೀಣೆಗಳಲ್ಲಿ ಷಡ್ಜಗ್ರಾಮದ ಸ್ವರಾಷ್ಟಕವನ್ನು ಶ್ರುತಿಮಾಡಬೇಕು. (ಅದರಲ್ಲಿ ಒಂದು ಧ್ರುವವಾಗಿರಲಿ). ಇನ್ನೊಂದರಲ್ಲಿ ಪಂಚಮವನ್ನು ಇಳಿಸಿ ಮಧ್ಯಮಗ್ರಾಮ(ಪಂಚಮ)ವನ್ನಾಗಿ ಮಾಡಬೇಕು. ಅದೇ ಪಂಚಮದ ಶ್ರುತಿಯನ್ನು ಏರಿಸಿ ಷಡ್ಜಗ್ರಾಮ (ಪಂಚಮ)ವನ್ನಾಗಿ ಮಾಡಬೇಕು. ಹೀಗೆ (ಮಧ್ಯಮಗ್ರಾಮ ಪಂಚಮದಲ್ಲಿ) ಒಂದು ಶ್ರುತಿಯಷ್ಟು ಕಡಿಮೆಯಾಗುತ್ತದೆ. ಪುನಃ ಹೀಗೆ ಇನ್ನೊಂದರಲ್ಲಿ ಶ್ರುತಿಯನ್ನು ಇಳಿಸಬೇಕು – ಹೇಗೆಂದರೆ ಚಲವೀಣೆಯ ಗಾಂಧಾರವು ಧ್ರುವವೀಣೆಯ ರಿಷಭದಲ್ಲಿ ಮತ್ತು ಚಲವೀಣೆಯ ನಿಷಾದವು ಧ್ರುವವೀಣೆಯ ಧೈವತದಲ್ಲಿ ಪ್ರವೇಶಿಸಿ ಏಕೀಭಾವವನ್ನು ಪಡೆಯುವಂತೆ. (ಈ ಏಕೀಭಾವವು ಉಂಟಾಗುವುದು ಗಾಂಧಾರ ನಿಷಾದಗಳಲ್ಲಿ ಪ್ರತಿಯೊಂದರಲ್ಲಿಯೂ) ಎರಡು ಶ್ರುತಿಗಳು ಹೆಚ್ಚಾಗಿರುವುದರಿಂದ. ಪುನಃ ಹಾಗೆಯೇ ಚಲವೀಣೆಯಲ್ಲಿ ಶ್ರುತಿಯನ್ನು ಇಳಿಸಬೇಕು—ಹೇಗೆಂದರೆ ಅದರ ರಿಷಭ ಧೈವತಗಳು ಕ್ರಮವಾಗಿ ಧ್ರುವವೀಣೆಯ ಷಡ್ಜ ಪಂಚಮಗಳಲ್ಲಿ ಪ್ರವೇಶಿಸಿ ಏಕೀಭಾವವನ್ನು ಪಡೆಯುವಂತೆ. (ಈ ಏಕೀಭಾವವುಂಟಾಗುವುದು ರಿಷಭವು ಷಡ್ಜಕ್ಕಿಂತಲೂ ಧೈವತವು ಪಂಚಮ

ಕ್ಕಿಂತಲೂ) ಮೂರು ಶ್ರುತಿಗಳಷ್ಟು ಹೆಚ್ಚಾಗಿರುವುದರಿಂದ. ಹಾಗೆಯೇ ಇನ್ನೊಮ್ಮೆ ಚಲವೀಣೆಯಲ್ಲಿ ಶ್ರುತಿಗಳನ್ನು ಅದರ ಷಡ್ಜ, ಮಧ್ಯಮ ಪಂಚಮಗಳು ಧ್ರುವವೀಣೆಯ ನಿಷಾದ ಗಾಂಧಾರ ಮಧ್ಯಮಗಳಲಿ ಕ್ರಮವಾಗಿ ಪ್ರವೇಶಿಸಿ (ಏಕೀಭಾವವನ್ನು ಪಡೆದಿ)ರುವಂತೆ ಇಳಿಸಬೇಕು. (ಹೀಗಾಗುವುದು ಷಡ್ಜವು ನಿಷಾದಕ್ಕಿಂತಲೂ ಮಧ್ಯಮವು ಗಾಂಧಾರಕ್ಕಿಂತಲೂ ಪಂಚಮವು ಮಧ್ಯಮಕ್ಕಿಂತಲೂ) ಮೂರು ಶ್ರುತಿಗಳಷ್ಟು ಹೆಚ್ಚಾಗಿರುವುದರಿಂದ. ಹೀಗೆ (ಗಾಂಧಾರ, ನಿಷಾದಗಳಲ್ಲಿ ಎರಡೆರಡರಂತೆ ನಾಲ್ಕು, ರಿಷಭ ಧೈವತಗಳಲ್ಲಿ ಮೂರು ಮೂರರಂತೆ ಆರು, ಷಡ್ಜ ಮಧ್ಯಮ ಪಂಚಮಗಳಲ್ಲಿ ಪ್ರತಿಯೊಂದಕ್ಕೂ ನಾಲ್ಕರಂತೆ ಹನ್ನೆರಡು, ಹೀಗೆ ಒಟ್ಟಿನಲ್ಲಿ) ಎರಡು ಗ್ರಾಮಗಳಲ್ಲಿ (ಪ್ರತಿಯೊಂದರಲ್ಲಿ)ಯೂ ಇಪ್ಪತ್ತೆರಡು ಶ್ರುತಿಗಳು (ಇವೆಯೆಂದು) ಖಚಿತವಾಗಿ ತಿಳಿಯಲ್ಪಡುತ್ತವೆ.

ಆದರೆ ಈ ಅರ್ಥವು ಸಂಗೀತಶಾಸ್ತ್ರಕ್ಕೆ ವಿಶೇಷ ಪ್ರಯೋಜಕವೇನೂ ಆಗಿರುವುದಿಲ್ಲ. ಇದರಲ್ಲಿ ಗಾಂಧಾರ ನಿಷಾದಗಳು ದ್ವಿಶ್ರುತಿಕಗಳೆಂದೂ, ರಿಷಭ ಧೈವತಗಳು ತ್ರಿಶ್ರುತಿಕಗಳೆಂದೂ, ಷಡ್ಜ ಮಧ್ಯಮ ಪಂಚಮಗಳು ಚತುಃಶ್ರುತಿಕಗಳೆಂದೂ ಆಪ್ತೋಪದೇಶವೆಂಬ ಪ್ರಮಾಣದಿಂದ ಸಿದ್ಧವಾಗುತ್ತವೆ. ಇದರಲ್ಲಿ ಶ್ರುತಿಯ ಪ್ರಮಾಣದ ಬಗೆಗೆ ಏನೂ ಸೂಚನೆಯೂ ನಿರ್ದೇಶವೂ ಇಲ್ಲ ; ಲಕ್ಷ್ಯಪ್ರಸಿದ್ಧವಾದ ನಾದಾಂತರಗಳಿಗೆ ತಾತ್ತ್ವಿಕವಾಗಿ ಇಯತ್ತೆಯಾದ ಪ್ರಮಾಣವೊಂದನ್ನು ಸ್ವಕಪೋಲ ಕಲ್ಪಿತವಾಗಿ ಲಕ್ಷಿಸಿದಂತಾಯಿತೇ ಹೊರತು ಈ ಅಂತರಗಳಲ್ಲಿರುವ ಬಿಡಿ ಬಿಡಿಯಾದ ಶ್ರುತಿಗಳ ಪ್ರಮಾಣಗಳನ್ನು ಕುರಿತು ವಿವೇಚಿಸಿದಂತಾಗಲಿಲ್ಲ. ಅಲ್ಲದೆ ಈ ಪ್ರಮಾಣಗಳು ಇಷ್ಟಿಷ್ಟು ಶ್ರುತಿಗಳವು ಎಂದು ಹೇಳಲು ಯಾವ ಬಗೆಯ ಸಾಕ್ಷ್ಯವನ್ನೂ ಕೊಟ್ಟಂತಾಗಲಿಲ್ಲ. ಅಥವಾ ಈ ಕ್ರಮದಿಂದ ದ್ವಿಶ್ರುತಿಕಪ್ರಮಾಣವೆಂದರೆ ರಿಷಭ-ಗಾಂಧಾರ, ಧೈವತ-ನಿಷಾದಗಳಲ್ಲಿ ನಡುವೆ ಇರುವ ಅಂತರಕ್ಕೆ ಸಂಜ್ಞೆ ಎಂದು ಮೊದಲಾದ ಲಕ್ಷಣವು ಇಲ್ಲಿ ವಿವಕ್ಷಿತವಾಗಿದೆಯೆಂದರೆ ಸ್ಥಾಯಿಯಲ್ಲಿ ಇಂತಹ ಇಪ್ಪತ್ತೆರಡೇ ಏಕಿರಬೇಕು, ಹದಿನೈದು, ಇಪ್ಪತ್ತು, ಇಪ್ಪತ್ತಮೂರು ಎಂದು ಮುಂತಾದ ಬೇರೆ ಸಂಖ್ಯೆಗಳನ್ನು ಬಿಟ್ಟು ಬಿಟ್ಟು ಈ ಸಂಖ್ಯೆಯದೆಂದೇ ಏಕೆ ಹೇಳಬೇಕು ; ಹಾಗಿದ್ದರೆ 'ದ್ವಾವಿಂಶತಿ ಶ್ರುತಯಃ ಪ್ರತ್ಯವಗಂತವ್ಯಾಃ' ಎಂಬ ಮಾತನ್ನು ಏಕೆ ಭರತನು ಹೇಳಬೇಕಾಗಿತ್ತು; ಷಡ್ಜ, ಮಧ್ಯಮಗಳಿಗಿಂತ ಭೌತಿಕ ಪ್ರಮಾಣದಲ್ಲಿ ಭಿನ್ನವಾದ ಪಂಚಮವನ್ನೂ ಚತುಃಶ್ರುತಿಕವೆಂದೇ ಹೇಳುವ ಅಗತ್ಯವೇನು ಎಂದು ಮುಂತಾದ ಉತ್ತರಿಸಲಾಗದ ಪ್ರಶ್ನೆಗಳು ಎದುರಾಗುತ್ತವೆ. ಇದೆಲ್ಲವನ್ನೂ ದೃಷ್ಟಿಯಲ್ಲಿಟ್ಟುಕೊಂಡರೆ ಅಭಿನವಗುಪ್ತನು ಭಾರತೀಯ ಪಾಠದಿಂದ (ಅದರ ಮೂಲಾರ್ಥವು ಹೇಗೇ ಇರಲಿ) ಸಮಿಾಚೀನವಾದ ಅರ್ಥವನ್ನು ಬಿಡಿಸಿದ್ದಾನೆಂದು ತಿಳಿಯಬೇಕಾಗುತ್ತದೆ.

'ಭರತಮುನಿ ಪ್ರಣೀತವೆಂದು ಅಭಿನವಗುಪ್ತನು ಹೇಳುವ' ಎಂಬ ಮಾತಿಗೆ ಇನ್ನೂ ಹೆಚ್ಚು ಸಮಂಜಸವಾದ ಎರಡನೆಯ ಕಾರಣವನ್ನೂ ಕೊಡಬಹುದು :

ತೌರತ್ರಿಕಸೂತ್ರಕಾರನೆಂದು ಪ್ರಸಿದ್ಧವಾಗಿರುವ ಭರತಾಚಾರ್ಯನ ಉಕ್ತಿಗಳನ್ನು ಅತ್ಯಂತ ಪ್ರಮಾಣಭೂತವಾದ ವಾಕ್ಯೆಂದು ಭರತೋತ್ತರಕಾಲೀನ ಮತಿಶೂರರೆಲ್ಲರೂ ವಿವಿಧ ಕ್ಷೇತ್ರಗಳಲ್ಲಿ ಸ್ವೀಕರಿಸಿದ್ದಾರೆ. ಆದುದರಿಂದಲೇ ಅವನನ್ನು ಮುನಿ, ಭಗವನ್ ಎಂದು ಮುಂತಾಗಿ ಗೌರವಿಸಿ, ಪೂಜಿಸಿದ್ದಾರೆ. ರಸಮಿಾಮಾಂಸೆ, ನಾಟಕ, ಕಾವ್ಯ, ಛಂದಸ್ಸು, ಗೀತ, ವಾದ್ಯ, ನೃತ್ಯ ಮುಂತಾದ ಅನೇಕ ಶಾಸ್ತ್ರಗಳಲ್ಲಿ ಬಹುಶಃ ಭರತನಷ್ಟು ಉದ್ಧೃತವಾದ, ಪಠಿತವಾದ, ಚರ್ಚಿಸಲ್ಪಟ್ಟ, ವ್ಯಾಖ್ಯಾತವಾದ ಗ್ರಂಥಕಾರನು ಬೇರೊಬ್ಬನಿರಲಾರನು. ಈ ಬಹುಪ್ರಚಾರದ ಕಾರಣದಿಂದಲೇ, ಕಾಲಕ್ರಮದಲ್ಲಿ ಆಯಾ ಪಂಥ, ಪ್ರಾಂತ್ಯ, ವ್ಯಾಖ್ಯಾನಕಾರ ಮುಂತಾದವುಗಳನ್ನು ಅವಲಂಬಿಸಿ ಭಾರತೀಯ ಮೂಲಗ್ರಂಥಕ್ಕೆ ಪಾಠಾಂತರಗಳು ಹುಟ್ಟಿಕೊಂಡವು ; ಮೂಲಗ್ರಂಥದಲ್ಲಿ ಅರ್ಥವ್ಯತ್ಯಾಸ, ಅರ್ಥವಿಸ್ತಾರಗಳು ಬೆಳೆಯತೊಡಗಿದವು. ವ್ಯಾಖ್ಯಾನಕಾರರಾದ ಮಾತೃಗುಪ್ತ, ಶಂಕುಕ, ಕೀರ್ತಿಧರಾಚಾರ್ಯ, ಅಭಿನವಗುಪ್ತ ಮುಂತಾದವರು ಹೀಗೆ ಭಾರತೀಯ ನಾಟ್ಯಶಾಸ್ತ್ರವನ್ನು ವಿವಿಧವಾಗಿ ಪಠಿಸಿರುವುದು ಕಂಡುಬರುತ್ತದೆ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇವುಗಳಲ್ಲಿ ಅಭಿನವಗುಪ್ತನು ಸ್ವೀಕರಿಸಿರುವ ಕೆಲವು ಪಾಠಾಂತರಗಳು ಬೇರೆಡೆ ದೊರೆಯುವುದಿಲ್ಲ. ತಾನು ಬಳಸಿದ ಮಾತೃಕೆಯಲ್ಲಿರುವ ಪಾಠಕ್ಕೂ ಇತರ ಪೂರ್ವಭಾಷ್ಯಕಾರರು ಬಳಸಿದ ಪಾಠಕ್ಕೂ ಇರುವ ವ್ಯತ್ಯಾಸವನ್ನು ಅಭಿಗುಪ್ತನೇ ಅಲ್ಲಲ್ಲಿ ಸೂಚಿಸುತ್ತಾನೆ. ಇದರಿಂದಾಗಿ ಅಭಿನವಗುಪ್ತನು ಸ್ವೀಕರಿಸಿದ ನಾಟ್ಯಶಾಸ್ತ್ರವೇ ಮೂಲವಾಗಿ ರಚಿತವಾದುದು ಎಂದು ಹೇಳಲಾಗದು.

ಇದರ ಪ್ರಸ್ತಾಪವನ್ನು ಇಲ್ಲಿ ಏಕೆ ಮಾಡಿದೆಯೆಂದರೆ ಪಾಠಾಂತರಗಳು ಹುಟ್ಟಿಕೊಂಡಂತೆಲ್ಲಾ ಶ್ರುತಿನಿದರ್ಶನದ ತಂತ್ರ, ಪ್ರಯೋಜನಗಳೂ ಶ್ರುತಿವಿಷಯಕವಾದ ಕಲ್ಪನೆಗಳೂ ವ್ಯತ್ಯಾಸವಾಗುತ್ತಾ ನಡೆದಿವೆ. ಇವುಗಳನ್ನು ಚಾರಿತ್ರಕ ಹಿನ್ನೆಲೆಯಲ್ಲಿ ಸಂಕ್ಷೇಪವಾಗಿಯಾದರೂ ಗಮನಿಸದಿದ್ದಲ್ಲಿ ಶ್ರೀ ಶಾರ್ಙ್ಗದೇವನ ಶ್ರುತಿನಿದರ್ಶನದ ತಂತ್ರ, ಪ್ರತಿಜ್ಞೆ, ಮತ್ತು ಪ್ರಯೋಜನಗಳ ಅರಿವು ಸಂಪೂರ್ಣವಾಗುವುದಿಲ್ಲ. ಹೀಗೆ, ಶ್ರುತಿನಿದರ್ಶನಪದ್ಧತಿಯನ್ನು ಕುರಿತ ಭಾರತೀಯ ಪಾಠವು ಮತಂಗನಿಂದ (ಅದು ಮತಂಗೋಕ್ತಿಯಾಗಿಲ್ಲದೆ ಉದ್ಧೃತಿಯೇ ಆಗಿದ್ದರೆ) ಹೀಗೆ ಭಿನ್ನವಾಗಿ ಪಠಿತವಾಗಿದೆಯೆಂದು ಮೇಲಿನ ಅಡಿ ಟಿಪ್ಪಣಿಗಳಲ್ಲಿ (98–107) ಈಗಾಗಲೇ ಸೂಚಿಸಿದೆ. ಮೊದಲನೆಯದಾಗಿ ಎರಡು ವೀಣೆಗಳನ್ನೂ ಸಮಾನಸ್ಥಿತಿಗೆ ಮೊದಲು ತಂದಿಟ್ಟುಕೊಳ್ಳಬೇಕೆಂಬ ನಿಯಮವನ್ನು ಹೇಳುವ ಸಂದರ್ಭದಲ್ಲಿನ ತಂತ್ರ್ಯುಪವಾದನ ಎಂಬ ಪಾಠವು ಉಪಲಬ್ಧ ಆಕರಗಳಲ್ಲಿ ಬಹು ಸಮ್ಮತಿಯನ್ನು ಪಡೆದಿದ್ದರೂ ಮತಂಗನೂ ಅಭಿನವಗುಪ್ತನೂ ತಂತ್ರ್ಯುಪಪಾದನ ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ಈ ಪಾಠವೇ ಇಲ್ಲಿ ಸಮೀಚೀನಾರ್ಥವನ್ನು ಹೊಂದಿದೆ ; ಏಕೆಂದರೆ ವಾದನ ಎಂಬ ಶಬ್ದಕ್ಕೆ ಇಲ್ಲಿ 'ಉಪ' ಎಂಬ ಉಪಸರ್ಗದಿಂದ ಸಮಂಜಸವಾದ ಅರ್ಥವೇನೂ ಹೊರಡುವುದಿಲ್ಲ. ಎರಡನೆಯದಾಗಿ 'ಏಕಶ್ರುತಿರಪಕೃಷ್ಟಾ ಭವತಿ' ಎನ್ನುವುದಕ್ಕೆ ಶಂಕುಕ, ಕೀರ್ತಿಧರರಿಂದ ಸ್ವೀಕೃತವಾದ, ನಾಟ್ಯಶಾಸ್ತ್ರದ ಹ್ರಸ್ವತಮ ಪಾಠವೆಂದು ನಾಟ್ಯಶಾಸ್ತ್ರದ ಸಂಪಾದಕನು ಹೇಳುವ 'ಭ' ಮಾತೃಕೆಯೂ ಬೃಹದ್ದೇಶಿಯೂ 'ಏವಂ ಶ್ರುತಿರಪಕೃಷ್ಟಾ ಭವತಿ' ಎಂಬ ಪಾಠವನ್ನು ಒಳಗೊಂಡಿವೆ. ಶ್ರುತಿಯೆನ್ನುವುದಕ್ಕೆ ಶ್ರೋತ್ರಗಮ್ಯ ವೈಲಕ್ಷಣ್ಯವು ಯಾವ ಶಬ್ದದಿಂದ ಆಗುತ್ತದೆಯೋ ಅದೇ ಎಂಬ ಸಾಮಾನ್ಯಾರ್ಥವನ್ನು ಇಲ್ಲಿ ಗ್ರಹಿಸಿದರೆ—ಹೀಗೆನ್ನುವುದಕ್ಕೆ ಅಭಿನವಗುಪ್ತನ ಸಮ್ಮತಿಯುಂಟು—'ಏಕಶ್ರುತಿ' ಎನ್ನುವುದಕ್ಕೆ ಇಯತ್ತಾಪೂರ್ವಕವಾಗಿ ಅಳೆದು ಹೇಳಬಹುದಾದ—ಅಳೆದು ಹೇಳಿದ—ಪ್ರಮಾಣವೆಂದೇ ಗ್ರಹಿಸಬೇಕಾಗುತ್ತದೆ. ಇವೆರಡರಲ್ಲಿನ ಅರ್ಥ ವ್ಯತ್ಯಾಸವು ಸ್ಪಷ್ಟವಾಗಿಯೇ ಇದೆ. ಅಭಿನವಗುಪ್ತನು 'ಪಂಚಮಶ್ರುತಿರಪಕೃಷ್ಟಾ ಭವತಿ' [110] ಎಂದು ಇದನ್ನು ಪಠಿಸುತ್ತಾನೆ.[113] ಈ ಪಾಠಕ್ಕೆ ಈ ಇರ್ಥವನ್ನು ಹೊಂದಿಸಬೇಕಾದರೆ 'ಪಂಚಮಶ್ರುತಿಃ=ಯಸ್ಯಾಃ ಶ್ರುತೇಃ ಷಡ್ಜಗ್ರಾಮಕಃ ಚತುಃಶ್ರುತಿಕೋ ಪಂಚಮೋ ಅಪಕೃಷ್ಟಃ ಭವತಿ, ಸೈವ ಸರ್ವಸ್ವರೇಭ್ಯೋ ಅಪಕೃಷ್ಟಾ ಭವತಿ' ಅಥವಾ 'ಷಡ್ಜಗ್ರಾಮಿಕಸ್ಯ ಚತುಃಶ್ರುತಿಕಪಂಚಮಸ್ಯ ಯಾ ಪರಮಾಶ್ರುತಿಃ ಅಪಕೃಷ್ಟಾ ಭವತಿ ಸೈವ ಸರ್ವಸ್ವರೇಭ್ಯೋ ಅಪಕೃಷ್ಟಾ ಭವತಿ' ಎಂದು ಇದನ್ನು ಅನ್ವಯಮಾಡಬೇಕಾಗುತ್ತದೆ. ಮತಂಗೋದ್ಧೃತಪಾಠವಾದರೋ ಶ್ರುತಿಯ ಬಗ್ಗೆ ವಿಶಿಷ್ಟವಾದ ಒಂದು ಅರ್ಥವಿಸ್ತಾರವನ್ನೇ ಮೂಡಿಸುತ್ತದೆ : 'ಪರಂ ವಿಶೇಷಲಾಭೋ ನಾಸ್ತಿ, ಉಚ್ಚನೀಚಮಾತ್ರಪ್ರತೀತೇಃ'. ಇಷ್ಟೇ ಅಲ್ಲದೆ ಯಾವ ಉಪಲಬ್ಧ ಆಕರದಲ್ಲಿಯೂ ದೊರೆಯದಿದ್ದ '**ದ್ವೇ ದ್ವಯೋಃ**' ಎಂದು ಇತ್ಯಾದಿಯಾಗಿ ಸಹ ಎಲ್ಲಾ ಸಾರಣೆಗಳಿಂದಲೂ ಒಟ್ಟು ಬರುವ ಶ್ರುತಿಗಳನ್ನು ಎಣಿಸುವ ಸಂದರ್ಭದಲ್ಲಿ ಅಭಿನವಗುಪ್ತನು ಭರತೋಕ್ತವೆನ್ನುವ ಪಾಠವನ್ನು ವ್ಯಾಖ್ಯಾನಮಾಡುತ್ತಾನೆ.

ಪಾಠಾಂತರಗಳು ಏನೇ ಇರಲಿ, ಅಭಿನವಗುಪ್ತಾಚಾರ್ಯನು ಶ್ರುತಿಯ ಕಲ್ಪನೆಯನ್ನು ಭಾರತೀಯ ಉಕ್ತಿಗೆ ವ್ಯಾಖ್ಯಾನಮಾಡುವ ಸಂದರ್ಭದಲ್ಲಿಯೇ ತನ್ನ ಅಭಿಪ್ರಾಯಗಳನ್ನೂ ಬೆರೆಸಿ ಅರ್ಥವಿಸ್ತಾರಮಾಡಿದ್ದಾನೆಂಬುದರಲ್ಲಿ ಸಂದೇಹವಿಲ್ಲ. ಶ್ರುತಿ ಸ್ವರಗಳ ಪರಸ್ಪರ ಸಂಬಂಧವನ್ನು ಚರ್ಚಿಸುವ ಸಂದರ್ಭದಲ್ಲಿ ಅವನು ಮಾಡಿರುವ ವಿವೇಚನೆಯನ್ನು ಪುನಃ ಪರಿಶೀಲಿಸಲಾಗುವುದು. ಇಲ್ಲಿ ಶ್ರುತಿನಿದರ್ಶನವನ್ನು ಹೇಳುವಾಗ ಭರತನಿಂದ ಅವನು ತನ್ನ ಪ್ರತಿಭಾ

ವಿಶೇಷದಿಂದ ಯಾವ ಅರ್ಥಗಳನ್ನು ಹೊರಡಿಸಿದ್ದಾನೆ, ಇದು ಶಾರ್ಙ್ಗದೇವನನ್ನು ಹೇಗೆ ಪ್ರಭಾವಗೊಳಿಸಿದೆ, ಎಂಬಿಷ್ಟು ಮಾತ್ರ ಪರೀಕ್ಷಿಸಲಾಗುವುದು.

ಮೊದಲನೆಯದಾಗಿ, ಶ್ರುತಿ ಎಂಬುದಕ್ಕೆ ಕೇಳಿಸಿದ್ದು ಎಂಬ ಸಾಮಾನ್ಯಾರ್ಥವನ್ನೇ ಅವನು ಮೊದಲು ಬಳಸಿ ಅನಂತರ ಇದರಿಂದ ವಿಶೇಷವಾದ ಪಾರಿಭಾಷಿಕಾರ್ಥವನ್ನು ಹೊರಡಿಸುತ್ತಾನೆ. ಏಕೆಂದರೆ 'ಶ್ರುತೇಃ=ಶ್ರೋತ್ರ ಗ್ರಾಹ್ಯಸ್ಯ ಶಬ್ದಸ್ಯ' ಎಂಬ ಸಮೀಕರಣದಿಂದಲೇ ಶ್ರುತಿನಿದರ್ಶನದ ವ್ಯಾಖ್ಯಾನವನ್ನು ಅವನು ಪ್ರಾರಂಭಿಸುತ್ತಾನೆ. ಆದರೆ ಮುಂದಿನ ವಾಕ್ಯದಲ್ಲಿಯೇ ಶ್ರೋತ್ರಗ್ರಾಹ್ಯಸ್ಯ ಎಂಬುದಕ್ಕೆ ಶ್ರಾವ್ಯತೆಯ ಮಿತಿಯಲ್ಲಿರುವ ಅತ್ಯಂತ ಕನಿಷ್ಠ ನಾದಾಂತರವೇ ಶ್ರುತಿ ಎಂಬ ಹೊಸ ಕಲ್ಪನೆಯನ್ನು ನಮ್ಮ ಮುಂದಿರಿಸುತ್ತಾನೆ. ಹೀಗೆ ಹೇಳುವುದಕ್ಕೆ ಮೂಲ ಗ್ರಂಥದಲ್ಲಿ ಯಾವ ಸೂಚನೆಯೂ ಇಲ್ಲ. ಭರತನು ಶ್ರುತಿಯೆಂಬುದಕ್ಕೆ ಶ್ರುತಿನಿದರ್ಶನದ ಮೂಲಕ ಉಂಟಾಗುವ ಅನುಮಿತಿಜ್ಞಾನವನ್ನು ಬಿಟ್ಟರೆ ಪ್ರತ್ಯೇಕವಾಗಿ ಬೇರೆ ಇಯತ್ತೆಯನ್ನು ಲಕ್ಷಿಸಿಲ್ಲ. ದತ್ತಿಲಮತಂಗವಿಶ್ವಾವಸು-ವಿಶಾಖಿಲಾದಿ ಪೂರ್ವಾಚಾರ್ಯರಿಂದಲೂ ಈ ಮೇಲಿನ ಅರ್ಥವನ್ನು ಅಭಿನವಗುಪ್ತನು ಪಡೆದಿಲ್ಲ. ಇವರೆಲ್ಲರೂ 'ಶ್ರು' ಧಾತುವಿನ ಆಧಾರದಿಂದಲೇ ಶ್ರುತಿಯ ಅರ್ಥವನ್ನು ಹೇಳಿದ್ದಾರೆ. ಆದುದರಿಂದ ಶ್ರುತಿ ಎಂಬ ಶಬ್ದವು ನಿರ್ದಿಷ್ಟವಾದ ಲಕ್ಷಣೋಕ್ತಿಯನ್ನು ಮೊದಲು ಸಂಗೀತಶಾಸ್ತ್ರದಲ್ಲಿ, ಅದೂ ಅದರ ಅತ್ಯಂತ ಸಮೀಚೀನಾರ್ಥದಲ್ಲಿ, ಪಡೆದಿದ್ದು ಅಭಿನವಗುಪ್ತನಿಂದಲೇ. ಧ್ವನಿಯ ತೀವ್ರತ್ವ ಮಂದತ್ವಗಳಿಗೆ ಕಾರಣವಾದ (ತಂತಿಯ, ಅಥವಾ ಕಂಠದ) ಆಯತತ್ವ ಮತ್ತು ಮಾರ್ದವಗಳಿಂದ ಯಾವ ಅಂತರವು ವಿಶೇಷವೆಂದು (ಎಂದರೆ ಪೂರ್ವೋಚ್ಚರಿತ ಧ್ವನಿಗಿಂತ ಭಿನ್ನವೆಂದು) ಅವಬೋಧವಾಗಿ ನಿಶ್ಚಿತವಾದ ಪ್ರಮಾಣವು ಯಾವ (ಇಂತಹ) ಅಂತರಕ್ಕಿದೆಯೋ ಅದೇ ಶ್ರುತಿ :

ಏವಂ ತೀವ್ರಮಂದತ್ವಹೇತುಭ್ಯಾಂ ಮಾರ್ದವಾಯತತ್ವಾಭ್ಯಾಂ ಯದಂತರಂ ಯೋ ವಿಶೇಷಾವಬೋಧಃ ಪ್ರಮಾಣಂ ನಿಶ್ಚಾಯಕಂ ಯಸ್ಯಾಃ ಸಾ ಶ್ರುತಿಃ । 109

ಹಿಂದಿನ ಧ್ವನಿಯಿಂದ ನಾದಮಟ್ಟವು ಎಷ್ಟರಿಂದ ಕಡಿಮೆಯಾಗುವುದರ ಅಥವಾ ಹೆಚ್ಚಾಗುವುದರ ಮೂಲಕ ತೀವ್ರಮಂದಗಳೆಂಬ ರೂಪದಲ್ಲಿ ವೈಲಕ್ಷಣ್ಯವು (ಭಿನ್ನತೆಯು) ತೋರುತ್ತದೆಯೋ ಅದೇ ಶ್ರುತಿ :

ಪ್ರಾಕ್ತನಸ್ಯ ಧ್ವನೇರ್ವೈಲಕ್ಷಣ್ಯಂ ಯಾವತಾ ಹೀನೇನಾಧಿಕೇನ ಯಾ ತೀವ್ರಮಂದಾತ್ಮನಾ ರೂಪೇಣ ಲಕ್ಷ್ಯತೇ ಸಾ ಶ್ರುತಿರಿತಿ ಯಾವತ್ । 109

ಇದು ಸಾಮಾನ್ಯಗೋಚರವೇ ಆಗದಿರುವಷ್ಟು ಪರಮಾಣು ಪ್ರಮಾಣದಲ್ಲಿ ಎಂದರೆ ಅದಕ್ಕಿಂತ ಕಡಿಮೆಯಾದ ಪ್ರಮಾಣವೇ ಬೇರೊಂದಿಲ್ಲ ಎನ್ನುವಷ್ಟು ಸೂಕ್ಷ್ಮರೂಪದಲ್ಲಿ ಇದೆ ; ಎಂದರೆ ಸ್ವರವೊಂದನ್ನು ಏರಿಸಿದಾಗ ಅಥವಾ ಇಳಿಸಿದಾಗ ಅದರಿಂದ ಭಿನ್ನತೆಯನ್ನು ಗ್ರಹಿಸಲು ಎಷ್ಟುಬೇಕೋ ಕೇವಲ ಅಷ್ಟುಮಾತ್ರವಿರುವ ಕನಿಷ್ಠಾಂತರವೇ ಶ್ರುತಿ. ಇದನ್ನು (ಸಾಮಾನ್ಯರು) ಗ್ರಹಿಸಲು ಸಾಧ್ಯವಿಲ್ಲ :

ಯದ್ಯಪಿ ಪರಮಾಣುತೋಽಪ್ಯುತ್ಕರ್ಷಾಪಕರ್ಷೋ ವಾ ಭವೇದ್ ಧ್ವನೇರ್ವಿಶೇಷಸ್ತಥಾಪಿ ನಾಸೌ ಗೃಹೀತುಂ ಪಾರ್ಯತೇ । 109

ಸಾಮಾನ್ಯ ಗ್ರಹಣಕ್ಕೆ ಬಹು ಕಷ್ಟಸಾಧ್ಯವಾದ ಅಂತರವಿದೆಂದು ಅವನು ಪುನಃ ಒತ್ತಿ ಹೇಳುತ್ತಾನೆ :

ಅತ ಏವ ಯತ್ರೋತ್ಕರ್ಷಾಪಕರ್ಷೌ ನ ಕೌಚಿದ್ ಧ್ವನೀನಾಂ ಗ್ರಾಹ್ಯೇತೇ ತತ್ರೈಕಾ ಶ್ರುತಿರಿತಿ ಪರಮಾಚಾರ್ಯಃ "ಏಕಶ್ರುತಿದೂರಾತ್ ಸಂಬುದ್ಧೌ" 120

120 ಅಭಿನವಗುಪ್ತ, ಉ. ಗ್ರಂ., ಪು. 22.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ರುತಿ ಎಂಬುದಕ್ಕೆ ಅಭಿನವಗುಪ್ತನು ಅರ್ಥವನ್ನು ಹೇಳಲು ಎಲ್ಲಿಂದ ಸ್ಫೂರ್ತಿಪಡೆದಿದ್ದಾನೆಂಬುದಕ್ಕೆ ಇಲ್ಲಿ ಏಕೈಕ ಸೂಚನೆಯಿದೆ. " ಏಕಶ್ರುತಿದೂರಾತ್ ಸಂಬುದ್ಧೌ " ಎಂದು ಹೇಳಿರುವುದು ಪಾಣಿನಿ.[67] ಇದನ್ನು ಅವನು ಹೇಳಿರುವುದಾದರೂ ವೈದಿಕಸ್ವರಗಳಾದ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯ, ತೈರೋವ್ಯಂಜನ ಮುಂತಾದ ಮತ್ತು ಸಾಮವೇದಪ್ರಯುಕ್ತವಾದ ಪ್ರಥಮಾದಿ ಅತಿಸ್ವಾರ ಪರ್ಯಂತವಾದ ಏಳು ಸ್ವರಗಳಲ್ಲಿ ಏಳನೆಯದು ಆರನೆಯದರಿಂದ ಕೇವಲ ಅತಿ ಸಮೀಪದಲ್ಲಿದೆ ಎಂದು ಸೂಚಿಸುವುದಕ್ಕಾಗಿ. ವೈಯಾಕರಣನೊಬ್ಬನು ಆಡಿದ ಮಾತನ್ನು ವೈದಿಕ ಗಾಯನದಲ್ಲಿ ಎಂದರೆ ಗಾಂಧರ್ವಕಲ್ಪದಲ್ಲಿ ಬಳಸಿಕೊಂಡು, ಅದನ್ನು ಭರತೋಕ್ತಿಯ ಚೌಕಟ್ಟಿನಲ್ಲಿ ಲೌಕಿಕ ಸಂಗೀತಶಾಸ್ತ್ರಕ್ಕೆ ಅತ್ಯಂತ ಮೂಲಭೂತವಾದ ಪ್ರಮೇಯವನ್ನಾಗಿ ಮಾರ್ಪಡಿಸಿರುವ ಶ್ರೀಮದಭಿನವಗುಪ್ತಪಾದಾಚಾರ್ಯನ ಪ್ರತಿಭೆಯು ಅತ್ಯಂತ ಪೂಜ್ಯವಾದುದು.

ಷಡ್ಜ, ರಿಷಭ ಮುಂತಾದ ಸ್ವರಗಳಿಗೆ ನಾಲ್ಕು, ಮೂರು ಇತ್ಯಾದಿಯಾಗಿ ನಿಯತ ಶ್ರುತಿವಿಭಾಗವನ್ನು ಹೇಳಿದ ನಂತರ ಭರತನು ಶ್ರುತಿನಿದರ್ಶನದಲ್ಲಿ ತೊಡಗಿದ್ದಾನಷ್ಟೆ. ಶ್ರವಣಗೋಚರಕ್ಕೆ ಅಸಾಧ್ಯವಾದ ಅಥವಾ ಅತ್ಯಂತ ಕಷ್ಟಸಾಧ್ಯವಾದ, ಪರಮಾಣು ಪ್ರಮಾಣದಲ್ಲಿ ಶ್ರುತಿಯಿದೆ ಎಂದು ಹೇಳಿದರೆ, ಹಾಗಾದರೆ ಮೇಲ್ಕಂಡ ನಿಯತ ಶ್ರುತಿವಿಭಾಗವನ್ನು ಹೇಳಿದ್ದಾದರೂ ಹೇಗೆ, ಅಲಾಬೂವೀಣೆ ಮೊದಲಾದವುಗಳಲ್ಲಿ ಈ ಶ್ರುತಿವಿಭಾಗದ ನೈಯತ್ಯವು ಕಾಣುವುದಿಲ್ಲವಲ್ಲ, ಎಂಬ ಶಂಕೆ ಇಲ್ಲಿ ಮೂಡುವುದು ಸಹಜವೇ. ಇದನ್ನು ಪರಿಹರಿಸುವುದಕ್ಕಾಗಿ ಹೇಳಿದ ಮಾತಿನಲ್ಲಿ ಆಧುನಿಕರಿಗೆ ಆಶ್ಚರ್ಯವಾಗುವಂತಹ ಒಂದು ಸಂಗತಿಯನ್ನು ಅವನು ಅಡಗಿಸಿದ್ದಾನೆ : ಇಂತಹ ನೈಯತ್ಯವನ್ನು ವೀಣಾದಂಡದಲ್ಲಿ ದೂರ, ಸಮೀಪವೆಂದು ಅಳೆದು ಹೇಳಿದ ವಿಭಾಗದಿಂದ, ಎಂದರೆ ತಂತಿಯ ಉದ್ದದಿಂದ ಸ್ವರಗಳ ಪ್ರಮಾಣವನ್ನು ತನ್ಮೂಲಕ ಶ್ರುತಿಪ್ರಮಾಣಗಳನ್ನು ನಿಷ್ಕರ್ಷಿಸಿ ಹೇಳಬಹುದೆಂಬುದೇ ಈ ಮಾತು. ಕ್ರಿ. ಶ. ಹದಿನೇಳನೆಯ ಶತಮಾನದವರೆಗೆ ಪಾಶ್ಚಾತ್ಯ ನಾದವಿಜ್ಞಾನದಲ್ಲೂ ಹದಿನೆಂಟನೆಯ ಶತಮಾನದಲ್ಲಿ (ಅಹೋಬಲ ಪಂಡಿತನಿಂದ ಸಂಗೀತ ಪಾರಿಜಾತದಲ್ಲಿ) ಭಾರತದಲ್ಲೂ ಹೇಳದಿದ್ದ ಈ ಪ್ರಮೇಯವನ್ನು ಅಭಿನವ ಗುಪ್ತನು ಸುಮಾರು ಒಂಭೈನೂರು ವರ್ಷಗಳ ಹಿಂದೆಯೇ ಹೇಳಿದ್ದಾನೆಂಬುದು ಹೆಮ್ಮೆಯ ಸಂಗತಿಯೇ ಸರಿ. ಆದರೆ ಇದನ್ನು ಶ್ರುತಿನಿದರ್ಶನಕ್ಕೆ ಶಾಸ್ತ್ರದಲ್ಲಿ ಪ್ರಯೋಜಕವೆಂದು ಅವನು ಎಣಿಸುವುದಿಲ್ಲ. ಏಕೆಂದರೆ ಕೇವಲ ಪ್ರತ್ಯಕ್ಷ ಪ್ರಮಾಣದಿಂದಲೇ, ಪ್ರಯೋಗದಿಂದ ಮಾತ್ರವೇ, ತತ್ತ್ವವಿವೇಚನೆಗೆ ಆಸ್ಪದವಿಲ್ಲದೆ, ಹೇಳಿದಂತಹ ಪ್ರಮೇಯದಿಂದ ಶಾಸ್ತ್ರಕ್ಕೆ ವಿಶೇಷವಾಗಿ ಪ್ರಯೋಜನವೇನೂ ಆಗದು.

ಅಲ್ಲದೆ 'ಏವಂ ಸ್ವಶ್ರುತ್ಯುತ್ಕರ್ಷಾದಪಕರ್ಷಾದ್ ವಾ ಯದಂತರಂ ಮಾರ್ದವಾದಾಯತತ್ವಾದ್ ವಾ' ಎಂಬ ಭರತೋಕ್ತಿಯಲ್ಲಿನ 'ವಾ' ಎಂಬ ವಿಕಲ್ಪಕ್ಕೆ ಬಹುಶಃ ಭರತನು ಉದ್ದೇಶಪಟ್ಟ ಅರ್ಥಕ್ಕಿಂತಲೂ ಹೆಚ್ಚಾದುದನ್ನು ಅಭಿನವಗುಪ್ತನು ಇಲ್ಲಿ ಹೇಳುತ್ತಾನೆ. ಮೇಲಿನ ಮಾತಿನಲ್ಲಿ ಉತ್ಕರ್ಷ–ಅಪಕರ್ಷಗಳಿಗೂ ಮಾರ್ದವ–ಆಯತತ್ವಗಳಿಗೂ ಪರಸ್ಪರಾನುಪತೆಯು ವಿವಕ್ಷಿತವಾಗಿಲ್ಲ, ಎರಡೂ ಬೇರೆ ಬೇರೆಯಾಗಿಯೇ ಅನ್ವಯಿಸತಕ್ಕ ಮಾತುಗಳು, ಎಂದರೆ ಮಾರ್ದವ-ಉತ್ಕರ್ಷಗಳೂ ಆಯತತ್ವ-ಅಪಕರ್ಷಗಳೂ ಪರಸ್ಪರ ಸಂಬಂಧಿತಗಳಲ್ಲ ಎಂಬುದನ್ನು ತಿಳಿಸುವುದೇ ಇಲ್ಲಿ 'ವಾ' ಎಂಬುದರ ಪ್ರಯೋಜನ ಎಂಬ ಸಾಮಾನ್ಯಾರ್ಥವೇ ಇಲ್ಲಿ ಮೊದಲು ಸ್ಫುರಿಸುತ್ತದೆ. ಆದರೆ ಮಾರ್ದವದಿಂದಲೂ ಉತ್ಕರ್ಷಾಪಕರ್ಷಗಳು, ಆಯತತ್ವದಿಂದಲೂ ಉತ್ಕರ್ಷಾಪಕರ್ಷಗಳು ಉಂಟು ಎಂಬ ವಿವಕ್ಷೆಯನ್ನು ವ್ಯಾಖ್ಯಾನಕಾರನು ಇಲ್ಲಿ ಕಾಣುತ್ತಿದ್ದಾನೆ. ಹೇಗೆಂದರೆ, ಧ್ರುವವೀಣೆಯಲ್ಲಿನ ಸ್ವರಗಳನ್ನು ಅಚಲಸಾರಣವಾಗಿ, ಎಂದರೆ ವ್ಯತ್ಯಾಸಮಾಡದೆ ಸ್ಥಿರವಾಗಿ ಇಟ್ಟಿರುವುದರಿಂದ, ಚಲವೀಣೆಯಲ್ಲಿ ಆಯಾ ಸ್ವರದ ತಂತಿಯು ಮಾರ್ದವ(ಸಡಿಲ)ವಾದರೆ, ಧ್ರುವವೀಣಾ ಮತ್ತು ಚಲವೀಣೆಯ ಆಯಾ ಸ್ವರಗಳು ಪರಸ್ಪರವಾಗಿ ಉತ್ಕರ್ಷ–ಅಪಕರ್ಷಭಾವದಲ್ಲಿರುತ್ತವೆ. ಏಕೆಂದರೆ ಚಲವೀಣೆಯಲ್ಲಿ ಸ್ವರದ ಅಪಕರ್ಷ(ಕುಗ್ಗುವಿಕೆ)ವಾಗಿದೆಯೆಂದು

ತೋರುವುದು, ಧ್ರುವವೀಣೆಯ ಆಯಾ ಸ್ವರವು ಅದಕ್ಕಿಂತ ಹೆಚ್ಚಾಗಿ (ಉತ್ಕರ್ಷವಾಗಿ)ದೆಯೆಂದು ತೋರುವುದರ ಮೂಲಕ. ಇದೇ ರೀತಿಯಲ್ಲಿ ಚಲವೀಣೆಯಲ್ಲಿ ಆಯಾ ಸ್ವರದ ತಂತಿಯ ಆಯತತ್ವ (ಬಿಗಿ) ವಾದರೆ ಅದರಲ್ಲಿ ಸ್ವರವು ಉತ್ಕರ್ಷವಾಗಿದೆಯೆಂದು ತೋರುವುದು ಧ್ರುವವೀಣೆಯ ಆಯಾ ಸ್ವರವು (ಹೋಲಿಸಲ್ಪಟ್ಟಾಗ) ಅಪಕರ್ಷವಾದಂತೆ (ಕಡಿಮೆಯಾಗಿರುವಂತೆ) ತೋರುವುದರಿಂದ. ಹೀಗೆ ಮಾರ್ದವವೇ ಆಗಲಿ, ಆಯತತ್ವವೇ ಆಗಲಿ, ಉತ್ಕರ್ಷ, ಅಪಕರ್ಷಗಳೆರಡೂ ಸ್ವರಗಳ ಪರಸ್ಪರ ಉಚ್ಚನೀಚಭಾವಗಳಿಂದ ಪ್ರತೀತವಾಗುತ್ತವೆ :

ವೀಣಾದ್ವಯೇ ಸ್ಥಿತೇ ಏಕಸ್ಯಾಂ ವೀಣಾಯಾಂ ತಂತ್ರ್ಯಾಮುತ್ಕೃಷ್ಟಾಯಾಂ ಸ್ವರಸ್ಯೋತ್ಕರ್ಷೋ ಪರಸ್ಯಾಃ ಸ್ಥಿರವೀಣಾತಂತ್ರೀಸ್ವರಸ್ಯಾಪಕರ್ಷೋ ಲಕ್ಷ್ಯತೇ । ತಸ್ಮಿಂಶ್ಚ ಲಕ್ಷ್ಯಮಾಣೇಽಪಕರ್ಷೇ ದ್ವಿತೀಯವೀಣಾ-ಸ್ವರಸ್ಯೋತ್ಕರ್ಷೋ ಲಕ್ಷಣೀಯೋ ಭವತಿ । ಆಯತತ್ವಾದುತ್ಕರ್ಷಾಪಕರ್ಷೌ ಲಕ್ಷ್ಯೌ ಭವತಃ । ಏವಂ ಮಾರ್ದವಾದಪಿ ವೀಣಾದ್ವಯಾಯತ್ತಮೇವೇದಮುತ್ಕರ್ಷಾಪಕರ್ಷತ್ವಂ ದರ್ಶಯಿತುಂ ಯಥಾಸಂಖ್ಯಂ ಶಂಕಾಂ ನಿರಾಕರ್ತುಂ ಮಾರ್ದವಾಯತತ್ವಾದ್ ವೇತ್ಯುಕ್ತಮ್ ।[120]

ಈ ಅರ್ಥವನ್ನು ಅವನು ಹೊರಡಿಸಲು ತನ್ನನ್ನು ಸಮರ್ಥಿಸಿಕೊಳ್ಳಲು ಅವನು ಕೊಡುವಕಾರಣ : ಹೀಗಿಲ್ಲದಿದ್ದರೆ ಭರತನು ಇವುಗಳನ್ನು ಬಿಡಿಸಿ ಹೀಗೆ ಹೇಳುತ್ತಿದ್ದನು : ಅನ್ಯಥೋತ್ಕರ್ಷಮಾಯತ(-ಅಪಕರ್ಷ-) ಮಾರ್ದವಾಭ್ಯಾಮಿತಿ ಬ್ರೂಯಾತ್ ।[120]

ಮುಂದುವರೆದು 'ತತ್‌ಪ್ರಮಾಣಂ ಶ್ರುತಿಃ' ಎಂಬ ಮಾತಿಗೆ ಪ್ರಮಾಣವೆಂದರೆ ಶ್ರುತಿಯೆಂಬ ಪ್ರಮಾಜ್ಞಾನಕ್ಕೆ ಕಾರಣವಾದ ಅವಧಿಯನ್ನು ಇಲ್ಲಿ ಪ್ರಮಾಣವೆಂದು ಹೇಳಿದೆ. ಅದು ಮಾನವಸ್ವಕಪೋಲಕಲ್ಪಿತವಾದುದಲ್ಲ, ನಿತ್ಯವಾದುದು ; ಪ್ರಮಾಣವೆಂದರೆ ರೂಢಾರ್ಥದಲ್ಲಿ ಬರುವ ಕಾಲಕಲೆ, ಕೇಳುವಿಕೆ, ನಾದಾಂಶ, ಅದರ ಆಯುಸ್ಸು (ಎಂದರೆ ಅಭಿವ್ಯಕ್ತಿಯ ಕಾಲಾವಕಾಶ), ಸ್ಥಾನ, ಇಂದ್ರಿಯ ಎಂದು ಮುಂತಾದವುಗಳಲ್ಲ, ಎಂದೂ ಅವನು ಸ್ಪಷ್ಟಪಡಿಸುತ್ತಾನೆ. ಇದು ಶ್ರುತಿಯ ಬಗೆಗೆ ಆಧುನಿಕರು ಮಾಡುವ ಇಲ್ಲದ ಸಲ್ಲದ ವಾದಗಳನ್ನೂ ಪ್ರಮಾಣವೆಂಬ ಶಬ್ದದ ಬಗೆಗೆ ಮಾಡುವ ವಿಪರೀತಾರ್ಥಗಳನ್ನೂ ಸ್ಪಷ್ಟವಾಗಿ ಒಮ್ಮೆಗೇ ನಿರಾಕರಿಸಿಬಿಡುತ್ತದೆ.

ಪ್ರಮಾಣೇತಿ ವದನ್ ನ ಕಾಲಕಲಾ ಶ್ರುತಿರ್ನಾಪಿ ನಾದಾಂಶೋ ನ ಚಾಯುರ್ನ ಸ್ಥಾನಂ ನ ಕರಣಮಿತಿ ದರ್ಶಯತಿ । ತೇನ ವಕ್ಷ್ಯಮಾಣೋಚ್ಚನೀಚವಿಭಾಗೋ ಧ್ವನಿರೇಕಾ ಶ್ರುತಿರಿತಿ ತಾತ್ಪರ್ಯಮ್ ।[120]

ಹೀಗೆ ಏಕಶ್ರುತಿಯ ಪ್ರಮಾಣವನ್ನು ಪಂಚಮದ ಅಪಕರ್ಷದಿಂದ ಹೇಳಿದಮೇಲೆ ಶ್ರುತಿಸಂಖ್ಯೆಯ ಸ್ವರೂಪವು ಹೇಗೆ ಲಕ್ಷಿಸಲ್ಪಡಬೇಕೋ ಆ ರೀತಿಯಲ್ಲಿ ನಿದರ್ಶನವನ್ನು, ಎಂದರೆ ಯಾವುದರಿಂದ ನಿಶ್ಚಿತರೂಪದಲ್ಲಿ (ವಿಷಯ ಅಥವಾ ವಸ್ತುಗಳು, ಇಲ್ಲಿ, ಶ್ರುತಿಗಳು) ಕಾಣುತ್ತವೆಯೋ (ದೃಶ್ಯಂತೇ) ಆ ಉಪಾಯವನ್ನು ಹೇಳಲು ತೊಡಗಿದ್ದಾನೆ. ಈ ಸಂದರ್ಭದಲ್ಲಿ ಶ್ರೀಮದಭಿನವಗುಪ್ತನು ಶ್ರುತಿಯ ಕಲ್ಪನೆಯ ವಿಷಯದಲ್ಲಿ ಭರತನು ಬಹುಶಃ ಉದ್ದೇಶಿಸದಿರುವ–ಅಥವಾ ಉದ್ದೇಶಪಟ್ಟಿದ್ದರೆ ಅದು ಕಾಣದಿರುವ–ಮಹತ್ತರವಾದ ಲಕ್ಷಣವನ್ನು ಮೊಟ್ಟಮೊದಲ ಬಾರಿಗೆ ಹೇಳಿದ್ದಾನೆ. ಹಿಂದಿನ ಧ್ವನಿಯಲ್ಲಿ ವೈಲಕ್ಷಣ್ಯವನ್ನು ಎಂದರೆ ಉಚ್ಚನೀಚ ಭಾವದಿಂದ ಭಿನ್ನತೆಯನ್ನು ಉತ್ಕರ್ಷಾಪಕರ್ಷಗಳಿಂದ ಪ್ರತೀತಗೊಳಿಸುವ, ಪರಮಾಣುವಿನಷ್ಟು ಅತ್ಯಲ್ಪವಾದ ನಾದಾಂತರವೇ ಶ್ರುತಿ ಎಂದು ಅವನು ಈಗಾಗಲೇ ಹೇಳಿದ್ದಾನಷ್ಟೆ. ಇದನ್ನು ನಿಖರವಾಗಿ ತಿಳಿದುಕೊಳ್ಳುವುದಾದರೂ ಹೇಗೆ ಎಂಬ ಪ್ರಶ್ನೆಗೆ ಅವನು ಉತ್ತರವನ್ನು ಕೊಡಲು ತೊಡಗಿದ್ದಾನೆ. ಜಾತ್ಯ, ಅಜಾತ್ಯಗಳಲ್ಲಿನ ವಿಶೇಷವು ಎಂದರೆ ಭಿನ್ನತೆಯು (ಉದಾಹರಣೆಗೆ—ವಿವಿಧ ಜಾತಿಯ ಮನುಷ್ಯರಲ್ಲಿನ ಭಿನ್ನತೆಯು) ಬಣ್ಣದಿಂದ ಮೊದಲ ನೋಟಕ್ಕೇ ಗೋಚರವಾಗುವಂತೆ, ಶ್ರುತಿಯನ್ನುಂಟುಮಾಡುವ ಅಂತರದಲ್ಲಿರುವ ಎರಡು ಧ್ವನಿಗಳು ರಕ್ತತೆಯಿಂದ ವಿಶೇಷವೆಂದು (ಎಂದರೆ ಬೇರೆ ಬೇರೆ

ಯಾಗಿ) ಗೋಚರವಾಗುತ್ತವೆ. ರಕ್ತ ಎನ್ನುವುದಕ್ಕೆ ಬಣ್ಣ ಎಂಬ ಮೂಲಾರ್ಥವನ್ನೇ ಇಲ್ಲಿ ಗ್ರಹಿಸಿದರೆ, ವಿವಿಧ ಬಣ್ಣಗಳಿರುವ ಈ ಅಂತರಗಳು ವಿವಿಧ ವೈಶಿಷ್ಟ್ಯಪೂರ್ಣವ್ಯಕ್ತಿತ್ವಗಳನ್ನು ಪಡೆದಿರುತ್ತವೆ, ಆದುದರಿಂದಲೇ ಸುಲಭಗೋಚರಗಳು ಎಂಬ ಅಭಿಸಂಧಿಯು ಹೊರಡುತ್ತದೆ. ಇದು ಶ್ರುತಿಜಾತಿಗಳನ್ನು ಕುರಿತು ಮೇಲೆ ಮಾಡಿರುವ ವಿವೇಚನೆಗೆ ಸಂಪೂರ್ಣವಾದ ಸಮರ್ಥನೆಯನ್ನೇ ಕೊಡುತ್ತದೆ. ಹಾಗಲ್ಲದೆ ಸ್ವರತ್ವವನ್ನುಂಟುಮಾಡುವ ರಕ್ತವೆಂಬ (ರಂಜನೆಯನ್ನು ಉಂಟುಮಾಡುವ ಎಂಬ) ಧರ್ಮ ಎಂದು ಅರ್ಥಮಾಡಿದರೆ ಸ್ವರತ್ವವು (ಪ್ರಕಟವಾಗಿಯಾಗಲೀ ಅಂತರ್ಗತವಾಗಿ ಗುಪ್ತಭಾವದಲ್ಲಿಯಾಗಲೀ) ಉಂಟಾಗಬಹುದಾದ ಸ್ಥಾನ ಎಂದು ಹೇಳಬಹುದು. ಹಾಗಿಲ್ಲದೆ 'ಜಾತ್ಯಾಜಾತ್ಯಯೋಃ ರಕ್ತಯೋಃ ಚೋತ್ಕರ್ಷಾಪಕರ್ಷವತೋಃ'ಎಂಬಲ್ಲಿ ಉತ್ಕರ್ಷ,ಅಪಕರ್ಷಗಳಲ್ಲಿ ಒಂದಕ್ಕೆ ರಕ್ತ ಧರ್ಮವಿದ್ದು ಇನ್ನೊಂದಕ್ಕೆ ಇಲ್ಲದಿದ್ದರೆ ಸಹ ಅವುಗಳಲ್ಲಿನ ವಿಶೇಷವು, ಎಂದರೆ ಭಿನ್ನತೆಯು ಗೋಚರಿಸುತ್ತದೆ ಎಂದು ಬೇಕಾದರೂ ಹೇಳಬಹುದು. ಈ ಅರ್ಥವನ್ನೇ ವಿಶಾಖಿಲಾಚಾರ್ಯನು ಶ್ರುತಿಗಳನ್ನು 'ಸಪ್ತಾಶ್ರಯತಯಾ ಸ್ವರಗತಾಃ (ಶ್ರುತಯಃ), ಅಂತರಗತಾಸ್ತ್ವನ್ಯಾ' ಎಂದು ಎರಡು ರೀತಿಯಲ್ಲಿ ವಿಭಾಗಿಸಿದ್ದಾನೆ.[115] ಹೀಗೆ ಪ್ರಥಮದರ್ಶನಕ್ಕೇ ಗೋಚರವಾದ ಈ ಭಿನ್ನತೆಯನ್ನು ಇಯತ್ತೆಯಿಂದ ನಿಷ್ಕರ್ಷಿಸಿ ಹೇಳಬೇಕಾದರೆ, ಈ ಭಿನ್ನತೆಯನ್ನು ಕಂಡುಕೊಳ್ಳುವ ಉತ್ಕಟೇಚ್ಛೆಯಿಂದ, ಏಕಾಗ್ರಚಿತ್ತದಿಂದ, ಪ್ರಯತ್ನಬಲದಿಂದ, ಹೀಗೆ ಭಿನ್ನವೆಂದು ಗೋಚರವಾಗಿರುವ ಧ್ವನಿಗಳಲ್ಲಿ ಒಂದನ್ನು ಗಮನಿಸಿ, ಇನ್ನೊಂದನ್ನು ನಂತರ ಗಮನಿಸಿ, ಪುನಃ ಮೊದಲನೆಯದನ್ನು ಗಮನಿಸಿ ಅನುಸಂಧಾನಬಲದಿಂದ ನಿಶ್ಚಿತರೂಪದಲ್ಲಿ ಇದು ಅದಕ್ಕಿಂತ (ಇಷ್ಟು) ಹೆಚ್ಚು ಎಂದು ತಿಳಿದುಕೊಳ್ಳಬೇಕು.

ಶ್ರುತಿನಿದರ್ಶನವನ್ನು ಸಂಗ್ರಹರೂಪದಲ್ಲಿ ಹೇಳುವಾಗ ಅಭಿನವಗುಪ್ತನು ಐದು ಸಾರಣೆಗಳನ್ನೇನೋ ಹೀಗೆ ಹೇಳಿದ್ದಾನೆ: ಮೊದಲನೆಯ ಸಾರಣೆಯಲ್ಲಿ ಧ್ರುವವೀಣೆಯನ್ನು (ಚಲವೀಣೆಗೆ ಹೋಲಿಸಿ) ಸರಿಯಾಗಿ ಶ್ರುತಿಮಾಡುವುದು; ಎರಡನೆಯದು ಶ್ರುತಿಯ ಇಯತ್ತೆಯನ್ನು ಸಾಧಿಸುತ್ತದೆ. ಮೂರನೆಯದು ನಾಲ್ಕು ಶ್ರುತಿಗಳನ್ನು ಬೋಧಿಸುತ್ತದೆ; ನಾಲ್ಕನೆಯದು ಆರನ್ನು, ಐದನೆಯದು ಹನ್ನೆರಡನ್ನು. ಇದು ಮೊದಲನೆಯ ಎರಡು ಸಾರಣೆಗಳಿಗೆ ನಾನು ಹೇಳಿರುವ ಕರ್ತವ್ಯಗಳಿಗೆ ಹೊಂದುವುದಿಲ್ಲ. ಆದರೂ ಸಾರಣಾ ಎಂಬುದಕ್ಕೆ ಈ ಪ್ರಯೋಗದಲ್ಲಿ ಯಾವುದಾದರೊಂದು ಸ್ವರವನ್ನು ಉಂಟುಮಾಡುವಿಕೆ ಎಂಬುದಕ್ಕಿಂತ ತಂತಿಯ ಉದ್ದ, ಬಿಗಿ ಮುಂತಾದವುಗಳ ವ್ಯತ್ಯಾಸದಿಂದ ಅನ್ಯಸ್ವರವನ್ನು ಉಂಟುಮಾಡುವಿಕೆ ಎಂಬ ಅರ್ಥವೇ ಹೆಚ್ಚು ಅನ್ವಿತವೂ ಪುಷ್ಟವೂ ಸಂದರ್ಭೋಚಿತವೂ ಆಗಿರುವುದರಿಂದಲೂ ಶ್ರುತಿಜಾತಿಗಳ ಬಗೆಗೆ ನಾನು ಭರತೋಕ್ತಿಗಳ ಆಧಾರದಮೇಲೆ ಪಡೆದಿರುವ ಅನುಮಿತಿಗಳಿಗೆ ಅಭಿನವಗುಪ್ತನಲ್ಲಿಯೇ ಅನ್ಯತ್ರ ಸ್ಪಷ್ಟಸಮ್ಮತಿಯು ದೊರೆಯುವುದರಿಂದಲೂ, ಅವುಗಳಿಗೆ ನಾನು ಹೇಳಿರುವ ಕರ್ತವ್ಯಗಳೇ ಸೂಕ್ತವಾಗಿರುವಂತೆ ತೋರುತ್ತದೆ.

ತಾನು ಪಠಿಸಿದ ಭಾರತೀಯ ಗ್ರಂಥವನ್ನು ಸಮರ್ಥಿಸಲೆಳಸುತ್ತಾ ಇನ್ನೂ ಒಂದು ಬಾರಿ ಅಭಿನವಗುಪ್ತನು ಸುಲಭವಾಗಿಯೂ ಸಹಜವಾಗಿಯೂ ಸ್ಫುರಿಸುವ ಅರ್ಥವನ್ನು ಮೀರುತ್ತಾನೆ. 'ದ್ವೇ ವೀಣೇ ತುಲ್ಯಪ್ರಮಾಣ-ತಂತ್ರ್ಯುಪವಾ(ಪಾ)ದನದಂಡಮೂರ್ಛನೇ ಸಮೇ ಕೃತ್ವಾ' ಎನ್ನುವಲ್ಲಿ ತುಲ್ಯಪ್ರಮಾಣ ಎಂಬುದು ದಂಡಕ್ಕೆ ಅನ್ವಯವಾದ ಮಾತು ಎಂದು ಸಹಜವಾಗಿ ಅರ್ಥವಾಗುವುದಷ್ಟೆ. ಕೆಲವರು (ಕೇಚಿತ್) ದಂಡದಲ್ಲಿ ಸಮಾನ ರೀತಿಯ ಉದ್ದ-ಅಗಲ (ಸುತ್ತಳತೆ)ಗಳು, ಆ ದಂಡಗಳಲ್ಲಿರುವ ತಂತಿಗಳ ಸಂಖ್ಯೆಯಲ್ಲಿ ದಪ್ಪ ಮುಂತಾದವುಗಳಲ್ಲಿ ತುಲ್ಯಪ್ರಮಾಣ, ಎಂದು ಸೂಚಿಸುತ್ತಾರೆಂದು ಅವನೇ ಹೇಳಿ ಅದನ್ನೂ ನಿರಾಕರಿಸುತ್ತಾನೆ:

**ಪ್ರಮಾಣಂ** ಆನಾಹಪರಿಣಾಹೌ, ತಂತ್ರೀಣಾಂ ತುಲ್ಯತ್ವಂ ಸಂಖ್ಯಯಾ ಸ್ಥೌಲ್ಯಾದಿನಾ ಚೇತಿ ಕೇಚಿತ್ |[120]

ಆದರೆ ಅವನಪ್ರಕಾರ ವೀಣಾದಂಡಕ್ಕೇ ಈ ನಾಲ್ಕನ್ನೂ ಅನ್ವಯಿಸಿದರೆ ಪುನರುಕ್ತಿದೋಷವು ಬರುತ್ತದೆ. ಆದುದರಿಂದ ಇವುಗಳು ವಿಶೇಷಣಗಳಾಗಿರುವುದು ವೀಣಾದಂಡಗಳಿಗಲ್ಲ, ವೀಣೆಗಳಿಗೇ, ಎಂದು ಈ ವಾಕ್ಯದ

ವಿಗ್ರಹವನ್ನು ಬಹುವ್ರೀಹಿಯಲ್ಲಿ ಹೀಗೆ ಮಾಡಬೇಕು : 'ತುಲ್ಯಪ್ರಮಾಣತಂತ್ರ್ಯುಪಪಾದನದಂಡಮೂರ್ಛನೇ ಯಯೋರ್ವೀಣಯೋಃ ಸ್ತಃ ತೇ ವೀಣೇ'

ಅತಶ್ಚತುರ್ದಂಡಶಬ್ದಃ ಪುನರುಕ್ತಃ । ತಸ್ಮಾದಯಂ ವಿಗ್ರಹಃ । ತುಲ್ಯಪ್ರಮಾಣತಂತ್ರ್ಯುಪಪಾದನದಂಡ-ಮೂರ್ಛನಾ ಯಯೋರ್ವೀಣಯೋರಿತಿ ।120

ಈ ಸಾಮ್ಯ(ತುಲ್ಯಪ್ರಮಾಣ)ವನ್ನು ಎರಡು ವೀಣೆಗಳಲ್ಲಿಯೂ ಹೇಗೆ ಸಾಧಿಸಬೇಕೆಂಬುದನ್ನೂ ಅವನೇ ತಿಳಿಸುತ್ತಾನೆ :

ಮೂರ್ಛನಾಯಾಂ ಚ ಪ್ರಮಾಣಸಂಖ್ಯೈವ ಮಂತವ್ಯಾ ದಂಡತಂತ್ರ್ಯಾದಿಸಾಮ್ಯಂ ಸ್ವರಸ್ವರೂಪಂ ನ ಭಿನತ್ತಿ ಕೇನಾಪ್ಯಂಶೇನ ತೇನ ತಥಾ ಕರ್ತವ್ಯಂ ಯೇನ ದ್ವಯೋಽಪಿ ಏಕವಿಂಶದ್ ಭಾಸೇತೇ । 120

ಇಲ್ಲಿ ಹೇಳಿರುವ ಇಪ್ಪತ್ತೊಂದು ಏನು ಎಂಬುದು ಸ್ಪಷ್ಟವಾಗಿಲ್ಲ. ಯಾವ ಅಂಶದಲ್ಲಿಯೂ ಆಯಾಯಾ ಸ್ವರಗಳ ಸ್ವರೂಪವು ವ್ಯತ್ಯಾಸವಾಗದಿರುವ ರೀತಿಯ ದಂಡ-ತಂತ್ರೀಸಾಮ್ಯಗಳು, ಎರಡು ವೀಣೆಗಳಲ್ಲಿಯೂ ಇಪ್ಪತ್ತೊಂದೂ (ಒಂದೇ ರೀತಿಯಲ್ಲಿ) ಭಾಸವಾಗುವಂತೆ, ಉಂಟಾಗಬೇಕು. ಮೂರ್ಛನಾಪರವಾಗಿ ಇಲ್ಲಿ ಅರ್ಥ ವನ್ನು ಗ್ರಹಿಸಿದರೆ ಒಂದೊಂದು ಗ್ರಾಮಕ್ಕೂ ಏಳೇಳು ಮೂರ್ಛನೆಗಳಂತೆ ಷಡ್ಜ, ಮಧ್ಯಮ ಮತ್ತು ಗಾಂಧಾರ ಗ್ರಾಮಗಳಿಂದ ಒಟ್ಟು ಇಪ್ಪತ್ತೊಂದು ಮೂರ್ಛನೆಗಳು ಎರಡರಲ್ಲಿಯೂ ಉತ್ಪಾದಿಸಲ್ಪಟ್ಟಾಗ ಆಯಾ ಪರಸ್ಪರವಾದ ಸ್ವರಗಳಲ್ಲಿ ಯಾವ ಅಂಶದಲ್ಲಿಯೂ ಭಿನ್ನತೆಯಿಲ್ಲದಿರುವ ರೀತಿಯಲ್ಲಿ ಸಾಮ್ಯವನ್ನು ಸ್ಥಾಪಿಸಬೇಕು ಎಂದು ಹೇಳ ಬೇಕಾಗುತ್ತದೆ. ಆದರೆ ಇದು ಅಸಂಗತವಾದುದು. ಏಕೆಂದರೆ ಭರತನು ಗಾಂಧಾರಗ್ರಾಮದ ಅಸ್ತಿತ್ವವನ್ನೇ ಒಪ್ಪುವುದಿಲ್ಲ ; ನಾರದನು ಗಾಂಧಾರಗ್ರಾಮವು ಸ್ವರ್ಗಪ್ರಚಲಿತವೆಂದಾದರೂ ಹೇಳುತ್ತಾನೆ ; ಭರತನು ಅದನ್ನೂ ಹೇಳುವುದಿಲ್ಲ. ಅಭಿನವಗುಪ್ತನಾದರೂ ಗಾಂಧಾರಗ್ರಾಮದ ಅಸ್ತಿತ್ವವನ್ನು ಅಂಗೀಕರಿಸುವುದಿಲ್ಲ. ಹೀಗಿರುವಾಗ ಈ ಗ್ರಾಮದ ಮೂರ್ಛನೆಗಳನ್ನು ಅವರು ವಿವಕ್ಷಿಸುವುದಾದರೂ ಹೇಗೆ ಸಾಧ್ಯ ? ಆದುದರಿಂದ ದಂಡತಂತ್ರ್ಯಾದಿ-ಸಾಮ್ಯಂ ಎಂಬುದನ್ನೂ ಸೇರಿಸಿಕೊಂಡು ಮೂರ್ಛನಾಪರವಾದ ಅರ್ಥವನ್ನು, ಎರಡು ವೀಣೆಗಳಲ್ಲಿಯೂ ಏಳೇಳು ತಂತಿಗಳಲ್ಲಿ ಸಾಮ್ಯ, ಎರಡರಲ್ಲಿಯೂ ಷಡ್ಜಗ್ರಾಮದ ಏಳು ಮೂರ್ಛನೆಗಳು, ಮಧ್ಯಮಗ್ರಾಮದ ಏಳು ಮೂರ್ಛನೆಗಳು, ಹೀಗೆ ಒಟ್ಟು ಇಪ್ಪತ್ತೊಂದು ಅಂಶಗಳಲ್ಲಿಯೂ ಸಾಮ್ಯವು ಭಾಸವಾಗಬೇಕು ಎಂದು ಹೊರಡಿಸ ಬೇಕಾಗುತ್ತದೆ. ಏಕೆಂದರೆ, ಯಾವುದೇ ಅಂಶದಲ್ಲಿಯೂ ಆಯಾ ಸ್ವರಗಳಲ್ಲಿ ಭಿನ್ನತೆ ಕಾಣಬಾರದು ಎಂಬ ನಿಯಮವು ಇಲ್ಲಿ ಮುಖ್ಯ. ಎರಡು ವೀಣೆಗಳಲ್ಲಿಯೂ ಷಡ್ಜಗ್ರಾಮವನ್ನು ಶ್ರುತಿಮಾಡಿದರೆ ಇಲ್ಲಿ ಸಾಲದು ; ಒಂದಕ್ಕಿಂತ ಇನ್ನೊಂದರ ಆಧಾರಸ್ವರವೂ, ಆದುದರಿಂದ ಇತರ ಸ್ವರಗಳೂ ಪರಸ್ಪರವಾಗಿ ಉಚ್ಚನೀಚಭಾವ ಗಳಲ್ಲಿದ್ದರೂ ಪ್ರತಿಯೊಂದೂ ಷಡ್ಜಗ್ರಾಮದಲ್ಲಿನ ಸ್ವರವ್ಯವಸ್ಥೆಯನ್ನೇ ಪಡೆದಿರಲು ಸಾಧ್ಯವಷ್ಟೆ. ಈ ಬಗೆಯ ಸಾಮ್ಯದಿಂದ ಶ್ರುತಿ ನಿದರ್ಶನಪ್ರಯೋಗಕ್ಕೆ ಏನೂ ಪ್ರಯೋಜನವಿಲ್ಲ. ಏಕೆಂದರೆ, ಆಯಾ ಸ್ವರಗಳು ಎರಡು ವೀಣೆ ಗಳಲ್ಲಿಯೂ ಒಂದೇ ಧ್ವನಿಯನ್ನು ಅನ್ಯೂನಾಧಿಕವಾಗಿ, ಎಂದರೆ ಎರಡನ್ನೂ ಒಟ್ಟಿಗೆ ನುಡಿಸಿದಾಗ ಅವುಗಳು ಒಂದೇ ಸ್ವರವಾಗಿ ಕೇಳಿಸುವಂತೆ, ಎರಡನ್ನು ಶ್ರುತಿಮಾಡಿಕೊಂಡರೆ ಮಾತ್ರ, ಚಲವೀಣೆಯಲ್ಲಿ ಸ್ವರವನ್ನು ಇಳಿಸಿ, ಹೀಗೆ ಇಳಿದ ಸ್ವರವನ್ನು ಧ್ರುವವೀಣೆಯ ಆಯಾ ಸ್ವರಕ್ಕೆ ಹೋಲಿಸಿ ಎಷ್ಟು ಶ್ರುತಿಗಳಷ್ಟು ಇಳಿದಿದೆ ಎಂದು ಕಂಡುಹಿಡಿಯ ಬಹುದು. ಒಂದೇ ಕಂಪಮಾನವುಳ್ಳ ಸ್ವರವನ್ನು ಅನ್ಯೂನಾಧಿಕವಾಗಿರುವಂತೆ ಬೇರೆ ಬೇರೆ ತಂತಿಗಳಲ್ಲಿ ಉದ್ದ, ದಪ್ಪ ಮುಂತಾದವುಗಳು ಅಲ್ಪಸ್ವಲ್ಪ ವ್ಯತ್ಯಾಸವಾಗಿದ್ದರೂ, ಬಿಗಿ, ಸಡಿಲಗಳನ್ನು ಸರಿಯಾಗಿ ಸಂಯೋಜಿಸುವುದ ರಿಂದ ಉಂಟುಮಾಡಬಹುದು. ಆದರೆ ಇದಕ್ಕೆ ಅತ್ಯಂತ ಸುಲಭವಾದ ದಾರಿಯೆಂದರೆ ಎರಡೂ ತಂತಿಗಳ ದಪ್ಪ,

ಉದ್ದಗಳಲ್ಲಿ ಸಮಾನತೆಯನ್ನುಂಟುಮಾಡುವುದು ; ಹಾಗೂ ಎರಡೂ ಗ್ರಾಮಗಳಿಂದಾದ ಹದಿನಾಲ್ಕು ಮೂರ್ಛನೆಗಳಲ್ಲಿ ಪ್ರತಿಯೊಂದು ಸ್ವರವೂ ಪೂರ್ವಾಪರ ಸ್ವರಗಳೊಡನೆ ಅದೇ ಭಾವಗಳನ್ನೂ, ಅದೇ ಕಂಪನವಹೌಲ್ಯಗಳನ್ನೂ ಪಡೆದಿರುವಂತೆ ಪರೀಕ್ಷೆಗೆ ಒಳಪಡಿಸಿ ಶ್ರುತಿಮಾಡಿದರೆ ಮೇಲೆ ಹೇಳಿದ ಸಾಮ್ಯವು ಸಿದ್ಧಿಸುತ್ತದೆ. ಇದ್ದುದರಲ್ಲಿ ಇದೇ ಹೆಚ್ಚು ಪ್ರಶಸ್ತವಾದ ಅರ್ಥ. ಆದರೂ ಇಪ್ಪತ್ತೊಂದು ಎಂಬುದಕ್ಕೆ ಇದೇ ಸರಿಯಾದ ಅರ್ಥವೆಂದು ಆತ್ಮವಿಶ್ವಾಸದಿಂದ ಹೇಳಬರುವಂತಿಲ್ಲ. ಹಾಗಿದ್ದರೂ ಈ ಅಸ್ಪಷ್ಟತೆಯಿಂದ ಶ್ರುತಿನಿದರ್ಶನದ ಪ್ರಯೋಗ, ತಂತ್ರ, ಫಲಿತಾಂಶಗಳ ತಥ್ಯತೆಗೆ ಬಾಧೆಯೇನೂ ಇಲ್ಲ. ಅಲ್ಲದೆ ಮೇಲೆ ಹೇಳಿದ ಸಾಮ್ಯವು ಎರಡೂ ವೀಣೆಗಳಲ್ಲೂ ಈ ಪ್ರಯೋಗಕ್ಕೆ ಆಧಾರಭೂತವಾದುದು ಎಂಬುದಂತೂ ಅಲ್ಪಾಲೋಚನೆಯಿಂದಲೇ ತಿಳಿಯುತ್ತದೆ.

ಅಭಿನವಗುಪ್ತನು ಮೂಲಗ್ರಂಥಕ್ಕೆ ನೇರವಾಗಿ ವಿರುದ್ಧವಾದ ಅರ್ಥವನ್ನೇ ಕಲ್ಪಿಸುವ ಸ್ವಾತಂತ್ರ್ಯವನ್ನು ವಹಿಸಿರುವುದು ಇಡೀ ಪ್ರಯೋಗದ ಸಾರಭೂತವಾದ, ಅಚ್ಚುಗೂಟವಾದ (pivot) ಪಂಚಮದ ಅಪಕರ್ಷದಲ್ಲಿ. ಇಲ್ಲಿ ಮೂಲಗ್ರಂಥವು ಅವನು ಪಠಿಸಿರುವುದೇ ' ಪಂಚಮಶ್ರುತಿರಪಕೃಷ್ಟಾ ಭವತಿ ' ಎಂದಿದೆ. ಈ ಪಾಠವು ನಾಟ್ಯಶಾಸ್ತ್ರದ ಯಾವ ಉಪಲಬ್ಧಮಾತೃಕೆಗಳಿಂದಲೂ ಮತಂಗೋದ್ಧೃತ ಪಾಠದಿಂದಲೂ ಸಮರ್ಥಿತವಾಗಿಲ್ಲ. ಹೀಗೆ ಬಹುಸಮ್ಮತವಾದ ' ಏವಂ ಶ್ರುತಿರಪಕೃಷ್ಟಾ ಭವತಿ ' ಅಥವಾ ' ಏಕಶ್ರುತಿರಪಕೃಷ್ಟಾ ಭವತಿ ' ಎಂಬುದನ್ನು ಬಿಟ್ಟು ಈ ಅಪರೂಪವಾದ ಪಾಠವನ್ನು ಅವನು ಸ್ವೀಕರಿಸಲು ಕಾರಣಗಳೇನೆಂಬುದನ್ನು ಅವನು ಹೇಳಿಲ್ಲ. ' ಪಂಚಮಶ್ರುತಿರಪಕೃಷ್ಟಾಭವತಿ ' ಎಂಬ ಮಾತಿಗಾದರೂ ಪಂಚಮದ ಶ್ರುತಿಯು ಕಡಿಮೆಯಾಗುತ್ತದೆ ಎಂದಿಷ್ಟೇ ಸಹಜವಾಗಿ ಸ್ಫುರಿಸುವ ಅರ್ಥ. ಇದಕ್ಕೆ ಅವನು ಮಾಡುವ ವ್ಯಾಖ್ಯಾನವು ಬಹಳ ಸ್ವಾರಸ್ಯವಾಗಿದೆ ; ಪಂಚಮದಲ್ಲಿ ಹೀಗೆ ಕಡಿಮೆಯಾದ ಶ್ರುತಿಯು **ಎಲ್ಲಾ ಸ್ವರಗಳಲ್ಲಿಯೂ ಕಡಿಮೆಯಾಗುತ್ತದೆ** ಎಂಬ ಶೇಷವನ್ನು ಸೇರಿಸಿಕೊಂಡು ಇದನ್ನು ಓದಬೇಕೆಂದು ಅವನು ಹೇಳುತ್ತಾನೆ :

ತದಾಹ **ಪಂಚಮಶ್ರುತಿರಪಕೃಷ್ಟಾ ಭವತಿ** ಸರ್ವಸ್ವರೇಭ್ಯ ಇತಿ ಶೇಷಃ | 110

ಈ ಮಾತಿಗೆ ಹೀಗೆ ಅನ್ವಯವನ್ನು ಮಾಡಿದರೆ ಮಾತ್ರ ಇದು ಸಾಧ್ಯ: ' ಯಸ್ಯಾಃ ಶ್ರುತೇಃ ಷಡ್ಜಗ್ರಾಮಿಕಃ ಚತುಃಶ್ರುತಿಕಪಂಚಮೋ ಽಪಕೃಷ್ಟಾ ಭವತಿ ಸೈವ ಸರ್ವಸ್ವರೇಭ್ಯೋ ಅಪಕೃಷ್ಟಾ ಭವತಿ ' | ಅಥವಾ ' ಷಡ್ಜ-ಗ್ರಾಮಿಕಸ್ಯ ಚತುಃಶ್ರುತಿಕಪಂಚಮಸ್ಯ ಯಾ ಪರಮಾ ಶ್ರುತಿರಪಕೃಷ್ಟಾ ಭವತಿ, ಸೈವ ಸರ್ವಸ್ವರೇಭ್ಯೋ ಅಪಕೃಷ್ಟಾ ಭವತಿ ' | ಆದರೆ ಹೀಗೆ ಅನ್ವಯಮಾಡಲು ಮೂಲಗ್ರಂಥದಲ್ಲಿ ಅವಕಾಶವಿಲ್ಲ. ಏಕೆಂದರೆ ಪಂಚಮದ ಅಪಕರ್ಷವನ್ನು ಅಲ್ಲಿ ಹೇಳಿರುವುದಾದರೂ ಹೀಗೆ : ಚಲವೀಣೆಯಲ್ಲಿ ಪಂಚಮದ ಶ್ರುತಿಯನ್ನು ಅಪಕರ್ಷಿಸಿ (ತನ್ಮೂಲಕ ಅದನ್ನು) ಮಧ್ಯಮಗ್ರಾಮದ ಪಂಚಮವನ್ನಾಗಿ ಮಾಡಿ ಅದೇ (ಮಧ್ಯಮಗ್ರಾಮದ) ಪಂಚಮದ ಶ್ರುತಿಯನ್ನು ಉತ್ಕರ್ಷಿಸುವುದರಿಂದ ಷಡ್ಜಗ್ರಾಮದ(ಪಂಚಮ)ವನ್ನಾಗಿ ಮಾಡಬೇಕು :

ತಯೋರನ್ಯತರಸ್ಯಾಂ ಪಂಚಮಸ್ಯಾಪಕರ್ಷೇ(? ಕರ್ಷಾತ್) ಶ್ರುತಿಂ ಮಧ್ಯಮಗ್ರಾಮಿಕೀಂ ಕೃತ್ವಾ ತಾಮೇವ ಚ ಪಂಚಮಸ್ಯ ಶ್ರುತ್ಯುತ್ಕರ್ಷವಶಾತ್ ಷಡ್ಜಗ್ರಾಮಿಕೀಂ ಕುರ್ಯಾತ್ | 101, 102

ಇಲ್ಲಿ ಇಳಿಸಿದುದನ್ನು ಮತ್ತೆ ಏರಿಸಿ ಷಡ್ಜಗ್ರಾಮಪಂಚಮವನ್ನೇ ಪುನಃ ಮಾಡಿದ ಮೇಲೆ ಪಂಚಮಶ್ರುತಿರಪ-ಕೃಷ್ಟಾಭವತಿ, ಏವಂ ಶ್ರುತಿರಪಕೃಷ್ಟಾ ಭವತಿ, ಏಕಶ್ರುತಿರಪಕೃಷ್ಟಾ ಭವತಿ ಎಂಬುದಕ್ಕೆ ಆಸ್ಪದವೆಲ್ಲಿದೆ? ಈ ವಿರೋಧಕ್ಕೆ ಸಮನ್ವಯಮಾಡಲೆಂದೇ ಮೇಲೆ ಹೇಳಿದ ಅರ್ಥವನ್ನು ಕಲ್ಪಿಸಿದ್ದಾನೆ. ಮೂಲಗ್ರಂಥದಲ್ಲಿ ಅನರ್ಥಕವಾದ ಭಾಗಕ್ಕೆ ಸಮೀಚೀನವಾದ ಅರ್ಥವನ್ನು ಹೊರಡಿಸುವುದರಲ್ಲಿ ಅವನು ತನ್ನ ಪ್ರತಿಭೆಯನ್ನು ಇಲ್ಲಿ ತೋರಿಸಿಕೊಂಡಿದ್ದರೂ ಉಪಲಬ್ಧವಾದ ಎಲ್ಲಾ ಆಕರಗಳಲ್ಲಿಯೂ ಇರುವ ' ತಾಮೇವ ಚ ಪಂಚಮಸ್ಯ ಶ್ರುತ್ಯುತ್ಕರ್ಷವಶಾತ್

ಷಡ್ಜಗ್ರಾಮಿಕೀಂ ಕುರ್ಯಾತ್ ' ಎಂಬ ವಿಷಯದಲ್ಲಿ ಮೌನವನ್ನೇ ಅವಲಂಬಿಸಿರುವ ಹಾಗಿದೆ. ' ಪಂಚಮಶ್ರುತಿರಪ-ಕೃಷ್ಟಾ ಭವತಿ ' ಎಂದು ಅಪರೂಪವಾದ ಪಾಠವನ್ನು ಅವನ ನಾಟ್ಯಶಾಸ್ತ್ರಮಾತೃಕೆಯು ಒಳಗೊಂಡಂತೆ ' ತಾಮೇವ ಚ ಪಂಚಮಸ್ಯ ಶ್ರುತ್ಯುತ್ಕರ್ಷವಶಾತ್ ಷಡ್ಜಗ್ರಾಮಿಕೀಂ ಕುರ್ಯಾತ್ ' ಎನ್ನುವಷ್ಟು ಪಾಠವನ್ನು ಒಳಗೊಂಡಿರಲಿಲ್ಲವೇನೋ ! ಈ ಪಾಠವು ಮೂಲಗ್ರಂಥಕ್ಕೆ ಹೇಳಬಹುದಾದ ಅರ್ಥರೀತಿಗಳಲ್ಲಿಯೂ ವ್ಯಾಖ್ಯಾತವಾದ ಅರ್ಥದಲ್ಲಿಯೂ ವಿರೋಧಾಭಾಸವನ್ನೇ ಉಂಟುಮಾಡುವುದರಿಂದ ಅಭಿನವಗುಪ್ತನ ಮಾತೃಕೆಯಲ್ಲಿ ಇದಿರಲಿಲ್ಲವೆಂದು ಭಾವಿಸುವುದೇ ಇಲ್ಲಿ ಸರಿಯಾಗುತ್ತದೆ. ಭಾರತೀಯ ಮೂಲಪಾಠಕ್ಕೆ ಮೇಲೆ ಹೇಳಿರುವ ಅಕ್ಷರಾರ್ಥಕ್ಕೂ ಅಭಿನವಗುಪ್ತನು ಬೀಜರೂಪದ ಇದೊಂದು ಉಕ್ತಿಯಿಂದ ಬಹು ಮುಖ್ಯವೂ ಗ್ರಾಹ್ಯವೂ ಆದ ನಾದಶಾಸ್ತ್ರ ಪ್ರಮೇಯವನ್ನು ಭರತೋಕ್ತಿಯಿಂದಲೇ ಸಿದ್ಧಪಡಿಸುವ ರೀತಿಗೂ ವ್ಯತ್ಯಾಸಗಳು ಎಷ್ಟಿವೆ ಎಂಬುದನ್ನು ಇಲ್ಲಿ ಪುನಃ ವಿಸ್ತರಿಸಬೇಕಾದುದಿಲ್ಲ.

' ತಾಮೇವ ಚ ಪಂಚಮಸ್ಯ ಶ್ರುತ್ಯುತ್ಕರ್ಷವಶಾತ್ ' ಎನ್ನುವ ಭರತೋಕ್ತಿಗೆ ಹೀಗೂ ಅರ್ಥವನ್ನು ಮಾಡಬಹುದು : ಉತ್ಕರ್ಷ ಎಂದರೆ ಚಲವೀಣೆಯ ಪಂಚಮವು ಅದೇ ಚಲವೀಣೆಯ ಇತರ ಸ್ವರಗಳಿಗೆ ಹೋಲಿಸಿದಾಗ ಉತ್ಕರ್ಷವಾದಂತೆ, ಎಂದರೆ ಹೆಚ್ಚಾಗಿರುವಂತೆ, ಮಾಡಬೇಕು. ಆಗ ಮಧ್ಯಮಗ್ರಾಮದ ಪಂಚಮಕ್ಕೆ ಇಳಿಸಿದ ಚಲವೀಣೆಯ ತಂತಿಯನ್ನೇನೂ ಬದಲಾಯಿಸುವಂತಿಲ್ಲ. ಅದು ಹೆಚ್ಚಾಗಿರುವಂತೆ ತೋರಬೇಕಾದರೆ ಉಳಿದ ಸ್ವರಗಳು ಕಡಿಮೆ(ಅಪಕರ್ಷ)ಯಾಗಬೇಕಷ್ಟೆ. ಎಷ್ಟು ಕಡಿಮೆಯಾಗಬೇಕು ? ಷಡ್ಜಗ್ರಾಮದ ಪಂಚಮಕ್ಕೇ ಮಧ್ಯಮಗ್ರಾಮದ ಪಂಚಮವನ್ನು ಏರಿಸಿದ್ದರೆ ಎಷ್ಟು ಪ್ರಮಾಣವು ಬೇಕಾಗಿತ್ತೋ ಅಷ್ಟು ಪ್ರಮಾಣದಲ್ಲಿ ಉಳಿದ ಸ್ವರಗಳಲ್ಲಿ ಪ್ರತಿಯೊಂದನ್ನೂ ಇಳಿಸಬೇಕು. ಆಗ ಚಲವೀಣೆಯಲ್ಲಿ ಷಡ್ಜಗ್ರಾಮವೇ ಪುನಃ ನೆಲೆಸುತ್ತದೆ. ಹೀಗೆ ಧ್ರುವವೀಣೆಯಲ್ಲಿಯೂ ಚಲವೀಣೆಯಲ್ಲಿಯೂ ಷಡ್ಜಗ್ರಾಮವೇ ನೆಲೆಸಿದ್ದರೂ ಎರಡು ವೀಣೆಗಳಲ್ಲಿಯೂ ಇರುವ ಪಂಚಮಗಳನ್ನು ಹೋಲಿಸಿದರೆ ಚಲವೀಣೆಯಲ್ಲಿ ಪಂಚಮವು ಕಡಿಮೆಯಾಗಿರುವುದು ಕಂಡುಬರುತ್ತದೆ ; ಅಷ್ಟೇ ಇಲ್ಲ, ಈ ಅಪಕರ್ಷದ ಫಲವಾಗಿ ಚಲವೀಣೆಯ ಪ್ರತಿಯೊಂದು ಸ್ವರವೂ ಧ್ರುವವೀಣೆಯ ಆಯಾ ಸ್ವರಕ್ಕಿಂತ ಹೀಗೆ (ಏವಂ) ಒಂದು (ಏಕ) ಶ್ರುತಿಯಷ್ಟು ಅಪಕೃಷ್ಟವಾಗಿರುತ್ತದೆ. ಈ ಅರ್ಥವನ್ನಿಟ್ಟುಕೊಂಡರೆ ' ಪಂಚಮಶ್ರು-ತಿರಪಕೃಷ್ಟಾ ಭವತಿ ', ' ಏವಂ ಶ್ರುತಿರಪಕೃಷ್ಟಾ ಭವತಿ,' ' ಏಕಶ್ರುತಿರಪಕೃಷ್ಟಾ ಭವತಿ ' ಎಂಬ ಎಲ್ಲಾ ಪಾಠಾಂತರಗಳಿಗೂ ಸಮಿಾಚೀನವೂ ಸಮಾನವೂ ಆಗಿರುವ ಅರ್ಥವು ಉಂಟಾಗುತ್ತದೆ. ಇದನ್ನು ಸಾಧಿಸಲೆಂದೇ ಭಾರತೀಯ ಮೂಲಗ್ರಂಥದ ' ಮಾರ್ದವಾದಾಯತತ್ವಾದ್ ವಾ ' ಎಂಬ ಮಾತಿನ 'ವಾ' ಎಂಬ ವಿಕಲ್ಪಕ್ಕೆ ಮಾರ್ದವದಿಂದಲೂ ಉತ್ಕರ್ಷಾಪಕರ್ಷಗಳು, ಆಯತತ್ವದಿಂದಲೂ ಉತ್ಕರ್ಷಾಪಕರ್ಷಗಳು, ವಿವಕ್ಷಿತವಾಗಿವೆ ಎಂಬ ವಿಶೇಷವಾದ ಅಭಿಸಂಧಿಯನ್ನು ಹೇಳಿದ್ದಾನೆ. ' ಸರ್ವ ಸ್ವರೇಭ್ಯ ಇತಿ ಶೇಷಃ ' ಎಂದು ಅವನು ವ್ಯಾಖ್ಯಾನ ಮಾಡದಿದ್ದರೆ ಮೂಲಗ್ರಂಥದಲ್ಲಿರುವ ಪಂಚಮ (, ಏಕ, ಏವಂ-) ಶ್ರುತಿರಪಕೃಷ್ಟಾ ಭವತಿ ' ಎನ್ನುವ ಮಾತು ಸಂಪೂರ್ಣವಾಗಿ ನಿರರ್ಥಕವಾಗುತ್ತದೆ. ಮೂಲಗ್ರಂಥದ ಪಾಠವು ಇಷ್ಟೊಂದು ಅನಿಶ್ಚಿತವಾಗಿರುವುದರಿಂದ ಇದ್ದುದರಲ್ಲಿ ಇದನ್ನೇ ಸರಿಯಾದ ಅರ್ಥವೆಂದಿಟ್ಟುಕೊಳ್ಳಬಹುದು.

ಆಚಾರ್ಯ ಅಭಿನವಗುಪ್ತನು ಇನ್ನೂ ಒಂದು ರೀತಿಯಲ್ಲಿ ಮೂಲಗ್ರಂಥದ ಅರ್ಥವನ್ನು ಅತಿಕ್ರಮಿಸಿರುವಂತೆ ಕಾಣುತ್ತದೆ. ಹೀಗೆ ಮಾಡಿರುವುದು ಶ್ರುತಿಕಲ್ಪನೆಯ ಚರಿತ್ರೆಯಲ್ಲಿ ಒಂದು ಹೊಸ ಮೈಲಿಗಲ್ಲನ್ನು ನೆಡಲು ಮತ್ತು ದಿಕ್ಸೂಚಿಯನ್ನು ಸ್ಥಾಪಿಸಲು ಕಾರಣವಾಗಿದೆ. ಭರತಮುನಿಯು ಶ್ರುತಿಯ ಪ್ರಮಾಣವನ್ನು ನಿದರ್ಶಿಸಲು ಷಡ್ಜ-ಗ್ರಾಮ ಮತ್ತು ಮಧ್ಯಮಗ್ರಾಮಗಳನ್ನು ಅವಲಂಬಿಸಿದ್ದಾನಷ್ಟೆ. ' ಷಡ್ಜಗ್ರಾಮಾಶ್ರಿತೇ ಕಾರ್ಯೇ ' ' ಪಂಚಮಸ್ಯ ಶ್ರುತಿಂ ಮಧ್ಯಮಗ್ರಾಮಿಕೀಂ ಕೃತ್ವಾ' ' ಷಡ್ಜಗ್ರಾಮಿಕೀಂ ಕುರ್ಯಾತ್ ' ಎಂಬ ಮಾತುಗಳಿಂದ ಶ್ರುತಿನಿದರ್ಶನದ

ಪ್ರಯೋಗದಲ್ಲಿ ತೊಡಗುವ ಸಾಧಕನು ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳಲ್ಲಿನ ಸ್ವರವ್ಯವಸ್ಥೆಯನ್ನು ಲಕ್ಷ್ಯ-ಪ್ರಸಿದ್ಧಿಯಿಂದ ಚೆನ್ನಾಗಿ ತಿಳಿದಿರಬೇಕೆಂಬ ನಿಯಮವು ಸ್ಪಷ್ಟವಾಗಿ ಕಾಣುತ್ತದೆ. ಷಡ್ಜಗ್ರಾಮವೆಂದೂ ಮಧ್ಯಮ-ಗ್ರಾಮವೆಂದೂ ಲೋಕಪ್ರಸಿದ್ಧವಾಗಿರುವ ಸ್ವರಸಪ್ತಕಗಳನ್ನು ತನ್ನ ಪೂರ್ವಸಂಚಿತ ಜ್ಞಾನದಿಂದ ಧ್ರುವವೀಣೆ ಮತ್ತು ಚಲವೀಣೆಗಳಲ್ಲಿ ಉಂಟುಮಾಡಿ, ಎಂದರೆ ಎರಡು ವೀಣೆಗಳಲ್ಲಿಯೂ ಮೊದಲು ಷಡ್ಜಗ್ರಾಮವನ್ನು ಶ್ರುತಿ ಮಾಡಿಕೊಂಡು, ನಂತರ ಚಲವೀಣೆಯಲ್ಲಿ ಮಧ್ಯಮಗ್ರಾಮವನ್ನು ಶ್ರುತಿಮಾಡಿಕೊಂಡು, ಎರಡರಲ್ಲಿರುವ ಪಂಚಮ ಗಳನ್ನು ಪರಸ್ಪರವಾಗಿ ಹೋಲಿಸಿ ನೋಡಿದಾಗ ಯಾವ ಅಂತರವು ಗೋಚರವಾಗುವುದೋ ಅದನ್ನೇ ಶ್ರುತಿಯ ಪ್ರಮಾಣವೆಂದು ಭರತಮುನಿಯು ಹೇಳಿದ್ದಾನೆ. ಎಂದರೆ ಗ್ರಾಮಗಳಲ್ಲಿನ ಸ್ವರವ್ಯವಸ್ಥೆಯ ಪೂರ್ವಸಂಚಿತ ಜ್ಞಾನ ದಿಂದ ಶ್ರುತಿಯ ಪ್ರಮೆಯು ಇಲ್ಲಿ ಹುಟ್ಟುತ್ತದೆ. ಆದರೆ ಅಭಿನವಗುಪ್ತನು ಇದಕ್ಕೆ ಅರ್ಥಮಾಡುವುದು ಬೇರೆ ರೀತಿಯಲ್ಲಿ. 'ಪಂಚಮಸ್ಯಾಪಕರ್ಷಾತ್ (ಅಪಕರ್ಷೇ?) ಶ್ರುತಿಂ ಮಧ್ಯಮಗ್ರಾಮಿಕೀಂ ಕೃತ್ವಾ' ಎಂದರೆ 'ಪಂಚಮದ (ಕಡೆಯ) ಶ್ರುತಿಯನ್ನು ಕಡಿಮೆಮಾಡಿ (ಹೀಗೆ ಅದನ್ನು) ಮಧ್ಯಮಗ್ರಾಮದುದನ್ನಾಗಿ ಮಾಡಿ' ಎಂಬ ಅರ್ಥವನ್ನು ಅವನು ಓದಿಕೊಂಡಿದ್ದಾನೆ. ಎಂದರೆ ಶ್ರುತಿಗೆ ತಾನು ಹಿಂದೆ ಪರಮಾಣುವಿನಂತಹ ಪ್ರಮಾಣ, ರಕ್ತಿಜನಕತ್ವ, ಉಚ್ಚನೀಚ ಭಾವದಿಂದ ಪ್ರಾಕ್ತನ ಧ್ವನಿಯಲ್ಲಿ ವೈಲಕ್ಷಣ್ಯವನ್ನುಂಟುಮಾಡುವುದು ಮುಂತಾಗಿ ಹೇಳಿದ ಲಕ್ಷಣಗಳಿಂದ ಕೂಡಿದಷ್ಟು ಕನಿಷ್ಠಾಂತರವನ್ನು ಷಡ್ಜಗ್ರಾಮ ಪಂಚಮದಿಂದ ಕಳೆದರೆ ಯಾವ ಪಂಚಮವು ಹುಟ್ಟುತ್ತದೆಯೋ ಅದು ಮಧ್ಯಮಗ್ರಾಮದ ಪಂಚಮ ಎಂಬ ಲಕ್ಷಣವನ್ನು ಅವನು ಅಸಂದಿಗ್ಧವಾಗಿ ಹೇಳಿದ್ದಾನೆ:

ಅಚಲಸಾರಣಾ ಧ್ರುವಕಸ್ಥಾನೀಯಾ ಏಕಾ ವೀಣಾಯಾಮಪರಸ್ಯಾಂ ಪಂಚಮತಂತ್ರೀ ಶ್ರುತಿಮಾತ್ರಂ ಶಿಥಿಲೀ ಕಾರ್ಯಾ। **ತದಾ** ಮಧ್ಯಮಗ್ರಾಮೋ ಜಾಯತೇ ।[110]

ಹೀಗೆ ಷಡ್ಜಗ್ರಾಮದ ಪೂರ್ವಸಂಚಿತಜ್ಞಾನವೊಂದೇ ಇಲ್ಲಿ ಸಾಕು. ಶ್ರುತಿಯ ಜ್ಞಾನವು ಮೇಲೆ ಹೇಳಿದ ಲಕ್ಷಣಗಳಿಂದ ತಿಳಿದಿದ್ದರೆ ಮಧ್ಯಮಗ್ರಾಮವೆಂಬುದನ್ನು ತಾತ್ತ್ವಿಕವಾಗಿ, ಶಾಸ್ತ್ರೀಯ ಪ್ರಮೇಯದಿಂದಲೇ ಸಿದ್ಧ ಪಡಿಸಬಹುದು. ಹೀಗೆ ಇಲ್ಲಿ ಶ್ರುತಿಯ ಜ್ಞಾನದಿಂದ ಮಧ್ಯಮಗ್ರಾಮದ ಅರಿವು; ಭರತನಲ್ಲಿಯಾದರೋ ಮಧ್ಯಮ-ಗ್ರಾಮದ ಜ್ಞಾನದಿಂದ ಶ್ರುತಿಯ ಅರಿವು. ಹೀಗೆ ಇಬ್ಬರಲ್ಲಿಯೂ ಅರ್ಥಗಳು ವಿಪರೀತವಾಗಿದೆ. ಇಬ್ಬರ ಮಧ್ಯಮ-ಗ್ರಾಮದ ಸ್ವರವ್ಯವಸ್ಥೆಯೂ ಶ್ರುತಿಯ ಪ್ರಮಾಣವೂ ಒಂದೇ ಆಗಿದ್ದಲ್ಲಿ ಈ ವಿಪರೀತಾರ್ಥಗಳಿಂದ ಶ್ರುತಿನಿದರ್ಶನಕ್ಕೆ ಬಾಧೆಯೇನೂ ಇಲ್ಲವಲ್ಲ ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ. ಭರತನಾದರೂ ಷಡ್ಜಗ್ರಾಮವನ್ನೇ ಪ್ರಕೃತಿಯೆಂದು ಹೇಳಿ ಮಧ್ಯಮಗ್ರಾಮವನ್ನು ಅದರ ಪಂಚಮವಿಕೃತಿಯಿಂದ ಪಡೆದಿದ್ದರೂ ಮಧ್ಯಮಗ್ರಾಮದ ಲಕ್ಷ್ಯಪ್ರಸಿದ್ಧ ಸ್ವರವ್ಯ ವಸ್ಥೆಯನ್ನು ಅವಲಂಬಿಸಿದ್ದರಿಂದ ಆದರ ಪ್ರತ್ಯಕ್ಷ ಜ್ಞಾನವು ಸಾಧಕನಿಗೆ ಇದ್ದಹೊರತು ಶ್ರುತಿಯ ಪ್ರಮೆಯು ಹುಟ್ಟುವುದಿಲ್ಲವಾಗಿ ಈ ನಿದರ್ಶನವು ನಿರರ್ಥಕವಾಗುತ್ತದೆ. ಎಂದರೆ ಭರತಮುನಿಯು ಸಮಕಾಲೀನ ಸಂಗೀತಶಾಸ್ತ್ರ ಜಿಜ್ಞಾಸುಗಳಿಗೆ ಮಾತ್ರ ಇದನ್ನು ಹೇಳಿದಂತಾಯಿತು. ಅಭಿನವಗುಪ್ತನೂ ಷಡ್ಜಗ್ರಾಮದ ಲಕ್ಷ್ಯಪ್ರಸಿದ್ಧ ಸ್ವರವ್ಯ ವಸ್ಥೆಯ ಜ್ಞಾನವನ್ನೇ ಅವಲಂಬಿಸಿರುವುದರಿಂದ ಅವನ ವ್ಯಾಖ್ಯಾನವೂ ನಿರರ್ಥಕವೇ ಅಲ್ಲವೇ, ಎಂದರೆ ಷಡ್ಜಗ್ರಾಮ ವನ್ನು ಕೆಲವು ಶಾಸ್ತ್ರೀಯ ಸೂಚನೆಗಳಿಂದ ಅನುಮಿತಿಯನ್ನಾಗಿ ಪಡೆಯಬಹುದು. ಅನುಮಿತಿಗಳಿಂದ ಆಧಾರಿತ, ಪ್ರತ್ಯಕ್ಷಜ್ಞಾನದ ಅಭಾವ ಎನ್ನುವಷ್ಟರಮಟ್ಟಿಗೆ ಅವನ ಶ್ರುತಿನಿದರ್ಶನದ ಮಂಡನವು ದೂಷಿತವಾದರೂ ತತ್ಕಾಲ-ಪ್ರಸಿದ್ಧಲಕ್ಷ್ಯಜ್ಞಾನದಲ್ಲಿ ಭರತನು ಎರಡು ಅಂಶಗಳನ್ನು ಅವಲಂಬಿಸಿದ್ದರೆ ಅವನು ಒಂದನ್ನೇ ಆಧರಿಸಿದ್ದಾನೆ. ಅಲ್ಲದೆ ಮಧ್ಯಮಗ್ರಾಮದ ವೈಶಿಷ್ಟ್ಯವಾದ ಈ ತ್ರಿಶ್ರುತಿಕ ಪಂಚಮದ ಸ್ಥಾನವೇನೆಂಬುದನ್ನು ಅನುಮಿತಿಯಿಂದಲಾದರೂ ಸಿದ್ಧಪಡಿಸುವುದು ಕಷ್ಟ. ಷಡ್ಜಗ್ರಾಮದಲ್ಲಿ ಸ್ವರವ್ಯವಸ್ಥೆಗೆ ಮಧ್ಯಮಭಾವ, ಪಂಚಮಭಾವಗಳೆರಡರ ಬೆಂಬಲವಿದೆ; ಅಲ್ಲಿ ಉಳಿದ ಸ್ವರಗಳ ಸ್ಥಾನವನ್ನು ಸ್ವಲ್ಪಮಟ್ಟಿಗಾದರೂ ನಿರ್ಣಯಿಸಿ ಹೇಳಲು ಯತ್ನಿಸಬಹುದು. ಷಡ್ಜಗ್ರಾಮದ

ಸ್ವರವ್ಯವಸ್ಥೆಯು ಸಾವಿರಾರು ವರ್ಷಗಳಕಾಲ ವ್ಯತ್ಯಾಸವಾಗದೆ ಉಳಿದುಕೊಂಡುಬಂದಿತು. ಆದರೆ ಮಧ್ಯಮ ಗ್ರಾಮದ ಲಕ್ಷಣವು, ಎಂದರೆ ಅದರ ಪಂಚಮದ ಸ್ಥಾನವು ಹೇಗೆ ಆಗಾಗ ವ್ಯತ್ಯಾಸವಾಯಿತೆಂಬುದನ್ನು ಮುಂದೆ ವಿವೇಚಿಸಲಾಗುವುದು.

'ಸರ್ವಸ್ವರೇಭ್ಯ ಇತಿ ಶೇಷಃ' ಎನ್ನುವಲ್ಲಿ ಸಾರಣಾಕ್ರಿಯೆಯಲ್ಲಿ ಪಂಚಮವನ್ನು ಮಾತ್ರವಲ್ಲದೆ ಉಳಿದ ಎಲ್ಲಾ ಸ್ವರಗಳಲ್ಲಿಯೂ ಒಂದೊಂದು ಶ್ರುತಿಯಷ್ಟನ್ನು ಕಡಿಮೆ ಮಾಡಬೇಕು ಎಂದು ಅಭಿನವಗುಪ್ತನು 'ಪಂಚಮ ಶ್ರುತಿರಪಕೃಷ್ಟಾ ಭವತಿ' ಎಂಬ ಭರತೋಕ್ತಿಗೆ ಮಾಡಿದ ವ್ಯಾಖ್ಯಾನಕ್ಕೆ ನಾಟ್ಯಶಾಸ್ತ್ರದಲ್ಲಿ ಅಲ್ಲದಿದ್ದರೂ ಬೃಹದ್ದೇಶಿಯಲ್ಲಿ, ಮತಂಗೋದ್ಧೃತವಾದ ಭರತೋಕ್ತಿ ಎಂದೇ ಹೇಳಬಹುದಾದಷ್ಟು ಸದೃಶವಾದ ಪಾಠದಲ್ಲಿ, ಪರೋಕ್ಷವಾದ ಒಂದು ಸಮರ್ಥನೆಯು ದೊರೆಯುತ್ತದೆ. ಶ್ರುತಿನಿದರ್ಶನವನ್ನು ಹೇಳಿದಮೇಲೆ 'ಪ್ರಸ್ತಾರೋ ಯಥಾ' ಎಂದು ಈ ಮುಂದಿನ ಪಥಕವನ್ನು ಬೃಹದ್ದೇಶಿಯಲ್ಲಿ ಕೊಟ್ಟಿದೆ.[101]

ಚಲವೀಣಾ　ಧ್ರುವವೀಣಾ

| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|
| I | | | | ಸ | | | ರಿ | | ಗ | ಗ | | ಮ | ಮ | | ಪ | | ಪ | | ಧ | ಧ | | ನಿ |
| II | | | ಸ | | | ರಿ | | ಗ | ಗ | | ಮ | ಮ | | ಪ | | ಪ | | ಧ | ಧ | | ನಿ | |
| III | | ಸ | | | ರಿ | | ಗ | ಗ | | ಮ | ಮ | | ಪ | | ಪ | | ಧ | ಧ | | ನಿ | | |
| IV | ಸ | | | ರಿ | | ಗ | ಗ | | ಮ | ಮ | | ಪ | | ಪ | | ಧ | ಧ | | ನಿ | | | |

ಶ್ರುತಿನಿದರ್ಶನ

ಪಥಕ (5) : ಮತಂಗಮತ

ಈ ಪಾಠವು ತುಂಬಾ ಭ್ರಷ್ಟವಾಗಿರುವುದರಿಂದ ಇದನ್ನು ಪ್ರಮಾಣಭೂತವೆಂದು ಸ್ವೀಕರಿಸಲಾಗದು. ಇದರ ಅರ್ಥವನ್ನು ಹೀಗೆ ಹೊರಡಿಸಬೇಕಾಗುತ್ತದೆ: I ರಲ್ಲಿ ಪ್ರಥಮಸಾರಣೆಯಾಗಿದೆ. ಇದರಲ್ಲಿ ಪ್ರತಿಯೊಂದು ಸ್ವರ ದಲ್ಲೂ ಎರಡನೆಯ ಸ್ಥಾನವು ಧ್ರುವವೀಣೆಯಲ್ಲಿರುವ ಸ್ಥಾನವೆಂದು ತಿಳಿಯಬೇಕು. ನಂತರ ಚಲವೀಣೆಯಲ್ಲಿಯೂ ಆಯಾ ಸ್ವರಕ್ಕೆ ಸಾರಣಾಪ್ರಾರಂಭದಲ್ಲಿ ಎರಡನೆಯ ಸ್ಥಾನವೂ ಸಾರಣಾಂತ್ಯದಲ್ಲಿ ಮೊದಲನೆಯ ಸ್ಥಾನವೂ ಉಂಟಾ ಗುತ್ತವೆ. ಉದಾಹರಣೆಗೆ ಮ[13] ಎಂಬುದು ಚಲವೀಣೆಯ ಪ್ರಥಮಸಾರಣೆಯಲ್ಲಿ ಮಧ್ಯಮಕ್ಕೆ ಆರಂಭದಲ್ಲಿರುವ ಸ್ಥಾನ. ಮ[12] ಎಂಬುದು ಸಾರಣಾಂತ್ಯದಲ್ಲಿ ಅದಕ್ಕೆ ಲಭಿಸುವ ಸ್ಥಾನ. ಹೀಗೆಯೇ II, III, IV ನೆಯ ಸಾರಣೆಗಳಲ್ಲೂ ಎಡದಿಂದ ಬಲಕ್ಕೆ ಓದುವಾಗ ಮೊದಲನೆಯದು ಆಯಾ ಸ್ವರವು ಆಯಾ ಸಾರಣೆಯ ಅಂತ್ಯದಲ್ಲಿ ಪಡೆಯುವ ಸ್ಥಾನವೆಂದೂ, ಎರಡನೆಯದು ಅದು ಸಾರಣಾಪೂರ್ವದಲ್ಲಿ ಎಂದರೆ ಅದರ ಹಿಂದಿನ ಸಾರಣಾಂತ್ಯದಲ್ಲಿ ಇರುವ ಸ್ಥಾನವೆಂದೂ ಸಂಜ್ಞೆ. ಆದರೂ ಗ[10] ಎಂಬುದು ಅಪಪಾಠವೆಂಬುದು ಸ್ಪಷ್ಟವಾಗಿಯೇ ಇದೆ. ಏಕೆಂದರೆ ಗ್ರಂಥ

ದಲ್ಲಿರುವ 'ತತಶ್ಚೈಕಾಂ ಶ್ರುತಿಂ ತ್ಯಕ್ತ್ವಾ ಗಾಂಧಾರೋ ದ್ವಿಶ್ರುತಿಃ ಸ್ಮೃತಃ'[121] ಎಂಬ ಮತಂಗೋಕ್ತಿಗೆ ಇದು ವಿರುದ್ಧವಾಗಿದೆ. ಇಲ್ಲಿ ತತಃ ಎಂದರೆ ಋಷಭಾತ್ ಎಂದು ಗ್ರಂಥಸಂದರ್ಭ. ಆದುದರಿಂದ ಗ $^{10}$ ಎಂಬುದು ಗ $^{9}$ ಎಂದಿರಬೇಕು. ಪ್ರಥಮಸಾರಣೆಯ ಏಕಶ್ರುತಿಯ ಅಪಕರ್ಷಣವನ್ನು ಈ ಪಥಕದಲ್ಲಿ ಷಡ್ಜ, ರಿಷಭ ಮತ್ತು ನಿಷಾದಗಳು ಪಡೆದಿಲ್ಲ. ಈ ತಪ್ಪನ್ನು ಗಮನಿಸದೆ ಲಿಪಿಕಾರನು ಸ $^{4}$ ರಿ $^{4}$ ನಿ $^{22}$ ಗಳಿಗೇ ಅಪಕರ್ಷಣವನ್ನು ಎರಡು, ಮೂರು ಮತ್ತು ನಾಲ್ಕನೆಯ ಸಾರಣೆಗಳಲ್ಲಿ ಮಾಡಿಬಿಟ್ಟಿರುವುದರಿಂದ ಗ್ರಂಥೋಕ್ತಿಯೊಡನೆ ಹಲವು ವಿರೋಧಾಭಾಸಗಳು ಹುಟ್ಟಿವೆ. ಉದಾಹರಣೆಗೆ ರಿಷಭ ಧೈವತಗಳು (ಧ್ರುವವೀಣೆಯ) ಷಡ್ಜಪಂಚಮಗಳೊಡನೆ ಏಕೀಭಾವವನ್ನು ಮೂರನೆಯ ಸಾರಣೆಯಲ್ಲಿ ಪಡೆಯಬೇಕಾದುದು ನಾಲ್ಕನೆಯ ಸಾರಣೆಯಲ್ಲಿ ಪಡೆದಿವೆ. ಷಡ್ಜ, ಮಧ್ಯಮ, ಪಂಚಮಗಳು ಧ್ರುವವೀಣೆಯ ನಿಷಾದಗಾಂಧಾರಮಧ್ಯಮಗಳಲ್ಲಿ ಅನುಕ್ರಮವಾಗಿ ಏಕೀಭಾವವನ್ನು ಪಡೆಯಬೇಕಾದುದು ಇಲ್ಲಿ ಆಗದೆ ಇನ್ನೂ ಒಂದೊಂದು ಶ್ರುತಿಯಷ್ಟು ಸಾಲದೆ ಇವೆ. ಇವುಗಳನ್ನು ಸಶಾಸ್ತ್ರೀಯವಾಗಿ ವಿವರಿಸಬೇಕಾದರೆ I, II, III, IV, ಎಂಬ ಮೇಲಿನ ಸಾರಣೆಗಳನ್ನು O, I, II, ಮತ್ತು III ಎಂದಿಟ್ಟುಕೊಂಡು I ರಲ್ಲಿ ಗ $^{10}$ ಪ $^{15}$ ಧ $^{19}$ ಗಳನ್ನು ಲಿಪಿದೋಷದಿಂದ ಅನಾವಶ್ಯಕವಾಗಿ ಬರೆಯಲ್ಪಟ್ಟವುಗಳೆಂದೂ, ಈ ಸಾಲು ಧ್ರುವವೀಣೆ ಮತ್ತು ಚಲವೀಣೆಗಳ ಸಾರಣಾಪೂರ್ವದ ಷಡ್ಜಗ್ರಾಮ ಸ್ವರವ್ಯವಸ್ಥೆಯನ್ನು ತೋರಿಸುತ್ತದೆಂದೂ, III ಅದ ಮೇಲೆ ಸ $^{22}$ ರಿ $^{3}$ ಗ $^{5}$ ಮ $^{9}$ ಪ $^{13}$ ಧ $^{16}$ ನಿ $^{18}$ ಎಂಬ ಸ್ವರಸ್ಥಾನ ವ್ಯವಸ್ಥೆಯುಳ್ಳ ನಾಲ್ಕನೆಯದೊಂದು ಲಿಪಿಕಾರನದೋಷದಿಂದ ಬಿಟ್ಟುಹೋಗಿದೆಯೆಂದೂ ಊಹಿಸಿಕೊಳ್ಳಬೇಕಾಗುತ್ತದೆ. ಇಷ್ಟೆಲ್ಲ ಮಾಡಿದರೂ ಪಂಚಮದ ಅಪಕರ್ಷವನ್ನು ಪ $^{17}$ ರಿಂದ ಪ $^{15}$ ಎಂದು ಮಾಡಿರುವುದು ಶುದ್ಧಾಂಗವಾಗಿ ತಪ್ಪು ಮತ್ತು ಅನರ್ಥಕವಾದುದು. ಏಕೆಂದರೆ ಮಧ್ಯಮಗ್ರಾಮದ ಪಂಚಮದಿಂದ ಶ್ರುತಿಯ ಅಪಕೃಷ್ಟವಾಗಿದೆಯೆಂಬ ತಪ್ಪುಭಾವನೆಗೆ ಇದು ಎಡೆಗೊಡುತ್ತದೆ. ಇದು ಶ್ರುತಿನಿದರ್ಶನಪ್ರಯೋಗದ ತತ್ತ್ವ ಮತ್ತು ಪ್ರಯೋಜನಗಳಿಗೇ ವಿರುದ್ಧವಾದುದು. ಹದಿನಾಲ್ಕು ಹದಿನೈದನೆಯ ಶತಮಾನಗಳಲ್ಲಿ ಮಧ್ಯಮಗ್ರಾಮದ ಪಂಚಮವನ್ನು ಎರಡು ಶ್ರುತಿಗಳಷ್ಟು ಇಳಿಸಲಾಗುತ್ತಿತ್ತು ಎಂಬ ವಿಷಯವನ್ನು ಮುಂದೆ ವಿವೇಚಿಸಲಾಗುವುದು. ಈ ಸಂಗತಿಯಿಂದ ಪ್ರಭಾವಿತನಾದ ಈ ಕಾಲದ ಅಥವಾ ನಂತರದ ಲಿಪಿಕಾರನೊಬ್ಬನು ಮೇಲಿನ ಪಥಕದಲ್ಲಿರುವಂತೆ ಪಂಚಮಾಪಕರ್ಷಣವನ್ನು ಪಥಕದಲ್ಲಿ ತೋರಿಸಿರಬೇಕು. ಹೀಗೆ ಮಾಡಿದುದರಿಂದ ಅಂತ್ಯಸಾರಣದಲ್ಲಿ ಪಂಚಮವು ಧ್ರುವವೀಣೆಯ ಮಧ್ಯಮದಲ್ಲಿ ವಿಲೀನವಾಗದೆ ಹನ್ನೆರಡನೆಯ ಶ್ರುತಿಯನ್ನು ಪಡೆಯುತ್ತದೆ ಎಂಬುದನ್ನು ಅವನು ಗಮನಿಸಿದಂತೆ ಕಾಣುವುದಿಲ್ಲ. ಹೀಗೆ ಅನೇಕ ರೀತಿಗಳಿಂದ ಮೇಲಿನ ಪಥಕವು ಅಗ್ರಾಹ್ಯವಾಗಿದ್ದರೂ ಒಂದು ಮುಖ್ಯ ವಿಷಯದಲ್ಲಿ ಅದು ಬಹು ಪ್ರಭಾವವನ್ನು ಬೀರುವ ಸೂಚನೆಯೊಂದನ್ನು ಒಳಗೊಂಡಿದೆ: ಅದೆಂದರೆ ಪ್ರತಿ ಸಾರಣಾಕ್ರಿಯೆಯಲ್ಲಿಯೂ ಚಲವೀಣೆಯ ಆಯಾಸ್ವರವನ್ನು ನುಡಿಯುವ ತಂತಿಯನ್ನು ಹಿಂದಿನ ಸಾರಣೆಯಲ್ಲಿರುವುದಕ್ಕಿಂದ ಒಂದು ಶ್ರುತಿಯಷ್ಟು ಇಳಿಸುವುದು. ಇದು ಲಿಪಿದೋಷವೆನ್ನಲು ಅವಕಾಶವಿಲ್ಲ. ಭರತನು ಶ್ರುತಿನಿದರ್ಶನಸಂದರ್ಭದಲ್ಲಿ ಆಡಿದ ಮಾತುಗಳಿಗೆ ಅತ್ಯಂತ ಸದೃಶವಾದವುಗಳು ಬೃಹದ್ದೇಶಿಯಲ್ಲಿವೆ. ಆದರೂ ಇವು ಭರತೋಕ್ತಿಗಳೆಂದೇ ಭಾವಿಸಲು ಕಷ್ಟವಾಗುತ್ತದೆ. ಏಕೆಂದರೆ, ಮೊದಲನೆಯದಾಗಿ ಎಲ್ಲಾ ಸಂದರ್ಭಗಳಲ್ಲಿಯೂ ಉದ್ಧೃತಿಗಳ ಆಕರಗಳನ್ನು ಒಂದೂ ಬಿಡದೆ ಹೆಸರಿಸುವ-ಕಡೆಯ ಪಕ್ಷ ಅನ್ಯೇ, ಅಪರೇ, ಕೇಚಿತ್ ಎಂದಾದರೂ ಹೇಳುವ-ಮತಂಗನು ಶ್ರುತಿನಿದರ್ಶನವನ್ನು ಯಾರಿಂದಲೂ ಉದ್ಧರಿಸಿಕೊಂಡಿರುವುದಾಗಿ ಹೇಳುವುದಿಲ್ಲ. ಈ ಭಾಗದ ಶೈಲಿಯಾದರೂ ಗ್ರಂಥದ ಉಳಿದ ಭಾಗಗಳಲ್ಲಿ ಮತಂಗನದೆಂದೇ ನಿಸ್ಸಂದೇಹವಾಗಿ ತಿಳಿಯುವ ಭಾಗಗಳ ಶೈಲಿಯನ್ನು ಸಂಪೂರ್ಣವಾಗಿ ಹೋಲುತ್ತದೆ. 2) ನಾಟ್ಯಶಾಸ್ತ್ರದ ಬರೋಡಾ ಮುದ್ರಣಕ್ಕೆಂದು ಬಳಸಲಾದ ಹೇರಳವಾದ ಮಾತೃಕೆಗಳಲ್ಲಿ ಒಂದ

121 ಮತಂಗ, ಉ. ಗ್ರಂ., ಪು. 10.

ರಲ್ಲಿಯೂ ಮತಂಗೋಕ್ತ ಶ್ರುತಿನಿದರ್ಶನದ ಕೆಲವು ಭಾಗಗಳು ದೊರೆಯುವುದಿಲ್ಲ. ಮೂರನೆಯದಾಗಿ ಶ್ರುತಿನಿದರ್ಶನದ ಸಾರಣಾಕ್ರಮದ ಪಥಕವು ನಾಟ್ಯಶಾಸ್ತ್ರದ ಒಂದು ಮಾತೃಕೆಯಲ್ಲಿಯೂ ದೊರೆಯುವುದಿಲ್ಲ. ಅಷ್ಟೇ ಅಲ್ಲದೆ ಅದು ಮೂಲಗ್ರಂಥದ ಭಾಗವಾಗಿದ್ದಿದ್ದರೆ ಅಭಿನವಗುಪ್ತನು ಅದನ್ನು ಉಲ್ಲೇಖಿಸದೆ ಬಿಡುತ್ತಿರಲಿಲ್ಲ; ಭರತಮುನಿಯಿಂದ ಶ್ರುತಿನಿದರ್ಶನವನ್ನು ಎತ್ತಿಕೊಂಡು ಹೇಳಿದ ಇತರ ಗ್ರಂಥಕರ್ತರಲ್ಲಿ ಒಬ್ಬನಾದರೂ ಅಂತಹ ಪಥಕವಿದ್ದಿದ್ದರೆ ಹೇಳದೆ ಬಿಡುತ್ತಿರಲಿಲ್ಲ. ಆದುದರಿಂದ ಈ ಪಥಕವು ನಾಟಶಾಸ್ತ್ರದ ಭಾಗವಲ್ಲವೆಂದು ಸಿದ್ಧವಾಗುತ್ತದೆ. ಭರತಮುನಿಯು ರೇಖೆ ಮೊದಲಾದವುಗಳ ಮೂಲಕ ಪ್ರಸ್ತಾರಕ್ರಮವನ್ನು ಎಲ್ಲಿಯೂ ಹೇಳಿಲ್ಲ. ಆಂಗಿರಸ, ಕಾಶ್ಯಪರೇ ಅದನ್ನು ಮೊದಲು ಹೇಳಿದುದು. ಆದುದರಿಂದ ಸಾರಣಾಕ್ರಿಯೆಗಳಿಗೆ ಭರತನು ಪಥಕವನ್ನು ಕೊಟ್ಟಿರಲಾರನೆಂಬುದು ಇಲ್ಲಿ ಚಿಂತ್ಯವಾಗಿದೆ. ಮತಂಗನು ಶ್ರುತಿನಿದರ್ಶನದಲ್ಲಿ ಹೇಳಿರುವುದರಲ್ಲಿ ಪಂಚಮಾಪಕರ್ಷಣದಿಂದ ಉಂಟಾಗುವ ಶ್ರುತಿಯ ಪ್ರಮಾಣವನ್ನೂ, ಉಳಿದ ಸಾರಣೆಗಳಿಂದ ಸಿದ್ಧವಾಗುವ ಶ್ರುತಿಗಳ ಪ್ರಮಾಣಗಳನ್ನೂ ಪ್ರತಿಯೊಂದು ಸ್ವರದಿಂದಲೂ ಕಳೆಯುಬೇಕೆಂಬುದು ಸೂಚಿತವಾಗುವುದಾದರೂ ಈ ಪಥಕದ ಬಲದಿಂದಲೇ. ಅದಿಲ್ಲದಿದ್ದರೆ ಭರತಮುನಿಯು ಹೇಳಿದ ಶ್ರುತಿನಿದರ್ಶನಕ್ಕೆ ಮೇಲೆ ಕೊಡಲಾಗಿರುವ ಅಕ್ಷರಾರ್ಥವೇ ಇಲ್ಲಿಯೂ ಅನ್ವಿತವಾಗುತ್ತದೆ. ಅದನ್ನು ಬೃಹದ್ದೇಶಿಯ ಮೂಲಗ್ರಂಥದ ಭಾಗವೆಂದೇ ಸ್ವೀಕರಿಸಿದರೆ ಉಪಲಬ್ಧಗ್ರಂಥಗಳಲ್ಲಿ ಮತಂಗಮುನಿಯೇ ಈ ಪಥಕವನ್ನು ಮೊದಲು ಹೇಳಿರುವುದು. ಹಾಗಿದ್ದರೆ ಅವನು ಮೂಲಗ್ರಂಥದ ಅರ್ಥವನ್ನು ವಿಶಾರಿ ತನ್ನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಶ್ರುತಿ ವಿಷಯಕವಾದ ಪ್ರಮೇಯಗಳನ್ನು ಅಥವಾ ತಾನು ಮೊದಲಬಾರಿಗೆ ಹೂಡಿದ ವಾದವನ್ನು ಈ ಪಥಕದ ಮೂಲಕ ಹೇಳುತ್ತಿದ್ದಾನೆ. ಅವನು ಹೀಗೆ ಭರತನ ಅರ್ಥಕ್ಕೆ ಹೊಸದನ್ನು ಸೇರಿಸಿ ವಿಸ್ತಾರ ಮಾಡಿದ್ದರೆ ಅದರಲ್ಲಿ ಆಶ್ಚರ್ಯಕರವೂ ಅಸಹಜವೂ ಆದುದು ಏನೂ ಇಲ್ಲ. ಇದನ್ನು ಅವನು ಹಲವೆಡೆ ಮಾಡಿದ್ದಾನೆ: ಭರತನು ಹೇಳದಿದ್ದ ರಾಗಮಾರ್ಗ, ಜಾತಿ, ಕಪಾಲ, ಕಂಬಲಗಳಿಗೆ ಪ್ರಾಚೀನಗೌರವಿತವಾದ ಲಕ್ಷ್ಯಸಾಮಗ್ರಿ ಮುಂತಾದವುಗಳು ಇದಕ್ಕೆ ಸಾಕ್ಷಿ. ಶ್ರುತಿಗಳ ಹುಟ್ಟು, ವಿಧಗಳು, ಶ್ರುತಿ-ಸ್ವರಗಳ ಸಂಬಂಧ, ಅವುಗಳ ಸಂಖ್ಯೆ, ಇವುಗಳೂ ಪ್ರಬಲವಾದ ಸಾಕ್ಷ್ಯಗಳೇ. ಹೀಗೆ ಮತಂಗನು ಶ್ರುತಿಯ ಅಪಕರ್ಷಣವನ್ನು ಎಲ್ಲಾ ಸ್ವರಗಳಿಗೂ ಎಲ್ಲಾ ಸಾರಣೆಗಳಲ್ಲಿಯೂ ಈ ಪಥಕದ ಮೂಲಕ ಪಠಿಸಿದ್ದಾನೆಯೇ ಎಂಬ ಸಂದೇಹವೂ ಸ್ವಲ್ಪವಿದೆ. ಏಕೆಂದರೆ ಮತಂಗನನ್ನು ಶ್ರುತಿಗಳ ವಿಷಯದಲ್ಲಿ ವಿಪುಲವಾಗಿ ಉದ್ಧರಿಸಿಕೊಳ್ಳುವ ಸಿಂಹಭೂಪಾಲ, ಕಲ್ಲಿನಾಥರು ಈ ಪಥಕವನ್ನು ಕುರಿತು ಚಕಾರವನ್ನೂ ಎತ್ತುವುದಿಲ್ಲ. ತನ್ನ ಆಕರಗಳನ್ನು ಚಾಚೂತಪ್ಪದೆ ಅತ್ಯಂತ ಪ್ರಾಮಾಣಿಕವಾಗಿ ಹೆಸರಿಸುವ ಅಭಿನವಗುಪ್ತನೂ ಈ ಸಾರಣಾ ಪಥಕವನ್ನು ಮತಂಗನದೆಂದು ಹೇಳಿಯೂ ಇಲ್ಲ; ಶ್ರುತಿನಿದರ್ಶನದ ಅವನ ವ್ಯಾಖ್ಯಾನಕ್ಕೆ ಬೇರೆ ಯಾವ ಪೂರ್ವಾಚಾರ್ಯನನ್ನೂ ಸಮರ್ಥನೆಗೆಂದು ಉದಹರಿಸಿಕೊಳ್ಳದಿರುವುದೂ ಇಲ್ಲಿ ಚಿಂತ್ಯವಾಗಿದೆ. ಬೃಹದ್ದೇಶಿಯು ಸಂಪಾದಿತವಾದುದಾದರೂ ಅತಿ ಭ್ರಷ್ಟಪಾಠಗಳನ್ನುಳ್ಳ, ಪ್ರಕ್ಷಿಪ್ತ, ಗ್ರಂಥಪಾತ ಮುಂತಾದವುಗಳಿಂದ ತುಂಬಿದ, ಜೀರ್ಣವಾಗಿ ಹೋಗಿದ್ದ, ಒಂದೇ ಒಂದು ಮಾತೃಕೆಯಿಂದ. ಉಳಿದ ಮಾತೃಕೆಗಳು ದೊರೆತು ಅವುಗಳೊಡನೆ ಮುದ್ರಿತ ಪಾಠವನ್ನು ಹೋಲಿಸಿದಾಗಲೇ ಇದರ ವಾಸ್ತವಾಂಶವು ತಿಳಿಯುವುದು. ಉಪಲಬ್ಧ ಮುದ್ರಿತ ಪಾಠವನ್ನೇ-ಗತ್ಯಂತರವಿಲ್ಲದೆ-ಅವಲಂಬಿಸಿದರೆ ಮತಂಗನೇ ಈ ಬಗೆಯ ಶ್ರುತಿ ನಿರೂಪಣೆಯನ್ನು ಮೊದಲಬಾರಿಗೆ ಮಾಡಿರುವುದು ಎಂಬುದು ಸಿದ್ಧವಾಗುತ್ತದೆ. ಹಾಗಿದ್ದರೆ ಅಭಿನವಗುಪ್ತನು ಇದನ್ನು ಕೇವಲ ಆಕರಸ್ಮೃತಿಯಿಲ್ಲದೆ ಸಮರ್ಥಿಸಿ, ವಿವರಿಸಿ ಹೇಳಿದ್ದಾನೆ ಎನ್ನಬೇಕಾಗುತ್ತದೆ. ಹೀಗೆಯೇ ಒಂದು ವೇಳೆ ಸಿದ್ಧವಾದರೂ ಶ್ರುತಿಯ ಕಲ್ಪನೆ, ಅದರ ವೈವಿಧ್ಯ, ಅದರ ವಿವಿಧ ಪ್ರಮಾಣಗಳು ಮುಂತಾದ ವಿಷಯಗಳಲ್ಲಿಯೂ, ಶ್ರುತಿಯ ಅಪಕರ್ಷಣವನ್ನು ಸರ್ವ ಸ್ವರಗಳಿಗೆ ನೇರವಾಗಿ, ಸ್ಪಷ್ಟವಾಗಿ ಹೇಳಿರುವುದರಲ್ಲಿಯೂ ಅಭಿನವಗುಪ್ತನೇ ನಿಸ್ಸಂದೇಹವಾಗಿ ಮೊದಲಿಗನು.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇಲ್ಲಿ ಒಟ್ಟಿನಲ್ಲಿ ಇದು ತಾತ್ಪರ್ಯ : ಚಲವೀಣೆಯ ಪಂಚಮದಂತೆಯೇ ಪ್ರತಿ ಸ್ವರದಲ್ಲಿಯೂ ಅಪಕರ್ಷಣವನ್ನು ಮಾಡಬೇಕು—'ಸರ್ವಸ್ವರೇಭ್ಯ ಇತಿ ಶೇಷಃ'—ಎಂಬ ಅಭಿನವಗುಪ್ತನ ಮಾತಿಗೆ ಮತಂಗನ ಮಾತಿನಿಂದಲೂ ಸಮರ್ಥನೆ ದೊರೆಯುತ್ತದೆ. ಈ ಅರ್ಥವನ್ನು ಭಾರತೀಯ ಮೂಲಗ್ರಂಥದಲ್ಲಿ ಓದಿಕೊಳ್ಳಲು ಅವಕಾಶವಿದೆ.

ಶ್ರುತಿನಿದರ್ಶನದ ವಿಷಯದಲ್ಲಿ ಮೇಲೆ ಮಾಡಿರುವ ವಿವೇಚನೆಯು ದೀರ್ಘವಾದರೂ ಶ್ರೀ ಶಾರ್ಙ್ಗದೇವನು ಶ್ರುತಿನಿದರ್ಶನವನ್ನು ಹೇಳಿರುವ ರೀತಿಯನ್ನು ಈ ಚಾರಿತ್ರಕ ಹಿನ್ನೆಲೆಯಲ್ಲಿ ಪರಿಶೀಲಿಸಿದ ಹೊರತು ಅದರ ಉಪಯೋಗವನ್ನಾಗಲೀ ಅರ್ಥವನ್ನಾಗಲೀ ಚೆನ್ನಾಗಿ ತಿಳಿಯಲಾಗುವುದಿಲ್ಲ. ಶ್ರುತಿಗಳ ವಿಷಯದಲ್ಲಿ ಅವನು ಮಾಡಿರುವ ವಿವೇಚನೆ, ಹೊರಡಿಸಿರುವ ಪ್ರಮೇಯ ಪ್ರಯೋಜನಗಳೇ ನಮ್ಮ ಸಂಗೀತಶಾಸ್ತ್ರದಲ್ಲಿ ಚಾರಿತ್ರಕವಾಗಿ ಕಡೆಯವೂ ನಿರ್ಣಾಯಕವೂ ಆಗಿವೆ. ಅವನ ನಂತರ ಶ್ರುತಿಗಳ ವಿಷಯದಲ್ಲಿ ಹೊಸದಾಗಿ ಹೇಳಿದ ಶಾಸ್ತ್ರಕಾರರು ಯಾರೂ ಇಲ್ಲ. ಅವನ ವಿವೇಚನೆಯು ಸಂಗೀತಶಾಸ್ತ್ರದ ಇತಿಹಾಸದಲ್ಲಿ ಒಂದು ಮುಖ್ಯ ಮೈಲಿಗಲ್ಲಾಗಿದೆ. ಆದುದರಿಂದ ಮುಂದೆ ಮಾಡಲಿರುವ ಚರ್ಚೆಯನ್ನು ಸುಲಭವಾಗಿ ತಿಳಿಯಲು ಅನುಕೂಲಿಸುವಂತೆ ಶಾರ್ಙ್ಗದೇವನ ಶ್ರುತಿನಿದರ್ಶನಕ್ರಮವನ್ನು ಇಲ್ಲಿ ಪುನಃ ಸಂಗ್ರಹಿಸಲಾಗುವುದು.

ನಾದವು ಒಂದೇ ಸಮವಾಗಿರುವಂತೆ ಎರಡು ವೀಣೆಗಳನ್ನು (ಶ್ರುತಿ) ಮಾಡಬೇಕು. ಅವುಗಳಲ್ಲಿ ಪ್ರತಿಯೊಂದ ರಲ್ಲೂ ಇಪ್ಪತ್ತೆರಡು ತಂತಿಗಳಿರಬೇಕು. ಅವುಗಳಲ್ಲಿ ಮೊದಲನೆಯ ತಂತಿಯು ಅತ್ಯಂತ ಕೆಳಮಟ್ಟದ ನಾದವನ್ನು ಹೊಂದಿರುವಂತೆ ಶ್ರುತಿಮಾಡಬೇಕು. ಎರಡನೆಯ ತಂತಿಯನ್ನು ಮೊದಲನೆಯದಕ್ಕಿಂತ ಸ್ವಲ್ಪ ಹೆಚ್ಚಾಗಿರುವಂತೆ ಶ್ರುತಿಮಾಡಬೇಕು ; ಇದು ಹೇಗಿರಬೇಕೆಂದರೆ ಈ ಎರಡಕ್ಕೂ ಮಧ್ಯದಲ್ಲಿ (ಬೇರೆ) ಅಂತರವೇ ಇರಬಾರದು, ಎಂದರೆ ಬೇರೆ ಧ್ವನಿಯನ್ನು ಗ್ರಹಿಸಲಾಗದಷ್ಟು ಸಮೀಪದಲ್ಲಿ ಈ ಎರಡು ತಂತಿಗಳ ನಾದಗಳೂ ಇರಬೇಕು. ಉಳಿದ ತಂತಿ ಗಳಲ್ಲಿರುವ ಸ್ವರಗಳು ಹೀಗೆಯೇ ಹಿಂದು ಹಿಂದಿನವುಗಳಿಂದ (ಅತ್ಯಲ್ಪಪ್ರಮಾಣದಲ್ಲಿ) ತೀವ್ರವಾಗಿರಬೇಕು. ಈ ಅಂತರದಲ್ಲಿ ಹುಟ್ಟುವ ನಾದಕ್ಕೇ ಶ್ರುತಿಯೆಂದು ಹೆಸರು. ಎರಡು ವೀಣೆಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತೆ ರಡು ತಂತಿಗಳು ಪರಸ್ಪರವಾಗಿ ಸಮವಾದ ನಾದವನ್ನು ಕೊಡುವಂತೆ ಇದೇ ರೀತಿಯಲ್ಲಿ ಶ್ರುತಿಮಾಡಬೇಕು. (ನಂತರ) ಇವೆರಡು ವೀಣೆಗಳಲ್ಲಿಯೂ ನಾಲ್ಕು ಶ್ರುತಿಗಳನ್ನುಳ್ಳ ಷಡ್ಜವನ್ನು ನಾಲ್ಕನೆಯ ತಂತಿಯಲ್ಲಿಯೂ ಮೂರು ಶ್ರುತಿಗಳ ನ್ನುಳ್ಳ ರಿಷಭವನ್ನು ಷಡ್ಜದಿಂದ ಮೂರನೆಯ ತಂತಿಯಲ್ಲಿಯೂ, ಎರಡು ಶ್ರುತಿಗಳ ಗಾಂಧಾರವನ್ನು ರಿಷಭದಿಂದ ಎರಡನೆಯ ತಂತಿಯಲ್ಲಿಯೂ, ನಾಲ್ಕು ಶ್ರುತಿಗಳ ಮಧ್ಯಮವನ್ನು ಗಾಂಧಾರದಿಂದ ನಾಲ್ಕನೆಯ ತಂತಿಯಲ್ಲಿಯೂ, ಪಂಚಮವನ್ನು ಮಧ್ಯಮದಿಂದ ನಾಲ್ಕನೆಯ ತಂತಿಯಲ್ಲಿಯೂ, ಧೈವತವನ್ನು ಪಂಚಮದಿಂದ ಮೂರನೆಯ ತಂತಿ ಯಲ್ಲಿಯೂ, ನಿಷಾದವನ್ನು ಧೈವತದಿಂದ ಎರಡನೆಯ ತಂತಿಯಲ್ಲಿಯೂ ಸ್ಥಾಪಿಸಬೇಕು. ಎಂದರೆ ನಾಲ್ಕು, ಏಳು, ಒಂಬತ್ತು, ಹದಿಮೂರು, ಹದಿನೇಳು, ಇಪ್ಪತ್ತು, ಮತ್ತು ಇಪ್ಪತ್ತೆರಡು, ಈ ತಂತಿಗಳು ನುಡಿಯುವ ಸ್ವರಗಳನ್ನು ಕ್ರಮವಾಗಿ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದಗಳೆಂದು ತಿಳಿಯಬೇಕು.

ಇವುಗಳಲ್ಲಿ ಒಂದನ್ನು ಧ್ರುವವೀಣೆಯೆಂದು ಭಾವಿಸಿಕೊಳ್ಳಬೇಕು. ಇನ್ನೊಂದನ್ನು ಚಲವೀಣೆಯೆಂದು ತಿಳಿಯ ಬೇಕು. ಇದರಲ್ಲಿ ಏಳು ಸ್ವರಗಳೂ ಮೇಲೆ ಹೇಳಿದ ಸ್ಥಾನಗಳಿಗಿಂತ ಆಯಾ ಹಿಂದಿನ ತಂತಿಗಳಲ್ಲಿ ಉಪಸ್ಥಿತವಾಗು ವಂತೆ ಈಗ ಶ್ರುತಿಯನ್ನು ಇಳಿಸಬೇಕು. ಎಂದರೆ ಸ$^{3}$ ರಿ$^{6}$ ಗ$^{8}$ ಮ$^{12}$ ಪ$^{16}$ ಧ$^{19}$ ನಿ$^{21}$ ಎಂಬ ಸ್ಥಾನಗಳ ನಾದವನ್ನು ನುಡಿಯಬೇಕು. ಇವನ್ನು ಧ್ರುವವೀಣೆಯಲ್ಲಿರುವ ಆಯಾ ಸ್ವರಗಳೊಡನೆ ಹೋಲಿಸಿದರೆ ಪ್ರತಿಯೊಂದು ಸ್ವರವೂ ಒಂದೊಂದು ಶ್ರುತಿಯಷ್ಟು ಕಡಿಮೆಯಾಗಿರುವುದು ಗೊತ್ತಾಗುತ್ತದೆ. ಹೀಗೆಯೇ ಉಳಿದ ಸಾರಣೆಗಳನ್ನು ಮಾಡ ಬೇಕು. ಹೀಗೆ (ಎರಡನೆಯ ಸಾರಣೆಯಲ್ಲಿ ಚಲವೀಣೆಯಲ್ಲಿ ಈಗಾಗಲೇ ಒಂದೊಂದು ಶ್ರುತಿಯನ್ನು ಕಳೆದುಕೊಂಡಿ ರುವ ಪ್ರತಿಯೊಂದು ಸ್ವರವೂ ಇನ್ನೊಂದೊಂದು ಶ್ರುತಿಯನ್ನು ಕಳೆದುಕೊಂಡು, ಎಂದರೆ ಈಗಿದ್ದ ತಂತಿಯ ಹಿಂದಿನ

ದರ ನಾದಕ್ಕೆ ಶ್ರುತಿಮಾಡಲ್ಪಟ್ಟು ಸ$^{2}$ ರಿ$^{5}$ ಗ$^{7}$ ಮ$^{11}$ ಪ$^{15}$ ಧ$^{18}$ ನಿ$^{20}$ ಎಂಬ ಸ್ಥಾನಗಳಲ್ಲಿರುವುದರಿಂದ)ಎರಡು ಶ್ರುತಿಗಳು ಕಳೆದುಹೋಗಿ ಚಲವೀಣೆಯಲ್ಲಿರುವ ಗಾಂಧಾರ ನಿಷಾದಗಳು ಧ್ರುವವೀಣೆಯಲ್ಲಿರುವ ರಿಷಭ ಧೈವತಗಳಲ್ಲಿ ಕ್ರಮವಾಗಿ ಪ್ರವೇಶಿಸುತ್ತವೆ, ಎಂದರೆ ಏಕೀಭಾವವನ್ನು ಹೊಂದುತ್ತವೆ. ಮೂರನೆಯ ಸಾರಣೆಯಲ್ಲಿ (ಇದೇ ರೀತಿಯಲ್ಲಿ ಪ್ರತಿಯೊಂದು ಸ್ವರವೂ ಎರಡನೆಯ ಸಾರಣೆಯ ಕೊನೆಯಲ್ಲಿದ್ದ ತಂತಿಯಿಂದ ಅದರ ಹಿಂದಿನ ತಂತಿಯನಾದಕ್ಕೆ ಸಮನಾಗಿ ಶ್ರುತಿಮಾಡಲ್ಪಡುವುದರಿಂದ ಪ್ರತಿಯೊಂದೂ ಈಗ ಒಟ್ಟು ಮೂರು ಮೂರು ಶ್ರುತಿಗಳನ್ನು ಕಳೆದುಕೊಂಡು ಸ$^{1}$ ರಿ$^{4}$ ಗ$^{6}$ ಮ$^{10}$ ಪ$^{14}$ ಧ$^{17}$ ನಿ$^{19}$ ಎಂಬ ಸ್ಥಾನಗಳಲ್ಲಿರುವುದರಿಂದ ಚಲವೀಣೆಯ) ರಿಷಭಧೈವತಗಳು (ಕ್ರಮವಾಗಿ ಧ್ರುವವೀಣೆಯ) ಷಡ್ಜಪಂಚಮಗಳನ್ನು ಪ್ರವೇಶಿಸಿ ಏಕೀಭಾವವನ್ನು ಪಡೆಯುತ್ತವೆ, ಎಂದರೆ ಒಂದೇ ನಾದವನ್ನು ಪಡೆಯುತ್ತವೆ. ನಾಲ್ಕನೆಯ ಸಾರಣೆಯಲ್ಲಿ (ಇದೇ ರೀತಿಯಲ್ಲಿ ಮತ್ತೊಮ್ಮೆ ಒಂದೊಂದು ಶ್ರುತಿಯನ್ನು, ಎಂದರೆ ಒಟ್ಟು ನಾಲ್ಕು ಶ್ರುತಿಗಳನ್ನು ಕಳೆದುಕೊಂಡು, ಎಂದರೆ ಮೂರನೆಯ ಸಾರಣೆಯ ಕೊನೆಯಲ್ಲಿದ್ದ ತಂತಿಗಿಂತ ಅದರ ಹಿಂದಿನ ತಂತಿಯ ನಾದಕ್ಕೆ ಸಮವಾಗಿ ಶ್ರುತಿ ಮಾಡಲ್ಪಟ್ಟು ಸ$^{22}$ ರಿ$^{3}$ ಗ$^{5}$ ಮ$^{9}$ ಪ$^{13}$ ಧ$^{16}$ ನಿ$^{18}$ ಎಂಬ ಸ್ಥಾನಗಳಲ್ಲಿರುವುದರಿಂದ ಚಲವೀಣೆಯ) ಷಡ್ಜ ಮಧ್ಯಮ ಪಂಚಮಗಳು (ಕ್ರಮವಾಗಿ ಧ್ರುವವೀಣೆಯ) ನಿಷಾದ, ಗಾಂಧಾರ, ಮಧ್ಯಮಗಳಲ್ಲಿ ಪ್ರವೇಶಿಸಿ ಏಕೀಭಾವವನ್ನು ಪಡೆಯುತ್ತವೆ. ಹೀಗೆ ನಾಲ್ಕು ಸಾರಣೆಗಳಿಂದಲೂ ಇಪ್ಪತ್ತೆರಡು ಶ್ರುತಿಗಳು (ಚಲವೀಣೆಯಲ್ಲಿ ವಿವಿಧ ಸಾರಣೆಗಳಿಂದಾದ ಸ್ವರಗಳನ್ನು) ಧ್ರುವವೀಣೆಯ (ಆಯಾ ಸ್ವರಗಳ)ಲ್ಲಿ ಲೀನವಾಗುವುದರಿಂದ ಇಷ್ಟಿಷ್ಟೆಂದು ಸ್ಪಷ್ಟವಾಗಿ ತಿಳಿಯುತ್ತದೆ. (ಚಲವೀಣೆಯಲ್ಲಿ) ಇದರ ಮುಂದಕ್ಕೆ (ಐದು, ಆರು ಮುಂತಾಗಿ ಶ್ರುತಿಗಳ) ಅಪಕರ್ಷಣವನ್ನು ರಕ್ತಿಹಾನಿಯಾಗುವುದರಿಂದ ಮಾಡಲಾಗದು.

ಈ ಪ್ರಯೋಗವನ್ನು ವೀಣೆಯಲ್ಲೇ ಭರತಮತಂಗರೂ ಶಾರ್ಙ್ಗದೇವನೂ ಏಕೆ ಹೇಳಿದ್ದಾರೆ ಎಂಬ ಪ್ರಶ್ನೆಗೆ ಉತ್ತರವನ್ನು ಇಬ್ಬರು ವ್ಯಾಖ್ಯಾನಕಾರರೂ ಹೇಳುತ್ತಾರೆ. ಸಿಂಹಭೂಪಾಲನು, ವೀಣೆಯ ಮೂಲಕವಲ್ಲದಿದ್ದರೆ ಶ್ರುತಿಗಳನ್ನು ತಿಳಿಯುವುದು ಕಷ್ಟ; ಏಕೆಂದರೆ ಕಂಠದಲ್ಲಿ ಇವುಗಳನ್ನು ತೋರಿಸಿಕೊಡಲು ಆಗದಷ್ಟು ಇವು ಸೂಕ್ಷ್ಮ ನಾದಾಂತರಗಳು, ಎನ್ನುತ್ತಾನೆ. ಇದನ್ನು ಸಮರ್ಥಿಸಿಕೊಳ್ಳಲು ಅವನು ಪಾರ್ಶ್ವದೇವನನ್ನು ಉದ್ಧರಿಸುತ್ತಾನೆ:

ತೇ ತು ದ್ವಾವಿಂಶತಿರ್ನಾದಾ ನ ಕಂಠೇನ ಪರಿಸ್ಫುಟಾಃ |
ಶಕ್ಯಾ ದರ್ಶಯಿತುಂ ತಸ್ಮಾದ್ವೀಣಾಯಾಂ ತನ್ನಿದರ್ಶನಮ್ | [122]

(ಸಿಂಹಭೂಪಾಲೀಯ ರತ್ನಾಕರವ್ಯಾಖ್ಯೆಯು ಪಾರ್ಶ್ವದೇವನ ಸಂಗೀತಸಮಯಸಾರದ ಪಾಠಶೋಧನಕ್ಕೆ ಬಹಳ ಸಹಕಾರಿಯಾದ ಗ್ರಂಥ; ಇದಲ್ಲದೆ ಬೇರೆ ಸಂಗೀತಶಾಸ್ತ್ರ ಗ್ರಂಥಗಳು ಸಂಗೀತಸಮಯಸಾರವನ್ನು ಉದ್ಧರಿಸಿಕೊಳ್ಳುವುದು ಬಹಳ ಅಪರೂಪ. ಶ್ರುತಿಗಳ ವಿಷಯದಲ್ಲಿ ಸಿಂಹಭೂಪಾಲನು ಸಂಗೀತಸಮಯಸಾರದಿಂದ ಉದ್ಧರಿಸುವ ಭಾಗಗಳು ಅದರ ಮುದ್ರಿತ ಹಾಗೂ ಹಸ್ತಪ್ರತಿಗಳ ಮಾತೃಕೆಗಳಲ್ಲಿ ಕಂಡುಬರುವುದಿಲ್ಲ.) ಕಲ್ಲಿನಾಥನೂ ಇದೇ ಅಭಿಪ್ರಾಯವನ್ನು ಹೊಂದಿದ್ದಾನೆ. 'ತತ್ರ ನಾದೋಪಯೋಗಿತ್ವಾನ್ಮಾನುಷಂ ದೇಹಮುಚ್ಯತೇ' ಎಂಬ ಪ್ರತಿಜ್ಞಾವಾಕ್ಯಕ್ಕೆ ಅನುಸಾರವಾಗಿ ಅನಾಹತನಾದ, ಆಹತನಾದ ಅದರ ವಿಭಾಗಗಳಾದ ಶ್ರುತಿ, ಸ್ವರ, ಸ್ಥಾನ ಇವುಗಳು— ಮನುಷ್ಯಶರೀರದಲ್ಲಿ ಎಲ್ಲೆಲ್ಲಿ ಹುಟ್ಟುತ್ತವೆ ಎಂಬುದನ್ನು ಹೇಳತೊಡಗಿರುವ ಶಾರ್ಙ್ಗದೇವನು, ಹೃದಯದ ಮೇಲುಗಡೆ ಇರುವ ಇಪ್ಪತ್ತೆರಡು ನಾಡಿಗಳಲ್ಲಿ ಪ್ರಾಣವಾಯುವು ತುಂಬಿಕೊಂಡಾಗ ಇಪ್ಪತ್ತೆರಡು ಶ್ರುತಿಗಳು ಹುಟ್ಟುತ್ತವೆಂದು ಯೋಗಶಾಸ್ತ್ರರೀತ್ಯಾ ವರ್ಣಿಸಿದ್ದಾನಷ್ಟೆ. ಆದರೆ ಇದು ಕೇವಲ ಯೋಗಿಗಳಿಗೆ ಮಾತ್ರ ಧ್ಯಾನಗಮ್ಯವಾದುದು; ಇತರರಿಗೆ ಶ್ರುತಿಯ ಪ್ರಮೆಯು ಪ್ರತ್ಯಕ್ಷದಿಂದ ಆಗಬೇಕಾದರೆ, ಈ ಪರೋಕ್ಷಜ್ಞಾನವು ಸಾಲದು; ಈ ನಾಡಿಗಳ

122 ಸಿಂಹಭೂಪಾಲ, ಉ. ಗ್ರಂ., ಪು. 74.

ಲ್ಲಿಯೇ ಪ್ರಾಣವಾಯುವು ತುಂಬಿಕೊಂಡಿದುದರಿಂದ ಶ್ರುತಿಗಳು ಗೋಚರಿಸುತ್ತವೆಂಬುದನ್ನು ಎಲ್ಲರಿಗೂ ಗೊತ್ತಾಗುವಹಾಗೆ ಪ್ರಯೋಗಮಾಡಿ ತೋರಿಸಲು ಸಾಧ್ಯವಿಲ್ಲ. ಆದುದರಿಂದ ಇಪ್ಪತ್ತೆರಡು ಶ್ರುತಿಗಳ ವಿಷಯದಲ್ಲಿಯೇ ಸಂದೇಹವು ಮೂಡಿಬಂದೀತು. ಇದರ ನಿರಸನಕ್ಕೆಂದೇ ಎಲ್ಲರಿಗೂ ಪ್ರತ್ಯಕ್ಷವಾಗಿ ಪ್ರಯೋಗದಿಂದ ತಿಳಿಯುವಂತೆ ಮಾಡಲು ಎರಡು ವೀಣೆಗಳ ನಿದರ್ಶನವನ್ನು ಹೇಳಿದೆ :

ಶರೀರೇ ಪ್ರತಿಸ್ಥಾನಮುಕ್ತಸಂಖ್ಯಾಕನಾಡೀಸನ್ನಿವೇಶಸ್ಯ ತತ್ರ ಶ್ರುತ್ಯುತ್ಪಾದಸ್ಯ ಚ ಪರೋಕ್ಷತ್ವಾತ್ತ್ರದ್ಸದ್ಭಾವೇ ಸಂದೇಹಃ ಸ್ಯಾದಿತಿ ತನ್ನಿರಾಸಾರ್ಥಂ ಪ್ರತ್ಯಕ್ಷತಃ ಸಂವಾದಯಿತುಂ ಪ್ರತಿಜ್ಞಾಯ ನಿರ್ದಿಶತಿ—**ವ್ಯಕ್ತಯ** ಇತ್ಯಾದಿನಾ | 123

ಶ್ರುತಿಗಳು ಯೋಗಿಮಾತ್ರಗೋಚರಗಳೆಂದೂ ಇತರರಿಗೆ ದುರವಬೋಧಗಳೆಂದೂ ನಾನ್ಯದೇವನು ಹೇಳುವುದನ್ನು ಇಲ್ಲಿ ಸ್ಮರಿಸಬಹುದು.[80, 84] ಶ್ರುತಿಗಳು ಕಂಠದಲ್ಲಿ ಗೋಚರವಾಗಲಾರವೆಂದು ಅವನೂ ಹೇಳುತ್ತಾನೆ :

ಕಂಠೇ ಸತ್ಯಪಿ ನ ಹ್ಯೇತಾ ವ್ಯಕ್ತಿಮಾಯಂತಿ ಕರ್ಹಿಚಿತ್ | 124

ಎರಡು ವೀಣೆಗಳಲ್ಲಿ ಆಯಾ ಸ್ವರಗಳನ್ನು ನುಡಿಯುವ ಪರಸ್ಪರ ತಂತಿಗಳಲ್ಲಿ ನಾದಸಾಮ್ಯವಿರಬೇಕೆಂದು ಶಾರ್ಙ್ಗದೇವನೂ ಹೇಳಿದ್ದಾನಷ್ಟೆ; ಇದನ್ನು ಕಲ್ಲಿನಾಥನು ಹೀಗೆ ವಿವರಿಸುತ್ತಾನೆ :

ಸದೃಶೌ ಸದೃಶಾಕಾರೇ | **ಯಥಾ ನಾದಃ ಸಮೋ ಭವೇದಿತಿ** | ಯಥಾ ಸದೃಶಾಕಾರಯೋಃ ಕೃತಯೋರ್ನಾದಃ ಸಮೋ ಭವೇತ್ತಥಾ ಸದೃಶೌ ಕಾರ್ಯೇ। ನಾದಸಾಮ್ಯೇ ಲಾಘವಾದಿ ವಿಶಿಷ್ಟಾಕಾರಸಾಮ್ಯಂ ನಿಮಿತ್ತಮಿತ್ಯರ್ಥಃ | 123

ಸಿಂಹಭೂಪಾಲನು ಇದನ್ನು ವಿಸ್ತರಿಸುತ್ತಾ ಅವುಗಳು ಆಕಾರದಲ್ಲಿ ಸಮವಾಗಿದ್ದರೆ ಸಾಲದು, ಎರಡರ ನಾದವೂ ಸಮಾನವಾಗಿರಬೇಕು—'ಆಕಾರಸಾಮ್ಯಂ ನಾತ್ರೋಪಯುಜ್ಯತ ಇತ್ಯಾಹ ಯಥಾ ನಾದಃ ಸಮಾನ ಏವ ಭವತೀತಿ 122—ಎಂದು ಹೇಳಿ, ಎರಡರಲ್ಲಿಯ ಆಯಾ ತಂತಿಗಳನ್ನು ಮಿಡಿದಾಗ ಒಂದೇ ವೀಣೆಯಲ್ಲಿ ಸ್ವರವು ಉಂಟಾಗುತ್ತಿದೆಯೆಂದು ಭಾಸವಾಗುವ ರೀತಿಯಲ್ಲಿ ಎರಡರ ನಾದವನ್ನು ಸಮವಾಗಿ ಶ್ರುತಿಮಾಡಬೇಕೆಂದು ಪಾರ್ಶ್ವದೇವೋಕ್ತಿಯನ್ನು ಉದ್ಧರಿಸುತ್ತಾನೆ :

ದ್ವೇ ವೀಣೇ ತುಲಿತೇ ಕಾರ್ಯೇ ಸಮಸ್ತ್ವಾವಯವೈಸ್ತಥಾ |
ಏಕವೀಣೇವ ಭಾಸೇತೇ ಯಥಾ ದ್ವೇ ಅಪಿ ಶೃಣ್ವತಾಮ್ || 122

ಶ್ರೀ ಶಾರ್ಙ್ಗದೇವನು ಶ್ರುತಿನಿದರ್ಶನಪ್ರಯೋಗಕ್ಕೆ ಬಳಸಿರುವ ತಂತ್ರವನ್ನೂ ಭರತ, ಅಭಿನವಗುಪ್ತರು ಹೇಳುವುದನ್ನೂ ಇಲ್ಲಿ ಹೋಲಿಸಬೇಕು. ಪೂರ್ವಾಚಾರ್ಯರಂತೆ ತಂತಿಯ ಶಿಥಿಲೀಕರಣದಿಂದ (ಸಡಿಲಗೊಳಿಸುವುದರಿಂದ) ಉಂಟಾದ ಶ್ರುತಿಯ ಅಪಕರ್ಷಣವನ್ನೇ ಶಾರ್ಙ್ಗದೇವನು ಶ್ರುತಿನಿದರ್ಶನ ಸಾಧನವನ್ನಾಗಿ ಬಳಸಿದ್ದಾನೆ. ಆದರೆ ಈ ಸಾಮ್ಯವು ಇಷ್ಟಕ್ಕೇ ಮುಗಿಯುತ್ತದೆ. ಉಳಿದೆಲ್ಲ ಪ್ರಧಾನಾಂಶಗಳಲ್ಲಿಯೂ ಅವನು ಭಿನ್ನತಂತ್ರಗಳನ್ನು ಹೇಳಿ ಪ್ರಮೇಯಗಳಲ್ಲಿ ಅಲ್ಲಲ್ಲಿ ಭಿನ್ನತೆಯನ್ನು ಸೂಚಿಸಿದ್ದಾನೆ.

ಹೀಗೆ ಮೊದಲನೆಯದಾಗಿ, ಭರತ, ಮತಂಗ, ಅಭಿನವಗುಪ್ತರು ಏಳೇಳು ತಂತಿಗಳಿರುವ ಎರಡು ವೀಣೆಗಳನ್ನು ಉಪಯೋಗಿಸುತ್ತಾರೆ. ಶಾರ್ಙ್ಗದೇವನು ಇಪ್ಪತ್ತೆರಡು ತಂತಿಗಳು ಪ್ರತಿಯೊಂದರಲ್ಲೂ ಇರುವ ಎರಡು ವೀಣೆಗಳನ್ನು ಉಪಯೋಗಿಸುತ್ತಾನೆ. ಇದೇ ಹೆಚ್ಚು ಸುಲಭವೂ ನಿಷ್ಕೃಷ್ಟವೂ ಆದ ಮಾರ್ಗ. ಏಕೆಂದರೆ ಭರತನಲ್ಲಿ ಎರಡು, ಮೂರು, ನಾಲ್ಕು ಶ್ರುತಿಗಳ ಮೊತ್ತವನ್ನು ಸಮುಚ್ಚಯದಲ್ಲಿ ಮಾತ್ರ ಗ್ರಹಿಸಲು ಸಾಧ್ಯ. ಅವುಗಳನ್ನು ಉಂಟು

123 ಕಲ್ಲಿನಾಥ, ಉ. ಗ್ರಂ., ಪು. 69. 124 ನಾನ್ಯದೇವ, ಉ. ಗ್ರಂ., I, 3, 77.

ಮಾಡುವ ಬಿಡಿಬಿಡಿಯಾದ ಶ್ರುತಿಗಳ ಪ್ರಮಾಣಗಳನ್ನು ಅವನಿಂದ ತಿಳಿಯುವಂತಿಲ್ಲ. ಅಭಿನವಗುಪ್ತನು ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಇವುಗಳ ಪ್ರಮಾಣಗಳನ್ನೂ ಬಿಡಿಸಿ ಹೇಳಿದ್ದಾನೆ. ಆದರೆ ಆಯಾ ಸಾರಣೆಯಾದ ನಂತರ ಚಲವೀಣೆಯ ಆಯಾ ಸ್ವರವನ್ನುಂಟುಮಾಡುವ ತಂತಿಯಲ್ಲಿನ ನಾದವು ಹೋಗಿಬಿಡುತ್ತದೆ. ಆಯಾ ಸಾರಣಾಕಾಲದಲ್ಲಿ ಮಾತ್ರ ಅದನ್ನು ಧ್ರುವವೀಣೆಯಲ್ಲಿರುವುದರೊಡನೆ ಹೋಲಿಸುವುದರಿಂದ ಅದರ ಪ್ರಮಾಣವು ಗೋಚರವಾಗುವುದೇ ಹೊರತು, ಆಯಾ ಸಾರಣೆಯ ನಂತರ ಆಯಾ ತಂತಿಯು ಬೇರೆ ನಾದವನ್ನು ವಹಿಸುತ್ತದೆ. ಉದಾಹರಣೆಗೆ, ಮೂರನೆಯ ಸಾರಣೆಯಿಂದ ಚಲವೀಣೆಯ ಪ್ರತಿಯೊಂದು ಸ್ವರವೂ ಧ್ರುವವೀಣೆಯ ಆಯಾ ಸ್ವರಕ್ಕಿಂತ ಮೂರು ಶ್ರುತಿಗಳಷ್ಟು ವ್ಯತ್ಯಾಸವಾಗಿರುವುದನ್ನೂ ರಿಷಭದ ಮೊದಲನೆಯ ಶ್ರುತಿಸ್ಥಾನಕ್ಕೂ ಷಡ್ಜದ ನಾಲ್ಕನೆಯ ಶ್ರುತಿಸ್ಥಾನಕ್ಕೂ ಇರುವ ಅಂತರವನ್ನು ಹೇಳಬಹುದೇ ಹೊರತು ರಿಷಭದ ಒಂದನೆಯ, ಎರಡನೆಯ, ಮತ್ತು ಮೂರನೆಯ ಶ್ರುತಿಗಳ ಸ್ಥಾನಗಳನ್ನೂ ಅವುಗಳಲ್ಲಿರುವ ಪರಸ್ಪರ ಅಂತರಗಳನ್ನೂ ಒಂದೇ ಕಾಲದಲ್ಲಿ ಹೋಲಿಸಿ ತಿಳಿದುಕೊಳ್ಳಲು ಸಾಧ್ಯವಿಲ್ಲ. ಇದೇ ಮಾತುಗಳು ಎಲ್ಲಾ ಸ್ವರಗಳಿಗೂ ಎಲ್ಲಾ ಸಾರಣೆಗಳಿಗೂ ಅನ್ವಯಿಸುತ್ತವೆ. ಭರತನೂ ಅಭಿನವಗುಪ್ತನೂ ಪ್ರತಿಯೊಂದು ಸ್ವರದಲ್ಲಿರುವ ಶ್ರುತಿಗಳ ಒಟ್ಟು ಪ್ರಮಾಣವನ್ನು (ಷಡ್ಜಗ್ರಾಮ ಸ್ವರವ್ಯವಸ್ಥೆಯಮೂಲಕ) ಒಂದೊಂದೇ ತಂತಿಯಲ್ಲಿ ತೋರಿಸಿರುವುದೇ ಈ ಅಶಕ್ಯತೆಗೆ ಕಾರಣವಾಗಿದೆ. ಅದರ ಬದಲು ಪ್ರತಿಯೊಂದು ಸ್ವರಕ್ಕೂ ಅದರ ಹಿಂದಿನ ಸ್ವರಕ್ಕೂ ಇರುವ ಅಂತರವನ್ನು ಉಂಟುಮಾಡುವ ಶ್ರುತಿಗಳೆಲ್ಲವನ್ನೂ ಬಿಡಿ ಬಿಡಿಯಾಗಿ ಪ್ರತ್ಯೇಕವಾಗಿ ಎರಡು ವೀಣೆಗಳಲ್ಲಿಯೂ ತೋರಿಸಿದರೆ ಆಯಾ ಸ್ವರದ ಒಟ್ಟು ಪ್ರಮಾಣವನ್ನೂ ಅದನ್ನುಂಟುಮಾಡುವ ಶ್ರುತಿಗಳಲ್ಲಿ ಪ್ರತಿಯೊಂದರ ಪ್ರಮಾಣವನ್ನೂ ಸಿದ್ಧಮಾಡಿಕೊಡಬಹುದು. ಇದನ್ನೇ ಶಾರ್ಙ್ಗದೇವನು ಸಾಧಿಸಿರುವುದು. ಆದುದರಿಂದ ಅವನ ನಿದರ್ಶನಾಕ್ರಮವೇ ಈ ಮೂರರಲ್ಲಿಯೂ ಹೆಚ್ಚು ನಿರ್ದುಷ್ಟವಾದುದು.

ಎರಡನೆಯದಾಗಿ, ಭರತನು ಷಡ್ಜಗ್ರಾಮ, ಮಧ್ಯಮಗ್ರಾಮಗಳ ಲಕ್ಷ್ಯಜ್ಞಾನವು ಸಾಧಕನಲ್ಲಿರಬೇಕೆಂದೂ ಅಭಿನವಗುಪ್ತನು ಷಡ್ಜಗ್ರಾಮವು ರೂಢಿಯಲ್ಲಿ ಯಾವ ಸ್ವರವ್ಯವಸ್ಥೆಯನ್ನು ಹೊಂದಿದೆ ಎಂಬ ಜ್ಞಾನವು ಸಾಧಕನಲ್ಲಿರಬೇಕೆಂದೂ ನಿರೀಕ್ಷಿಸುತ್ತಾರೆ. ಈ ಜ್ಞಾನವು ಸಾಧಕನಲ್ಲಿ ಇಲ್ಲದಿದ್ದರೆ ಅವರ ಶ್ರುತಿನಿದರ್ಶನಕ್ರಮವು ನಿರರ್ಥಕವಾಗುತ್ತದೆ. ಷಡ್ಜಗ್ರಾಮದ ಸ್ವರವ್ಯವಸ್ಥೆಯು ಪ್ರಾಚೀನಕಾಲದಲ್ಲಿ (ಉದಾಹರಣೆಗೆ, ಅಭಿನವಗುಪ್ತನ ಕಾಲದಲ್ಲಿ) ಯಾವರೀತಿಯಲ್ಲಿ ವಾದ್ಯಗಳಲ್ಲಿ ಅಥವಾ ಕಂಠಧ್ವನಿಯಲ್ಲಿ ರೂಢವಾಗಿತ್ತು ಎಂಬುದನ್ನು ಅನುಮಿತಿಯಿಂದ ಎಷ್ಟೇ ಸಿದ್ಧಪಡಿಸಿದರೂ ಪ್ರತ್ಯಕ್ಷದಷ್ಟು ಈ ಪ್ರಮಾಣವು ಪ್ರಬಲವಾಗಿಲ್ಲವಾದುದರಿಂದ ಸ್ವಲ್ಪ ಮಟ್ಟಿಗೆ ಶಂಕೆಯು ಉಳಿದೇ ಇರುತ್ತದೆ. ಅಲ್ಲದೆ ತನ್ನ ಕಾಲದಲ್ಲಿ ಪ್ರಚಾರವಾಗಿರುವ, ಮುಂದೆ ವ್ಯತ್ಯಾಸವಾಗಬಹುದಾದ ಅಥವಾ ಲಕ್ಷ್ಯಪ್ರಸಿದ್ಧಿ ವೈಧುರ್ಯವನ್ನು ಪಡೆಯಬಹುದಾದ ಲಕ್ಷ್ಯಸಾಮಗ್ರಿಯನ್ನು ದೃಷ್ಟಾಂತವನ್ನಾಗಿ ಬಳಸುವುದು ಚಾರಿತ್ರಕದೃಷ್ಟಿಯಿಂದ ಅಷ್ಟೇನೂ ಸಾಧುವಲ್ಲ. ಸಂಗೀತದಂತಹ ಲಕ್ಷ್ಯಪ್ರಧಾನವಾದ, ಆಗಾಗ ಲಕ್ಷ್ಯ-ಲಕ್ಷಣಗಳಲ್ಲಿ ಬದಲಾಯಿಸುತ್ತಿರುವ, ಹಾಗೂ ಲಕ್ಷ್ಯದಿಂದಲೇ ಲಕ್ಷಣವನ್ನು ತಿಳಿಯಬೇಕಾದ, ವಿಷಯದಲ್ಲಿ ಹೀಗೆ ಮಾಡದೆ ಗತ್ಯಂತರವಿರಲಿಲ್ಲ ಎಂಬ ಸಮಾಧಾನವೇನೇನೋ ಇಲ್ಲಿ ಹೇಳಿಕೊಳ್ಳಬಹುದು. ರಾಗ, ಪ್ರಬಂಧ, ತಾಳ, ಮುಂತಾದವುಗಳ ವಿಷಯದಲ್ಲಿ ಇಂತಹ ಸಮಾಧಾನವು ಸಲ್ಲುತ್ತದೆ; ಏಕೆಂದರೆ ಇವು ಕಾಲಕಾಲಕ್ಕೆ ವ್ಯತ್ಯಾಸವಾಗುವಂತಹವುಗಳು. ಆದರೆ ಇವುಗಳಿಗೆ ಮೂಲಭೂತವಾಗಿದ್ದು ಕಾಲದೇಶಗಳ ಮಿತಿಯನ್ನು ಮೀರಿದ ನಾದ, ಶ್ರುತಿ, ಸ್ವರ, ಸ್ಥಾಯಿ, ಲಯ ಮುಂತಾದ ಪ್ರಾಥಮಿಕ ಪ್ರಮೇಯಗಳನ್ನು ಸ್ಥಾಪಿಸುವಾಗ ಇಂತಹ ಸಮಾಧಾನವು ಸಲ್ಲುವುದಿಲ್ಲ. ಪ್ರಾಚೀನ ಲಾಕ್ಷಣಿಕರ ಶ್ರುತಿನಿದರ್ಶನಕ್ರಮದಲ್ಲಿದ್ದ ಈ ದೋಷವನ್ನು ತೆಗೆದುಹಾಕಿ ಭಾರತೀಯ ಸಂಗೀತವೇ ಅಲ್ಲದೆ ಇಡೀ ಪ್ರಪಂಚದ ನಾದವಿಜ್ಞಾನಕ್ಕೇ ತಳಹದಿಯಾದ, ನಿರ್ದುಷ್ಟವಾದ ಪ್ರಮೇಯ

ವೊಂದನ್ನು ಸಾಧಿಸಿಕೊಟ್ಟ ಕೀರ್ತಿ ಶಾರ್ಙ್ಗದೇವನದು. ಅವನ ಕ್ರಮದಲ್ಲಿ ಶಂಕೆಗೇ ಅವಕಾಶವಿಲ್ಲ: ನಿಃಶಂಕನೆಂಬ ಬಿರುದು ಅವನಿಗೆ ಅನ್ವರ್ಥವಾದುದು. ಲಕ್ಷ್ಯಪ್ರಸಿದ್ಧವಾದ ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳನ್ನು ಅವನು ಸಂಪೂರ್ಣವಾಗಿ ಕೈಬಿಟ್ಟು ಎಲ್ಲರೂ ಎಲ್ಲ ಕಾಲದಲ್ಲಿಯೂ ಅನುಸರಿಸಬಹುದಾದ ವೈಜ್ಞಾನಿಕಕ್ರಮವನ್ನು ಸ್ಥಾಪಿಸಿದ್ದಾನೆ.

ಈ ಅರ್ಥವನ್ನೇ ಇಲ್ಲಿ ಇನ್ನೂ ಸ್ವಲ್ಪ ವಿಸ್ತರಿಸುವುದರಿಂದ ಇನ್ನೂ ಒಂದು ಪ್ರಯೋಜನವು ಆಗುತ್ತದೆ. ಭರತ, ಮತಂಗ, ಅಭಿನವಗುಪ್ತರು ವಿವಿಧ ಶ್ರುತಿಗಳ ಪ್ರಮಾಣಗಳನ್ನು ಹೇಳಿರುವುದು ಷಡ್ಜಗ್ರಾಮದಲ್ಲಿನ ಸ್ವರ ವ್ಯವಸ್ಥೆಯನ್ನು ಅವಲಂಬಿಸಿ; ಉದಾಹರಣೆಗೆ, ಮಧ್ಯಮಗ್ರಾಮದ ಪಂಚಮವೇನೆಂಬುದು ತಿಳಿಯದಿದ್ದರೆ ಶ್ರುತಿಯ ಪ್ರಮಾಣವು ನಾಟ್ಯಶಾಸ್ತ್ರದಿಂದ ಸ್ಫುರಿಸುವುದಿಲ್ಲ. ಶ್ರುತಿಯೆಂಬುದಕ್ಕೆ ಅಭಿನವಗುಪ್ತನು ಪರಮಾಣು ಪ್ರಮಾಣದ ಅತ್ಯಂತ ಕನಿಷ್ಠನಾದಾಂತರ ಎಂದು ಮುಂತಾಗಿ ಶ್ರುತಿಯ ಲಕ್ಷಣವನ್ನು ಮೊದಲು ಹೇಳಿ ಇದರಿಂದ ಮಧ್ಯಮಗ್ರಾಮ ಪಂಚಮದ ಲಕ್ಷ್ಯಜ್ಞಾನವನ್ನು ಶಾಸ್ತ್ರೀಯವಾಗಿ ಹೊರಡಿಸುತ್ತಾನಾದರೂ ಷಡ್ಜಗ್ರಾಮದ ಸ್ವರವ್ಯವಸ್ಥೆಯ ಜ್ಞಾನವಾದರೂ ಅಲ್ಲಿ ಬೇಕಾಗಿಯೇ ತೀರುತ್ತದೆ. ಅದಿಲ್ಲದಿದ್ದರೆ ಚಲವೀಣೆಯ ರಿಷಭವು ಧ್ರುವ-ವೀಣೆಯ ಷಡ್ಜದಲ್ಲಿ ಏಕೀಭಾವವನ್ನು ಪಡೆಯುತ್ತದೆ ಎಂದು ಮುಂತಾದ ಮಾತುಗಳಿಗೆ ಪ್ರಯೋಜನವೇ ಇಲ್ಲ. ಈ ಜ್ಞಾನದಿಂದಲೇ ಅವನು ಬೇರೆ ಬೇರೆ ಜಾತಿಗಳ ಶ್ರುತಿಗಳ ಪ್ರಮಾಣವನ್ನು ಹೊರಡಿಸುತ್ತಾನೆ. ಹೀಗಾಗಿ ಇವರಿಬ್ಬರಲ್ಲಿಯೂ ಗ್ರಾಮದ ಜ್ಞಾನದಿಂದಲೇ ಶ್ರುತಿಯ ಜ್ಞಾನ. ಶಾರ್ಙ್ಗದೇವನಲ್ಲಿ ಹಾಗಲ್ಲ. ಇವನಿಗೆ ಗ್ರಾಮದ ಕಲ್ಪನೆಯ ಆವಶ್ಯಕತೆಯೇ ಇಲ್ಲ. ಅಭಿನವಗುಪ್ತನು ಸ್ಥಾಯಿಯ ಪೂರ್ವಸಂಚಿತ ಜ್ಞಾನವನ್ನು ಸಾಧಕನಲ್ಲಿ ನಿರೀಕ್ಷಿಸುವುದನ್ನೂ ಮೇಲೆ ಸೂಚಿಸಿದೆ. ಶಾರ್ಙ್ಗದೇವನು ಅದನ್ನೂ ಅಪೇಕ್ಷಿಸುವುದಿಲ್ಲ. ಪೂರ್ವಾಚಾರ್ಯರು ಒಂದು ಸ್ಥಾಯಿಯಲ್ಲಿ ಇಪ್ಪತ್ತೆರಡು ಶ್ರುತಿಗಳಿವೆಯೆಂದು ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳ ಆಧಾರದ ಮೇಲೆ ಸಿದ್ಧಪಡಿಸುತ್ತಾರೆ. ಆದರೆ ಶಾರ್ಙ್ಗದೇವನು ಇಪ್ಪತ್ತೆರಡು ಶ್ರುತಿಗಳ ಅಂತರವುಳ್ಳ ನಾದವ್ಯಾಪ್ತಿಗೆ ಸ್ಥಾಯಿ ಎಂಬ ಹೆಸರು, ಎಂದು ಸೂಚಿಸುತ್ತಾನೆ.

ಈ ಸಂದರ್ಭದಲ್ಲಿ ಇನ್ನೂ ಒಂದು ಮುಖ್ಯ ಸಂಗತಿಯನ್ನು ಗಮನಿಸಬೇಕು. ಭರತಾದಿಗಳು ಶ್ರುತಿಯನ್ನು ವಿವರಿಸಿ ಅದರ ಪ್ರಮೆಯನ್ನು ಹುಟ್ಟಿಸುವುದು ಸ್ವರದ ಮೂಲಕ. ಎಂದರೆ ಗಾನಪ್ರಪಂಚದ ಮೂಲದ್ರವ್ಯವು ಸ್ವರ ಎಂಬುದು ಅವರ ದೃಷ್ಟಿ. ಸ್ವರದಿಂದ ಗ್ರಾಮದ ಜ್ಞಾನ; ಗ್ರಾಮದ ಸ್ವರೂಪಜ್ಞಾನದಿಂದ ಶ್ರುತಿಯ ಪ್ರಮೆ—ಇದು ಭರತನು ಗ್ರಂಥರಚನೆಗೆ ಸ್ವೀಕರಿಸಿದ ಪದ್ಧತಿ. ಈ ಅನುಕ್ರಮವನ್ನು ಅಭಿನವಗುಪ್ತನು ಬಹುವಾಗಿ ಸಮರ್ಥಿಸಿದ್ದಾನೆ. ಶ್ರುತಿ-ಸ್ವರಗಳ ಸಂಬಂಧವನ್ನು ವಿವೇಚಿಸುವಾಗ ಇದನ್ನು ಮುಂದೆ ಸ್ವಲ್ಪಮಟ್ಟಿಗೆ ಪರಿಶೀಲಿಸಲಾಗುವುದು. ಮತಂಗನಾದರೂ ಶ್ರುತಿಯ ಕಲ್ಪನೆಗೆ ಗ್ರಾಮ, ಸ್ವರಗಳ ತತ್ತ್ವಗಳನ್ನು ಬಳಸಿಕೊಂಡಿದ್ದರೂ ಶ್ರುತಿ, ಸ್ವರ, ಗ್ರಾಮ ಎಂಬ ಅನುಕ್ರಮವನ್ನು ಅನುಸರಿಸಿದ್ದಾನೆ. ಆದರೆ ಭರತನ ತತ್ತ್ವವಿವೇಚನಾಕ್ರಮಕ್ಕೆ ಪುಷ್ಟಿಯನ್ನೀಯುವ ಈ ಶ್ಲೋಕವನ್ನೂ ಅವನು 'ಅತ್ರೋಚ್ಯತೇ' ಎಂದು ಹೇಳಿ ಬಹುಶಃ ಪೂರ್ವಾಚಾರ್ಯರಿಂದ ಸಂಗ್ರಹಿಸಿದ್ದಾನೆ:

ಸಾಮವೇದಾತ್ ಸ್ವರಾ ಜಾತಾಃ ಸ್ವರೇಭ್ಯೋ ಗ್ರಾಮಸಂಭವಃ | [125]

ಆದರೆ ಈ ಅನುಕ್ರಮವನ್ನು ಶಾರ್ಙ್ಗದೇವನು ಸ್ವೀಕರಿಸುವುದಿಲ್ಲ. ದತ್ತಿಲ, ಮತಂಗ, ನಾನ್ಯದೇವ ಮುಂತಾದ ಪೂರ್ವಾಚಾರ್ಯರು ಶ್ರುತಿಯನ್ನು ಮೊದಲು ಹೇಳಿದರೂ ಮುಂದೆ ಹೇಳಲ್ಪಡುವ ಗ್ರಾಮ, ಸ್ವರ ಮುಂತಾದ ತತ್ವಗಳನ್ನು ಅಪೇಕ್ಷಿಸಿಯೇ ಮಾಡುತ್ತಾರೆ. ಇಷ್ಟರಮಟ್ಟಿಗೆ ಅವರ ವಿವೇಚನಾಕ್ರಮವು ದೂಷಿತವೇ. ಭರತನದೂ

125 ಮತಂಗ, ಉ. ಗ್ರಂ., ಪು. 20.

ಹೀಗೆಯೇ. ಅವನು ಉದ್ದೇಶದಲ್ಲಿ ಹೇಳದಿರುವ ಕ್ರಮದಲ್ಲಿ ಮುಂದುಮುಂದಿನ ತತ್ತ್ವಗಳಿಂದ ಹಿಂದಿನವುಗಳನ್ನು ವಿವೇಚಿಸುತ್ತಾನೆ. ಶಾರ್ಙ್ಗದೇವನು ತನ್ನ ವಿವೇಚನೆಯಲ್ಲಿ ಇನ್ನೂ ಹೆಚ್ಚಿನ ವೈಜ್ಞಾನಿಕಕ್ರಮವನ್ನು ಬಳಸಿದ್ದಾನೆ. ಮೂಲಭೂತವಾದ ಶ್ರುತಿಯ ತತ್ತ್ವದಿಂದ ಸ್ವರ, ಸ್ವರದಿಂದ ಗ್ರಾಮ ಹೀಗೆ ತರ್ಕಬದ್ಧವಾಗಿದೆ, ಅವನ ಸರಣಿ. ಭರತ, ಮತಂಗಾದಿಗಳು, ಶಾರ್ಙ್ಗದೇವ—ಈ ಮೂರು ಘಟ್ಟಗಳಲ್ಲಿ ನಡೆದ ಸಂಗೀತಶಾಸ್ತ್ರಪ್ರಮೇಯಗಳ ವಿವೇಚನೆಯ ಅನುಕ್ರಮದ ಅಭ್ಯಾಸದಿಂದ ಈ ಶಾಸ್ತ್ರದ ಪ್ರಮೇಯಸಾಮಗ್ರಿಯ ವ್ಯವಸ್ಥೆ ಮತ್ತು ಯೋಜನವಿಧಾನಗಳನ್ನು ಬೋಧಿಸುವ ವಿಧಾನಶಾಸ್ತ್ರ (methodology)ದ ಚರಿತ್ರೆಯನ್ನು ಚಿತ್ರಿಸಬಹುದು. ಇಲ್ಲಿ ಪ್ರಕೃತವಾದುದು ಏನೆಂದರೆ ಭರತನಿಗೂ ಶಾರ್ಙ್ಗದೇವನಿಗೂ ಇರುವ ವಿಧಾನಶಾಸ್ತ್ರದಲ್ಲಿನ ವ್ಯತ್ಯಾಸವೆಂದರೆ ಶಾರ್ಙ್ಗದೇವನ ಕ್ರಮವು ಷಡ್ಜಗ್ರಾಮವೇ ಮೊದಲಾದ ಪೂರ್ವಸಂಚಿತ ಲಕ್ಷ್ಯಜ್ಞಾನದಿಂದ ನಿರಪೇಕ್ಷವಾದುದು; ಶ್ರುತಿಯಿಂದ ಸ್ವರಗಳ ಸಿದ್ಧಿ ಅವನು ಅನುಸರಿಸುವ ಮಾರ್ಗ. ಎಂದರೆ ಇಷ್ಟಿಷ್ಟು ಶ್ರುತಿಗಳ ಪ್ರಮಾಣದಿಂದ ಇಂತಿಂತಹ ಸ್ವರದ ಉತ್ಪತ್ತಿಯಾಗುತ್ತದೆ ; ಉದಾಹರಣೆಗೆ, ಎರಡನೆಯ ಸಾರಣೆಯನಂತರ ಯಾವ ಯಾವ ಸ್ವರಗಳು ಧ್ರುವವೀಣೆಯ ಆಯಾ ಹಿಂದಿನ ಸ್ವರಗಳಲ್ಲಿ ಪ್ರವೇಶಿಸಿ ಏಕೀಭಾವವನ್ನು ಪಡೆಯುತ್ತವೆಯೋ ಅವುಗಳಿಗೆ ದ್ವಿಶ್ರುತಿಕ ಸ್ವರಗಳೆಂದು ಸಂಜ್ಞೆ ; ಮೂರು, ನಾಲ್ಕನೆಯ ಸಾರಣೆಗಳಿಗೂ ಇದೇ ಅನ್ವಯಿಸುತ್ತದೆ. ಇವುಗಳನ್ನು ಲಕ್ಷ್ಯಪ್ರಸಿದ್ಧವಾದ ಸ್ವರಗಳೊಡನೆ ಹೋಲಿಸಿ ಅವುಗಳ ಪ್ರಮಾಣಗಳನ್ನು ಹೀಗೆ ಶಾಸ್ತ್ರೀಯವಾಗಿ ಅವನು ಪಡೆಯುತ್ತಾನೆ.

ಶಾರ್ಙ್ಗದೇವನು ಬಳಸುವ ಸಾರಣಾತಂತ್ರವು ಪೂರ್ವಪದ್ಧತಿಗಿಂತ ಹೆಚ್ಚು ನಿರ್ದುಷ್ಟವಾಗಿದೆ. ಒಂದು ಶ್ರುತಿಯಷ್ಟು ಅಪಕರ್ಷಣಮಾಡಬೇಕಾದಾಗ ಆಯಾ ಸ್ವರದ ತಂತಿಯನ್ನು ಅದರ ಹಿಂದಿನದರ ನಾದಕ್ಕೆ ಸಮವಾಗುವಂತೆ ಶ್ರುತಿಮಾಡಿದರೆ ಸಾಕು. ಉದಾಹರಣೆಗೆ, ಪ್ರಥಮಸಾರಣದಲ್ಲಿ ನಾಲ್ಕನೆಯ ತಂತಿಯನ್ನು ಮೂರನೆಯದರ ನಾದಕ್ಕೆ ಸಮವಾಗಿಯೂ, ಏಳನೆಯದನ್ನು ಆರನೆಯದಕ್ಕೆ ಸಮವಾಗಿಯೂ, ಒಂಬತ್ತನೆಯದನ್ನು ಎಂಟನೆಯದಕ್ಕೆ ಸಮವಾಗಿಯೂ, ಹದಿಮೂರನೆಯದನ್ನು ಹನ್ನೆರಡನೆಯದಕ್ಕೆ ಸಮವಾಗಿಯೂ, ಹದಿನೇಳನೆಯದನ್ನು ಹದಿನಾರನೆಯದಕ್ಕೆ ಸಮವಾಗಿಯೂ, ಇಪ್ಪತ್ತನೆಯದನ್ನು ಹತ್ತೊಂಬನೆಯದಕ್ಕೆ ಸಮವಾಗಿಯೂ, ಇಪ್ಪತ್ತೆರಡನೆಯದನ್ನು ಇಪ್ಪತ್ತೊಂದನೆಯದಕ್ಕೆ ಸಮವಾಗಿಯೂ ಇರುವಂತೆ ಶ್ರುತಿಮಾಡಬೇಕು. ಹೀಗೆ ಮಾಡುವಾಗ 3-4, 6-7, 8-9 12-13, 16-17, 19-20, 21-22 ಈ ತಂತ್ರೀಯುಗ್ಮಗಳು ಚಲವೀಣೆಯಲ್ಲಿ ಪರಸ್ಪರವಾಗಿ ಒಂದೇ ನಾದವನ್ನು ಹೊಂದಿರುತ್ತವೆ. ಹಿಂದಿನ ತಂತಿಯನ್ನು ಮಿಡಿದುಕೊಳ್ಳುತ್ತಾ ಆಯಾ ಸ್ವರದ ತಂತಿಯನ್ನು ಅದೇ ನಾದಕ್ಕೆ ಶ್ರುತಿ ಮಾಡುವುದು ಸುಲಭವಷ್ಟೆ. ಹೀಗೆ ಮಾಡಿದರೆ ಧ್ರುವವೀಣೆಯ ತಂತಿಗಳೂ ಚಲವೀಣೆಯಲ್ಲಿ ಅವುಗಳಿಗೆ ಪರಸ್ಪರವಾಗಿರುವ ತಂತಿಗಳೂ ಹೀಗೆ ನಾದವನ್ನು ಹೊಂದಿರುತ್ತವೆ :

| | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ಧ್ರುವವೀಣೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| | | | | ಸ | | | ರಿ | | ಗ | | | | ಮ | | | | ಪ | | | ಧ | | ನಿ |
| ಚಲವೀಣೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| | | | 3 ಸ | 3 | | 6 ರಿ | 6 | 8 ಗ | 8 | | | 12 ಮ | 12 | | | 16 ಪ | 16 | | 19 ಧ | 19 | 21 ನಿ | 21 |

ಶ್ರುತಿನಿದರ್ಶನ : ಪಠ್ಠಕ (6) : ಶಾರ್ಙ್ಗದೇವಪದ್ಧತಿ

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇದನ್ನು ಪಥಕ (3) ಮತ್ತು ಪಥಕ (4) ರಲ್ಲಿರುವ ಪ್ರಥಮಸಾರಣದೊಡನೆ ಹೋಲಿಸಿದರೆ ಈ ಎರಡು ಪದ್ಧತಿಗಳಲ್ಲಿನ ವ್ಯತ್ಯಾಸವು ಚೆನ್ನಾಗಿ ತಿಳಿಯುತ್ತದೆ. ಸ್ವರಾಷ್ಟಕದಲ್ಲಿರುವ ಸ್ವರವ್ಯವಸ್ಥೆಯನ್ನಾಗಲೀ, ಮಧ್ಯಮಭಾವ, ಪಂಚಮಭಾವ ಅಥವಾ ಅಷ್ಟಮಭಾವಗಳ ಜ್ಞಾನವನ್ನಾಗಲೀ ಈ ಕ್ರಮವು ಅಪೇಕ್ಷಿಸುವುದಿಲ್ಲ. ಎಂದರೆ ನಮಗೆ ಲಕ್ಷ್ಯದಲ್ಲಿ ತಿಳಿದ ಸ್ವರಗಳಿಗೆ ಆಯಾ ತಂತಿಗಳನ್ನು ಶ್ರುತಿಮಾಡುವ ಭರತಪದ್ಧತಿಗೆ ವಿಪರ್ಯಾಸವಾಗಿ ತಾನು ಮೊದಲು ಸ್ಥಾಪಿಸಿದ ಶ್ರುತಿಯ ಲಕ್ಷಣದಂತೆ ಅನುಕ್ರಮವಾಗಿ ಇಪ್ಪತ್ತೆರಡು ತಂತಿಗಳಲ್ಲಿ ಮೊದಲು ಶ್ರುತಿಗಳನ್ನು ಸ್ಥಾಪಿಸಿ ಅವುಗಳಲ್ಲಿ 4, 7, 9, 13, 17, 20, 22ನೆಯ ತಂತಿಗಳನ್ನು ಮಿಡಿದಾಗ ಯಾವ ನಾದಗಳು ಹೊರಡುತ್ತವೆಯೋ ಅವುಗಳನ್ನೇ ಕ್ರಮವಾಗಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದಗಳೆಂದು ಕರೆಯಬೇಕು. ಇವು ಲಕ್ಷ್ಯದಲ್ಲಿರುವ ಆಯಾ ಹೆಸರಿನ (ಶುದ್ಧ) ಸ್ವರಗಳಾಗಿಯೇ ಇರುತ್ತವೆ. ಈ ಸಾಮ್ಯಗಳು ಉಂಟಾಗಬೇಕಾದರೆ ಸಾಧಕನ ಶ್ರವಣಶಕ್ತಿಯು ಅತ್ಯಂತ ಸೂಕ್ಷ್ಮವಾಗಿರಬೇಕಲ್ಲದೆ ಆಧಾರಸ್ವರವೊಂದರಿಂದ ಕ್ರಮವಾಗಿ ಅತ್ಯಲ್ಪರೀತಿಯಲ್ಲಿ, ಮಧ್ಯದಲ್ಲಿ ಬೇರೆ ನಾದವು ಗೋಚರಿಸುವುದಿಲ್ಲವೆನ್ನುವಷ್ಟು ಕನಿಷ್ಠವಾದ ಅಂತರಗಳನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾ ಬಂದಾಗ ಅವುಗಳಲ್ಲಿ ಸ್ವರತ್ವವುಳ್ಳವುಗಳನ್ನೇ ಶ್ರುತಿಸ್ಥಾನಗಳೆಂದು ತಿಳಿಯುವ ಅಸಾಧಾರಣ ವಿವೇಚನಾಶಕ್ತಿಯೂ ಇರಬೇಕಾಗುತ್ತದೆ.

ಶ್ರುತಿನಿದರ್ಶನವನ್ನು ಭರತ, ಶಾರ್ಙ್ಗದೇವರಂತಹ ಪೂರ್ವಾಚಾರ್ಯರು ಹೇಳಿರುವುದು ಇಂತಹ ಅಸಾಧಾರಣ ಸಾಮರ್ಥ್ಯವುಳ್ಳ ಜಿಜ್ಞಾಸುಗಳಿಗೆ. ಏಕೆಂದರೆ, ಇಂತಹ ಶಕ್ತಿಯಿರುವವರು ಇಪ್ಪತ್ತೆರಡು ತಂತಿಗಳನ್ನು ಪೂರ್ವೋಕ್ತರೀತಿಯಲ್ಲಿ ಶ್ರುತಿಮಾಡಿ, ಅವುಗಳಲ್ಲಿ ನಾಲ್ಕನೆಯದನ್ನು ಷಡ್ಜಸ್ಥಾನವೆಂದಿಟ್ಟುಕೊಂಡರೆ ಹದಿಮೂರನೆಯದು ಶುದ್ಧಮಧ್ಯಮಭಾವದಲ್ಲಿಯೂ ಹದಿನೇಳನೆಯದು ಪಂಚಮಭಾವದಲ್ಲಿಯೂ ಇಪ್ಪತ್ತಾರನೆಯದನ್ನು ಕಲ್ಪಿಸಿಕೊಂಡರೆ ಅದು ಅಷ್ಟಮಭಾವದಲ್ಲೂ ತಮಗೆ ತಾವೇ ಇರುತ್ತವೆ. ಅಲ್ಲದೆ ಲಕ್ಷ್ಯದಲ್ಲಿ ಪ್ರಸಿದ್ಧವಾದ ರಿಷಭ, ಗಾಂಧಾರ, ಧೈವತ, ನಿಷಾದಗಳ ಶುದ್ಧಪ್ರಭೇದಗಳು ಕ್ರಮವಾಗಿ ಏಳನೆಯ, ಒಂಬತ್ತನೆಯ, ಇಪ್ಪತ್ತನೆಯ ಮತ್ತು ಇಪ್ಪತ್ತೆರಡನೆಯ ತಂತಿಗಳಲ್ಲಿ ಇರುತ್ತವೆ. ಸಪ್ತಮೂರ್ಛನೆಗಳನ್ನು ಇವುಗಳಲ್ಲಿ ನಡೆಸಿದಾಗ ಅವುಗಳಲ್ಲಿ ಪ್ರತಿಯೊಂದು ಸ್ವರದ ಪ್ರಮಾಣವೂ ಲಕ್ಷ್ಯಪ್ರಸಿದ್ಧವಾದ ಆಯಾ ಪ್ರಮಾಣವಾಗಿಯೇ ಇರುತ್ತದೆ. ಹೆಚ್ಚು ಲಕ್ಷ್ಯಪ್ರಸಿದ್ಧವಾದ ಸಪ್ತಸ್ವರಗಳನ್ನು ಬಿಟ್ಟು ಬಹು ಸೂಕ್ಷ್ಮಗೋಚರವೂ ಅಪ್ರಸಿದ್ಧವೂ ಆಗಿರುವ ಶ್ರುತಿಗಳ ಮೂಲಕ ಎಲ್ಲರಿಗೂ ಚೆನ್ನಾಗಿ ತಿಳಿದ ಸಪ್ತಸ್ವರಗಳನ್ನು ಉದಾಹರಿಸತೊಡಗುವುದು ಕುದರೆಯ ಮುಂದೆ ಗಾಡಿಯನ್ನು ಕಟ್ಟಿದಂತಾಗುವುದಿಲ್ಲವೇ ? ತಿಳಿದಿರುವುದರಮೂಲಕ ತಿಳಿಯದಿರುವುದನ್ನು ಬೋಧಿಸಬೇಕು ಎಂಬ ಮುಖ್ಯ ಶಿಕ್ಷಣ-ಶಾಸ್ತ್ರಪ್ರಮೇಯವನ್ನು ಇಲ್ಲಿ ಕಡೆಗಣಿಸಿಲ್ಲವೇ ? ಎಂಬ ಆಕ್ಷೇಪಗಳು ಇಲ್ಲಿ ಮೂಡುವುದು ಸಹಜವಾಗಿದೆ- ಆದರೆ ಇಲ್ಲಿ ಬೋಧಿಸುತ್ತಿರುವುದು ಸಾಮಾನ್ಯನಿಗಲ್ಲವೆಂಬುದನ್ನು ಸ್ಮರಿಸಬೇಕು. ಸ್ವರಗಳು ಲಕ್ಷ್ಯಪ್ರಸಿದ್ಧವಾಗಿರುವುದೇನೋ ನಿಜ. ಆದರೂ ವಸ್ತುತಃ ನೈರಂತರ್ಯವುಳ್ಳ ಶ್ರುತಿಪ್ರಮಾಣಗಳ ಅವಿಚ್ಛಿನ್ನವಾದ ಇಪ್ಪತ್ತೆರಡು ನಾದಸೋಪಾನಗಳ ಅವಧಿಯೇ ಆಧಾರಭೂತವೂ ತಾತ್ತ್ವಿಕವಾಗಿ ಪ್ರಾಥಮಿಕವೂ ಆಗಿದೆ. ಪ್ರಥಮದರ್ಶನಕ್ಕೆ ಅಗೋಚರವೆಂದ ಮಾತ್ರಕ್ಕೆ ಅದರ ಅಸ್ತಿತ್ವಕ್ಕಾಗಲೀ ಲಕ್ಷ್ಯಲಕ್ಷಣಗಳಲ್ಲಿ ಅದರ ಅನಿವಾರ್ಯತೆಗಾಗಲೀ ಹಾನಿಯೇನಿಲ್ಲ. ಇಂತಹ ಸೋಪಾನಶ್ರೇಣಿಯು ಇರುವುದರಿಂದಲೇ ಅದರಲ್ಲಿ ನಿರ್ದಿಷ್ಟವಾದ ವಿಶಿಷ್ಟಸ್ಥಾನಗಳಲ್ಲಿ ಸಮಾರಣದ ಅಭಿಘಾತದಿಂದ ಸ್ವರತ್ವವು ಉತ್ಪತ್ತಿಯಾಗುವುದು. ಸ್ವರಗಳಿಗೆ ಇವುಗಳನ್ನುಳಿದು ಬೇರ ಅಸ್ತಿತ್ವವಿಲ್ಲ ; ಆದರೆ ಸ್ವರಗಳು ಅಭಿವ್ಯಕ್ತವಾಗದಿದ್ದರೂ ಈ ಶ್ರುತಿಸೋಪಾನಪಂಙ್ಕ್ತಿಯ ವಾಸ್ತವಿಕತೆಗೆ ಬಾಧೆಯಿಲ್ಲ. ಅವುಗಳು ಅಭಿವ್ಯಕ್ತವಾದರೆ ಅದು ಗೋಚರಕ್ಕೆ ಬರುತ್ತದೆ. ಬೆಳಕು ಬಿದ್ದಾಗ ಗೋಚರಿಸಿದ ಘಟವು ಬೆಳಕು ಬೀಳದಿದ್ದಾಗ ಅಗೋಚರವಾಗುವುದಷ್ಟೇ ಹೊರತು ಅದರ ಅಸ್ತಿತ್ವಕ್ಕೆ ಬಾಧೆಯಿಲ್ಲವಷ್ಟೆ. ಆದುದರಿಂದ ತಾತ್ತ್ವಿಕವಾಗಿ ಯಾವುದು

ಮೊದಲೋ ಮೊದಲು ಅದರ ವಿವೇಚನೆ. ಯಾವುದು ನಂತರವೋ ನಂತರ ಅದರ ವಿವೇಚನೆ. ಮೊದಲು ನಂತರ ಎಂಬ ಅನುಕ್ರಮವನ್ನು ಹೇಳಿದುದರಿಂದ ಇಲ್ಲಿ ಕಾರಣ-ಕಾರ್ಯಭಾವವನ್ನು ವಿವಕ್ಷಿಸಿಲ್ಲವೆಂಬುದನ್ನು ಸ್ಪಷ್ಟಪಡಿಸಬೇಕು. ಏಕೆಂದರೆ ಶ್ರುತಿ-ಸ್ವರಗಳ ಸಂಬಂಧವು ಕಾರಣ-ಕಾರ್ಯ ಭಾವದಿಂದ ಆದುದಲ್ಲವೆಂಬ ಮತಂಗನ ಪಕ್ಷವನ್ನು ಮುಂದೆ ವಿವೇಚಿಸಲಾಗುವುದು. ಕಾಲಾನುಕ್ರಮವು ಕಾರಣ-ಕಾರ್ಯವೇ ಅಲ್ಲದೆ ಬೇರೆ ವಿಧದ ಸಂಬಂಧಗಳಲ್ಲಿಯೂ ಗೋಚರಿಸಬಲ್ಲುದು. ಅಲ್ಲದೆ ಶ್ರುತಿ-ಸ್ವರಗಳಲ್ಲಿ ಕಾಲಾನುಕ್ರಮವನ್ನು ಹೇಳುತ್ತಿಲ್ಲವೆಂಬುದನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ. ಅಂತಹ ಸಂಬಂಧವು ಇವುಗಳಲ್ಲಿ ಇಲ್ಲವೆಂಬುದನ್ನೂ ಹೇಳಲಾಗುವುದು. ಇಲ್ಲಿ ಮೊದಲು, ನಂತರ ಎಂಬ ಶಬ್ದಗಳು ತತ್ತ್ವವಿವೇಚನೆಯ ಕಾಲದಲ್ಲಿ ಪ್ರಾಮುಖ್ಯಪ್ರಾಧಾನ್ಯಗಳ ಪ್ರಾಥಮ್ಯವನ್ನು ಸೂಚಿಸುತ್ತವೆ, ಶ್ರುತಿಯು ಮೊದಲು ಹುಟ್ಟಿ ಅನಂತರ ಅದರಿಂದ ಸ್ವರವು ಹುಟ್ಟುತ್ತದೆ ಎಂದಲ್ಲ.

ಶಾರ್ಙ್ಗದೇವನಿಗೂ ಅವನ ಪೂರ್ವಾಚಾರ್ಯರಿಗೂ ಇರುವ ಇನ್ನೊಂದು ಮುಖ್ಯ ವ್ಯತ್ಯಾಸವೇನೆಂದರೆ ದ್ವಾವಿಂಶತಿ ಶ್ರುತಿಗಳ ವ್ಯಾಪ್ತಿಯನ್ನೂ ಇಯತ್ತೆಯನ್ನೂ ಗ್ರಾಮದ ಕಲ್ಪನೆಯಿಂದ ತಪ್ಪಿಸಿ ಸ್ಥಾಯಿಯ ಕಲ್ಪನೆಯಲ್ಲಿ ಸೇರಿಸಿದುದು. ಪೂರ್ವಾಚಾರ್ಯರು ಹೇಳಿದ ದ್ವಾವಿಂಶತಿ ಶ್ರುತಿಗಳ ವ್ಯಾಪ್ತಿಯು ಸ್ಥಾಯಿಕಲ್ಪನೆಯನ್ನು ಕೇವಲ ಪರೋಕ್ಷವಾಗಿ ಒಳಗೊಳ್ಳುತ್ತದೆ. ಅಲ್ಲಿ ಮೂರ್ಛನೆಗಳ ಮೂಲಕವೇ ತ್ರಿಸ್ಥಾನಪ್ರಾಪ್ತಿ. ಶಾರ್ಙ್ಗದೇವನಲ್ಲಿ ಯಾವುದಾದರೊಂದು ಸ್ವರ ಅಥವಾ ಶ್ರುತಿಯು ಇಪ್ಪತ್ತೆರಡು ಶ್ರುತಿಗಳ ಅಂತರದಲ್ಲಿ ಊರ್ಧ್ವಸ್ಪರ್ಶಮಾಡುವುದರಿಂದ ಉಚ್ಚಸ್ಥಾಯಿಯೂ ಅಧಃಸ್ಪರ್ಶಮಾಡುವುದರಿಂದ ನೀಚಸ್ಥಾಯಿಯೂ ಲಭಿಸುತ್ತವೆ. ಗ್ರಾಮದ ಕಲ್ಪನೆಯು ಕಾಲದೇಶಗಳ ವೈಶಿಷ್ಟ್ಯದಿಂದ ನಿರ್ಬಂಧಿತವಾದುದು ; ಎಂದರೆ ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ದೇಶಗಳಲ್ಲಿಯೂ ಇರುವಂತಹುದಲ್ಲ ; ದೇಶವು ಒಂದೇ ಆದರೂ ಕಾಲಭೇದದಿಂದ ಅದು ಮಾರ್ಪಡುವಂತಹುದು ಎಂದು ಅದರ ಚರಿತ್ರೆಯು ತೋರಿಸಿಕೊಟ್ಟಿದೆ. ಅಲ್ಲದೆ ಸಂಗೀತಶಾಸ್ತ್ರಕ್ಕಾಗಲೀ, ನಾದವಿಜ್ಞಾನಕ್ಕಾಗಲೀ ಅದು ಅನಿವಾರ್ಯವಾದ ಪ್ರಮೇಯವೇನಲ್ಲ. ಷಡ್ಜಗ್ರಾಮ ಅಥವಾ ಮಧ್ಯಮಗ್ರಾಮವು ತನ್ನ ಮೂಲಕಲ್ಪನೆಯನ್ನೂ ಮೂಲ ಪ್ರಯೋಜನವನ್ನೂ ಸಂಪೂರ್ಣವಾಗಿ ಕಳೆದುಕೊಂಡದುದೂ ನಮ್ಮ ಆಧುನಿಕ ಸಂಗೀತದಲ್ಲಿ ಅದರ ಪ್ರಯೋಜನವು ವಿಶೇಷವಾಗಿಲ್ಲದಿರುವುದೂ ಅದರ ಅನಿತ್ಯತೆಯನ್ನು ತೋರಿಸಿಕೊಡುತ್ತದೆ. ಗ್ರಾಮದ ಪ್ರಮೇಯವು ನಮ್ಮ ಸಂಗೀತದಲ್ಲಿ ಹುಟ್ಟಿಕೊಂಡಿದುದು ಮುಖ್ಯವಾಗಿ ಲಕ್ಷ್ಯಪ್ರಸಿದ್ಧವಾಗಿದ್ದ ಎಲ್ಲಾ ಸ್ವರಪ್ರಮಾಣಗಳ ಶಾಸ್ತ್ರೀಯ ವ್ಯವಸ್ಥೆಗಾಗಿ ಮತ್ತು ಅವುಗಳ ಪರಸ್ಪರ ಭಾವಗಳ ಶಾಸ್ತ್ರೀಯ ನಿರೂಪಣೆಗಾಗಿ. ಈ ವ್ಯವಸ್ಥೆಯೂ, ನಿರೂಪಣಾಕ್ರಮವು ಬದಲಾಯಿಸಿದರೆ ಗ್ರಾಮ ಪ್ರಮೇಯವು ಬದಲಾಯಿಸಬೇಕು ಅಥವಾ ಲುಪ್ತವಾಗಬೇಕು. ಅದು ಆದುದಾದರೂ ಹಾಗೆಯೇ. ಅದರ ಅಸ್ತಿತ್ವ ಅಥವಾ ಲೋಪದಿಂದ ಶಾಸ್ತ್ರಕ್ಕಾಗಲೀ ಲಕ್ಷ್ಯಕ್ಕಾಗಲೀ ಹಾನಿಯಿಲ್ಲವೆಂಬುದನ್ನು ನಮ್ಮ ಆಧುನಿಕ ಸಂಗೀತವು ತೋರಿಸಿಕೊಟ್ಟಿದೆ. ಆದರೆ ಸ್ಥಾಯಿಯ ಪ್ರಮೇಯವು ಹಾಗಲ್ಲ. ಸಂಗೀತಶಾಸ್ತ್ರದಲ್ಲೂ, ನಾದವಿಜ್ಞಾನದಲ್ಲೂ ಲಕ್ಷ್ಯದಲ್ಲೂ ಅದು ಅನಿವಾರ್ಯವಾದುದು. ಅದಿಲ್ಲದಿದ್ದರೆ ಊರ್ಧ್ವಸ್ಪರ್ಶತತ್ತ್ವವೂ, ಆವರ್ತನದಿಂದ ಉಂಟಾಗುವ ಅತ್ಯಂತ ಸಾದೃಶ್ಯ-ಸಾಗುಣ್ಯಗಳೂ, ಸ್ವರದ ವ್ಯಕ್ತಿತ್ವಪ್ರಬೋಧಕವಾದ ನಾದಗುಣಗಳ ಪ್ರಮೇಯಗಳೂ, ತಾರಮಂದ್ರವ್ಯವಸ್ಥೆಯ ಮೂಲಕ ಉದ್ಬೋಧವಾಗುವ ರಾಗದ ವ್ಯಕ್ತಿತ್ವವೂ, ವಿಸ್ತಾರವಾದ ಪ್ರಯೋಗಕ್ಷೇತ್ರವೂ ಇಲ್ಲವಾಗುತ್ತವೆ. ಆದುದರಿಂದ ಶ್ರುತಿಗಳ ಇಯತ್ತೆ, ವ್ಯವಸ್ಥೆಗಳನ್ನೂ ತನ್ಮೂಲಕ ಸ್ವರವ್ಯವಸ್ಥೆಯನ್ನೂ, ನಿತ್ಯವಾದ ಇವುಗಳ ಮೂಲಕ ಅನಿತ್ಯವಾದ ಗ್ರಾಮ ಮುಂತಾದವುಗಳನ್ನೂ ಹೇಳಲು ಸ್ಥಾಯಿಯೆಂಬ ಪ್ರಮೇಯವನ್ನು ಆಧಾರಭೂತವಾಗಿ ಶ್ರೀ ಶಾರ್ಙ್ಗದೇವನು ಆರಿಸಿಕೊಂಡುದು ಅತ್ಯಂತ ಸಮುಚಿತವೇ ಆಗಿದೆ. ಅವನ ವೈಜ್ಞಾನಿಕಕ್ರಮವೂ ಚಿಕಿತ್ಸಕಬುದ್ಧಿಯೂ ತ್ರಿಕಾಲಾಬಾಧಿತಗಳು. ಅನವದ್ಯವಿದ್ಯಾವಿನೋದನೆಂದು ಅವನು ತನ್ನನ್ನು ಕರೆದುಕೊಂಡಿದ್ದರಲ್ಲಿ ಆಶ್ಚರ್ಯವೇನು ? ಯಾವುದೇ ಸಂಸ್ಕೃತಿಯಾಗಲೀ ಲಲಿತಕಲೆಯಾಗಲೀ ಮಹತ್ತು

ಬೃಹತ್ತುಗಳಲ್ಲಿ ಸಮನಾದ ಅನುಸ್ಯೂತವಾದ ಪರಂಪರೆಯನ್ನು ಹೊಂದಿರಬೇಕಾದರೆ ಆಯಾ ಶಾಸ್ತ್ರಪ್ರವರ್ತಕರಾದ ಋಷಿಗಳು ಕಾಲಕಾಲಕ್ಕೆ ಅದರಲ್ಲಿ ಸತ್ವವನ್ನು ಕಳೆದುಕೊಂಡಿರುವ ಅಂಶಗಳನ್ನು ತೆಗೆದುಹಾಕಿ ಶಾಶ್ವತವಮೌಲ್ಯವುಳ್ಳ ತತ್ತ್ವಗಳನ್ನೂ, ಪ್ರಮೇಯಗಳನ್ನೂ ಹೇಳಿ ಉದಹರಿಸುವುದರಿಂದಲೇ. ಭರತ, ಮತಂಗ, ಅಭಿನವಗುಪ್ತ ಮತ್ತು ಶಾರ್ಙ್ಗದೇವರು ಇಂತಹ ಪಾವನಪರಂಪರೆಯ ಭವ್ಯಪ್ರತೀಕಗಳು.

ಇನ್ನು, ಶಾರ್ಙ್ಗದೇವನ ಶ್ರುತಿನಿದರ್ಶನಪ್ರಯೋಗಕ್ಕೆ ಸಾರಭೂತವಾಗಿರುವ ಅವನ ಶ್ರುತಿಕಲ್ಪನೆಯನ್ನು ಪರಿಶೀಲಿಸಬೇಕು. ಅಭಿನವಗುಪ್ತನು ಶ್ರುತಿಗೆ ಹೇಳಿದ ಲಕ್ಷಣವನ್ನು ಶಾರ್ಙ್ಗದೇವನು ಇನ್ನೂ ಸ್ಪಷ್ಟಗೊಳಿಸಿ ವಿಸ್ತರಿಸಿದ್ದಾನೆ. ಇವನಲ್ಲಿ ಶ್ರುತಿಗೆ ನಿರಂತರತಾ, ಧ್ವನ್ಯಂತರಾಶ್ರುತಿ ಎಂಬ ಎರಡು ಲಕ್ಷಣಗಳಿವೆ. ನಿರಂತರತೆ ಎನ್ನುವುದರಲ್ಲಿ ನಾದದ ಅವಿಚ್ಛಿನ್ನತೆಯು ವಿವಕ್ಷಿತವಾಗಿದೆ. ಎಂದರೆ ಶ್ರುತಿಗಳ ಮಧ್ಯದಲ್ಲಿ ಅವುಗಳಲ್ಲಿ ಪ್ರತ್ಯೇಕತೆಯನ್ನುಂಟುಮಾಡುವ ಅವಕಾಶವಿಲ್ಲ. ಅತ್ಯಂತ ಸಮೀಪಸ್ಥವಾದ ಅದರೆ ಮಧ್ಯದಲ್ಲಿ, ಎಷ್ಟೇ ಅಲ್ಪವಾದರೂ, ಪೃಥಕ್ಕರಣವನ್ನುಂಟುಮಾಡುವ ಅವಕಾಶಗಳಿರುವ ನಾದಕಣಗಳ ಅನುಕ್ರಮದಿಂದ ನಾದವು ಆಗಿಲ್ಲ ಎಂಬುದು ನಿರಂತರತೆ ಎನ್ನುವುದರ ಅರ್ಥ. ಹೀಗೆ ಅವನು ಹೇಳುವುದಕ್ಕೆ ಕಾರಣವಿದೆ. ಏಕೆಂದರೆ ಶ್ರುತಿವಿಷಯದಲ್ಲಿ ಮತಾಂತರವೊಂದು

ಪ್ರಥಮಂ ಶ್ರವಣಾಚ್ಛಬ್ದಃ ಶ್ರೂಯತೇ ಹ್ರಸ್ವಮಾತ್ರಕಃ ।
ಸಾ ಶ್ರುತಿಃ ಸುಪರಿಜ್ಞೇಯಾ ಸ್ವರಾಗಮನಲಕ್ಷಣಾ ॥ 126

ಎಂದು ಹೇಳುತ್ತದೆ. ಶ್ರುತಿಯು ಹ್ರಸ್ವಮಾತ್ರವಾಗಿ ಕೇಳಿಸುತ್ತದೆಂದರೆ ಕಾಲದಲ್ಲಿ ಪರಿಚ್ಛಿನ್ನತೆಯನ್ನು ಹೊಂದಿರುತ್ತದೆ ಎಂದು ಅರ್ಥ. ಜ್ಞಾನ, ಅನುಭವಗಳು ಪರಿಚ್ಛಿನ್ನಗಳೇ, ಅಖಂಡಗಳೇ ಎಂಬುದು ತತ್ತ್ವಜಿಜ್ಞಾಸೆಯಲ್ಲಿ ಪ್ರಾಥಮಿಕ ಪ್ರಶ್ನೆಯಾಗಿಯೇ ಉಳಿದುಕೊಂಡಿದೆ. ಅದರ ಚರ್ಚೆ ಇಲ್ಲಿ ಅಪ್ರಕೃತ. ನಾದಾಭಿವ್ಯಕ್ತಿಯ ಬಗ್ಗೆ ಇಂತಹ ಅಭಿಪ್ರಾಯವೂ ಹಿಂದೆ ಇತ್ತು ಎಂಬುದು ಮತಂಗನಿಂದಲೇ ತಿಳಿದುಬರುತ್ತದೆ :

ಭೇದಸ್ವರಕ್ಷಣಾನಾಂ ಸಾಮಾನ್ಯೇ ನಾನ್ಯವಸ್ತುವತ್ ಸಿದ್ಧಃ । 127

ಈ ವಿಧದ ಅಭಿಪ್ರಾಯಗಳನ್ನು ನಿರಾಕರಿಸಿ ನಾದವು ಅಖಂಡವೂ ಅವಿಚ್ಛಿನ್ನವೂ ಆಗಿದೆಯೆಂದು ಹೇಳುವುದಕ್ಕಾಗಿಯೇ ಶಾರ್ಙ್ಗದೇವನು ನಿರಂತರತೆಯನ್ನು ಶ್ರುತಿಯಲ್ಲಿ ಹೇಳುತ್ತಾನೆ. ಧ್ವನ್ಯಂತರಾಶ್ರುತಿ ಎಂದರೆ ಎರಡು ಶ್ರುತಿಗಳ ಮಧ್ಯದಲ್ಲಿ ಬೇರೆ ಧ್ವನಿಯು ಕೇಳಿಸದಿರುವುದು ; ಅಷ್ಟು ಅಲ್ಪವಾದ ಅಂತರದಲ್ಲಿ ಶ್ರುತಿಗಳು ಇರುತ್ತವೆ. ಧ್ವನಿ ಎಂಬ ಮಾತು ಇಲ್ಲಿ ವಿಶೇಷಾರ್ಥದಲ್ಲಿ ಪ್ರಯುಕ್ತವಾಗಿದೆ. ಈ ಶಬ್ದವನ್ನು ಈ ಅರ್ಥದಲ್ಲಿ ಶ್ರೀ ಶಾರ್ಙ್ಗದೇವನು ಅಭಿನವಗುಪ್ತನಿಂದಲೇ,

'ಪ್ರಾಕ್ತನಸ್ಯ **ಧ್ವನೇರ್ವೈ**ಲಕ್ಷಣ್ಯಂ ಯಾವತಾ ಹೀನೇನಾಧಿಕೇನ ಯಾ ತೀವ್ರಮಂದಾತ್ಮನಾರೂಪೇಣ ಲಕ್ಷ್ಯತೇ ಸಾ ಶ್ರುತಿರಿತಿ ಯಾವತ್ ಯದ್ಯಪಿ ಪರಮಾಣುತೋಽಪ್ಯುತ್ಕರ್ಷಾಪಕರ್ಷೋ ವಾ ಭವೇದ್ **ಧ್ವನೇರ್ವಿ**ಶೇಷಸ್ತಥಾಪಿ ನಾಸೌ ಗೃಹೀತುಂ ಪಾರ್ಯತೇ' । 'ಅತ ಏವ ಯತ್ರೋತ್ಕರ್ಷಾಪಕರ್ಷೌ ನ ಕೌಚಿದ್ **ಧ್ವನೀನಾಂ** ಗ್ರಾಹ್ಯೇತೇ ತತ್ರೈಕಾ ಶ್ರುತಿರಿತಿ,' 109

ಎಂಬ ಉಕ್ತಿಗಳಿಂದ ಪಡೆದುಕೊಂಡಿದ್ದಾನೆ. ಧ್ವನಿಯೆಂದರೆ ಸಾಮಾನ್ಯವಾಗಿ ಶಬ್ದ ಎಂಬ ಅರ್ಥವೇ ಇದ್ದರೂ ಅದನ್ನು ಸಂಗೀತಶಾಸ್ತ್ರದಲ್ಲಿ ಪೂರ್ವಾಚಾರ್ಯರು ವಿಶೇಷಾರ್ಥದಲ್ಲಿ ಬಳಸಿದ್ದಾರೆ. ನಾದವ್ಯಾಪ್ತಿಯಲ್ಲಿ ಯಾವುದಾದರೂ

126 ಮತಾಂತರ, ಉದ್ಧೃತಿ, ಮುಮ್ಮಡಿ ಚಿಕ್ಕಭೂಪಾಲ, ಅಭಿನವಭರತಸಾರಸಂಗ್ರಹ, II, 50–51, ಪು. 125.

127 ಮತಂಗ, ಉ. ಗ್ರಂ., ಪು. 8. ಸಿಂಹಭೂಪಾಲನು (ಉ. ಗ್ರಂ., ಪು. 83) 'ಭೇದಃ ಸ್ವಲಕ್ಷಣಾನಾಂ' ಎಂದು ಪಠಿಸಿರುವುದು ಅಷ್ಟು ಪ್ರಶಸ್ತವಾಗಿಲ್ಲ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತಋಷಿಚ್ಛಂದೋರಸ ಪ್ರಕರಣ

ನಿರ್ದಿಷ್ಟವಾದ ಸ್ಥಾನದಲ್ಲಿ ಪೂರ್ವಾಪರಸಂಬಂಧವಿಲ್ಲದೆ, ನಾದದ ಒಂದು ಬಿಂದುವಿನಂತೆ, ಅಂತರ ಅಥವಾ ಪ್ರಮಾಣದ ಉಪಾಧಿಯಿಲ್ಲದೆ ಉಂಟಾಗುವ ಶಬ್ದಕ್ಕೆ ಧ್ವನಿಯೆಂದು ಸಂಗೀತಶಾಸ್ತ್ರದಲ್ಲಿ ಪರಿಭಾಷೆ. ಇದೇ ಹಿಂದುಮುಂದಿನ ಧ್ವನಿಯ ಸಂಬಂಧದಿಂದ ಶ್ರವಣೇಂದ್ರಿಯವು ಗ್ರಹಿಸಲು ಆವಶ್ಯಕವಾದಷ್ಟು (ಎಂದರೆ, ಅದಕ್ಕಿಂತ ಕಡಿಮೆಯಾದರೆ ಕಿವಿಯು ಗ್ರಹಿಸಲಾರದು ಎನ್ನುವಷ್ಟು ಅತ್ಯಲ್ಪ) ಪ್ರಮಾಣದಿಂದ ವಿವಕ್ಷಿತವಾದರೆ ಶ್ರುತಿಯೆನಿಸಿಕೊಳ್ಳುತ್ತದೆ. ಇದೇ ಧ್ವನಿಗೂ ಶ್ರುತಿಗೂ ಇರುವ ಸಂಬಂಧವೆಂದು ವಿಶ್ವಾವಸುವು ಹೇಳುತ್ತಾನೆ :

ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್ | 117

ಧ್ವನಿಯೆಂಬುದಕ್ಕೆ ಇದೇ ಅರ್ಥವು ಚತುರನು ಹೇಳುವ

ಉಚ್ಚೈಸ್ತರೋ ಧ್ವನೀ ರೂಕ್ಷೋ ವಿಜ್ಞೇಯೋ ವಾತಜೋ ಬುಧೈಃ | 128

ಎಂದು ಮುಂತಾದ ಮಾತುಗಳಲ್ಲಿಯೂ ಸೂಚಿತವಾಗಿದೆ. ಮತಂಗನ ಅಭಿಪ್ರಾಯದಲ್ಲಿಯೂ ಧ್ವನಿವಿಶೇಷವೇ ಶ್ರುತಿ. ಧ್ವನಿಯು ಮತ್ತೊಂದು ಧ್ವನಿಯಿಂದ ವಿಶೇಷವೆಂದು-ಎಂದರೆ ಭಿನ್ನವೆಂದೂ, ವಿದೃಶವೆಂದೂ-ತೋರಿಸುವ ಅಂತರವೇ ಶ್ರುತಿ : ' ಶ್ರುತೀನಾಂ . . . ಧ್ವನಿವಿಶೇಷಾಣಾಂ ಆನಂತ್ಯಂ . . . ' 129. ಧ್ವನಿಯೇ ರಾಗಜನಕವಾದಾಗ ಸ್ವರವಾಗುತ್ತದೆಂದು ಕೋಹಲನು ಹೇಳುತ್ತಾನೆ : ' ಧ್ವನೀ ರಕ್ತಃ ಸ್ವರಃ ಸ್ಮೃತಃ ' 130. ಶಾರ್ಙ್ಗದೇವನೂ ಸಹ ನಾದವು ಇಪ್ಪತ್ತೆರಡು ವಿಧಗಳಾಗಿ ಶ್ರುತಿಗಳೆಂದು ಗೋಚರಿಸುತ್ತವೆಂದೂ-' ತಸ್ಯ (ನಾದಸ್ಯ) ದ್ವಾವಿಂಶತಿರ್ಭೇದಾಃ'-ಮಾರುತವು ನಾಭಿ ಹೃತ್ ಕಂಠ ಮೂರ್ಧ ಮುಖಗಳಲ್ಲಿ ಧ್ವನಿಯು ಆವಿರ್ಭವಿಸುವಂತೆ ಮಾಡುತ್ತದೆಂದೂ-' (ಮಾರುತಃ) ನಾಭಿಹೃತ್ಕಂಠಮೂರ್ಧಾಸ್ಯೇಷು ಆವಿರ್ಭಾವಯತಿ ಧ್ವನಿಮ್ '-ಹೇಳಿದ್ದಾನಷ್ಟೆ. ಅಲ್ಲದೆ ಧ್ವನಿಯನ್ನು ಉತ್ಪತ್ತಿಸ್ಥಾನಗಳೊಡನೆ ಸೇರಿಸಿರುವುದರಿಂದ ಈ ಶಬ್ದವು ಕೇವಲ ಸ್ಥಾನದ್ಯೋತಕವೆಂದು ಶಾರ್ಙ್ಗದೇವನು ಸೂಚಿಸುತ್ತಿದ್ದಾನೆ. ಆದುದರಿಂದ ಅವನು ಶ್ರುತಿ, ಧ್ವನಿಗಳಲ್ಲಿನ ಈ ಭೇದವನ್ನು ವಿವಕ್ಷಿಸಿದ್ದಾನೆಂದು ತಿಳಿಯಬೇಕು. ಆದರೂ ಶ್ರುತಿಯ ಲಕ್ಷಣವನ್ನು ಹೇಳುವಾಗ ಧ್ವನಿಯನ್ನೂ ಅದರೊಡನೆ ಸಂಬಂಧಿಸಿರುವುದರಲ್ಲಿ ಒಂದು ವಿಶೇಷಾರ್ಥವಿದೆ. ಧ್ವನಿಯು ಅಂತರ, ಪ್ರಮಾಣ ಮೊದಲಾದ ಉಪಾಧಿಗಳಿಂದ ನಿರ್ಬಂಧಿತವಾಗದೆ ಯಾವ ಸ್ಥಾನದಲ್ಲಿ ಬೇಕಾದರೂ ಗೋಚರವಾಗಬಹುದಾದ ನಾದಬಿಂದುವೆಂಬ ಪಕ್ಷವನ್ನು ಇಲ್ಲಿ ಗ್ರಹಿಸಿದರೆ ಎರಡು ಶ್ರುತಿಗಳ ಮಧ್ಯದ ಅಂತರಾಳದಲ್ಲಿ ಎಷ್ಟುಬೇಕಾದರೂ ಧ್ವನಿಗಳನ್ನು ಇಡಬಹುದು. ಆಗ ' ಧ್ವನ್ಯಂತರಾಶ್ರುತೇಃ ' ಎಂಬ ಮಾತು ನಿರರ್ಥಕವಾಗುತ್ತದೆ. ಆದುದರಿಂದ ರಕ್ತಿಯನ್ನು ಪಡೆದಿರುವ ಧ್ವನಿಯೇ ಸ್ವರ, ಈ ಸ್ಥಾನದಲ್ಲಿರುವಂತಹುದು ಎಂಬ ಕೋಹಲಮತವನ್ನು ಅನುಸರಿಸಿ ಸ್ವರತ್ವವುಳ್ಳ ಬೇರೆ ಧ್ವನಿಯು ಕೇಳಿಸದಿರುವಂತಹ ಸಾಮೀಪ್ಯದಲ್ಲಿ ಇರುವುದೇ ಶ್ರುತಿ ಎಂಬ ಅರ್ಥವನ್ನು ಗ್ರಹಿಸಬೇಕು.

ಹೀಗೆ ಮಾಡಿದರೆ ಒಂದು ಶಂಕೆಯು ಉದ್ಭವಿಸುತ್ತದೆ. ಮೇಲೆ ಹೇಳಿದ ಅರ್ಥದಲ್ಲಿ, ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿ ಲೆಕ್ಕವಿಲ್ಲದಷ್ಟು ಧ್ವನಿಗಳು ಹುಟ್ಟುತ್ತವೆ ;—ಇವುಗಳನ್ನೇ ಶ್ರುತಿಗಳೆಂದು ತಿಳಿದು ಶ್ರುತಿಗಳ ಆನಂತ್ಯ

---

128 ಚತುರ, ಉದ್ಧೃತಿ, ಮತಂಗ, ಉ. ಗ್ರಂ., ಪು. 5. ಇದೇ ಶ್ಲೋಕಗಳನ್ನು ತುಂಬುರುವಿನದೆಂದು ಕಲ್ಲಿನಾಥನು ' ತಥಾ ಚಾಹ ತುಂಬುರುಃ— ' ಎಂದು ಹೇಳಿ ಉದ್ಧರಿಸುತ್ತಾನೆ. ಕಲ್ಲಿನಾಥ, ಉ. ಗ್ರಂ., ಪು. 71. ಇವೆರಡೂ ಪರ್ಯಾಯನಾಮಗಳೋ ಅಥವಾ ಪೌರ್ವಾಪರ್ಯದಿಂದ ಒಬ್ಬನು ಇನ್ನೊಬ್ಬನನ್ನು ಉದ್ಧರಿಸಿದ್ದಾನೆಯೋ ತಿಳಿಯುವಂತಿಲ್ಲ.

129 ಮತಂಗ, ಉ. ಗ್ರಂ., ಪು. 7.

130 ಕೋಹಲ, ಉದ್ಧೃತಿ, ಮತಂಗ, ಉ. ಗ್ರಂ., ಪು. 13.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ವನ್ನು ಹೇಳಿದ ಪೂರ್ವಾಚಾರ್ಯರು ನಮ್ಮಲ್ಲಿದ್ದರೆಂಬುದನ್ನು ಮತಂಗನು ತಿಳಿಸುತ್ತಾನೆ,—ಆದರೆ ಇವುಗಳೆಲ್ಲ ಶ್ರುತಿಗಳಲ್ಲ, ಇವುಗಳಲ್ಲಿ ಸ್ವರತ್ವವುಳ್ಳ ಎಂದರೆ ವಾಯುಸ್ಪರ್ಶದಿಂದ ಅನುರಣನಾದಿ ವ್ಯಾಪಾರವೂ ರಕ್ತಿಧರ್ಮವೂ ಉಂಟಾಗುವ ಸ್ಥಾನಗಳು ಪರಿಮಿತವೂ ನಿಯತವೂ ಆಗಿವೆ. ಇವುಗಳೇ ಶ್ರುತಿಗಳು ; ಇವುಗಳ ಸಂಖ್ಯೆ ಇಪ್ಪತ್ತೆರಡು ಎಂಬ ಅಭಿಪ್ರಾಯವು ಇಲ್ಲಿ ಹುಟ್ಟುತ್ತದೆ. ಇಲ್ಲಿ ಶಂಕೆಯೇನೆಂದರೆ, ಈ ಇಪ್ಪತ್ತೆರಡೂ ಸ್ವರತ್ವವನ್ನು ಪಡೆಯಬಹುದಾದ ಸ್ಥಾನಗಳೇ ಆಗಿದ್ದರೆ ಸ್ಥಾಯಿಯಲ್ಲಿ ಇಪ್ಪತ್ತೆರಡು ಸ್ವರಗಳೇಕಿಲ್ಲ? ಸ್ವರವಿಕೃತಿಗಳಿಗೂ ಸ್ವರತ್ವವಿದೆಯೆಂದಮೇಲೆ ಅವುಗಳನ್ನೂ ಪ್ರತ್ಯೇಕವಾಗಿ ಸ್ವರಗಳೆಂದೇ ಏಕೆ ಎಣಿಸಬಾರದು ? ಉದಾಹರಣೆಗೆ ಪ್ರಾಚೀನ ಸಂಗೀತದಲ್ಲಿ ಮಧ್ಯಮ ಗ್ರಾಮದ ಪಂಚಮವನ್ನು ಪಂಚಮದ ವಿಕೃತಿಯೆಂದು ತಿಳಿಯುವುದರ ಬದಲು ಪ್ರತ್ಯೇಕ ಸ್ವರವೆಂದೇ ಏಕೆ ಭಾವಿಸಬಾರದು ? ಅಂತರ ಗಾಂಧಾರ ಕಾಕಲೀ ಸ್ವರಗಳನ್ನು ಬೇರೆ ಸ್ವರಗಳೆಂದು ಏಕೆ ತಿಳಿಯಬಾರದು ?

ಇಲ್ಲಿ ಸ್ವರತ್ವವು ಇಪ್ಪತ್ತೆರಡು ಶ್ರುತಿಗಳಿಗೆ ಇರುತ್ತದೆ ಎಂದರೆ ಇವುಗಳಲ್ಲಿ ಪ್ರತಿಯೊಂದರಲ್ಲೂ ಸ್ವರವು ರಕ್ತಿಧರ್ಮದಲ್ಲಿ ಪ್ರಕಟವಾಗಬಲ್ಲುದು ಎಂದು ತಿಳಿಯಲಾಗದು. ಏಕೆಂದರೆ ನೈರಂತರ್ಯವು ಇದಕ್ಕೆ ಬಾಧಕವಾಗುತ್ತದೆ. ಸ್ವರತ್ವವು ಶ್ರುತಿಗಳ ನೈರಂತರ್ಯದಲ್ಲಿ ಎಂದರೆ ನೆರೆಹೊರೆಯ ಶ್ರುತಿಗಳಲ್ಲಿ ಉಂಟಾಗಲಾರದು. ಇದನ್ನು ಅಭಿನವಗುಪ್ತಾಚಾರ್ಯನು ಬಹು ಸ್ಪಷ್ಟವಾಗಿ ಹೇಳಿದ್ದಾನೆ ; ಸ್ವರಗಳಲ್ಲಿ ಪ್ರತಿಯೊಂದಕ್ಕೂ ಇಷ್ಟಿಷ್ಟು ಶ್ರುತಿಗಳೆಂಬ ಸಂಖ್ಯಾನಿಯಮವು ಇರುವುದಾದರೂ ಇದಕ್ಕಾಗಿಯೇ :

ತತಃ ಸ್ವರೇ ತತ್ಯತಶ್ಚ ಶ್ರುತಿಸಂಖ್ಯಾ ನಿಯಮಃ। ಅತ ಏವ ನಿರಂತರಧ್ವನ್ಯಂಶಶ್ರವಣೇ ವಿರೂಪಸ್ವರಶ್ರವಣಮ್ ।[131]

ಆದುದರಿಂದ ದ್ವಾವಿಂಶತಿಶ್ರುತಿಗಳ ಸ್ಥಾನಗಳಲ್ಲಿ ಪ್ರತಿಯೊಂದರಲ್ಲಿಯೂ ಸ್ವರವು ಉಂಟಾಗಲಾರದು. ಅಲ್ಲದೆ ಶ್ರುತಿಸಂಖ್ಯಾನಿಯಮವನ್ನು ಪೂರ್ವಾಚಾರ್ಯರು ವಿಧಿಸಿರುವುದು ಆಯಾ ಸ್ವರದ ಸ್ವರೂಪವನ್ನು ತಿಳಿಸುವುದಕ್ಕಾಗಿಯೇ. ಹೀಗೆ ವಿವಿಧ ಸಂಖ್ಯೆಯ ಶ್ರುತಿಗಳು ವಿವಿಧ ಸ್ವರಗಳ ಸ್ವರೂಪವನ್ನು ತಿಳಿಸುವುದೆಂದರೆ, ಸಮುಚ್ಚಯಭಾವದಲ್ಲಿ ತೋರಿಸುತ್ತವೆ ಎಂದು ತಿಳಿಯಬೇಕು. ಉದಾಹರಣೆಗೆ, ಷಡ್ಜವು ನಾಲ್ಕು ಶ್ರುತಿಗಳನ್ನು ಉಳ್ಳದ್ದೆಂದರೆ ನಾಲ್ಕು ಶ್ರುತಿಗಳೂ ಒಟ್ಟಿಗೆ ಒಂದೇ ಕಾಲದಲ್ಲಿ ಷಡ್ಜದಲ್ಲಿ ಗೋಚರಿಸುತ್ತವೆಂದಾಗಲೀ, ಷಡ್ಜವನ್ನು ಉಚ್ಚರಿಸಬೇಕಾದರೆ ನಾಲ್ಕು ಶ್ರುತಿಗಳನ್ನು ಒಟ್ಟಿಗೇ ಹಾಡಬೇಕೆಂದಾಗಲೀ, ನಾಲ್ಕು ಶ್ರುತಿಗಳೂ ಷಡ್ಜದ ಅವಯವಗಳೆಂದಾಗಲೀ, ಷಡ್ಜವು ನಾಲ್ಕು ಶ್ರುತಿಗಳ ಸಂಚಯ (ಒಟ್ಟಿಗೆ ಸಂಗ್ರಹಿಸಿ ಒಂದು ಮಾಡಿದುದು)ವೆಂದಾಗಲೀ ಅರ್ಥವಲ್ಲ. ಏಕೆಂದರೆ ಅದರ ನಾಲ್ಕು ಶ್ರುತಿಗಳಲ್ಲಿ ಒಂದಾದಮೇಲೊಂದು ಎಂಬ ಕ್ರಮಿಕತ್ವವು ಇದೆಯೇ ಹೊರತು ಯೌಗಪದ್ಯವಿಲ್ಲ ಎಂದರೆ ಒಂದೇ ಕಾಲದಲ್ಲಿ ಅವುಗಳಿಗೆ ಅಸ್ತಿತ್ವ, ಗೋಚರಗಳಿಲ್ಲ. ಈ ಮಾತನ್ನಾದರೂ ಅಭಿನವಗುಪ್ತನೇ ಹೇಳಿದ್ದಾನೆ :

ನ ಚಾವಯವೈಃ ಸ್ವರಃ, ನಾಪಿ ಸಂಚಯಃ, ಯೌಗಪದ್ಯಾಭಾವಾತ್ ।[132]

ಶ್ರುತಿಗಳಲ್ಲಿ ಕ್ರಮಿಕತ್ವವಿದ್ದರೂ ನೈರಂತರ್ಯವಿರುವುದರಿಂದಲೂ, ಯಾವ ಶ್ರುತಿಯಲ್ಲೆಂದರೆ ಅದರ ಸ್ಥಾನದಲ್ಲೇ ಸ್ವರವು ಪ್ರಕಟವಾಗದಿರುವುದರಿಂದ ಯೌಗಪದ್ಯವನ್ನು ಕೇವಲ ಅಭಿಮಾನದಿಂದ, ಎಂದರೆ ಬೇಕಾದರೆ, ಹೇಳಿಕೊಳ್ಳಬಹುದೇ ಹೊರತು ವಾಸ್ತವವಾಗಿ ಯೌಗಪದ್ಯವಿಲ್ಲ. ಹಾಗಾದರೆ ಯೌಗಪದ್ಯವಿಲ್ಲದಿದ್ದರೆ ಸ್ವರವು ತನ್ನ ಕಡೆಯ ಶ್ರುತಿಯಲ್ಲಿ ಪ್ರಕಟವಾಗುತ್ತದೆ ಎಂದೇಕೆ ಹೇಳಬಾರದು ? ಉದಾಹರಣೆಗೆ ಋಷಭಕ್ಕೆ ಮೂರು ಶ್ರುತಿಗಳು ಎನ್ನುವುದರ ಬದಲು ಮೂರನೆಯ ಶ್ರುತಿಯಲ್ಲಿ ರಿಷಭ ಎಂದೇಕೆ ತಿಳಿಯಬಾರದು? ಇದೂ ತಪ್ಪಾಗುತ್ತದೆ.

131 ಅಭಿನವಗುಪ್ತ, ಉ. ಗ್ರಂ., ಪು. 16. 132 ಅದೇ ಗ್ರಂಥ, ಪು. 17.

ಅಭಿನವಗುಪ್ತನು ವಿಶಾಖಿಲಾಚಾರ್ಯನೇ ಮೊದಲಾದ ಪೂರ್ವಾಚಾರ್ಯರಿಂದ ಉದ್ಧರಿಸಿ ಈ ಪಕ್ಷವನ್ನು ನಿರಾಕರಿಸುತ್ತಾನೆ:

ತತ ಏವ ತಿಸ್ರಃ ಶ್ರುತಯಃ ರಿಷಭ ಇತ್ಯಾದಿ ವಕ್ಷ್ಯತೇ, ನ ತು ತೃತೀಯಾ ಶ್ರುತಿರಿತಿ । ತತ್ರ ವಿಶಾಖಿಲಾಚಾರ್ಯಪ್ರಭೃತಿಭಿಃ, "ಸ್ವಸಂವೇದ್ಯೋ ಪರಮೋ ಶ್ರುತಿಧಾಮ್ನಿ ಸಮವಧಾನಂ ಜಪವದ್ದೀಯಮಾನಂ ವಿಶಿಷ್ಟಾದೃಷ್ಟಾಯ ಪ್ರಯೋಕ್ತುರ್ಭವತಿ" ಇತಿ ದರ್ಶಿತಮ್ । ತದುಕ್ತಂ ಭಟ್ಟತೋ(? ತೌ)ತೇನ—"ಶ್ರುತಿಃ ಸ್ವರಃ ಸ್ವಸಂವೇದ್ಯಾ" ಇತಿ ಗಾನೇ ಶ್ರೋತೄಣಾಂ ಸರ್ವತ್ರಾಪಿ ಸ್ವರೂಪಾವಭಾಸಃ । ತದಾಹ—"ಶ್ರೂಯಮಾಣಾಸ್ತು ಗೃಹ್ಯಂತೇ ಗಂಭೀರಾ ಇವ" ।[132]

ಸ್ವಸಂವೇದ್ಯ ಎಂದರೆ ತನ್ನಿಂದ ಮಾತ್ರ ತಿಳಿಯಲ್ಪಡುವಂತಹುದು. ಬೇರೆ ಯಾವುದರಿಂದಲೂ ವರ್ಣಿಸಲಾಗದ, ಅದರ ಸ್ವರೂಪವನ್ನು ಅದರ ಅಧ್ಯಯನ, ಅಭ್ಯಾಸಗಳಿಂದಲೇ ತಿಳಿಯಬೇಕಾದ, ಬ್ರಹ್ಮವಸ್ತುವಿನಲ್ಲಿ ಈ ಶಬ್ದವನ್ನು ಸಾಮಾನ್ಯವಾಗಿ ಹೇಳುತ್ತಾರೆ. ಇಲ್ಲಿ ರಿಷಭವು ಸ್ವಸಂವೇದ್ಯವೆಂದರೆ ಮೂರು ಶ್ರುತಿಗಳುಳ್ಳ ಇತರ ಯಾವುದೇ ಸ್ವರವನ್ನು, ಉದಾಹರಣೆಗೆ ಸಾಧಾರಣ ಗಾಂಧಾರ, ಶುದ್ಧಧೈವತ, ಕೈಶಿಕಿನಿಷಾದ ಮುಂತಾದವುಗಳನ್ನು ತಿಳಿದು ಅದರ ದೃಷ್ಟಾಂತದಿಂದ ಇದೂ ಹಾಗೆಯೇ ಎಂದು ತಿಳಿಯಬಹುದಾದ ಸ್ವರವಲ್ಲ; ಕೇವಲ ರಿಷಭವನ್ನು ಪದೇ ಪದೇ ಅಭ್ಯಾಸಮಾಡಿ ಅದರ ಸ್ವಭಾವವನ್ನೂ ಸ್ವರೂಪವನ್ನೂ ತಿಳಿಯಬೇಕು, ಇತರ ಯಾವ ಸ್ವರಕ್ಕೂ ಇಲ್ಲದ ವಿಶಿಷ್ಟವೂ ಅದೃಷ್ಟವೂ, ಎಂದರೆ ಸ್ಥೂಲ ಗೋಚರವಿಲ್ಲದ, ಹೀಗೆಯೇ ಎಂದು ವರ್ಣಿಸಿ ಹೇಳಲಾಗದ, ಸ್ವಭಾವ ಸ್ವರೂಪಗಳು ಅದಕ್ಕಿರುತ್ತವೆ, ಎಂದು ಅರ್ಥ. ಇವುಗಳು ಅದಕ್ಕೆ ಸಿದ್ಧಿಸುವುದು ಅದು ತನ್ನ ಕಡೆಯ ಶ್ರುತಿಯಲ್ಲಿ ಪ್ರಕಟವಾದಾಗ; ಆದರೆ ಕಡೆಯ ಶ್ರುತಿಯೊಂದೇ ಇವುಗಳನ್ನು ಉಂಟುಮಾಡಲಾರದು. ಹಿಂದೆ ಬೇರೆ ಬೇರೆ ಶ್ರುತಿಗಳು ಇದ್ದಾಗ ತಾನೇ 'ಕೊನೆಯ ಶ್ರುತಿ' ಎಂಬ ಸಂಬಂಧವು ಉಂಟಾಗುವುದು! ಈ ಪರಮತ್ವದಲ್ಲಿ ಉಳಿದ ಶ್ರುತಿಗಳು ಸೇರಿಕೊಂಡು ಒಟ್ಟಿನಲ್ಲಿ ಆಯಾ ಸ್ವರದ ವೈಶಿಷ್ಟ್ಯವನ್ನು ಉಂಟುಮಾಡುತ್ತವೆ. ಈ ವೈಶಿಷ್ಟ್ಯವು ತಿಳಿಯಬೇಕಾದರೆ ಜಪದಂತೆ ಅವಧಾನದಿಂದ, ಎಂದರೆ ಏಕಾಗ್ರ ಚಿತ್ತದಿಂದ, ಪುನಃ ಪುನಃ ಸಾಧಕನು ಸ್ವರವನ್ನು ಅಭ್ಯಾಸಮಾಡಬೇಕು. ವಿಶಾಖಿಲಾಚಾರ್ಯನ 'ಸ್ವಸಂವೇದ್ಯೋ ಪರಮೋ ಶ್ರುತಿಧಾಮ್ನಿ ಸಮವಧಾನಂ ಜಪವದ್ದೀಯಮಾನಂ ವಿಶಿಷ್ಟಾದೃಷ್ಟಾಯ ಪ್ರಯೋಕ್ತುರ್ಭವತಿ' ಎಂಬ ಮಾತಿನ ಅರ್ಥವು ಇದು. ಶ್ರುತಿಯು ಸ್ವರವಾಗಿ ಸ್ವಸಂವೇದ್ಯತೆಯನ್ನು ಪಡೆಯುತ್ತದೆ ಎಂಬ ಭಟ್ಟತೌತನ ಮಾತಿಗೂ ಇದೇ ಅರ್ಥ. ಈ ಕಾರಣದಿಂದಲೇ ಎಲ್ಲಾ ಶ್ರೋತೃಗಳಿಗೂ ಅದು ಇಂತಹ ಸ್ವರವೆಂದು ತಿಳಿಯುವುದು. ಶ್ರುತಿ-ಸ್ವರಗಳ ಸಂಬಂಧದ ಈ ಪ್ರಮೇಯವು ವಿಶಾಖಿಲಾಚಾರ್ಯನಿಂದ ಹಿಡಿದು ಅಭಿನವಗುಪ್ತನಿಗೆ ನಾಟ್ಯಶಾಸ್ತ್ರದಲ್ಲಿ ಪ್ರತ್ಯಕ್ಷ ಗುರುವಾದ ಭಟ್ಟತೌತನವರೆಗೂ ಅನುಸ್ಯೂತವಾಗಿಯೇ ಬಂದಿದೆಯೆಂಬುದು ಗಮನಾರ್ಹ.

ಹೀಗೆ ಸ್ವರಕ್ಕೆ ಸ್ವಸಂವೇದ್ಯತೆಯುಂಟಾಗುವುದು ಅದರ ಎಲ್ಲಾ ಶ್ರುತಿಗಳನ್ನೂ ಸಮುಚ್ಚಯಭಾವದಲ್ಲಿ ಪಡೆದಿರುವುದರಿಂದ. ಅದಕ್ಕೆಂದೇ ಭರತ, ಅಭಿನವಗುಪ್ತರ ಶ್ರುತಿನಿದರ್ಶನಕ್ರಮದಲ್ಲಿ ಸಾರಣಾಪ್ರಯೋಜನಗಳನ್ನು ಹೇಳುವಾಗ ಸ್ವರ-ಶ್ರುತಿ ಸಂಬಂಧದಲ್ಲಿ ಶ್ರುತಿಜಾತಿಯ ಈ ಅನುಮಿತಿಯನ್ನು ನಾನು ಸ್ವತಂತ್ರವಾಗಿಯೇ ಪಡೆದಿದ್ದೇನೆ. ರಿಷಭದ ಮೂರು ಶ್ರುತಿಗಳಲ್ಲಿ ಪ್ರತಿಯೊಂದೂ ವಿಶಿಷ್ಟ ಪ್ರಮಾಣವನ್ನೂ ಸ್ವಭಾವವನ್ನೂ ಪಡೆದಿರುತ್ತದೆ. ಈ ಮೂರು ಶ್ರುತಿಗಳಲ್ಲಿ ಮೊದಲನೆಯ ಮತ್ತು ಎರಡನೆಯ ಶ್ರುತಿಗಳು ಸೇರಿದರೆ (ದ್ವಿಶ್ರುತಿಕಗಳಾದ) ನಿಷಾದ ಗಾಂಧಾರಗಳ ಸ್ವರೂಪವನ್ನು ಪಡೆಯುವುದಿಲ್ಲ. ಎಂದರೆ ರಿಷಭದಲ್ಲಿ ಕಡೆಯ ಶ್ರುತಿಯನ್ನು ಕಳೆದರೆ ಗಾಂಧಾರವೂ, ಗಾಂಧಾರಕ್ಕೆ ಒಂದು ಶ್ರುತಿಯನ್ನು ಸೇರಿಸಿದರೆ ರಿಷಭವೂ ಹುಟ್ಟುವುದಿಲ್ಲ. ರಿಷಭದ ಈ ಎರಡು ಶ್ರುತಿಗಳ ಮೊತ್ತವು ಸ್ಥಾಯಿಯಲ್ಲಿ ಅನನ್ಯಸದೃಶವಾದದು. ಹಾಗೆಯೇ ರಿಷಭದ ಮೂರನೆಯ ಶ್ರುತಿಯೂ

ಸೇರಿದಾಗ (ಈ ಶ್ರುತಿಯ ಪ್ರಮಾಣವೂ ಸ್ವಭಾವವೂ ಪುನಃ ಅನನ್ಯಸದೃಶವಾದುದೇ), ಈ ಮೂರು ಶ್ರುತಿಗಳ ಅಂತರಕ್ಕೆ, ಎಂದರೆ ಸಮುಚ್ಚಯದ ಸ್ವರೂಪಕ್ಕೆ ರಿಷಭತ್ವವು ಪ್ರಾಪ್ತವಾಗುತ್ತದೆ. ಆದರೆ ಇವುಗಳಲ್ಲಿ ಕ್ರಮಿಕತ್ವವೇ ಸಿದ್ಧವಾಗುತ್ತದೆಯೇ ಹೊರತು ಯೌಗಪದ್ಯವಲ್ಲ. ಏಕೆಂದರೆ ನೈರಂತರ್ಯದಲ್ಲಿ, ಧ್ವನ್ಯಂತರಾಶ್ರುತಿಯಲ್ಲಿ ಇವುಗಳನ್ನು ಪಡೆಯುತ್ತಿದ್ದೇವೆಂಬ ಶಾರ್ಙ್ಗದೇವನ ಲಕ್ಷಣೋಕ್ತಿಯನ್ನು ಮರೆಯಬಾರದು. ಇದೇ ಸಂದರ್ಭದಲ್ಲಿ ಇನ್ನೊಂದು ತಾರ್ಕಿಕದೋಷಕ್ಕೂ ಗುರಿಯಾಗಬಾರದೆಂದು ಅಭಿನವಗುಪ್ತನು ಎಚ್ಚರಿಸುತ್ತಾನೆ. ಈ ಶ್ರುತಿಗಳು ಕಾಲಾನು ಕ್ರಮದಿಂದ ರಿಷಭದ ಅಂತರವನ್ನು ಎಂದರೆ ಸ್ವರೂಪವನ್ನೂ ಪ್ರಮಾಣವನ್ನು ಉಂಟುಮಾಡಿದರೂ ಒಂದನೆಯ ಶ್ರುತಿಯು ತನ್ನ ಸ್ವರೂಪ, ಸ್ವಪ್ರಮಾಣಗಳ ಸಂಸ್ಕಾರವನ್ನು ಎರಡನೆಯದರಲ್ಲಿಯೂ ಎರಡನೆಯದು ತನ್ನ ವೈಯಕ್ತಿಕ ಮತ್ತು ಮೊದಲನೆಯ ಶ್ರುತಿಯಿಂದ ಸ್ವೀಕರಿಸಿದ ಸಂಸ್ಕಾರಗಳ ಮೊತ್ತವನ್ನು ಮೂರನೆಯದರಲ್ಲಿಯೂ ಅರ್ಪಿಸಿ ರಿಷಭತ್ವವನ್ನು ಯೌಗಪದ್ಯದಲ್ಲೇ ಉಂಟುಮಾಡುತ್ತವೆ, ಎಂಬುದನ್ನು ಯೌಗಪದ್ಯವೆಂಬ ತತ್ತ್ವದ ಮೇಲಿನ ಅಭಿಮಾನಕ್ಕಾಗಿ ಮಾತ್ರ ಹೇಳಬೇಕೇ ಹೊರತು ವಾಸ್ತವವಾಗಿ ಹಾಗೆ ಇರುವುದಿಲ್ಲ; ಈ ಮೂರರಲ್ಲಿ ಪ್ರತಿಯೊಂದು ಶ್ರುತಿಯೂ ಕ್ರಮಿಕತ್ವವನ್ನೂ ತನ್ನ ಸ್ವರೂಪ, ಸ್ವಭಾವಾದಿಗಳನ್ನೂ ಉಳಿಸಿಕೊಂಡಿರುವುದರಿಂದಲೇ ಅದಕ್ಕೆ ರಿಷಭತ್ವವು ಉಂಟಾಗುತ್ತದೆ ಎಂಬ ಭಾವವು ಅಭಿನವಗುಪ್ತನಿಂದ ಧ್ವನಿತವಾಗಿದೆ :

ಕ್ರಮಿಕತ್ವೇ ಽಪಿ ಹಿ ನೈರಂತರ್ಯಾತ್, ನಾಶುಭವಿಕೃತಾದ್ ಯೌಗಪದ್ಯಾಭಿಮಾನಃ, ಕ್ರಮಿಕಶ್ರುತಿಜನಿತ-ಸಂಸ್ಕಾರವಿಶೇಷೇ ಚಾನ್ಯೇ ಶ್ರುತಿಸ್ಥಾನೇ ಸ್ವರಸಮುದಾಯ ಇತ್ಯಾಸ್ತಾಂ ತಾವತ್ | 132

ಹೀಗೆ ಇಪ್ಪತ್ತೆರಡು ಶ್ರುತಿಗಳಲ್ಲಿಯೂ ಸ್ವರಗಳು ಏಕೆ ಹುಟ್ಟುವುದಿಲ್ಲವೆಂಬುದನ್ನೂ ಪ್ರತಿಯೊಂದು ಸ್ವರಕ್ಕೂ ಇಷ್ಟಿಷ್ಟೇ ಶ್ರುತಿಗಳೆಂಬ ನಿಯಮವೆಂಬುದನ್ನೂ ಶಾರ್ಙ್ಗದೇವನ 'ನಿರಂತರತಾ' ಮತ್ತು 'ಧ್ವನ್ಯಂತರಾಶ್ರುತೇಃ' ಎಂಬ ಮಾತುಗಳಿಂದ ಸಿದ್ಧಪಡಿಸಬಹುದು. ಇವೆಲ್ಲದರಲ್ಲಿಯೂ ಸ್ವರತ್ವದ ಪ್ರಾಪ್ತಿಯಾಗದಿದ್ದರೂ ಯಾವುದಾದರೊಂದು ಸ್ವರವು ತನಗೆ ಸಹಜವಾದ ನಿರ್ದಿಷ್ಟ ಸಂಖ್ಯೆಯ ಶ್ರುತಿಗಳಿಗೆ ಮುಂದಿನ ಸ್ವರದ ಒಂದನ್ನೋ ಎರಡನ್ನೋ ಸೇರಿಸಿಕೊಳ್ಳುವುದರಿಂದ ಅದಕ್ಕೆ ತನ್ನ ಸ್ವರೂಪ ಸ್ವಭಾವಗಳ, ಮುಂದಿನ ಸ್ವರದ ಸ್ವರೂಪ ಸ್ವಭಾವಗಳ, ವೈಶಿಷ್ಟ್ಯಗಳು ದೊರೆತು ಸಾಧಾರಣ್ಯವನ್ನು ಪಡೆಯುತ್ತದೆ. ಇದಕ್ಕೇ ವಿಕೃತಾವಸ್ಥೆಯೆಂದು ಹೆಸರು. ಇದಕ್ಕೆ ಕಾರಣಭೂತಗಳಾದ ಶ್ರುತಿಗಳ ಸಮುಚ್ಚಯವು ಪುನಃ ಅನನ್ಯಸದೃಶವಾದುದೇ ಆಗಿರುವುದರಿಂದ ಈ ವಿಕೃತ ಸ್ವರಕ್ಕೂ ಅದೃಷ್ಟವಾದ ವೈಶಿಷ್ಟ್ಯವು ಸಿದ್ಧಿಸಿ ಸ್ಥಾಯಿಯಲ್ಲಿ ಅನನ್ಯಸದೃಶವಾದ ವ್ಯಕ್ತಿತ್ವವನ್ನು ಪಡೆಯುತ್ತದೆ. ಆದರೂ ಸಾಧಾರಣ್ಯದಿಂದ ಉಂಟಾಗಿರುವ ಭಾವದಿಂದ ಅದಕ್ಕೆ ಪ್ರತ್ಯೇಕತೆಯು ಸಿದ್ಧಿಸಲಾರದು. ಅದು ತನ್ನ ವ್ಯಕ್ತಿತ್ವವನ್ನು ಪೂರ್ವಾಪರ ಸ್ವರಸ್ಥಾನಗಳಲ್ಲಿ ಅವಿನಾಭಾವದಿಂದ ಪಡೆದುಕೊಂಡಿರುವುದರಿಂದ ಸ್ವತಂತ್ರ ಸ್ವರದ ಸ್ವರೂಪವು ಸಿದ್ಧಿಸುವುದಿಲ್ಲ. ಆದುದರಿಂದಲೇ ಲಕ್ಷ್ಯದಲ್ಲಿ ಇವುಗಳನ್ನು ಪ್ರತ್ಯೇಕ ಸ್ವರಗಳೆಂದು ತಿಳಿಯುವುದಿಲ್ಲ; ಶಾಸ್ತ್ರದಲ್ಲಿ ಅಂತರಗಾಂಧಾರ, ಕಾಕಲಿನಿಷಾದ, ಪ್ರತಿಮಧ್ಯಮ ಮೊದಲಾದವುಗಳನ್ನು ಸ್ವತಂತ್ರ ಸ್ವರಗಳೆಂದು ವ್ಯವಹರಿಸುವುದಿಲ್ಲ.

ಇನ್ನು, ಸ್ಥಾಯಿಯ ವ್ಯಾಪ್ತಿಯಲ್ಲಿ ಇಪ್ಪತ್ತೆರಡು ಶ್ರುತಿಗಳು ಸ್ವರತ್ವದ ಸಾಧ್ಯತೆಯನ್ನು ಪಡೆಯುತ್ತವೆ ಎಂದಾದರೂ ಸಹ ಇವುಗಳಲ್ಲಿ ಐದರ ಸ್ಥಾನಗಳಲ್ಲಿ ಸ್ವರತ್ವವನ್ನು ಬಳಸುವುದಿಲ್ಲ. ಒಂದೊಂದು ರೀತಿಯ ಮೂರ್ಛನಾಕ್ರಮದಲ್ಲಿಯೂ ಐದೈದು ಶ್ರುತಿಸ್ಥಾನಗಳು ಸ್ವರಾಭಿವ್ಯಕ್ತಿಯಿಲ್ಲದೆ ಹಾಗೆಯೇ ಉಳಿದುಬಿಡುತ್ತವೆ. ಆದರೆ ಎಲ್ಲಾ ಮೂರ್ಛನಾಪದ್ಧತಿಗಳನ್ನೂ ಗಣನೆಗೆ ತೆಗೆದುಕೊಂಡರೆ ಇಪ್ಪತ್ತೆರಡು ಶ್ರುತಿಸ್ಥಾನಗಳೂ ಸ್ವರತ್ವವುಳ್ಳವುಗಳೆಂದು ತಿಳಿಯುತ್ತದೆ. ಇದನ್ನು ವಿಕೃತಸ್ವರಗಳ ವಿವೇಚನೆಯಲ್ಲಿ ಪುನಃ ಪ್ರಸ್ತಾಪಿಸಲಾಗುವುದು.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ರುತಿಯ ಲಕ್ಷಣವನ್ನು ಪೂರ್ವಾಚಾರ್ಯರು 'ಶ್ರೂಯಂತ ಇತಿ ಶ್ರುತಯಃ' ಎಂಬ ಸೂತ್ರದಿಂದ ಹೇಳಿದ್ದರು. ಸ್ವರತ್ವ, ಸ್ವರಪ್ರಮಾಣ, ಸ್ಥಾಯಿ, ಸ್ಥಾಯಿಯಲ್ಲಿ ಸ್ವರವ್ಯವಸ್ಥೆ ಇವೇ ಮುಂತಾದ ಪ್ರಾಥಮಿಕ ಶಾಸ್ತ್ರೀಯ ಪ್ರಮೇಯಗಳಿಗೆ ಶ್ರುತಿಯ ತತ್ತ್ವವು ಮೂಲದ್ರವ್ಯವಾದುದರಿಂದ ಇವೆಲ್ಲವನ್ನೂ ವಿವರಿಸಿ ವಿವೇಚಿಸಲು ಅಗತ್ಯ ವಾದ ಶ್ರುತಿಕಲ್ಪನೆಗಳನ್ನು, ಎಂದರೆ ನೈರಂತರ್ಯ, ಧ್ವನ್ಯಂತರಾಶ್ರುತಿಗಳನ್ನು ಕೇವಲ ಆಪ್ತೋಪದೇಶದಿಂದಲೋ ಅನುಮಿತಿಯಿಂದಲೋ ಪಡೆಯಬೇಕಾಗಿತ್ತು. ಸಂಗೀತಶಾಸ್ತ್ರವು ಶ್ರುತಿಯ ಈ ಲಕ್ಷಣಗಳನ್ನು ಪ್ರಕಟವಾಗಿ ಹೇಳಿರಲಿಲ್ಲ. ಈ ಕೊರತೆಯನ್ನು ನಿವಾರಿಸಿ ಈ ಶಾಸ್ತ್ರಕ್ಕೆ ಸುಭದ್ರವೂ ತಾರ್ಕಿಕವೂ ಆದ ತಳಹದಿಯನ್ನು ಹಾಕಿಕೊಟ್ಟವನು ಶ್ರೀ ಶಾರ್ಙ್ಗದೇವನೇ.

ಕಡೆಯದಾಗಿ, ರತ್ನಾಕರಕಾರನು ಶ್ರುತಿನಿದರ್ಶನಕ್ಕೆಂದು ಬಳಸಿರುವ ಎರಡು ತಂತ್ರಗಳನ್ನು ಇಲ್ಲಿ ಪ್ರಸ್ತಾಪಿಸ ಬೇಕು. ಈ ಎರಡೂ ಅವನ ಸ್ವಂತವೂ ಸ್ವತಂತ್ರವೂ ನವ್ಯವೂ ಆದ ಕಲ್ಪನೆಗಳೇ. ಇವೆರಡರಿಂದಲೂ ತನ್ನ ಪೂರ್ವಾ ಚಾರ್ಯರು ಹೇಳಿದ ಶ್ರುತಿನಿದರ್ಶನಕ್ರಮದಲ್ಲಿದ್ದ ಅಸ್ಪಷ್ಟತೆ ಮತ್ತು ಸಂದಿಗ್ಧತೆಗಳನ್ನು ನಿವಾರಿಸಲೆಳಸಿ ಶ್ರುತಿಯ ಕಲ್ಪನೆಯನ್ನೂ ಶಾಸ್ತ್ರದಲ್ಲಿ ಅದರ ಸ್ಥಾನಮಾನಗಳನ್ನೂ ಅವನು ನಿರ್ದುಷ್ಟಮಾಡಲು ಯತ್ನಿಸಿದ್ದಾನೆ.

ಇವುಗಳಲ್ಲಿ 'ತಾಸು ಚಾದಿಮಾ ಕಾರ್ಯಾ ಮಂದ್ರತಮಧ್ವಾನಾ' ಎಂಬುದು ಮೊದಲನೆಯದು. ಧ್ರುವವೀಣೆ ಮತ್ತು ಚಲವೀಣೆಗಳ ಮೊದಲನೆಯ ತಂತಿಯನ್ನು ಅತ್ಯಂತ ಕೆಳಮಟ್ಟದ ನಾದವಿರುವಹಾಗೆ ಶ್ರುತಿ ಮಾಡಬೇಕು ಎಂದು ಇದರ ಅರ್ಥ. ಇದನ್ನು ಎರಡು ಪಕ್ಷಗಳಲ್ಲಿ ಸ್ವೀಕರಿಸಬಹುದು : ಇಪ್ಪತ್ತೆರಡು ತಂತಿಗಳನ್ನು ಪರಿಗಣಿಸಿದಾಗ ಅವುಗಳೆಲ್ಲದರಲ್ಲಿಯೂ ಕನಿಷ್ಠವಾದಷ್ಟು ನೀಚವಾಗಿರಬೇಕು ಎಂಬುದು ಒಂದು. ಹೀಗೆ ಹೇಳಿದುದರಿಂದ ಆರೋಹ ಕ್ರಮದಲ್ಲಿ ಉಳಿದವುಗಳ ನಾದವನ್ನು ಹೆಚ್ಚಿಸುತ್ತ ಬರಬೇಕು ಎಂಬುದು ವಿವಕ್ಷೆ. ಇದನ್ನು ಸ್ಪಷ್ಟಪಡಿಸುವುದ ಕ್ಕಾಗಿಯೇ 'ಅಧರಾಧರತೀವ್ರಾಃ' ಎಂಬ ಮಾತನ್ನು ಹೇಳಿದೆ ಎಂದು ಈ ಪಕ್ಷದಲ್ಲಿ ಅರ್ಥವನ್ನು ಹೊರಡಿಸಬಹುದು. ಎಂದರೆ ಮೊದಲನೆಯ ತಂತಿಯನ್ನು ಸ್ವೇಚ್ಛೆಯಾಗಿ ಆರಿಸಿದ ಯಾವುದೇ ಧ್ವನಿಗೆ ಶ್ರುತಿಮಾಡಿ, ಇದನ್ನು ಆಧಾರ ಶ್ರುತಿಯನ್ನಾಗಿ ಪಡೆದು ಮುಂದಿನ ತಂತಿಗಳನ್ನು 'ಧ್ವನ್ಯಂತರಾಶ್ರುತೇಃ' ಎಂಬ ನಿಯಮವನ್ನು ಅನುಸರಿಸಿ ಶ್ರುತಿಮಾಡಬೇಕೆಂದಾಯಿತು. ಆದುದರಿಂದ, ಯಾವುದೇ ನಾದಮಟ್ಟದಲ್ಲಿ ಆಧಾರಸ್ವರವನ್ನು ತೆಗೆದುಕೊಂಡರೂ ಅದರಿಂದ ಅಷ್ಟಮಸ್ವರದಲ್ಲಿ ದೊರೆಯುವ ಸ್ಥಾಯಿಯ ವ್ಯಾಪ್ತಿಯಲ್ಲಿ ಇಪ್ಪತ್ತೆರಡು ಶ್ರುತಿಗಳ ಇಯತ್ತೆಯನ್ನು ಈ ಪ್ರಯೋಗದಿಂದ ಸಿದ್ಧಪಡಿಸಬೇಕೆಂದೆಂಬುದು ಇದರ ಸಾರಾಂಶ. ಹೀಗೆ, ಉಚ್ಚನೀಚಗಳ ತಾರತಮ್ಯವಿಲ್ಲದೆ ಯಾವುದೇ ಅಥವಾ ಎಲ್ಲಾ ನಾದವ್ಯಾಪ್ತಿಯಲ್ಲಿಯೂ ಈ ಶ್ರುತಿನಿದರ್ಶನವೂ ಅದರ ಫಲಿತಾಂಶವೂ ಅಬಾಧಿತ ವಾಗಿಯೇ ಇರುತ್ತವೆ ಎಂದಾಯಿತು. ಹೀಗೆ ಹೇಳಲು ಮೂಲಗ್ರಂಥದಲ್ಲಿ ಏನಾದರೂ ಸೂಚನೆಯಿದೆಯೇ? ಈ ಪಕ್ಷದ ಪ್ರಕಾರ ಇದೆ : ಧ್ರುವವೀಣೆ, ಚಲವೀಣೆಗಳಲ್ಲಿ ಸಮಾನನಾದವಿರುವಂತೆ ಗ್ರಂಥಕಾರನು ವಿಧಿಸಿದ್ದಾನೆಯೇ ಹೊರತು ತಂತಿಯ (ಲೋಹ, ನರ ಇತ್ಯಾದಿಯಾದ) ವಸ್ತು, ದಪ್ಪ, ಉದ್ದ, ಬಿಗಿ ಇವುಗಳು ಇಷ್ಟಿಷ್ಟೇ ಇರಬೇಕೆಂದು ವಿಧಿಸಿಲ್ಲ. ಈ ನಾಲ್ಕು ಅಂಶಗಳನ್ನು ಅಪೇಕ್ಷಿಸಿಯೇ ಆಯಾ ತಂತಿಯಲ್ಲಿನ ನಾದದ ನಿರಪೇಕ್ಷ ಮೌಲ್ಯವು ಕಂಪಮಾ ನದ ಮೂಲಕ ನಿರ್ಧರವಾಗುವುದು. ಇವುಗಳನ್ನು ಹೇಳಲಿಲ್ಲವಾದುದರಿಂದ ತನಗಿಷ್ಟಬಂದ ರೀತಿಯಲ್ಲಿ ಸಾಧಕನು ಈ ಅಂಶಗಳನ್ನು ಸೌಕರ್ಯವನ್ನು ಅವಲಂಬಿಸಿ ಇಟ್ಟುಕೊಳ್ಳಬಹುದೆಂದೂ ಆದುದರಿಂದ ಹೀಗೆ ಸ್ವೇಚ್ಛೆಯಿಂದ ಸ್ವೀಕರಿಸಿದ ಮೊದಲನೆಯ ತಂತಿಯ ನಾದವನ್ನೇ ಆಧಾರವೆಂದು ಎಣಿಸಿ ಅದಕ್ಕೆ ಸಾಪೇಕ್ಷವಾಗಿ, ನೈರಂತರ್ಯ, ಧ್ವನ್ಯಂತರಾಶ್ರುತಿ ಎಂಬ ನಿಯಮಗಳನ್ನು ಅನುಸರಿಸಿ ಉಳಿದ ಶ್ರುತಿಗಳನ್ನು ಪಡೆಯಬೇಕೆಂದೂ ಆಗುತ್ತದೆ. ಇದು ಪ್ರಬಲವಾದ ವಾದವೇ.

ಎರಡನೆಯ ಪಕ್ಷದಲ್ಲಿ ಹಾಗಲ್ಲ. 'ಮಂದ್ರತಮ' ಎನ್ನುವುದನ್ನು ನಿರಪೇಕ್ಷವಾಗಿಯೇ ತಿಳಿಯಬೇಕು.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇಪ್ಪತ್ತೆರಡು ತಂತಿಗಳಲ್ಲಿ ಕನಿಷ್ಠನಾದವುಳ್ಳದ್ದು ಎಂದಷ್ಟೇ ಅಲ್ಲದೆ ಅದರಲ್ಲಿ ಅದಕ್ಕಿಂತ ಕಡಿಮೆಯಾದ ನಾದವು ಹುಟ್ಟುವುದಿಲ್ಲವೆನ್ನುವಷ್ಟು ನೀಚವಾದ ನಾದವಿರಬೇಕು. ಎಂದರೆ ಈ ಮೊದಲನೆಯ ತಂತಿಯನ್ನು ಸಡಿಲಗೊಳಿಸುತ್ತಾ ಬರಬೇಕು. ಹೀಗೆ ಮಾಡಿದರೆ ಅದರ ನಾದವು ನೀಚವಾಗುತ್ತಾ ಬರುತ್ತದೆ. ಯಾವ ಸ್ಥಿತಿಯಲ್ಲಿ ತಂತಿಯು ತೀರ ಸಡಿಲವಾಗಿ, ಮಿಾಟಿದಾಗ ಸ್ವರವನ್ನೇ, ಎಂದರೆ ಏಕರೂಪವಾದ ಕಂಪನವನ್ನೂ ರಕ್ತಿಯನ್ನುಳ್ಳ ಧ್ವನಿಯನ್ನೂ ಕೊಡಲಾರದೋ ಅಲ್ಲಿಗೆ ನಿಲ್ಲಿಸಬೇಕು. ಈಗ ತಂತಿಯನ್ನು ಅತ್ಯಲ್ಪಪ್ರಮಾಣದಲ್ಲಿ ಸ್ವಲ್ಪಸ್ವಲ್ಪವಾಗಿ ಬಿಗಿ ಮಾಡಬೇಕು. ಹೀಗೆ ಮಾಡುವಾಗ ಮೊಟ್ಟಮೊದಲು ಎಲ್ಲಿ ಸ್ವರವು ಗೋಚರಿಸುತ್ತದೆಯೋ ಅಲ್ಲಿಗೆ ಬಿಗಿಮಾಡುವುದನ್ನು ನಿಲ್ಲಿಸಬೇಕು. ಇದೇ ಮೊದಲನೆಯ ತಂತಿಯ ನಾದ, ಇದೇ ಮಂದ್ರತಮಧ್ವನಿ. ಈ ಪಕ್ಷವನ್ನು ರತ್ನಾಕರದ ಇಬ್ಬರು ವ್ಯಾಖ್ಯಾನಕಾರರೂ ಗ್ರಹಿಸಿದ್ದಾರೆ. ಸಿಂಹಭೂಪಾಲನು ಹೀಗೆನ್ನುತ್ತಾನೆ :

ತಸ್ಯಾದ್ಯಾ ಮಂದ್ರತಮಧ್ವಾನಾ ಕರ್ತವ್ಯಾ । ಸ ಮಂದ್ರತಮೋ ಯಸ್ಮಾದ್ ಹೀನೋ ಮಂದ್ರೋ ಽನ್ಯೋ ನಾದೋ ರಂಜಕೋ ನ ನಿಷ್ಪದ್ಯತೇ । 122

ಕಲ್ಲಿನಾಥನು ಇದನ್ನು ವಿಸ್ತರಿಸಿ ಹೀಗೆ ಬರೆಯುತ್ತಾನೆ :

ಮಂದ್ರತಮಧ್ವಾನಾ ಽತಿಮಂದ್ರಸ್ವನಾ; ಉತ್ತರೋತ್ತರಾಪೇಕ್ಷಯಾ ಪೂರ್ವಪೂರ್ವಸ್ಯಾ ಮಂದ್ರತ್ವೇ ಸಂಭವತ್ಯಪಿ ಸರ್ವಾಪೇಕ್ಷ್ಯೇಯಂ ಮಂದ್ರೇತಿ ತಮಪ್ಪ್ರಯೋಗಃ । ಅತಿಮಂದ್ರಸ್ವನತ್ವಂ ಚ ತಂತ್ರ್ಯಾ ಅತಿಶಿಥಿಲೀ-ಕರಣೇನ ಭವತಿ । ತತೋ ಽಪಿ ಶಿಥಿಲೀಕರಣೇ ಯಥಾ ಽನುರಣನಧ್ವನ್ಯಸಂಭವಸ್ತಥಾ ಕಾರ್ಯೇತ್ಯರ್ಥಃ । 123

ಹೀಗೆ ಅವನು ಮೊದಲನೆಯ ಪಕ್ಷವನ್ನು ಸ್ಪಷ್ಟವಾಗಿ ನಿರಾಕರಿಸಿದ್ದಾನೆ. ಆದರೂ ಇಬ್ಬರು ಭಾಷ್ಯಕಾರರಲ್ಲಿಯೂ ಮೊದಲನೆಯ ಪಕ್ಷದಲ್ಲಿಯೂ ಗ್ರಂಥಕಾರನ ನಿಜವಾದ ಅಭಿಪ್ರಾಯವನ್ನು ಯಾರು ಸರಿಯಾಗಿ ಹೇಳಿದ್ದಾರೆ ಎಂದು ಹೇಳಲು ಸಾಕಷ್ಟು ಪುರಾವೆಗಳು ಗ್ರಂಥದಲ್ಲಂತೂ ಇಲ್ಲ. ಆದುದರಿಂದ ಈ ಎರಡೂ ಪಕ್ಷಗಳ ವಾದಗಳಲ್ಲಿ ಅಡಗಿರುವ ಅರ್ಥವಿಶೇಷಗಳನ್ನು ವಿಮರ್ಶಿಸಬೇಕಾಗುತ್ತದೆ. ಎರಡನೆಯದರ ಅಭಿಪ್ರಾಯವು ಸಾರಾಂಶದಲ್ಲಿ ಹೀಗಾಗುತ್ತದೆ : ಮೊದಲನೆಯ ತಂತಿಯನ್ನು ಶ್ರುತಿಮಾಡುವಲ್ಲಿ ಒಂದು ವಿಶೇಷ ವಿಧಿಯಿದೆ; ಆ ತಂತಿಯಲ್ಲಿ ಹೊರಡಿಸಬಹುದಾದ ಎಲ್ಲಾ ನಾದಗಳಲ್ಲಿ ಅತ್ಯಂತ ನೀಚವಾದುದು ಯಾವುದೋ ಅದನ್ನೇ ಈ ವೀಣೆಯ ಮೊದಲನೆಯ ಧ್ವನಿಯೆಂದು ಪ್ರಾರಂಭಮಾಡಬೇಕು. ಹೀಗೆ ಮೊದಲನೆಯ ಶ್ರುತಿಯ ಮೌಲ್ಯವು ಸಂಪೂರ್ಣವಾಗಿ ನಿರಪೇಕ್ಷವಲ್ಲ ; ತಂತಿ, ದಂಡ ಮೊದಲಾದವುಗಳಿಂದ ಸಾಪೇಕ್ಷವೇ. ಆದರೂ ಆಯಾ ವೀಣಾದಂಡದ, ಎಂದರೆ ತಂತಿಯ, ಉದ್ದವನ್ನೂ ತಂತಿಯ ಇತರ ಉಪಾಧಿಗಳನ್ನೂ ಇಯತ್ತೆಯಿಂದ ಹೇಳದಿರುವುದರಿಂದ ಆಯಾ ಪ್ರಯೋಗಕ್ಕೆ ಮಾತ್ರ ಪ್ರಥಮಶ್ರುತಿಯ ಮೌಲ್ಯವು ಸಾಪೇಕ್ಷವಾಗುತ್ತದಲ್ಲದೆ ಎಲ್ಲ ಸಂದರ್ಭಗಳಿಗೂ ಅನ್ವಿತವಾಗುವುದಿಲ್ಲ. ಅಲ್ಲದೆ, ಎರಡು ವೀಣೆಗಳಲ್ಲಿಯೂ ಸಾದೃಶ್ಯವನ್ನು ಹೇಳಿರುವುದರಲ್ಲಿಯೂ ಒಂದು ಪ್ರಶ್ನೆಯು ಉಳಿಯುತ್ತದೆ : ಎರಡು ವೀಣೆಗಳ ದಂಡಗಳ ಉದ್ದ ಸುತ್ತಳತೆಗಳಲ್ಲಿಯೂ ತಂತಿಯ ಇತರ ಉಪಾಧಿಗಳಲ್ಲಿಯೂ ಸಮಾನತೆಯನ್ನು ಹೇಳಿರುವುದು ಪರಸ್ಪರವಾದ ತಂತಿಗಳಿಗೂ ಅನ್ವಯಿಸುತ್ತದೆಯೇ? ಅಥವಾ ಒಟ್ಟಿನಲ್ಲಿ ಅನ್ವಯಿಸುತ್ತದೆಯೇ ? ಎಂದರೆ ಪ್ರತಿ ವೀಣೆಯಲ್ಲಿಯೂ ತಂತಿಯ ಉದ್ದವು ಕ್ರಮೇಣ ಕಡಿಮೆಯಾಗುತ್ತಿದ್ದು, ಆಯಾ ಪರಸ್ಪರ ತಂತಿಗಳು ಮಾತ್ರ, ಉದಾಹರಣೆಗೆ ಚಲವೀಣೆಯ ಎರಡನೆಯ ತಂತಿಯು ಧ್ರುವವೀಣೆಯ ಎರಡನೆಯ ತಂತಿಗೂ ಚಲವೀಣೆಯ ಮೂರನೆಯ ತಂತಿಯು ಧ್ರುವವೀಣೆಯ ಮೂರನೆಯ ತಂತಿಗೂ ಸಮಾನವಾಗಿದ್ದು ಮೂರನೆಯ ತಂತಿಯು ಎರಡನೆಯದರ ಸಮಾನವಾಗಿರುತ್ತದೆಯೇ ಅಥವಾ ಅದಕ್ಕಿಂತ ಕಡಿಮೆಯಾಗಿರುತ್ತದೆಯೇ ? ಆಯಾ ಪರಸ್ಪರ ತಂತಿಗಳ ನಾದಗಳು ಸಮವಾಗಿರಬೇಕೆಂಬ ವಿಧಿಯನ್ನು ಗ್ರಂಥಕಾರನು ಹೇಳಿದಮೇಲೆ

ಈ ಪ್ರಶ್ನೆಯು ಇಲ್ಲಿ ಅಪ್ರಕೃತವಲ್ಲವೇ, ಎಂದು ಆಕ್ಷೇಪವು ಇಲ್ಲಿ ಸಲ್ಲುತ್ತದೆ. ಹಾಗಾದರೆ ಭರತನು ' ತುಲ್ಯಪ್ರಮಾಣ ತಂತ್ರ್ಯುಪವಾದನದಂಡಮೂರ್ಛನೇಸಮೇ ಕೃತ್ವಾ ' ಎಂದು ಹೇಳಿರುವುದನ್ನೂ ಅಭಿನವಗುಪ್ತನು ' ಪ್ರಮಾಣಂ ಆನಾಹಪರಿಣಾಹೌ, ತಂತ್ರೀಣಾಂ ತುಲ್ಯತ್ವಂ ಸಂಖ್ಯಯಾ ಸ್ಥೌಲ್ಯಾದಿನಾ ಚೇತಿ ಕೇಚಿತ್ । ಅತಶ್ಚತುರ್ದಂಡಶಬ್ದಃ ಪುನರುಕ್ತಃ । ತಸ್ಮಾದಯಂ ವಿಗ್ರಹಃ । ತುಲ್ಯಪ್ರಮಾಣತಂತ್ರ್ಯುಪವಾದನ ದಂಡಮೂರ್ಛನಾ ಯಯೋರ್ವೀಣಯೋರಿತಿ । '[120] ಎಂದು ಮುಂತಾಗಿ ವ್ಯಾಖ್ಯಾನಮಾಡಿರುವುದನ್ನೂ ಅನಾವಶ್ಯಕವೆಂದು ಭಾವಿಸಬೇಕಾಗುತ್ತದೆ. ಏಕೆಂದರೆ ಎರಡು ತಂತಿಗಳ ಉಪಾಧಿಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ಎರಡರಲ್ಲಿಯೂ ಒಂದೇ ನಾದವು ಬರುವಂತೆ ಶ್ರುತಿಮಾಡಬಹುದೆಂಬ ಪ್ರಾಥಮಿಕ ಸಂಗತಿಯನ್ನು ಸಂಗೀತಾಭ್ಯಾಸಿಗಳೆಲ್ಲರೂ ಬಲ್ಲರು. ಎರಡು ವೀಣೆಗಳ ಪರಸ್ಪರ ತಂತಿಗಳಲ್ಲಿ ಒಂದೇ ನಾದವು ಉಂಟಾಗಬೇಕೆಂಬುದು ಇಲ್ಲಿ ಮುಖ್ಯವೇ ಹೊರತು, ಆಯಾ ತಂತಿಗಳ ಉಪಾಧಿಗಳಲ್ಲಿ ಸಂಪೂರ್ಣ ಸಾದೃಶ್ಯವಲ್ಲ. ಆದುದರಿಂದ ಮೇಲ್ಕಂಡ ಉಪಾಧಿಗಳು ಭಿನ್ನವಾಗಿದ್ದರೂ ಶ್ರುತಿನಿದರ್ಶನಕ್ಕೆ ಬಾಧಕವಿಲ್ಲ, ಎಂದಾಯಿತು. ಬಹುಶಃ ಈ ಅರ್ಥವನ್ನು ಸ್ವೀಕರಿಸಿ ಶಾರ್ಙ್ಗದೇವನು ಸುಮ್ಮನೆ ' ದ್ವೇ ವೀಣೇ ಸದೃಶೀ ಕಾರ್ಯೇ ಯಥಾ ನಾದಃ ಸಮೋ ಭವೇತ್ ' ಎಂದು ಮಾತ್ರ ಹೇಳಿಬಿಟ್ಟಿದ್ದಾನೆಂಬುದು ಸಿಂಹಭೂಪಾಲನ ಮತ. ಅದಕ್ಕೆಂದೇ ಈ ಭಾಗದಲ್ಲಿ ' ಸದೃಶೌ ಸಮಾನೇ । ಆಕಾರಸಾಮ್ಯಂ ನಾತ್ರೋಪಯುಜ್ಯತ ಇತ್ಯಾಹ—ಯಥಾ ನಾದಃ ಸಮಾನ ಏವ ಭವತೀತಿ '[122] ಎಂದು ಅವನು ವ್ಯಾಖ್ಯಾನಮಾಡುತ್ತಾನೆ. ಆದರೂ ಸಹ ಸಂಗೀತಸಮಯಸಾರಕಾರನಾದ ಪಾರ್ಶ್ವದೇವನಿಂದ ಇದೇ ಸಂದರ್ಭದಲ್ಲಿ

ದ್ವೇ ವೀಣೇ ತುಲಿತೇ ಕಾರ್ಯೇ ಸಮಸ್ತಾವಯವೈಸ್ತಥಾ ।
ಏಕವೀಣೇವ ಭಾಸೇತೇ ಯಥಾ ದ್ವೇಽಪಿ ಶೃಣ್ವತಾಮ್ ।[122]

ಎಂದು ಸಮರ್ಥನೆಗೆಂದು ಉದ್ಧರಿಸಿಕೊಳ್ಳುವುದು ಆಶ್ಚರ್ಯಕರವಾಗಿದೆ. ಇದು ಹೇಗೇ ಇರಲಿ, ಎರಡು ತಂತಿಗಳಲ್ಲಿ ಒಂದೇ ನಾದವು ಇರಬೇಕೆಂಬುದು ಈ ಪ್ರಯೋಗಕ್ಕೆ ಮುಖ್ಯ ನಿಯಮವೇ ಹೊರತು ಅವುಗಳ ಉಪಾಧಿಗಳಲ್ಲಿನ ಸಮಾನತೆಯಲ್ಲ ಎಂಬ ಪಕ್ಷವನ್ನು ಶಾರ್ಙ್ಗದೇವನು ಸ್ವೀಕರಿಸಿರುವಂತೆ ತೋರುತ್ತದೆ. ಪ್ರಾಯೋಗಿಕ ದೃಷ್ಟಿಯಿಂದ ಇದು ಸರಿಯೂ ಹೌದು. ಬಾಲಸಂಗೀತಾಭ್ಯಾಸಿಗಳಿಗೂ ಗೊತ್ತಿರುವ ಈ ವಿಷಯವನ್ನು ಭರತನು ಗಮನಿಸಿಲ್ಲವೆಂದು ತಿಳಿಯುವುದು ಉದ್ಘಟಿತನವಾಗುತ್ತದೆ. ಭರತನಂತೆಯೇ ಮಹಾನುಭಾವನೂ ಮತಿಶ್ರೀಮಂತನಾದ ಋಷಿಯೂ ಆಗಿದ್ದ ಅಭಿನವಗುಪ್ತನೂ ಇದನ್ನು ತಿಳಿದಿರಲಿಲ್ಲವೆಂದು ಭಾವಿಸುವುದು ಅಷ್ಟೇ ಹಾಸ್ಯಾಸ್ಪದವಾಗುತ್ತದೆ.

ಹಾಗಾದರೆ ಅವರ ಮಾತಿಗೆ ಅರ್ಥವೇನು ?

ತನ್ನ ಉಪಾಧಿಗಳಿಂದ ನಿರ್ಣಯಿಸಲ್ಪಟ್ಟ ತಂತಿಯೊಂದರಲ್ಲಿ ಉಂಟಾಗುವ ನಾದವು ನಿರಪೇಕ್ಷವೂ ನಿಯತವಾದ ಕಂಪನಾನವುಳ್ಳದ್ದಾಗಿಯೂ ಇರುತ್ತದೆಂದು ಈಗಾಗಲೇ ಹೇಳಿದೆ. ಉಪಾಧಿಗಳನ್ನು ಸಮಾನವಾಗಿ ಮಾಡಬೇಕು ಎಂದು ಹೇಳಿದ್ದರಿಂದ ಸಮಾನನಾದವನ್ನು ಉಂಟುಮಾಡುವುದಕ್ಕೆ ಬೇಕಾದ ವೈಯಕ್ತಿಕ ಸಾಮರ್ಥ್ಯವನ್ನು ಸಾಧಕನಲ್ಲಿ ನಿರೀಕ್ಷಿಸದೆಯೇ ತರಪೇತಿಲ್ಲದಿರುವಂತಹ ಯಾರೇ ಆಗಲಿ ಭೌತಿಕ ಉಪಾಧಿಗಳನ್ನು ಸಮಾನಗೊಳಿಸಬಹುದಷ್ಟೆ, ಎಂದು ಎಲ್ಲರೂ ಮಾಡಬಹುದಾದ ಪ್ರಯೋಗವನ್ನು ಭರತಾದಿಗಳು ಹೇಳಿರಬಹುದೆಂದು ಇಲ್ಲಿ ಭಾವಿಸಬೇಕಾಗುತ್ತದೆ. ಈ ಮಾತಿಗೆ ಇಷ್ಟೇ ಅರ್ಥವೋ, ಬೇರೆ ವಿಶೇಷಾರ್ಥವಿದೆಯೋ ಬಲ್ಲವರು ಹೇಳಬೇಕು.

ಹೀಗೆ ಎರಡನೆಯ ಪಕ್ಷದಲ್ಲಿಯಾದರೂ ಆಯಾ ತಂತಿಯ ಉಪಾಧಿಗಳನ್ನು ಅನುಸರಿಸಿ ಪ್ರಯೋಗಫಲಿತಾಂಶಗಳು ಆಧಾರಧ್ವನಿಯಿಂದ ಸಾಪೇಕ್ಷವೇ ಆಗಿವೆ. ಆದರೆ ಈ ಪಕ್ಷದಲ್ಲಿ ' ಅಧರಾಧರತೀವ್ರಾಃ ' ಎಂಬುದು ಪುನರುಕ್ತಿಯಲ್ಲ. ಎಂದರೆ ಮಂದ್ರತಮಧ್ವಾನ ಎಂಬುದು ಉಳಿದ ತಂತಿಗಳಿಗೆ ಸಂಬಂಧಿಸಿ, ಎಂದರೆ ಹೋಲಿಕೆಯಿಂದ

ತರ–ತಮ ಭಾವದಲ್ಲಿ ಹೇಳಿದುದಲ್ಲ. ಈ ಅರ್ಥವು ಅಷ್ಟು ಸಮರ್ಪಕವಲ್ಲವೆಂದು ತೋರುತ್ತದೆ. ಏಕೆಂದರೆ ಸೂತ್ರರೂಪದಲ್ಲಿಯೇ ತನ್ನ ಅರ್ಥವಿಸ್ತಾರಗಳನ್ನು ಅಡಗಿಸುವ ಶ್ರೀ ಶಾರ್ಙ್ಗದೇವನು ಅತ್ಯಂತ, ಪರಮ, ಮುಂತಾದ ವಿಶೇಷಣಗಳನ್ನು ಬಳಸದೆ, ತಂತಿಯು ತನ್ನ ಉಪಾಧಿಗಳನ್ನು ಅವಲಂಬಿಸಿ ತನ್ನಿಂದ ಉತ್ಪಾದಿತವಾಗುವ ನಾದಗಳಲ್ಲೆಲ್ಲ ನೀಚವಾದುದನ್ನು ಎಂದು ಮುಂತಾಗಿ ಹೇಳದೆ, ಮಂದ್ರತಮ ಎನ್ನುವುದರಲ್ಲಿ ತಮಭಾವವನ್ನು ಉಳಿದ ತಂತಿಗಳಲ್ಲೇ ಹೇಳದಿರುವುದು, ಅದೊಂದೇ ತಂತಿಯ ಸಾಮರ್ಥ್ಯದಲ್ಲಿ ತಮಭಾವವನ್ನು ಹೇಳುವುದು ಕೃತಕವೆಂದೇ ತೋರುತ್ತದೆ. ಆದರೆ ಈ ಶಬ್ದವನ್ನು ಇನ್ನೂ ಒಂದು ದೃಷ್ಟಿಯಿಂದ ನೋಡಬೇಕು. ಮಂದ್ರ ಎಂಬುದು ತ್ರಿಸ್ಥಾಯಿಗಳಲ್ಲಿ ನೀಚತಮವಾದುದೆಂದೇ ಅವನ ಎಣಿಕೆ. ಈ ಶಬ್ದಕ್ಕೆ ಬೇರೆ ಅರ್ಥವನ್ನು–ಮೂರ್ಛನೆಯ ಪ್ರಥಮ ಸ್ವರಕ್ಕೆ ವಿಶೇಷ ಸಂಜ್ಞೆಯೆಂದು–ಇದೇ ಅಧ್ಯಾಯದ ಆರನೆಯ ಪ್ರಕರಣದಲ್ಲಿ ಒಮ್ಮೆ ಅವನು ಹೇಳಿರುವುದನ್ನು[133] ಬಿಟ್ಟರೆ ಎಲ್ಲೆಡೆಯಲ್ಲಿಯೂ ಅವನು ಇದೇ ಅರ್ಥವನ್ನು ಹೇಳಿದ್ದಾನೆ. ಅಲ್ಲದೆ ಇದೇ ಅರ್ಥವನ್ನು ಕೇವಲ ಐದು ಶ್ಲೋಕಗಳ ಹಿಂದೆ ಹೇಳಿದವನು ಈಗ ಸಂಜ್ಞಾಂತರವನ್ನು ನಿರ್ದೇಶಿಸದೆ ಈ ವಿಶೇಷಾರ್ಥವನ್ನು ಉದ್ದೇಶಿಸಿದ್ದಾನೆಯೇ ಎಂಬುದೂ ತೀವ್ರವಾಗಿ ಪ್ರಶ್ನಾರ್ಹವೇ. ಏಕೆಂದರೆ ಮಂದ್ರಸ್ಥಾಯಿಗಿಂತ—ಅದೂ ಮಾನವ ಹೃದಯಪ್ರದೇಶದಲ್ಲಿ ಗೋಚರವಾಗುವ ನಾದಪ್ರದೇಶಕ್ಕಿಂತ–ಕೆಳಗಿನ ನಾದಮಟ್ಟವನ್ನು ಗಾನ ವ್ಯವಹಾರಕ್ಕೆ ಅವನು ಸ್ವೀಕರಿಸುವುದಿಲ್ಲ. ಆದುದರಿಂದ ಸ್ವೇಚ್ಛೆಯಿಂದ ಬಹು ಉದ್ದವೂ ಬಹು ದಪ್ಪವೂ ಆಗಿರುವ ತಂತಿಯನ್ನು, ಉದಾಹರಣೆಗೆ ಗ್ರ್ಯಾಂಡ್ ಪಿಯಾನೋವಿನ ಮೊದಲನೆಯ ತಂತಿಯನ್ನು, ಮೊದಲನೆಯದನ್ನಾಗಿ ಮಾಡಿಕೊಂಡು ತನ್ನ ಶಾರೀರದಲ್ಲಿ ಮಂದ್ರತಮವಾದ ಧ್ವನಿಗಿಂತಲೂ ನೀಚವಾದುದನ್ನು ಆ ತಂತಿಯಲ್ಲಿ ಉತ್ಪಾದಿಸಿದರೆ ಅದು ಶ್ರುತಿನಿದರ್ಶನಕ್ಕೆ ಪ್ರಯೋಜಕವಲ್ಲವೆಂಬುದು ಶಾರ್ಙ್ಗದೇವನ ಅಭಿಪ್ರಾಯವಿರಬೇಕು. ಅವನು ಶ್ರುತಿಗಳನ್ನು ಹೇಳಿರುವುದಾದರೂ ಈ ಮೂರು ಸ್ಥಾಯಿಗಳಿಗೆ ಮಾತ್ರ :

ಹೃದ್ಯೂರ್ಧ್ವನಾಡೀ ಸಂಲಗ್ನಾ ನಾಡ್ಯೋ ದ್ವಾವಿಂಶತಿರ್ಮತಾಃ ।
ತಿರಶ್ಚ್ಯಸ್ತಾ ತಾವತ್ಯಃ ಶ್ರುತಯೋ ಮಾರುತಾಹತೇಃ ॥
ಉಚ್ಚೋಚ್ಚತರತಾಯುಕ್ತಾಃ ಪ್ರಭವಂತ್ಯುತ್ತರೋತ್ತರಮ್ ।
ಏವಂ ಕಂಠೇ ತಥಾ ಶೀರ್ಷೇ ಶ್ರುತಿದ್ವಾವಿಂಶತಿರ್ಮತಾ ॥[134]

ಅವನು ಸ್ಥಾಯಿ, ಶ್ರುತಿ, ಸ್ವರ ಮುಂತಾದವುಗಳನ್ನು ಹೇಳಲು ಆಧಾರವಾಗಿ ತೆಗೆದುಕೊಂಡಿರುವುದಾದರೂ ಮಾನವಶಾರೀರವನ್ನೇ. ಶ್ರುತಿಗಳು ಕಂಠದಲ್ಲಿ ಸುಲಭವಾಗಿ ಇಯತ್ತೆಯಿಂದಲೂ ಸ್ಫುಟವಾಗಿಯೂ ಪ್ರಕಟವಾಗಲಾರದುದರಿಂದ ಅವುಗಳನ್ನು ವ್ಯಕ್ತಗೊಳಿಸಲು—'ವ್ಯಕ್ತಯೇ ಕುರ್ಮಹೇ ತಾಸಾಂ'—ವೀಣೆಯನ್ನು ನಿದರ್ಶನ ಸಾಧನವನ್ನಾಗಿ ಬಳಸಿದ್ದಾನೆ, ಅಷ್ಟೆ. ಆದುದರಿಂದ ಈ ವೀಣೆಗಳಲ್ಲಿನ ಮೊದಲನೆಯ ತಂತಿಯ ನಾದವನ್ನು ಸಾಧಕನ ಶಾರೀರದ ಮಂದ್ರಸ್ಥಾಯಿಯಲ್ಲಿ ಅತ್ಯಂತ ನೀಚವಾದ ಧ್ವನಿಗೆ ಶ್ರುತಿಮಾಡಬೇಕು ಎಂಬುದೇ ಶಾರ್ಙ್ಗದೇವನ ಅರ್ಥವೆಂದು ತಿಳಿಯಬೇಕು. ಸಿಂಹಭೂಪಾಲ, ಕಲ್ಲಿನಾಥರಿಬ್ಬರೂ ಈ ವಿಷಯದಲ್ಲಿ ಮೂಲಗ್ರಂಥಕಾರನ ಅರ್ಥವನ್ನು ಮೀರಿದ್ದಾರೆಂದೇ ತೋರುತ್ತದೆ. ಹೀಗೆ ಮಾಡಿದ್ದರಿಂದ ಮೂರು ಸ್ಥಾಯಿಗಳ ವ್ಯಾಪ್ತಿಯನ್ನು ಮೀರಿದ ನಾದವ್ಯಾಪ್ತಿಯಲ್ಲಿಯೂ ಶ್ರುತಿನಿದರ್ಶನವನ್ನು ಸಿದ್ಧಪಡಿಸಲು ಸಾಧ್ಯ ಎಂಬ ತಮ್ಮ ಪೂರ್ವಗ್ರಹವನ್ನು ಶಾರ್ಙ್ಗದೇವನಿಗೇ ಆರೋಪಿಸುತ್ತಿದ್ದಾರೆ. ಆದುದರಿಂದ ಮೇಲೆ ಹೇಳಿದ ಎರಡು ಪಕ್ಷಗಳ ಅರ್ಥವನ್ನೂ ಬಿಟ್ಟು ಈ ಅರ್ಥವನ್ನು ಗ್ರಹಿಸುವುದು ಸೂಕ್ತವೆಂದು ತೋರುತ್ತದೆ. ಇದಕ್ಕೆ ಆನುಷಂಗಿಕವಾಗಿ ಇನ್ನೂ ಒಂದು ಸಂಗತಿಯನ್ನು ಇಲ್ಲಿ ಗಮನಿಸಬಹುದು. ಭರತ, ಮತಂಗ, ಅಭಿನವಗುಪ್ತ ಮೊದಲಾದ ಪೂರ್ವಾಚಾರ್ಯರು ಇಪ್ಪತ್ತೆರಡು ಶ್ರುತಿ

133 ಶಾರ್ಙ್ಗದೇವ, ಉ. ಗ್ರಂ., I, 6, 7-8. 134 ಅದೇ ಗ್ರಂಥ, I, 3, 8–10.

ಗಳನ್ನು ಗ್ರಾಮಕ್ಕೆ ಅನ್ವಯಿಸಿ ಹೇಳಿದರು. ಕೋಹಲನು ಇತರರದೆಂದು ಉದ್ಧರಿಸುವ ಅರವತ್ತಾರು ಶ್ರುತಿಗಳ ಮತವಾಗಲೀ, ಮತಂಗನು ಇತರರದೆನ್ನುವ 'ಸ್ಥಾನತ್ರಯಯೋಗಾತ್ ತ್ರಿವಿಧಾಂ ಶ್ರುತಿಂ ಕೇಚಿತ್ ಪ್ರತಿಪದ್ಯಂತೆ' ಎಂಬ ಮತವಾಗಲಿ ಗ್ರಾಮಸಂಬಂಧಿತವಾಗಿದ್ದಿತೋ ಇಲ್ಲವೋ ತಿಳಿಯದು. ಆದರೂ ಮಾನವ ಶಾರೀರಕ್ಕೆ ಮಾತ್ರ ಅನ್ವಯಿಸಿ, ಅಲ್ಲದೆ ಮೂರು ಸ್ಥಾಯಿಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತೆರಡೇ ಶ್ರುತಿಗಳೆಂದು, ಈ ಕಲ್ಪನೆಯನ್ನು ಈ ನಾದವ್ಯಾಪ್ತಿಗೆ ಮಾತ್ರ ಅನ್ವಯಿಸಿ ಹೇಳಿರುವುದು ಶಾರ್ಙ್ಗದೇವನೇ ಮೊದಲು. ಹೀಗೆಯೂ ಶ್ರುತಿಕಲ್ಪನೆಯನ್ನು ಅವನು ವಿಸ್ತರಿಸಿದ್ದಾನೆ. ಎಂದರೆ ಸ್ಥಾಯಿಕಲ್ಪನೆಗೆ ಸಂಬಂಧಿಸದೆ ಭರತಾದಿಗಳು ಗ್ರಾಮಕ್ಕೆ ಅನ್ವಯಿಸಿ ಶ್ರುತಿಕಲ್ಪನೆಯನ್ನು ಹೇಳಿದ್ದರಿಂದ ಒಂದೇ ಸ್ಥಾಯಿಯಲ್ಲಿ ಶ್ರುತಿಗಳ ಇಯತ್ತೆ ಮತ್ತು ವ್ಯವಸ್ಥೆಯನ್ನು ಹೇಳಿದಂತಾಯಿತೇ ಹೊರತು ವಿವಿಧ ಸ್ಥಾಯಿಗಳಲ್ಲಿಯೂ ಹೀಗೆಯೇ ಇರುತ್ತದೆ ಎಂಬುದನ್ನೇನೂ ಅವರು ಪ್ರಕಟವಾಗಿ ಹೇಳಲಿಲ್ಲ. ಸ್ವರ, ಗ್ರಾಮ, ಶ್ರುತಿ, ಈ ಅನುಕ್ರಮದಲ್ಲಿ ಅವರು ತತ್ತ್ವವಿವೇಚನೆ ನಡೆಸಿದರು, ಸ್ಥಾಯಿಯ ಕಲ್ಪನೆಯನ್ನು ಇವುಗಳೊಡನೆ ಸೇರಿಸಿ ಹೇಳಲಿಲ್ಲ ಎಂಬುದೇ ಇದಕ್ಕೆ ಸಾಕ್ಷಿ. ಶಾರ್ಙ್ಗದೇವನಾದರೋ ಈ ತತ್ತ್ವವಿವೇಚನಾ ಕ್ರಮವನ್ನೇ ಬದಲಾಯಿಸಿ ಪೂರ್ವಸಂಚಿತವಾದ ಜ್ಞಾನದಿಂದ ಸಂಗೀತಶಾಸ್ತ್ರಪ್ರಮೇಯಗಳನ್ನು ಬಿಡುಗಡೆಮಾಡಿದ್ದಾನೆಂಬುದನ್ನು ಈಗಾಗಲೇ ಸೂಚಿಸಲಾಗಿದೆ.

ಪ್ರಸಂಗವಶದಿಂದ ಹುಟ್ಟುವ ಇನ್ನೂ ಒಂದು ಸಂಗತಿಯನ್ನಿಲ್ಲಿ ಪ್ರಸ್ತಾಪಿಸಬೇಕು. ಕೋಹಲನಿಗಿಂತ ಹಿಂದಿನ ಕಾಲದಿಂದಲೂ ಒಟ್ಟು ಅರವತ್ತಾರು ಶ್ರುತಿಗಳನ್ನು ತ್ರಿಸ್ಥಾಯಿ ವ್ಯಾಪ್ತಿಯಲ್ಲಿ ಅಡಗಿಸಿ ಪ್ರಾಕ್ತನ ಶಾಸ್ತ್ರಕಾರರು ಹೇಳುತ್ತಿದ್ದರಷ್ಟೆ. ಮಾನವಶಾರೀರದ ವ್ಯಾಪ್ತಿಯು ಬೇಸ್‌ನಿಂದ ಸೋಪ್ರಾನೋವರೆಗೆ ನಾಲ್ಕು ಸ್ಥಾಯಿಗಳಲ್ಲಿ ಅಡಗಿದೆಯೆಂಬುದನ್ನು ಮೊದಲನೆಯ ಪಥಕದಲ್ಲಿ ತೋರಿಸಿದೆ. ಇದರಲ್ಲಿ ಎಲ್ಲರಿಗೂ ಸಾಧ್ಯವಲ್ಲದ ಬೇಸ್ ಸ್ಥಾಯಿಯ ಪೂರ್ವಾರ್ಧವನ್ನೂ ಸೋಪ್ರಾನೋ ಸ್ಥಾಯಿಯ ಉತ್ತರಾರ್ಧವನ್ನೂ ಬಿಟ್ಟರೆ ಉಳಿಯುವುದು 116.5 ರಿಂದ 932.3 ಕಂಪಮಾನದವರಿಗೆ ಇರುವ ನಾದವ್ಯಾಪ್ತಿಯೇ. ಇದು ಪಾಶ್ಚಾತ್ಯದೇಶಗಳಲ್ಲಿರುವ ಹವಾಗುಣ ಮುಂತಾದ ಭೌತಿಕ ಸನ್ನಿವೇಶಗಳಲ್ಲಿ ಹುಟ್ಟಿ ಬೆಳೆದಿರುವ ಶಾರೀರವ್ಯಾಪ್ತಿ. ಇದು ಬೇರೆ ದೇಶಗಳಲ್ಲಿ ಮೊದಲು ಕೊನೆಗಳಲ್ಲಿ ಸುಮಾರು ಅರ್ಧ ಸ್ಥಾಯಿಯಷ್ಟು ಹೆಚ್ಚು ಕಡಿಮೆಯಾಗಬಹುದು. ಒಟ್ಟಿನಲ್ಲಿ ಈ ನಾದ ಪ್ರದೇಶಕ್ಕೇ ಶ್ರುತಿಗಳನ್ನು ಶಾರ್ಙ್ಗದೇವನು ಅನ್ವಯಿಸಿ ಹೇಳುತ್ತಿದ್ದಾನೆಂದು ತೋರುತ್ತದೆ. ಎಂದರೆ ಸುಮಾರು 77.8 ರಿಂದ 116.5 ಕಂಪಮಾನದವರೆಗಿನ ನಾದಪ್ರದೇಶದಲ್ಲಿ ಆಯಾ ಶಾರೀರ ಧರ್ಮವನ್ನು ಅನುಸರಿಸಿ ಶ್ರುತಿ ನಿದರ್ಶನ ವೀಣೆಯ ಮೊದಲನೆಯ ತಂತಿಯನ್ನು ಶ್ರುತಿಮಾಡಬೇಕು ಎಂದಿಟ್ಟುಕೊಳ್ಳಬೇಕಾಗುತ್ತದೆ. ಆದುದರಿಂದ 77.8 ರಿಂದ 116.5 ಕಂಪಮಾನಗಳ ನಾದಪ್ರದೇಶದ ಸ್ಥಾಯಿಯ ವ್ಯಾಪ್ತಿಯಲ್ಲಿ ಇಪ್ಪತ್ತೆರಡು ಶ್ರುತಿಗಳನ್ನಿಡಬೇಕು ಎಂಬುದು ಇದರ ತಾತ್ಪರ್ಯ. 77.8 ಕಂಪಮಾನಗಳ ಮತ್ತು ಅದಕ್ಕಿಂತ ಒಂದೂವರೆಯಷ್ಟು ವಿಸ್ತಾರವಾಗಿರುವ 116.5 ಕಂಪಮಾನಗಳ ಅವಕಾಶಗಳು ಎರಡೂ ಶ್ರುತಿದೃಷ್ಟಿಯಿಂದ ಸಮಾನವೇ ಎಂಬುದನ್ನಿಲ್ಲಿ ಗಮನಿಸಬೇಕು. ಅಲ್ಲದೆ 77.8 ರಿಂದ 116.5 ರವರೆಗಿನ ನಾದದೇಶದಲ್ಲಿ ಯಾವುದೇ ಧ್ವನಿಯನ್ನು ಆರಿಸಿಕೊಂಡು ಅದನ್ನೇ ಪ್ರಾರಂಭ ಶ್ರುತಿಯನ್ನಾಗಿ ಮಾಡಿಕೊಂಡರೆ ಸ್ಥಾಯಿಯ ಪ್ರದೇಶವು ವ್ಯತ್ಯಾಸವಾಗುತ್ತದಷ್ಟೆ. ಆದುದರಿಂದ ಶ್ರುತಿಗಳ ಪ್ರಮಾಣಗಳು ನಿರಪೇಕ್ಷಕಂಪಮಾನಮೌಲ್ಯಗಳಿಂದ ಹೇಳತಕ್ಕವುಗಳಲ್ಲ, ಆಯಾ ಆಧಾರಶ್ರುತಿಯನ್ನು ಅನುಸರಿಸಿ ಅವುಗಳ ಕಂಪಮಾನ ಮೌಲ್ಯಗಳು ಸಾಪೇಕ್ಷವಾಗಿರುತ್ತವೆ ಎಂಬ ಮೊದಲನೆಯ ಪಕ್ಷದ ಅನುಮಿತಿಯು ಇಲ್ಲಿ ಸಿದ್ಧವಾಗತ್ತದೆ. ಹಾಗಿಲ್ಲದೆ ಸಿಂಹಭೂಪಾಲ, ಕಲ್ಲಿನಾಥರು ಹೇಳುವ ಎರಡನೆಯ ಪಕ್ಷವನ್ನು ಅತ್ಯಂತ ನೀಚವಾಗಿದ್ದು ಶ್ರವಣ ಗೋಚರವಾದ ಪಿಯಾನೋ ತಂತಿಯ 32.7 ಕಂಪಮಾನವನ್ನೇ ಆಧಾರಶ್ರುತಿಯಾಗಿಟ್ಟುಕೊಂಡರೆ ಈ 32.7 ಕಂಪಮಾನಗಳ ವ್ಯಾಪ್ತಿಯಲ್ಲಿ 22 ಶ್ರುತಿಗಳನ್ನು ಹೇಳಬೇಕು. ಹಾಗಲ್ಲದೆ ಆಯಾ ತಂತಿಗೆ ನೀಚತಮವಾದುದು

ಎಂದಿಟ್ಟುಕೊಂಡರೆ ಪುನಃ ಮೇಲೆ ಹೇಳಿದ ಸಾಪೇಕ್ಷತೆಯೇ ಸಿದ್ಧಿಸುತ್ತದೆ. ಹಾಗದರೆ ಮಂದ್ರತಮ ಎನ್ನುವಲ್ಲಿ ಆಯಾ ತಂತಿಗೆ ನೀಚತಮವಾದ, ಅತ್ಯಂತ ಶಿಥಿಲೀಕರಣದಿಂದ ಹುಟ್ಟಿದ ನಾದ ಎಂದೇಕೆ ಅರ್ಥಮಾಡಬೇಕು ಎಂದರೆ, ಕಂಠದಲ್ಲಿ ಹೇಗೆ ಅತ್ಯಂತ ನೀಚತಮವಾದುದುದನ್ನು ಆಧಾರವಾಗಿಟ್ಟುಕೊಳ್ಳಬೇಕೋ, ತಂತಿಯಲ್ಲಿಯೂ ಹಾಗೆಯೇ ಪರಸ್ಪರವಾಗಿರಬೇಕು, ಆಗಲೇ ಕಂಠೋದ್ಭವವಾದ ಹಾಗೂ ತಂತಿಯಲ್ಲಿ ಹುಟ್ಟಿದ ಮಂದ್ರಸ್ಥಾಯಿಯ ಇಪ್ಪತ್ತೆರಡು ಶ್ರುತಿಗಳ ಪರಸ್ಪರ ಪ್ರಮಾಣಗಳು (ಪೂರ್ವಾಪರ ಭಾವದ ಅನುಪಾತಗಳಲ್ಲಿ) ಸಮವಾಗಿರುತ್ತವೆ.

'ಮಂದ್ರತಮಧ್ವಾನಾ' ಎಂಬುದರಲ್ಲಿನ ಧ್ವನಿ, ತಮ ಮತ್ತು ಮಂದ್ರ ಶಬ್ದಗಳಿಗೆ ಹೀಗೆ ಅರ್ಥವನ್ನು ಹೊರಡಿಸುವುದರಿಂದ ಶ್ರುತಿವಿಷಯಕವಾದ ಶಾರ್ಙ್ಗದೇವನ ಕಲ್ಪನೆಯು ತಕ್ಕಮಟ್ಟಿಗೆ ಸ್ಪಷ್ಟವಾಗುತ್ತದೆ. ಇನ್ನು 'ತಾಸು ಚಾದಿಮಾ' ಎನ್ನುವುದರಲ್ಲಿನ ಆದಿಮಾ ಶಬ್ದವನ್ನು ಕುರಿತು ವಿವೇಚಿಸಬೇಕು. ಆಧಾರಶ್ರುತಿಯಾದ ಮೊದಲನೆಯದರಲ್ಲಿ ಷಡ್ಜವನ್ನು ಇಡದೆ ನಾಲ್ಕನೆಯದರಲ್ಲಿ ಇಟ್ಟಿರುವುದು ಮುಖ್ಯವಾದ ಒಂದು ಪ್ರಮೇಯವನ್ನು ಪಡೆಯುವುದಕ್ಕೆ ಕಾರಣವಾಗಿದೆ. ಭರತಾದಿಗಳು ಷಡ್ಜವು ನಾಲ್ಕನೆಯ ಶ್ರುತಿಯಲ್ಲಿ ಇದೆಯೆಂದು ಸ್ಪಷ್ಟವಾಗಿ ಹೇಳಲಿಲ್ಲ. ಭರತನು ಹೇಳಿರುವ ಸಾರಣಾಕ್ರಮದಲ್ಲಿ ಷಡ್ಜವನ್ನು ಮೊದಲನೆಯದರಲ್ಲಿಯೂ ನಿಷಾದವನ್ನು ಹತ್ತೊಂಬತ್ತನೆಯದರಲ್ಲಿ ಇಟ್ಟರೂ ಅವನ ಶ್ರುತಿಸ್ವರಗಳ ವ್ಯವಸ್ಥೆಗೆ ಏನೂ ಬಾಧಕವಿಲ್ಲ. ಈ ರೀತಿಯ ಸ್ವರವ್ಯವಸ್ಥೆಯನ್ನು ಮುಂದಿನ ಪಥಕದಲ್ಲಿ ತೋರಿಸಿದೆ.

| ಶ್ರುತಿ ಸಂಖ್ಯೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ಸ್ವರ | ಸ | | | ರಿ | | ಗ | | | | ಮ | | | | ಪ | | | ಧ | | ನಿ | | | |

ಶ್ರುತಿನಿದರ್ಶನ

ಪಥಕ (7)

ಆದರೆ ಹೀಗೆ ಮಾಡುವುದರಿಂದ ಆವರ್ತಕ ಷಡ್ಜಕ್ಕೆ ನಾಲ್ಕು ಶ್ರುತಿಗಳ ಅಂತರದ ಸ್ವರೂಪವು ಲಭಿಸುವುದೇ ಹೊರತು ಆಧಾರಷಡ್ಜಕ್ಕಲ್ಲ. ಈ ವಿಧದ ಗಣನೆಯಲ್ಲಿ ಇಲ್ಲವೇ ಷಡ್ಜವನ್ನು ಕೇವಲ ಧ್ವನಿಯೆಂದು ತಿಳಿಯಬೇಕು, ಇಲ್ಲವೇ ದ್ವಾವಿಂಶತಿ ಶ್ರುತಿಗಳು ಚಾಕ್ರಿಕ ವ್ಯಾಪಾರವೆಂದು ತಿಳಿದು ಹಿಂದಿನ ಸ್ಥಾಯಿಯಲ್ಲಿ ನಿಷಾದದ ಮುಂದಕ್ಕಿರುವ ನಾಲ್ಕು ಶ್ರುತಿಗಳನ್ನು ಆಧಾರ ಷಡ್ಜಕ್ಕೆ ಕೊಡಬೇಕು. ಪ್ರಕೃತದ ಸ್ಥಾಯಿಯಲ್ಲಿ ನಿಷಾದದ ಮುಂದಿರುವ ಮೂರು ಶ್ರುತಿಗಳಿಗಾದರೂ ಅರ್ಥವೇ ಉಳಿಯುವುದಿಲ್ಲ. ಇವುಗಳು ಸಾರ್ಥಕವಾಗಬೇಕಾದರೆ ಮುಂದಿನ ಸ್ಥಾಯಿಯಲ್ಲಿ ಮೊದಲನೆಯ ಶ್ರುತಿಯನ್ನು ತೆಗೆದುಕೊಂಡು ಅದರಲ್ಲಿ ಷಡ್ಜವು ಉಪಸ್ಥಿತವಾಗಬೇಕಾಗುತ್ತದೆ. ಎಂದರೆ ಈ ಸ್ವರ-ಸಪ್ತಕವು ಸ್ವಯಂಸಂಪೂರ್ಣವಲ್ಲ, ತನ್ನ ಇರವಿಗೆ ಮುಂದಿನ ಮತ್ತು ಹಿಂದಿನ ಸ್ಥಾಯಿಗಳನ್ನು ಅವಲಂಬಿಸುತ್ತದೆ ಎಂದಹಾಗಾಯಿತು. ಸ್ಥಾನಾಂತರ ಪ್ರಾಪ್ತಿಯು ಶ್ರುತಿನಿದರ್ಶನಕ್ರಮಕ್ಕೆ ಹೇಗೆ ವಿರೋಧವೆಂಬುದನ್ನು ಈಗಾಗಲೇ ತಿಳಿಸಿದೆ. ಆದುದರಿಂದ ಮೇಲೆ ಹೇಳಿರುವ ಸ್ವರವ್ಯವಸ್ಥೆಯು ಅಶಾಸ್ತ್ರೀಯವಾದುದು. ಇಂತಹ ಗಣನೆ ಹುಟ್ಟುವುದು ಆಧಾರಷಡ್ಜವು ಲಕ್ಷ್ಯದಲ್ಲಿಯೂ ಶಾಸ್ತ್ರದಲ್ಲಿಯೂ ಮೊದಲಿನಲ್ಲಿ ಇದೆ, ಅದರ ಹಿಂದಿನ ನಿಷಾದವನ್ನು ಅಪೇಕ್ಷಿಸಿ ಷಡ್ಜವನ್ನು ಹಾಡುವುದಿಲ್ಲವಷ್ಟೆ; ಷಡ್ಜವೇ ಆಧಾರಭೂತವೂ, ಪ್ರಥಮವೂ ಆದುದರಿಂದ ಸ್ಥಾಯಿಯಲ್ಲಿ ಅದನ್ನು ಮೊದಲು ಇಡಬೇಕು, ಎನ್ನುವ ವಾದದಿಂದ. ಆದರೆ ಹೀಗೆ ಮಾಡುವುದರಿಂದ ಸ್ವರದ ಮೂಲಲಕ್ಷಣವನ್ನೇ ಧಿಕ್ಕರಿಸಿದಂತಾಗುತ್ತದೆ. ಸ್ವರವು ತನ್ನ ಸ್ವರೂಪವನ್ನು ಪಡೆಯುವುದಾದರೂ ಕೇವಲ ಒಂದು ಶ್ರುತಿಸ್ಥಾನದಲ್ಲಿ

ಅನುರಣನಾದಿ ವ್ಯಾಪಾರಗಳನ್ನು ಪಡೆಯುವುದರಿಂದಲ್ಲ, ನಿರ್ದಿಷ್ಟವಾದ ಸಂಖ್ಯೆಯಲ್ಲಿರುವ ಶ್ರುತಿಗಳಲ್ಲಿ ಪ್ರತಿಯೊಂದೂ ತನ್ನ ತನ್ನ ವಿಶಿಷ್ಟ ವ್ಯಕ್ತಿತ್ವವನ್ನೂ ಪ್ರಮಾಣವನ್ನೂ ಪಡೆದು, ಇವುಗಳೆಲ್ಲವೂ ಅಂತ್ಯಶ್ರುತಿಸ್ಥಾನದಲ್ಲಿ ಸ್ವರವು ಉಪಸ್ಥಿತವಾಗುವಾಗ ಫಲಿತವಾಗಿ, ಸ್ವರತ್ವವನ್ನುಂಟುಮಾಡುತ್ತವೆ ಎಂದು ಈಗಾಗಲೇ ಹೇಳಿದೆ. ಹೀಗಲ್ಲದೆ ಷಡ್ಜವನ್ನು ಪ್ರಥಮಶ್ರುತಿಯಲ್ಲಿಯೇ ನೆಟ್ಟು ಕೆಲವು ಆಧುನಿಕರು ಕೆಳಗಿನ ಪಥಕದಲ್ಲಿರುವಂತೆ ಸ್ವರವ್ಯವಸ್ಥೆಯನ್ನು ಭರತಮುನಿಗೆ ಆರೋಪಿಸುತ್ತಾರೆ :

| ಶ್ರುತಿ ಸಂಖ್ಯೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ಸ್ವರ | ಸ |  |  |  | ರಿ |  |  | ಗ |  | ಮ |  |  |  | ಪ |  |  |  | ಧ |  |  | ನಿ |  |

### ಶ್ರುತಿನಿದರ್ಶನ
### ಪಥಕ (೮): ಭರತಪದ್ಧತಿ (?)

ಈ ಪಕ್ಷದಲ್ಲಿ ಮೇಲೆ ಹೇಳಿದ ಕಾರಣಕ್ಕಾಗಿ ಷಡ್ಜವನ್ನು ಮೊದಲನೆಯ ಶ್ರುತಿಯಲ್ಲಿ ನೆಟ್ಟರೂ ಅದರ ಶ್ರುತಿಪ್ರಮಾಣವನ್ನು ಅದರಿಂದ ಮುಂದಕ್ಕೆ ಎಣಿಸಿದೆ. ಹೀಗೆಯೇ ಉಳಿದುದೆಲ್ಲ ಸ್ವರಗಳ ತ್ರಿ, ದ್ವಿ, ಚತುಃಶ್ರುತಿ ಅಂತರಗಳನ್ನು ಆಯಾ ಸ್ವರದ ಅಭಿವ್ಯಕ್ತಿಸ್ಥಾನದಿಂದ ಮುಂದಕ್ಕೆ ಎಣಿಸಿದೆ. ಎಂದರೆ ಸ್ವರವು ತನ್ನ ಶ್ರುತಿಗಳಲ್ಲಿ ಮೊದಲನೆಯದರಲ್ಲಿ ಸ್ವಸಂವೇದ್ಯತೆಯನ್ನು ಪಡೆಯುತ್ತದೆ ಎಂದು ಹೇಳಿದಂತಾಯಿತು. ಆದರೆ ಭರತನು ಷಡ್ಜ ಗ್ರಾಮದಲ್ಲಿ ಸ್ವರವ್ಯವಸ್ಥೆಯನ್ನು ಶ್ರುತಿವಿನಿಯೋಗದ ಮೂಲಕ

ತಿಸ್ರೋ ದ್ವೇ ಚತಸ್ರಶ್ಚ ಚತಸ್ರಸ್ತಿಸ್ರ ಏವ ಚ ।
ದ್ವೇ ಚೈವಾದ್ಯ ಚತಸ್ರಶ್ಚ ಷಡ್ಜಗ್ರಾಮೇ ಭವೇದ್ವಿಧಿಃ ॥
ಚತುಃಶ್ರುತಿರ್ಭವೇತ್ ಷಡ್ಜಃ ಋಷಭಸ್ತ್ರಿಶ್ರುತಿಃ ಸ್ಮೃತಃ ।
ದ್ವಿಶ್ರುತಿಶ್ಚೈವ ಗಾಂಧಾರೋ ಮಧ್ಯಮಶ್ಚ ಚತುಃಶ್ರುತಿಃ ॥
ಪಂಚಮಸ್ತದ್ವದೇವ ಸ್ಯಾತ್ ತ್ರಿಶ್ರುತಿರ್ಧೈವತೋ ಮತಃ ।
ದ್ವಿಶ್ರುತಿಶ್ಚ ನಿಷಾದಃ ಸ್ಯಾತ್ ಷಡ್ಜಗ್ರಾಮೇ ವಿಧಿರ್ಭವೇತ್ ॥[135]

ಎಂದು ಹೇಳಿದ್ದಾನೆ. ಇದರಲ್ಲಿ ಗ್ರಾಮದಲ್ಲಿ ಮೊದಲು ತ್ರಿಶ್ರುತಿಯ ಅಂತರವಿರುವುದನ್ನೂ ಇದು ಋಷಭಕ್ಕೆ ಅನ್ವಿತವಾಗಿರುವುದನ್ನೂ ಗಮನಿಸಬೇಕು. ಎಂದರೆ ಷಡ್ಜವೆಂದು ಯಾವುದೇ ಧ್ವನಿಯನ್ನು ಸ್ವೀಕರಿಸಿದರೂ ಅದರಿಂದ ಮೂರನೆಯ ಶ್ರುತಿಯಲ್ಲಿ ಋಷಭವನ್ನು ಹೇಳಿದುದರಿಂದ ಋಷಭದ ಶ್ರುತಿಗಳು ಷಡ್ಜದಿಂದ ಮುಂದಕ್ಕೆ ಋಷಭದ ಪ್ರಕಟನಾಸ್ಥಾನದವರೆಗೂ ಇರುತ್ತವೆಂದು ಅರ್ಥವಾಗುತ್ತದಷ್ಟೆ. ಇದೇ ರೀತಿಯಲ್ಲಿ ಮೊದಲಿನಲ್ಲಿ ನಾಲ್ಕು ಶ್ರುತಿಗಳಿರಬೇಕೆಂದು ಹೇಳಿದುದರಿಂದಲೂ ಷಡ್ಜಕ್ಕೆ ನಾಲ್ಕು ಶ್ರುತಿಗಳನ್ನು ಹೇಳಿದುದರಿಂದಲೂ, ಷಡ್ಜವೆಂಬುದನ್ನು ಗ್ರಾಮವನ್ನು ಪ್ರಾರಂಭಿಸಲೆಂದು ಸ್ವೀಕರಿಸಿದ ಧ್ವನಿವಿಶೇಷವೆಂದು ವಿವಕ್ಷಿಸಿರುವುದರಿಂದಲೂ, ಷಡ್ಜವು ತನ್ನ ನಾಲ್ಕನೆಯ ಶ್ರುತಿಯಲ್ಲಿರುತ್ತದೆಂದೂ ಅದರ ಉಳಿದ ಮೂರು ಈ ಅಂತಿಮಶ್ರುತಿಸ್ಥಾನದಿಂದ ಹಿಂದಕ್ಕೆ ಇರುತ್ತವೆಂದೂ ಅರ್ಥವಾಗುತ್ತದೆ- ಇದೇ ಮಾತುಗಳನ್ನು ಉಳಿದ ಸ್ವರಗಳಿಗೂ ಅನ್ವಯಿಸಬೇಕು. ಇದರ ಅಂತರಾರ್ಥ

135 ಭರತಮುನಿ, ಉ. ಗ್ರಂ., XXVIII, 24–26, ಪು. 19.

ವನ್ನು ತಿಳಿಯದೆ ಷಡ್ಜವು ನಾಲ್ಕನೆಯ ಶ್ರುತಿಯಲ್ಲಿರುತ್ತದೆ ಎಂದು ಮುಂತಾಗಿ ನೇರವಾಗಿ ಭರತಮುನಿಯು ಹೇಳಲಿಲ್ಲವೆಂಬುದರ ದುರುಪಯೋಗದಿಂದ ಪಂಡಿತಂಮನ್ಯರಾದ ಕೆಲವು ಆಧುನಿಕರು ಈ ಶಾಸ್ತ್ರಮರ್ಯಾದೆಯನ್ನು ಇಲ್ಲಿ ಮೀರುತ್ತಾರೆ. ಹೀಗೆ ಮಾಡಿದರೆ ಸ್ವರವು ಅಭಿವ್ಯಕ್ತವಾಗಿಹೋದಮೇಲೆ ಅದರ ಮುಂದಿನ ಶ್ರುತಿಗಳನ್ನು ತೆಗೆದುಕೊಂಡು ಮಾಡುವುದಾದರೂ ಏನು? ಸ್ವರಶ್ರುತಿಗಳಲ್ಲಿ ಜನ್ಯಜನಕಭಾವವನ್ನು ಇಟ್ಟುಕೊಂಡರೆ ಮಗು ಹುಟ್ಟಿದ ಮೇಲೆ ತಂದೆಯ ಜನನವೆಂದಂತಾಗುತ್ತದೆ. ಕಾರ್ಯಕಾರಣ ಸಂಬಂಧವನ್ನು ಇಟ್ಟುಕೊಂಡರೆ ಕಾರ್ಯವಾದ ಮೇಲೆ ಕಾರಣವು ಹುಟ್ಟುತ್ತದೆಂದ ಹಾಗೆ—ಮಡಕೆಯಾದ ಮೇಲೆ ಮಣ್ಣು ಹುಟ್ಟಿತು ಎಂದಾಗುತ್ತದೆ. ವಿವರ್ತ ಸಂಬಂಧವನ್ನು ಇಟ್ಟುಕೊಂಡರೆ ಪ್ರತಿಬಿಂಬವು ಮೂಡಿದ ಮೇಲೆ ಬಿಂಬವು ಹುಟ್ಟುತ್ತದೆ ಎಂದಾಗುತ್ತದೆ. ಆದುದರಿಂದ ಸ್ವರವು ತನ್ನ ಶ್ರುತಿಪ್ರಮಾಣದ ಮೊದಲಿನಲ್ಲಿ ಪ್ರಕಟವಾಗುತ್ತದೆ ಎನ್ನುವುದು ಅತ್ಯಂತ ಅನುಪಪನ್ನವಾದ ಮಾತು. ಇಂತಹವರ ಸಂದೇಹವನ್ನು ನಿವಾರಿಸಲೆಂದೇ ಸ್ವರದ ಲಕ್ಷಣವನ್ನು 'ಸ್ವಸಂವೇದ್ಯೋ ಪರಮೋ ಶ್ರುತಿಧಾಮ್ನಿ'[132] ಎಂದು ವಿಶಾಖಿಲಾಚಾರ್ಯನೇ ಮೊದಲಾದವರು ಮತಂಗನಿಗಿಂತಲೂ ಮುಂಚೆಯೇ ಹೇಳಿದರು. ಮತಂಗನೂ ಷಡ್ಜದಿಂದ ಮೂರನೆಯ ಶ್ರುತಿಯಲ್ಲಿ ರಿಷಭ ಎಂದು ಮುಂತಾಗಿ ಅಸಂಧಿಗ್ಧವಾಗಿಯೇ ಹೇಳಿದ್ದಾನೆ. ಹೀಗೆ ಅಂತಿಮಶ್ರುತಿಯಲ್ಲಿ ಸ್ವಸಂವೇದ್ಯತೆಯನ್ನು ಪಡೆಯುವುದರಿಂದಲೇ ಸ್ವರವು ಕೇವಲ ನಾದದ ಬಿಂದುವಾಗಿ ಧ್ವನಿಯಂತೆ ಗೋಚರಿಸದೆ ಆಳವುಳ್ಳ ಸ್ವಪ್ರಮಾಣಯುಕ್ತವಾದ ಅಂತರದಿಂದ ಎಂದರೆ ಸ್ವರೂಪದಿಂದ ಗೋಚರಿಸುವುದು: 'ಶ್ರೂಯಮಾಣಾಸ್ತು ಗೃಹ್ಯಂತೇ ಗಂಭೀರಾ ಇವ'[132] ಈ ಎಲ್ಲಾ ಅಂಶಗಳನ್ನು ವಿವಕ್ಷಿಸಿಯೇ, ನಿಃಶಂಕ ನಾದ ಶಾರ್ಙ್ಗದೇವನು ಸಂಗೀತಶಾಸ್ತ್ರಾಭ್ಯಾಸಿಯಲ್ಲಿ ಆಶಂಕೆಯೇ ಉಳಿಯದಂತೆ ಸಂಕ್ಷೇಪವಾಗಿ 'ತಾಸು ಚಾದಿಮಾ ಕಾರ್ಯಾ ಮಂದ್ರತಮಧ್ವಾನಾ' ಎಂದೂ ನಾಲ್ಕನೆಯ, ಏಳನೆಯ, ಒಂಬತ್ತನೆಯ ಮುಂತಾದ ಶ್ರುತಿಸ್ಥಾನಗಳಲ್ಲಿ ಕ್ರಮವಾಗಿ ಷಡ್ಜ, ರಿಷಭ, ಗಾಂಧಾರ ಮುಂತಾದ ಸ್ವರಗಳನ್ನೂ ಹೇಳಿದ್ದಾನೆ. ನಾಲ್ಕನೆಯ ಶ್ರುತಿಯಲ್ಲಿ ಷಡ್ಜವು ಇದ್ದರೆ ಮೊದಲನೆಯ ಮೂರು ಅದರ ಷಡ್ಜತ್ವಕ್ಕೆ ಹೇಗೆ ಕಾರಣಗಳು, ರಿಷಭದ ಮೊದಲನೆಯ ಎರಡು ಶ್ರುತಿಗಳು ರಿಷಭತ್ವಕ್ಕೆ ಹೇಗೆ ಕಾರಣಗಳು? ಎಂದು ಸಹಜವಾಗಿ ಹುಟ್ಟುವ ಪ್ರಶ್ನೆಯನ್ನು ತಾನೇ ಹಾಕಿಕೊಂಡು ಸಂಶಯವೇ ಉಳಿಯದಂತೆ ಅವನು ಉತ್ತರಿಸುತ್ತಾನೆ. ಸ್ವರದ ಲಕ್ಷಣವನ್ನು ಹೇಳಿದಕೂಡಲೇ ಈ ಪ್ರಶ್ನೆಯನ್ನೆತ್ತಿಕೊಂಡು ಅವನು ಉತ್ತರಿಸಿರುವುದರಲ್ಲಿ ವಿಶೇಷವಾದ ಔಚಿತ್ಯವಿದೆ. ಅವನು ಹೇಳಿದ ಸ್ವರಲಕ್ಷಣಗಳನ್ನು ಆಯಾ ಸ್ವರದ ಅಂತಿಮವಲ್ಲದ ಉಳಿದ ಶ್ರುತಿಗಳು ಹೇಗೆ ಉಂಟುಮಾಡುತ್ತವೆ, ಎಂಬುದೇ ಇಲ್ಲಿ ಮುಖ್ಯವಾಗಿ ಹೇಳಬೇಕಾಗಿರುವುದು; ಸ್ವರವು ಕೇವಲ ಧ್ವನಿವಿಶೇಷವಲ್ಲ ಎಂಬುದನ್ನು ತೋರಿಸುವುದೇ ಈ ವಿವರಣೆಯ ಪ್ರಯೋಜನ; ಎಂದರೆ ಆಯಾ ಸ್ವರದ ಅಂತ್ಯ ಶ್ರುತಿಯು ಮಾತ್ರ ಅದರ ಸ್ವರತ್ವಕ್ಕೆ ಪ್ರಯೋಜಕವಲ್ಲ; ಉಳಿದ ಹಿಂದಿನವುಗಳು ಸೇರಿದರೆ ಮಾತ್ರ ಅಂತ್ಯಶ್ರುತಿ ಸ್ಥಾನಕ್ಕೆ ಸ್ವರಧರ್ಮವು ಲಭಿಸುತ್ತದೆ, ಎಂದು ಭರತ ಅಭಿನವಗುಪ್ತರ ಶ್ರುತಿನಿದರ್ಶನದ ವ್ಯಾಖ್ಯಾನ ಸಮಯದಲ್ಲಿ (ಪು. 235) ನಾನು ಪಡೆದ ಅನುಮಿತಿಯನ್ನು ಶಾರ್ಙ್ಗದೇವನು ಸ್ಪಷ್ಟವಾಗಿಯೇ ಇಲ್ಲಿ ಹೇಳುತ್ತಿದ್ದಾನೆ. ಹೀಗೆ ಸಂಗೀತಶಾಸ್ತ್ರದಲ್ಲಿ ತತ್ತ್ವಜಿಜ್ಞಾಸೆಯ ವಿಧಾನಕ್ಕೆ ಮತ್ತೊಂದು ಹಿರಿಯ ಕಾಣಿಕೆಯನ್ನು ಅವನು ಸಲ್ಲಿಸಿದ್ದಾನೆ:

ನನು ಶ್ರುತಿಶ್ಚತುರ್ಥ್ಯಾದಿರಸ್ತ್ವೇವಂ ಸ್ವರೆ ಕಾರಣಮ್ |
ತ್ರ್ಯಾದೀನಾಂ ತತ್ರ ಪೂರ್ವಾಸಾಂ ಶ್ರುತೀನಾಂ ಹೇತುತಾ ಕಥಮ್ ?
ಬ್ರೂಮಃ, ತುರ್ಯಾತೃತೀಯಾಽಽದಿಃ ಶ್ರುತಿಃ ಪೂರ್ವಾಭಿಕಾಂಕ್ಷಯಾ |
ನಿರ್ಧಾರ್ಯತೇ ಽತಃ ಶ್ರುತಯಃ ಪೂರ್ವಾ ಅಪ್ಯತ್ರಹೇತವಃ ||[136]

136 ಶಾರ್ಙ್ಗದೇವ, ಉ. ಗ್ರಂ., I, 3, 25-27.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಈ ಅರ್ಥದಲ್ಲಿಯೇ ದತ್ತಿಲನೂ ಹೇಳಿದ್ದಾನೆ : ಷಡ್ಜದಿಂದ ಮೂರನೆಯ ಶ್ರುತಿಯಲ್ಲಿ ರಿಷಭ ಇತ್ಯಾದಿಯಾಗಿ ಷಡ್ಜಗ್ರಾಮದ ಸ್ವರವ್ಯವಸ್ಥೆ :

ಷಡ್ಜತ್ವೇನ ಗೃಹೀತೋ ಯಃ ಷಡ್ಜಗ್ರಾಮೇ ಧ್ವನಿರ್ಭವೇತ್ ।
ತತ ಊರ್ಧ್ವಂ ತೃತೀಯಃ ಸ್ಯಾದ್ ಋಷಭೋ ನಾತ್ರ ಸಂಶ್ರಯಃ ॥ 137

ಶಾರ್ಙ್ಗದೇವನು ಶ್ರುತಿನಿದರ್ಶನಕ್ಕಾಗಿ ಬಳಸಿರುವ ಎರಡು ಸ್ವತಂತ್ರ ತಂತ್ರಗಳಲ್ಲಿ ' ತಾಸು ಚಾದಿಮಾ ಕಾರ್ಯಾ ಮಂದ್ರತಮಧ್ವಾನಾ ' ಎಂಬ ಮೊದಲನೆಯದನ್ನು ಯಥಾಮತಿಯಾಗಿ ಮೇಲೆ ವಿವೇಚಿಸಿದೆ. ಈಗ ಎರಡನೆಯದಾದ ' ಅತಃ ಪರಂತು ರಕ್ತಿಘ್ನಂ ನ ಕಾರ್ಯಮುಪಕರ್ಷಣಮ್ ' ಎಂಬುದನ್ನು ಪರೀಕ್ಷಿಸಲಾಗುವುದು.

' ಅತಃ ಪರಂ ' ಎಂದರೆ ನಾಲ್ಕನೆಯ ಸಾರಣೆಯ ನಂತರ ಎಂದು ಸಂದರ್ಭದ ಅರ್ಥ. ' ತು ' ಎನ್ನುವ ನಿಪಾತವನ್ನು ಭಿನ್ನಧರ್ಮವನ್ನೂ ವೈಪರೀತ್ಯವನ್ನೂ ಸೂಚಿಸಲು ಇಲ್ಲಿ ಉಪಯೋಗಿಸಿದೆ. ನಾಲ್ಕು ಸಾರಣೆಗಳ ಪ್ರಯೋಜನವು ಸ್ವರತ್ವವುಳ್ಳ ಶ್ರುತಿಸ್ಥಾನಗಳು ಸ್ಥಾಯಿಯಲ್ಲಿ ಎಷ್ಟಿವೆ, ಯಾವ ಯಾವ ಸ್ವರಗಳು ಎಷ್ಟೆಷ್ಟು ಶ್ರುತಿಗಳನ್ನು ಪಡೆದಿವೆ ಎಂಬುದನ್ನು ತೋರಿಸುವುದಾಗಿದೆ. ಐದು ಮುಂತಾದ ಸಾರಣೆಗಳಲ್ಲಿ ಇದನ್ನು ಅತಿಕ್ರಮಿಸುವುದು ಅನಿವಾರ್ಯವಾಗುತ್ತದೆ. ಮತ್ತು ಸ್ಥಾಯಿಯಲ್ಲಿ ಶ್ರುತಿಗಳ ಇಯತ್ತೆಯನ್ನು ಬೋಧಿಸುವುದಿಲ್ಲ ; ಸ್ವರತ್ವವುಳ್ಳ, ಇಪ್ಪತ್ತೆರಡನ್ನು ಮೀರಿದ ಶ್ರುತಿ ಸ್ಥಾನಗಳನ್ನು ತೋರಿಸುವುದೂ ಇಲ್ಲ ; ಅಷ್ಟೇ ಅಲ್ಲ, ನಾಲ್ಕು ಸಾರಣೆಗಳಿಂದ ಲಭಿಸಿದ ಸ್ಥಾನಗಳಿಗೆ ವಿರುದ್ಧವೂ, ಕ್ಲಿಷ್ಟವೂ, ಸಂಗೀತದ ಲಕ್ಷ್ಯಲಕ್ಷಣಗಳಲ್ಲಿ ಅನುಪಯುಕ್ತವೂ ಆಗಿರುವ ಧ್ವನಿಗಳನ್ನು ಐದು, ಆರು, ಏಳು ಮುಂತಾದ ಸಾರಣೆಗಳು ಕೊಡುತ್ತವೆ. ಇವೆಲ್ಲವನ್ನೂ ರಕ್ತಿಘ್ನಂ ಎಂಬ ಒಂದೇ ಮಾತಿನಿಂದ ಶಾರ್ಙ್ಗದೇವನು ಹೇಳಿದ್ದಾನೆ. ಶ್ರುತಿ ಮತ್ತು ಸ್ವರಗಳ ವಿವೇಚನೆಗೆ ಈ ಲಕ್ಷಣವು ಪ್ರಾಥಮ್ಯವನ್ನೂ ಪ್ರಾಮುಖ್ಯವನ್ನೂ ಪಡೆದಿರುವುದರಿಂದ ಅದನ್ನು ಸ್ವಲ್ಪ ವಿಸ್ತಾರವಾಗಿ ಪರಿಶೀಲಿಸುವುದರಿಂದ ಪ್ರಯೋಜನವುಂಟು.

ರಕ್ತಿಘ್ನಂ ಎನ್ನುವುದನ್ನು ' ಮಂದ್ರತಮಧ್ವಾನಾ ' ಎನ್ನುವುದರೊಡನೆ ಓದಿಕೊಳ್ಳುವುದರಿಂದ ಹುಟ್ಟುವ ಅರ್ಥವೈವಿಧ್ಯದಿಂದ ಶ್ರುತಿವಿಷಯಕವಾದ ಲಕ್ಷಣದಲ್ಲಿಯೂ ವೈವಿಧ್ಯವು ಉಂಟಾಗುತ್ತದೆ. ಮಂದ್ರತಮ ಎನ್ನುವುದಕ್ಕೆ ಪ್ರಥಮತಂತಿಯ ಅತ್ಯಂತ ಶಿಥಿಲಾವಸ್ಥೆಯಲ್ಲಿ ಉಂಟಾದ ನಾದ ಎನ್ನುವ ಸಿಂಹಭೂಪಾಲ, ಕಲ್ಲಿನಾಥರು ತಂತ್ರೀಪರವಾದ ಅರ್ಥವನ್ನು ರಕ್ತಿಘ್ನಂ ಎಂಬುದಕ್ಕೆ ಹೇಳುತ್ತಾರೆ. ಇನ್ನೂ ಅಪಕರ್ಷಣ ಮಾಡುವುದೆಂದರೆ ತಂತಿಯನ್ನು ಇನ್ನೂ ಸಡಿಲಗೊಳಿಸುವುದು. ಆದರೆ ಇನ್ನೂ ಸಡಿಲಗೊಳಿಸಿದರೆ ಅನುರಣನಾದಿ ವ್ಯಾಪಾರಗಳುಳ್ಳ ಸ್ವರವೇ ಉಂಟಾಗದಷ್ಟು ನೀಚಧ್ವನಿಗೆ ಮೊದಲನೆಯ ತಂತಿಯನ್ನು ಈಗಾಗಲೇ ಶ್ರುತಿಮಾಡಲಾಗಿದೆ. ಆದುದರಿಂದ ನಾಲ್ಕನೆಯ ಸಾರಣೆಯಿಂದ ಮುಂದಕ್ಕೆ ಅಪಕರ್ಷಣವಾದರೆ ಸ್ವರತ್ವವೇ ಹುಟ್ಟದುದರಿಂದ ಶ್ರುತಿಸ್ಥಾನವೂ ಆದುದರಿಂದ ಶ್ರುತಿನಿದರ್ಶನವೂ ನಿರರ್ಥಕಗಳಾಗುತ್ತವೆ ಎಂಬ ಪಕ್ಷವನ್ನು ಅವರು ಗ್ರಹಿಸುತ್ತಾರೆ. ಸಿಂಹಭೂಪಾಲನು

ಅತಃ ಪರಮುಪಕರ್ಷಣಂ ನ ಕಾರ್ಯಮ್ । ಕುತಃ ? ಯತೋ ರಕ್ತಿಘ್ನಮಿತಿ । ಅತಃ ಪರಮುಪಕರ್ಷಣೇ ಕೃತೇ ಸ್ವರಾಣಾಂ ರಂಜಕತ್ವಾಭಾವಾತ್ ಸ್ವರತ್ವಮೇವ ನಶ್ಯತಿ, ' ಸ್ವತೋ ರಂಜಯತಿ ಶ್ರೋತೃಚಿತ್ತಂ ಸ ಸ್ವರ ಉಚ್ಯತೇ ' ಇತಿ ವಕ್ಷ್ಯಮಾಣತ್ವಾತ್ । 138

ಎಂದು ವ್ಯಾಖ್ಯಾನಮಾಡುತ್ತಾನೆ. ಕಲ್ಲಿನಾಥನು

ತೇಷಾಂ ತದುಕ್ತರೀತ್ಯೋತ್ಕರ್ಷಣೇನ ಪಂಚಮ್ಯಾದಿಷು ಶ್ರುತಿಷು ಪ್ರಾಪಣೇ ಕೃತೇ ತಾದೃಶಾನುರಣನಾ-

137 ದತ್ತಿಲ, ಉ.-ಗ್ರಂ., 12. 138 ಸಿಂಹಭೂಪಾಲ, ಉ. ಗ್ರಂ., ಪು. 78.

ಭಾವಾನ್ಮಂದ್ರಮಧ್ಯಮಯೋರುತ್ತರೋತ್ತರಸ್ಥಾನಾಕ್ರಮಣೇ ತಾರಮಂದ್ರವ್ಯವಸ್ಥಿತೇರಪಾಯಾಚ್ಚ ಯತೋರಕ್ತಿ-ಘಾತಃ ಅತಃ ಸಾರಣಾ ಽಂತರಂ ನ ಕರ್ತವ್ಯಮಿತ್ಯಭಿಸಂಧಾಯೋಕ್ತಮ್ । [119]

ಎಂದು ಬರೆಯುತ್ತಾನೆ. ಕಲ್ಲಿನಾಥನು ಕೊಡುವ ಕಾರಣ ಮುಂದಿನ ಅಪಕರ್ಷಣದಿಂದ ತಾರಸ್ಥಾಯಿ ಮಂದ್ರಸ್ಥಾಯಿಗಳಲ್ಲಿರುವ ಶ್ರುತಿಗಳ ಅಸ್ತಿತ್ವಕ್ಕೆ ಇದರಿಂದ ಅಪಾಯ, ಎಂದರೆ ಸ್ವರತ್ವವಿಲ್ಲದ ಕೇವಲ ಧ್ವನ್ಯಂಶಗಳ ಪ್ರಾಪ್ತಿ, ಅಷ್ಟಮಭಾವದ ಆವೃತ್ತಿಗುಣವಿಲ್ಲದಿರುವುದು ಇತ್ಯಾದಿ. ಸಿಂಹಭೂಪಾಲನು ರಂಜಕತ್ವವಿಲ್ಲದಿರುವುದು ಎಂದರೆ ಸ್ವರತ್ವವೇ ನಾಶವಾಗುವುದು ಇದಕ್ಕೆ ಕಾರಣವೆನ್ನುತ್ತಾನೆ. ಇಬ್ಬರೂ ಪ್ರಥಮ ತಂತಿಯನ್ನು ಸ್ವರವೇ ಹುಟ್ಟಲಾಗದಷ್ಟು ಅಪಕರ್ಷಿಸಬೇಕಾಗುತ್ತದೆ ಎಂದು ತಾವೇ ಹೇಳಿದ ನಿಯಮವನ್ನಿಲ್ಲಿ ಮರೆತುಹೋದ ಹಾಗೆ ಕಾಣುತ್ತದೆ. ಏಕೆಂದರೆ ಮೊದಲನೆಯ ತಂತಿಯಲ್ಲಿ ಇನ್ನು ಶ್ರುತಿಯೆನ್ನಬಹುದಾದ ನಾದವೇ ಹೊರಡದಿರುವಾಗ ಮಂದ್ರತಾರಾದಿಗಳ ಮಾತೆಲ್ಲಿ ಬರುತ್ತದೆ? 'ಸ್ವರತ್ವಮೇವ ನಶ್ಯತಿ' ಎಂದರೆ ಸ್ವರತ್ವವಿಲ್ಲದಿರುವ ಶ್ರುತಿಯಾದರೂ ಇರಲು ಸಾಧ್ಯವೆಂದಾಯಿತು. ಅತ್ಯಂತ ಶಿಥಿಲೀಕರಣವೆಂಬ ನಿಯಮಕ್ಕೆ ಇದು ಹೇಗೆ ಅನ್ವಿತವಾಗುತ್ತದೆ? ಈ ನಿಯಮದಿಂದ ಶ್ರೋತ್ರೇಂದ್ರಿಯ ಗೋಚರಕ್ಕಿಂತ ಕೆಳಗಿನ ವ್ಯಾಪ್ತಿಯ ನಾದವು ಐದನೆಯ ಮುಂತಾದ ಅಪಕರ್ಷಣಗಳಿಂದ ಹುಟ್ಟಬೇಕು. ಆದರೆ ರಕ್ತಿಘ್ನಂ ಎನ್ನುವುದಕ್ಕೆ ಇವರ ವ್ಯಾಖ್ಯಾನಗಳಲ್ಲಿ ಈ ಅರ್ಥವೇ ಹೊರಡುವುದಿಲ್ಲ.

ಇಪ್ಪತ್ತೆರಡು ತಂತಿಗಳಲ್ಲಿಯೂ ಅತ್ಯಂತ ನೀಚವಾದ ಧ್ವನಿಯನ್ನು ಉಂಟುಮಾಡುವಂತಹುದು, ಆದರೆ ಶ್ರವಣಗೋಚರದ ಹೊಸ್ತಿಲಲ್ಲಿ ಇರುವ ಧ್ವನಿಯನ್ನಲ್ಲ ಎಂಬ ಮೊದಲನೆಯ ಪಕ್ಷದಲ್ಲಿಯೂ ಸ್ವೇಚ್ಛೆಯಿಂದ ಪ್ರಥಮವೆಂದು ಆರಿಸಿದ ಯಾವುದೋ ಒಂದು ಧ್ವನಿಯ ಕೆಳಗೆ ರಕ್ತಿಯಿರುವ ಶ್ರುತಿಗಳೇ ದೊರೆಯುವುದಿಲ್ಲ ವೆಂಬುದೂ ಅನುಪಪನ್ನವೇ. ಆದುದರಿಂದ ರಕ್ತಿಘ್ನಂ ಎಂಬುದಕ್ಕೆ ಕಲ್ಲಿನಾಥನು ಕೊಡುವ ವ್ಯಾಖ್ಯಾನವನ್ನು ಇಲ್ಲಿ ಹೊಂದಿಸಬೇಕಾಗುತ್ತದೆ. ಹೀಗಾಗಿ ಗಾನ ವ್ಯವಹಾರಕ್ಕೆ ಅಯೋಗ್ಯವೂ ಲಕ್ಷ್ಯಪ್ರಸಿದ್ಧಿವೈಧುರ್ಯದಿಂದ ಬಾಧಿತವೂ ಆಗಿರುವ ನಾದಪ್ರಮಾಣಗಳ ಪ್ರಾಪ್ತಿಯಾಗುತ್ತದೆ ಎಂಬ ಅರ್ಥವನ್ನು ಇಲ್ಲಿ ಮಾಡಬೇಕಾಗುತ್ತದೆ. ಇದು ತಂತಿ ಯನ್ನು ಕುರಿತ ಅಪಕರ್ಷಣವಲ್ಲ, ಸಾರಣಾಪರವಾದುದು ಎಂಬುದೇ ಇದರ ತಾತ್ಪರ್ಯ. ಮೂರನೆಯ ಪಕ್ಷವಾದ ಕಂಠಧ್ವನಿಗೆ ಪರಸ್ಪರವಾದ ಮಂದ್ರಸ್ಥಾಯಿಯಲ್ಲಿ ಅತ್ಯಂತ ನೀಚಸ್ವರ ಎಂಬ ಅರ್ಥವನ್ನಿಟ್ಟುಕೊಂಡರೂ ರಕ್ತಿಘ್ನಂ ಎಂಬುದಕ್ಕೆ ಸಮಂಜಸವಾದ ಅರ್ಥವು ಹೊರಡುವುದಿಲ್ಲ. ಏಕೆಂದರೆ ಮಾನವಶಾರೀರೋದ್ಭವವಾದ ತ್ರಿಸ್ಥಾಯಿ ವ್ಯಾಪ್ತಿಯನ್ನು ಗಾನವ್ಯವಹಾರಯೋಗ್ಯವೆಂದು ಭಾರತೀಯ ಸಂಗೀತಶಾಸ್ತ್ರಪ್ರವರ್ತಕರು ಒಪ್ಪಿಕೊಂಡಿದ್ದರೂ ಇದಕ್ಕೆ ನೀಚವಾದ ಮತ್ತು ಉಚ್ಚವಾದ ನಾದಪ್ರದೇಶದಲ್ಲಿ ಸ್ವರತ್ವವಿಲ್ಲವೆಂದೇನೂ ಹೇಳುವುದಿಲ್ಲ. ಹಾಗೆ ಅವರು ಹೇಳಿದ್ದರೂ ತಪ್ಪಾಗುತ್ತಿತ್ತು. ಏಕೆಂದರೆ ಮೊದಲನೆಯ ಪಥಕದಲ್ಲಿ 32.7 ಕಂಪಮಾನದಿಂದ 8000 ಕಂಪಮಾನದ ವರೆಗೆ ಸ್ವರತ್ವವಿರುವುದನ್ನೂ ಅದು ವಿವಿಧ ಸಂಗೀತವಾದ್ಯಗಳಲ್ಲಿ ಪಾಶ್ಚಾತ್ಯರು ಉಪಯೋಗಿಸುವುದನ್ನೂ ಸೂಚಿಸಿದೆ. ಆದುದರಿಂದ ಮಂದ್ರಸ್ಥಾಯಿಯಲ್ಲಿ ನೀಚತಮವಾದ ಸ್ವರಕ್ಕಿಂತ ಕೆಳಗೆ ಅಪಕರ್ಷಣಮಾಡಿದರೆ ಬೇರೆ ಸ್ವರಗಳು ಉಂಟಾಗುವುದಿಲ್ಲವೆಂಬ ಅರ್ಥವನ್ನು ಈ ಪಕ್ಷದಿಂದ ಹೊರಡಿಸಲಾಗದು. ಮಾನವಶರೀರವನ್ನೂ ಮಾನವಶಾರೀರ ವನ್ನೂ ಸ್ವರೋತ್ಪಾದಕ ಮೂಲದ್ರವ್ಯಗಳೆಂದೂ, ಪ್ರಮಾಣಭೂತಗಳೆಂದೂ ಭಾರತೀಯ ಸಂಗೀತವು ಸ್ವೀಕರಿಸು ವುದರಿಂದಲೂ ಭಾರತೀಯ ಸಂಗೀತವು ಏಕಸ್ವರ ಶ್ರೇಣಿಯನ್ನೇ ಮೂಲಧರ್ಮವನ್ನಾಗಿ ಪಡೆದಿರುವುದರಿಂದಲೂ ಮೂರು ಸ್ಥಾಯಿಗಳ ವ್ಯಾಪ್ತಿ ಇಲ್ಲಿ ಸಾಕು. ಆದುದರಿಂದಲೇ ಮೂರು ಸ್ಥಾಯಿಗಳನ್ನು ಮಾತ್ರ ಹೇಳುವುದಲ್ಲದೆ ಇವುಗಳಲ್ಲಿನ ಅರವತ್ತಾರು ಶ್ರುತಿಗಳನ್ನು ಮಾತ್ರ ಹೇಳುತ್ತಾರೆ. ಆದುದರಿಂದ ರಕ್ತಿಘ್ನಂ ಎನ್ನುವುದು ಸ್ವರತ್ವದ ಅಪ್ರಾಪ್ತಿಯೆಂದರೆ ಇಲ್ಲಿ ಸರಿಯಾಗದು.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಈ ಎಲ್ಲ ಪಕ್ಷಗಳಿಗೂ ಸಮಾಧಾನಕರವಾಗಿ ರಕ್ತಿಘ್ನಂ ಎನ್ನುವುದಕ್ಕೆ ಹೀಗೆ ಅರ್ಥವನ್ನು ಹೇಳಬಹುದು : ಮೇಲೆ ಹೇಳಿದ ಅಪಕರ್ಷಣವಿಧಾನದಿಂದ ಇಪ್ಪತ್ತೆರಡು ಶ್ರುತಿಗಳೂ ಸ್ವರಗಳಲ್ಲಿ ಅವುಗಳ ವಿನಿಯೋಗವೂ ಇಯತ್ತೆಯಿಂದ ತಿಳಿಯುವುದೇ ಅಲ್ಲದೆ ಇವುಗಳ ಪ್ರಮೆಗೆ ಕಾರಣವಾದ ಐದು ಶ್ರುತಿ ಜಾತಿಗಳೂ ಸಿದ್ಧಿಸುತ್ತವೆ. ಈ ಜಾತಿಗಳಿಂದಲೇ ತ್ರಿಸ್ಥಾಯಿಗಳಲ್ಲಿ ರಂಜಕತ್ವವುಳ್ಳ ಸ್ವರಗಳು, ಸ್ಥಾಯಿಪ್ರಮಾಣ, ವಿವಿಧ ಸ್ವರಗಳ ಸ್ವಸಂವೇದ್ಯತೆ ಮುಂತಾದ ಪ್ರಮೇಯಗಳೂ ಸಿದ್ಧಿಸುವುದು. ನಾಲ್ಕು ಸಾರಣೆಗಳಿಗಿಂತ ಆಚೆ ಐದು ಶ್ರುತಿ, ಆರು ಶ್ರುತಿ, ಮುಂತಾದ ಸಾರಣಗಳನ್ನು ಮಾಡಬಹುದಾದರೂ, ಮೇಲೆ ಹೇಳಿದ ಶ್ರುತಿ ಜಾತಿಗಳೇ ಅಲ್ಲದೆ ಬೇರೆ ಶ್ರುತಿ ಜಾತಿಗಳೂ ಶ್ರುತಿಸ್ಥಾನಗಳೂ ಉಂಟಾಗುವುವು. ಆದರೆ ಇಪ್ಪತ್ತೆರಡು ಶ್ರುತಿಗಳ ಸ್ಥಾಯಿಯಲ್ಲಿ ಇವು ರಂಜಕತ್ವವನ್ನುಳ್ಳ ಬೇರೆ ಸ್ವರಗಳನ್ನು ಉಂಟುಮಾಡಲಾರವು. ಅಲ್ಲದೆ ಇವುಗಳು ಉಪಲಬ್ಧವಾಗುವುದಾದರೂ ಶ್ರುತಿನಿದರ್ಶನಕ್ಕೆಂದು ಸಾಧಕನು ಆರಿಸಿಕೊಂಡಿರುವ ಮಂದ್ರಸ್ಥಾಯಿಗಿಂತ ನೀಚವಾದ ಸ್ಥಾಯಿಯಲ್ಲಿ. ಇವುಗಳನ್ನು ಆವರ್ತಕಭಾವದಿಂದ ತ್ರಿಸ್ಥಾಯಿಗಳಲ್ಲಿ ಸೇರಿಸಿ ಎಣಿಸಿಕೊಂಡರೆ ಈಗಾಗಲೇ ಉಪಲಬ್ಧವಾಗಿರುವ ಎಲ್ಲ ಪ್ರಮೇಯಗಳೂ, ಸ್ವರಸ್ಥಾನಗಳೂ ಸ್ವರವ್ಯವಸ್ಥೆಯೂ, ಗ್ರಾಮಾದಿಗಳಲ್ಲಿನ ಸ್ವರವ್ಯವಸ್ಥೆ, ವಾದಿ, ಸಂವಾದಿ ಮುಂತಾದ ಭಾವಗಳು, ಎಲ್ಲವೂ ನಷ್ಟವಾಗುತ್ತವೆ, ಇಲ್ಲವೇ ತಮ್ಮ ವ್ಯಾಪಕತೆಯನ್ನೂ ಪ್ರಯೋಗಸಿದ್ಧಿಸಾದೃಶ್ಯವನ್ನೂ ಕಳೆದುಕೊಳ್ಳುತ್ತವೆ. ಇಪ್ಪತ್ತೆರಡಕ್ಕಿಂತ ಹೀಗೆ ಹೆಚ್ಚುಸಂಖ್ಯೆಯ ಶ್ರುತಿಗಳನ್ನುಳ್ಳ ಈ ಹೊಸ ಸ್ವರಾಷ್ಟಕದಿಂದ ತ್ರಿಸ್ಥಾಯಿಯಲ್ಲಿ ಅಡಕವಾದ ಗಾನವ್ಯವಹಾರಕ್ಕೆ ಪ್ರಯೋಜನವೂ ರಕ್ತಿಲಾಭವೂ ಇಲ್ಲ. ರಕ್ತಿಲಾಭವಾಗುವುದು ಹಾಗಿರಲಿ, ರಕ್ತಿಹಾನಿಯೇ ಉಂಟಾಗುತ್ತದೆ. ಆದುದರಿಂದಲೇ " ಅತಃ ಪರಂ ತು ರಕ್ತಿಘ್ನಂ ನ ಕಾರ್ಯಮಪಕರ್ಷಣಮ್ ". ಹೆಚ್ಚಿನ ಸಂಖ್ಯೆಯ ಸ್ಥಾಯಿಗಳುಳ್ಳ ಸಂಗೀತಪದ್ಧತಿಗೆ ಇಪ್ಪತ್ತೆರಡಕ್ಕಿಂತ ಹೆಚ್ಚಾಗಿರುವ ಶ್ರುತಿಗಳುಳ್ಳ ಸ್ಥಾಯಿಯೂ ಬೇರೆ ರೀತಿಯ ಸ್ವರವ್ಯವಸ್ಥೆಯೂ ಅವಶ್ಯಕವಿರಬಹುದು ; ಅವಶ್ಯಕವಿರಬಹುದು ಮಾತ್ರವಲ್ಲ, ಅವಶ್ಯಕವೇ ಹೌದು. ಏಕೆಂದರೆ ಆವರ್ತಕಗಳ ಸಂಖ್ಯೆಯು ಹೆಚ್ಚಿದಂತೆಲ್ಲ ದೂರದಲ್ಲಿರುವ ಆವರ್ತಕಗಳಿಗೂ ಪ್ರಥಮ ಸ್ವರಕ್ಕೂ ಸಾದೃಶ್ಯವು ಕಡಿಮೆಯಾಗುತ್ತಾ ಬರುತ್ತದೆಂಬ ಪ್ರಯೋಗಸಿದ್ಧವಾದ ಸಂಗತಿಯನ್ನು ದ್ವಿಘಟಕವಾದದ ವಿಮರ್ಶೆಯಲ್ಲಿ (ಪು. 196) ಸೂಚಿಸಿದೆ. ಈ ವಾದಿತ್ವಭಗ್ನತೆಯನ್ನು ತುಂಬಿ ಅವುಗಳನ್ನು ಗಾನವ್ಯವಹಾರಯೋಗ್ಯಗಳನ್ನಾಗಿ ಮಾಡಬೇಕಾದರೆ ನಿರಂತರತೆಯನ್ನುಳ್ಳ ಶ್ರುತಿಗಳ ಸಂಖ್ಯೆಯು ಸ್ಥಾಯಿಯ ವ್ಯಾಪ್ತಿಯಲ್ಲಿ ಹೆಚ್ಚಲೇಬೇಕಾಗುತ್ತದೆ. ಈ ಬಹುಸ್ಥಾಯಿ ಪ್ರಯುಕ್ತಿಯಿಂದಲೇ ಪಾಶ್ಚಾತ್ಯರು ತಮ್ಮ ಸ್ವರಾಷ್ಟದ ನೈಸರ್ಗಿಕ ವ್ಯವಸ್ಥೆಯನ್ನು ಬದಲಾಯಿಸಿ ಸ್ವರಸ್ಥಾನಗಳನ್ನು ಹಿಂದುಮುಂದಕ್ಕೆ ಕದಲಿಸಬೇಕಾಯಿತು. ಆದುದರಿಂದ ಸ್ಥಾಯಿಯಲ್ಲಿ ಸ್ವರತ್ವವನ್ನು ಪಡೆದಿರುವ ಎಷ್ಟು ಶ್ರುತಿ ಸೋಪಾನಗಳಿರುತ್ತವೆಂಬುದು ಆಯಾ ಸಂಗೀತಪದ್ಧತಿಯ ವೈಶಿಷ್ಟ್ಯಗಳನ್ನೂ ಅವಶ್ಯಕತೆಗಳನ್ನೂ ಸ್ವಭಾವವನ್ನೂ ಅವಲಂಬಿಸಿರುತ್ತದೆ. ಈ ವಿಷಯವನ್ನು ಪಾಶ್ಚಾತ್ಯ ಗಣಿತಜ್ಞರೂ ಸಂಗೀತ ಶಾಸ್ತ್ರಜ್ಞರೂ ವಿಶೇಷವಾಗಿ ವಿವೇಚಿಸಿದ್ದಾರೆ. ಹೀಗಾಗಿ ಇಪ್ಪತ್ತೆರಡು ಶ್ರುತಿಗಳ ಸ್ವರಾಷ್ಟಕವು ಎಲ್ಲಾ ಸಂಗೀತಪದ್ಧತಿಗಳಲ್ಲಿಯೂ ಇರುವ ಅಥವಾ ಇರಬೇಕಾದ ನೈಯತ್ಯವೆಂದು ತಿಳಿಯುವುದು ಕೂಪದಲ್ಲಿರುವ ಕಪ್ಪೆಯಂತೆ ಆದೀತು. ಇಪ್ಪತ್ತೆರಡು ಶ್ರುತಿಗಳನ್ನು ನಮ್ಮ ಪ್ರಾಕ್ತನ ಸಂಗೀತಶಾಸ್ತ್ರಪ್ರವರ್ತಕರು ಹೇಳಿರುವುದು ನೈಸರ್ಗಿಕವಾಗಿ ಸಿದ್ಧವಾದ ಸ್ವರಗಳಿರುವ ಮೂರು ಸ್ಥಾಯಿಗಳ ಸಂದರ್ಭದಲ್ಲಿ ಮಾತ್ರ. ನೈಸರ್ಗಿಕವಲ್ಲದೆ ಸ್ವರಸ್ಥಾನಗಳನ್ನು ಕದಲಿಸಿದರೆ ತ್ರಿಸ್ಥಾಯಿ ವ್ಯಾಪ್ತಿಯಲ್ಲಿ ಸ್ವರದ ರಂಜಕತ್ವಕ್ಕೆ ಸ್ವಲ್ಪ ಊನವಾದರೂ ಉಚ್ಚಸ್ಥಾಯಿಗಳಲ್ಲಿ ಅವುಗಳ ಏಕಕಾಲಿಕ ಪ್ರಯೋಗದಲ್ಲಿ ಸಂಕೀರ್ಣಭಾವಗಳು ಅಷ್ಟಾಗಿ ಇರುವುದಿಲ್ಲ. ತಮ್ಮ ಸಂಗೀತಪದ್ಧತಿಯ ಸ್ವಭಾವ, ಆವಶ್ಯಕತೆ, ವೈಶಿಷ್ಟ್ಯಗಳನ್ನು ಆಳವಾಗಿ ಅಭ್ಯಾಸಮಾಡಿ ಅದಕ್ಕೆ ಬೆನ್ನೆಲುಬಿನಂತಿರುವ ದ್ವಾವಿಂಶತಿ ಶ್ರುತಿಗಳ ಸ್ಥಾಯಿಯನ್ನು

ಯಾವ ವೈಜ್ಞಾನಿಕ ಬಾಹ್ಯೋಪಕರಣಗಳನ್ನೂ ಅಪೇಕ್ಷಿಸದೆ ಸಾವಿರಾರು ವರ್ಷಗಳ ಹಿಂದೆ ನಿಸ್ಸಂದಿಗ್ಧವಾಗಿ ನಮ್ಮ ಋಷಿಗಳು ಹೇಳಿದರೆಂಬುದು ಅದ್ಭುತರಮಣೀಯವೂ ಹೆಮ್ಮೆಪಡುವಂತಹುದೂ ಆಗಿದೆ.

ಕಡೆಯದಾಗಿ ಶ್ರೀ ಶಾರ್ಙ್ಗದೇವನ ಶ್ರುತಿನಿದರ್ಶನಕ್ರಮದಲ್ಲಿ ಕಂಡುಬರುವ ಇನ್ನೊಂದು ವೈಶಿಷ್ಟ್ಯವನ್ನು ಪ್ರಸ್ತಾಪಿಸಬಹುದು. ಭರತನು ಷಡ್ಜಗ್ರಾಮ, ಮಧ್ಯಮಗ್ರಾಮಗಳ ಪಂಚಮಭೇದದಿಂದ ಶ್ರುತಿಪ್ರಮಾಣವನ್ನು ನಿರ್ಧರಿಸಿ ಅದರ ನಂತರ ಗಾಂಧಾರ-ರಿಷಭ, ನಿಷಾದ-ಧೈವತ ಈ ಸ್ವರಗಳ ಏಕೀಭಾವದಿಂದ ಒಂದು, ಅದಾದ ಮೇಲೆ ರಿಷಭ-ಷಡ್ಜ, ಧೈವತ-ಪಂಚಮಗಳ ಏಕೀಭಾವದಿಂದ ಇನ್ನೊಂದು, ತದನಂತರ ಷಡ್ಜ-ನಿಷಾದ, ಮಧ್ಯಮ-ಗಾಂಧಾರ, ಪಂಚಮ ಮಧ್ಯಮ ಇವುಗಳ ಏಕೀಭಾವದಿಂದ ಮತ್ತೊಂದು, ಹೀಗೆ ವಿವಿಧ ಶ್ರುತಿಪ್ರಮಾಣಗಳ ಮೂಲಕ ಶ್ರುತಿನಿದರ್ಶನವನ್ನು ಹೇಳಿದ್ದಾನಷ್ಟೆ. ಅಭಿನವಗುಪ್ತನು ಶ್ರುತಿಯ ಲಕ್ಷಣದಿಂದ ಮತ್ತು ಷಡ್ಜಗ್ರಾಮದಿಂದ ಮಧ್ಯಮಗ್ರಾಮವನ್ನೂ ಅದರ ಮೂಲಕ ಇತರ ಶ್ರುತಿಪ್ರಮಾಣಗಳನ್ನೂ ಹೇಗೆ ಪಡೆದಿದ್ದಾನೆಂದು ಈಗಾಗಲೇ ಸೂಚಿಸಿದೆ ; ಶಾರ್ಙ್ಗದೇವನು ಇವುಗಳಿಂದ ಭಿನ್ನವಾದ ಕ್ರಮವನ್ನು ಹೇಗೆ ಅನುಸರಿಸಿದ್ದಾನೆಂದೂ ವಿವರಿಸಲಾಗಿದೆ. ಆದರೆ ಅಲ್ಲಿ ಹೇಳದಿದ್ದ ಒಂದು ವೈಶಿಷ್ಟ್ಯವನ್ನಿಲ್ಲಿ ಹೆಸರಿಸಬಹುದು. ಸ್ವತಂತ್ರವೂ ವಿಶಿಷ್ಟವೂ ಆದ ಶ್ರುತಿಯ ಕಲ್ಪನೆಯಿಂದ, ಗ್ರಾಮಸಂಬಂಧದಿಂದ ನಿರಪೇಕ್ಷವಾದ ಸ್ವರಸ್ಥಾನಗಳಮೂಲಕ, ಐದು ಶ್ರುತಿಜಾತಿಗಳನ್ನು ಅವನು ಪಡೆದಿದ್ದಾನೆ. ಇದಕ್ಕೆ ಅನುಸರಿಸಬೇಕಾದ ಮಾರ್ಗವು ಬಹಳ ಸುಲಭವಾದುದು : ಚಲವೀಣೆಯಲ್ಲಿ ಪ್ರತಿ ತಂತಿಯನ್ನೂ ಅದರ ಹಿಂದಿನದಕ್ಕೆ ಶ್ರುತಿಮಾಡಿ ಅದನ್ನು ಧ್ರುವವೀಣೆಯ ಅದೇ ಸಂಖ್ಯೆಯ ತಂತಿಯ ನಾದದೊಡನೆ ಹೋಲಿಸುವುದರಿಂದ ಶ್ರುತಿಯ ಇಯತ್ತೆ ತಿಳಿಯುತ್ತದೆ. ಅವನು ಹೀಗೆ ಸುಲಭವಾಗಿ ಅನುಕ್ರಮವಾಗಿ ಹೇಳಿದ ನಾಲ್ಕು ಸಾರಣೆಗಳೂ ಸ್ವಯಂಸಿದ್ಧವಾಗಿ ಅಭಿನವಗುಪ್ತನು ಸೂಚಿಸಿದ ಶ್ರುತಿಜಾತಿಗಳನ್ನು ಕೊಡುತ್ತವೆ. ಭರತ, ಅಭಿನವಗುಪ್ತರಲ್ಲಿ ಮೇಲೆ ಹೇಳಿದ ಸ್ವರಯುಗ್ಮಗಳ ಏಕೀಭಾವವನ್ನು ಸಾಧಿಸುವುದರಿಂದ ಆಯಾ ಶ್ರುತಿಜಾತಿಯ ಲಾಭ. ಶಾರ್ಙ್ಗದೇವನದು ಇದಕ್ಕೆ ತದ್ವಿರುದ್ಧವಾದ ಕ್ರಮ. ಹಿಂದಿನ ತಂತಿಯ ನಾದಕ್ಕೆ ಶ್ರುತಿಮಾಡುವುದರಿಂದ ಈ ಏಕೀಭಾವವು ತನಗೆ ತಾನೇ ಉಂಟಾಗುತ್ತದೆ. ಎಂದರೆ ಹೀಗೆ ಅನುಕ್ರಮದಿಂದ ಮಾಡಿದ ಅಪಕರ್ಷಣದಿಂದ ವಿವಿಧ ಸ್ಥಾನಗಳಲ್ಲಿ ಆಯಾ ಶ್ರುತಿಜಾತಿಯು ವಿವಿಧ ಪ್ರಮಾಣಗಳಲ್ಲಿ ಅಭಿವ್ಯಕ್ತವಾಗಿ ಆಯಾ ಸ್ವರಯುಗ್ಮದ ಏಕೀಭಾವವನ್ನು ಸಾಧಿಸುತ್ತದೆ ಎಂದು ತಿಳಿಯಬೇಕು. ಒಂದು ಶ್ರುತಿಜಾತಿಯ ಪ್ರಮಾಣವು ಎಲ್ಲಾ ಸ್ಥಾನಗಳಲ್ಲಿಯೂ ಸಮಾನವಾಗಿರುತ್ತದೆಂದು ಇಲ್ಲಿ ತಿಳಿಯುವುದು ತಪ್ಪಾಗುತ್ತದೆ. ಏಕೆಂದರೆ ಒಂದೇ ಪ್ರಮಾಣದ ಅಪಕರ್ಷಣವು ಎಲ್ಲಾ ಶ್ರುತಿಸ್ಥಾನಗಳಲ್ಲಿಯೂ ಆಗಬೇಕೆಂಬ ಎಂದರೆ ಎಲ್ಲಾ ಶ್ರುತಿಸ್ಥಾನಗಳಲ್ಲಿಯೂ ಅದು ಒಂದೇ ಪ್ರಮಾಣದ್ದಾಗಿರುವುದೆಂಬ ವಿವಕ್ಷೆಯಿದ್ದಿದ್ದರೆ ಶಾರ್ಙ್ಗದೇವನು ಯಾವುದಾದರೊಂದು ನಿರ್ದಿಷ್ಟ ಶ್ರುತಿಪ್ರಮಾಣವನ್ನು ಭರತ, ಅಭಿನವಗುಪ್ತರಹಾಗೆ ಸ್ವರಗಳ ನಾಮನಿರ್ದೇಶದಿಂದ ಸ್ಪಷ್ಟವಾಗಿ ಹೇಳಿ, ಇದೇ ಪ್ರಮಾಣದಲ್ಲಿಯೇ ಉಳಿದ ತಂತಿಗಳಲ್ಲಿ ಅಪಕರ್ಷಣವಾಗಬೇಕೆಂದು ಹೇಳುತ್ತಿದ್ದನು. ಎಲ್ಲಾ ಶ್ರುತಿಗಳೂ ಪ್ರಮಾಣದಲ್ಲಿ ಒಂದೇ ಆಗಿದ್ದರೆ, ಅಥವಾ ಒಂದು ಶ್ರುತಿಜಾತಿಯು ಎಲ್ಲಾ ಸಂದರ್ಭದಲ್ಲಿಯೂ ಒಂದೇ ಪ್ರಮಾಣವನ್ನು ಪಡೆದಿದ್ದರೆ ಭರತ, ಮತಂಗ, ಅಭಿನವಗುಪ್ತರು ಸ್ವರಯುಗ್ಮಗಳ ಏಕೀಭಾವದಮೂಲಕ ಶ್ರುತಿಪ್ರಮಾಣವನ್ನು ಹೇಳಿ ಅದನ್ನು ಎಲ್ಲಾ ಶ್ರುತಿಸ್ಥಾನಗಳಲ್ಲಿಯೂ ಅಪಕರ್ಷಿಸಬೇಕೆಂದು ಹೇಳುತ್ತಿರಲಿಲ್ಲ. ಗ್ರಾಮಭೇದಸೂಚಕವಾದ, ಪಂಚಮಾಪಕರ್ಷಣದಿಂದ ಹುಟ್ಟಿದ ಶ್ರುತಿಯ ಪ್ರಮಾಣದಲ್ಲಿಯೇ ಒಂದಾದಮೇಲೊಂದರಂತೆ ನಾಲ್ಕು ಬಾರಿ ಸಾರಣಾಕ್ರಿಯೆಯನ್ನು ಹೇಳುತ್ತಿದ್ದರು ; ಶಾರ್ಙ್ಗದೇವನು ಒಂದೇ ಪ್ರಮಾಣಶ್ರುತಿಯ ನಾಲ್ಕು ಪುನರಾವರ್ತಿತ ಅಪಕರ್ಷಣವನ್ನೇ ಹೇಳುತ್ತಿದ್ದನು. ಹೀಗೆ ಭರತ, ಮತಂಗ, ಅಭಿನವಗುಪ್ತರು ಸಾಧಿಸಿದ ಪ್ರಮೇಯಗಳನ್ನು ಆಯಾ ಕ್ರಮದ ದೋಷಗಳನ್ನು ಕಳೆದು ವೈಜ್ಞಾನಿಕ ರೀತಿಯಲ್ಲಿ ಹೇಳಿದ ಕೀರ್ತಿ ಅನವದ್ಯವಿದ್ಯಾವಿನೋದನಾದ ಶ್ರೀ ಶಾರ್ಙ್ಗದೇವನದು.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಧ್ರುವವೀಣೆ–ಚಲವೀಣೆಗಳಲ್ಲಿನ ಶ್ರುತಿನಿದರ್ಶನದ ಈ ವಿವೇಚನೆಯನ್ನು ಶಾರ್ಙ್ಗದೇವನ ಸಾರಣಾಕ್ರಮವನ್ನು ಮುಂದಿನ ಪಥಕದಲ್ಲಿ ಸಂಗ್ರಹಿಸುವುದರ ಮೂಲಕ ಉಪಸಂಹಾರ ಮಾಡಬಹುದು :

ಶ್ರುತಿನಿದರ್ಶನ

ಪಥಕ (9) : ಶಾರ್ಙ್ಗದೇವ ಪದ್ಧತಿ

| ಸಾರಣಾ ಸಂಖ್ಯೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|
| ಧ್ರುವವೀಣೆ | | | | ಸ | | | ರಿ | | ಗ | | | | ಮ | | | | ಪ | | | ಧ | | ನಿ |
| ಚಲವೀಣೆ | | | | ಸ | | | ರಿ | | ಗ | | | | ಮ | | | | ಪ | | | ಧ | | ನಿ |
| 1 | | | ಸ | | | ರಿ | | ಗ | | | | ಮ | | | | ಪ | | | ಧ | | ನಿ | |
| 2 | | ಸ | | | ರಿ | | ಗ | | | | ಮ | | | | ಪ | | | ಧ | | ನಿ | | |
| 3 | ಸ | | | ರಿ | | ಗ | | | | ಮ | | | | ಪ | | | ಧ | | ನಿ | | | |
| 4 | | | ರಿ | | ಗ | | | | ಮ | | | | ಪ | | | ಧ | | ನಿ | | | | (ಸ) |

## II ಶ್ರುತಿಗಳ ಸಂಖ್ಯೆಯ ವಿಷಯದಲ್ಲಿ ವಿವಿಧಮತಗಳು

ಇಲ್ಲಿಯವರೆಗೆ ಶ್ರುತಿನಿದರ್ಶನದ ವಿಷಯದಲ್ಲಿ ಭರತ, ಮತಂಗ, ಅಭಿನವಗುಪ್ತ ಮತ್ತು ಶಾರ್ಙ್ಗದೇವರುಗಳು ಹೇಳುವುದನ್ನು ಸ್ವಲ್ಪ ವಿಸ್ತಾರವಾಗಿಯೇ ಮಾಡಲಾಯಿತು. ಸುಮಾರು ಹನ್ನೆರಡು ಶ್ಲೋಕಗಳಲ್ಲಿ ಶಾರ್ಙ್ಗದೇವನು ಹೇಳಿ ಮುಗಿಸಿರುವ ಈ ವಿಷಯಕ್ಕೆ 65 ಪುಟಗಳಷ್ಟು ವಿಸ್ತಾರವಾದ ವಿವೇಚನೆಯು ಬೇಕಾಗಿತ್ತೇ ಎಂಬ ಪ್ರಶ್ನೆಯು ಮೂಡಿದರೂ, ಅದು ಅಗತ್ಯವೆಂದೇ ಹೇಳಬೇಕು. ಏಕೆಂದರೆ ಈ ಚಾರಿತ್ರಿಕ ಹಿನ್ನೆಲೆಯಲ್ಲಿ ಅಭ್ಯಾಸ ಮಾಡಿದ ಹೊರತು ಶ್ರುತಿಯ ಇಯತ್ತೆಯೂ ಅದರ ಕಲ್ಪನೆಯ ಇತಿಹಾಸವೂ ಸ್ಪಷ್ಟವಾಗುವುದಿಲ್ಲ. ಭರತನೂ ಶಾರ್ಙ್ಗದೇವನೂ ತಾವು ಹೇಳಬೇಕಾದುದನ್ನು ಬಹು ಸಂಗ್ರಹವಾಗಿ ಸೂತ್ರರೂಪದಲ್ಲಿ ಹೇಳಿದ್ದಾರೆ. ಇವರಿಬ್ಬರ ನಡುವೆ ಇರುವ ಸಾವಿರವರ್ಷಗಳಿಗೂ ಮೀರಿದ ಅಂತರಕ್ಕೆ ಅಭಿನವಗುಪ್ತನು ಸೇತುವೆ ಕಟ್ಟಿದ್ದಾನೆ. ಶ್ರುತಿಯ ಕಲ್ಪನೆಯು ನಮ್ಮ ನಾದಶಾಸ್ತ್ರಕ್ಕೂ ನಾದವಿಜ್ಞಾನಕ್ಕೂ ಬುನಾದಿಯಾಗಿರುವ ಪ್ರಮೇಯ. ಸಹಸ್ರಮಾನಗಳ ಕಾಲದ ಮಂಜಿನ ಮಬ್ಬು ಮುಸುಕಿನಲ್ಲಿ ಶ್ರುತಿಯ ಅರ್ಥವೂ ಪ್ರಯೋಗವೂ ಇಯತ್ತೆಯೂ ಹೇಗಿತ್ತೆಂಬುದನ್ನು ತಿಳಿಯಲು ನಮಗಿರುವ ಏಕೈಕ ಪ್ರಾಯೋಗಿಕ ಸೂಚನೆಯೆಂದರೆ ಈ ಶ್ರುತಿನಿದರ್ಶನವೇ. ಇದರ ಅರ್ಥವನ್ನೂ ಅದರಲ್ಲಿ ಅಡಗಿರುವ ಹಲವಾರು ಧ್ವನ್ಯರ್ಥಗಳನ್ನೂ ಚೆನ್ನಾಗಿ ತಿಳಿದುಕೊಳ್ಳದಿದ್ದರೆ ಪ್ರಾಚೀನ ಸಂಗೀತದ ಲಕ್ಷಣಗಳ ಯಾಥಾತಥ್ಯದ ಜ್ಞಾನವು ಉಂಟಾಗುವುದಿಲ್ಲ. ಈ ಶ್ರುತಿನಿದರ್ಶನದ ಅರಿವು ಸ್ಪಷ್ಟವಾಗಿ ಇಲ್ಲದುದರಿಂದಲೇ ಆಧುನಿಕ ಸಂಗೀತಶಾಸ್ತ್ರವಿಮರ್ಶಕರು ಹಲವರು ತಮ್ಮ ಪೂರ್ವಗ್ರಹಪೀಡಿತವಾದ ಕಲ್ಪನೆಗಳನ್ನೂ, ಅವಿಚಾರರಮಣೀಯವಾದ ಪ್ರಮೇಯಗಳನ್ನೂ, ಅವ್ಯಾಪ್ತಿ-ಅತಿವ್ಯಾಪ್ತಿಗಳಿಂದ ಕೂಡಿದ ವಾದಗಳನ್ನೂ ಅಶಾಸ್ತ್ರೀಯವಾದ ತತ್ತ್ವಗಳನ್ನೂ ವೈಜ್ಞಾನಿಕ ಜಿಜ್ಞಾಸೆಯಿಲ್ಲದೆ ಅದಕ್ಕೆ ಆರೋಪಿಸುತ್ತಾರೆ; ತಮಗೆ ಸರಿಯೆನಿಸಿದುದನ್ನೆಲ್ಲಾ, ಬೇಕಾದುದನ್ನೆಲ್ಲಾ

ಭರತೋಕ್ತಿಯಲ್ಲಿಯೇ ಕಾಣುತ್ತಾರೆ. ಅಂತಹವರು ಪ್ರಾಚೀನ ಅಥವಾ ಆಧುನಿಕ ಸಂಗೀತದ ಲಕ್ಷ್ಯಲಕ್ಷಣಗಳಲ್ಲಿ ಅವರು ಎಣಿಸುವ ಲೋಪದೋಷಗಳಿಗೆಲ್ಲ ಈ ಶ್ರುತಿನಿದರ್ಶನವನ್ನು ಸರ್ವರೋಗಹರ ಸಂಜೀವಿನಿಯೆಂದು ಅನ್ವಯಿಸುತ್ತಾರೆ. ಮತ್ತೆ ಕೆಲವರು ಭರತ, ಮತಂಗ ಶಾರ್ಙ್ಗದೇವರಿಗೆ ವೈಜ್ಞಾನಿಕ ಕ್ರಮದ ಅಭಾವವನ್ನು ಹೇಳಿ ಕನಿಕರಿಸುವ ಉದ್ಧಟತನವನ್ನೂ ತೋರಿಸುವುದುಂಟು. ಆದುದರಿಂದ ನಮ್ಮ ಸಂಗೀತಶಾಸ್ತ್ರಕ್ಕೆ ಅತ್ಯಂತ ಪ್ರಮಾಣಭೂತರೂ ಅತ್ಯಂತ ಪ್ರಾಮಾಣಿಕರೂ ಆಗಿರುವ ಈ ಮೂವರು ಆಚಾರ್ಯಪುರುಷರು ಈ ವಿಷಯದಲ್ಲಿ ಏನನ್ನು ಹೇಳಿದ್ದಾರೆ ಎಂಬುದನ್ನು ಖಚಿತವಾಗಿ ಅಭ್ಯಾಸಮಾಡಲೆಂದೇ ಈ ವಿಸ್ತಾರವು ಬೇಕಾಯಿತು.

ಈಗ ಶ್ರುತಿಗಳೆಷ್ಟೆಂಬುದರ ವಿಷಯದಲ್ಲಿ ಇರುವ ಪ್ರಾಚೀನಮತಗಳನ್ನು ಇಲ್ಲಿ ಸಂಗ್ರಹಿಸಿ ಸಂಕ್ಷೇಪವಾಗಿ ವಿವೇಚಿಸಲಾಗುವುದು. ಈ ಮತಗಳನ್ನೆಲ್ಲಾ ಸಂಗ್ರಹಿಸಿದವನು ಮತಂಗನೊಬ್ಬನೇ. ಭರತಮುನಿಯಾಗಲೀ ಅವನ ವ್ಯಾಖ್ಯಾನಕರರಾಗಲೀ, ನಾನ್ಯದೇವ, ಸೋಮೇಶ್ವರ, ಜಗದೇಕಮಲ್ಲ ಮುಂತಾದ ಪೂರ್ವಾಚಾರ್ಯರಾಗಲೀ ಇದನ್ನು ಹೇಳಲಿಲ್ಲ. ಶಾರ್ಙ್ಗದೇವನೂ ಸಹ ಈ ವಿಷಯದಲ್ಲಿ ಮೌನವಾಗಿದ್ದಾನೆ. ಪರಮಾರ್ಥದಲ್ಲಿ ಮುಂದೆ ಹೇಳುವ ಎಲ್ಲಾ ಮತಗಳೂ ಸ್ಥಾಯಿಯಲ್ಲಿ ಇಪ್ಪತ್ತೆರಡು ಶ್ರುತಿಗಳನ್ನು ಸ್ವೀಕರಿಸುವುದರಿಂದ ಅವನೂ ಇಪ್ಪತ್ತೆರಡು ಶ್ರುತಿಗಳನ್ನು ಪ್ರಮಾಣಪೂರ್ವಕವಾಗಿ ಹೇಳಿ ಮುಗಿಸಿಬಿಟ್ಟಿದ್ದಾನೆ. ಅವನ ಗ್ರಂಥದಲ್ಲಿ ಕೇವಲ ತಾತ್ತ್ವಿಕವಾದ ವಿಷಯಗಳ ವರ್ಣನೆಗೆ, ಎಂದರೆ ಲಕ್ಷ್ಯಕ್ಕೆ ನೇರವಾಗಿ ಪ್ರಯೋಜಕವಲ್ಲದ ಪ್ರಮೇಯಗಳ ನಿರೂಪಣೆಗೆ ಪ್ರಾಮುಖ್ಯವು ಕಡಿಮೆಯೇ. ಆದರೂ ಗ್ರಂಥಪೂರ್ತಿಗೆಂದು ಇಬ್ಬರು ವ್ಯಾಖ್ಯಾನಕಾರರೂ ಮತಂಗನಿಂದ ಈ ಮತಗಳನ್ನು ಉದ್ಧರಿಸಿ ಹೇಳುತ್ತಾರೆ. ಕಲ್ಲಿನಾಥನು ಇವುಗಳೆಲ್ಲವನ್ನೂ, ಸಿಂಹಭೂಪಾಲನು ಆರು ಮತಗಳನ್ನು ಮಾತ್ರವೂ ಉದ್ಧರಿಸುತ್ತಾರೆ.[139] ಆನಂತರದಲ್ಲಿ ಕುಂಭಕರ್ಣ[140] ಮತ್ತು ತುಳಜರು[141] ಮಾತ್ರ ಮತಂಗನನ್ನು ಈ ವಿಷಯದಲ್ಲಿ ಉದ್ಧರಿಸಿಕೊಳ್ಳುತ್ತಾರೆ. ಕುಂಭಕರ್ಣನು ಈ ಮತಗಳನ್ನು ತನ್ನ ಮಾತುಗಳಲ್ಲಿಯೇ ಶ್ಲೋಕರೂಪದಲ್ಲಿ ಹೇಳಿರುವುದಲ್ಲದೆ ತನ್ನವೇ ಅಭಿಪ್ರಾಯಗಳನ್ನೂ ಸೇರಿಸಿದ್ದಾನೆ.

ಮತಂಗನು ಹೀಗೆ ಎಂಟು ಮತಗಳನ್ನು ಪೂರ್ವಾಚಾರ್ಯರಿಂದ ಸಂಗ್ರಹಿಸಿ ಹೇಳಿದ್ದಾನೆ; ಹಾಗೂ ತನ್ನದೇ ಮತಕ್ಕೆ ಪ್ರಾಧಾನ್ಯವನ್ನೂ ಪ್ರಾಥಮ್ಯವನ್ನೂ ಕೊಟ್ಟಿದ್ದಾನೆ.

## 1. ಶ್ರುತಿಯು ಒಂದೇ

ಶ್ರುತಿಯು ಒಂದೇ, ಅನೇಕವೇ ಎಂದರೆ ಒಂದೇ ಎಂಬುದು ಮತಂಗನ ಮತ. ದೇಹಮಧ್ಯದಲ್ಲಿರುವ ಅಗ್ನಿ ಮತ್ತು ಪ್ರಾಣಗಳ ಸಂಯೋಗದಿಂದ ಹುಟ್ಟಿದ ಧ್ವನಿಯು (ನಕಾರಂ ಪ್ರಾಣ ಇತ್ಯಾಹುರ್ದಕಾರಶ್ಚಾನಲೋಮತಃ। ನಾದಸ್ಯ ಪದಾರ್ಥೋಽಯಂ ಸಮೀಚೀನೋ ಮಯೋದಿತಃ॥ ಎಂಬ ಅವನ ಉಕ್ತಿಯೊಡನೆ ಹೋಲಿಸಿ) ಪುರುಷ ಪ್ರಯತ್ನದಿಂದ (ಶಾರ್ಙ್ಗದೇವನ 'ಆತ್ಮಾ ವಿವಕ್ಷಮಾಣೋಽಯಂ ಮನಃ ಪ್ರೇರಯತೇ' ಮುಂತಾದ ಮಾತುಗಳೊಡನೆ ಹೋಲಿಸಿ) ನಾಭಿಯ ಮೇಲುಗಡೆ ಇರುವ ಪ್ರದೇಶವನ್ನು ಆಕ್ರಮಿಸುತ್ತದೆ. ಹೊಗೆಯು ಗಾಳಿಯಿಂದಾಗಿ ಮೆಟ್ಟಲುಮೆಟ್ಟಲಾಗಿ ಮೇಲೇರುವಂತೆ ಅಂತರ್ಭೂತಪೂರಣವೆಂಬ ಕಾರಣದಿಂದ ಧ್ವನಿಯು ಚತುಃಶ್ರುತಿಕವೇ ಮೊದಲಾದ ರೂಪಗಳಲ್ಲಿ ಪ್ರತ್ಯಯಾರ್ಥರೂಪದಲ್ಲಿ ಗೋಚರಿಸುತ್ತದೆ :

ಶ್ರೂಯಂತ ಇತಿ ಶ್ರುತಯಃ। ಸಾ ಚೈಕಾನೇಕಾ ವಾ। ತತ್ರೈಕೈವ ಶ್ರುತಿರಿತಿ। ತದ್ಯಥಾ—ತತ್ರಾದೌ ತಾವದಗ್ನಿಪವನಸಂಯೋಗಾತ್ ಪುರುಷಪ್ರಯತ್ನಪ್ರೇರಿತೋ ಧ್ವನಿರ್ನಾಭೇರೂರ್ಧ್ವಾಕಾರದೇಶಮಾಕ್ರಾಮುದ್

139 ಸಿಂಹಭೂಪಾಲ, ಉ. ಗ್ರಂ., ಪು. 68; ಕಲ್ಲಿನಾಥ, ಉ ಗ್ರಂ., ಪು. 70-73.

140 ಕುಂಭಕರ್ಣ, ಸಂಗೀತರಾಜ, II, 1, 1, 32-66, ಪು. 74-77. 141 ತುಳಜ, ಸಂಗೀತಸಾರಾಮೃತ, I, ಪು. 5-7.

ಧೂಮವತ್ ಸೋಪಾನಪದಕ್ರಮೇಣ ಪವನೇಚ್ಛಯಾ ಽನೇಕಧಾ ಽಽರೋಹನ್ ಅಂತರ್ಭೂತಪೂರಣಪ್ರತ್ಯಯಾರ್ಥತಯಾ ಶ್ರುತ್ಯಾದಿ(ಚತುಃಶ್ರುತಿತ್ವಾದಿ ?)ಭೇದಭಿನ್ನಃ ಪ್ರತಿಭಾಸತ ಇತಿ ಮಾಮಕೀಯಂ ಮತಮ್ । [142]

ಈ ಪಾಠವನ್ನು ಸಿಂಹಭೂಪಾಲನೂ [139] ಕಲ್ಲಿನಾಥನೂ [143] ಭಿನ್ನವಾಗಿ ಪಠಿಸಿದ್ದಾರೆ :

ದೇಹಾಕಾಶಪವನಸಂಯೋಗಾತ್ ಪುರುಷಪ್ರಯತ್ನಪ್ರೇರಿತೋ ಧ್ವನಿರ್ನಾಭೇರೂರ್ಧ್ವಮಾಕಾಶದೇಶಮಾಕ್ರಾಮನ್ ಧೂಮವತ್ ಸೋಪಾನಪದಾವಸ್ಥಾನಂ ಪವನೇಚ್ಛಯಾ ಽನೇಕಧಾ ಽಽರೋಹನ್ನಂತರ್ಭೂತಪೂರಣಪ್ರತ್ಯಯಾರ್ಥತಯಾ ಚತುಃಶ್ರುತಿತ್ವಾದಿಭೇದಭಿನ್ನೋ ಽವಭಾಸತೇ । [139]

ಶ್ರೂಯತ ಇತಿ ಶ್ರುತಿಃ । ಸಾ ಚೈಕಾ ಽನೇಕಾ ವಾ । ಏಕೈವ ಶ್ರುತಿರಿತಿ । ತದ್ಯಥಾ—ತತ್ರಾದೌ ತಾವದ್ದೇಹಾಕಾಶಪವನಸಂಯೋಗಾತ್ ಪುರುಷಪ್ರಯತ್ನಪ್ರೇರಿತೋ ಧ್ವನಿರ್ನಾಭೇರೂರ್ಧ್ವಮಾಕಾಶದೇಶಮಾಕ್ರಾಮನ್ ಧೂಮವತ್ ಸೋಪಾನಪದಕ್ರಮೇಣ ಪವನೇಚ್ಛಯಾ ಽನೇಕಧಾ ಽಽರೋಹನ್ ಅಂತರ್ಭೂತಪೂರಣಪ್ರತ್ಯಯಾರ್ಥತಯಾ ಚತುಃಶ್ರುತ್ಯಾದಿರ್ಭೇದಭಿನ್ನಃ ಪ್ರತಿಭಾಸತ ಇತಿ ಮಾಮಕೀನಂ ಮತಮ್ । [143]

ಇಲ್ಲಿ ಬೃಹದ್ದೇಶಿಯ ಪಾಠದಂತೆ ಪ್ರಾಣಾಗ್ನಿಗಳ ಸಂಯೋಗದಿಂದ ಹುಟ್ಟಿದ ಧ್ವನಿಯೆಂದೂ ಸಿಂಹಭೂಪಾಲ ಕಲ್ಲಿನಾಥರ ಪಾಠದಂತೆ (ಪ್ರಾಣ) ವಾಯುವು ದೇಹಾಕಾಶವನ್ನು, ಎಂದರೆ ದೇಹದಲ್ಲಿ ನಾದೋತ್ಪತ್ತಿಸ್ಥಾನಗಳಾದ ನಾಭಿಹೃತ್ಕಂಠಮೂರ್ಧಾಸ್ಯಗಳೆಂಬ ಐದು ಪ್ರದೇಶಗಳನ್ನು[144] ಸೇರುವುದರಿಂದ ಆದ ಧ್ವನಿಯೆಂದೂ ಅರ್ಥಮಾಡಬೇಕು. ಹಾಗೆಯೇ ಹೃದಯದ ಮೇಲುಗಡೆ ಇರುವ ಇಪ್ಪತ್ತೆರಡು ನಾಡಿಗಳಲ್ಲಿ ಮಾರುತಾಹತಿಯಿಂದ ಶ್ರುತಿಗಳು ಹುಟ್ಟುತ್ತವೆಂಬ ಶಾರ್ಙ್ಗದೇವನ[145] ಅರ್ಥವೂ ಇಲ್ಲಿ ಸಲ್ಲುತ್ತದೆ. ಹಾಗೆಯೇ ಬೃಹದ್ದೇಶಿಯ 'ನಾಭೇರೂರ್ಧ್ವಮಾಕಾಶದೇಶಮ್' ಎಂಬ ಪಾಠವೇ ಹೆಚ್ಚು ಪ್ರಶಸ್ತವಾಗಿದೆ. ಮತಂಗನು ಇಲ್ಲಿ ಪೂರ್ಣೋಪಮಾನವನ್ನು ಬಳಸಿದ್ದಾನೆ. ಹೀಗೆ ಧ್ವನಿಗೂ ಧೂಮಕ್ಕೂ, ಧ್ವನಿಗೂ ಆಕಾಶಕ್ಕೂ ಇಲ್ಲಿ ಹೋಲಿಕೆ. ಧೂಮವು ಉಂಟಾಗಬೇಕಾದರೆ ಬೆಂಕಿ ಗಾಳಿಗಳು ಬೇಕಾಗುವಹಾಗೆಯೇ ನಾದದ ಹುಟ್ಟಿಗೂ ಇವು ಬೇಕು. ಆದರೆ ಇವು ಎರಡೂ ದೇಹಸ್ಥವಾದ ವಿಶೇಷಗಳು. ಗಾಳಿಯ ಹೊಡೆತದಿಂದಲೇ ಹೊಗೆಯು ಮೇಲುಮೇಲಕ್ಕೆ ಏರಿ ಆಕಾಶವನ್ನು ವ್ಯಾಪಿಸುವುದು. ಹೀಗೆಯೇ ಪ್ರಾಣವಾಯುವು ದೇಹಾಕಾಶವನ್ನು ತುಂಬುವುದರಿಂದಲೇ ಧ್ವನಿಯೂ ಆಯಾಯಾ ಪ್ರದೇಶದಲ್ಲಿ ಗೋಚರಿಸುವುದು. ಹೊಗೆಯು ಒಂದೇ ಆದರೂ ಗಾಳಿಯ ಆಹತಿಯಿಂದ ಸುರುಳಿಸುರುಳಿಯಾಗಿ, ಗುಂಪುಗುಂಪಾಗಿ ಪ್ರತ್ಯೇಕವಾಗಿರುವಂತೆ ಗೋಚರಿಸುತ್ತದೆ. ಹಾಗೆಯೇ ಪ್ರಾಣವಾಯುವು ಧ್ವನಿಯನ್ನು ವಿವಿಧ ದೇಹಾಕಾಶಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ, ಎಂದರೆ ಚತುಃಶ್ರುತಿಕವಾದ ಷಡ್ಜ, ತ್ರಿಶ್ರುತಿಕವಾದ ಋಷಭ ಎಂದು ಮುಂತಾಗಿ ಬೇರೆ ಬೇರೆಯೆಂದು ಭಾಸವಾಗುವ ರೂಪಗಳಲ್ಲಿ ಗೋಚರಕ್ಕೆ ತರುತ್ತದೆ.

ಧ್ವನಿಯು ಆಕಾಶದಂತೆಯೂ ಹೌದು. ಆಕಾಶವು ವಾಸ್ತವವಾಗಿ ಒಂದೇ. ಆದರೂ ಮಡಕೆಯೇ ಮೊದಲಾದ ವಿವಿಧ ವಸ್ತುಗಳಲ್ಲಿ ಅದು ಒಳಗೆ ತುಂಬಿಕೊಂಡಿದ್ದು (ಅಂತರ್ಭೂತಪೂರಣ) ಬೇರೆ ಬೇರೆಯಾಗಿಯೇ ಇರುವಂತೆ ಪ್ರತಿಭಾಸವಾಗುತ್ತದೆ. ಹೀಗಾಗುವುದರಿಂದಲೇ ಇಷ್ಟಿಷ್ಟು ಆಕಾಶವೆಂಬ ನಿಶ್ಚಿತಜ್ಞಾನವು ಎಂದರೆ ಪ್ರತ್ಯಯಾರ್ಥವು ಹುಟ್ಟುವುದು. ಹೀಗೆ ಒಂದೇ ಆಗಿರುವ ಆಕಾಶವು ಪೃಥಕ್ಕಾಗಿ ವಿವಿಧ ನಿಶ್ಚಿತ ಪ್ರಮಾಣಗಳಲ್ಲಿ, ಎಂದರೆ ಖಂಡಿತ ಸ್ವರೂಪದಲ್ಲಿ ಗೋಚರಿಸಲು ಕಾರಣವು ಅದರ ಅಂತರ್ಭೂತಪೂರಣವೆಂಬ ಗುಣವೇ ; ಇದು

---

142 ಮತಂಗ, ಉ. ಗ್ರಂ., ಪು. 4.    143 ಕಲ್ಲಿನಾಥ, ಉ. ಗ್ರಂ., ಪು. 70.

144 ಶಾರ್ಙ್ಗದೇವ, ಉ. ಗ್ರಂ., I, 3, 6.    145 ಅದೇ ಗ್ರಂಥ, I, 3, 8-9.

ವಿವಿಧ ವಸ್ತುಗಳ ಮೂಲಕ ಉಂಟಾಗುತ್ತದೆ. ಹೀಗೆಯೇ ಶ್ರುತಿಯು ಅಖಂಡವಾಗಿ ಒಂದೇ ಆಗಿದ್ದರೂ ಮಡಕೆಯೇ ಮೊದಲಾದ ವಸ್ತುಗಳಂತಿರುವ ಷಡ್ಜರ್ಷಭಾದಿಗಳಲ್ಲಿ ಅಂತರ್ಭೂತಪೂರಣ ಗುಣವನ್ನು ಪಡೆದಿರುವುದರಿಂದ ಇಷ್ಟಿಷ್ಟು ನಾದವೆಂಬ ನಿಶ್ಚಿತಜ್ಞಾನವನ್ನು ಪ್ರತಿಭಾಸವಮಾಡಿಸುತ್ತದೆ. ಖಂಡಿತವಾದ ಆಕಾಶವೂ ಅದರ ವಿವಿಧವೂ ನಿಶ್ಚಿತವೂ ಆದ ಪ್ರಮಾಣಗಳೂ ಹೇಗೆ ವ್ಯಾವಹಾರಿಕ ಸತ್ಯಗಳೋ ಹಾಗೆಯೇ ಖಂಡಿತವಾದ ನಾದವೂ ಚತುಃ-ಶ್ರುತಿಯೇ ಮೊದಲಾದ ರೂಪಗಳಲ್ಲಿ ಗೋಚರಿಸುವ ಅದರ ನಿಶ್ಚಿತವೂ ವಿವಿಧವೂ ಆದ ಪ್ರಮಾಣಗಳೂ ವ್ಯಾವಹಾರಿಕ ಸತ್ಯಗಳೇ.

ಹೀಗೆ ನಾದದ ಅಖಂಡತೆಯನ್ನು ಈ ಸ್ವಂತ ಮತದಲ್ಲಿ ಮತಂಗನು ಹೇಳುತ್ತಿದ್ದಾನೆ. ಮಡಕೆಯೇ ಮೊದಲಾದವುಗಳು ಇರುವುದಕ್ಕಿಂತ ಮುಂಚೆಯೂ ಅವು ಇಲ್ಲವಾದ ಮೇಲೂ ಆಕಾಶದ ಅಖಂಡತ್ವವು ಸಿದ್ಧಿಸಿಯೇ ತೀರುತ್ತದೆ. ಮಡಕೆ ಮೊದಲಾದವುಗಳು ಅನಿತ್ಯಗಳಾದುದರಿಂದ ಆಕಾಶದ ಅಖಂಡತ್ವಕ್ಕೆ ನಿಜವಾದ ಬಾಧೆಯೇನೂ ಇಲ್ಲ. ಅದೇ ರೀತಿಯಲ್ಲಿ ಷಡ್ಜಾದಿ ಸ್ವರಗಳು ಇರುವುದಕ್ಕಿಂತ ಮುಂಚೆಯೂ ಅವುಗಳು ಮುಗಿದ ಮೇಲೂ ನಾದದ ಅಖಂಡತ್ವವು ಸಿದ್ಧವಾಗುತ್ತದೆ. ಮಡಕೆ ಮೊದಲಾದವುಗಳು ಅನಿತ್ಯವಾದರೂ ವ್ಯಾವಹಾರಿಕ ಸತ್ಯಗಳಾಗಿರುವಂತೆಯೇ ಷಡ್ಜಾದಿಗಳೂ ಕೇವಲ ವ್ಯಾವಹಾರಿಕ ಸತ್ಯಗಳು ಎಂದು ತಿಳಿಯಬೇಕು. ಆಕಾಶವು ನಿತ್ಯವಾದರೂ ಅದರ ಗೋಚರವು ಆಗಬೇಕಾದರೆ ಅದರ ಅಂತರ್ಭೂತಪೂರಣ ಗುಣವು ಕಾರ್ಯಶೀಲವಾಗಬೇಕಷ್ಟೆ. ಹಾಗೆಯೇ ನಾದವು ನಿತ್ಯವಾದರೂ ಅದು ಕೇಳಿಸಬೇಕಾದರೆ ಷಡ್ಜಾದಿ ಸ್ವರಗಳಲ್ಲಿ ಅದು ಅಂತರ್ಭೂತ ಪೂರಣದಿಂದಲೇ ಗೋಚರವಾಗಬೇಕು. ಆಗಲೇ ಅದರ ಪ್ರತ್ಯಯಾರ್ಥವು ನಮಗೆ ಉಂಟಾಗುವುದು. ಅಷ್ಟೇ ಅಲ್ಲದೆ ಆಕಾಶವು ಮಡಕೆಗೆ ಸಾಧಾರಣ ಕಾರಣವಾಗಿರುವಂತೆ ನಾದವು ಚತುಃಶ್ರುತಿಯೇ ಮೊದಲಾದ ಕಾರ್ಯರೂಪಗಳಲ್ಲಿ ಗೋಚರಿಸಲು ತಾನು ಸಾಧಾರಣ ಕಾರಣವಾಗಿರುತ್ತದೆ. ಈ ಕಡೆಯ ಅರ್ಥವು ನಾನು ಹೊರಡಿಸಿದುದು ಮಾತ್ರ; ಮತಂಗನಲ್ಲಿ ಇದರ ವಿವಕ್ಷೆಯಿಲ್ಲ; ಮುಂದೆ ಸ್ವರಗಳಿಗೂ ಶ್ರುತಿಗಳಿಗೂ ಇರುವ ಸಂಬಂಧದ ವಿವಿಧ ವಿಕಲ್ಪಗಳನ್ನು ವಿವೇಚಿಸುವಾಗ ಅವುಗಳಲ್ಲಿ ಕಾರ್ಯಕಾರಣ ಸಂಬಂಧವನ್ನು ಅವನು ನಿರಾಕರಿಸುತ್ತಾನೆ. ಆದರೆ ಶ್ರೀ ಶಾರ್ಙ್ಗದೇವನು ಅದನ್ನು ಗ್ರಹಿಸುತ್ತಾನೆ.

ಆದರೂ ಧ್ವನಿಯ ಉತ್ಕರ್ಷಾಪಕರ್ಷಗಳ ದೆಸೆಯಿಂದ ಉಂಟಾದ ಉಚ್ಚನೀಚಭಾವದಲ್ಲಿ ಯಾವ ವೈಲಕ್ಷಣ್ಯವು ಗೋಚರಿಸುತ್ತದೆಯೋ ಅದನ್ನೇ ಶ್ರುತಿ ಎಂದು ಲಕ್ಷಿಸಿದೆಯಷ್ಟೆ. ಉತ್ಕರ್ಷಾಪಕರ್ಷಗಳು ನಡೆಯುವಾಗ ಮಧ್ಯದಲ್ಲಿ ಅವಕಾಶವಿಲ್ಲದೆ ಎಂದರೆ ದೇಶಪರಿಚ್ಛಿನ್ನತೆಯಿಲ್ಲದೆ ಧ್ವನಿಯಲ್ಲಿನ ವಿಶೇಷವು ಅವಭಾಸವಾಗದು. ಎಂದರೆ ಎರಡು ಧ್ವನಿಗಳ ಮಧ್ಯದಲ್ಲಿ ಇರುವ ಅಂತರವನ್ನು ಶ್ರುತಿಯೆಂದು ಹೇಳಿದ ಹಾಗಾಯಿತು. ಆದುದರಿಂದ ನಾದವೂ ತನ್ಮೂಲಕ ಶ್ರುತಿಯೂ ಪರಿಚ್ಛಿನ್ನ ಸ್ವರೂಪದಲ್ಲಿ ಕ್ಷಣಿಕವಾಗಿ ಗೋಚರಿಸಿ ಮಾಯವಾಗುವ ಅನಿತ್ಯಗಳೆಂದು ಅರ್ಥವನ್ನು ಹೊರಡಿಸಬೇಕಾಗುತ್ತದೆ. ಎಂದರೆ ಶ್ರುತಿಯು ಕೇವಲ ಕ್ಷಣಿಕವಾದ ಅಸ್ತಿತ್ವವುಳ್ಳದೆಂದೂ ಪರಿಚ್ಛಿನ್ನವಾದುದೆಂದೂ ತಿಳಿಯಬೇಕಾಗುತ್ತದೆ. ಸೌಗತರು ಅಸ್ತಿತ್ವಕ್ಕೆ ಹೇಳುವುದಾದರೂ ಈ ಬಗೆಯ ಕ್ಷಣಿಕತೆ, ಪರಿಚ್ಛಿನ್ನತೆಗಳನ್ನೇ. ಮತಂಗನು ಅದನ್ನಿಲ್ಲಿ ನಿರಾಕರಿಸುತ್ತಿದ್ದಾನೆ. ಶ್ರುತಿಯ ಗೋಚರವು ಕ್ಷಣಿಕವೆಂದೂ ಪರಿಚ್ಛಿನ್ನವೆಂದೂ ಒಪ್ಪಿಕೊಂಡರೂ ಶ್ರುತಿಯ ಅಸ್ತಿತ್ವಕ್ಕೂ ಇವುಗಳನ್ನೇ ಹೇಳುವುದು ತಾರ್ಕಿಕ ದೋಷವೇ ಸರಿ. ಜ್ಞಾತೃವಿನ ಅಥವಾ ಜ್ಞಾನದ ಅಪರಿಪೂರ್ಣತಾ ಮೊದಲಾದ ದೋಷಗಳನ್ನು ಜ್ಞೇಯದಲ್ಲಿಯೂ ಹೇಳಲಾಗದು. ಆದುದರಿಂದಲೇ ಶ್ರುತಿಯ ಅಖಂಡತೆಗೂ ಏಕತೆಗೂ ಅದರ ಗೋಚರವಿಧಾನದಿಂದ ಬಾಧೆಯಿಲ್ಲ. ಹೀಗೆ ನಾದವೂ ಆದುದರಿಂದ ಶ್ರುತಿಯೂ ಅಖಂಡವೂ ಅಪರಿಚ್ಛಿನ್ನವೂ ಆಗಿವೆ. ಇದರ ತಾತ್ಪರ್ಯವೇನೆಂದರೆ ನಾದವ್ಯಾಪ್ತಿಯು ಒಂದಾದ ಮೇಲೊಂದರಂತೆ ಅನುಕ್ರಮದಿಂದಲೂ ನಡುವೆ ಅವಕಾಶವು ಅಡಗಿರುವಂತಹುದೂ ಆಗಿರುವ ನಾದಕಣಗಳ ಸರಣಿಯಲ್ಲ. ಅದು ತೈಲಧಾರೆಯಂತೆ ಅವಿಚ್ಛಿನ್ನವಾದುದು. ಮತಂಗನು ಶುದ್ಧವೈದಿಕಸಂಪ್ರದಾಯಪ್ರವರ್ತಕ

ನಾಗಿರುವುದರಿಂದಲೂ ಸಂಗೀತಶಾಸ್ತ್ರಪ್ರಮೇಯಗಳನ್ನು ವೈದಿಕಸಂಸ್ಕೃತಿ, ಸನಾತನಧರ್ಮಗಳ ಹಿನ್ನೆಲೆಯಲ್ಲಿಯೇ ಪಡೆಯಲೆಳಸುವುದರಿಂದಲೂ ಸೌಗತಾದಿಗಳ ಕ್ಷಣಿಕವಾದವನ್ನು ಹೀಗೆ ನಿರಾಕರಿಸುವುದು ಅತ್ಯಂತ ಸಮುಚಿತವೇ ಆಗಿದೆ. ಶಾರ್ಙ್ಗದೇವನು ಮತಂಗನ ಅಭಿಮತವನ್ನು ಶ್ರುತಿಯ ಲಕ್ಷಣವನ್ನು ಹೇಳುವಾಗ 'ಸ್ಯಾನ್ನಿರಂತರತಾ' ಎಂಬ ಒಂದೇ ಮಾತಿನಿಂದ ಅಂಗೀಕರಿಸಿರುವಂತೆ ತೋರುತ್ತದೆ. ಮೀಮಾಂಸಕರೂ ಸಹ ಶಬ್ದದ ಗೋಚರವು ಅನಿತ್ಯವೆಂದೂ ಶಬ್ದವು ನಿತ್ಯವೆಂದೂ ಒಪ್ಪಿಕೊಳ್ಳುವುದನ್ನಿಲ್ಲಿ ಸ್ಮರಿಸಬಹುದು (ಪು. 176).

ಒಟ್ಟಿನಲ್ಲಿ ಶ್ರುತಿ ಎಂಬುದರ ಸಾಮಾನ್ಯಾರ್ಥವನ್ನು ಅವಲಂಬಿಸಿ ಮತಂಗನು ಈ ಪಕ್ಷವನ್ನು ಗ್ರಹಿಸಿದ್ದಾನೆನ್ನ ಬಹುದು. ಶ್ರುತಿಯೆಂದರೆ ಕೇಳಿಸಿದ ನಾದವೆಂದೇ ಇಲ್ಲಿ ಅವನ ವಿವಕ್ಷೆ. ಆದುದರಿಂದಲೇ ನಾದದ ಅಪರಿಚ್ಛಿನ್ನತೆ ಯನ್ನೇ ಶ್ರುತಿಗೂ ಹೇಳಿದ್ದಾನೆ. ಹೀಗೆ ಹೇಳಿದುದರಿಂದ ದ್ವಾವಿಂಶತಿ ಶ್ರುತಿಗಳ ಸ್ವೀಕಾರಕ್ಕೆ ಅಡ್ಡಿಯೇನೂ ಇಲ್ಲ. ಏಕೆಂದರೆ ನಾದದ ಅವಿಚ್ಛಿನ್ನತೆಯನ್ನು ಹೇಳಿದರೂ ಅದರ ಅಂತರ್ಭೂತಪೂರಣಗುಣದಿಂದ ದ್ವಿಶ್ರುತಿಕ, ತ್ರಿಶ್ರುತಿಕ, ಚತುಃಶ್ರುತಿಕಗಳೆಂಬ ಪರಿಚ್ಛಿನ್ನ ವ್ಯಾವಹಾರಿಕ ಸ್ವರೂಪಗಳಾದ ಷಡ್ಜಾದಿ ಸ್ವರಗಳಾಗಿ ಅದು ಇರುವುದರಿಂದ ಈ ಏಳು ಸ್ವರಗಳಲ್ಲಿ ಪ್ರತ್ಯಯಾರ್ಥವಾಗಿ ನಿಶ್ಚಿತರೂಪದಲ್ಲಿ ಇರುವ ಒಟ್ಟು ಇಪ್ಪತ್ತೆರಡು ಶ್ರುತಿಗಳನ್ನು ಒಪ್ಪಿ ಕೊಂಡಂತೆಯೇ ಆಯಿತು. ಮೂಲಗ್ರಂಥದಲ್ಲಿ 'ಚತುಃಶ್ರುತಿತ್ವಾದಿ' ಎಂಬ ಪಾಠವಿಲ್ಲ; ಇದು ಸಿಂಹಭೂಪಾಲ, ಕಲ್ಲಿನಾಥರುಗಳಿಂದ ಪಠಿತವಾದುದು. ಹೀಗೆ ಓದಿಕೊಂಡರೆ ಇಪ್ಪತ್ತೆರಡು ಶ್ರುತಿಗಳ ಪಕ್ಷವು ಸುಲಭವಾಗಿ ಸಾಧ್ಯವಾಗುತ್ತದೆ. ಹಾಗಲ್ಲದೆ ಮುದ್ರಿತ ಬೃಹದ್ದೇಶಿಯ 'ಶ್ರುತ್ಯಾದಿ' ಎಂದೇ ಇಟ್ಟುಕೊಂಡರೆ ಆದಿ ಶಬ್ದಕ್ಕೆ ಶ್ರುತಿಯಂತೆಯೇ ಧ್ವನಿಯಲ್ಲಿ ಹುಟ್ಟುವ ಸ್ವರ, ಗ್ರಾಮ, ಮೂರ್ಛನೆ, ತಾನ, ಅಲಂಕಾರಾದಿಗಳನ್ನು ಹೇಳಬೇಕು. ಆಗ ಅಂತರ್ಭೂತಪೂರಣವೆಂಬುದಕ್ಕಾಗಲೀ ಪ್ರತ್ಯಯಾರ್ಥತಯಾ ಎಂಬುದಕ್ಕಾಗಲೀ 'ನಾಭೇರೂರ್ಧ್ವಾಕಾರದೇಶ-ಮಾಕ್ರಾಮದ್', 'ಅಗ್ನಿಪವನಸಂಯೋಗಾತ್', 'ಧೂಮವತ್ ಸೋಪಾನಪದಕ್ರಮೇಣ ಪವನೇಚ್ಛಯಾ ಆರೋಹನ್' ಎಂಬವುಗಳಿಗಾಗಲೀ ಅಷ್ಟು ಪುಷ್ಟಿಯಾದ ಅರ್ಥವು ಹೊರಡುವುದಿಲ್ಲ. ಈ ಭಾಗದಲ್ಲಿ ಗ್ರಂಥಪಾತ ವಿರುವಂತೆ ತೋರುವುದರಿಂದ 'ಚತುಃ' ಎಂಬುದು ಲೋಪವಾಗಿದೆಯೆಂದು ಭಾವಿಸಿ 'ಚತುಃಶ್ರುತ್ಯಾದಿ ಭೇದಭಿನ್ನಃ' ಎಂದು ಓದಿಕೊಂಡರೆ ಸಮಂಜಸವಾಗುತ್ತದೆ. ಈ ಪಾಠವು ಸಿಂಹಭೂಪಾಲ ಕಲ್ಲಿನಾಥರುಗಳಿಬ್ಬರೂ ಸ್ವೀಕರಿಸಿದ ಪಾಠಕ್ಕೆ ಸಮೀಪವಾಗುತ್ತದೆ. ಚತುಃಶ್ರುತ್ಯಾದಿ ಅಥವಾ ಚತುಃಶ್ರುತಿತ್ವಾದಿ ಎಂಬುದರಲ್ಲಿ ಆದಿ ಎಂಬುದನ್ನು ಉಪಲಕ್ಷಣವಾಚಕವೆಂದು ತಿಳಿದು ದ್ವಿಶ್ರುತಿ, ತ್ರಿಶ್ರುತಿಗಳನ್ನೂ ಈ ಶಬ್ದದ ಅರ್ಥವ್ಯಾಪ್ತಿಯಲ್ಲಿ ಸೇರಿಸಿಕೊಳ್ಳಬಹುದು. ಆದುದರಿಂದ ದ್ವಾವಿಂಶತಿ ಶ್ರುತಿಪಕ್ಷವು ಇಲ್ಲಿ ಗ್ರಾಹ್ಯವೆಂದೇ ತಿಳಿಯಬೇಕು. ವೇದಾಂತ ದರ್ಶನದ ಪ್ರಾಚೀನವೂ, ಬೃಹತ್ತೂ, ಮಹತ್ತೂ ಆಗಿರುವ ಚೌಕಟ್ಟಿನಲ್ಲಿಯೇ ಸಂಗೀತಶಾಸ್ತ್ರ ಮರ್ಯಾದೆಯನ್ನು ಮೀರದೆ ಅದರ ಪ್ರಾಥಮಿಕ ಪ್ರಮೇಯವೊಂದನ್ನು ವ್ಯಾಪಕವೂ ಅವಿರೋಧವೂ ಆಗಿರುವ ರೀತಿಯಲ್ಲಿ ಸಾಧಿಸಿರುವುದು ಮತಂಗನ ಪ್ರತಿಭೆಗೆ ಸಾಕ್ಷಿಯಾಗಿದೆ. ಆದುದರಿಂದ ಮೊದಲಿನಲ್ಲಿಯೇ ತನ್ನ ಮತವನ್ನು ಹೇಳಿಕೊಂಡಿರುವುದು ಸರಿಯಾಗಿದೆ. ಏಕೆಂದರೆ ಉಳಿದ ಪಕ್ಷಗಳು ಮನೋವೈಜ್ಞಾನಿಕ, ದೈಹಿಕ, ನಾದಶಾಸ್ತ್ರೀಯ ಮುಂತಾದ ಅಂಶದೃಷ್ಟಿ ಗಳಿಂದ ತಮ್ಮ ತಮ್ಮ ಮತಗಳನ್ನು ಇಲ್ಲಿ ಸ್ಥಾಪಿಸಿಕೊಂಡಿವೆ.

## 2. ಶ್ರುತಿಯು ಎರಡು ಪ್ರಕಾರ

ಆಚಾರ್ಯ ವಿಶ್ವಾವಸುವು ಶ್ರುತಿಯು ಎರಡು ಪ್ರಕಾರವೆನ್ನುತ್ತಾನೆ. ಸ್ವರಗತಶ್ರುತಿ, ಅಂತರವರ್ತಿನೀಶ್ರುತಿ ಎಂದು ಇವುಗಳಿಗೆ ಸಂಜ್ಞೆ. ಇವನಾದರೂ ಧ್ವನಿಯು ಶ್ರವಣೇಂದ್ರಿಯ ಗ್ರಾಹ್ಯತ್ವದಿಂದ ಶ್ರುತಿಯೆನಿಸಿಕೊಳ್ಳುತ್ತದೆ; ಅದು ಒಂದೇ ಆದರೂ ಎರಡು ವಿಧಗಳೆಂದು ತಿಳಿಯಬೇಕು. ನಿಯತವಾದ ಶ್ರುತಿಸ್ಥಾನಗಳಲ್ಲಿ ಇರುವುದರಿಂದ

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

(ಶುದ್ಧ, ಭಿನ್ನ, ಗೌಡ, ವೇಸರ, ಸಾಧಾರಣ, ಭಾಷಾ, ವಿಭಾಷಾಗಳೆಂದು ದುರ್ಗಾಶಕ್ತಿಯು ಹೇಳುವ[146]) ಏಳು ಗೀತಿಗಳಲ್ಲಿ, ಎಂದರೆ ಹಾಡಿನ ವಿಧಗಳಲ್ಲಿ, ಇವು ಹಾಡಲ್ಪಡುತ್ತವೆ. ಆದುದರಿಂದಲೇ ಇವುಗಳು ಸ್ವರಗತಗಳೆಂದು ಶ್ರುತಿಪಂಡಿತರಿಂದ ತಿಳಿಯಲ್ಪಡುತ್ತವೆ. (ಇವುಗಳ) ಮಧ್ಯದಲ್ಲಿ ಇರುವಂತಹವುಗಳು ಅಂತರಶ್ರುತಿಗಳೆಂದು ಸಮ್ಮತಿಸಿದೆ. ಇವುಗಳಿಗೆ ಗ್ರಾಮವಿಭಾಗದಿಂದ ವೈಸ್ವರ್ಯವು ಉಂಟಾಗುತ್ತದೆ; ಎನ್ನುತ್ತಾನೆ.

ಅನ್ಯೇ ಪುನರ್ದ್ವಿಪ್ರಕಾರಾಃ ಶ್ರುತೀರ್ವರ್ಣಯಂತೇ । ಕಥಮ್ ? ಸ್ವರಾಂತರವಿಭಾಗಾತ್ । ತಥಾ ಚ ವಿಶ್ವಾವಸುಃ—

ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್ ।
ಸಾ ಚೈಕಾಪಿ ದ್ವಿಧಾ ಜ್ಞೇಯಾ ಸ್ವರಾಂತರವಿಭಾಗತಃ ॥

ನಿಯತಶ್ರುತಿಸಂಸ್ಥಾನಾದ್ ಗೀಯಂತೇ ಸಪ್ತ ಗೀತಿಷು ।
ತಸ್ಮಾತ್ ಸ್ವರಗತಾ ಜ್ಞೇಯಾಃ ಶ್ರುತಯಃ ಶ್ರುತಿವೇದಿಭಿಃ ॥
ಅಂತಃಶ್ರುತಿವಿವರ್ತಿನ್ಯೋ ಹ್ಯಂತರಶ್ರುತಯೋ ಮತಾಃ ।
ಏತಾಸಾಮಪಿ ಚೈಶ್ವರ್ಯಂ (! ವೈಸ್ವರ್ಯಂ) ಕ್ರಿಯಾಗ್ರಾಮವಿಭಾಗತಃ । 142

ಇವುಗಳಲ್ಲಿ ಕಡೆಯ ಪಂಙ್ಕ್ತಿಯನ್ನು ಸಿಂಹಭೂಪಾಲನು ಉದ್ಧರಿಸುವುದಿಲ್ಲ. ಅಲ್ಲದೆ 'ನಿಯತಶ್ರುತಿಸಂಸ್ಥಾನಾದ್' ಎಂಬುದನ್ನು 'ನಿಯತಶ್ರುತಿಸಂಸ್ಥಿತೋ' ಎಂದು ಓದಿಕೊಂಡಿದ್ದಾನೆ.[139] ಅವನೂ ಕಲ್ಲಿನಾಥನೂ[147] 'ಅಂತಃಶ್ರುತಿವಿವರ್ತಿನ್ಯೋ' ಎನ್ನುವುದನ್ನು 'ಅಂತರಸ್ವರವರ್ತಿನ್ಯೋ' ಎಂದು ಪರಿಸಿದ್ದಾರೆ. ಮೂಲದಲ್ಲಿರುವ ಚೈಶ್ವರ್ಯಂ ಎಂಬ ಭ್ರಷ್ಟಪಾಠವನ್ನು ಕಲ್ಲಿನಾಥೀಯ ಪಾಠವಾದ ವೈಸ್ವರ್ಯಂ ಎಂಬುದರ ಬಲದಿಂದ ಇಲ್ಲಿ ತಿದ್ದಿದೆ.

ಇಲ್ಲಿ ಧ್ವನಿಯೆನ್ನುವುದಕ್ಕೆ ಕಲ್ಪಿಸುವ ಅರ್ಥವನ್ನು ಶ್ರುತಿ ಶಬ್ದದ ಅರ್ಥವು ಅವಲಂಬಿಸಿದೆ. ಧ್ವನಿಯೆಂದರೆ ಕೇವಲ ಶಬ್ದವೆಂದು ಅರ್ಥಮಾಡಿದರೆ ಕೇಳಿಸಿದ್ದೆಲ್ಲ ಶ್ರುತಿಯೇ. ಈ ಅರ್ಥವು ಸಂಗೀತಶಾಸ್ತ್ರಕ್ಕೆ ಪ್ರಯೋಜಕವಲ್ಲ. ಯಾವುದಾದರೊಂದು ನಿರ್ದಿಷ್ಟಸ್ಥಾನದಲ್ಲಿ ಪ್ರಕಟವಾದ ನಾದಕ್ಕೆ ಧ್ವನಿಯೆಂದು ಅರ್ಥಮಾಡಿದರೆ—ಇದಕ್ಕೆ ಅಭಿನವಗುಪ್ತಾಚಾರ್ಯನ ಸಮ್ಮತಿಯುಂಟು,—ಆಗ ಶ್ರವಣೇಂದ್ರಿಯಗ್ರಾಹ್ಯತೆ ಎನ್ನುವುದಕ್ಕೆ ಶ್ರವಣೇಂದ್ರಿಯ-ಗ್ರಹಣಸಾಮರ್ಥ್ಯವೆಂಬ ಅರ್ಥವನ್ನು ಕಲ್ಪಿಸಬೇಕು. ಆಗ ಧ್ವನ್ಯಂತರಾಶ್ರುತಿ ಮತ್ತು ನಿರಂತರತೆ ಎಂಬ ಶ್ರುತಿಲಕ್ಷಣಗಳ ಬಗೆಗೆ ಶಾರ್ಙ್ಗದೇವನೂ ಅಭಿನವಗುಪ್ತನೂ ಹೇಳುವ ಅಭಿಸಂಧಿಗಳ ಸೂಚನೆಯನ್ನು ಇಲ್ಲಿ ಕಾಣಬಹುದು. ಆಗ ಮತಂಗನ ಶ್ರುತಿಯ ಅಪರಿಚ್ಛಿನ್ನತಾಪಕ್ಷವೂ ಇಲ್ಲಿ ಅನ್ವಿತವಾಗುತ್ತದೆ. ಅದು ಒಂದೇ ಆದರೂ ಎರಡು ವಿಧದಲ್ಲಿ ಅಸ್ತಿತ್ವದ ಪ್ರತಿಭಾಸವನ್ನುಂಟುಮಾಡುತ್ತದೆ. ಅಥವಾ ಶ್ರುತಿಯು ಒಂದೇ ಆದರೂ ಎರಡು ರೀತಿಗಳಲ್ಲಿ ಕಾರ್ಯಶೀಲವಾಗುವುದರಿಂದ ಎರಡು ಪ್ರಕಾರಗಳಾಗಿ ಗಾನವ್ಯವಹಾರದಲ್ಲಿ ಕಂಡುಬರುತ್ತದೆ ಎಂದು ಅರ್ಥಮಾಡಬಹುದು.

ಇವುಗಳಲ್ಲಿ ಒಂದು ವಿಧವು ಸಪ್ತಗೀತಿಗಳಲ್ಲೆಲ್ಲಾ ಪ್ರಯುಕ್ತವಾಗುವಂತಹುದು. ಈ ಸಪ್ತಗೀತಿಗಳೇ ಗಾನಸರ್ವಸ್ವವನ್ನುಂಟುಮಾಡುವುದರಿಂದ ಈ ಶ್ರುತಿವಿಧವು ಸ್ವರವೆಂದು ವ್ಯವಹರಿಸಲ್ಪಡುವಂತಹುದು. ಎಂದರೆ ಇಡೀ ಗಾನಪ್ರಪಂಚದಲ್ಲಿರುವ ಎಲ್ಲಾ ಸ್ವರಗಳಿಗೂ ಇದು ಕಾರಣ. ಹೀಗಾಗಲು ಅದಕ್ಕೆ ಇರುವ ಅರ್ಹತೆಯೆಂದರೆ

146 ದುರ್ಗಾಶಕ್ತಿ, ಉದ್ಧೃತಿ, ಮತಂಗ, ಉ. ಗ್ರಂ., ಪು. 82 : ಇದಾನೀಂ ಸಂಪ್ರವಕ್ಷ್ಯಾಮಿ ಸಪ್ತಗೀತಿರ್ಮನೋಹರಾಃ।
. . . . . . ಇತಿ ತೇಷಾಂ ಲಕ್ಷಣಮುಚ್ಯತೇ ದುರ್ಗಾಶಕ್ತಿಮತಮ್ ।

147 ಕಲ್ಲಿನಾಥ, ಉ. ಗ್ರಂ., ಪು. 71.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ನಿಯತ ಶ್ರುತಿಸಂಸ್ಥಾನ. ಎಂದರೆ ನಿಶ್ಚಿತವಾದ ಸಂಖ್ಯೆಯಲ್ಲಿ, ಅನುಕ್ರಮದಲ್ಲಿ ಮತ್ತು/ಅಥವಾ ಪ್ರಮಾಣದಲ್ಲಿ ಇರುವ ಶ್ರುತಿಯಲ್ಲಿ ಸ್ವರವು ಇರುವುದು. ಅಥವಾ ಕೇಳಲು ಯೋಗ್ಯವಾದ, ನಿಶ್ಚಿತವಾದ ನಾದಸ್ಥಾನದಲ್ಲಿ ಸ್ವರವಿರುವುದು ಎಂದೂ ಶ್ರುತಿ ಎಂಬುದಕ್ಕೆ ಸಾಮಾನ್ಯಾರ್ಥವನ್ನು ಗ್ರಹಿಸಿ ಅರ್ಥಮಾಡಬಹುದು. ಈ ಪಕ್ಷದಲ್ಲಿ ಸಂಖ್ಯೆ, ಪ್ರಮಾಣಗಳ ಮೂಲಕವಾದ ಇಯತ್ತೆಯಿಲ್ಲ. ಹಾಗಾದರೆ ನಿಯತ ಎನ್ನುವುದಕ್ಕೆ ಆಯಾಯಾ ಸ್ವರವು ಪೂರ್ವಾಪರ ಸ್ವರಗಳನ್ನು ಕುರಿತು ನಿಶ್ಚಿತವಾದ ಆಯಾಯಾ ಸ್ಥಾನಗಳಲ್ಲಿಯೇ ಇರುತ್ತವೆ ಎಂದು ಅರ್ಥವಾಗುತ್ತದೆ. ಹೀಗೆ ನೈಯತ್ಯದಲ್ಲಿ ಇಯತ್ತೆಯನ್ನು ಗ್ರಹಿಸದಿದ್ದರೆ ಶ್ರುತಿಯ ಕಲ್ಪನೆಯು ಬಹು ಅಸ್ಪಷ್ಟವೂ ಸಂದಿಗ್ಧವೂ ಅಪ್ರಯೋಜಕವೂ ಆಗುತ್ತದೆ. ಅಷ್ಟೇ ಅಲ್ಲದೆ ಧ್ವನ್ಯಂತರಾಶ್ರುತಿ, ನಿರಂತರತೆ ಮೊದಲಾದ ಲಕ್ಷಣಗಳು ಶ್ರುತಿಗೆ ಬೇಕಾಗುವುದಿಲ್ಲ; 'ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್' ಎಂಬ ಮಾತೂ ನಿರರ್ಥಕವಾಗುತ್ತದೆ; ಧ್ವನಿಶಬ್ದವು ನಿಷ್ಕೃಷ್ಟಾರ್ಥವನ್ನು ಕಳೆದುಕೊಳ್ಳುತ್ತದೆ. ಆದುದರಿಂದ ನಿಯತವೆಂದರೆ ಇಯತ್ತೆಯೆಂಬ ಪಕ್ಷವೇ ಇಲ್ಲಿ ಗ್ರಾಹ್ಯವಾಗಿದೆ. ಹಾಗಾದರೆ ನಿಯತವೆಂದರೆ ದ್ವಿಶ್ರುತಿ, ತ್ರಿಶ್ರುತಿ, ಚತುಃಶ್ರುತಿ ಎಂಬ ಸಂಖ್ಯೆಯಿಂದಲೂ, ಪ್ರಮಾಣದಿಂದಲೂ, ಅನುಕ್ರಮದಿಂದಲೂ ನಿಗದಿಗೊಳಿಸಲ್ಪಟ್ಟುದು ಎಂದು ಅರ್ಥಮಾಡಿ ಇಷ್ಟನೆಯದೇ ಶ್ರುತಿಯಲ್ಲಿ ಇರುವುದರಿಂದ ಧ್ವನಿಗೆ ಸ್ವರತ್ವವು ಲಭಿಸಿ ಸಪ್ತಗೀತಿಗಳಲ್ಲಿ ವ್ಯವಹಾರವು ಪ್ರಾಪ್ತವಾಗುತ್ತದೆ ಎಂದೇ ಇಲ್ಲಿನ ತಾತ್ಪರ್ಯವಾಗುತ್ತದೆ. ಆದುದರಿಂದಲೇ ಈ ವಿಧಕ್ಕೆ ಸ್ವರಗತಶ್ರುತಿಯೆಂದು ಹೆಸರು. ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿಗಳೆಂಬ ಮಾತಿನಿಂದ ಕೇವಲ ಈ ಹೆಸರಿನಿಂದ ವ್ಯವಹೃತವಾದ, ಗ್ರಾಮದ್ವಯದ ಪ್ರಕೃತಿಭೂತವಾದ ಸ್ವರವ್ಯವಸ್ಥೆಯಲ್ಲಿ ಶುದ್ಧಾವಸ್ಥೆಗಳಲ್ಲಿರುವ, ಗಾಂಧಾರಾದಿ ಸ್ವರಗಳೆಂದು ತಿಳಿಯಬಾರದು. ಏಕೆಂದರೆ ಈ ಬಗೆಯ ನಿಯತಶ್ರುತಿ ಸ್ಥಾನವು ಚತುಃಶ್ರುತಿತ್ವದಲ್ಲಿ ಕಾಕಲೀ, ಅಂತರ ಮೊದಲಾದ ಸ್ವರಗಳಿಗೂ ತ್ರಿಶ್ರುತಿತ್ವದಲ್ಲಿ ಸಾಧಾರಣ ಗಾಂಧಾರ, ಕೈಶಿಕಿ ನಿಷಾದಗಳಿಗೂ ಉಂಟು. ಇವುಗಳಿಗೆ ಪ್ರತ್ಯೇಕವಾದ ಸ್ವರವೆಂಬ ಹೆಸರಿಲ್ಲದಿದ್ದರೂ ಇವಕ್ಕೆ ಸ್ವರತ್ವವೂ ಸಪ್ತಗೀತಿಗಳಲ್ಲಿ ಪ್ರಯೋಗವೂ ಉಂಟಷ್ಟೆ. ಆದುದರಿಂದ 'ನಿಯತಶ್ರುತಿಸಂಸ್ಥಾನಾದ್' ಎಂಬುದನ್ನು ಅದರ ವಿಶಾಲವೂ ಸಾಮಾನ್ಯವೂ ಆದ ಅರ್ಥದಲ್ಲಿಯೇ ಕಾಣಬೇಕು.

ಬೃಹದ್ದೇಶಿಯಲ್ಲಿ 'ಅಂತಃಶ್ರುತಿವಿವರ್ತಿನ್ಯೋ ಹ್ಯಂತರಶ್ರುತಯೋ ಮತಾಃ' ಎಂದು ಎರಡನೆಯ ಶ್ರುತಿ-ಪ್ರಕಾರದ ಲಕ್ಷಣವಿದೆ. 'ಅಂತಃಶ್ರುತಿ' ಎಂದರೆ ಒಳಗೆ ಇರುವ ಶ್ರುತಿ ಎಂದು ಅರ್ಥ. ಒಳಗೆ ಎಂದರೆ ನೆರೆಹೊರೆಯ ಎರಡು ಸ್ವರಗತಶ್ರುತಿಗಳ ಒಳಗೆ, ಅರ್ಥಾತ್ ನಡುವೆ ಎಂದು ಅರ್ಥ. ವಿವರ್ತಿನ್ ಶಬ್ದವು ತಿರುಗು, ಪರಿಭ್ರಮಣ ಮಾಡು, ವ್ಯತ್ಯಾಸವಾಗು, ನೆಲೆಸು, ಮನೆಮಾಡಿಕೋ ಇತ್ಯಾದಿ ಅರ್ಥಗಳಲ್ಲಿ ಪಠಿತವಾದ, ನಕಾರಾಂತವಾಗಿ ಮೂರೂ ಲಿಂಗಗಳಲ್ಲಿ ವ್ಯವಹರಿಸಬಹುದಾದ, ನಾಮಪದವಾಗಿದೆ. ಮೇಲೆ ಹೇಳಿದ ಕ್ರಿಯೆಗಳಿಗೆ ಕರ್ತೃವಾಗಿರುವುದೇ 'ವಿವರ್ತಿನ್.' ತಿರುಗು, ಪರಿಭ್ರಮಣಮಾಡು ಎಂಬುದಕ್ಕೆ ಕೇವಲ ಒಂದು ಅನ್ವಯದಿಂದ ಇಲ್ಲಿ ಅರ್ಥ ಹೊರಡಿಸಬೇಕಾಗುತ್ತದೆ. ಎರಡೂ ಗ್ರಾಮಗಳಲ್ಲಿರುವ ಎಲ್ಲಾ ಮೂರ್ಛನೆಗಳನ್ನೂ ನಡೆಸುವುದರಿಂದ, ಪರಿಭ್ರಮಣದಿಂದ ಉಂಟಾಗುವ ಶ್ರುತಿಗಳು ಇವು ಎಂದಿಟ್ಟುಕೊಳ್ಳಬೇಕಾಗುತ್ತದೆ. ಆದರೆ ಇದು ಇಲ್ಲಿ ಉಪಪನ್ನವಲ್ಲ. ಏಕೆಂದರೆ ಮೂರ್ಛನಾಕ್ರಮದಿಂದ ಸಾಧ್ಯವಾದುದು ಎನ್ನುವುದಕ್ಕೆ ಇಲ್ಲಿ ಎಲ್ಲಿಯೂ ಸೂಚನೆಯಿಲ್ಲ. ಅಲ್ಲದೆ ಶ್ರುತಿಯಿಂದ ಗ್ರಾಮ, ಗ್ರಾಮದಿಂದ ಮೂರ್ಛನೆ ಹೀಗೆ ತತ್ತ್ವಜಿಜ್ಞಾಸಾ ಕ್ರಮವನ್ನು ಹೇಳಿ ಮುಂದೆ ಹೇಳಲಿರುವ ಮೂರ್ಛನೆಯಿಂದ, ಅದರ ಸ್ವರೂಪಜ್ಞಾನ, ವಿಭಾಗ ಮುಂತಾದವುಗಳನ್ನು ಮೊದಲು ಹೇಳದೆಯೇ ಶ್ರುತಿವಿಭಾಗವನ್ನು ವಿಶ್ವಾವಸುವು ಹೇಳುತ್ತಾನೆಂಬುದು ಸರಿಯಾಗಿ ಕಾಣುವುದಿಲ್ಲ. 'ವ್ಯತ್ಯಾಸವಾಗು' ಎನ್ನುವ ಅರ್ಥವನ್ನಿಲ್ಲಿ ಹೊಂದಿಸಬಹುದು: ಅಂತಃಶ್ರುತಿಯಿಂದ, ಎಂದರೆ ಅದರ ಕಾರಣದಿಂದ ವ್ಯತ್ಯಾಸವಾಗು ಎನ್ನುವುದು ಇದರ ಅರ್ಥ. ಅಂತಃಶ್ರುತಿಯಾಗಿರುವುದರಿಂದ ಭಿನ್ನಧರ್ಮವನ್ನು ಪಡೆಯುವುದು ಎಂಬ ಈ ಅರ್ಥವು ಸ್ವರಗತಶ್ರುತಿಯಿಂದ ವ್ಯತ್ಯಾಸ

ವಾಗಿರುವಿಕೆ ಎಂಬ ಪೂರ್ವಾಭಿಕಾಂಕ್ಷೆಯಿಂದ ಹೊರಡುತ್ತದೆ. ಸ್ವರಗತವಾದಾಗ ಎಂದರೆ ಆಯಾ ಸ್ವರದ ಪರಮ ಶ್ರುತಿಸ್ಥಾನದಲ್ಲಿ ಇರುವಾಗ ಸ್ವರತ್ವವೆಂಬ ಧರ್ಮವೂ, ಆಯಾಸ್ವರದ ಉಳಿದ ಶ್ರುತಿಸ್ಥಾನಗಳಲ್ಲಿರುವಾಗ ಸ್ವರವಿಹೀನತೆ ಯೆಂಬ ವಿರುದ್ಧಧರ್ಮವೂ ಉಂಟಾಗುತ್ತವೆ. ಈ ಭಿನ್ನಧರ್ಮಗಳಿಗೆ ಕಾರಣವಾದುದು ಆಯಾ ಶ್ರುತಿಯ ಸ್ಥಾನ. ನಿಯತವಾದ ಎಂದರೆ ಶಾಸ್ತ್ರದಲ್ಲಿ ನಿಯತವಾದ ಎಂದು ತಿಳಿಯಬೇಕು. ಪಂಚಶ್ರುತಿ, ಷಟ್‌ಶ್ರುತಿ ಮೊದಲಾದವುಗಳು ಪ್ರಾಚೀನ ಭಾರತೀಯ ಸಂಗೀತಶಾಸ್ತ್ರದಲ್ಲಿ ನಿಷಿದ್ಧವಾದ ಸ್ವರಪ್ರಮಾಣಗಳಾಗಿದ್ದವು. ಅಂತೆಯೇ ಒಂದು ಶ್ರುತಿಯ ಪ್ರಮಾಣವೂ ಸ್ವರತ್ವಕ್ಕೆ ಅಪ್ರಯೋಜಕವಾಗಿತ್ತು. ಗ್ರಾಮಗಳಲ್ಲಿ ಸ್ವರವ್ಯವಸ್ಥೆಯನ್ನು ಹೇಳುವಾಗಲೂ ಸ್ವರಸಾಧಾರಣವನ್ನು ಹೇಳುವಾಗಲೂ ವಿಧಿಸಿದ ಶ್ರುತಿಪ್ರಮಾಣಗಳೇ ನಿಯತವಾದವುಗಳು. ಯಾವುದೋ ಸ್ಥಾನ ದಿಂದ ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿ ಪ್ರಮಾಣಗಳಲ್ಲಿ ಉಂಟಾದ ಅಂತರವನ್ನು ಆಯಾ ಪ್ರಮಾಣದ ಸ್ವರಗಳೆಂದು ತಿಳಿಯಲಾಗದು. ಇದನ್ನು ಶ್ರುತಿನಿದರ್ಶನದ ವಿವೇಚನೆಯಲ್ಲಿ ಈಗಾಗಲೇ ಪ್ರಸ್ತಾಪಿಸಿದೆ. (ಪು. 230, 235) ಈ ವಿಧಿಗಳಲ್ಲಿ ಹೇಳದಿರುವ ಶ್ರುತಿಸ್ಥಾನಗಳಲ್ಲಿ ಸ್ವರತ್ವವಿಲ್ಲ ಎಂಬುದೇ ಇಲ್ಲಿನ ವಿವಕ್ಷೆ. ಸ್ವರತ್ವವಿಲ್ಲ ಎಂದರೆ, ಅಂತಹ ಅಂತಃಶ್ರುತಿಯಲ್ಲಿದ್ದಾಗ ಧ್ವನಿಗೆ ಸ್ವರತ್ವವು ನಾಶವಾದರೂ, ಪೂರ್ವಾಭಿಕಾಂಕ್ಷೆಯೆಂಬ ತತ್ತ್ವದಿಂದಲೂ ಉತ್ತರೋತ್ತರವಾಗಿ ವಿಶಿಷ್ಟಸಂಸ್ಕಾರ ಪ್ರದಾನ ಎಂಬ ತತ್ತ್ವದಿಂದಲೂ ಇವು ಸ್ವರಗತಶ್ರುತಿಯ ಸ್ವರತ್ವವೆಂಬ ಧರ್ಮಕ್ಕೆ ಹೇತುಗಳೇ ಎಂಬುದನ್ನು ಸ್ಮರಿಸಬೇಕು. ಇದನ್ನು ಶಾರ್ಙ್ಗದೇವನು

. . . . . ತೃತೀಯಾ ऽऽದಿಃ ಶ್ರುತಿಃ ಪೂರ್ವಾಭಿಕಾಂಕ್ಷಯಾ ।
ನಿರ್ಧಾರ್ಯತೇ ऽತಃ ಶ್ರುತಯಃ ಪೂರ್ವಾ ಅಪ್ಯತ್ರ ಹೇತವಃ | [136]

ಎಂಬ ಮಾತಿನಲ್ಲಿಯೂ ಅಭಿನವಗುಪ್ತನು ' ತತ ಏವ ತಿಸ್ರಃ ಶ್ರುತಯ ಋಷಭಃ ಇತ್ಯಾದಿ ವಕ್ಷ್ಯತೇ, ನ ತು ತೃತೀಯಾ ಶ್ರುತಿರಿತಿ | [132] ಮುಂತಾದ ಮಾತುಗಳಲ್ಲಿಯೂ ಹೇಳಿದ್ದಾರೆ. ಸ್ವರಗತ ಶ್ರುತಿಗಳ ಸ್ಥಾನದಲ್ಲಿ ಶುದ್ಧ-ಸ್ವರಗಳೂ ವಿಕೃತಸ್ವರಗಳೂ ಉಂಟಾಗುತ್ತವೆ. ವಿಕೃತಸ್ವರಗಳು ಎಂದರೆ ಮಧ್ಯಮಗ್ರಾಮದ ತ್ರಿಶ್ರುತಿ ಪಂಚಮ, ಚತುಃಶ್ರುತಿ ಧೈವತ, ಷಡ್ಜಸಾಧಾರಣದಲ್ಲಿ ಚತುಃಶ್ರುತಿಕ ರಿಷಭ, ತ್ರಿಶ್ರುತಿಕ ನಿಷಾದ, ದ್ವಿಶ್ರುತಿಕಷಡ್ಜ, ಮಧ್ಯಮ ಸಾಧಾರಣದಲ್ಲಿ ತ್ರಿಶ್ರುತಿಕ ಗಾಂಧಾರ, ದ್ವಿಶ್ರುತಿಕ ಮಧ್ಯಮ, ಚತುಃಶ್ರುತಿಕ ಪಂಚಮ, ಅಂತರತ್ವದಲ್ಲಿ ಚತುಃ-ಶ್ರುತಿಕ ಗಾಂಧಾರ, ಕಾಕಲೀತ್ವದಲ್ಲಿ ಚತುಃಶ್ರುತಿಕ ನಿಷಾದ, ಇವುಗಳೆಂದು ತಿಳಿಯಬೇಕು. ಇವುಗಳಲ್ಲದ ಶ್ರುತಿ ಸ್ಥಾನಗಳೆಲ್ಲವೂ ಅಂತಃಶ್ರುತಿಸ್ಥಾನಗತಗಳಾದ ಅಂತರಶ್ರುತಿಗಳು.

ಮತಂಗನು ಈ ಪಕ್ಷವನ್ನು ಮಂಡಿಸುವಾಗ ' ಅನ್ಯೇ ಮನ್ಯಂತೇ ' ಎಂದು ಬಹುವಚನವನ್ನು ಹೇಳಿ ಇದಕ್ಕೆ ಉದಾಹರಣೆಯಾಗಿ (ತಥಾ ಚ) ವಿಶ್ವಾವಸುವನ್ನು ಏಕವಚನದಲ್ಲಿ ನಿರ್ದೇಶಿಸಿರುವುದರಿಂದ ಈ ಮತವನ್ನು ಹೇಳಿದವನು ಆಚಾರ್ಯ ವಿಶ್ವಾವಸುವು ಒಬ್ಬನೇ ಅಲ್ಲವೆಂದೂ ಇತರ ' ಶ್ರುತಿ ಮೀಮಾಂಸಾಮಾಂಸಲಿತಧೀಮಂತ ಧೀರ ' ರೂ ಇದನ್ನು ಸ್ವೀಕರಿಸಿದ್ದರೆಂದೂ ತಿಳಿಯಬೇಕು. ಹೀಗೆ ಹೇಳಿದವರಲ್ಲಿ ಮತಂಗನಿಗಿಂತ ಪೂರ್ವಾಚಾರ್ಯ ನಾಗಿದ್ದ ವಿಶಾಖಿಲಾಚಾರ್ಯನು ಒಬ್ಬ. ಇವನಲ್ಲದೆ ಇತರ ಪೂರ್ವಾಚಾರ್ಯರೂ ಇದ್ದರೆಂಬುದು ಅಭಿನವಗುಪ್ತನು ಈ ಸಂದರ್ಭದಲ್ಲಿ ಹೇಳಿದ ' ತತ್ರ ವಿಶಾಖಿಲಾಚಾರ್ಯಪ್ರಭೃತಿಭಿಃ ' ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಮತಂಗನಿಗಿಂತ ಅರ್ವಾಚೀನನೂ ಅಭಿನವಗುಪ್ತಾಚಾರ್ಯನಿಗೆ ನಾಟ್ಯಶಾಸ್ತ್ರದಲ್ಲಿ ಪ್ರತ್ಯಕ್ಷಗುರುವೂ ಆಗಿದ್ದ ಭಟ್ಟತೌತನೂ ಇದೇ ಪಕ್ಷವನ್ನೇ ಗ್ರಹಿಸಿದ್ದವನು. ಅಭಿನವಗುಪ್ತನು ವಿಶಾಖಿಲನಿಂದ ಉದ್ಧರಿಸಿದ ' ಸ್ವಸಂವೇದ್ಯೇ ಪರಮೇ ಶ್ರುತಿಧಾಮ್ನಿ ಸಮವಧಾನಂ ಜಪವದ್ದೀಯಮಾನಂ ವಿಶಿಷ್ಟಾದೃಷ್ಟಾಯ ಪ್ರಯೋಕ್ತುರ್ಭವತಿ ' [132] ಎಂಬ ಮಾತಿನಿಂದಲೂ ಭಟ್ಟತೌತನಿಂದ ಸಂಗ್ರಹಿಸಿದ ' ಶ್ರುತಿಃ ಸ್ವರಃ ಸ್ವಸಂವೇದ್ಯಾ ' ಎಂಬ ಮಾತಿನಿಂದಲೂ [132]

ಇದನ್ನು ತಿಳಿಯಬಹುದು. ವಿಶಾಖಿಲನು ಈ ಪಕ್ಷವನ್ನು ಸ್ವೀಕರಿಸಿದ್ದಾನೆಂಬುದಕ್ಕೆ ನೇರವಾದ ಸಾಕ್ಷ್ಯವೇ ಇದೆ : ಅಭಿನವಗುಪ್ತನು ಅವನಿಂದ 'ಶ್ರುತಯಃ ಸ್ವರಾಂತರಗತಾಃ', 'ಸಪ್ತಾಶ್ರಯತಯಾ ಸ್ವರಗತಾಃ', 'ಅಂತರಗತಾಸ್ತ್ವನ್ಯಾ'[115] ಎಂಬ ಉಕ್ತಿಗಳನ್ನು ಉದ್ಧರಿಸಿಕೊಂಡಿದ್ದಾನೆ.

'ಸಪ್ತಾಶ್ರಯತಯಾ' ಎನ್ನುವಲ್ಲಿ ಕೇವಲ ಸಪ್ತ ಶುದ್ಧಸ್ವರಗಳನ್ನು ವಿವಕ್ಷಿಸಿ ಉಳಿದ ಸ್ವರಸ್ಥಾನಗಳನ್ನು—'ಅನ್ಯಾಸ್ತು ಅಂತರಗತಾಃ'—ತು ಎಂಬ ನಿಪಾತದಿಂದ ವಿಕೃತಗಳೆಂದು ಪರಿಗಣಿಸಲಾಗದೇ ಎಂಬ ಒಂದು ಸಂದೇಹವು ಮೇಲಿನ ಉದ್ಧೃತಿಗಳಿಂದ ಉಂಟಾಗುತ್ತದೆ. ವಿಶ್ವಾವಸುವಿನ ಪಕ್ಷದಲ್ಲಿ ಈ ಅರ್ಥವನ್ನು ಗ್ರಹಿಸುವವರೂ ಇದ್ದಾರೆಂಬುದನ್ನು ಸಧ್ಯದಲ್ಲಿಯೇ ಸೂಚಿಸಲಾಗುವುದು. ಆದರೆ ಸಪ್ತ ಎಂಬ ಶಬ್ದದಿಂದ ಏಳು ಸ್ವರಗಳನ್ನು ಇಲ್ಲಿ ವಿವಕ್ಷಿಸಿದೆಯೇ ಹೊರತು ಏಳು ಶುದ್ಧ ಅಥವಾ ಪ್ರಕೃತಿಸ್ವರಗಳನ್ನು ಮಾತ್ರವಲ್ಲ. ಸ್ವರವೆಂಬುದು ಅವಾಂತರ ಭೇದಗಳೆಲ್ಲವನ್ನೂ ಒಳಗೊಂಡ ಸಮುಚ್ಚಯ ನಾಮ. ಆದುದರಿಂದಲೇ ಸ್ವರಗಳನ್ನು ಎಣಿಸುವಾಗ ಏಳು ಎಂದು ಮಾತ್ರವೇ, ಅವುಗಳನ್ನು ಹೆಸರಿಸುವಾಗ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದಗಳು ಎಂದು ಮಾತ್ರವೇ ನಮ್ಮ ಸಂಗೀತಶಾಸ್ತ್ರಪ್ರವರ್ತಕರಲ್ಲಿ ಪ್ರತಿಯೊಬ್ಬನೂ ಹೇಳುವುದು. ಭರತನಿಂದ ಅತ್ಯಾಧುನಿಕರವರೆಗೆ ಯಾರೂ ಇದಕ್ಕೆ ಅಪವಾದವಿಲ್ಲ. ಈ ವಿಷಯವನ್ನು ಮೊದಲು ಸ್ಪಷ್ಟಪಡಿಸಿರುವುದು ದತ್ತಿಲಮುನಿ :

'ಅನಂಶತ್ವಾತ್ತು ಭೇದೇನ ಸ್ವರತಾ ನೋಽಚ್ಯತೇ ತಯೋಃ'[148]

ಎಂದು ಅಂತರಗಾಂಧಾರ, ಕಾಕಲೀನಿಷಾದಗಳ ವಿಷಯದಲ್ಲಿ ಹೇಳಿದ್ದಾನೆ. ಹಾಗೆಯೇ ಭರತಮುನಿಯ

ತತ್ರಸ್ವರಾಃ—

ಷಡ್ಜಶ್ಚ ಋಷಭಶ್ಚೈವ ಗಾಂಧಾರೋ ಮಧ್ಯಮಸ್ತಥಾ ।
ಪಂಚಮೋ ಧೈವತಶ್ಚೈವ ಸಪ್ತಮೋಽಥ ನಿಷಾದವಾನ್ ।[149]

ಎಂಬುದಕ್ಕೆ ಅಭಿನವಗುಪ್ತನು ವ್ಯಾಖ್ಯಾನ ಬರೆಯುವಾಗ 'ಸಪ್ತ ಇತಿ ವಚಸಾ ಕಾಕಲ್ಯಂತರೌ ನ ಪೃಥಕ್‌ಸ್ವರಾವಿತಿ ದರ್ಶಯತಿ ।'[150] ಎಂದೂ, ಕಾಕಲ್ಯಂತರಗಳು ಚತುಃಶ್ರುತಿಕಗಳಾಗಿದ್ದು ಪೂರ್ಣಗಳಾಗಿದ್ದರೂ ಪ್ರತ್ಯೇಕವಾದ ಸ್ವರಗಳಲ್ಲ ಎಂಬುದನ್ನು 'ಪೂರ್ಣತ್ವಾತ್ ತಚ್ಚ ಸ್ವರದ್ವಯಮೇವ ಪಂಚಮಸ್ಯ ಚತುಃಶ್ರುತಿಕತ್ವವಿರಾಮಾತ್ ಕಾಕಲ್ಯಂತರಯೋಶ್ಚತುಃಶ್ರುತಿಕತ್ವಂ ವಿಕಾರೋ ನ ಸ್ವಭಾವಃ ।'[115] ಎಂದೂ ಸ್ಪಷ್ಟಪಡಿಸುತ್ತಾನೆ. ಆದುದರಿಂದ 'ಸಪ್ತಾಶ್ರಯತಯಾ' ಎನ್ನುವುದಕ್ಕೆ ಎಲ್ಲಾ ಅವಾಂತರಭೇದಗಳನ್ನೂ ಒಳಗೊಂಡ ಸಪ್ತಸ್ವರಗಳು ಎಂಬ ಅರ್ಥವೇ ಸರಿ. ಹೀಗಾದರೆ ಲಕ್ಷ್ಯಸಿದ್ಧವಾದ ಎಲ್ಲಾ ಸ್ವರಪ್ರಮಾಣಗಳೂ ತೋರಿಬರುವ ಶ್ರುತಿಸ್ಥಾನಗಳು, ವಿವರ್ತಿಗಳಾದ ಎಂದರೆ ಅನ್ಯಧರ್ಮವುಳ್ಳ,-ಸ್ವರತ್ವವಿಲ್ಲದ,-ಶ್ರುತಿಸ್ಥಾನಗಳು ಎಂದು ಎರಡು ವಿಧವನ್ನು ಹೇಳಿದಂತಾಯಿತು. ಇಂತಹ ಸ್ಥಾನಗಳಲ್ಲಿ ನೆಲೆಸುವುದರಿಂದಲೂ ಅವು ವಿವರ್ತಿಗಳೇ.

ಸ್ವರಗತಶ್ರುತಿಗಳನ್ನು ಲಕ್ಷಿಸುವಾಗ 'ನಿಯತಶ್ರುತಿಸಂಸ್ಥಾನಾದ್' ಎನ್ನುವಲ್ಲಿ ನಿಯತಶಬ್ದದಿಂದ ಇನ್ನೂ ಒಂದು ಮುಖ್ಯವಾದ ಅನುಮಿತಿಯು ಹೊರಡುತ್ತದೆ. ನೈಯತ್ಯವನ್ನು ಶ್ರುತಿಸ್ಥಾನಕ್ಕೆ ಹೇಳಿಲ್ಲವೆಂಬುದೂ ಶ್ರುತಿಗೇ ಹೇಳಿದೆಯೆಂಬುದೂ ಗಮನಾರ್ಹವಾಗಿದೆ. ಸಂಖ್ಯಾನುಕ್ರಮವನ್ನು ಅಪೇಕ್ಷಿಸಿ ಇಷ್ಟನೆಯ ಶ್ರುತಿಯಲ್ಲಿ ಎಂಬ ಇಯತ್ತೆಯನ್ನು ಆಯಾ ಸ್ವರದ ಪ್ರಮಾಣಕ್ಕೆ ಹೇಳಿಲ್ಲ; ಇಂತಹುದೇ ಶ್ರುತಿಯಲ್ಲಿ ಎಂದು ನಿಶ್ಚಿತರೂಪದಲ್ಲಿ ಆಯಾ ಸ್ವರತ್ವವನ್ನು ಹೇಳಿದೆ. ಸಂಖ್ಯಾನುಕ್ರಮಾತ್ಮಕವಾದ ಇಯತ್ತೆಯಿಂದ ಪ್ರಮಾಣವೂ ಅಂತರವೂ ಗೋಚರಿಸುವುದು.

148 ದತ್ತಿಲ, ಉ. ಗ್ರಂ., 17, ಪು. 2. 150 ಅಭಿನವಗುಪ್ತ, ಉ. ಗ್ರಂ., ಪು. 11.

149 ಭರತಮುನಿ, ಉ. ಗ್ರಂ., XXVIII, 21.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಹೀಗೆ ಇಯತ್ತೆಯನ್ನು ಹೇಳಿದ್ದರೆ ಆಯಾ ಶ್ರುತಿಗಳ ಸಂಖ್ಯೆಯುರುವ ಯಾವುದೇ ಪ್ರಮಾಣದಲ್ಲಿ ಅದೇ ಸ್ವರವು ಉಂಟಾಗಬೇಕು ಎಂಬ ನಿಯಮವಿರುತ್ತಿತ್ತು. ಉದಾಹರಣೆಗೆ, ಪಂಚಮಕ್ಕೆ ಪಂಚಮಭಾವವನ್ನು ಹದಿಮೂರು ಶ್ರುತಿಗಳ ಅಂತರದಲ್ಲಿ ಎಂದರೆ ನಿಯತ ಶ್ರುತಿಸ್ಥಾನದಲ್ಲಿ ಹೇಳಿದಾಗ ಈ ಇಯತ್ತೆಯಲ್ಲಿ ಈ ಭಾವದಲ್ಲಿ ಶುದ್ಧವಾಗಿ ಪಂಚಮಭಾವವು ಮಾತ್ರವಲ್ಲದೆ ಮತ್ತೇನೂ ಗೋಚರಿಸಲಾಗದು. ಆದರೂ ಅದರಲ್ಲಿ ತನ್ನ ಸ್ಥಾನಕ್ಕೆ ವಿಶಿಷ್ಟವಾದ ಸಂಸ್ಕಾರವೂ ಅವಿಭಾಜ್ಯವಾಗಿ ಸೇರಿಕೊಂಡೇ ಇರುವುದರಿಂದ ಪಂಚಶ್ರುತಿ ( ಈಗಿನ ವ್ಯವಹಾರದಂತೆ, ಚತುಃಶ್ರುತಿ ) ರಿಷಭತ್ವವನ್ನು ಉಳಿಸಿಕೊಂಡು ಪಂಚಮಭಾವವನ್ನು ಉಂಟುಮಾಡುತ್ತಿರುತ್ತದೆ. ಎಂದರೆ ಪ್ರತಿಯೊಂದು ಸ್ವರಗತ ಶ್ರುತಿಸ್ಥಾನದಲ್ಲಿಯೂ ಉಂಟಾಗುವ ಸ್ವರವು ತನ್ನ ನಿರಪೇಕ್ಷಕಂಪಮಾನ ಮೌಲ್ಯದ ದೆಸೆಯಿಂದ ತನ್ನ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವವನ್ನು ಉಳಿಸಿಕೊಂಡಿರುತ್ತದೆ. ಉದಾಹರಣೆಗೆ ತಾರಗಾಂಧಾರವು ಮಧ್ಯಗಾಂಧಾರದ ಸಂಪೂರ್ಣ ಆವರ್ತಕ ಪುನರಾವರ್ತನೆಯಲ್ಲ ; ಈ ಎರಡು ಸ್ವರಗಳಲ್ಲಿಯೂ ತನ್ನದೇ ಆದ ವ್ಯಕ್ತಿತ್ವವಿದೆ. ಈ ತತ್ತ್ವವನ್ನು ಪಾಶ್ಚಾತ್ಯ ನಾದವಿಜ್ಞಾನಿಗಳೂ ಒಪ್ಪಿದ್ದಾರೆಂಬುದನ್ನು ಸ್ಥಾಯಿಯನ್ನು ಕುರಿತು ಮಾಡಿದ ವ್ಯಾಖ್ಯಾನದಲ್ಲಿ ಹೇಳಿದೆ (ಪು. 189-194). ಇಂತಹ ವೈಶಿಷ್ಟ್ಯವು ಸ್ವರಕ್ಕೆ ಉಂಟಾಗುವುದು ಕೇವಲ ಶ್ರುತಿಸ್ಥಾನಬಲದಿಂದಲ್ಲ, ಇಂತಹುದೇ ಶ್ರುತಿಯಾಗಿರಬೇಕು ಎಂಬ ಇಯತ್ತೆಯಿಂದಲೂ ಆಗುತ್ತದೆ. ಎಂದರೆ ಪ್ರತಿಯೊಂದು ಶ್ರುತಿಯೂ ತನ್ನದೇ ಆದ ವ್ಯಕ್ತಿತ್ವವನ್ನು ಪಡೆದಿದೆಯೆಂಬುದು ಇದರ ತಾತ್ಪರ್ಯವಾಗುತ್ತದೆ. ಇದನ್ನು ಶ್ರುತಿಜಾತಿಗಳ ವ್ಯಾಖ್ಯಾನಸಂದರ್ಭದಲ್ಲಿ ವಿವರವಾಗಿ ವಿವೇಚಿಸಲಾಗುವುದು. ಈ ಕಾರಣದಿಂದಲೇ ಸ್ವರಕ್ಕೆ ತನ್ನ ಅಂತಿಮ ಶ್ರುತಿಯಲ್ಲಿ ಸ್ವಸಂವೇದ್ಯತೆಯುಂಟಾಗುವುದು. ಈ ವೈಶಿಷ್ಟ್ಯವು ಅಂತಿಮಶ್ರುತಿಗೆ ಪೂರ್ವಾಭಿಕಾಂಕ್ಷೆಯಿಂದಲೂ, ಹಿಂದಿನ ಶ್ರುತಿಗಳಲ್ಲಿ ಪ್ರತಿಯೊಂದೂ ತನ್ನ ಹಿಂದಿನದರಿಂದ ಸಂಚಯಮಾಡಿಕೊಂಡು ಮುಂದಿನದಕ್ಕೆ ಪುರೋಭಿವೃದ್ಧಿ ಕ್ರಮದಿಂದ ಸಂಪ್ರದಾನಮಾಡುವ ಸಂಸ್ಕಾರಶೇಷಗಳ ಮೊತ್ತದಿಂದಲೂ, ತನ್ನದೇ ವ್ಯಕ್ತಿತ್ವದಿಂದಲೂ ಲಭಿಸುತ್ತದೆ. ಈ ಪಕ್ಷದಿಂದ ಶ್ರುತಿಯ ಕಲ್ಪನೆಗೆ ಆಗಿರುವ ಉಪಕಾರವು ಇದೇ. ಸ್ಥಾಯಿಯೇ ಮೊದಲಾದ ನಾದವ್ಯಾಪ್ತಿಯನ್ನು ತುಂಬಲು ಅಂತರಶ್ರುತಿಗಳು ಅವಶ್ಯಕವಾದರೂ ಅವುಗಳಿಂದ ಸ್ವರಾಷ್ಟಕಕ್ಕೆ ಪ್ರತ್ಯಕ್ಷಪ್ರಯೋಜನವಿಲ್ಲವೆಂಬುದು ಈ ಪಕ್ಷದ ಸಿದ್ಧಾಂತ. ನಾದವಿಜ್ಞಾನದಲ್ಲಿ ಇದು ಒಂದು ಮುಖ್ಯಪ್ರಮೇಯವೇ ಹೌದು. ಶ್ರುತಿನಿದರ್ಶನವ್ಯಾಖ್ಯಾನ ಸಮಯದಲ್ಲಿ ಸ್ಥಾಯಿಯ ಇಪ್ಪತ್ತೆರಡು ಶ್ರುತಿಸ್ಥಾನಗಳಲ್ಲಿ ಎಲ್ಲದರಲ್ಲಿಯೂ ಸ್ವರತ್ವವಿಲ್ಲವೆಂದೂ ನೈರಂತರ್ಯವು ಇದಕ್ಕೆ ಒಂದು ಕಾರಣವೆಂದೂ ಈಗಾಗಲೇ ಹೇಳಿದೆ (ಪು. 260-261). ಇಲ್ಲಿ ಇಂತಹ ಸ್ವರಾಭಾವಕ್ಕೆ ಇನ್ನೊಂದು ಕಾರಣವನ್ನು ಕೊಟ್ಟು ಆಯಾ ಶ್ರುತಿಯ ಸ್ವಭಾವವೇ ಈ ಕಾರಣವೆಂದು ಹೇಳಿದೆ. ನಿಯತವೆಂಬುದಕ್ಕೆ ಈ ಅರ್ಥವನ್ನು ಹೊರಡಿಸದಿದ್ದರೆ ಮತ್ತು ವಿವರ್ತಿನ್ಯೋ ಎಂಬುದಕ್ಕೆ ವೈಧರ್ಮ್ಯವನ್ನು ಹೇಳಿದರೆ ಅಂತರ ಶ್ರುತಿಗಳು ಅನಿಯತ ಶ್ರುತಿಸ್ಥಾನಕಗಳು ಎಂಬ ಅರ್ಥವು ಉಂಟಾಗುತ್ತದೆ. ಅನೈಯತ್ಯವನ್ನು ಸಂಖ್ಯೆ, ಪ್ರಮಾಣಗಳಲ್ಲಿಯೋ ಉತ್ಪತ್ತಿಕ್ರಮ ಅಥವಾ ಗೋಚರಕ್ರಮಗಳಲ್ಲಿಯೋ ಗ್ರಹಿಸಬೇಕಾಗುತ್ತದೆ. ಮೊದಲನೆಯದರಲ್ಲಿ, ನೆರೆಹೊರೆಯ ಸ್ವರಗತ ಶ್ರುತಿಗಳ ನಡುವೆ ಅನಿಯತ ಸಂಖ್ಯೆಯ ಮತ್ತು ಅಥವಾ ಪ್ರಮಾಣದ ಅಂತರಶ್ರುತಿಗಳಿರುತ್ತವೆ ಎಂದು ಅರ್ಥವನ್ನು ಕಲ್ಪಿಸುವುದು ಅನಿವಾರ್ಯ. ಹೀಗೆ ಮಾಡಿದರೆ ಸ್ವರಗತ ಶ್ರುತಿಗಳ ನೈಯತ್ಯವಾದರೂ ಎಲ್ಲಿ ಉಳಿಯುತ್ತದೆ? ಯಾವುದಾದರೂ ಆಧಾರಸ್ವರದ ಅಪೇಕ್ಷೆಯಿಂದಲೇ ಸ್ಥಾಯಿಯಲ್ಲಿ ಸ್ವರವ್ಯವಸ್ಥೆಯೂ, ಸ್ವರ ಪ್ರಮಾಣವೂ, ಸ್ಥಾಯಿಯ ಪ್ರಮಾಣವೂ ಇಯತ್ತೆಯಿಂದ ಗೋಚರಿಸುವುದೆಂದಮೇಲೆ ಇವುಗಳನ್ನು ವಿವರಿಸಲು ಸಾಧನವಾದ ಶ್ರುತಿಗಳಿಗೆ ಕೆಲವಕ್ಕೆ ನೈಯತ್ಯವನ್ನೂ ಇನ್ನು ಕೆಲವಕ್ಕೆ ಅನೈಯತ್ಯವನ್ನು ಹೇಳುವುದರಿಂದ ಉದ್ದೇಶವು ಹೇಗೆ ಸಫಲವಾದೀತು? ಆದುದರಿಂದ ಮೂಲಗ್ರಂಥದಲ್ಲಿ ನಿಯತ ಮತ್ತು ವಿವರ್ತಿನ್ಯಗಳೆಂಬ ಶಬ್ದಗಳಿಗೆ ಮೇಲೆ ಹೇಳಿರುವಂತೆಯೇ ಅರ್ಥವನ್ನು ಗ್ರಹಿಸುವುದು ಸೂಕ್ತವಾಗಿದೆ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಆದರೆ ಸಿಂಹಭೂಪಾಲ, ಕಲ್ಲಿನಾಥರಿಬ್ಬರೂ ' ಅಂತರಸ್ವರವರ್ತಿನ್ಯೋ ಹ್ಯಂತರಶ್ರುತಯಃ ಮತಾಃ । ' ಎಂಬ ಪಾಠವನ್ನು ಸ್ವೀಕರಿಸಿದ್ದಾರೆ. ಆದುದರಿಂದ ಮುದ್ರಿತ ಬೃಹದ್ದೇಶಿಯ ಮಾತೃಕೆಯು ಅವರು ಬಳಸಿದ ಮಾತೃಕೆಗಳಿಗಿಂತ ಭಿನ್ನವಾಗಿರಬೇಕು. ಅಲ್ಲದೆ ಸಿಂಹಭೂಪಾಲನು ' ನಿಯತ ಶ್ರುತಿಸಂಸ್ಥಾತೋ ' ಎಂದು ಓದಿಕೊಂಡಿರುವುದರಿಂದ ಅವನ ಮಾತೃಕೆಯೂ ಕಲ್ಲಿನಾಥನದೂ ಬೇರೆ ಬೇರೆಯಾಗಿದ್ದಿರಬೇಕು. ಹೀಗೆ ಬೃಹದ್ದೇಶಿಗೆ ಕಡೆಯಪಕ್ಷ ಮೂರು ಭಿನ್ನವಾಗಿ ಪಠಿತವಾದ ಮಾತೃಕೆಗಳಿದ್ದಿರಬೇಕೆಂದು ಇದರಿಂದ ತಿಳಿಯುತ್ತದೆ. ಸಿಂಹಭೂಪಾಲನು ಇದರ ವಿಷಯದಲ್ಲಿ ಬೇರೆ ವ್ಯಾಖ್ಯಾನವನ್ನೇ ಮಾಡಿಲ್ಲ. ಈ ಉದ್ಧೃತಿಯೇ ಅವನ ವ್ಯಾಖ್ಯಾನ. ಕಲ್ಲಿನಾಥನು ಮಾತ್ರ ' ನಿಯತಶ್ರುತಿಸಂಸ್ಥಾನಾದ್ ' ಎಂಬುದಕ್ಕೆ ಶುದ್ಧವಾದ ಸಪ್ತಸ್ವರಗಳೆಂದೂ ಆದುದರಿಂದ ಸ್ವರಗತಶ್ರುತಿಗಳು ಇವುಗಳಿಂದ ಲಕ್ಷಿತವಾಗುತ್ತವೆಂದೂ ' ಅಂತರಸ್ವರ ' ಗಳೆಂಬುದಕ್ಕೆ ವಿಕೃತಸ್ವರಗಳೆಂದೂ ಆದುದರಿಂದ ಅಂತರ ಶ್ರುತಿಗಳು ವಿಕೃತಸ್ವರಹೇತುಗಳೆಂದೂ ತೀರ್ಮಾನಿಸುತ್ತಾನೆ :

' ಶ್ರವಣೇಂದ್ರಿಯಗ್ರಾಹ್ಯತ್ವಾದ್ . . . . . ತಸ್ಮಾತ್ ಸ್ವರಗತಾ ಜ್ಞೇಯಾಃ ಶ್ರುತಯಃ ಶ್ರುತಿವೇದಿಭಿಃ । ' ಶುದ್ಧಸ್ವರರೂಪಾ ಇತ್ಯರ್ಥಃ ।

' ಅಂತರಸ್ವರವರ್ತಿನ್ಯೋ ಹ್ಯಂತರಶ್ರುತಯೋ ಮತಾಃ । ' ವಿಕೃತ ಸ್ವರರೂಪಾ ಇತ್ಯರ್ಥಃ । ಪ್ರಯೋಗ-ಬಹುಲತ್ವಾಪೇಕ್ಷಯಾ ಶ್ರುತಯ ಇತಿ ಬಹುವಚನ ನಿರ್ದೇಶಃ । ' ಏತಾಸಾಮಪಿ ವೈಸ್ವರ್ಯಂ ಕ್ರಿಯಾಗ್ರಾಮ-ವಿಭಾಗತಃ । ' ಇತಿ । 147

ಇದು ಕೇವಲ ಅನುಪಪನ್ನವಾದುದು. ಮೂಲಗ್ರಂಥವನ್ನು ' ಅಂತರಸ್ವರ ' ವೆಂದು ಓದಿಕೊಂಡಿರುವುದು ಇದಕ್ಕೆ ಕಾರಣ. ಇದಕ್ಕೆ ಸ್ವರದ ಒಳಗೆ, ಎಂದರೆ ನೆರೆಹೊರೆಯ ಸ್ವರಗಳ ನಡುವೆ, ಎಂದಷ್ಟೇ ಅರ್ಥ. ಹೀಗೆ ಉಪಲಬ್ಧವಾಗುವ ಅಂತರಗಳಲ್ಲೆಲ್ಲಾ ವಿಕೃತಸ್ವರಗಳು ಹುಟ್ಟುತ್ತವೆಂಬುದು ಅವನ ಮಾತಿಗೆ ಅರ್ಥವಾಗುತ್ತದೆ. ಯಾವುದೇ ಮೂರ್ಛನಾತಂತ್ರವನ್ನು ಬಳಸಿದರೂ ಸ್ಥಾಯಿಯ ವ್ಯಾಪ್ತಿಯಲ್ಲಿ ಕಡೆಯಪಕ್ಷ ಐದು ಶ್ರುತಿಸ್ಥಾನಗಳು ಸ್ವರತ್ವವನ್ನು ಪಡಯದೆಯೇ ಉಳಿದುಬಿಡುತ್ತವೆಂಬುದನ್ನು ಮುಂದೆ ವಿಕೃತಸ್ವರಗಳನ್ನು ವ್ಯಾಖ್ಯಾನಮಾಡುವಾಗ ತೋರಿಸಿಕೊಡಲಾಗುವುದು. ಇವುಗಳನ್ನು ಗಮನಿಸದೆಯೇ 4, 7, 9, 13, 17, 20, 22 ಈ ಶ್ರುತಿಸ್ಥಾನಗಳನ್ನೂ ಮಧ್ಯಮಗ್ರಾಮದಲ್ಲಿ ಹದಿನಾರನೆಯದನ್ನೂ ಸ್ವರಗತಶ್ರುತಿಗಳೆಂದೂ ಉಳಿದೆಲ್ಲವುಗಳನ್ನೂ ವಿಕೃತಸ್ವರಸ್ಥಾನಗಳಾಗುವ ಅಂತರ ಶ್ರುತಿಗಳೆಂದೂ ಹೇಳಿಬಿಟ್ಟಿರುವುದು ಆಶ್ಚರ್ಯಕರವಾಗಿದೆ. ಹಾಗಲ್ಲದೆ ಶುದ್ಧ ಸ್ವರಸ್ಥಾನಗಳನ್ನುಂಟುಮಾಡುವ ಶ್ರುತಿಗಳು, ವಿಕೃತಸ್ವರಗಳನ್ನುಂಟುಮಾಡುವ ಶ್ರುತಿಗಳು ಎಂದು ಅವನು ವಿಭಾಗಮಾಡಿದರೆ, ಇವೆರಡನ್ನೂ ಉಂಟುಮಾಡದ ಮೂರನೆಯ ವಿಧದ ಶ್ರುತಿಸ್ಥಾನಗಳು ಎಂಬ ಮೂರನೆಯದನ್ನೂ ಹೇಳಬೇಕಾಗಿತ್ತು. ಏಕೆಂದರೆ ಅವನು ಇಪ್ಪತ್ತೆರಡು ಶ್ರುತಿಗಳನ್ನು ಒಪ್ಪಿದ್ದಾನೆ. ಈ ಮೂರೂ ವಿಧಗಳಲ್ಲದೆ ಒಟ್ಟು ಇಪ್ಪತ್ತೆರಡು ಶ್ರುತಿಗಳು ಲಭಿಸಲಾರವು. ಅಷ್ಟೇ ಅಲ್ಲದೆ ಮೂರನೆಯ ವಿಧವನ್ನು ಒಪ್ಪಿಕೊಂಡರೆ ಮೂಲಗ್ರಂಥದ ' ಸಾ ಚೈಕಾಪಿ ದ್ವಿಧಾ ಜ್ಞೇಯಾ ' ಎಂಬ ಮಾತು ನಿರರ್ಥಕವಾಗುತ್ತದೆ. ' ಸಪ್ತಾಶ್ರಯತಯಾ ' ಎನ್ನುವಲ್ಲಿ ಸಪ್ತಸ್ವರಗಳಲ್ಲಿ ಅವುಗಳ ಅವಾಂತರಭೇದಗಳಾದ ವಿಕೃತಸ್ವರಗಳನ್ನೂ ಹೇಗೆ ಎಣಿಸಿಕೊಳ್ಳಬೇಕೆಂದು ಈಗಾಗಲೇ ಹೇಳಿದೆ. ಈ ಅರ್ಥದಲ್ಲಿ ವಿಕೃತಸ್ವರಾವಸ್ಥೆಯಿರುವಾಗ ಅದಕ್ಕೂ ಅದರ ಮುಂದಿನ ಸ್ವರಕ್ಕೂ ಮಧ್ಯದಲ್ಲಿ ಇರುವ ಶ್ರುತಿಗಳನ್ನು ಅಂತರ-ಶ್ರುತಿಗಳೆಂದು ತಿಳಿಯುವುದು ಸಮಂಜಸವಾಗಿದೆ. ಅಲ್ಲದೆ ' ಸಪ್ತಾಶ್ರಯತಯಾ ' ಎನ್ನುವ ವಿಶಾಖಿಲಾಚಾರ್ಯನ ಸೂತ್ರವನ್ನಿಲ್ಲಿ ಕಲ್ಲಿನಾಥನು ವ್ಯಾಖ್ಯಾನಮಾಡುತ್ತಿಲ್ಲವೆಂಬುದನ್ನು ನೆನೆಯಬೇಕು. ಅವನು ವಿವೇಚಿಸುತ್ತಿರುವುದು ವಿಶ್ವಾವಸುವಿನ ಮಾತನ್ನು. ಸಪ್ತಸ್ವರಗಳು ಎಂಬ ಮಾತನ್ನು ಸಹ ವಿಶ್ವಾವಸುವು ಇಲ್ಲಿ ಆಡಿಲ್ಲ. ನಿಯತಶ್ರುತಿ-ಸಂಸ್ಥಾನ, ಸಪ್ತಗೀತಿಗಳಲ್ಲಿ ಪ್ರಯುಕ್ತಿ ಇವೆರಡನ್ನೂ ಅವನು ಸ್ವರಗತಶ್ರುತಿಯ ಲಕ್ಷಣಗಳೆಂದು ಹೇಳಿದ್ದಾನೆ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸ್ವರಸಾಧಾರಣ ಪ್ರಕರಣದಲ್ಲಿ ಹೇಳಿದ ವಿಧಿಗಳಿಂದ ಸಾಧಾರಣಸ್ವರಗಳಿಗೂ ಇಯತ್ತೆಯಿಂದ ನಿಶ್ಚಿತವಾದ ಸ್ವರೂಪವೇ ಉಂಟಾಗುವುದರಿಂದ ಸಪ್ತಶುದ್ಧಸ್ವರಗಳ ವಿಷಯಕ್ಕೆ ಮಾತ್ರ ಇದು ಸೀಮಿತವೆಂದು ತಿಳಿಯುವುದು ತಪ್ಪಾಗುತ್ತದೆ. ಮತ್ತು ಗಾನ ಪ್ರಪಂಚಸರ್ವಸ್ವವಾದ ಸಪ್ತಗೀತಿಗಳಲ್ಲಿ ಕೇವಲ ಶುದ್ಧ ಸ್ವರಗಳೇ ಹಾಡಲ್ಪಡುತ್ತ ವೆಂದೂ ವಿಕೃತಸ್ವರಗಳ ಪ್ರಯೋಗವಿಲ್ಲವೆಂದೂ ಇವುಗಳು ಕೇವಲ ಅಂತರಶ್ರುತಿಗಳಿಂದ ಅಭಿವ್ಯಕ್ತವಾಗಬಲ್ಲ ವೆಂಬುದೂ ಅವಿಚಾರರಮಣೀಯವೇ.

ಅಲ್ಲದೆ ಈ ಎರಡರಲ್ಲಿಯೂ ಭೇದವನ್ನು ಹೇಳುವುದಕ್ಕೆ ಅವನ ಆಕರದಲ್ಲಿ ಆಧಾರವೇನೂ ಇಲ್ಲ. ಎರಡು ವಸ್ತುಗಳಲ್ಲಿ ಭೇದವನ್ನು ಹೇಳಬೇಕಾದರೆ ಇವುಗಳ ಕಾರ್ಯಸ್ವರೂಪದಲ್ಲಿ ಭೇದವನ್ನು ಹೇಳಿ ಅದಕ್ಕೆ ಕಾರಣಭೇದ ವನ್ನೋ ವೈಧರ್ಮ್ಯವನ್ನೋ ತೋರಿಸಬೇಕು. ಕೆಲವು ಸಂದರ್ಭಗಳಲ್ಲಿ ಕಾರಣಭೇದವಿದ್ದರೂ ಕಾರ್ಯಭೇದವು ಉಂಟಾಗುವುದಿಲ್ಲವೆಂಬುದನ್ನು ಸ್ವರಗಳ ವಿವೇಚನೆಯ ಸಂದರ್ಭದಲ್ಲಿ ಅಭಿನವಗುಪ್ತಾಚಾರ್ಯನ ಮಾತಿನಿಂದ ಹೇಳಲಾಗುವುದು. ಇಂತಹುದರಲ್ಲಿ ಸ್ವರಗತಶ್ರುತಿಗಳಿಗೂ ಅಂತರಶ್ರುತಿಗಳಿಗೂ ಭೇದವನ್ನು ಹೇಳಲು ಇದು ಯಾವುದನ್ನೂ ತೋರಿಸದೆ ಪ್ರಕೃತಿ-ವಿಕೃತಿಗಳ ಭೇದವನ್ನು ಆರೋಪಿಸಲು ಕಲ್ಲಿನಾಥನು ಕೇವಲ ಉದ್ಧೃತಿಯ ಬೆಂಬಲವನ್ನು ಪಡೆದಿದ್ದಾನೆ. ಈ ಉದ್ಧೃತಿಯಲ್ಲಿಯಾದರೂ ಕಾರಣಭೇದದ ಸೂಚನೆಯಾಗಲೀ ವೈಧರ್ಮ್ಯದ ಸೂಚನೆಯಾಗಲೀ ಇಲ್ಲ. ಮೂಲಗ್ರಂಥದ 'ವಿವರ್ತಿನ್ಯೋ' ಎಂಬುದರಲ್ಲಿ ವೈಧರ್ಮ್ಯವನ್ನಾದರೂ ಕಲ್ಪಿಸ ಬಹುದು ; 'ವರ್ತಿನ್ಯೋ' ಎಂಬ ಕಲ್ಲಿನಾಥೀಯ ಪಾಠದಲ್ಲಿ ಅದಕ್ಕೂ ಅವಕಾಶವಿಲ್ಲ. ವೈಧರ್ಮ್ಯವಿಲ್ಲದಿದ್ದರೆ ಬೇಡ, ಅವನು ಕಾರಣಭೇದವನ್ನು ಸ್ಪಷ್ಟೋಕ್ತಿಯಲ್ಲಿ ತೋರಿಸದಿದ್ದರೂ ಬೇಡ, ನಾವೇ ಅದನ್ನು ಕಲ್ಪಿಸಲು ಸಾಧ್ಯವೇ, ಎಂದರೆ ಅದಕ್ಕೂ ಇಲ್ಲಿ ಅವಕಾಶವಿಲ್ಲ. 'ಶ್ರೂಯಂತ ಇತಿ ಶ್ರುತಯಃ' ಎಂಬ ಸಾಮಾನ್ಯ ಸೂತ್ರ ವನ್ನು ಸ್ವಲ್ಪ ವಿಸ್ತರಿಸಿ ವಿಶ್ವಾವಸುವು 'ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್' ಎಂದು ಹೇಳುತ್ತಾನೆ. ಇದರಲ್ಲಿ ಕಾರಣಭೇದವನ್ನು ಹೇಳಬೇಕಾದರೆ ಈ ಉಕ್ತಿಯಲ್ಲಿ ಹೇತುಭಾಗವಾದ 'ಶ್ರವಣೇಂದ್ರಿಯ ಗ್ರಾಹ್ಯತ್ವಾದ್' ಎನ್ನುವುದರಲ್ಲಿಯೇ ಹೇಳಬೇಕು. ಎಂದರೆ, ಕಲ್ಲಿನಾಥನ ಮತವನ್ನು ಗ್ರಹಿಸಿದರೆ ಶುದ್ಧಸ್ವರಗಳ ಶ್ರವಣೇಂದ್ರಿಯ ಗ್ರಾಹ್ಯತೆಯಲ್ಲೂ ವಿಕೃತಸ್ವರಗಳ ಶ್ರವಣೇಂದ್ರಿಯ ಗ್ರಾಹ್ಯತೆಯಲ್ಲಿಯೂ ಭೇದವನ್ನು ಹೇಳಬೇಕು. ಶುದ್ಧಸ್ವರವೇ ಮುಂದಿನ ಸ್ವರದ ಶ್ರುತಿಯನ್ನು ಆಕ್ರಮಿಸುವುದರಿಂದ ವಿಕೃತವಾಗುತ್ತದೆ. ಈ ಹೊಸ ಎಂದರೆ, ವಿಕೃತವಾದ ಅವಸ್ಥೆಯಲ್ಲಿ ತನ್ನ ಮತ್ತು ಮುಂದಿನ ಸ್ವರದ ಎರಡೂ ಧರ್ಮಗಳನ್ನು ಹೊಂದಿರುವುದರಿಂದ— ಹೀಗೆನ್ನುವುದಕ್ಕೆ ಭರತಮುನಿಯ ವಾಕ್ಯವೇ ಪ್ರಮಾಣ :

ಸಾಧಾರಣಮಿದಾನೀಂ ವ್ಯಾಖ್ಯಾಸ್ಯಾಮಃ । ತತ್ರ ಸಾಧಾರಣಂ ನಾಮಾಂತರ ಸ್ವರತಾ ; ಕಸ್ಮಾತ್ ? ದ್ವಯೋರಂತರೇ ಭವತಿ ಯತ್ ತತ್ಸಾಧಾರಣಮ್ । ಯಥಾ —

ಛಾಯಾಸು ಭವತಿ ಶೀತಂ ಪ್ರಸ್ವೇದೋ ಭವತಿ ಚಾತಪಸ್ಥಸ್ಯ ।
ನ ಚ ನಾಗತೋ ವಸಂತೋ ನ ಚ ನಿಃಶೇಷಃ ಶಿಶಿರಕಾಲಃ ॥ [151]

—ಅವುಗಳಲ್ಲಿ ವೈಧರ್ಮ್ಯವನ್ನು ಹೇಳಲಾಗದು. ಏಕೆಂದರೆ ವೈಧರ್ಮ್ಯವು ಸಂಪೂರ್ಣ ವೈದೃಶ್ಯದ ದ್ಯೋತನ ವನ್ನು ಉಂಟುಮಾಡಬೇಕು. ಶುದ್ಧಸ್ವರ, ವಿಕೃತಸ್ವರಗಳ ಶ್ರವಣೇಂದ್ರಿಯಗ್ರಾಹ್ಯತೆಯಲ್ಲಿಯಾದರೂ ಕಾರಣ ಭೇದವು ಇಲ್ಲವೆಂಬುದು ಸ್ಪಷ್ಟವಾಗಿದೆ. ಏಕೆಂದರೆ ಎರಡರಲ್ಲಿಯೂ ರಕ್ತಾಖ್ಯವೆಂಬ ಸಾಮಾನ್ಯಧರ್ಮವೇ ಅವೆರಡರ ಶ್ರವಣೇಂದ್ರಿಯ ಗ್ರಾಹ್ಯತೆಗೆ ಹೇತುವಾಗಿದೆ.

151 ಭರತಮುನಿ, ಉ. ಗ್ರಂ., XXVIII, 33 ವಚನ, 34, ಪು. 31.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಹೀಗಲ್ಲದ ಮೇಲೆ ಇಂತಹ ಕಾರಣಭೇದವನ್ನು ಶ್ರವಣೇಂದ್ರಿಯಕ್ಕಾಗಲೀ ಅದರ ವಿಷಯವಾದ ಶ್ರುತಿಯ ಸ್ವಭಾವಕ್ಕಾಗಲೀ ಅಥವಾ ಶ್ರುತಿಯ ಉತ್ಪಾದಕಕ್ಕಾಗಲೀ ಹೇಳಬೇಕಾಗುತ್ತದೆ. ಶುದ್ಧಸ್ವರವೂ ವಿಕೃತಸ್ವರವೂ ಬೇರೆಬೇರೆಯಾಗಿ ಕೇಳಿಸುತ್ತವೆ ಎಂಬುದರಿಂದ ಶ್ರವಣೇಂದ್ರಿಯಕ್ಕೆ ಕಾರಣಭೇದವನ್ನು ಹೇಳುವ ಹಾಗಿಲ್ಲ; ಏಕೆಂದರೆ ಇಂತಹ ಪೃಥಗ್ಗೋಚರವು ಎಲ್ಲಾ ಸ್ವರಗಳಲ್ಲಿಯೂ ಇರುವಂತಹುದೇ. ಈ ಪಕ್ಷವನ್ನು ಗ್ರಹಿಸಿದರೆ ಷಡ್ಜ, ರಿಷಭ, ಗಾಂಧಾರ ಮುಂತಾದ ಪ್ರತಿಯೊಂದು ಸ್ವರಕ್ಕೂ ಕಾರಣಭೇದವನ್ನು ಹೇಳಬೇಕಾಗುತ್ತದೆ. ಒಂದುವೇಳೆ ಇವುಗಳಿಗೆ ಹೇಳಿದರೂ ವಿಕೃತಸ್ವರಕ್ಕೆ, ಎಂದರೆ, ಸಾಧಾರಣ ಪ್ರಕ್ರಿಯೆಯಿಂದ ಉಂಟಾದ ವಿಕೃತಾವಸ್ಥೆಯಲ್ಲಿ ಇರುವ ಶುದ್ಧಸ್ವರಕ್ಕೆ, ಇದನ್ನು ಹೇಳುವ ಹಾಗಿಲ್ಲ. ಏಕೆಂದರೆ ಇಂತಹ ವಿಕೃತಸ್ವರವು ಎರಡು ಶುದ್ಧಸ್ವರಗಳ ಕಾರಣಗಳನ್ನೂ ಸಾಧರ್ಮ್ಯವನ್ನೂ ಒಳಗೊಂಡಿರುತ್ತದೆ. ಶ್ರುತಿಗೂ ಅಥವಾ ಅದರ ಸ್ವಭಾವಕ್ಕೂ ಕಾರಣಭೇದವನ್ನು ಹೇಳಲಾಗದು. ಏಕೆಂದರೆ ಶ್ರುತಿಲಕ್ಷಣಗಳಾದ ಸ್ವೈರಂತರ್ಯ, ಧ್ವನ್ಯಂತರಾಶ್ರುತಿಗಳಲ್ಲಿ, ಎಂದರೆ ಶ್ರವಣೇಂದ್ರಿಯಗ್ರಾಹ್ಯತೆಯಲ್ಲಿ, ಈ ಕಾರಣಭೇದವನ್ನು ಹೇಳಲು ಯಾವ ಆಸ್ಪದವೂ ಇಲ್ಲ. ಧ್ವನಿವೈಲಕ್ಷಣ್ಯವೇ ಶ್ರುತಿಯ ಸ್ವಭಾವವಾಗಿರುವಾಗ, ವೈಲಕ್ಷಣ್ಯಕ್ಕೇ ವೈಲಕ್ಷಣ್ಯವನ್ನು ಹೇಳಿದರೆ ಸಾಧರ್ಮ್ಯವನ್ನೇ, ಸಜಾತೀಯ ಕಾರಣವನ್ನೇ ಹೇಳಿದಂತಾಯಿತು. ಇನ್ನು, ಶ್ರುತಿಯ ಉತ್ಪಾದಕಕ್ಕೂ ಕಾರಣಭೇದವನ್ನು ಹೇಳಲಾಗದು. ಶ್ರುತಿಯ ಉತ್ಪಾದಕವೆಂದರೆ ವಾಗಿಂದ್ರಿಯವೆಂದೋ ವಿವಕ್ಷಮಾಣವಾದ ಆತ್ಮವೆಂದೋ, ಹೃದ್ಯೂರ್ಧ್ವವೇ ಮೊದಲಾದ ನಾಡಿಗಳಲ್ಲಿ ಪ್ರಾಣವಾಯುವಿನ ಆಹತಿಯೆಂದೋ ಇಟ್ಟುಕೊಳ್ಳಬೇಕಷ್ಟೆ. ಶುದ್ಧಸ್ವರಗಳನ್ನು ಉತ್ಪಾದಿಸುವಾಗಲೂ ವಿಕೃತಸ್ವರಗಳನ್ನು ಉತ್ಪಾದಿಸುವಾಗಲೂ ವಾಗಿಂದ್ರಿಯ, ಆತ್ಮ, ಪ್ರಾಣವಾಯುವಿನ ಆಹತಿ ಮುಂತಾದವುಗಳಲ್ಲಿ ಭೇದವನ್ನು ಹೇಳಲು ಬೇಕಾದ ಪ್ರಮೆಯು ಪ್ರತ್ಯಕ್ಷದಿಂದಾದಲೀ, ಅನುಮಾನದಿಂದಾಗಲೀ, ಉಪಮಾನದಿಂದಾಗಲೀ, ಅರ್ಥಾಪತ್ತಿಯಿಂದಲಾಗಲೀ, ಪ್ರತ್ಯಭಿಜ್ಞಾನದಿಂದಾಗಲೀ, ಉಂಟಾಗುವಂತಹುದಲ್ಲ. ಆದುದರಿಂದ ಕಲ್ಲಿನಾಥನು ಹೇಳುವಂತಹ ಅರ್ಥವು ಇಲ್ಲಿ ಅನುಪಪನ್ನವಾದುದು.

ಇದಕ್ಕೆ ಇನ್ನೂ ಒಂದು ಪ್ರಬಲಕಾರಣವನ್ನಿಲ್ಲಿ ಸೂಚಿಸಬಹುದು. ವಿಶ್ವಾವಸುವಿನ ಉಕ್ತಿಯಲ್ಲಿ ಕಡೆಯ ಚರಣವು 'ಏತಾಸಾಮಪಿ ವೈಸ್ವರ್ಯಂ ಕ್ರಿಯಾಗ್ರಾಮವಿಭಾಗತಃ' ಎಂದಿದೆ. ಈ ಬಗೆಯ, ಎಂದರೆ ಅಂತರ ಶ್ರುತಿಯೆಂಬ ಜಾತಿಯ, ಶ್ರುತಿಗಳಿಗೆ ಗ್ರಾಮವಿಭಾಗದಿಂದ ವೈಸ್ವರ್ಯವು ಸಿದ್ಧಿಸುತ್ತದೆ. ಗ್ರಾಮವಿಭಾಗವೆಂದರೆ ಸ್ವರವ್ಯವಸ್ಥೆಯನ್ನು ಷಡ್ಜಗ್ರಾಮ ಮತ್ತು ಮತ್ತು ಮಧ್ಯಮಗ್ರಾಮವೆಂಬ ವಿಭಾಗದಿಂದ ತಿಳಿಯುವುದು. ಇದರಿಂದ ವೈಸ್ವರ್ಯವಾಗುತ್ತದೆ ಎನ್ನುವುದಕ್ಕೆ, ಷಡ್ಜಗ್ರಾಮದಲ್ಲಿ ಶುದ್ಧಸ್ವರಗಳೂ ಮಧ್ಯಮಗ್ರಾಮದಲ್ಲಿ ವಿಕೃತಸ್ವರಗಳೂ ಹುಟ್ಟುತ್ತವೆಂದು ಅವನು ಪ್ರತಿಪಾದಿಸುತ್ತಾನೆ. ಹೀಗಾದರೂ ಗ್ರಾಮವಿಭಾಗದಿಂದ ಷಡ್ಜಗ್ರಾಮವೂ ವಿವಕ್ಷಿತವಾಗಿರುವಲ್ಲಿ ಸಮುದಾಯದಲ್ಲಿ ಹೇಗೆ ವೈಸ್ವರ್ಯವನ್ನು ಹೇಳುತ್ತಾನೆಯೋ ತಿಳಿಯದು. ವೈಸ್ವರ್ಯ ಎನ್ನುವುದರಲ್ಲಿ ವೈ ಎಂಬುದನ್ನು ನಿಪಾತವೆಂದಿಟ್ಟುಕೊಂಡರೆ ಎರಡು ಗ್ರಾಮಗಳಲ್ಲಿಯೂ ಸ್ವರ್ಯವು ಸಿದ್ಧವಾಗುತ್ತದೆ, ಎಂದರೆ ಎರಡು ಗ್ರಾಮಗಳಲ್ಲಿಯೂ ಲಕ್ಷಪ್ರಸಿದ್ಧವಾದ ಸ್ವರಸ್ಥಾನಗಳು ಸಿದ್ಧಿಸುತ್ತವೆ. ಆಗ 'ಏತಸಾಂ' ಎಂಬುದಕ್ಕೆ ಸ್ವರಗತಶ್ರುತಿಗಳು ಹಾಗೂ ಅಂತರ ಶ್ರುತಿಗಳು ಎಂಬ ಸಮುದಾಯಾಪೇಕ್ಷೆಯನ್ನು ಇಲ್ಲಿ ಕಂಡು ಶುದ್ಧಸ್ವರಗಳು, ವಿಕೃತಸ್ವರಗಳು ಒಟ್ಟಿನಲ್ಲಿ ಸ್ವರ್ಯವೆಂಬ ಶಬ್ದದಿಂದ ಸೂಚಿತವಾಗಿವೆ ಎಂದು ಅರ್ಥಮಾಡಬೇಕಾಗುತ್ತದೆ. ಆದರೆ ಇದಕ್ಕೆ ಎರಡು ಅಡಚಣೆಗಳುಂಟು. ಏತಾಸಾಂ ಎಂಬುದನ್ನು ನೈಕಟ್ಯದಿಂದ ಅಂತರ ಶ್ರುತಿಗಳಿಗೇ ಅನ್ವಯಿಸಬೇಕು; ಆಗ 'ವೈ' ಎಂಬುದು ನಿಪಾತವಾಗಲಾರದು. ಏಕೆಂದರೆ ಅಂತರಶ್ರುತಿಗಳಲ್ಲಿ ಅವನು ಭೇದವನ್ನು ಹೇಳುತ್ತಿರುವುದರಿಂದ ನಿಯತಶ್ರುತಿಸಂಸ್ಥಾನದಿಂದ ಹುಟ್ಟಿದ ಸ್ವರಗಳಿಂದ ವಿಧರ್ಮಿಗಳಾದ ಸ್ವರಗಳನ್ನು ಅಂತರಶ್ರುತಿಗಳಲ್ಲಿ ಹೇಳಿಯೇ ತೀರಬೇಕಾಗುತ್ತದೆ. ಆಗ ವೈಸ್ವರ್ಯವೆಂಬುದನ್ನು ವಿಸ್ವರದ ಭಾವನಾಮವೆಂದಿಟ್ಟುಕೊಂಡು 'ವಿ'

ಎಂಬ ಉಪಸರ್ಗದಿಂದ ಸ್ವರ್ಯಕ್ಕೆ ವಿರುದ್ಧವಾದ ಅರ್ಥವನ್ನೇ ಮಧ್ಯಪದಲೋಪಸಮಾಸದಿಂದ ತಿಳಿಯಬೇಕು. ಹಾಗಾದರೂ ವೈಸ್ವರ್ಯವೆಂದರೆ ವಿಕೃತಸ್ವರವೆಂದಾಗುವುದಿಲ್ಲ. ವೈಸ್ವರ್ಯವೆಂದರೆ ಸ್ವರದ ಅಣುವೆಂದೂ, ಸ್ವರದ ಅಹಿತಪ್ರಯೋಗವೆಂದೂ ಮೋನಿಯರ್ ವಿಲಿಯಂಸ್ ತಿಳಿಸುತ್ತಾನೆ.[152] ಇದೇ ಇಲ್ಲಿ ಸಾಧುವಾಗಿರುವ ಅರ್ಥ. ಏಕೆಂದರೆ 'ವಿ' ಎನ್ನುವುದು ಭಿನ್ನಾರ್ಥಕವಾದುದರಿಂದ ಸ್ವರ್ಯಕ್ಕೆ ಎಂದರೆ ಸ್ವರತ್ವಕ್ಕೆ, ಎಂದರೆ ರಕ್ತ, ಅನುರಣನ ಮುಂತಾದ ಧರ್ಮಗಳುಳ್ಳ ನಾದವಿಶೇಷದಿಂದ, ಭಿನ್ನವಾದುದು ಎಂದೇ ಈ ಚರಣದಲ್ಲಿ ಅರ್ಥಮಾಡಬೇಕು. ಆದುದರಿಂದ ಈ ರೀತಿಯಲ್ಲಿಯೂ ಅಂತರ ಶ್ರುತಿಗಳು ವಿಕೃತಸ್ವರಸ್ಥಾನಕಗಳು ಎಂಬ ಕಲ್ಲಿನಾಥನ ಅರ್ಥವು ಹೊರಡುವುದಿಲ್ಲ.

ಕಲ್ಲಿನಾಥನ ಅರ್ಥವನ್ನು ಇಲ್ಲಿ ಏಕೆ ವಿಸ್ತಾರವಾಗಿ ವಿಮರ್ಶೆಮಾಡಿ ನಿರಾಕರಿಸಲಾಗಿದೆಯೆಂದರೆ ಈ ಮಾತುಗಳನ್ನು ಅವನು ಆಡಿರುವುದು ಶ್ರೀ ಶಾರ್ಙ್ಗದೇವನ ಶ್ರುತಿಲಕ್ಷಣಕ್ಕೆ ವ್ಯಾಖ್ಯಾನರೂಪದಲ್ಲಿ. ಆದುದರಿಂದ ಈ ಅರ್ಥವು ಶಾರ್ಙ್ಗದೇವನ ಉಕ್ತಿಗೆ ವಿಸ್ತಾರವೆಂದು ಸಹಜವಾಗಿಯೇ ಭಾವನೆಯುಂಟಾಗುತ್ತದೆ. ಆದರೆ ಇದು ಇಲ್ಲಿ ಸಲ್ಲುವಂತಹುದಲ್ಲವೆಂದು ತೋರಿಸಿ ಮೂಲಗ್ರಂಥಕ್ಕೂ ಈ ಅರ್ಥವನ್ನು ಈ ಶಾಸ್ತ್ರದ ಅಭ್ಯಾಸಿಗಳು ಆರೋಪಿಸದಿರಲಿ ಎಂದು ಇದನ್ನು ಬರೆಯಬೇಕಾಯಿತು. ಯಾವುದೇ ವ್ಯಾಖ್ಯಾನಕಾರನು ತನ್ನ ಸ್ವಂತ ಅಭಿಪ್ರಾಯಗಳನ್ನು ಸಂಪೂರ್ಣವಾಗಿ ಬದಿಗೊತ್ತಿ ಇನ್ನೊಬ್ಬನ ಮಾತುಗಳಿಗೆ ಅರ್ಥವಿಸ್ತಾರವನ್ನು ಬರೆಯುವುದು ಅಸಾಧ್ಯವೇ ಹೌದು. ಆದರೂ ಮೂಲ ಗ್ರಂಥಕಾರನ ಅಭಿಸಂಧಿಗೂ, ಸಂಪ್ರದಾಯಕ್ಕೂ, ಇತರ ಪ್ರಾಚೀನಾಚಾರ್ಯರುಗಳ ಅಭಿಪ್ರಾಯಕ್ಕೂ ವಿರುದ್ಧವಾಗಿ ಅರ್ಥವನ್ನು ಕಲ್ಪಿಸುವುದು ವ್ಯಾಖ್ಯಾನಕಾರನಲ್ಲಿ ದೋಷವೇ ಆಗುತ್ತದೆ. ಮೂಲಗ್ರಂಥದಲ್ಲಿರುವ ಅಭಿಪ್ರಾಯಗಳಿಗೆ ತನ್ನ ಅಸಮ್ಮತಿಯನ್ನೂ, ಅಲ್ಲಿ ಇಲ್ಲದ ಅರ್ಥವನ್ನೂ, ವೈಯಕ್ತಿಕ ಅಭಿಪ್ರಾಯವನ್ನೂ ವ್ಯಾಖ್ಯಾನದಿಂದ ಬೇರ್ಪಡಿಸಿ ಸ್ಪಷ್ಟೋಕ್ತಿಯಿಂದ ಉಲ್ಲೇಖಿಸುವುದು ವ್ಯಾಖ್ಯಾನಕಾರನ ಕರ್ತವ್ಯ. ಇಡೀ ಗ್ರಂಥದಲ್ಲಿ ಎಲ್ಲಿಯೂ ಕಲ್ಲಿನಾಥನು ಹೊರಡಿಸುವಂತಹ ಅರ್ಥವನ್ನು ಸ್ಫುರಿಸುವ ಮಾತುಗಳನ್ನು ಶಾರ್ಙ್ಗದೇವನು ಹೇಳಿಲ್ಲ. ವೈಸ್ವರ್ಯಕ್ಕೆ ವಿಕೃತಿಯೆಂದು ಅರ್ಥಮಾಡಿಕೊಂಡ ತನ್ನ ಪೂರ್ವಗ್ರಹಕ್ಕೆ ಅನುಸಾರವಾಗಿ ಹೀಗೆ ವ್ಯಾಖ್ಯಾನವನ್ನು ಅವನು ಬರೆದಿದ್ದಾನೆಂದು ತೋರುತ್ತದೆ.

ಈ ಪಕ್ಷವು ದ್ವಾವಿಂಶತಿಶ್ರುತಿಗಳ ಪಕ್ಷಕ್ಕೆ ಬಾಧಕವಲ್ಲ. 'ಗ್ರಾಮವಿಭಾಗತಃ' ಎನ್ನುವುದರಿಂದ ಎರಡು ಗ್ರಾಮಗಳಲ್ಲಿ ಉಂಟಾಗುವ ಎಲ್ಲಾ ಶುದ್ಧವಿಕೃತಸ್ವರಗಳನ್ನೂ, ಮೂರ್ಛನಾಕ್ರಮದಿಂದ ಉಂಟಾಗುವ ಸ್ಥಾನಗಳನ್ನೂ, 'ಅಂತಃಶ್ರುತಿವಿವರ್ತಿನ್ಯೋ' ಎಂಬುದರಿಂದಲೂ 'ವೈಸ್ವರ್ಯಂ' ಎಂಬುದರಿಂದಲೂ, ಮೇಲೆ ಹೇಳಿದ ಎಲ್ಲಾ ಸ್ಥಾನಗಳಲ್ಲಿ ಸ್ವರತ್ವಹೀನವಾದ ಸ್ಥಾನಗಳನ್ನೂ ಪರಿಗ್ರಹಿಸಿದರೆ ಇಪ್ಪತ್ತೆರಡು ಶ್ರುತಿಗಳು ಸ್ಥಾಯಿಯಲ್ಲಿ ಸಿದ್ಧಿಸುತ್ತವೆ. 'ನಿಯತ' ಎಂದರೆ ಚತುಃಶ್ರುತಿಕತ್ವಾದಿ ನೈಯತ್ಯವನ್ನೂ, 'ನಿಯತಶ್ರುತಿಸಂಸ್ಥಾನಾದ್ ಗೀಯಂತೇ ಸಪ್ತಗೀತಿಷು' ಎನ್ನುವುದರಿಂದ ಈ ನೈಯತ್ಯದಿಂದ ಸಿದ್ಧವಾದ ಶ್ರುತಿಗಳಲ್ಲಿ ಕಡೆಯದರಲ್ಲಿ ಉಂಟಾಗುವ ಸ್ವಸಂವೇದ್ಯತೆಯನ್ನೂ, ತನ್ಮೂಲಕ ಅದರ ಹಿಂದಿನ ಶ್ರುತಿಗಳನ್ನೂ ವಿಶಾಖಿಲಾಚಾರ್ಯನು ಸ್ಪಷ್ಟೋಕ್ತಿಯಲ್ಲಿ ಹೇಳಿದುದನ್ನು ಪರಿಗಣಿಸಿದರೆ ಸ್ಥಾಯಿಯಲ್ಲಿ ಇಪ್ಪತ್ತೆರಡು ಶ್ರುತಿಗಳೇ ಸಿದ್ಧಿಸುತ್ತವೆ.

ಒಟ್ಟಿನಲ್ಲಿ ಈ ಪಕ್ಷವು ವಿಶಾಖಿಲಾಚಾರ್ಯನ 'ಸ್ವಸಂವೇದ್ಯೋ ಪರಮೋ ಶ್ರುತಿಧಾಮ್ನಿ' ಎಂಬ ಸ್ವರ-ಶ್ರುತಿಗಳ ಲಕ್ಷಣವನ್ನು ಹೇಳುವ ಸೂತ್ರಕ್ಕೆ ವ್ಯಾಖ್ಯಾನದಂತಿದೆ.

---

152 Monier Monier-Williams, A Sanskrit English Dictionary, p. 953, col. 2.

## 3. ಶ್ರುತಿಯು ಮೂರುವಿಧ

ಮೂರನೆಯ ಪಕ್ಷವು ಶ್ರುತಿಗಳನ್ನು ಮೂರು ವಿಧವೆಂದು ತಿಳಿಯುತ್ತದೆ. ಇದನ್ನು ಮತಂಗನು ಒಂದೇ ಪುಟ್ಟ ವಾಕ್ಯದಲ್ಲಿ ಹೇಳಿ ಮುಗಿಸಿದ್ದಾನೆ :

ಕೇಚಿತ್ ಸ್ಥಾನತ್ರಯಯೋಗಾತ್ ತ್ರಿವಿಧಾಂ ಶ್ರುತಿಂ ಪ್ರತಿಪದ್ಯಂತೇ ।[142]

ಈ ಪಕ್ಷವನ್ನು ಯಾರು ಹೇಳಿದರೆಂಬುದು ಮತ್ತೆಲ್ಲಿಯೂ ದೊರೆಯುವಂತಿಲ್ಲ. ಏಕೆಂದರೆ ಈ ಶ್ರುತಿಸಂಖ್ಯಾ ವಿಷಯಕವಾದ ವಿವಿಧ ಪಕ್ಷಗಳನ್ನು ಮತಂಗನಿಂದಲೇ ಮುಂದಿನವರು ಸಂಗ್ರಹಿಸಿದರು. ಸಿಂಹಭೂಪಾಲನು ಇದನ್ನು 'ಕೇಚಿತ್ ಸ್ಥಾನತ್ರಯಯೋಗಾತ್ ಶ್ರುತೀನಾಂ ತ್ರೈವಿಧ್ಯಂ ಪ್ರತಿಪದ್ಯಂತೇ'[139] ಎಂದೂ ಕಲ್ಲಿನಾಥನು 'ಪ್ರತಿಪದ್ಯಂತೇ' ಎನ್ನುವ ಬದಲು 'ಮನ್ಯಂತೇ'[147] ಎಂದೂ ಉದ್ಧರಿಸಿಕೊಂಡಿದ್ದಾರೆ. ಸ್ಥಾನತ್ರಯವೆಂದರೆ ಮಂದ್ರಮಧ್ಯತಾರಗಳೆಂಬ ಸ್ಥಾಯಿಗಳು ಇಲ್ಲಿ ವಿವಕ್ಷಿತ. ಉಚ್ಚ, ನೀಚ, ಮಧ್ಯಮವೆಂಬ ಮೂರನ್ನು ಸಾಮಾನ್ಯಾರ್ಥದಲ್ಲಿ ಹೇಳಬಹುದಾದರೂ ಇಲ್ಲಿ ಈ ಅರ್ಥವೇ ಪುಷ್ಟಿಯುಳ್ಳದುದು. ಈ ಮೂರು ಸ್ಥಾಯಿಗಳನ್ನು ಸೇರುವುದರಿಂದ ಶ್ರುತಿಯು ಮೂರು ವಿಧವೆಂದು ಇದರ ಅರ್ಥ. ಇದನ್ನು ಎರಡು ರೀತಿಗಳಲ್ಲಿ ಅರ್ಥಮಾಡಿಕೊಳ್ಳಬಹುದು. ಶ್ರುತಿಯೆಂಬುದನ್ನು ಸಾಮಾನ್ಯಾರ್ಥದಲ್ಲಿ ಸ್ವೀಕರಿಸುವುದು ಒಂದು ಪಕ್ಷ. ಇದರಲ್ಲಿ ಗಾನೋಪಯುಕ್ತವಾದ ನಾದವೆಲ್ಲ ಶ್ರುತಿಯೇ ; ಹೀಗೆ, ಕೇಳಿಸಿದುದೆಲ್ಲ ಶ್ರುತಿ : 'ಶ್ರೂಯತ ಇತಿ ಶ್ರುತಿಃ.' ಆದುದರಿಂದ ಇಲ್ಲಿ ಬಹುವಚನಕ್ಕೆ ಆಸ್ಪದವಿಲ್ಲ. ಅಲ್ಲದೆ ಅನುರಣನಾದಿ ವ್ಯಾಪಾರವೂ ರಕ್ತಿಧರ್ಮವೂ ಇದ್ದರೆ ಸಾಕು ; ನೈರಂತರ್ಯ ಮತ್ತು ಧ್ವನ್ಯಂತರಾಶ್ರುತಿಗಳೆಂಬ ಲಕ್ಷಣಗಳಾಗಲೀ ಸ್ವರವ್ಯವಸ್ಥೆಯಲ್ಲಿ ಹಾಗೂ ಸ್ವರಪ್ರಮಾಣ, ಸ್ಥಾಯಿಪ್ರಮಾಣಗಳಲ್ಲಿ ಸಂಖ್ಯಾ, ಪ್ರಮಾಣ, ವೈಶಿಷ್ಟ್ಯ ಮೊದಲಾದವುಗಳ ನೈಯತ್ಯವಾಗಲೀ ಇರುವುದಿಲ್ಲ. ಈ ಅರ್ಥವನ್ನು ಗ್ರಹಿಸಿದರೆ ಶ್ರುತಿಯು ಸಂಗೀತಶಾಸ್ತ್ರಕ್ಕೆ ಮೂಲಭೂತವಾದ ಪ್ರಮೇಯವಾಗಿ ಉಳಿಯುವುದಿಲ್ಲ ; ನಾದದ ಅಥವಾ ಸ್ವರದ ಗುಣದ ಒಂದು ಮುಖವನ್ನು ಪರಿಚಯ ಮಾಡಿಸಿಕೊಡುವ ತತ್ತ್ವವಾಗುತ್ತದೆ. ಹಾಗೂ ಸ್ವರ-ಶ್ರುತಿಗಳಲ್ಲಿ ಅಭೇದವನ್ನೇ ಹೇಳಬೇಕಾಗುತ್ತದೆ. ಸಂಗೀತೋಪಯುಕ್ತವಾದ ನಾದವು ಕೆಳಗೆ, ನಡುವೆ ಮತ್ತು ಮೇಲೆ ಎಂದು ಪೂರ್ವಸ್ಥಾನಾಭಿಕಾಂಕ್ಷೆಯಿಂದ ಸಾಪೇಕ್ಷವಾಗಿ ಉಚ್ಚನೀಚ ಭಾವಗಳಲ್ಲಿ ಪ್ರಕಟವಾದಾಗ ಅದರ ಗುಣವು ಏಕರೀತಿಯಾಗಿರುವುದಿಲ್ಲ, ಮೂರು ಮುಖ್ಯವಾದ ರೀತಿಗಳಲ್ಲಿ ಕಂಡುಬರುತ್ತದೆ ಎಂಬುದು ಈ ಪಕ್ಷದ ಸಾರಾಂಶ. ಇದರಲ್ಲಿ ಸ್ಥಾನವೆನ್ನುವುದಕ್ಕೆ ಸ್ಥಾಯಿಯನ್ನಾಗಲೀ ಕೇವಲ ಉಚ್ಚನೀಚ ಸಂಬಂಧವನ್ನಾಗಲೀ ಹೇಳಿದರೂ ಅರ್ಥವು ಹೊರಡುತ್ತದೆ. ಹಾಗಾದರೆ ಸ್ವರದ ಆವರ್ತನಸ್ವಭಾವವನ್ನು ಇದರ ಮೂಲಕ ಹೇಳಲಾಗುವುದಿಲ್ಲ ; ಏಕೆಂದರೆ ಮೂರು ಬಗೆಯಲ್ಲಿ ಶ್ರುತಿಯು ಈ ನಾದಪ್ರದೇಶಗಳಲ್ಲಿ ವ್ಯತ್ಯಾಸವನ್ನು ಪಡೆಯುತ್ತದೆಂದರೆ ಈ ವ್ಯತ್ಯಾಸದ ಪ್ರಮಾಣವು ಪ್ರತಿಯೊಂದು ಪ್ರದೇಶದಲ್ಲಿಯೂ ಒಂದೇ ಪ್ರಮಾಣದ್ದಾಗಿರುತ್ತದೆಂದೂ ಅಥವಾ ಆಯಾ ಒಂದೊಂದು ಪ್ರದೇಶದಲ್ಲಿಯೂ ಒಂದೇ ಪ್ರಮಾಣದಲ್ಲಿ ವ್ಯತ್ಯಾಸವಾಗುವುದೆಂದೂ ಈ ಪ್ರಮಾಣವು ಬೇರೆ ಸ್ಥಾಯಿಯಲ್ಲಿ ಬೇರೆಯಾಗಿರುತ್ತದೆಂದೂ ಏನೂ ಸಿದ್ಧವಾಗುವುದಿಲ್ಲ. ಮಂದ್ರ, ಮಧ್ಯ, ತಾರಸ್ಥಾಯಿಗಳಲ್ಲಿ ಎಂಬ ಅರ್ಥವನ್ನು ಕಲ್ಪಿಸಿದರೂ ಈ ಮೂರೂ ಬೇರೆ ಬೇರೆಯಾಗಿ ಗೋಚರಿಸಲು ಶ್ರುತಿಯು ಸಾಧಕವಾಗುತ್ತದೆ ಎಂದೇ ಆಗುತ್ತದೆ. ಈ ವ್ಯತ್ಯಾಸವು ತಿಳಿಯುವುದು ಮುಖ್ಯವಾಗಿ ನಾದದ ಕಂಪನಶಕ್ತಿಯಿಂದ. ಇದು ಮೂರು ರೀತಿಯಲ್ಲಿ ಪ್ರಧಾನವಾಗಿ ಗೋಚರಿಸಿ ಗಾನವ್ಯವಹಾರ ಪ್ರಯೋಜಕವಾಗುತ್ತದೆಂಬುದು ಈ ಪಕ್ಷದ ಅನುಮಿತಿಯಾಗುತ್ತದೆ.

ಎರಡನೆಯ ಪಕ್ಷದಲ್ಲಿ ಶ್ರುತಿಗೆ ಅಭಿನವಗುಪ್ತಾದಿಗಳು ಹೇಳುವ ನೈರಂತರ್ಯ, ಧ್ವನ್ಯಂತರಾಶ್ರುತಿ ಮುಂತಾದ ಲಕ್ಷಣಗಳಿರುತ್ತವೆ. ಆದರೆ ಇಂತಹವು ಸ್ಥಾಯಿಯಲ್ಲಿ ಇಪ್ಪತ್ತೆರಡೇ ಇಯತ್ತೆಯಿಂದ ದೊರೆಯುತ್ತವೆಂಬುದೇನೂ

ಸಿದ್ಧವಾಗುವುದಿಲ್ಲ. ಆದರೂ ಆವರ್ತಕತ್ವವೇ ಮೊದಲಾದ ಗುಣಗಳನ್ನೂ ರಕ್ತಿಧರ್ಮವನ್ನೂ ಇದು ಪಡೆದಿರುತ್ತದೆ. ಸ್ವರಪ್ರಮಾಣಗಳ ವಿವಿಧ ಸ್ಪಸಂಖ್ಯೆಯು ಶ್ರುತಿಗಳ ಇಯತ್ತೆ ಇಲ್ಲಿ ಅನುಮೇಯವಾಗುತ್ತದೆ. ಆದರೂ ಶ್ರುತಿಯ ಮೇಲಿನ ಲಕ್ಷಣಗಳಿಂದಲೂ ಸ್ವರದ ಸ್ವಸಂವೇದ್ಯತಾ ಲಕ್ಷಣದಿಂದಲೂ ಇಂತಹುದೊಂದು ವ್ಯವಸ್ಥೆಯು ಸ್ವರಸಪ್ತಕಕ್ಕೆ ತಾರ್ಕಿಕವಾಗಿ ಸಿದ್ಧವಾಗುತ್ತದೆ. ಇಲ್ಲಿ ಶ್ರುತಿಯು ತ್ರಿಸ್ಥಾನಸಂಯೋಗದಿಂದ ಮೂರು ವಿಧವಾಗುತ್ತದೆ ಎಂದರೆ ಸ್ಥಾಯಿಯಲ್ಲಿರುವ ಯಾವುದಾದರೊಂದು ಶ್ರುತಿಯು ಮಂದ್ರ, ಮಧ್ಯ, ತಾರಸ್ಥಾಯಿಗಳಲ್ಲಿ ಬೇರೆ ಬೇರೆಯಾಗಿರುವಂತೆಯೇ ಗೋಚರಿಸುತ್ತದೆ. ಈ ಮಾತಿನಿಂದ ಮೂಲಸ್ವಭಾವದಲ್ಲಿ ಅದು ಒಂದೇ ಆದರೂ ಗುಣವೈವಿಧ್ಯವನ್ನು ಹೊಂದುತ್ತದೆ ಎಂದು ವಿವಕ್ಷಿತವಾಗುತ್ತದೆ. ಇಷ್ಟರ ಮಟ್ಟಿಗೆ ಈ ಪಕ್ಷವು ಮತಂಗನ ಅಭಿಪ್ರಾಯಕ್ಕೆ ಸರಿಹೊಂದುತ್ತದೆ. ಈ ಬಗೆಯ ವೈವಿಧ್ಯವು ಶ್ರುತಿಯ ಊರ್ಧ್ವಸ್ಪರ್ಶ ಅಥವಾ ಅಧಃಸ್ಪರ್ಶದಿಂದ ಆಗುತ್ತದೆ; ಆದುದರಿಂದ ಅಭಿನವಗುಪ್ತನು ಹೇಳಿದ ಊರ್ಧ್ವಸ್ಪರ್ಶ ತತ್ತ್ವವು ಇಲ್ಲಿ ಬೀಜರೂಪದಲ್ಲಿ ಕಂಡುಬರುತ್ತದೆ ಎಂದು ಭಾವಿಸಬಹುದು. 'ತ್ರಿವಿಧಾಂ ಶ್ರುತಿಂ' ಎನ್ನುವಲ್ಲಿ ಏಕವಚನದ ಪ್ರಯೋಗದಿಂದ ಇವಿಷ್ಟೂ ಅನುಮಿತವಾಗುತ್ತವೆ. ಮತ್ತು ಇದನ್ನು ಶ್ರುತಿಯ ಸಾಮಾನ್ಯಲಕ್ಷಣವಾಗಿ ಹೇಳಿರುವುದರಿಂದ ಯಾವುದೇ ಮತ್ತು ಎಲ್ಲಾ ಶ್ರುತಿಗಳಲ್ಲಿ ಈ ಊರ್ಧ್ವಸ್ಪರ್ಶ ಸಂಬಂಧಿತ ತ್ರೈವಿಧ್ಯವನ್ನು ತಿಳಿಯಬೇಕು. ಎಂದರೆ ಸ್ವರತ್ವಕ್ಕೆ ಹೇತುವಾದ ಪರಮಶ್ರುತಿಗೆ ಮಾತ್ರವಲ್ಲದೆ ಅದರ ಹಿಂದಿನ ಶ್ರುತಿಗಳಲ್ಲಿ ಪ್ರತಿಯೊಂದಕ್ಕೂ ಇದು ಇರುವುದರಿಂದ ಪ್ರತಿಬಿಂಬತ್ವವು ಸ್ವರದ ಗುಣವು ಮಾತ್ರವಲ್ಲ, ಶ್ರುತಿಯದೂ ಹೌದು ಎನ್ನಬೇಕಾಗುತ್ತದೆ. ಇದು ನಾದವಿಜ್ಞಾನಕ್ಕೆ ಆಧಾರಭೂತವಾದ ಪ್ರಮೇಯವಾಗುತ್ತದೆ. ಶಾರ್ಙ್ಗದೇವನು ಸ್ಥಾಯಿಗೆ 'ದ್ವಿಗುಣಶ್ಚೋತ್ತ-ರೋತ್ತರಃ' ಎಂದು ಹೇಳಿದ ಲಕ್ಷಣವನ್ನು ಸ್ವರಕ್ಕೆ ಅನ್ವಯಿಸಿ ಸ್ವರದ ಆವರ್ತನ ಗುಣವನ್ನು ಶಾಸ್ತ್ರೀಯವಾಗಿ ಪಡೆಯುವಂತೆಯೇ ಶ್ರುತಿಗೂ ಅನ್ವಯಿಸಿ ಹೇಳಲು ಈ ಪಕ್ಷವು ಸಾಧಕವಾಗುತ್ತದೆ. ದ್ವೈಗುಣ್ಯ ತತ್ತ್ವವು ಇಲ್ಲಿ ಆನುಷಂಗಿಕವಾದ ತತ್ತ್ವ, ಅಷ್ಟೆ. ಅದಕ್ಕಿಂತ ಮುಖ್ಯವಾದುದೂ, ಇಲ್ಲಿ ವಿಶೇಷವಾಗಿ ಪ್ರಸಕ್ತವೂ ಆಗಿರುವುದೆಂದರೆ, ಸ್ಥಾನಾಂತರದಲ್ಲಿ ಗೋಚರವೆಂಬ ಊರ್ಧ್ವಸ್ಪರ್ಶಮಾತ್ರದಿಂದ ಶ್ರುತಿಯು ವಿಶೇಷತೆಯನ್ನು ಪಡೆಯುತ್ತದೆ ಎಂಬುದೇ.

ಶ್ರುತಿಗೆ 'ಶ್ರೂಯತ ಇತಿ ಶ್ರುತಿಃ' ಎಂಬ ಅಥವಾ 'ಶ್ರವಣೇಂದ್ರಿಯಗ್ರಾಹ್ಯತ್ವಾದ್' ಎಂಬ ಲಕ್ಷಣಗಳನ್ನು ಅನ್ವಯಿಸಿ ಈ ವೈಲಕ್ಷಣ್ಯ ಅಥವಾ ವೈವಿಧ್ಯವನ್ನು ಶ್ರಾವ್ಯತೆಗೆ ಅನ್ವಯಿಸಿದರೆ ನಾದಗುಣದಲ್ಲಿ ವಿವಕ್ಷಿತವಾದ ಆವರ್ತಕ ಸಮುಚ್ಚಯದಲ್ಲಿ ಬೇರೆ ಬೇರೆಯದನ್ನೇ ಬೇರೆ ಬೇರೆ ಸ್ಥಾನಗಳಲ್ಲಿ ಶ್ರೋತ್ರೇಂದ್ರಿಯವು ಗ್ರಹಿಸುತ್ತದೆ ಎಂದು ಅರ್ಥವು ಹುಟ್ಟುತ್ತದೆ. ಭೌತಿಕವಾಗಿ ಕೇವಲ ದ್ವಿಗುಣವೋ ಚತುರ್ಗುಣವೋ ಆಗಿರುವ ಶ್ರುತಿಯೊಂದರ ಆವರ್ತಕಸಮುಚ್ಚಯದಲ್ಲಿ ಗುಣವೈವಿಧ್ಯವು ಭಾಸವಾಗುವಷ್ಟೊಂದು ವ್ಯತ್ಯಾಸವು ಇರುತ್ತದೆಯೇ, ಇಷ್ಟು ಅಲ್ಪಾಂತರವು ಶ್ರವಣಗೋಚರದಲ್ಲಿ ಅಷ್ಟು ವ್ಯತ್ಯಾಸವನ್ನು ಉಂಟುಮಾಡಬಲ್ಲುದೇ ಎಂಬ ಸಂಶಯವು ಇಲ್ಲಿ ಮೂಡಬಹುದು. ಹೀಗಾಗದು ಎಂದು ಹೇಳಲು ಪ್ರಾಯೋಗಿಕ ಸಾಕ್ಷ್ಯಗಳಂತೂ ಇಲ್ಲ. ಈ ಗುಣವೈವಿಧ್ಯವು ಪ್ರಯೋಗಸಿದ್ಧವಾಗಿರುವುದರಿಂದ ಅದಕ್ಕೆ ಇಂತಹ ಒಂದು ಹೇತುವನ್ನು ಹೇಳುವುದು ಅನಿವಾರ್ಯವಾಗುತ್ತದೆ. ಅಲ್ಲದೆ ಉತ್ಪಾದ್ಯವಾದ ಶ್ರುತಿಯ ಈ ತ್ರೈವಿಧ್ಯವನ್ನು ಅದರ ಉತ್ಪಾದಕಕ್ಕೂ ಹೇಳಬೇಕಾಗುತ್ತದೆ. ಮಾನವ ಶಾರೀರಪರವಾಗಿ ಈ ಬಗೆಯ ವೈವಿಧ್ಯವನ್ನು ಹೇಳಬಹುದು; ಏಕೆಂದರೆ ಶ್ರುತಿಗಳು ಹುಟ್ಟುವುದು ಹೃದಯ, ಕಂಠ ಮತ್ತು ಶಿರಸ್ಸುಗಳಲ್ಲಿ ಪ್ರತ್ಯೇಕವಾಗಿರುವ ದ್ವಾವಿಂಶತಿ ನಾಡಿಗಳಲ್ಲಿ ಪ್ರಾಣವಾಯುವು ತುಂಬಿಕೊಳ್ಳುವುದರಿಂದ ಎನ್ನುವುದಕ್ಕೆ ಮತಂಗ ಮತ್ತು ಶಾರ್ಙ್ಗದೇವರ ಉಕ್ತಿಗಳನ್ನು ಈಗಾಗಲೇ ಉದಾಹರಿಸಿದೆ (ಪು. 204-206). ಉತ್ತರೋತ್ತರವಾಗಿ ದ್ವಿಗುಣವಾದ ಶ್ರುತಿಯನ್ನು ಉತ್ಪಾದಿಸುವ ನಾಡಿಗಳು ದೇಹದ ಬೇರೆ ಬೇರೆ ಪ್ರದೇಶದಲ್ಲಿರು

ವುದರಿಂದ ಈ ನಾಡಿಗಳು ಬೇರೆ ಬೇರೆ ಗುಣಗಳನ್ನು ಹೊಂದಿವೆಯೆಂದೂ ಆದುದರಿಂದ ಆಯಾ ಶ್ರುತಿಗಳು ಬೇರೆ ಬೇರೆ ಗುಣಗಳನ್ನು ಹೊಂದಿವೆಯೆಂದೂ ಹೇಳಬಹುದು. ಇಂತಹ ಮೂರೇ ಪ್ರದೇಶಗಳಲ್ಲಿ ಈ ನಾಡಿಗಳು ದೊರೆಯುವುದರಿಂದ ಶ್ರುತಿಯು ತ್ರಿವಿಧವೆನ್ನಲು ಅಡ್ಡಿಯಿಲ್ಲ.

ಆದರೆ ಬಾಹ್ಯಸಂಗೀತವಾದ್ಯಗಳಲ್ಲಿ ಹುಟ್ಟುವ ಶ್ರುತಿಗಳಿಗೆ ಈ ಅರ್ಥವನ್ನು ಅನ್ವಯಿಸುವುದು ಕಷ್ಟ. ಏಕೆಂದರೆ ಅಲ್ಲಿ ಯೋಗನಾಡೀ, ಪ್ರಾಣವಾಯು ಮೊದಲಾದ ಸಾಧನಗಳಿಲ್ಲ. ಅಲ್ಲದೆ ಗಾನವ್ಯವಹಾರಕ್ಕೆ ಅತ್ಯಂತ ಪ್ರಶಸ್ತವಾದುದು (ಕಡೆಯಪಕ್ಷ ಭಾರತೀಯ ಸಂಗೀತದಲ್ಲಿ) ಮೂರೇ ಸ್ಥಾಯಿಗಳಾದರೂ, ಇದರ ಕೆಳಗೆ ಮತ್ತು ಮೇಲೆ ಇರುವ ನಾದವ್ಯಾಪ್ತಿಯನ್ನು ಸಂಗೀತವಾದ್ಯಗಳಲ್ಲಿ ಪಡೆಯಬಹುದಷ್ಟೆ; ಹೀಗೆ ಹುಟ್ಟಿದ ಶ್ರುತಿಗಳಲ್ಲಿ ವೈವಿಧ್ಯವು ಉಪಯುಕ್ತಸ್ಥಾಯಿಗಳ ಸಂಖ್ಯೆಯನ್ನವಲಂಬಿಸಿ ಇನ್ನೂ ಹೆಚ್ಚುತ್ತದೆ. ಈ ಪಕ್ಷದಲ್ಲಿ ಉತ್ಪಾದಕಪರವಾಗಿ ಶ್ರುತಿಯ ಸ್ಥಾಯಿ ಸಂಬಂಧಿತ ತ್ರೈವಿಧ್ಯವನ್ನು ಬೇಕಾದರೆ ಹೀಗೆ ಹೊರಡಿಸಬಹುದು. ಆತ್ಮನು ಈ ವಿವಿಧವಾದ ಶ್ರುತಿಗಳ ವಿವಕ್ಷೆಯನ್ನು ಬಯಸಿ ಸ್ವದೇಹದಲ್ಲಿ ಮೇಲೆ ಹೇಳಿದ ನಾಡಿಗಳಲ್ಲಿ ಉಪಾಂಶುವೇ ಮೊದಲಾದ ರೂಪಗಳಲ್ಲಿ ಉಂಟುಮಾಡಿ ಅನಂತರ ಅದನ್ನೇ ಹೊರಗಡೆ ವಾದ್ಯಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಹಾಗೂ ಶ್ರೋತ್ರೇಂದ್ರಿಯದ ಮೂಲಕ ವಿವಿಧ ದೇಹಗಳಲ್ಲಿ ಈ ವೈವಿಧ್ಯವನ್ನು ಗ್ರಹಿಸುತ್ತಾನೆ. ತಾಳೆನೋಡಲು ಅಸಾಧ್ಯವಾದ ಅದೃಷ್ಟ ವಿಷಯಗಳನ್ನು ಹೇಳುವ ಈ ವಾದವು ಸಂಗೀತಶಾಸ್ತ್ರಕ್ಕೆ ಪ್ರಯೋಜಕವಲ್ಲ. ಆದುದರಿಂದ ಈ ತ್ರೈವಿಧ್ಯವು ನಾದಗುಣದ ಸ್ವಭಾವವೇ ಆಗಿದೆಯೆಂದು ತಿಳಿಯುವುದು ಸರಿಯಾಗುತ್ತದೆ. ಏಳು ಮುಂತಾದ ಸ್ಥಾಯಿಗಳಲ್ಲಿ ಈ ಭೇದವು ಹೆಚ್ಚುಹೆಚ್ಚಾಗಿ ತೋರಿಬಂದರೂ, ಮಾನವಶಾರೀರವನ್ನೂ ಸೇರಿಸಿ ಎಲ್ಲಾ ಭಾರತೀಯ ಸಂಗೀತ ವಾದ್ಯಗಳಿಗೂ ತ್ರಿಸ್ಥಾಯಿಯ ವ್ಯಾಪ್ತಿಯನ್ನೇ ಹೇಳಿರುವುದರಿಂದ 'ತ್ರಿವಿಧಾಂ ಶ್ರುತಿಂ ಪ್ರತಿಪದ್ಯಂತೇ' ಎಂದು ಹೇಳಿದೆ.

ಕಲ್ಲಿನಾಥನು ಈ ಪಕ್ಷದ ಉದ್ಧೃತಿ ಮಾತ್ರವನ್ನು ಕೊಡುತ್ತಾನೆ; ಆದರೆ ವ್ಯಾಖ್ಯಾನಮಾಡುವುದಿಲ್ಲ. ಸಿಂಹಭೂಪಾಲನೂ ಇಲ್ಲಿ ಉದ್ಧೃತಿಮಾತ್ರವನ್ನು ಕೊಟ್ಟಿದ್ದರೂ ಮುಂದೆ ಅರವತ್ತಾರು ಶ್ರುತಿಗಳ ಪಕ್ಷವನ್ನು ಮಂಡಿಸುವಾಗ ಅದನ್ನೂ ಈ ಪಕ್ಷವನ್ನೂ ನಿರಾಕರಿಸುತ್ತಾನೆ. ಇದಕ್ಕೆ ಅವನು ಕೊಡುವ ಕಾರಣವು ಈ ಭೇದವು ಅವಾಸ್ತವವಾದುದು, ಪ್ರತ್ಯಭಿಜ್ಞಾನದಿಂದ ಇವುಗಳಲ್ಲಿ ಅಭೇದವೇ ಸಿದ್ಧವಾಗುತ್ತದೆ, ಎಂಬುದು:

ತತ್ರ ಮಂದತೀವ್ರತೀವ್ರತರಾದಿ ತಾರತಮ್ಯಾಖ್ಯವಿರುದ್ಧಧರ್ಮಸಂಸರ್ಗಸ್ಯ ವಿದ್ಯಮಾನತ್ವಾದ್ ಭೇದ-ಸ್ತಾವತ್ ಸಿದ್ಧಃ । ತದುಕ್ತಂ—'ಅಯಮೇವ ಹಿ ಭೇದೋ ಭೇದಹೇತುರ್ವಾ ಯದ್ ವಿರುದ್ಧಧರ್ಮಾಧ್ಯಾಸಃ ಕಾರಣಭೇದಶ್ಚ' ಇತಿ । ಮಂದ್ರಮಧ್ಯಮತಾರಸ್ಥಾನೇಷ್ವಪಿ ತಾ ಏವೈತಾಃ ಶ್ರುತಯಸ್ತ ಏವಾಮೀ ಸ್ವರಾ ಇತಿ ಪ್ರತ್ಯಭಿಜ್ಞಾನಾದ್ ಭೇದಸ್ಯಾಸಿದ್ಧಿಃ ।[139]

ಈ ನಿರಾಕರಣಪೂರ್ವಕವಾಗಿ 'ಮಂದ್ರವಾದದು, ತೀವ್ರವಾದುದು, ಅದಕ್ಕಿಂತ ಹೆಚ್ಚು ತೀವ್ರವಾದುದು ಎಂಬುದಾಗಿ ಹೆಚ್ಚುಕಡಿಮೆಯೆಂಬ ಪರಸ್ಪರವಾಗಿ ವಿರೋಧವಾಗಿರುವ ಧರ್ಮವು ಕಂಡುಬರುವುದರಿಂದಲೇ ಈ ಬಗೆಯ ಭೇದವು ಸಿದ್ಧಿಸುತ್ತದೆ' ಎಂದು ತಾತ್ಪರ್ಯವು ಬರುವ ಪೂರ್ವಪಕ್ಷವನ್ನು ಸಿಂಹಭೂಪಾಲನು ಮಂಡಿಸುತ್ತಾನೆ. ಇದು ಶ್ರುತಿತ್ರೈವಿಧ್ಯಮತದಲ್ಲಿ ಮೊದಲು ಹೇಳಿದ ಪಕ್ಷವೇ ಆಗಿದೆ. ಅವನ್ನು ಅಲ್ಲಗಳೆಯಲು ತನ್ನ ವಾದಸರಣಿಯನ್ನು ಅವನು ಹೀಗೆ ಬೆಳೆಸುತ್ತಾನೆ: ಎರಡು ವಸ್ತುಗಳಲ್ಲಿ ಭೇದವನ್ನು ಹೇಳಬೇಕಾದರೆ ಕಾರಣಭೇದವನ್ನೋ ವಿರುದ್ಧಧರ್ಮವನ್ನೋ ತೋರಿಸಿಕೊಡಬೇಕು. ಇವೆರಡೂ ಇಲ್ಲಿ ಗೋಚರಿಸುವುದಿಲ್ಲ; ಅಷ್ಟೇ ಅಲ್ಲದೆ ಸ್ಥಾನಾಂತರದಲ್ಲಿಯಾದರೂ ಹಿಂದಿನ ಸ್ಥಾಯಿಯಲ್ಲಿ ಕೇಳಿಸಿದ ಶ್ರುತಿಗಳೇ ಇವು, ಸ್ವರಗಳೇ ಇವು ಎಂಬ ಪ್ರತ್ಯಭಿಜ್ಞಾನವು ಉಂಟಾಗುವುದರಿಂದ ಇವುಗಳಲ್ಲಿ ಅಭೇದವೇ ಸಿದ್ಧವಾಗುತ್ತದೆ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸಿಂಹಭೂಪಾಲನು ಹೇಳುವ ಪ್ರತ್ಯಭಿಜ್ಞಾನವನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸಬಹುದು : ಕಾಶಿಯಲ್ಲಿ ದೇವದತ್ತನೆಂಬುವನನ್ನು ಹಿಂದೆ ನೋಡಿದ್ದೆವು ಎಂದಿಟ್ಟುಕೊಳ್ಳೋಣ. ಅವನನ್ನು ಪುನಃ ಬೇರೆ ಊರಿನಲ್ಲಿ ನೋಡಿದಾಗ 'ಸೋ ऽಯಂ ದೇವದತ್ತಃ'—ಆ, ಎಂದರೆ ಕಾಶಿಯಲ್ಲಿ ಕಂಡ, ದೇವದತ್ತನೇ ಇವನು—ಎಂದು ಸ್ಫುರಿಸುವುದೇ ಹೊರತು ಕಾಲದೇಶಗಳ ವ್ಯತ್ಯಾಸದಿಂದ ದೇವದತ್ತನೇನೂ ಬದಲಾಯಿಸುವುದಿಲ್ಲ. ದೇವದತ್ತನ ವಿಷಯದಲ್ಲಿ ನಾವು ಪಡೆದಿದ್ದ ಜ್ಞಾನವನ್ನು ಕಾಲದೇಶಗಳು ಭಿನ್ನವಾದಾಗ ಪುನಃ ಅನ್ವಯಿಸಿ ಅವನೇ ಇವನು ಎಂಬ ಜ್ಞಾನವನ್ನು ಪಡೆಯುತ್ತೇವೆ. ಹೀಗೆಯೇ ರಾಜನು ಬೇರೆ ಬೇರೆ ಉಪ್ಪರಿಗೆಗಳಲ್ಲಿ ಕಾಣಿಸಿಕೊಂಡರೂ ಅವನು ಒಬ್ಬನೇ ಹೇಗೆ ಆಗಿರುವನೋ, ಕಾಲದೇಶಗಳ ಭೇದವು ಅವನಲ್ಲಿ ಅಭೇದವನ್ನು ಸ್ಥಾಪಿಸಲು ಹೇಗೆ ಸಹಾಯಕವೋ ಹಾಗೆಯೇ ಶ್ರುತಿಗಳೂ ಸ್ವರಗಳೂ ಬೇರೆ ಬೇರೆ ಉಪ್ಪರಿಗೆಗಳಂತಹ ಬೇರೆ ಬೇರೆ ಸ್ಥಾನಗಳಲ್ಲಿ ಇದ್ದರೂ 'ಸೇऽಯಂ ಶ್ರುತಿಃ,' 'ಸೋऽಯಂ ಸ್ವರಃ' ಎಂಬ ಜ್ಞಾನವನ್ನೇ ಹುಟ್ಟಿಸುತ್ತವೆ; ಆದುದರಿಂದ ಈ ತ್ರೈವಿಧ್ಯವನ್ನು ಒಪ್ಪಲಾಗದು.

ಆದರೆ ಈ ವಾದವು ಅಷ್ಟೇನೂ ನಿರ್ದುಷ್ಟವಾಗಿಲ್ಲ. ಏಕೆಂದರೆ ಪ್ರಶ್ನೆಯನ್ನೇ ಯಾಚಿಸುವಂತಹುದು, ಇದು. ಏಕೆಂದರೆ ದೇವದತ್ತನಲ್ಲಿ ಅಭೇದವು ಸಿದ್ಧಿಸಬೇಕಾದರೆ ಅನ್ಯದೇಶಸ್ಥತ್ವವೇ ಮೊದಲಾದ ಅಂಶಗಳನ್ನು ಬಿಟ್ಟುಬಿಡಬೇಕಾಗುವಂತೆ ಶ್ರುತಿಯ ಅನನ್ಯತೆಯು ಸಿದ್ಧಿಸಬೇಕಾದರೆ ಅನ್ಯಸ್ಥಾನಸ್ಥಿತತ್ವವು ಇಲ್ಲಿ ವರ್ಜ್ಯವಾಗುತ್ತದೆ. ಆದರೆ ಹಿಂದೆ ಕೇಳಿಸಿದ ರಿಷಭವೇ ಇದು ಎಂಬಂತಹ ಪ್ರತ್ಯಭಿಜ್ಞೆಯು ಇಲ್ಲಿ ಸಿದ್ಧವಾಗುವುದಿಲ್ಲ; ಹಿಂದೇ ಕೇಳಿಸಿದ ರಿಷಭದಂತೆಯೇ ಇದೆ ಎಂಬ ಸಾದೃಶ್ಯ ಜ್ಞಾನವು ಉಂಟಾಗುತ್ತದೆ. ದೇವದತ್ತನ ಅಭೇದವು ಪೂರ್ವಸಿದ್ಧವೇ ಆದುದರಿಂದ ಕಾಲದೇಶಗಳ ಭೇದದಿಂದ ಅದಕ್ಕೆ ಬಾಧೆಯಿಲ್ಲ. ಆದರೆ ಅದೇ ಬಗೆಯ ಅಭೇದವು ಇಲ್ಲಿ ಪೂರ್ವಸಿದ್ಧವಾದ ಹೊರತು ಪ್ರತ್ಯಭಿಜ್ಞಾನದ ಪ್ರಮೆಯು ಶ್ರುತಿಯಲ್ಲಿ ಉಂಟಾಗಲಾರದು. ಈ ವಿಧದ ಪ್ರಮೆಯನ್ನು ಪ್ರಮಾಣಪೂರ್ವಕವಾಗಿ ಸಾಧಿಸಿ ನಂತರ ಸ್ಥಾನಾಂತರದಲ್ಲಿ ಪ್ರತ್ಯಭಿಜ್ಞಾನವನ್ನು ಹೇಳಿದ್ದರೆ ಒಪ್ಪಬಹುದಾಗಿತ್ತು. ಆದರೆ ಸಾಧ್ಯವಾದುದನ್ನೇ ಸಿದ್ಧವೆಂದು ಇಟ್ಟುಕೊಂಡು ಅವನು ವಾದಿಸುತ್ತಿದ್ದಾನೆ. ದೇವದತ್ತನ ಅಭೇದವು ಕಾಲದೇಶವೈಪರೀತ್ಯಗಳಿಂದ ಬಾಧಿತವಲ್ಲ ನಿಜ; ಹಾಗೆಯೇ ಕಾಲದೇಶಗಳ ಭೇದಮಾತ್ರದಿಂದಲೂ ದೇವದತ್ತನ ಅಭೇದವು ಸಿದ್ಧವಾಗುವುದಿಲ್ಲವಷ್ಟೆ. ಎಂದರೆ ಬೇರೆ ಬೇರೆ ಸ್ಥಳಗಳಲ್ಲಿ, ಬೇರೆ ಬೇರೆ ಕಾಲಗಳಲ್ಲಿ ಅವನನ್ನು ನೋಡಿದಮಾತ್ರಕ್ಕೆ ಅವನೇ ಇವನು ಎಂಬ ಜ್ಞಾನವು ಹುಟ್ಟುವುದಿಲ್ಲ. ಅವನಲ್ಲಿ ಅಭೇದವು ಮೊದಲು ಸಿದ್ಧವಾಗಿದ್ದರೆ ಇದು ಪ್ರತ್ಯಭಿಜ್ಞೆಗೆ ಸಾಧಕವಾಗುತ್ತದೆ, ಅಷ್ಟೆ. ಹಾಗೆಯೇ ಬೇರೆ ಬೇರೆ ಸ್ಥಾನಗಳಲ್ಲಿ ಗೋಚರಿಸುವುದರಿಂದ ಮಾತ್ರ ಶ್ರುತಿಯ ಅಭೇದವನ್ನು ಹೇಳಲಾಗದು; ಶ್ರುತಿಯ ಅಭೇದವನ್ನು ಮೊದಲು ಸಾಧಿಸಿ ನಂತರ ಬೇರೆ ಬೇರೆ ಸ್ಥಾನಗಳಲ್ಲಿ ಅದೇ ಗೋಚರಿಸುತ್ತದೆಂದು ತೋರಿಸಿಕೊಡಬೇಕು. 'ತ್ರಿವಿಧಾಂ ಶ್ರುತಿಂ' ಎಂದು ಏಕವಚನವನ್ನು ಹೇಳಿರುವುದರಿಂದಲೇ ಅದರ ಏಕತೆಯನ್ನೂ ತನ್ಮೂಲಕ ಅನನ್ಯತೆಯನ್ನೂ ಎಂದರೆ ಅಭೇದವನ್ನೂ ಸೂಚಿಸಿದಂತಾಗಲಿಲ್ಲವೇ ? ಎಂದು ಇಲ್ಲಿ ಕೇಳಬಹುದು. ಮತಂಗನೂ ಹೀಗೆ ಒಂದೇ ಶ್ರುತಿಯನ್ನು ಹೇಳಿದ್ದಾನಲ್ಲವೇ, ಎಂದೂ ಈ ಶಂಕೆಯನ್ನು ಸಮರ್ಥಿಸಿಕೊಳ್ಳಬಹುದು. ಆದರೆ ಇಲ್ಲಿ ಶ್ರುತಿಯೆಂಬುದನ್ನು ಉಪಲಕ್ಷಣವೆಂದೂ 'ಜಾತಾವೇಕವಚನ'ವೆಂದೂ ಇಟ್ಟುಕೊಂಡರೆ ಈ ಶಂಕೆಯು ನಿಲ್ಲುವುದಿಲ್ಲ. ಅಲ್ಲದೆ ಮತಂಗನು ಶ್ರುತಿಯನ್ನು ಒಂದೇ ಎಂದರೂ ಅದರ ವೈವಿಧ್ಯದ ಪ್ರತ್ಯಯ ಜ್ಞಾನವು ಅಂತರ್ಭೂತಪೂರಣತ್ವದಿಂದ ಹೇಗೆ ಉಂಟಾಗುತ್ತದೆಂದು ಈ ಹಿಂದೆಯೇ ಸೂಚಿಸಿದೆ. ಅಲ್ಲದೆ ಸಿಂಹಭೂಪಾಲನು ಶ್ರುತಿಯ ಅಭೇದವನ್ನೇನೂ ಹೇಳುತ್ತಿಲ್ಲ; ಶಾರ್ಙ್ಗದೇವನದೆಂದು ಅವನ್ನು ತಿಳಿದಿರುವ ದ್ವಾವಿಂಶತಿಶ್ರುತಿ ಪಕ್ಷದ ಸಮರ್ಥನೆಗೆಂದೇ ಈ ಪ್ರತ್ಯಭಿಜ್ಞಾನ ವಾದವನ್ನು ಮಂಡಿಸುತ್ತಿರುವುದು. ಇಲ್ಲಿ ಅವನು ಹೇಳುತ್ತಿರುವುದು ಮುಖ್ಯವಾಗಿ ಸ್ವರದ ಅಭೇದವನ್ನೇ; ಏಕೆಂದರೆ ಸ್ವರವೇ ದೃಷ್ಟವಾದುದು, ಶ್ರುತಿಯಲ್ಲ. ಶ್ರುತಿಯುಷ್ಟು ಅಲ್ಪಪ್ರಮಾಣದ ನಾದಾಂತರದಲ್ಲಿ,

ಅದರಲ್ಲೂ ಸ್ವರತ್ವವೇ ಇಲ್ಲದ ಅಂತರಶ್ರುತಿಗಳು ಸ್ಥಾನಾಂತರವಾದಾಗ ಅವುಗಳ ಪ್ರತ್ಯಭಿಜ್ಞಾನವು ಉಂಟಾಗುವು
ದಾದರೂ ಹೇಗೆ? ಒಂದುವೇಳೆ ಸ್ಥಾನಾಂತರದಲ್ಲಿರುವ ಸ್ವರದಲ್ಲಿ ಪ್ರತ್ಯಭಿಜ್ಞಾನವನ್ನು ಒಪ್ಪಿಕೊಂಡರೂ ಅದರ
ಸ್ವಸಂವೇದ್ಯತೆಯನ್ನುಂಟುಮಾಡುವ ಅಂತಿಮಶ್ರುತಿಯಲ್ಲಿ ಪ್ರತ್ಯಭಿಜ್ಞೆಯನ್ನು ಹೇಳಬಹುದೇ ಹೊರತು ಉಳಿದ
ಶ್ರುತಿಗಳಲ್ಲಿ ಅಲ್ಲ. ಸ್ವರದ ಪ್ರತ್ಯಭಿಜ್ಞೆಯಾದರೂ ಪ್ರತ್ಯಕ್ಷ ಪ್ರಮಾಣಿತವಲ್ಲ.

ಅಲ್ಲದೆ ಪ್ರತ್ಯಭಿಜ್ಞಾನದ ದೃಷ್ಟಾಂತದಲ್ಲಿ ಕೆಲವು ಅಂಶಗಳು ವರ್ಜ್ಯವಾದರೂ, ಇಲ್ಲಿ ಸ್ಥಾನಾಂತರದಲ್ಲಿ
ಗೋಚರವಾಗುವ ಆವರ್ತಕ ಸ್ವರದ ಸ್ಥಾನಾಂತರತ್ವವೆಂಬುದನ್ನೇ ಬಿಟ್ಟುಬಿಡಲಾಗದು. ಏಕೆಂದರೆ ಈ ಸ್ಥಾನದಿಂದಲೇ
ಅಂತಹ ಆವರ್ತನಸ್ವರದ ವೈಶಿಷ್ಟ್ಯವೂ ವ್ಯಕ್ತಿತ್ವವೂ ಸಿದ್ಧವಾಗುವುದು. ಇದನ್ನೇ ಈ ಪಕ್ಷವು ಬೋಧಿಸುತ್ತಿರು
ವುದು. ಮಧ್ಯಸ್ಥಾಯಿ ರಿಷಭವನ್ನು ಒಮ್ಮೆ ಕೇಳಿದ್ದೇವೆ, ಎಂದಿಟ್ಟುಕೊಳ್ಳೋಣ. ಅದೇ ಮಧ್ಯಸ್ಥಾನದ
ರಿಷಭವನ್ನೇ ಬೇರೆ ಕಾಲದಲ್ಲಿ, ಬೇರೆ ದೇಶದಲ್ಲಿ ಕೇಳಿದಾಗ ಇದು ಅದೇ ರಿಷಭ—'ಸೋಽಯಂ ಮಧ್ಯಸ್ಥಾನಸ್ಥೋ
ರಿಷಭಃ'—ಎಂಬ ಪ್ರತ್ಯಭಿಜ್ಞಾನವು ಹುಟ್ಟುವುದೇ ಹೊರತು, ಮಂದ್ರಸ್ಥಾಯಿಯಲ್ಲಿಯೋ ತಾರಸ್ಥಾಯಿಯಲ್ಲಿಯೋ
ರಿಷಭವನ್ನು ಕೇಳಿದಾಗ ಇದು ಮಧ್ಯಸ್ಥಾಯಿ ರಿಷಭವೇ ಎಂಬ ಜ್ಞಾನವು ಹುಟ್ಟುವುದಿಲ್ಲ; ಮಧ್ಯಸ್ಥಾಯಿ
ರಿಷಭದಂತೆಯೇ ಇರುವ ಸ್ವರ ಎಂಬ ಜ್ಞಾನವು ಹುಟ್ಟುತ್ತದೆ. ಇದೇ ಮಾತನ್ನು ಸ್ಥಾಯಿಯಲ್ಲಿರುವ ಎಲ್ಲಾ
ಪ್ರಕೃತಿ ವಿಕೃತಿ ಸ್ವರಗಳಿಗೂ ಅನ್ವಯಿಸಬೇಕು. ಹೀಗೆ ಸ್ವರದ ಮತ್ತು ಶ್ರುತಿಯ ಪ್ರತ್ಯಭಿಜ್ಞಾನವು ಸಿದ್ಧವಾಗದೆ
ಹೋದುದರಿಂದ ಶ್ರುತಿಯ ವೈವಿಧ್ಯವೇ ನಿಲ್ಲುತ್ತದೆ. ಅಂತರಶ್ರುತಿಗೆ ಪ್ರತ್ಯಭಿಜ್ಞಾನವನ್ನು ಹೇಳಕೂಡದೆಂದು
ಏಕೆ ವಾದಿಸಲಾಯಿತೋ ಅದನ್ನು ಅದರ ವೈವಿಧ್ಯಕ್ಕೂ ಏಕೆ ಅನ್ವಯಿಸಕೂಡದು? ಎಂಬ ಪ್ರಶ್ನೆಯು ಇಲ್ಲಿ
ಸಹಜವಾಗಿಯೇ ಏಳುತ್ತದೆ. ಸ್ವಸಂವೇದ್ಯತೆಯನ್ನುಂಟುಮಾಡುವ ಶ್ರುತಿಗಳಿಗೇ ಪ್ರತ್ಯಭಿಜ್ಞಾನವಿಲ್ಲವೆಂದ ಮೇಲೆ
ಸ್ವರತ್ವಕ್ಕೆ ಅಪ್ರತ್ಯಕ್ಷ ಹೇತುಗಳಾದ ಅಂತರಶ್ರುತಿಗಳಿಗೆ ಎಲ್ಲಿ ಉಳಿಯುತ್ತದೆ? ಇದರಿಂದ ಅಭೇದವು ಸಿದ್ಧವಾಗದ
ಮೇಲೆ ಭೇದವನ್ನೇ ಅನುಮಿತಿಯಿಂದ ಹೇಳಬೇಕು. ಈ ರೀತಿಯಲ್ಲಿ ಬೇರೆ ಬೇರೆ ಸ್ಥಾಯಿಗಳಲ್ಲಿ ಒಂದೇ ಶ್ರುತಿಯೂ
ತನ್ಮೂಲಕ ಸ್ವರವೂ ಬೇರೆ ಬೇರೆಯಾದ ಸೌಂದರ್ಯಾರ್ಥಗಳನ್ನುಳ್ಳ ವ್ಯಕ್ತಿವಿಶೇಷಗಳೆಂದು ಈ ಪಕ್ಷದಿಂದ ಸಿದ್ಧವಾಗು
ತ್ತದೆ. ಇದರಲ್ಲಿ ಅಡಗಿರುವ ಅರ್ಥವಿಸ್ತಾರದಿಂದ ಈ ಮುಖ್ಯಪ್ರಮೇಯವು ಹೊರಡುವುದರಿಂದ 'ಕೇಚಿತ್ ಸ್ಥಾನ-
ತ್ರಯಯೋಗಾತ್ ತ್ರಿವಿಧಾಂ ಶ್ರುತಿಂ ಪ್ರತಿಪದ್ಯಂತೇ' ಎಂಬ ಸಣ್ಣ ವಾಕ್ಯವನ್ನು ಸಿಂಹಭೂಪಾಲನ ವ್ಯಾಖ್ಯಾನದ
ವಿಮರ್ಶೆಯ ಮೂಲಕ ಹೀಗೆ ವಿಸ್ತರಿಸಿ ಬರೆಯಬೇಕಾಯಿತು.

ಸ್ವರವು ಸಿಂಹಭೂಪಾಲನು ತಿಳಿದಂತೆ ಸ್ಥಾನಾಂತರದಲ್ಲಿ ಪ್ರತ್ಯಭಿಜ್ಞಾನದ ಮೂಲಕ ಅಭೇದದಿಂದ ಗೋಚರಿ
ಸುವಂತಹುದಲ್ಲ ಎಂಬುದಕ್ಕೂ ಬೇರೆ ಬೇರೆ ಸ್ಥಾನಗಳಲ್ಲಿ ಅದು ವಿಶಿಷ್ಟವ್ಯಕ್ತಿತ್ವವನ್ನು ಪಡೆದಿದೆಯೆಂಬುದಕ್ಕೂ
ನಾದವಿಜ್ಞಾನದಲ್ಲಿ ಪ್ರಯೋಗಫಲಿತಾಂಶಗಳ ವಿಪುಲವಾದ ಆಧಾರವಿದೆ. ಹೀಗೆ, ಹೆಲ್ಮ್‌ಹೋಲ್ಟ್ಸ್, ರೇಮೋ,
ಡ್ಯಾಲೆಂಬರ್ಟ್, ಟಾರ್ಟಿನಿ, ಆಯ್ಲರ್, ಸ್ಟಂಫ್‌ರವರುಗಳ ಅಭಿಪ್ರಾಯವನ್ನು ಸ್ಥಾಯಿಯ ಬಗೆಗೆ ವ್ಯಾಖ್ಯಾನಮಾಡುವ
ಸಂದರ್ಭದಲ್ಲಿ [58-60] ಹೇಳಿದೆ (ಪು. 194). ಮೂರು ವಿವಿಧ ಸ್ಥಾಯಿಗಳಲ್ಲಿ ಒಬ್ಬನೇ ಗಾಯಕನು ಹಾಡಿದಾಗ
ಒಂದೇ ಸ್ವರದ ಗುಣವು ಏಕರೀತಿಯಾಗಿರುವುದಿಲ್ಲವೆಂಬುದನ್ನು ಕಲ್ವರನು ಸ್ಪಷ್ಟೋಕ್ತಿಯಿಂದ ಹೇಳಿದ್ದಾನೆ :

As is the case with most musical instruments, the vocal organs do not yield the same quality of tone in all registers but the timbre of any given register can be profoundly modified by training and experience.[153]

153 Charles A. Culver, Musical Acoustics, p. 161.

3, ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಮಾನವಕಂಠಧ್ವನಿಯೊಡನೆ ಸಂಗೀತ ವಾದ್ಯಗಳನ್ನೂ ಅವನು ಸೇರಿಸಿ ಹೇಳುವುದನ್ನು ಗಮನಿಸಬೇಕು. ಸ್ಥಾನಾಂತರದಲ್ಲಿ ಸ್ವರವೂ ತನ್ಮೂಲಕ ಶ್ರುತಿಯೂ ವೈಲಕ್ಷಣ್ಯವನ್ನು ಪಡೆಯುವುದನ್ನು ನಕ್ಷೆ 2 ರಲ್ಲಿರುವ ಪ್ರಯೋಗ-ಫಲಿತಾಂಶವು ಸಂಶಯಕ್ಕೂ ವಾದಕ್ಕೂ ಎಡೆಯಿಲ್ಲದಂತೆ ಸಿದ್ಧಪಡಿಸುತ್ತದೆ.




ನಕ್ಷೆ 2 : ಸ್ಥಾನಾಂತರದಲ್ಲಿ ಧ್ವನಿಯ ವೈಲಕ್ಷಣ್ಯ

ಒಬ್ಬನೇ ಸುಶಿಕ್ಷಿತನಾದ ಗಾಯಕನು ಮೂರು ಸ್ಥಾನಗಳಲ್ಲಿ ಸ್ವರವನ್ನು ಉಚ್ಚರಿಸಿದಾಗ ಅದು ಹೇಗೆ ವಿಲಕ್ಷಣವಾಗಿರುತ್ತದೆ ಎಂಬ ಪ್ರಯೋಗದ ಫಲಿತಾಂಶವನ್ನು ಈ ನಕ್ಷೆಯು ತೋರಿಸುತ್ತದೆ. ಸ್ವರಗುಣವನ್ನೂ ಅದು ಉತ್ಪಾದಿಸುವ ವಿವಿಧ ಆವರ್ತಕಗಳು ಯಾವ ಪ್ರಮಾಣದಲ್ಲಿ ಅದರಲ್ಲಿ ಅಡಗಿರುತ್ತವೆ ಎಂಬುದನ್ನೂ ಅವುಗಳ ಪರಸ್ಪರ ಶಕ್ತಿಯನ್ನೂ ಅಳೆಯುವುದರಿಂದ ಗುರುತಿಸಬಹುದೆಂಬುದನ್ನು ಸ್ವರದ ಲಕ್ಷಣವನ್ನು ವಿವೇಚಿಸುವಾಗ ಪ್ರಸ್ತಾಪಿಸಲಾಗುವುದು. ಹೀಗೆ, ಇಲ್ಲಿ ಕ್ಷಿತಿಜಾಕ್ಷದಲ್ಲಿ (x axis) ಆವರ್ತನಸ್ವರದ ಸಂಖ್ಯೆಯನ್ನು ಎಣಿಸಿದೆ. ಲಂಬಾಕ್ಷದಲ್ಲಿ (y axis) ಇವುಗಳ ಪ್ರಮಾಣವನ್ನು ಎಣಿಸಿದೆ. ಈ ಪ್ರಯೋಗದಲ್ಲಿ ಮೂರು ಸ್ವರಸ್ಥಾನಗಳ ಗುಣವನ್ನು ತೋರಿಸಿದೆ. ದಪ್ಪವಾಗಿ ▬ ಎಂದಿರುವ ರೇಖೆಯು ನೀಚಸ್ಥಾನದ ಸ್ವರವನ್ನೂ (A), ಚುಕ್ಕೆಗಳಿಂದ . . . . . ಎಂದಿರುವ ರೇಖೆಯು ಮಧ್ಯಸ್ಥಾನದ ಸ್ವರವನ್ನೂ, ತೆಳುವಾದ — ಎಂದಿರುವ ಗೆರೆಯು ಉಚ್ಚಸ್ಥಾನದ ಸ್ವರವನ್ನೂ (C) ಪ್ರತಿನಿಧಿಸುತ್ತವೆ. ಈ ಮೂರು ಸ್ವರಗಳಲ್ಲಿಯೂ ಆಧಾರಸ್ವರವು ಮಾತ್ರ ಶೇಕಡ ನೂರರಷ್ಟು ಬಲವಾಗಿರುವುದೂ, A ಸ್ವರವು ಎರಡು ಮತ್ತು ಮೂರನೆಯ ಆವರ್ತಕಗಳಲ್ಲಿ ಬಲವಾಗಿಯೂ ನಾಲ್ಕನೆಯ, ಐದನೆಯ ಆವರ್ತಕಗಳಲ್ಲಿ ಅಲ್ಪವಾಗಿಯೂ ಒಂಬತ್ತನೆಯದರಲ್ಲಿ ಬಹು ಅಲ್ಪವಾಗಿಯೂ ಎಂಟನೆಯದರಲ್ಲಿ ಅತ್ಯಲ್ಪ

ವಾಗಿಯೂ ಆರು, ಏಳನೆಯವುಗಳ ಅಭಾವದಲ್ಲಿಯೂ ಇರುವುದನ್ನು ಗಮನಿಸಬೇಕು. B ಸ್ವರದಲ್ಲಿ ಎರಡನೆಯ ಆವರ್ತಕವು ಮಾತ್ರ ಆಧಾರಸ್ವರದಷ್ಟೇ ಬಲಿಷ್ಠವಾಗಿದ್ದು ಮೂರು, ನಾಲ್ಕನೆಯವುಗಳು ಅತ್ಯಲ್ಪವಾಗಿವೆ; ಅದರಲ್ಲಿ ಉಳಿದ ಆವರ್ತಕಗಳು ಇಲ್ಲವೇ ಇಲ್ಲ. C ಸ್ವರದಲ್ಲಿ ಆಧಾರಸ್ವರವನ್ನು ಬಿಟ್ಟರೆ ಉಳಿದವುಗಳು ಯಾವುದೂ ಇಲ್ಲದಿರುವುದು ಗಮನಾರ್ಹವಾಗಿದೆ. ಇದರಿಂದ ಮಂದ್ರಸ್ಥಾನದಲ್ಲಿ ಸ್ವರವು (ತನ್ಮೂಲಕ ಶ್ರುತಿಯು) ಪುಷ್ಟಿಯನ್ನೂ ಸಾಂದ್ರತೆಯನ್ನೂ ಪಡೆದಿರುತ್ತದೆಂದೂ, ಮಧ್ಯಸ್ಥಾನದಲ್ಲಿ ಇವು ಕಡಿಮೆಯಾದರೂ ಪ್ರಸನ್ನತೆಯು ಅಧಿಕವಾಗಿರುವುದೆಂದೂ ತಾರಸ್ಥಾನದಲ್ಲಿ ಸ್ವರವು ಟೊಳ್ಳಾಗಿಯೂ ತೀಕ್ಷ್ಣವಾಗಿಯೂ ಇರುವುದೆಂಬ ಅನುಭವಸಿದ್ಧ ವಿಷಯವನ್ನು ಪ್ರಯೋಗವು ಹೀಗೆ ನಿಷ್ಕೃಷ್ಟವಾಗಿ ತೋರಿಸಿಕೊಡುತ್ತದೆ. ಮತ್ತು ಸ್ಥಾನಾಂತರದಲ್ಲಿ ಶ್ರುತಿಯು ವಿಲಕ್ಷಣವಾಗಿರುತ್ತದೆಂಬ ಈ ಪಕ್ಷವನ್ನು ಪ್ರತ್ಯಕ್ಷಪ್ರಮಾಣದಿಂದ ಸಿದ್ಧಗೊಳಿಸುತ್ತದೆ. ಶ್ರುತಿಯ ಉತ್ಪಾದಕ ವೈವಿಧ್ಯಕ್ಕೂ, 'ಶ್ರವಣೇಂದ್ರಿಯಗ್ರಾಹ್ಯತ್ವಾತ್ ಧ್ವನಿರೇವ ಶ್ರುತಿರ್ಭವೇತ್' ಎಂಬ ಶ್ರುತಿಲಕ್ಷಣದಲ್ಲಿ ವಿವಕ್ಷಿತವಾದ ಶ್ರೋತ್ರೇಂದ್ರಿಯಕ್ಕೂ ಏಕಕಾಲದಲ್ಲಿ ನಿರಪೇಕ್ಷವಾಗಿ ಭೌತಿಕವಾಸ್ತವಿಕತೆಯನ್ನೇ ಬೋಧಿಸುವ ಈ ಪ್ರಯೋಗ ಫಲಿತಾಂಶವು ನಿರ್ದುಷ್ಟವಾಗಿರುವುದರಿಂದ ಈ ಪಕ್ಷವನ್ನು ನಿರ್ಬಾಧಿತಗೊಳಿಸುತ್ತದೆ.

## 4. ಶ್ರುತಿಯು ಪುನಃ ಮೂರುವಿಧ

ಶ್ರುತಿಯು ಬೇರೆ ದೃಷ್ಟಿಯಿಂದ ಪರೀಕ್ಷಿಸಿದಾಗಲೂ ಮೂರು ವಿಧವಾಗಿರುತ್ತದೆಂಬುದಕ್ಕೆ ಮತಂಗನು ಬೇರೆಯವರಿಂದ ಇನ್ನೂ ಒಂದು ಮತವನ್ನು ಸಂಗ್ರಹಿಸುತ್ತಾನೆ. ಹೀಗೆ ಹೇಳುವವರು ಯಾರು ಎಂಬುದು ತಿಳಿಯದು. ಮತಂಗನಿಂದ ಈ ಮತವನ್ನು ಉದ್ಧರಿಸಿಕೊಂಡ ಅರ್ವಾಚೀನರೂ ಇದನ್ನು ಹೇಳಿಲ್ಲ. ಈ ಮತದಲ್ಲಿ ಇಂದ್ರಿಯವೈಗುಣ್ಯದಿಂದ ಶ್ರುತಿಯು ಮೂರು ವಿಧವಾಗಿರುತ್ತದೆ; ಇಂದ್ರಿಯ ವೈಗುಣ್ಯವು ಸಹಜ, ದೋಷಜ ಮತ್ತು ಅಭಿಘಾತಜವೆಂದು ಮೂರು ಬಗೆ. ಇವುಗಳಿಗೆ ಅನುಸಾರವಾಗಿ ಶ್ರುತಿಯೂ ಮೂರು ಬಗೆಯಾಗಿರುತ್ತದೆ:

ಅಪರೇ ತ್ವಿಂದ್ರಿಯವೈಗುಣ್ಯಾತ್ ತ್ರಿವಿಧಾಂ ಶ್ರುತಿಂ ಮನ್ಯಂತೇ । ಇಂದ್ರಿಯವೈಗುಣ್ಯಂ ಚ ತ್ರಿವಿಧಂ— ಸಹಜಂ ದೋಷಜಂ ಅಭಿಘಾತಜಂ ಚೇತಿ । 142

ಸಿಂಹಭೂಪಾಲನು ಈ ಮತವನ್ನು ಸಂಗ್ರಹಿಸುವುದಿಲ್ಲ. ಕಲ್ಲಿನಾಥನು 'ಅಪರೇ' ಎನ್ನುವುದಕ್ಕೆ 'ಅನ್ಯೇ' ಎಂದು ಉದ್ಧರಿಸಿಕೊಳ್ಳುತ್ತಾನೆ. ಕುಂಭಕರ್ಣನು ಇಂದ್ರಿಯವೈಗುಣ್ಯದ ಈ ಮೂರು ವಿಧಗಳನ್ನು ಹೆಸರಿಸದೆ 'ಅನ್ಯೇ ತ್ರಿತಯ (? ತ್ವಿಂದ್ರಿಯ) ವೈಗುಣ್ಯಾತ್ ತ್ರೈವಿಧ್ಯಂ ಪ್ರತಿಪೇದಿರೇ[154] ಎಂದು ಮಾತ್ರ ಹೇಳುತ್ತಾನೆ. ಉಳಿದೆಲ್ಲ ಪಕ್ಷಗಳನ್ನೂ ಧೀರ್ಘವಾಗಿ ವಿಮರ್ಶಿಸಿದರೂ ಅವನು

ಸಮಸ್ತಂ ತ್ರಿತ್ವಪಕ್ಷೋ ಽಪಿ ನ ಕ್ಷಮಃ ಸೂಕ್ಷ್ಮಚಕ್ಷುಷಾಮ್ । 155

ಎಂದು ಮಾತ್ರ ಹೇಳಿರುವಂತೆ ಕಾಣುತ್ತದೆ. ಅವನು ಈ ಮಾತನ್ನು ಈ ಮತವನ್ನು ಕುರಿತು ಆಡಿದ್ದಾನೆಯೇ ಎಂಬುದೂ ಸಂದೇಹಾಸ್ಪದವೇ. ಮೇಲೆ ಹೇಳಿರುವ ಮೂರನೆಯ ಮತವನ್ನು ವಿಮರ್ಶಿಸುವ ಸಂದರ್ಭದಲ್ಲಿಯೇ ಇದನ್ನು ಹೇಳಿರಬಹುದು. ಹಾಗಾದರೆ ಈ ಮತದ ವಿಮರ್ಶೆಯನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾನೆ ಎನ್ನಬೇಕಾಗುತ್ತದೆ. ತುಳಜನಾದರೂ ಈ ಭಾಗವನ್ನು ಕೇವಲ ಕಲ್ಲಿನಾಥನಿಂದ ಉದ್ಧರಿಸಿಕೊಂಡಿದ್ದಾನೆಂಬುದು ಅವನ ಗ್ರಂಥಸಂದರ್ಭದಿಂದಲೇ ತಿಳಿಯುತ್ತದೆ.[156]

---

154 ಕುಂಭಕರ್ಣ, ಉ. ಗ್ರಂ., II, 1, 1, 34, ಪು. 75.
156 ತುಳಜ, ಉ. ಗ್ರಂ., I, ಪು. 6.
155 ಅದೇ ಗ್ರಂಥ, II, 1, 1, 51, ಪು. 76.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಈ ಮತವು ಶ್ರುತಿವಿಷಯಕವಾದ ಯಾವ ಪ್ರಮೇಯವನ್ನು ಹೇಳುತ್ತಿದೆಯೆಂದು ನನಗೆ ಅರ್ಥವಾಗಿಲ್ಲ. ಈ ಹಿಂದೆ ಇದರ ಅರ್ಥವನ್ನು ಬಿಡಿಸಲು ಹೊರಟ ಪ್ರತಿಯೊಬ್ಬರೂ ಹೀಗೆಯೇ ವಿಫಲರಾಗಿರುವುದು ಕಂಡುಬರುತ್ತದೆ. ಇದಕ್ಕೆ ಒಂದು ಬಗೆಯ ಅರ್ಥವನ್ನು ಹೇಳಲು ಪ್ರಯತ್ನಿಸಿರುವುದು ಕಲ್ಲಿನಾಥನೊಬ್ಬನೇ. ಇವನ ಮಾತುಗಳನ್ನು ತುಳಜನು ಅಕ್ಷರಶಃ ಉದ್ಧರಿಸಿಕೊಂಡಿದ್ದಾನೆ. ಕಲ್ಲಿನಾಥನ ವ್ಯಾಖ್ಯಾನವೂ ಸ್ಪಷ್ಟವಾಗಿ ಕಾಣುವ ದೋಷಗಳಿಂದ ತುಂಬಿದೆ. ಸಾವಿರಾರು ವರ್ಷಗಳ ಅವಧಿಯಲ್ಲಿ ಮಾತಿಗೆ ಸರಿಯಾಗಿ ಅರ್ಥ ಹೇಳುವ ಸಂಗೀತಶಾಸ್ತ್ರಕಾರರು ದೊರೆಯದಿರುವುದು ನಿಜಕ್ಕೂ ಆಶ್ಚರ್ಯಕರವಾಗಿದೆ. ಇದು ಬೃಹದ್ದೇಶಿಯಲ್ಲಿ ಪ್ರಕ್ಷಿಪ್ತಭಾಗವೆನ್ನಲು ಸಾಧ್ಯವಿಲ್ಲ. ಏಕೆಂದರೆ ಕಲ್ಲಿನಾಥ, ಕುಂಭಕರ್ಣ, ತುಳಜರು ಈ ಮತವನ್ನು ಬೃಹದ್ದೇಶಿಯಿಂದ ಸಂಗ್ರಹಿಸಿರುವುದು ನಿರ್ವಿವಾದವಾಗಿದೆ. ಉಪಲಬ್ಧಪಾಠವು ದೋಷಯುಕ್ತವಾಗಿರಬಹುದೇ ಎಂದರೆ ಕಲ್ಲಿನಾಥ, ತುಳಜರ ಉದ್ಧೃತಿಗಳು ಅದಕ್ಕೂ ಅವಕಾಶಕೊಡುವುದಿಲ್ಲ.

ಈ ಮತವು ಹೇಳುವುದೂ ಶ್ರುತಿಯ ತ್ರೈವಿಧ್ಯವನ್ನೇ ; ಇದು ಇಂದ್ರಿಯದ ಮೂರು ಬಗೆಯ ವೈಗುಣ್ಯದಿಂದ ಹುಟ್ಟುತ್ತದೆ. ವೈಗುಣ್ಯವು ವಿಗುಣವೆಂಬ ಶಬ್ದದಿಂದ ಹುಟ್ಟಿದುದು. 'ವಿ' ಎಂಬ ಉಪಸರ್ಗವು ವೈಲಕ್ಷಣ್ಯಬೋಧಕವೆಂದು ಗ್ರಹಿಸಿದರೆ ವೈಗುಣ್ಯದಿಂದ ಮೂರು ಬಗೆಯ ವಿಜಾತೀಯ ಗುಣಗಳನ್ನು ಹೇಳಿದಂತಾಯಿತು. ಮಧ್ಯಪದಲೋಪಸಮಾಸದಿಂದ 'ವಿಗತಗುಣ' ವೆಂದು ವಿಗ್ರಹಮಾಡಿದರೆ ವೈಗುಣ್ಯಕ್ಕೆ ಗುಣದ ಅಭಾವವನ್ನೇ ಹೇಳಬೇಕಾಗುತ್ತದೆ. ಅಥವಾ ವಿಗುಣವಾಗಿರುವುದು ಎನ್ನುವುದಕ್ಕೆ ಗುಣದಲ್ಲಿ ದೋಷಸಹಿತವಾಗಿರುವುದು, ಎಂದರೆ ಮೂರು ವಿಧದ ದೋಷಗಳಿಂದ ಕೂಡಿದ ಇಂದ್ರಿಯ, ಎಂದು ಅರ್ಥಮಾಡಬೇಕಾಗುತ್ತದೆ. ಈ ಶಬ್ದಕ್ಕೆ ಈ ಮೂರೇ ಸಹಜವಾದ ಅರ್ಥಗಳು. ಇಂದ್ರಿಯವೆಂಬ ಶಬ್ದಕ್ಕೂ ಹೀಗೆ ಬೇರೆ ಬೇರೆ ಅರ್ಥಗಳನ್ನು ಕಲ್ಪಿಸಬಹುದು. 'ಶ್ರೂಯತ ಇತಿ ಶ್ರುತಿಃ' ಎಂಬ ಲಕ್ಷಣಕ್ಕೆ ಪ್ರಸಕ್ತವಾದ ಶ್ರೋತ್ರೇಂದ್ರಿಯವನ್ನು ಇಲ್ಲಿ ವಿವಕ್ಷಿಸಿದರೆ ಶ್ರಾವ್ಯತೆಯಲ್ಲಿ ಸಹಜ, ದೋಷಜ ಮತ್ತು ಅಭಿಘಾತಜಗಳೆಂಬ ಮೂರು ವೈಲಕ್ಷಣ್ಯಗಳನ್ನು ತಿಳಿಯಬೇಕು. ಆದುದರಿಂದ ಉತ್ಪಾದಕವೂ ಉತ್ಪಾದನಾಸಂದರ್ಭವೂ ಹೇಗೇ ಇದ್ದರೂ ಕೇವಲ ಶ್ರವಣೇಂದ್ರಿಯವೇ ಶ್ರುತಿ ವೈಲಕ್ಷಣ್ಯಕ್ಕೆ ಕಾರಣವೆಂದಾಗುತ್ತದೆ. ಇದು ತುಂಬಾ ಅಸಂಗತವಾದುದು. ಏಕೆಂದರೆ ಈ ಬಗೆಯ ಭೇದವನ್ನು ಬೋಧಿಸಬಲ್ಲ ಶಾರೀರಕವಾದ ಅಥವಾ ಮಾನಸಿಕವಾದ ಕಾರಣಗಳು ಶ್ರವಣೇಂದ್ರಿಯ ಗೋಚರದಲ್ಲಿ ಯಾವ ಪ್ರಮಾಣದಿಂದಲೂ ಸಿದ್ಧವಾಗುವುದಿಲ್ಲ. ಕೇಳುವ ಕಿವಿಯಲ್ಲಿ ವ್ಯತ್ಯಾಸವಿದ್ದ ಹಾಗೆಲ್ಲ ಶ್ರುತಿಯ ಲಕ್ಷಣವೂ ಬದಲಾಯಿಸುತ್ತದೆ ಎಂದು ಅನುಪಪನ್ನವಾದ ಅನುಮಿತಿಯು ಇಲ್ಲಿ ಹೊರಡುತ್ತದೆ. ಅಥವಾ ಎಲ್ಲರ ಕಿವಿಗಳು ಮೂರೇ ವಿಧವಾಗಿ ಕೇಳಲು ಶಕ್ಯವಾಗಿವೆ ಎಂದೂ ಅನುಭವವಿರುದ್ಧವಾದ ಅಭಿಪ್ರಾಯವನ್ನು ಗ್ರಹಿಸಬೇಕಾಗುತ್ತದೆ. ಶ್ರೋತ್ರೇಂದ್ರಿಯಕ್ಕೆ ಅಲ್ಲದಿದ್ದರೆ ಉತ್ಪಾದಕವಾದ ವಾಗಿಂದ್ರಿಯಕ್ಕೆ ಎಂದರೆ ನಾದೋತ್ಪಾದಕಗಳಾದ ಹೃದಯ ಮುಂತಾದವುಗಳಿಗೆ ಅನ್ವಯಿಸೋಣವೆಂದರೆ ಅದು ಇನ್ನೂ ದುಸ್ಸಾಧ್ಯವಾಗುತ್ತದೆ. ಏಕೆಂದರೆ ಅವುಗಳಿಗೆ ಸಹಜ, ದೋಷಜ ಮತ್ತು ಅಭಿಘಾತಜವೆಂಬ ವೈಗುಣ್ಯವೆಂದರೇನು ಎಂಬುದೇ ತಿಳಿಯದೆ ಹೋಗುತ್ತದೆ. ಅಷ್ಟೇ ಅಲ್ಲದೆ ಇಂದ್ರಿಯವೈಗುಣ್ಯಗಳೆಂದು ಹೇಳಲಾಗಿರುವ ಈ ಮೂರನ್ನು ಏನೆಂದು ಆ ಶಬ್ದಗಳ ಅರ್ಥದಿಂದ ಹೊರಡಿಸುವುದೂ ಕಷ್ಟವೇ. ವೈಗುಣ್ಯವನ್ನು ಗುಣರಾಹಿತ್ಯವೆಂದು ಅರ್ಥಮಾಡಿದರೆ ಸಹಜವೆಂಬುದು ಈ ಅವಸ್ಥೆಯೆಂದಾಗುತ್ತದೆ. ಇಂದ್ರಿಯದಲ್ಲಿ ಗುಣವೇ ಇಲ್ಲದಿರುವಾಗ ಅದು ಶ್ರುತಿಯನ್ನು ಉತ್ಪಾದಿಸುವುದಾದರೂ ಹೇಗೆ, ಗ್ರಹಿಸುವುದಾದರೂ ಹೇಗೆ ? ದೋಷಜ ಎನ್ನುವಲ್ಲಿ ಗುಣಸಾಹಿತ್ಯವನ್ನು ಇಟ್ಟುಕೊಂಡರೆ, ಗುಣದ ಅಸ್ತಿತ್ವವು, ಎಂದರೆ ಇದು, ಅದು ಎಂದಲ್ಲದೆ ಎಲ್ಲಾ ಗುಣಗಳನ್ನೂ, ದೋಷವೆನ್ನಲಾದೀತೆ ? ಹಾಗೂ ಅಭ್ಯುಪಗಮಕ್ಕೆ ಈ ಅರ್ಥವನ್ನು ಹೇಳಿದರೂ ಸಹಜವೂ ಅಭಿಘಾತಜವೂ ದೋಷರಹಿತಗಳೆಂದಾಗುತ್ತದೆ. ಗುಣರಹಿತವೂ ಗುಣಸಹಿತವೂ ಅಲ್ಲದ ಮೂರನೆಯ

ಅವಸ್ಥೆಯೊಂದನ್ನು ಅಭಿಘಾತಜ ಎಂಬುದರಿಂದ ವಿವಕ್ಷಿಸಿದಂತಾಯಿತು. ಗುಣರಾಹಿತ್ಯಕ್ಕೂ ಗುಣಸಾಹಿತ್ಯಕ್ಕೂ ಮಧ್ಯದ, ಅಥವಾ ಇವೆರೆಡನ್ನೂ ಮೀರಿದ, ಅವಸ್ಥೆಯನ್ನು ದ್ರವ್ಯಕ್ಕಾಗಲೀ ಅನುಭವಕ್ಕಾಗಲೀ ಹೇಳುವುದು ತಾರ್ಕಿಕ ವಾಗಿ ಅತ್ಯಂತ ಅನುಪಪನ್ನವಾದುದು. ಇದು ಅನುಭವವಿರೋಧವೂ ಹೌದು.

ಈ ಹಿನ್ನೆಲೆಯಲ್ಲಿ ಈ ಪಕ್ಷಕ್ಕೆ ಕಲ್ಲಿನಾಥನು ಮಾಡಿರುವ ವ್ಯಾಖ್ಯಾನವನ್ನು ವಿಮರ್ಶಿಸಬೇಕು. ಅವನು ಈ ಸಂದರ್ಭದಲ್ಲಿ ಹೀಗೆ ವಿವರಿಸುತ್ತಾನೆ :

ಅತ್ರೇಂದ್ರಿಯಂ ಮನಃ । ತತ್ರ ಸತ್ತ್ವಗುಣಯುಕ್ತಂ ಸಹಜಮ್, ರಜಸ್ತಮೋಯುಕ್ತಂ ದೋಷಜಮ್, ಅಮ್ಲಾದಿ ರಸೋಪಹತಮಭಿಘಾತಜಮಿತ್ಯರ್ಥಃ | 147

ಇಂದ್ರಿಯಶಬ್ದಕ್ಕೆ ಹೀಗೆ ಶ್ರುತಿಯ ಉತ್ಪಾದಕವಾದ ಮನಸ್ಸೆಂದು ಅವನು ಇಟ್ಟುಕೊಳ್ಳುತ್ತಾನೆ. ಪ್ರಥಮತಃ ಇದೇ ಆಕ್ಷೇಪಣೀಯವಾಗಿದೆ. ಏಕೆಂದರೆ ಮೂಲ ಉತ್ಪಾದಕವಾದ ಆತ್ಮವನ್ನಾದರೂ ಹೇಳಬೇಕಾಗಿತ್ತು, ಇಲ್ಲವೇ ಪ್ರತ್ಯಕ್ಷ ಪ್ರಮಾಣವಾದ ವಾಗಿಂದ್ರಿಯವನ್ನೋ ಅಥವಾ ಶ್ರುತಿಯನ್ನು ಗ್ರಹಿಸುವ ಶ್ರೋತ್ರೇಂದಿಯವನ್ನೋ ಇಟ್ಟು ಕೊಳ್ಳಬೇಕಾಗಿತ್ತು. ಇವೆರಡೂ ಅಲ್ಲದೆ ಇವುಗಳಿಗೆ ಮಧ್ಯವರ್ತಿಯಾದ ಮನಸ್ಸು ಇಂದ್ರಿಯವೆಂಬ ಸಮೀಕರಣ ವನ್ನು ಅವನು ಪಡೆದಿರುವುದು ಆಶ್ಚರ್ಯಕರವಾಗಿದೆ. ಶ್ರುತಿಯ ಅನುಭವಕ್ಕೆ (ಉತ್ಪಾದನ ಮತ್ತು ಗ್ರಹಣಗಳಿಗೆ) ಕಾರಣಗಳಾದ ವಾಗಿಂದ್ರಿಯ ಮತ್ತು ಶ್ರೋತ್ರೇಂದ್ರಿಯಗಳಿಗೆ ಅಂತಿಮವಾಗಿ ಆಸ್ಪದವಾಗಿರುವ ಮನಸ್ಸನ್ನು ಇಲ್ಲಿ ಇಟ್ಟುಕೊಂಡಿದೆಯೆಂದರೆ, ಎಲ್ಲಾ ಇಂದ್ರಿಯಗಳಮೂಲಕ ಆಗುವ ಎಲ್ಲಾ ವ್ಯಾಪಾರಗಳಿಗೂ ಅಂತಿಮವಾಗಿ ಮನಸ್ಸೇ ಆಸ್ಪದವಾದುದರಿಂದ ಈ ಎಲ್ಲಾ ಕಾರ್ಯಗಳಿಗೂ ಅದು ಸಾಧಾರಣ ಕಾರಣವಷ್ಟೆ. ಇಲ್ಲಿ ಶ್ರುತಿಯ ತ್ರೈವಿಧ್ಯಕ್ಕೆ ಅದು ವಿಶೇಷ ಕಾರಣವಾಗಿರುವುದು ಹೇಗೆ? ಒಮ್ಮೊಮ್ಮೆ ಸಾಧಾರಣ ಕಾರಣವೇ ಕಾರ್ಯವೊಂದಕ್ಕೆ ವಿಶೇಷ ಕಾರಣವಾಗಬಲ್ಲದು ; ಸಂಗೀತಶಾಸ್ತ್ರದಲ್ಲಿ ನಾದೋತ್ಪತ್ತಿಗೆ ಕಾರಣವನ್ನು ಹೇಳುವಾಗ

ಆತ್ಮಾ ವಿವಕ್ಷಮಾಣೋಽಯಂ ಮನಃ ಪ್ರೇರಯತೇ ಮನಃ ।
ದೇಹಸ್ಥಂ ವಹ್ನಿಮಾಹಂತಿ ಸ ಪ್ರೇರಯತಿ ಮಾರುತಮ್ ॥ 157

ಎಂಬಲ್ಲಿ ಮನಸ್ಸನ್ನು ವಿಶೇಷ ಕಾರಣವಾಗಿ ಹೇಳಿದೆ; ಆದುದರಿಂದ ಇಲ್ಲಿ ಇಂದ್ರಿಯವನ್ನು ಮನಸ್ಸೆಂದಿಟ್ಟುಕೊಂಡಿದೆ, ಎಂದು ಬೇಕಾದರೆ ಇಲ್ಲಿ ವಾದಿಸಬಹುದು. ಆತ್ಮನು ಜಗತ್ತಿನಲ್ಲಿ ನಡೆಸುವ ವ್ಯಾಪಾರಗಳಿಗೆಲ್ಲ ಮನಸ್ಸು ಮೂಲ ; ಅದರಲ್ಲಿಯೂ ಇಲ್ಲಿ ನೇರವಾಗಿ ಸಂಬಂಧಿತವಾಗಿದೆ ಎಂದೂ ಸಮರ್ಥಿಸಿಕೊಳ್ಳಬಹುದು ; ಶಾರ್ಙ್ಗದೇವನೇ 'ಮನಶ್ಚೇ-ಲ್ಲೀಯತೇ ಪ್ರಾಣೇ ಸುಷುಪ್ತಿಃ ಸ್ಯಾತ್ತದಾಽಽತ್ಮನಃ ಸ್ವಮಪೀತಃ ಪರಮಾತ್ಮಾನಂ ಸ್ವಪಿತ್ಯಾತ್ಮೇತ್ಯತೋ ಮತಃ' 158 ಎಂದು ಹೇಳಿದ್ದಾನೆ. ಮನಸ್ಸು ಆರನೆಯ ಇಂದ್ರಿಯವೆಂದು ಸಾಂಖ್ಯಾದಿ ದರ್ಶನಗಳೂ ಹೇಳುತ್ತವೆ. ಇದೆಲ್ಲದರ ಬಲದಿಂದ 'ಅತ್ರೇಂದ್ರಿಯಂ ಮನಃ' ಎಂದಿಟ್ಟುಕೊಂಡರೂ ವ್ಯಾಖ್ಯಾನದ ಉಳಿದ ಭಾಗದ ಅರ್ಥವು ಅಸಮಂಜಸವೇ ಆಗುತ್ತದೆ. ಏಕೆಂದರೆ ಮನಸ್ಸೆಂಬ ಇಂದ್ರಿಯವು ಪಂಚಭೂತಗಳ ಸಾರಭೂತವಾದ ಸಾತ್ತ್ವಿಕಾಂಶ ದಿಂದ ಉಂಟಾದುದು, ಎಂದು ಶಾಸ್ತ್ರವು ಹೇಳುತ್ತದೆ. ಸಹಜವೆಂದರೆ ಏನೋ ಈ ಸತ್ತ್ವಗುಣಸಂಯುಕ್ತವಾದ ಅವಸ್ಥೆಯೆನ್ನಬಹುದು. ಆದರೆ ಸಧರ್ಮಿಗಳಾದ ಅಥವಾ ಸಜಾತೀಯಗಳಾದ ರಜಸ್ಸು ತಮಸ್ಸುಗಳನ್ನು ಒಟ್ಟಿಗೆ ಸೇರಿಸಿ ದೋಷವೆಂದು ಕರೆದಿರುವುದು ತಾರ್ಕಿಕವಾಗಿ ಅನುಪಪನ್ನವಾದುದು. ಹಾಗೆ ಇವುಗಳಲ್ಲಿ ವೈಧರ್ಮ್ಯವನ್ನು ಹೇಳಬೇಕಾಗಿದ್ದರೆ ಸತ್ತ್ವ, ರಜಸ್ಸು, ತಮಸ್ಸು ಇವುಗಳನ್ನು ಬೇರೆ ಬೇರೆಯಾಗಿಯೇ ಪರಿಗಣಿಸಿ ತ್ರಿವಿಧವಾದ

157 ಶಾರ್ಙ್ಗದೇವ, ಉ. ಗ್ರಂ., I, 3, 3. 158 ಅದೇ ಗ್ರಂಥ, I, 2, 85.

ಇಂದ್ರಿಯವೈಗುಣ್ಯವೆನ್ನಬೇಕಾಗಿತ್ತು. ಹಾಗಲ್ಲದೆ ಗುಣದಿಂದ ಸಂಪೂರ್ಣ ವೈಧರ್ಮ್ಯವನ್ನು ಹೊಂದಿರುವ ಅಮ್ಲಾದಿ ರಸಗಳನ್ನು ಅಭಿಘಾತಗಳೆಂದು ಕರೆದರೆ, ತ್ರಿಗುಣಗಳನ್ನೂ ಒಟ್ಟಿಗೆ ವ್ಯವಹರಿಸಿ ಒಂದೇವಿಧದ ವೈಗುಣ್ಯವೆಂದು ವ್ಯವಹರಿಸಬೇಕು. ಮೊದಲೆರಡರಲ್ಲಿ ಸಜಾತೀಯಗಳಾದ ಗುಣಗಳನ್ನೂ ಮೂರನೆಯದರಲ್ಲಿ ಸಂಪೂರ್ಣವಾಗಿ ಭಿನ್ನವಾದ ದ್ರವ್ಯವನ್ನೂ ಎಣಿಸಿರುವುದು ಎಷ್ಟೆಂದರೂ ತಾರ್ಕಿಕ ದೋಷವೇ. ಅಲ್ಲದೆ, ಅಮ್ಲಾದಿ, ಎಂದರೆ ಹುಳಿ ಮೊದಲಾದ ರಸಗಳಿಂದ ಪ್ರತ್ಯಕ್ಷವಾಗಿ ಉಪಹತವಾಗುವುದು ಸ್ಥೂಲೇಂದ್ರಿಯವೇ ಹೊರತು ಮನಸ್ಸಲ್ಲ. ಹೀಗೆ ಮೊದಲೆರಡರಲ್ಲಿ ಮನಸ್ಸನ್ನೂ ಮೂರನೆಯದರಲ್ಲಿ ಸ್ಥೂಲವಾದ ರಸನೇಂದ್ರಿಯವನ್ನೂ ಹೇಳಿದ್ದರೂ ವರ್ಗೀಕರಣವು ದೋಷಯುಕ್ತವೇ. ಸೂತ್ರದಲ್ಲಿ ಸಮುಚ್ಚಯವಾಗಿ ಏಕವಸ್ತುವಾಚಕವಾಗಿ ವ್ಯವಹೃತವಾದುದನ್ನು ವ್ಯಾಖ್ಯಾನದಲ್ಲಿ ಭಿನ್ನಜಾತೀಯಕಗಳಾಗಿ ಎಣಿಸುವುದು ಮೂಲಗ್ರಂಥದ ವಿವಕ್ಷೆಯನ್ನು ಮೀರಿದಂತಾಗುತ್ತದೆ. ಒಂದು ವೇಳೆ ವಿನಿಗಮಕವನ್ನು ಹೊರಡಿಸಲು ಭಿನ್ನ ಜಾತೀಯಕಗಳಾದ ಇಂದ್ರಿಯಗಳನ್ನು ಹೇಳಬೇಕಾದರೂ ಭಿನ್ನತೆಯನ್ನು ವಿಶೇಷವಾದ ಸ್ಪಷ್ಟೋಕ್ತಿಯಲ್ಲಿ ತಿಳಿಸಬೇಕು. ಇದನ್ನು ಕಲ್ಲಿನಾಥನು ಮಾಡಿಲ್ಲ. ಹೀಗೆ, ಇದ್ದ ಗ್ರಂಥಕ್ಕೆ ಹೇಗಾದರೂ ಅರ್ಥವನ್ನು ಹೊರಡಿಸಬೇಕೆಂದು ಬಲವಂತ ಮಾಘಸ್ನಾನ ಮಾಡಿದ್ದಾನೆ. ನನ್ನ ಮಟ್ಟಿಗಂತೂ ಇದು ತೃಪ್ತಿಕರ ವಾಗಿಲ್ಲ.

ಈ ಪಕ್ಷವು ಮೂಲವಾಗಿ ಯಾವ ದೃಷ್ಟಿಯಿಂದ ಮಂಡಿಸಲ್ಪಟ್ಟಿತೆಂದೂ ತಿಳಿಯುವಂತಿಲ್ಲ. ಅದಾದರೂ ತಿಳಿದರೆ ಸಂದರ್ಭದಿಂದಲಾದರೂ ಅರ್ಥವನ್ನು ಕೂಡಿಸಬಹುದಾಗಿತ್ತು. ನಾನು ನೋಡಿದ ಯಾವ ದರ್ಶನಪದ್ಧತಿಯಲ್ಲೂ ಇಂದ್ರಿಯಕ್ಕೆ ವೈಗುಣ್ಯವನ್ನಾಗಲೀ, ವೈಗುಣ್ಯದ ವಿಶೇಷವೆಂದು ಇಲ್ಲಿ ಹೇಳಿದ ತ್ರೈವಿಧ್ಯವನ್ನಾಗಲೀ ಗಮನಿಸಿಲ್ಲ. ನನ್ನಂತೆಯೇ ಉಳಿದ ವಿಮರ್ಶಕರೂ ಈ ಹಿಂದೆ ಈ ಭಾಗಕ್ಕೆ ನಿಗದವ್ಯಾಖ್ಯೆಯನ್ನು ಮಾಡಿಬಿಟ್ಟಿರುವುದನ್ನು ನೋಡಿದರೆ ಬಹುಕಾಲದಿಂದಲೂ ಈ ಪಕ್ಷದ ಅರ್ಥಪರಂಪರೆಯು ಲುಪ್ತವಾಗಿ ಹೋಗಿರಬೇಕೆಂಬ ಸಂಶಯವನ್ನು ಉಂಟುಮಾಡುತ್ತದೆ.

ಇಂದ್ರಿಯವೈಗುಣ್ಯವೆಂಬ ಮಾತು ನಮ್ಮ ಸಂಗೀತಶಾಸ್ತ್ರದಲ್ಲಿ ಇದಲ್ಲದೆ ಕೇವಲ ಇನ್ನೊಂದೇ ಒಂದು ಸಂದರ್ಭದಲ್ಲಿ ಪ್ರಯುಕ್ತವಾಗಿದೆ. ಇದನ್ನು ಆಡಿರುವುದು ಭರತಮುನಿ: ವಾದಿ, ಸಂವಾದಿ, ವಿವಾದಿ ಮತ್ತು ಅನುವಾದಿಯೆಂಬ ನಾಲ್ಕು ವಿಧದ ಸ್ವರಗಳು ಲಕ್ಷಣೋಕ್ತಿಯಲ್ಲಿರಬೇಕಾದುದಕ್ಕಿಂತ ಹೆಚ್ಚುಕಡಿಮೆಯಾಗಿ ಗೋಚರಿಸುತ್ತವೆ; ಇದಕ್ಕೆ ತಂತಿ, ಅದರ ಉಪವಾದನ, ದಂಡ, ಇಂದ್ರಿಯ ಈ ನಾಲ್ಕರ ವೈಗುಣ್ಯವೇ ಕಾರಣ ಎಂದು ಅವನು ಹೇಳುತ್ತಾನೆ:

ತತ್ರ ವದನಾದ್ವಾದೀ, ಸಂವದನಾತ್ ಸಂವಾದೀ, ವಿವದನಾದ್ವಿವಾದೀ, ಅನುವದನಾದನುವಾದೀ। ಏತೇಷಾಂ ಚ ಸ್ವರಾಣಾಂ ನ್ಯೂನಾಧಿಕತ್ವಂ ವಾ ತಂತ್ರ್ಯುಪವಾದನದಂಡೇಂದ್ರಿಯವೈಗುಣ್ಯಾದುಪಲಭ್ಯತೇ। ಸ್ವರವಿಧಾನಮೇತಚ್ಚತುರ್ವಿಧತ್ವಮಿತಿ।[159]

ವೈಗುಣ್ಯವೆಂದರೆ ದೋಷವೆಂದೇ ಇಲ್ಲಿ ಭರತನು ಹೇಳುವ ಅರ್ಥ. ಶಾಸ್ತ್ರೋಕ್ತವಾದ ಆದರ್ಶಸ್ಥಾನಗಳಲ್ಲಿ, ಎಂದರೆ ಇಪ್ಪತ್ತಮೂರನೆಯ ಶ್ರುತಿಯಲ್ಲಿ ವಾದಿಯೂ ಒಂಬತ್ತು ಅಥವಾ ಹದಿಮೂರನೆಯ ಶ್ರುತಿಯಲ್ಲಿ ಸಂವಾದಿಯೂ, ಎರಡನೆಯದರಲ್ಲಿ ವಿವಾದಿಯೂ ಇರದೆ ರೂಢಿಯಲ್ಲಿ ಅಸ್ತವ್ಯಸ್ತಸ್ಥಾನಗಳಲ್ಲಿ ಗೋಚರಿಸುತ್ತವೆ. ಇದಕ್ಕೆ ಉತ್ಪಾದಕದಲ್ಲಿರುವ ದೋಷವೇ ಕಾರಣ. ಹೀಗೆ, ತಂತಿಯು ಸ್ವರಗಳನ್ನು ಶುದ್ಧವಾಗಿ ಉಂಟುಮಾಡಬಲ್ಲುದಾದರೂ

159 ಭರತಮುನಿ, ಉ. ಗ್ರಂ., XXVIII, 23 ವಚನ, ಪು. 15.

ತೀರಾ ಕೃಶವಾಗಿರುವುದು, ಒದ್ದೆಯಾಗಿರುವುದು ಅಥವಾ ಒಣಗಿಹೋಗಿರುವುದು.[160] ತಂತಿಯನ್ನು ಕಟ್ಟುವ ಸ್ಥಾನವು (ಉಪವಾದನ), ಎಂದರೆ ಬಿರಡೆ ಮುಂತಾದವುಗಳು ಸಡಿಲವಾಗಿರುವುದು, ವೀಣಾದಂಡವು ಉಬ್ಬಿರುವುದು ಅಥವಾ ಬಗ್ಗಿರುವುದು, ಹಾಗೆಯೇ, ಇಂದ್ರಿಯವು, ಎಂದರೆ ವಾಗಿಂದ್ರಿಯವು, ದೋಷಯುಕ್ತವಾಗಿರುವುದು, ವೀಣೆಯಲ್ಲಿ ಮೆಟ್ಟು ಸ್ಥಾನಪಲ್ಲಟವಾಗುವುದು, ಬೆಟ್ಟು ಅಸಮಂಜಸವಾಗಿ ಪ್ರಯುಕ್ತವಾಗುವುದು, ಇವುಗಳಿಂದ ಈ ಲಕ್ಷ್ಯ-ಲಕ್ಷಣವಿರೋಧವು ಎಂದರೆ ನ್ಯೂನಾಧಿಕತ್ವವು ಉಂಟಾಗುತ್ತದೆ, ಎಂದು ಅಭಿನವಗುಪ್ತನು ಮೇಲಿನ ಮಾತಿಗೆ ವ್ಯಾಖ್ಯಾನ ಬರೆಯುತ್ತಾನೆ :

ಏವಮೂನಾಧಿಕತ್ವೇ ನಾಮುನಾ ವಿಘಟಿತಂ ಚೇ . . . . . .[161] ತತ್ಕಾರಣದೋಷೇ ಕೃಶಾ ತಂತ್ರೀ ಸ್ವರಿತ-ಭರಿತಾಪ್ಯುತ್ಕರ್ಷಮಪಕರ್ಷಂ ವಾ ಯಾತಿ, ಆರ್ದ್ರತ್ವಶೋಷತ್ವಾದಿದೋಷಾತ್ ಉಪವಾದ(-ನಂ) ತಂತ್ರೀ-ಬಂಧನಸ್ಥಾನಂ ತದಪಿ ಶಿಥಿಲತಾದಿದೋಷಾಣಾಂ ಸಾರಣಾನಾಮತಃ (?) ದಂಡೋಽಪಿ ನಮನೋನ್ನಮನ-ಸ್ವಭಾವಃ ತಥೈವೇಂದ್ರಿಯಂ ವಾಗಿಂದ್ರಿಯಂ ಚ ತಾದೃಶಮೇವ ತಜ್ಜ್ಯೋಪಲಕ್ಷಣಂ ಸಾರಿಕಾಂಗುಲ್ಯಾದೀನಾಮಪಿ ದೋಷೇಣ ತಥೋಪಲಭ್ಯಾತ್(? ಲಂಭಾತ್) ।[162]

ಇಂದ್ರಿಯವೆಂದರೆ ವಾಗಿಂದ್ರಿಯವೆಂದೇ ಉತ್ಪಾದಕಪರವಾದ ಅರ್ಥವನ್ನೂ ವೈಗುಣ್ಯವೆಂದರೆ ದೋಷವೆಂಬ ಅರ್ಥವನ್ನು ಅಭಿನವಗುಪ್ತನು ಹೇಳಿರುವುದನ್ನು ಲಕ್ಷಿಸಿದರೆ ಕಲ್ಲಿನಾಥನು ಮಾಡುವ ವ್ಯಾಖ್ಯಾನವು ಪೂರ್ವಾಚಾರ್ಯ ಸಮ್ಮತಿಯನ್ನೂ ಪರಂಪರಾನುಗತವಾದ ಅರ್ಥವನ್ನೂ ಪಡೆದಿಲ್ಲವೆಂದು ಸ್ಪಷ್ಟವಾಗುತ್ತದೆ.

ಆದರೆ ಈ ಭರತೋಕ್ತಿಯಿಂದಲೂ ಈ ಪಕ್ಷಕ್ಕೆ ಪ್ರಯೋಜನವಿಲ್ಲ. ಏಕೆಂದರೆ ಈ ಮಾತನ್ನು ಅವನು ಆಡಿರುವುದು ಶ್ರುತಿಯ ನಾನಾತ್ವವನ್ನು ಕುರಿತು ಅಲ್ಲ ; ಸ್ವರಪ್ರಯೋಗದಲ್ಲಿ ದೋಷದ ವಿಷಯವಾಗಿ. ಗ್ರಂಥಸಂದರ್ಭವು ಶ್ರುತಿವಿಷಯಕವಾದ ಯಾವ ಅನುಮಿತಿಗೂ ಅವಕಾಶನೀಡುವುದಿಲ್ಲ. ವೈಗುಣ್ಯವೆಂದು ಇಲ್ಲಿ ಪ್ರಯುಕ್ತವಾದ ಅರ್ಥವು ಈ ಪಕ್ಷಕ್ಕೆ ನಿಷ್ಪ್ರಯೋಜಕವಾಗುತ್ತದೆ. ಏಕೆಂದರೆ ಇಂದ್ರಿಯ ವೈಗುಣ್ಯವೇ ದೋಷವಾಗಿರುವಾಗ ಅದರಲ್ಲಿ ದೋಷಜವೆಂಬ ಒಂದು ಅವಾಂತರ ಭೇದವಾಗಲೀ, ದೋಷಗಳಲ್ಲದ ಸಹಜ, ಅಭಿಘಾತಜಗಳೆಂಬ ಅವಾಂತರ ಭೇದಗಳಾಗಲೀ ಇರಲು ಹೇಗೆ ಸಾಧ್ಯ ?

ಇಲ್ಲಿ ಇನ್ನೂ ಒಂದು ಸಂಗತಿಯನ್ನು ಹೇಳಬೇಕಾಗಿದೆ. ಮೇಲೆ ಉದ್ಧರಿಸಿದ ಭರತೋಕ್ತಿಯು ಒಂದು ರೀತಿಯಲ್ಲಿ ಅಸಾಧಾರಣವಾಗಿದೆ. ಭರತಮುನಿಯು ಗ್ರಂಥಸಂದರ್ಭಕ್ಕೆ ಅಪ್ರಸಕ್ತವಾದ ಮಾತುಗಳನ್ನು ಆಡುವುದು ಅತ್ಯಂತ ಅಪರೂಪ; ಇಲ್ಲವೆಂದರೂ ಸಲ್ಲುತ್ತದೆ. ಕೇವಲ ಶಾಸ್ತ್ರೀಯ ಪ್ರಮೇಯಗಳ ಜಿಜ್ಞಾಸೆಮಾಡುತ್ತಿರುವ ಸಂದರ್ಭದಲ್ಲಿ, ಲಕ್ಷ್ಯದಲ್ಲಿ ವಾದಕನ, ವಾದ್ಯದ ಅಥವಾ ಗಾಯಕನ ದೋಷದಿಂದ ಈ ಸ್ವರಗಳು ಊನಾಧಿಕವಾಗುತ್ತವೆಂದು ಹೇಳುವುದು ಅವನ ಬೋಧನಕ್ರಮಕ್ಕೇ ಹೊರತಾಗಿದೆ. ಸ್ವರಗಳಿಗೇ ಈ ಮಾತನ್ನು ಹೇಳಬೇಕಾಗಿದ್ದರೆ ಸಪ್ತಸ್ವರಗಳ ನಾಮನಿರ್ದೇಶವಾದ ಕೂಡಲೇ ಹಾಗೆ ಮಾಡಬಹುದಾಗಿತ್ತು. ಆದರೆ ವಾದ್ಯಾದಿ ಚತುರ್ವಿಧಗಳಲ್ಲಿಯೇ ಈ ದೋಷವನ್ನು ಹೇಳಿದ್ದಾನೆಂಬುದು ಮೇಲಿನ ಉದ್ಧೃತಿಯ ಅಂತ್ಯಭಾಗದಿಂದ ಸಿದ್ಧಪಡುತ್ತದೆ. ಇದು ವಿಚಿತ್ರವೇ ಆಗಿದೆ. ಏಕೆಂದರೆ ಸಪ್ತಸ್ವರಗಳಲ್ಲಿ ನ್ಯೂನಾಧಿಕ್ಯವಿದ್ದರೆ ಮಾತ್ರ ಅದು ವಾದ್ಯಾದಿ ಸ್ವರೂಪಗಳಲ್ಲಿ ಕಾಣಿಸಿಕೊಳ್ಳುತ್ತದಷ್ಟೆ. ಸ್ವರಗಳು ನಿಜವಾಗಿ ಇರಬೇಕಾದ ಶಾಸ್ತ್ರೋಕ್ತಸ್ಥಾನಗಳಿಗಿಂತ ನ್ಯೂನವಾಗಿಯೂ, ಅಧಿಕವಾಗಿಯೂ

160 ಪ್ರಾಚೀನ ಭಾರತದಲ್ಲಿ ವೀಣೆಗೆ ಸರಗಳನ್ನು ತಂತಿಗಳಾಗಿ ಕಟ್ಟಲಾಗುತ್ತಿತ್ತೆಂಬುದನ್ನು ಇಲ್ಲಿ ಸ್ಮರಿಸಬೇಕು.

161 ಆಕರದಲ್ಲಿ ಗ್ರಂಥಪಾತವಿದೆ.

162 ಅಭಿನವಗುಪ್ತ, ಉ. ಗ್ರಂ., ಪು 18.

ಇರುತ್ತವೆ, ಎಂದರೆ ಶುದ್ಧವಾದ ವಾದಿ, ಸಂವಾದಿ ಮುಂತಾದ ಭಾವಗಳು ಇಂದ್ರಿಯವೈಗುಣ್ಯದಿಂದಾಗಿ ದೊರೆಯು ವುದಿಲ್ಲ ಎಂದು ಅರ್ಥಮಾಡಿದರೂ ಮೂರ್ಛನೆ, ತಾನ, ಅಲಂಕಾರ, ಗಮಕ, ತಾಳ ಮುಂತಾದ ಇತರ ವಸ್ತುಗಳಿಗೂ ಹೇಳದೆ ಇದೊಂದಕ್ಕೆ ಮಾತ್ರ ಲಕ್ಷ್ಯದಲ್ಲಿ ವ್ಯಕ್ತಿಗತವಾದ ದೋಷವನ್ನು ಶಾಸ್ತ್ರದಲ್ಲಿ ಪರಿಗಣಿಸುವುದು ಏಕೆ ಎಂಬ ಪ್ರಶ್ನೆಯು ಹಾಗೆಯೇ ಉಳಿದುಹೋಗುತ್ತದೆ. ಆದರೂ ಅಭಿನವಗುಪ್ತನು ಇದನ್ನು ವ್ಯಾಖ್ಯಾನಮಾಡುವುದರಿಂದ ಅದು ಪ್ರಕ್ಷಿಪ್ತವೆನ್ನುವಂತಿಲ್ಲ. ಭರತಮುನಿಯು ಈ ಮಾತನ್ನು ಇಲ್ಲಿ ಏಕೆ ಸೇರಿಸಿದನೋ ಅದರ ಅರ್ಥವು ಸಾವಿರಾರು ವರ್ಷಗಳ ಈ ದೂರದಲ್ಲಿ ಕಾಣುವಂತಿಲ್ಲ. ನಾಟ್ಯಶಾಸ್ತ್ರದ ಇತರ ವ್ಯಾಖ್ಯಾನಗಳೂ ದೊರೆತರೆ ಅವುಗಳ ಅಭ್ಯಾಸ ದಿಂದ ಇಂತಹ ಹಲವು ಸಮಸ್ಯೆಗಳಿಗೆ ಉತ್ತರಗಳು ದೊರೆಯಬಹುದು.

ಇದು ಹೇಗೇ ಇರಲಿ, ಭರತಮುನಿಯ ಈ ಮಾತು ಇಲ್ಲಿಗೆ ಅನನ್ವಿತ. ಆದರೂ ಅದನ್ನು ಇಲ್ಲಿ ಏಕೆ ಪ್ರಸ್ತಾಪಿ ಸಿದೆಯೆಂದರೆ 'ಇಂದ್ರಿಯ ವೈಗುಣ್ಯಾತ್' ಎಂಬ ಶಬ್ದಸಾದೃಶ್ಯಮಾತ್ರದಿಂದ ಉತ್ಸಾಹೀ ಸಂಗೀತಶಾಸ್ತ್ರಾಭ್ಯಾಸಿಗಳು ಈ ಪಕ್ಷವನ್ನು ಭರತನಿಗೇ ಅನ್ವಯಿಸಿಬಿಡುವ ಸಾಹಸಕ್ಕೆ ಕೈಹಾಕದಿರಲಿ ಎಂಬ ಆಶಯದಿಂದ. ಒಟ್ಟಿನಲ್ಲಿ, ತ್ರಿವಿಧ ವಾದ ಶ್ರುತಿಯನ್ನು ಹೇಳುವ ಈ ಪಕ್ಷದ ಅಂತರಾರ್ಥವು ನನಗೆ ತಿಳಿದಿಲ್ಲ. ಬಲ್ಲವರು ಇದರ ಅರ್ಥವಿಸ್ತಾರವನ್ನು ಬರೆದು ಉಪಕರಿಸಬೇಕು.

## 5. ಶ್ರುತಿಯು ನಾಲ್ಕುವಿಧ

ಇನ್ನೂ ಒಂದು ಪಕ್ಷವನ್ನು ಮತಂಗನು ಅನ್ಯರಿಂದ ಸಂಗ್ರಹಿಸಿ ಹೇಳುತ್ತಾನೆ; ಇದರ ಪ್ರಕಾರ ಶ್ರುತಿಯು ನಾಲ್ಕು ವಿಧ. ಈ ಚಾತುರ್ವಿಧ್ಯಕ್ಕೆ ಕಾರಣವಾದುದು ವಾತ, ಪಿತ್ತ, ಕಫ ಮತ್ತು ಸನ್ನಿಪಾತಗಳೆಂಬವುಗಳು. ಹೀಗೆ ಹೇಳುವುದು ಚತುರ ಅಥವಾ ತುಂಬುರು. ಇವನು ಆಯುರ್ವೇದ ವಿದ್ವಾಂಸನಿರಬೇಕೆಂಬುದು ಅನುಮಿತಿಯಿಂದ ಸಿದ್ಧವಾಗುತ್ತದೆ. ಏಕೆಂದರೆ ಶಾರೀರವನ್ನು ಶರೀರಕ್ಕೂ ಶರೀರದ ಪ್ರಕೃತಿ ವಿಕೃತಿಗಳಿಗೆ ಕಾರಣಗಳಾದ ವಾತಪಿತ್ತ ಕಫಗಳಿಗೂ ಅನ್ವಯಮಾಡಬಲ್ಲ ಪ್ರಮೇಯಗಳನ್ನೊಳಗೊಂಡಿರುವುದು ಆಯುರ್ವೇದಶಾಸ್ತ್ರವೊಂದೇ.

ಅಪರೇ ತು ವಾತಪಿತ್ತಕಫಸನ್ನಿಪಾತಭೇದಭಿನ್ನಾಂ ಚತುರ್ವಿಧಾಂ ಶ್ರುತಿಂ ಪ್ರತಿಪೇದಿರೇ । ತಥಾ ಚಾಹ ಚತುರಃ —

"ಉಚ್ಚೈಸ್ತರೋ ಧ್ವನೀ ರೂಕ್ಷೋ ವಿಜ್ಞೇಯೋ ವಾತಜೋ ಬುಧೈಃ ।
ಗಂಭೀರೋ ಘನಶೀಲಶ್ಚ ಜ್ಞಾತವ್ಯಃ ಪಿತ್ತಜೋ ಧ್ವನಿಃ ॥
ಸ್ನಿಗ್ಧಶ್ಚ ಸುಕುಮಾರಶ್ಚ ಮಧುರಃ ಕಫಜೋ ಧ್ವನಿಃ ।
ತ್ರಯಾಣಾಂ ಗುಣಸಂಯುಕ್ತೋ ವಿಜ್ಞೇಯಃ ಸನ್ನಿಪಾತಜಃ ॥ ಇತಿ [163]

ಸಿಂಹಭೂಪಾಲನು ಈ ಪಕ್ಷವನ್ನು ಉದ್ಧರಿಸುವುದಿಲ್ಲ; ಈ ಲೋಪವು ಸಮರ್ಥನೀಯವೇ ಆಗಿದೆ. ಕಲ್ಲಿ ನಾಥನು ಅಲ್ಲಲ್ಲಿ ಭಿನ್ನಪಾಠವನ್ನು ಕೊಡುತ್ತಾ 'ತಥಾ ಚಾಹ ತುಂಬುರುಃ' 'ಘನಶೀಲಸ್ತು ಜ್ಞೇಯೋಽಸೌ', ಎಂದು ಉದ್ಧರಿಸಿಕೊಳ್ಳುತ್ತಾನೆ.[147] ಕುಂಭಕರ್ಣನು ಚತುರ, ತುಂಬುರು, ಇತ್ಯಾದಿ ನಾಮನಿರ್ದೇಶವಿಲ್ಲದೆಯೇ

ವಾತಾದಿದೋಷಸಂಭಿನ್ನಾಮೇಕೇ ಪ್ರಾಹುಶ್ಚತುರ್ವಿಧಾಮ್ । [154]

ಎಂದು ಈ ಮತವನ್ನು ಸಂಗ್ರಹಿಸುತ್ತಾನೆ; ಆದರೆ ಉಳಿದ ಪಕ್ಷಗಳನ್ನಂತೆ ಇದನ್ನು ವಿಮರ್ಶಿಸುವುದಿಲ್ಲ. ತುಳಜನು ಕಲ್ಲಿನಾಥನಿಂದಲೇ ಅಕ್ಷರಶಃ ಉದ್ಧೃತಿಯನ್ನು ಪಡೆದುಕೊಳ್ಳುತ್ತಾನೆ.[156] ಕೆಲವು ಸಂದರ್ಭಗಳಲ್ಲಿ ಮತಂಗನಿಂದ

163 ಚತುರ(? ತುಂಬುರು ?), ಉದ್ಧೃತಿ, ಮತಂಗ, ಉ. ಗ್ರಂ., ಪು. 4-5.

ನೇರವಾಗಿ ಮಾತುಗಳನ್ನೂ ಅಭಿಪ್ರಾಯಗಳನ್ನೂ ಪಡೆದರೂ ಈ ಸಂದರ್ಭದಲ್ಲಿ ಕಲ್ಲಿನಾಥೀಯ ಉದ್ಧೃತಿಯನ್ನೇ ಏಕೆ ಅವಲಂಬಿಸುತ್ತಾನೆಯೋ ತಿಳಿಯದು ; ಅವನ ಬೃಹದ್ದೇಶೀ ಮಾತೃಕೆಯ ಈ ಭಾಗವು ಭ್ರಷ್ಟವೋ ಲುಪ್ತವೋ ಆಗಿದ್ದಿರಬಹುದೇನೋ !

ಬೃಹದ್ದೇಶಿಯ ಚತುರನೆಂಬ ಪಾಠಕ್ಕೆ ತುಂಬುರು ಎಂದು ಕಲ್ಲಿನಾಥನು ಪಾಠಾಂತರವನ್ನು ಕೊಡುವುದನ್ನು ಈ ಹಿಂದೆಯೇ ಪ್ರಸ್ತಾಪಿಸಿದೆ. ಇದರಲ್ಲಿ ತುಂಬುರು ಎಂಬ ಪಾಠವೇ ಸರಿಯೆಂದು ತೋರುತ್ತದೆ. ಏಕೆಂದರೆ ಚತುರನೆಂಬ ಶಬ್ದವು ಮುಖ್ಯವಾಗಿ ಗುಣವಾಚಕವಾಗಿರುವಂತೆ ಭಾಸವಾಗುತ್ತದೆ. ಅಲ್ಲದೆ ಈ ಭಾಗದಲ್ಲಿ ಪಾಠಶೋಧನಕ್ಕೆ ಬೃಹದ್ದೇಶಿಯ ಸಂಪಾದಕರು ಶ್ರಮಪಟ್ಟಿರುವುದು ಕಂಡುಬರುತ್ತದೆ. ಅವರು ಬಳಸಿದ್ದ ಎರಡೇ ಮಾತೃಕೆಗಳಲ್ಲಿ ಒಂದರಲ್ಲಿ 'ತಥಾಹ' ಎಂದಿದೆ. ಹೀಗೆ ಪಾಠವನ್ನು 'ತಥಾಹ ಚ ತು(ಂಬು)ರಃ' ಎಂದೂ ಓದಿಕೊಳ್ಳಬಹುದು. ಸಂಗೀತರತ್ನಾಕರದ ಹಸ್ತಪ್ರತಿಗಳಲ್ಲಿರುವ ಪಾಠಾಂತರಗಳು ಹೀಗೆ ಓದಿಕೊಳ್ಳುವ ಅವಕಾಶವನ್ನು ಕೊಡುತ್ತವೆ (ಉದಾಹರಣೆಗೆ, ಪು. 11). ಬೃಹದ್ದೇಶಿಯ ಈ ಭಾಗದಲ್ಲಿ ಗ್ರಂಥಪಾತವನ್ನು ಸಂಪಾದಕರು ಸೂಚಿಸಿದ್ದಾರೆ. ಇದರ ಕಡೆಯಲ್ಲಿ ಅವರು ಕೊಡುವ 'ಉ' ಎಂಬ ಅಕ್ಷರವು ನಾಗರೀಲಿಪಿಯ 'ರ' ಕಾರದ ಅಪಭ್ರಂಶ ರೂಪವೆಂದೇ ತಿಳಿಯಬಹುದು. ಅಲ್ಲದೆ ಚತುರನೆಂಬ ಸಂಗೀತಶಾಸ್ತ್ರಪ್ರವರ್ತಕನನ್ನು ಇದಲ್ಲದೆ ಬೇರೆ ಯಾರೂ ಹೆಸರಿಸುವುದಿಲ್ಲ. ತುಂಬುರುವನ್ನಾದರೆ ಅನೇಕರು ಸ್ಮರಿಸುತ್ತಾರೆ. ಅವನದೆಂದು ಸಿದ್ಧವಾದ ಇತರ ಸಂಗೀತಶಾಸ್ತ್ರೋಕ್ತಿಗಳೂ ದೊರೆಯುವುದರಿಂದ ಅವನು ಗ್ರಂಥರಚನೆಮಾಡಿದ್ದ ಚಾರಿತ್ರಿಕ ವ್ಯಕ್ತಿಯೆಂಬುದು ನಿರ್ವಿವಾದವಾಗಿದೆ. ಇವನೊಬ್ಬನೇ ಈ ಮತದ ಸಾಧಕನಲ್ಲವೆಂಬುದು ಅವನನ್ನು ಉದಾಹರಣಪೂರ್ವಕವಾಗಿ ಹೆಸರಿಸಿ 'ಅಪರೇ ಪ್ರತಿಪೇದಿರೇ' ಎಂದು ಬಹುವಚನವನ್ನು ಬಳಸಿರುವುದರಿಂದ ಗೊತ್ತಾಗುತ್ತದೆ.

ವಾತ, ಪಿತ್ತ, ಕಫಗಳೆಂಬವುಗಳು ಆಯುರ್ವೇದದಲ್ಲಿ ತ್ರಿದೋಷವೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಶರೀರಕ್ಕೆ ಈ ಮೂರೂ ಅತ್ಯಗತ್ಯವಾಗಿ ಬೇಕಾದವುಗಳು. ಇವುಗಳಿಲ್ಲದಿದ್ದರೆ ಶರೀರವು ಇರಲಾರದು. ಇವುಗಳಲ್ಲಿ ದೋಷವು, ಎಂದರೆ ಹೆಚ್ಚುಕಡಿಮೆಗಳು, ಉಂಟಾಗುವುದರಿಂದಲೇ ರೋಗವು ಹುಟ್ಟುತ್ತದೆ. ಇವುಗಳನ್ನು ಎಲ್ಲಾ ಆಯುರ್ವೇದಶಾಸ್ತ್ರಪ್ರವರ್ತಕರೂ ವಿವರವಾಗಿ ವರ್ಣಿಸುತ್ತಾರೆ. ಹೀಗೆ ವಾಗ್ಭಟಾಚಾರ್ಯನು ಅಷ್ಟಾಂಗಹೃದಯಸಂಹಿತೆಯಲ್ಲಿ ಸೂತ್ರಸ್ಥಾನದ ಹನ್ನೊಂದು ಮತ್ತು ಹನ್ನೆರಡನೆಯ ಅಧ್ಯಾಯಗಳಲ್ಲಿ ಇವುಗಳಿಂದ ಆಗುವ ಪ್ರಕೋಪಭೇದಗಳನ್ನೂ ಮುಂದಿನ ಅಧ್ಯಾಯಗಳಲ್ಲಿ ಅವುಗಳಿಗೆ ಚಿಕಿತ್ಸೆಯನ್ನೂ ಹೇಳುತ್ತಾನೆ. ಆದರೆ ಅವನು ಸನ್ನಿಪಾತವೆಂಬ ನಾಲ್ಕನೆಯದನ್ನು ಹೇಳುವುದಿಲ್ಲ ; ವಾತಪಿತ್ತಕಫಗಳಲ್ಲಿ ವೃದ್ಧ, ಸಮ, ಕ್ಷೀಣ, ವೃದ್ಧತರ, ವೃದ್ಧತಮ, ಕ್ಷೀಣತರ ಮತ್ತು ಕ್ಷೀಣತಮವೆಂಬ ಅವಾಂತರಭೇದಗಳ ಸಂಚಯದಿಂದಾಗುವ ಅರವತ್ತಮೂರು ದೋಷಭೇದಗಳನ್ನು ಹೇಳಿದರೂ ವಾತಪಿತ್ತಕಫಗಳ ಗುಣಗಳ ಮಿಶ್ರಣದಿಂದ ಸನ್ನಿಪಾತವು ಆಗುತ್ತದೆನ್ನುವುದಿಲ್ಲ.[164] ಆದರೆ ಇಂತಹ ಮಿಶ್ರಣದಿಂದ ಸನ್ನಿಪಾತವು ಆಗುತ್ತದೆಂದು ಸುಶ್ರುತನು ಎಣಿಸುತ್ತಾನೆ.[165] ಚರಕನು ವಾತಪಿತ್ತಕಫಗಳನ್ನು ಮಾತ್ರ ಎಣಿಸುತ್ತಾನೆ. ಆದರೂ ವಾತಪಿತ್ತಕಫಗಳು ತ್ರಿಧಾತುಗಳೆಂದೂ ಇವುಗಳ ಸಮಸ್ಥಿತಿಯಿಂದಲೇ ಆರೋಗ್ಯವೆಂದೂ, ಇವುಗಳ ನ್ಯೂನಾಧಿಕ್ಯಗಳಿಂದ ರೋಗವೆಂದೂ, ಸನ್ನಿಪಾತವು ಇವುಗಳಿಂದಾದ ದೋಷಗಳ ಸಮ್ಮಿಶ್ರವೆಂದೂ ಆಯುರ್ವೇದದಲ್ಲಿ ಸಂಜ್ಞೆ. ಆದರೆ ತ್ರಿಧಾತುಗಳ ಗುಣಗಳನ್ನು ತ್ರಿವಿಧವಾದ ಧ್ವನಿಗೆ ಕಾರಣವೆಂದು ಎಣಿಸಿ ಸನ್ನಿಪಾತವನ್ನೂ ಗುಣವೆಂದೇ ಎಣಿಸಿರುವುದು ಈ ಮತದ ವೈಶಿಷ್ಟ್ಯ.

164 ವಾಗ್ಭಟ, ಅಷ್ಟಾಂಗಹೃದಯಸಂಹಿತೆ, ಸೂತ್ರಸ್ಥಾನ, XII, 73-78.

165 ಸುಶ್ರುತ, ಸುಶ್ರುತಸಂಹಿತೆ, I, 46, ಇತ್ಯಾದಿ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸನ್ನಿಪಾತವೆಂದರೆ ಸಮ್ಮಿಶ್ರಣವೆಂದೇ ಸಾಮಾನ್ಯಾರ್ಥ. ಆಯುರ್ವೇದದಲ್ಲಿ ದೋಷಪರವಾದ ಮೇಲಿನ ಅರ್ಥವು ರೂಢವಾಗುವುದಕ್ಕಿಂತ ಮುಂಚೆ, ಎಂದರೆ ಸುಶ್ರುತನಿಗಿಂತ ಹಿಂದಿನಕಾಲದಲ್ಲಿ ಈ ಮತವು ಪ್ರಚಾರದಲ್ಲಿದ್ದು ತುಂಬುರುವು ಈ ಸಿದ್ಧಾಂತದ ಮುಖ್ಯ ಪ್ರತಿಪಾದಕನಾಗಿದ್ದನೆಂದು ಇಲ್ಲಿ ತಿಳಿಯಬೇಕಾಗುತ್ತದೆ. ಆದರೂ ಈ ನಾಲ್ಕನ್ನು ಈ ಮತದಲ್ಲಿ ಹೇಳಿರುವ ಧ್ವನಿಯ ಗುಣಗಳಿಗೆ ಕಾರಣವೆಂದು ಯಾವ ಆಯುರ್ವೇದಾಚಾರ್ಯನು ಹೇಳಿರುವುದೂ ನನ್ನ ಗಮನಕ್ಕೆ ಬಂದಿಲ್ಲ.

ಇಲ್ಲಿ ಮುಖ್ಯವಾಗಿ ಗಮನಿಸತಕ್ಕ ಅಂಶವೆಂದರೆ ತುಂಬುರುವು (ಅಥವಾ ಚತುರನು) ಇದು ಶ್ರುತಿವಿಷಯಕ ವಾದ ಪಕ್ಷವೆಂದು ಹೇಳದಿರುವುದು. ಅವನು ಧ್ವನಿಯು ಪಡೆಯುವ ನಾಲ್ಕು ಗುಣಗಳನ್ನು ಈ ಧಾತುಚತುಷ್ಟಯದ ವರ್ಗೀಕರಣದಿಂದ ಹೇಳಿದ್ದಾನೆ, ಅಷ್ಟೆ; ಶ್ರುತಿಯೆಂಬ ಮಾತನ್ನು ಸಹ ಅವನೆಲ್ಲಿಯೂ ಈ ಸಂದರ್ಭದಲ್ಲಿ ಬಳಸಿಲ್ಲ. ಆದರೂ ಮತಂಗನು ಇದು ಶ್ರುತಿಪರವಾದ ಮತವೆಂದೇ ಸ್ಪಷ್ಟವಾಗಿ ಎಣಿಸಿದ್ದಾನೆ. ಆದುದರಿಂದ ಮೂಲದಲ್ಲಿ ಈ ಮತವು ಏನನ್ನೇ ಹೇಳಿರಲಿ, ಬೃಹದ್ದೇಶಿಯ ರಚನೆಯ ಕಾಲಕ್ಕಂತೂ ಶ್ರುತಿಯನ್ನು ಕುರಿತಾದ ಪ್ರಮೇಯವೊಂದರ ಅರ್ಥವಿಸ್ತಾರವು ಅದಕ್ಕೆ ಅನ್ವಿತವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಧ್ವನಿವಿಷಯಕವಾದ ಈ ಮತವನ್ನು ಶ್ರುತಿಗೆ ಅನ್ವಯಿಸಬೇಕಾದರೆ ವಿಶ್ವಾವಸುವಿನ 'ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್' ಎಂಬ ಉಕ್ತಿಯೇ ಆಧಾರವಾಗಿದ್ದಿರಬೇಕು. ಅಲ್ಲದೆ 'ಗ್ರಾಹ್ಯತ್ವಾತ್' ಎನ್ನುವುದರಲ್ಲಿ ಧ್ವನ್ಯಂತರಾಶ್ರುತಿ, ನೈರಂತರ್ಯ ಮೊದಲಾದ ಶ್ರುತಿಲಕ್ಷಣಗಳು ಈ ಮತದಲ್ಲಿ ಗೌಣ ಅಥವಾ ಅಪ್ರಸಕ್ತ. ಈ ಮಾತಿಗೆ ಮುಂದೆ ಸಾವಿರ ವರ್ಷಗಳ ನಂತರ ಕಲ್ಲಿನಾಥನು ಹೇಳಿದ ಶ್ರವಣಯೋಗ್ಯತೆ ಎಂಬ ಅರ್ಥವೇ ಇಲ್ಲಿ ಪ್ರಶಸ್ತವಾದುದು. ಈ ಅರ್ಥವು ಸಂಗೀತಶಾಸ್ತ್ರಪ್ರಯೋಜಕವೂ ಆಗಿರಬೇಕಾದುದರಿಂದ ಸ್ವರತ್ವವನ್ನು ಉಂಟು ಮಾಡುವ ಅಥವಾ ಸ್ವರವನ್ನು ಪ್ರಕಾಶಕ್ಕೆ ತರುವ ಶ್ರುತಿಯ ಲಕ್ಷಣವನ್ನೇ ಉದ್ದೇಶಿಸಿದೆಯೆಂದು ಅನಿವಾರ್ಯವಾಗಿ ತಿಳಿಯಬೇಕಾಗುತ್ತದೆ. ಏಕೆಂದರೆ ಶ್ರುತಿಯ ಪ್ರಯೋಜನವು ಲಕ್ಷ್ಯಪ್ರಸಿದ್ಧವಾದ ಸ್ವರದ ಪ್ರಮಾಣ, ವೈಶಿಷ್ಟ್ಯ, ಗುಣ ಮೊದಲಾದವುಗಳನ್ನು ಶಾಸ್ತ್ರೀಯ ಪ್ರಮೇಯಗಳಿಂದ ಹೇಳುವುದೇ ಆಗಿದೆ. ಇದನ್ನು ಎರಡು ವಿಧದಲ್ಲಿ ಸಾಧಿಸಬಹುದು : ಸ್ಥಾಯಿಯ ವ್ಯಾಪ್ತಿಯಲ್ಲಿರುವ ಪ್ರತಿಯೊಂದು ಶ್ರುತಿಗೂ ನಿರ್ದಿಷ್ಟವಾದ ಅಂತರ, ವ್ಯಕ್ತಿತ್ವ, ಸಂಸ್ಕಾರ-ಪ್ರದಾನಸಾಮರ್ಥ್ಯ ಮೊದಲಾದವುಗಳನ್ನು ಹೇಳಿ ಇಯತ್ತೆಯುಳ್ಳ ಇವುಗಳ ಸಂಖ್ಯೆಯಿಂದ ಆಯಾ ಸ್ವರದ ವೈಶಿಷ್ಟ್ಯ, ವ್ಯಕ್ತಿತ್ವಗಳ ಪ್ರಬೋಧವೆಂದೂ, ಇಂತಹ ಶ್ರುತಿಗಳಲ್ಲಿ ಕೆಲವು ಸ್ವರಕ್ಕೆ ಸ್ವಸಂವೇದ್ಯತೆಯನ್ನು ಉಂಟು ಮಾಡುವಂತಹವುಗಳು, ಉಳಿದವು ಪೂರ್ವಾಭಿಕಾಂಕ್ಷೆಯಿಂದ ಸ್ವರಸ್ವಸಂವೇದ್ಯತೆಗೆ ಅಪ್ರತ್ಯಕ್ಷ ಹೇತುಗಳಾಗಿರುವಂತಹವು ಎಂದೂ, ವಿಶ್ವಾವಸುವಿನ ಪಕ್ಷವನ್ನು ವ್ಯಾಖ್ಯಾನಮಾಡುವಾಗಲೂ (ಪು. 280-288), ಧ್ರುವವೀಣೆ-ಚಲವೀಣೆಗಳಲ್ಲಿ ಶ್ರುತಿನಿದರ್ಶನವನ್ನು ವ್ಯಾಖ್ಯಾನಮಾಡುವಾಗಲೂ (ಪು. 225, 235 ಇತ್ಯಾದಿ) ಹೇಳಿದೆ. ಇದು ಮೊದಲನೆಯ ವಿಧಾನ; ಇದು ಸ್ವರತ್ವದ ಸಿದ್ಧಿಗೆ ಬೇಕಾದ ಸಾಮಗ್ರಿಸಾಧನಗಳನ್ನು ವಿವೇಚಿಸುವ ಕ್ರಮ. ಎರಡನೆಯದು ಇವುಗಳ ಒಟ್ಟು ಪರಿಣಾಮವನ್ನು ಮಾತ್ರ ವಿವೇಚಿಸಿ ಸ್ವರತ್ವಕ್ಕೆ ಹೇತುಗಳಾಗಿರುವ ನಾದಗುಣದ ವಿವಿಧ ಮುಖಗಳನ್ನು ಕುರಿತು ಹೇಳುತ್ತದೆ.

ಸ್ವರತ್ವಕ್ಕೆ ರೂಕ್ಷತೆ, ಗಾಂಭೀರ್ಯ, ಘನತೆ, ಸ್ನಿಗ್ಧತೆ, ಸೌಕುಮಾರ್ಯ ಮತ್ತು ಮಾಧುರ್ಯಗಳು ಮುಖ್ಯವಾಗಿ ಅಭಿವ್ಯಂಜಕಗಳು. ಸ್ವರಕ್ಕೂ ಶಬ್ದಕ್ಕೂ ವ್ಯತ್ಯಾಸವನ್ನು ಉಂಟುಮಾಡುವುದು ಈ ಅಂಶಗಳೇ. ರೂಕ್ಷತೆಯೆಂದರೆ ಒಣಗಿರುವುದು ಎಂದು ಸಾಮಾನ್ಯಾರ್ಥವಿದ್ದರೂ ಇಲ್ಲಿ ಉತ್ಪಾದನಾ ಸಾಧನದ ವ್ಯಕ್ತಿಗತ ದೋಷದಿಂದ ಒದ್ದೆಯಾಗದೆ ಉಳಿದುಕೊಂಡುದು ಎಂಬ ಅರ್ಥವು ಇಲ್ಲಿ ಸಹಜವಾಗುತ್ತದೆ. ಹಾಗೆಯೇ ವಾತಗುಣಕ್ಕೆ ಅನ್ವಯಿಸಿ ರೂಕ್ಷತೆಯನ್ನು ಹೇಳಿರುವುದರಿಂದ ಲಘುವಾಗಿರುವುದು, ಸುಷಿರಮಯವಾಗಿರುವುದು, ಟೊಳ್ಳಾಗಿರುವುದು ಎಂಬ ಅರ್ಥವು

ವಿಶೇಷವಾಗಿ ಹೊಂದುತ್ತದೆ. ಇದು ಉಚ್ಚತರವಾದ ಧ್ವನಿಗೆ ಹೇಳಿದುದೆಂಬುದು ಗಮನಾರ್ಹವಾಗಿದೆ. ಸ್ವರದ ಉಚ್ಚತೆಯು ಹೆಚ್ಚಿದಂತೆಲ್ಲ ಅದರ ಸಾಂದ್ರತೆ, ಪುಷ್ಟಿಗಳು ಕಡಿಮೆಯಾಗುತ್ತಾ ಬಂದು ಟೊಳ್ಳುತನದ ಅವಭಾಸವು ಆಗುತ್ತದೆಂಬುದು ಸಂಗೀತವಿದ್ವಾಂಸರೆಲ್ಲರ ಅನುಭವದಲ್ಲಿರುವ ವಿಷಯ. ಸ್ವರಗುಣದ ಈ ವೈಚಿತ್ರ್ಯವನ್ನು ಪಾಶ್ಚಾತ್ಯ ನಾದವಿಜ್ಞಾನಿಗಳೂ ಒಪ್ಪುತ್ತಾರೆ. ಹೀಗೆ ಸ್ವರಗುಣದ ವಿಷಯದಲ್ಲಿ ಮಾರ್ಗದರ್ಶಕನೂ ಮೂಲಭೂತ ಸಂಶೋಧನೆಗಳನ್ನು ಮಾಡಿರುವವನೂ ಆದ ಹೆಲ್ಮ್‌ಹೋಲ್ಟ್ಸನು ಉಚ್ಚವಾಗಿರುವ ಆಧಾರಸ್ವರವು ಬೆಸಸಂಖ್ಯೆಯ ಆವರ್ತಕಗಳನ್ನೇ ಹೆಚ್ಚಾಗಿ ಹೊಂದಿರುವುದರಿಂದ ಟೊಳ್ಳಾಗಿರುವಂತೆ ಭಾಸವಾಗುವುದೆಂದು ಸ್ಪಷ್ಟವಾಗಿ ಹೇಳುತ್ತಾನೆ. ಗಾಂಭೀರ್ಯವೆಂದರೆ ಇಲ್ಲಿ ಸ್ವರದ ಆಳವೆಂದಿಟ್ಟುಕೊಳ್ಳಬೇಕು. ಈ ಗುಣವು ಸ್ವರಕ್ಕೆ ಅತ್ಯಾವಶ್ಯಕವೆಂಬುದನ್ನು ಅಭಿನವಗುಪ್ತನು ತನ್ನ ಗುರುವಾದ ಭಟ್ಟತೌತನ ಮಾತಿನಲ್ಲಿಯೇ ಹೇಳುತ್ತಾನೆ: 'ಶ್ರೂಯಮಾಣಾಸ್ತು ಗೃಹ್ಯಂತೇ ಗಂಭೀರಾ ಇವ'[132]; ಘನವೆಂದರೆ ಸಾಂದ್ರವಾಗಿರುವುದು, ನಿಬಿಡವಾಗಿರುವುದು, ಎಂದು ಅರ್ಥ. ಸ್ನಿಗ್ಧವಾಗಿರುವುದು ಎಂದರೆ ನುಣುಪಾಗಿರುವುದು; ಸುಕುಮಾರವೆಂದರೆ ಎಳಸಾಗಿರುವುದು (tender), ಅಥವಾ ಒರಟಾಗಿಲ್ಲದಿರುವುದು. ಮಧುರವೆಂದರೆ ಇಂಪಾಗಿರುವುದು. ಈ ಎಲ್ಲಾ ಗುಣಗಳನ್ನು ಸ್ವರದ ಲಕ್ಷಣವನ್ನು ವಿವೇಚಿಸುವಾಗ ವಿವರಿಸಲಾಗುವುದು. ಇಲ್ಲಿ ಈ ಗುಣವೈವಿಧ್ಯವು ಉಂಟಾಗುವುದು ಆವರ್ತನಸ್ವರಗಳ ಭೇದದಿಂದ ಎಂದಿಷ್ಟು ಮಾತ್ರ ಸೂಚಿಸಬೇಕು. ಅನುರಣನವಿಲ್ಲದ ಈ ಆವರ್ತಕ ಕಂಪನಗಳಿಗೆ ಶ್ರುತಿಯೆಂಬ ಅರ್ಥವನ್ನು ಈ ಪಕ್ಷವು ಗ್ರಹಿಸಿದಂತಾಗುತ್ತದೆ. ಇದನ್ನು ಕಲ್ಲಿನಾಥನೂ ಸಮರ್ಥಿಸಿದ್ದಾನೆ. ಧ್ವನ್ಯಂತರಾಶ್ರುತಿ, ನೈರಂತರ್ಯ, ಎಂಬ ಎರಡು ಲಕ್ಷಣಗಳು ಶ್ರುತಿಗೆ ಲೋಪವಾದರೂ ಸ್ವಸ್ವನಿಷ್ಠಸಂಸ್ಕಾರಪ್ರದಾನವೆಂಬ ಈ ಮೊದಲು ಹೇಳಿರುವ ಸ್ವರತ್ವಕ್ಕೆ ಹೇತುವಾದ ಲಕ್ಷಣವು ಉಳಿದೇ ಇರುತ್ತದೆ. ಧ್ವನ್ಯಂತರಾಶ್ರುತಿ, ನೈರಂತರ್ಯಗಳು ಸ್ವರತ್ವದ ಸಿದ್ಧಿಯನ್ನು ಅನುಕ್ರಮದಿಂದ ಉಂಟುಮಾಡಿದರೆ ಆವರ್ತಕವೆಂಬ ಅರ್ಥದಲ್ಲಿ ಸ್ವಸಂವೇದ್ಯತೆಯನ್ನು ಒಮ್ಮೆಗೇ ಉಂಟುಮಾಡುತ್ತವೆ ಎಂದು ತಿಳಿಯಬೇಕು. ಆದುದರಿಂದ ಈ ಪಕ್ಷವು ಶಾಸ್ತ್ರೀಯವೂ ಪ್ರಯೋಜಕವೂ ಹೌದು. ಮೇಲೆ ಹೇಳಿದ ವಿವಿಧ ಗುಣಗಳನ್ನು ವಿವಿಧ ಆವರ್ತಕಗಳು ಬಿಡಿಯಾಗಿಯೋ ಸಮುಚ್ಚಯದಲ್ಲಿಯೋ ಉಂಟುಮಾಡುವುದರಿಂದ ಇವುಗಳ ವಿಶಿಷ್ಟವಾದ ಸಂಖ್ಯೆ, ಪ್ರಮಾಣ ಮತ್ತು ತೀವ್ರತೆಗಳ ಮೊತ್ತದಿಂದ ಆಯಾ ಸ್ವರದ ವೈಶಿಷ್ಟ್ಯವೂ ವ್ಯಕ್ತಿತ್ವವೂ ತಾರ್ಕಿಕವಾಗಿ ಸಿದ್ಧವಾಗುತ್ತವೆ. ಹೀಗೆ ಶ್ರುತಿಯ ಮುಖ್ಯವಾಗಿರುವ ತಾತ್ವಿಕ ಕ್ರಿಯೆಗಳನ್ನು ಈ ಪಕ್ಷವನ್ನು ಗ್ರಹಿಸುವುದರಿಂದಲೂ ಹೇಳಬಹುದು.

ತುಂಬುರುವು ಹೇಳಿರುವ ಧ್ವನಿಯೆಂಬುದನ್ನು ಕೇವಲ ಮಾನವ ಶಾರೀರವೆಂದು ಗ್ರಹಿಸಿದರೆ ತಪ್ಪಾಗುತ್ತದೆ. ಅವನು ಹೇಳಿರುವ ಈ ಗುಣಗಳು ಸ್ವರದ ಎಲ್ಲಾ ಉತ್ಪಾದಕಗಳಿಗೂ ವಿಶೇಷಣಗಳಾಗಿವೆ. ಏಕೆಂದರೆ ಇವು ಎಲ್ಲಾ ಸ್ವರಗಳ ಲಕ್ಷಣಗಳಾಗಿವೆ. ಆದುದರಿಂದ ಧ್ವನಿಯೆಂದರೆ ಅಭಿನವಗುಪ್ತಾದಿಗಳನ್ನು ಅನುಸರಿಸಿ ಸಂಗೀತೋಪಯೋಗಿಯಾದ ಯಾವುದೇ ನಾದದ ಮಟ್ಟ ಎಂಬ ಅರ್ಥವನ್ನು ಇಲ್ಲಿ ಹೊರಡಿಸಬೇಕು. ಹಾಗಾದರೆ ಪ್ರಾಣಿಯ ದೇಹಕ್ಕೆ ಸಹಜವಾದ ವಾತಪಿತ್ತಕಫಸನ್ನಿಪಾತಗಳನ್ನು ಬೇರೆ ಉತ್ಪಾದಕಗಳಿಗೆ ಹೇಗೆ ಹೇಳುವುದು ಎಂಬ ಶಂಕೆ ಇಲ್ಲಿ ಮೂಡುತ್ತದೆ. ಆಯಾ ಕಾಲದಲ್ಲಿ ಶ್ರುತಿಯನ್ನು ಗ್ರಹಿಸುವ ದೇಹದ ಆಯಾ ಧಾತುವಿನ ಪರಿಸ್ಥಿತಿಯನ್ನು ಇದು ಸೂಚಿಸುತ್ತದೆ ಎಂದು, ಅಥವಾ ಆಯಾ ಸ್ವರದ ವಿವಕ್ಷೆಯನ್ನುಳ್ಳ ಆತ್ಮನು ಆಯಾ ಧಾತುವಿನ ಪರಿಸ್ಥಿತಿಯಿರುವ ದೇಹ ಸಂದರ್ಭದಲ್ಲಿ ಆಯಾ ಸ್ವರವನ್ನು ಉತ್ಪಾದಿಸುತ್ತಾನೆ ಎಂದು, ಅರ್ಥಮಾಡುವುದು ಆವಶ್ಯಕವಾಗುತ್ತದೆ.

ಹೀಗೆ ಶಾರೀರಕ ಧಾತುಗಳಿಗೂ ಸ್ವರಗಳಿಗೂ ಸಂಬಂಧವನ್ನು ಕಲ್ಪಿಸುವುದು ಇತರ ಪ್ರಾಚೀನ ಸಂಗೀತಪದ್ಧತಿಗಳಲ್ಲಿಯೂ ಕಂಡುಬರುತ್ತದೆ. ಉದಾಹರಣೆಗೆ ಕನ್‌ಫ್ಯೂಷಿಯಸ್ಸನು ಶರೀರದ ಧಾತುಸ್ಥಿತಿಗೆ ಸಂಗೀತವು ಕಾರಣವೆಂಬುದನ್ನು ಸಾವಿರಾರು ವರ್ಷಗಳ ಹಿಂದೆಯೇ ಚೀಣದಲ್ಲಿ ಸೂಚಿಸಿದ್ದನು. ಅರೇಬಿಯಾ ದೇಶದಲ್ಲಿ ವಿವಿಧ ಸ್ವರಗಳನ್ನು

ನುಡಿಯುವ ವಿವಿಧ ವೀಣಾತಂತಿಗಳಿಗೆ ವಿವಿಧ ಧಾತುಗಳನ್ನು ಅನ್ವಯಿಸುವ ಪದ್ಧತಿಯು ಇಂದಿಗೂ ಇದೆ.[166] ಬಹುಶಃ ಅ ದೇಶದ ಸಂಗೀತದ ಇತರ ಅಂಶಗಳಂತೆ ಭಾರತದಿಂದಲೇ ಇದೂ ಹೋಗಿ ನೆಲೆಸಿರಬೇಕು.

ಶಾರೀರಕ ಧಾತುಗಳಿಗೆ ಹೀಗೆ ಸಂಬಂಧಿಸದಿದ್ದರೂ ಸ್ವರದ ಮೇಲೆ ಹೇಳಿದ ಗುಣಗಳನ್ನು ಧ್ವನಿಯದೆಂದೇ ನಮ್ಮ ಪೂರ್ವಾಚಾರ್ಯರೆಲ್ಲರೂ ಸಮ್ಮತಿಸಿದ್ದಾರೆ. ಭರತಮುನಿಯೇ ಕಂಠಗುಣಗಳನ್ನು ಹೀಗೆಂದು ಲಕ್ಷಿಸಿದ್ದಾನೆ :

ಶ್ರಾವಕೋ ಽಥ ಘನಃ ಸ್ನಿಗ್ಧೋ ಮಧುರೋ ಹ್ಯವಧಾನವಾನ್ ।
ತ್ರಿಸ್ಥಾನಶೋಭೀತ್ಯೇವಂ ತು ಷಟ್ ಕಂಠಸ್ಯ ಗುಣಾ ಮತಾಃ ॥
ಉದಾತ್ತಂ ( ? ದೂರಾತ್ತು ) ಶ್ರೂಯತೇ ಯಸ್ಮಾತ್ತಸ್ಮಾಚ್ಛ್ರಾವಕ ಉಚ್ಯತೇ ।
ಶ್ರಾವಕಃ ಸುಸ್ವರೋ ಯಸ್ಮಾದಚ್ಛಿನ್ನಃ ಸ ಘನೋ ಮತಃ ॥
ಅರೂಕ್ಷಧ್ವನಿಸಂಯುಕ್ತಃ ಸ್ನಿಗ್ಧಸ್ತಜ್ಞೈಃ ಪ್ರಕೀರ್ತಿತಃ ।
ಮನಃಪ್ರಹ್ಲಾದನಕರಃ ಸ ವೈ ಮಧುರ ಉಚ್ಯತೇ ॥
ಸ್ವರೇ ಽಧಿಕೇ ಚ ಹೀನೇ ಹ್ಯವಿರಕ್ತೋ ಽವಧಾನವಾನ್ ।
ಶಿರಃಕಂಠೇಷ್ವಭಿಹತಸ್ತ್ರಿಸ್ಥಾನಮಧುರಸ್ವರಃ ।
ತ್ರಿಸ್ಥಾನಶೋಭೀತ್ಯೇವಂ ತು ಸ ಹಿ ತಜ್ಞೈರುದಾಹೃತಃ ॥[167]

ಇದೇ ಪಾಠವನ್ನು ನಾನ್ಯದೇವನು ಉದ್ಧರಿಸಿಕೊಂಡು ಮಧುರದ ಲಕ್ಷಣವನ್ನು ' ಘನಃ ಪ್ರಸ್ಫೋಟಜನಕಃ ಸ ವೈ ಮಧುರ ಉಚ್ಯತೇ ' ಎಂದು ಭಿನ್ನವಾಗಿ ಓದಿಕೊಳ್ಳುತ್ತಾನೆ.[168] ಇದೇ ಲಕ್ಷಣಗಳನ್ನು ಸ್ವಲ್ಪ ಭಿನ್ನವಾಗಿ ಚಾಳುಕ್ಯ ಚಕ್ರವರ್ತಿ ಸೋಮೇಶ್ವರನೂ ಹೇಳುತ್ತಾನೆ.[169] ಈ ಲಕ್ಷಣಗಳಿಗೆ ಭಾರತೀಯ ಪಾಠವೇ ಆಕರವಾಗಿದ್ದರೂ, ತುಂಬುರುವು ಧ್ವನಿಯದೆಂದು ಶಾರೀರಕ ಧಾತುಗಳಿಗೆ ಸಂಬಂಧಿಸಿ ಹೇಳಿದುದು ಹೊಸದೇ. ಅದನ್ನು ಶ್ರುತಿಕಲ್ಪನೆಯೆಂದು ಹೇಳಿ ಅದರಿಂದ ಮುಖ್ಯವಾದ ನಾದಶಾಸ್ತ್ರೀಯ ಪ್ರಮೇಯವನ್ನು ಸಿದ್ಧಪಡಿಸಲು ಅವಕಾಶ ಕೊಡುವ ಮತಂಗಮುನಿಯ ಪ್ರತಿಭೆಯೂ ನವನವೋನ್ಮೇಷಶಾಲಿಯೇ. ಶಾರ್ಙ್ಗದೇವನು ಇವುಗಳನ್ನು ಶ್ರುತಿಪ್ರಯೋಜಕಗಳೆಂದು ತಿಳಿಯುವುದಿಲ್ಲ. ಅವನು ಈ ಎಲ್ಲ ಗುಣಗಳನ್ನೂ ಅವುಗಳ ಮೂವತ್ತುವಿಧದ ಮಿಶ್ರಣಗಳನ್ನೂ ಶಬ್ದಗುಣವನ್ನೂ ಶಬ್ದಗುಣವನ್ನು ವರ್ಣಿಸುವಾಗ ವಿಸ್ತಾರವಾಗಿ ವಿವೇಚಿಸುತ್ತಾನೆ.[170]

ಒಟ್ಟಿನಲ್ಲಿ. ಈ ಮತವು ಶರೀರಸ್ವಭಾವವನ್ನೇ, ಎಂದರೆ ಸಪ್ತಧಾತುಗಳಲ್ಲಿ ಮೂರರ ವಿವಿಧ ಪ್ರಮಾಣ, ಪರಿಣಾಮಗಳನ್ನೇ, ಶಾರೀರಸ್ವಭಾವದ ಮೂಲವನ್ನಾಗಿ ಪಡೆದುಕೊಂಡಿದೆ. ಹೀಗೆ ಪ್ರಾಕೃತಿಕ (phenomenological) ದೃಷ್ಟಿಕೋನದಲ್ಲಿ ಧ್ವನಿಯನ್ನೂ ತನ್ಮೂಲಕ ಶ್ರುತಿಯನ್ನೂ ವಿವರಿಸಿ ಸ್ವರ, ಶ್ರುತಿಗಳ ವಿಷಯದಲ್ಲಿ ಮುಖ್ಯವೂ ನವ್ಯವೂ ಆದ ಕಲ್ಪನೆಯೊಂದನ್ನು ಇದು ಒಳಗೊಂಡಿದೆ.

---

166 Sourindro Mohun Tagore, The Universal History of Music, p. 102.

167 ಭರತಮುನಿ, ಉ. ಗ್ರಂ., XXXIII, 12-15, ಪು. 400.

168 ನಾನ್ಯದೇವ, ಉ. ಗ್ರಂ., I, 4, 104-108, ಪು. 13-14.

169 ಚಾಳುಕ್ಯ ಸೋಮೇಶ್ವರ, ಮಾನಸೋಲ್ಲಾಸ, IV, 16, 81-84, ಪು. 8–9.

170 ಶಾರ್ಙ್ಗದೇವ, ಉ. ಗ್ರಂ., III, 39-77, ಪು. 159-165.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## 6. ಶ್ರುತಿಯು ಒಂಬತ್ತು ವಿಧ

ಆರನೆಯ ಮತದಲ್ಲಿ ಶ್ರುತಿಗಳು ಒಂಬತ್ತು ವಿಧ. ಇದನ್ನು ಹೇಳುವವರನ್ನು ಮತಂಗನು 'ಅಪರೇ' ಎಂದು ಮೊದಲು ಕರೆದರೂ ಕೂಡಲೇ ವೇಣನೇ ಮೊದಲಾದ ಮುನಿಗಳು ಎಂದು ಹೆಸರು ಹೇಳಿ ಸ್ಪಷ್ಟಪಡಿಸುತ್ತಾನೆ. ಇವರ ಪ್ರಕಾರ ಸ್ವರಗಳು ದ್ವಿಶ್ರುತಿ, ತ್ರಿಶ್ರುತಿ, ಚತುಃಶ್ರುತಿಯೆಂದು ಮೂರು ವಿಧ. ಇವುಗಳಲ್ಲಿರುವ ಶ್ರುತಿಗಳನ್ನು ಸೇರಿಸಿದರೆ ಒಟ್ಟು ಒಂಬತ್ತು ಆಗುತ್ತವೆ :

ಅಪರೇ ತು ವೇಣ್ವಾ(?ಣಾ)ದಯೋ ಮುನಯೋ ನವಧಾಂ ಶ್ರುತಿಂ ಪ್ರತಿಪದ್ಯಂತೇ ।

ತಥಾ ಹಿ —

ದ್ವಿಶ್ರುತಿಸ್ತ್ರಿಶ್ರುತಿಶ್ಚೈವ ಚತುಃಶ್ರುತಿಕ ಏವ ಚ ।
ಸ್ವರಪ್ರಯೋಗೋ ಕರ್ತವ್ಯೋ ವಂಶೀ ಛಿದ್ರಗತೋ ಬುಧೈಃ ।

ಭರತೇನಾಪ್ಯುಕ್ತಮ್ —

" ದ್ವಿಕತ್ರಿಕಚತುಷ್ಕಾಸ್ತು ಜ್ಞೇಯಾ ವಂಶಗತಾಃ ಸ್ವರಾಃ ।
ಇತಿ ತಾವನ್ಮಯಾ ಪ್ರೋಕ್ತಾಃ ಸ ವಂಶಶ್ರುತಯೋ ನವ ।" [171]

ಮೂಲಗ್ರಂಥದಲ್ಲಿ 'ಅಪರೇ ತು . . . . ನ್ಧಾದಯೋ ನವಧಾ' ಎಂದು ಭ್ರಷ್ಟವೂ, ಪತಿತವೂ ಆದ ಪಾಠವಿದೆ. 'ಅಪರೇ ತು ವೇಣ್ವಾದಯೋ ಮುನಯೋ' ಎಂಬುದನ್ನು ಕಲ್ಲಿನಾಥೀಯ ಉದ್ಧೃತಿಯಿಂದ ಗ್ರಹಿಸಿದೆ. ಕಲ್ಲಿನಾಥನು ಹೀಗೆ ಪಾಠಾಂತರವನ್ನು ಬಳಸಿದ್ದಾನೆ :

ಅಪರೇ ತು ವೇಣ್ವಾದಯೋ ಮುನಯೋ ನವವಿಧಾಂ ಶ್ರುತಿಂ ಮನ್ಯಂತೇ । ತಥಾ ಹಿ —

' ದ್ವಿಶ್ರುತಿಸ್ತ್ರಿಶ್ರುತಿಶ್ಚೈವ ಚತುಃಶ್ರುತಿಕ ಏವ ಚ ।
ಸ್ವರಪ್ರಯೋಗಃ ಕರ್ತವ್ಯೋ ವಂಶಚ್ಛಿದ್ರಗತೋ ಬುಧೈಃ ॥ '

ಇತಿ । ಭರತೇನಾಪ್ಯುಕ್ತಮ್—

ದ್ವಿಕತ್ರಿಕಚತುಷ್ಕಾಸ್ತು ಜ್ಞೇಯಾ ವಂಶಗತಾಃ ಸ್ವರಾಃ ।
ಕಂಪನಾರ್ಧಮುಕ್ತಾಶ್ಚ ವ್ಯಕ್ತಮುಕ್ತಾಂಗುಲಿಸ್ವರಾಃ ॥
ಇತಿ ತಾವನ್ಮಯಾ ಪ್ರೋಕ್ತಾಃ ಸಮಾಜ್ಯಃ ಶ್ರುತಯೋ ನವ ॥ ' ಇತಿ । [172]

ಕುಂಭಕರ್ಣನು ವೇಣು, ಭರತ ಎಂದು ಮುಂತಾಗಿ ನಾಮನಿರ್ದೇಶಮಾಡದೆಯೇ

ಚತುಸ್ತ್ರಿದ್ವಿಶ್ರುತಿತ್ವೇನ ಸ್ವರಾಣಾಂ ನವಧಾಪರೇ [173]

ಎಂದು ಮಾತ್ರ ಸಂಗ್ರಹಿಸುತ್ತಾನೆ. ತುಳಜನು ಕಲ್ಲಿನಾಥನನ್ನು ಅಕ್ಷರಶಃ ಉದ್ಧರಿಸಿದರೂ 'ವೇಣಾದಯೋ' ಎಂದು ನಾಮಾಂತರವನ್ನು ಪಠಿಸುತ್ತಾನೆ.[156] ಈ ಮತವನ್ನು ವಿವೇಚಿಸುವ ಮುಂಚೆ ವೇಣು ಅಥವಾ ವೇಣ ಎಂಬ ಹೆಸರಿನ ಈ ಮತಪ್ರವರ್ತಕನನ್ನು ಕುರಿತು ಸ್ವಲ್ಪ ಹೇಳಬೇಕಾದುದಿದೆ. ವೇಣು ಎಂಬುದು ಒಬ್ಬ ಸಂಗೀತಾಚಾರ್ಯನ

171 ಮತಂಗ, ಉ. ಗ್ರಂ., 27-28 ವಚನ, ಪು. 5.
172 ಕಲ್ಲಿನಾಥ, ಉ. ಗ್ರಂ., ಪು. 71-72.
173 ಕುಂಭಕರ್ಣ, ಉ. ಗ್ರಂ., II, 1, 1, 35, ಪು. 75.

ಹೆಸರು ಹೌದೋ ಅಲ್ಲವೋ ತಿಳಿಯುವಂತಿಲ್ಲ. ವೇಣ ಎನ್ನುವುದಕ್ಕೆ ಬೇಕಾದರೆ ಒಂದು ವಿಶೇಷಾರ್ಥವನ್ನು ಕಲ್ಪಿಸಲು ಅವಕಾಶವಿದೆ. ಈ ಶಬ್ದಕ್ಕೆ ಬೆತ್ತದ ಕೆಲಸ ಮಾಡುವವನು, ಮೇದರ ಜಾತಿಯವನು ಎಂದು ಮುಂತಾದ ಅರ್ಥಗಳಿವೆ. ವೇಣ ಎಂಬುದು ಒಂದು ಪ್ರಾಚೀನ ಭಾರತೀಯ ಜನಾಂಗವೂ ಆಗಿದ್ದಿತೆಂದು ಅಥರ್ವವೇದ, ಮಹಾಭಾರತ ಮುಂತಾದವುಗಳಲ್ಲಿ ಕಾಣಸಿಗುತ್ತದೆ. ಮನುಸ್ಮೃತಿಯು ಈ ಶಬ್ದವನ್ನು ಎರಡು ಅರ್ಥಗಳಲ್ಲಿ ಪ್ರಯೋಗಿಸಿದೆ. ತನ್ನ ರಾಜ್ಯಭಾರದ ಕಾಲದಲ್ಲಿ ವಿಧವಾವಿವಾಹವನ್ನು ಶಾಸನಬದ್ಧಗೊಳಿಸಿದ ಒಬ್ಬ ಪ್ರಾಚೀನ ಭಾರತೀಯ ಚಕ್ರವರ್ತಿಯ ಹೆಸರು ವೇಣ.[174] ಈ ಪಾಪಕ್ಕಾಗಿ ಅವನು ನಾಶವಾಗಿಹೋದನೆಂದೂ ಮನುವು ಹೇಳುತ್ತಾನೆ.[175] ಇಷ್ಟು ತೀವ್ರವಾಗಿ ಸಮಾಜಸುಧಾರಣೆಯನ್ನು ಮಾಡ ಹೊರಟ ಈ ದೊರೆಯ ವಿಷಯದಲ್ಲಿ ಮತ್ತೇನೂ ತಿಳಿಯದು. ಆದರೆ ವೇಣ ಎಂಬುದು ವರ್ಣಸಂಕರ ವಿವಾಹದಿಂದ ಜನಿಸಿದ ಪುತ್ರನ ಹೆಸರೆಂದೂ ಮನುವು ಎರಡನೆಯ ಅರ್ಥವನ್ನು ಕೊಡುತ್ತಾನೆ. ಹೀಗೆ, ವೈದೇಹಕನು ಅಂಬಷ್ಠಾಸ್ತ್ರೀಯಲ್ಲಿ ಪಡೆದ ಪುತ್ರನಿಗೆ ವೇಣನೆಂದು ಹೆಸರು.[176] ವೈದೇಹಕನು ಬ್ರಾಹ್ಮಣಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವನು.[177] ಅಂಬಷ್ಠ ಎಂದರೆ ವೈಶ್ಯಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದ ಗಂಡು ಅಥವಾ ಹೆಣ್ಣು.[178] ಇದೇ ಅರ್ಥವನ್ನು ಪಾಣಿನಿಯೂ ಹೇಳುತ್ತಾನೆ.[179] ಆದರೆ ಪಾಣಿನಿಯೇ ಅಂಬಷ್ಠವೆಂದರೆ ಈಗಿನ ಪಂಜಾಬು ಪ್ರಾಂತದಲ್ಲಿದ್ದ ಪ್ರಾಚೀನ ಭಾರತೀಯ ಪ್ರಜಾಪ್ರಭುತ್ವವೆಂದೂ ಎನ್ನುತ್ತಾನೆ.[180] ವೇಣರಿಗೆ ವಾದನಪ್ರಧಾನವಾದ ಸಂಗೀತವೇ ವೃತ್ತಿಯೆಂದು ಮನುವು ಸ್ಪಷ್ಟವಾಗಿ ಹೇಳುತ್ತಾನೆ.[181] ಆದುದರಿಂದ ಭರತ ಎಂಬ ರೂಢಾರ್ಥವುಳ್ಳ ಹೆಸರನ್ನು ನಾಟ್ಯಶಾಸ್ತ್ರಕರ್ತೃವು ಇಟ್ಟುಕೊಂಡ ಹಾಗೆ ವೇಣನೂ ಸಾಮಾನ್ಯಾರ್ಥವುಳ್ಳ ಹೆಸರನ್ನೇ ಇಟ್ಟುಕೊಂಡಿರಬಹುದೆಂದು ಊಹಿಸಬಹುದು. ಇದು ನಿಜವಾದರೆ ಈಗಿನ ಪಂಜಾಬುಪ್ರಾಂತದಲ್ಲಿದ್ದ ಸಂಗೀತಶಾಸ್ತ್ರಪ್ರವರ್ತಕನೂ ಸಂಗೀತವಾದ್ಯನಿಪುಣನೂ ಆಗಿದ್ದ ಚಾರಿತ್ರಕವ್ಯಕ್ತಿಯೊಬ್ಬನನ್ನು ಈ ಹೆಸರಿನಿಂದ ನಿರ್ದೇಶಿಸಿದಂತಾಗುತ್ತದೆ. ಆದರೆ ಭರತನಿಂದ ಹಿಡಿದು ಇಲ್ಲಿಯ ವರೆಗೆ ಇವನ ಹೆಸರನ್ನು ಮತಂಗನ ಹೊರತು ಸ್ವತಂತ್ರವಾಗಿ ಹೇಳಿದವರೇ ಇಲ್ಲ. ಭರತನು ಕೊಡುವ ನೂರು ಭರತಪುತ್ರರ ಪಟ್ಟಿಯಲ್ಲಿ ಅಂಬಷ್ಠನೆಂಬುವನ ಉಲ್ಲೇಖವಿದೆಯೇ[182] ಹೊರತು ವೇಣನದಿಲ್ಲ. ಶಾರ್ಙ್ಗದೇವನೂ ಇವನನ್ನು ಹೆಸರಿಸಿಲ್ಲ. ಸಂಗೀತಶಾಸ್ತ್ರಕ್ಕೆ ಆಧಾರಭೂತಪ್ರಮೇಯವೊಂದನ್ನು ಹೇಳಿದ ಈ ಪ್ರತಿಭಾವಂತ ಸಿದ್ಧಾಂತಸನನ್ನು ಮುಂದಿನವರು ಏಕೆ ಮರೆತುಬಿಟ್ಟರೋ ತಿಳಿಯುವುದಿಲ್ಲ. ಅವನೊಬ್ಬನೇ ಈ ಪಕ್ಷವನ್ನು ಹೇಳಿದನೆನ್ನಲೂ ಆಗುವುದಿಲ್ಲ ; ಏಕೆಂದರೆ ಮತಂಗನು 'ವೇಣಾದಯೋ ಮುನಯಃ' ಎಂದಿದ್ದಾನೆ. ಇವನ ಮಾತಿಗೆ ಬೆಂಬಲವಾಗಿ ಭರತನನ್ನೂ ಈ ಸಂದರ್ಭದಲ್ಲಿ ಅವನು ಉದ್ಧರಿಸಿಕೊಳ್ಳುತ್ತಾನೆ. ಇಬ್ಬರದೂ ಹೆಚ್ಚು ಕಡಿಮೆ ಒಂದೇ ಮಾತುಗಳು. ಇವರಲ್ಲಿ ಯಾರು ಮೊದಲೋ ಹೇಳಲು ಕಷ್ಟ. ಆದರೆ ವೇಣನು ಭರತೋಕ್ತಿಯನ್ನು ಕೇವಲ ಸಂಗ್ರಹಿಸಿ ಭರತನಿಗಿಂತ ಈಚೆಯವನಾಗಿದ್ದರೆ ಅವನ ಮತವನ್ನು ಮತಂಗನು ಮೊದಲೂ ಹೇಳುತ್ತಿರಲಿಲ್ಲ ; ಸ್ವತಂತ್ರವಾಗಿಯೂ ಉದ್ಧರಿಸುತ್ತಿರಲಿಲ್ಲ. ಆದುದರಿಂದ ಈ ವೇಣನು ಭರತನಿಗಿಂತ ಪ್ರಾಚೀನನಾಗಿದ್ದರೂ ಇರಬಹುದು. ಹೀಗಿದ್ದರೆ ಆಶ್ಚರ್ಯಪಡಬೇಕಾಗಿಲ್ಲ ; ಏಕೆಂದರೆ ಭರತನು ತನ್ನ ಹಿಂದಿನವರಿಂದ

---

174 ಮನು, ಮನುಸ್ಮೃತಿ, IX, 66 ಮತ್ತು ಮುಂದಕ್ಕೆ.
175 ಅದೇ ಗ್ರಂಥ, VII, 41.
176 ಅದೇ ಗ್ರಂಥ, X, 19.
177 ಅದೇ ಗ್ರಂಥ, X, 11.
178 ಅದೇ ಗ್ರಂಥ, X, 8.
179 ಪಾಣಿನಿ, ಅಷ್ಟಾಧ್ಯಾಯೀ, VIII, 3, 97.
180 ಅದೇ ಗ್ರಂಥ, VIII, 3, 97 ಮತ್ತು IV, 1, 171.
181 ಮನು, ಉ. ಗ್ರಂ., X, 49.
182 ಭರತಮುನಿ, ಉ. ಗ್ರಂ., I; 26, ಪು. 18.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಆಕರಸ್ಮರಣೆಯಿಲ್ಲದೆ ಶಾಸ್ತ್ರೋಕ್ತಿಗಳನ್ನು ಬಳಸಿಕೊಂಡಿರುವುದಕ್ಕೆ ನಾಟ್ಯಶಾಸ್ತ್ರದಲ್ಲಿ ನಿಸ್ಸಂಧಿಗ್ಧವಾದ ಸಾಕ್ಷ್ಯವಿದೆ. ಮತಂಗನೂ ಭರತನು ಹೇಳದಿದ್ದ ಅನೇಕ ವಿಷಯ ಮತಗಳನ್ನು ಅನ್ಯರಿಂದ ಸಂಗ್ರಹಿಸಿರುವುದು ಪದೇ ಪದೇ ಕಾಣುತ್ತದೆ.

ಇದರ ತಥ್ಯತೆಯೇನೇ ಇರಲಿ, ಬೃಹದ್ದೇಶಿಯಲ್ಲಿ ಉದ್ಧೃತವಾದ ಭಾರತೀಯ ಪಾಠಕ್ಕೂ ಕಲ್ಲಿನಾಥನಿಂದ ಉದ್ಧೃತವಾದುದಕ್ಕೂ ವ್ಯತ್ಯಾಸವಿರುವುದನ್ನಿಲ್ಲಿ ಗಮನಿಸಬೇಕು. 'ಕಂಪನಾರ್ಧಮುಕ್ತಾಶ್ಚ ವ್ಯಕ್ತಮುಕ್ತಾಂಗುಲಿ-ಸ್ವರಾಃ' ಎಂಬ ಕಲ್ಲಿನಾಥೋದ್ಧೃತಿಯು ಬೃಹದ್ದೇಶಿಯಲ್ಲಿ ದೊರಕುವುದಿಲ್ಲ. ಈ ಶ್ಲೋಕಕ್ಕೆ ಭಾರತೀಯ ನಾಟ್ಯಶಾಸ್ತ್ರದಲ್ಲಿ ಈ ಪಾಠವು ಉಪಲಬ್ಧವಾಗಿದೆ:

> ದ್ವಿಕತ್ರಿಕಚತುಷ್ಕಾಸ್ತು ಜ್ಞೇಯಾ ವಂಶಗತಾಃ ಸ್ವರಾಃ ।
> ಕಂಪ(ಕಂಪ್ಯ)ಮಾನಾರ್ಧ(ನಾರ್ಧ)ಮುಕ್ತಾಶ್ಚ ವ್ಯಕ್ತಮುಕ್ತಾಸ್ತಥೈವ ಚ । 183

ಕಲ್ಲಿನಾಥ, ಮತಂಗರಿಬ್ಬರೂ ಸ್ವೀಕರಿಸಿರುವ ಭಾರತೀಯ ಪಾಠದ ಕಡೆಯ ಪಙ್ಕ್ತಿಯಲ್ಲಿ ಶ್ರುತಿಗಳನ್ನು ಒಂಬತ್ತೆಂದು ಸ್ಪಷ್ಟವಾಗಿ ಹೇಳಿದೆ. ಈ ಶ್ಲೋಕಾರ್ಧವು ಇಡೀ ನಾಟ್ಯಶಾಸ್ತ್ರದಲ್ಲಿಯೇ ಕಾಣಸಿಗುವುದಿಲ್ಲ. ಈ ಭಾಗವು ಅಭಿನವಗುಪ್ತನು ಬಳಸಿದ ನಾಟ್ಯಶಾಸ್ತ್ರದ ಮಾತೃಕೆಯಲ್ಲಿಯೂ ಇರಲಿಲ್ಲವೆಂಬುದು ಅವನ ವ್ಯಾಖ್ಯಾನದಿಂದ ತಿಳಿಯುತ್ತದೆ. ಇದರಿಂದ ಈಗ ದೊರೆತಿರುವ ಆಕರಗಳಿಗಿಂತ ಹೆಚ್ಚು ಶುದ್ಧ ಪಾಠವನ್ನು ಒಳಗೊಂಡ ನಾಟ್ಯಶಾಸ್ತ್ರಮಾತೃಕೆಗಳನ್ನು ಮತಂಗನೂ ಕಲ್ಲಿನಾಥನೂ ಬಳಸಿದ್ದರೆಂಬುದು ಸ್ಪಷ್ಟವಾಗಿದೆ. ಭರತನ ಭಾಷ್ಯಕಾರರಲ್ಲಿ ಉಳಿದವರು ಈ ಪಾಠವನ್ನು ಗ್ರಹಿಸಿದ್ದರೇ ಎಂಬುದು ಹೊಸ ಹಸ್ತಪ್ರತಿಗಳು ಬೆಳಕಿಗೆ ಬಂದು ಸಂಶೋಧನೆ ನಡೆದಾಗಲೇ ತಿಳಿಯಬೇಕು. ಇವು ದೊರೆಯಲಿ, ದೊರೆಯದಿರಲಿ, ಮೇಲಿನ ಉದ್ಧೃತಿಗಳಲ್ಲಿ ಒಂಬತ್ತು ಶ್ರುತಿಗಳನ್ನು ಹೇಳುವ ಮೂರನೆಯ ಚರಣವು ಭರತನ ಮಾತೆಂಬುದು ನಿಸ್ಸಂಶಯವಾಗಿದೆ.

ಹೀಗೆ ಪಾಠಶೋಧನವನ್ನು ಮಾಡಿಕೊಂಡ ನಂತರ ಈ ಮತವು ಹೇಳುವ ಪ್ರಮೇಯವನ್ನು ಪರಿಶೀಲಿಸಬೇಕು. ಕೂಡಲೇ ಒಂದು ಪ್ರಶ್ನೆಯು ಎದ್ದು ನಿಲ್ಲುತ್ತದೆ: ಶ್ರುತಿಗಳು ಒಂಬತ್ತೆನ್ನಲು ವೇಣುವಿನ ಸ್ವರಗಳನ್ನೇ ಏಕೆ ವೇಣನೂ ಭರತನೂ ಪ್ರಮಾಣವಾಗಿ ತೆಗೆದುಕೊಂಡರು? ನಿರ್ದಿಷ್ಟವಾದ ವಾದ್ಯವೊಂದಕ್ಕೆ ಅನ್ವಯಿಸಿ ಹೇಳಿದುದರಿಂದ ಈ ಪ್ರಮೇಯದ ಸಾರ್ವತ್ರಿಕತೆಗೆ ಕುಂದು ಬರಲಿಲ್ಲವೇ? ಎರಡನೆಯ ಪ್ರಶ್ನೆಗೆ ಇಲ್ಲವೆಂದೇ ಉತ್ತರ. ದ್ವಾವಿಂಶತಿ ಶ್ರುತಿಗಳನ್ನು ವೀಣೆಯಲ್ಲಿ ನಿದರ್ಶನಪೂರ್ವಕವಾಗಿ ತೋರಿಸಿದುದರಿಂದ ಇಪ್ಪತ್ತೆರಡು ಶ್ರುತಿಗಳ ವಾಸ್ತವಿಕತೆಗೂ ಇಯತ್ತೆಗೂ ಸಾರ್ವತ್ರಿಕತೆಗೂ ಹೇಗೆ ಕುಂದಿಲ್ಲವೋ, ಕೊಳಲಿನ ಸ್ವರಗಳಿಂದ ಒಂಬತ್ತು ಶ್ರುತಿಗಳನ್ನು ನಿರ್ದೇಶಿಸಿದುದರಿಂದಲೂ ಹಾಗೆಯೇ. ವೇಣನು ಹೇಗೆ ವೇಣುವಿದ್ವಾಂಸನಾಗಿದ್ದಿರಬಹುದೆಂದು ಈಗಾಗಲೇ ಸೂಚಿಸಿದೆ. ಮತಂಗನು ನಮ್ಮ ಸಂಗೀತಶಾಸ್ತ್ರದಲ್ಲಿ ವೇಣುವಿನ ನಿರ್ಮಾಪಕನೆಂದು ಪ್ರಸಿದ್ಧನಾಗಿದ್ದಾನೆ; ಎಂದರೆ ವೇಣುವಿಗೆ ಸಂಬಂಧಿಸಿದ ನಾದಶಾಸ್ತ್ರದಲ್ಲಿಯೂ ನಾದವಿಜ್ಞಾನದಲ್ಲಿಯೂ ಬಹು ಪ್ರಭಾವಕಾರಿಯಾದ ಸಂಶೋಧನೆ ನಡೆಸಿ ಮತಂಗನು ಆ ವಾದ್ಯದ ಇತಿಮಿತಿಯನ್ನು ನಿರ್ಧರಿಸಿ ಹೇಳಿರಬೇಕು. ಅಭಿನವಗುಪ್ತನು ಈ ಮಾತನ್ನು ಮೊದಲಬಾರಿಗೆ ತಿಳಿಸುತ್ತಾನೆ:

> ವಂಶಾತೋದ್ಯಮಿತಿ ಪೂರ್ವಂ ಭಗವನ್ ಮಹೇಶ್ವರಾರಾಧನಸಾಧನಂ ಮತಂಗಮುನಿಪ್ರಭೃತಿಭಿರ್ವೇಣು-ನಿರ್ಮಿತಂ ತತೋ ವಂಶ ಇತಿ ಪ್ರಸಿದ್ಧಮ್ । 184

---

183 ಅದೇ ಗ್ರಂಥ, XXX, 2, ಪು. 141.

184 ಅಭಿನವಗುಪ್ತ, ಉ. ಗ್ರಂ., ಭರತಮುನಿ, ಉ. ಗ್ರಂ., XXX, 1.2ರ ಮೇಲೆ ವ್ಯಾಖ್ಯಾನ, ಪು. 139.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಆದುದರಿಂದ ಕೊಳಲಿನ ಅಭಿಮಾನಿಗಳೇ ಆದ ಇವರು ತಮಗೆ ಅತ್ಯಂತ ಚೆನ್ನಾಗಿ ತಿಳಿದಿದ್ದ ವಾದ್ಯದ ಮೂಲಕ ಈ ಪ್ರಮೇಯವನ್ನು ಹೇಳಲುದ್ಯುಗಿಸಿರುವುದು ಸಹಜವೇ ಆಗಿದೆ. ಆದರೆ ಇದೊಂದೇ ಇದಕ್ಕೆ ಕಾರಣವಲ್ಲ. ಪ್ರತಿಯೊಂದು ಶ್ರುತಿಯನ್ನೂ ಬಿಡಿಯಾಗಿ ತೋರಿಸಲು ಅತ್ಯಂತ ಕನಿಷ್ಠಪ್ರಮಾಣದಲ್ಲಿ ತಂತಿಯನ್ನು ಬಿಗಿಮಾಡಬಹುದಾದ ಅಥವಾ ಸಡಿಲಗೊಳಿಸಬಹುದಾದ ವೀಣೆಯನ್ನು ಉಪಯೋಗಿಸುವುದು ಸರಿಯಾಗುತ್ತದೆ. ಶಾರೀರದಲ್ಲಿ ಇವುಗಳ ಇಯತ್ತಾಜ್ಞಾನವು ಆಗಲಾರದು. ಆದರೆ ಪ್ರಕೃತಿಸಿದ್ಧವಾದ ಸ್ವರಗಳನ್ನೇ ತೆಗೆದುಕೊಂಡು ಅವರಿಂದ ಶ್ರುತಿಗಳ ಜ್ಞಾನವನ್ನು ಪಡೆಯುವುದು ಇಲ್ಲಿ ಪ್ರಸಕ್ತವಾದ ವಿಧಾನ. ಅಭಿನವಗುಪ್ತನದೂ ಶಾರ್ಙ್ಗದೇವನದೂ ಇದಕ್ಕೆ ವಿರುದ್ಧವಾಗಿದೆ ; ಅವರು ಶ್ರುತಿಯಿಂದ ಸ್ವರದ ಜ್ಞಾನವನ್ನೂ ಅದರ ಪ್ರಮಾಣವನ್ನೂ ತೋರಿಸಿಕೊಡುತ್ತಾರೆ. ಭರತನು ಸ್ವರಗಳ ಮೂಲಕವೇ ಶ್ರುತಿಗಳ ಸ್ಪಷ್ಟಜ್ಞಾನವನ್ನು ಬೋಧಿಸುತ್ತಾನೆ ; ಇದನ್ನು ವೀಣೆಯ ಮೂಲಕವೂ ಕೊಳಲಿನ ಮೂಲಕವೂ ಅವನು ಸಾಧಿಸುತ್ತಾನೆ.

ಈ ಮತವು ಹೇಳುವುದನ್ನಿಲ್ಲಿ ಹೀಗೆ ಸಂಗ್ರಹಿಸಬಹುದು : ಸ್ವರಗಳು ಇರುವುದು ಮೂರೇ ಬಗೆ. ಇವುಗಳ ಪ್ರಮಾಣಗಳು ಎರಡು, ಮೂರು, ಮತ್ತು ನಾಲ್ಕು ಶ್ರುತಿಗಳಷ್ಟು ; ಆದುದರಿಂದ ಶ್ರುತಿಗಳು ಒಟ್ಟು ಇರುವುದು ಒಂಬತ್ತೇ.

ಹೀಗೆ ಗ್ರಹಿಸುವುದರಿಂದ ಬಹುಮುಖ್ಯವಾದ ಅನೇಕ ಅನುಮಿತಿಗಳೂ ಪ್ರಮೇಯಗಳೂ ಸಿದ್ಧವಾಗುತ್ತವೆ. ಸ್ವರಾಷ್ಟಕದ ನಿರ್ಮಿತಿಯ ಜ್ಞಾನಕ್ಕೆ ಈ ಪಕ್ಷವು ಅತ್ಯಂತ ಮಹತ್ತರವಾದ ಕಾಣಿಕೆಯನ್ನು ನೀಡುತ್ತದೆ. ಮೊದಲನೆಯದಾಗಿ, ನಿರ್ದಿಷ್ಟವಾದ ಸಂಖ್ಯೆಯಲ್ಲಿ ಶ್ರುತಿಗಳು ಸೇರಿದಾಗ ಅವುಗಳಿಂದ ನಿರ್ದಿಷ್ಟವಾದ ಸ್ವರಗಳೇ ಹುಟ್ಟುತ್ತವೆಂಬ ತತ್ತ್ವವು ಇದರಿಂದ ಸಿದ್ಧವಾಗುತ್ತದೆ. ಈ ಕಾರಣದಿಂದಲೇ ಸ್ವರಗಳ ವ್ಯಕ್ತಿತ್ವ, ವೈಶಿಷ್ಟ್ಯ, ಸ್ವಸಂವೇದ್ಯತೆಗಳನ್ನು ಕೇವಲ ದ್ವಿಶ್ರುತಿಕ, ತ್ರಿಶ್ರುತಿಕ, ಚತುಃಶ್ರುತಿಕವೆನ್ನುವುದರಿಂದ ಮಾತ್ರವೇ ಸಾಧಿಸಬಹುದು. ಇದರಿಂದ ವಿಶಾಖಿಲಾಚಾರ್ಯಪ್ರಭೃತಿಗಳ 'ಸ್ವಸಂವೇದ್ಯೋ ಪರಮೋ ಶ್ರುತಿಧಾಮ್ನಿ' ಮುಂತಾದ ಉಕ್ತಿಗಳ ಸಾರಾಂಶವನ್ನೂ, ಭಟ್ಟತೌತನ 'ಶ್ರುತಿಃ ಸ್ವರಃ ಸ್ವಂಸವೇದ್ಯಾ' ಎಂಬುದರ ಅರ್ಥವನ್ನೂ ವಿಶ್ವಾವಸುವಿನ ಸ್ವರಗತಶ್ರುತಿ, ಅಂತರಶ್ರುತಿ ಎಂಬ ವಿಭಾಗವನ್ನೂ ಅನುಮಿತಿಯಿಂದ ಕೂಡಲೇ ಪಡೆಯಬಹುದು. ಎರಡನೆಯದಾಗಿ ಸ್ವರದ ಪ್ರಮಾಣವನ್ನು ಇಯತ್ತೆಯಿಂದ ಹೇಳಲು ಶ್ರುತಿಯನ್ನು ಇಲ್ಲಿ ಸಾಧನವಾಗಿ ಬಳಸಿದೆ. ಆದುದರಿಂದ ಮತಂಗನು ಶ್ರುತಿಯ ಅಂತರ್ಭೂತಪೂರಣ ಗುಣದಿಂದ ಚತುಃಶ್ರುತಿತ್ವಾದಿ ಭಿನ್ನರೂಪಗಳಲ್ಲಿ ಇಯತ್ತೆಯಿಂದ ಅದರ ಗೋಚರವಾಗುವುದೆಂದು ಹೇಳಿದ ಪಕ್ಷವನ್ನು ಇಲ್ಲಿ ಪ್ರಕಟವಾಗಿಯೇ ಹೇಳಿದಂತಾಗುತ್ತದೆ. ಈ ಇಯತ್ತೆಯನ್ನು ಇಲ್ಲಿಯವರೆಗೆ ಪರೀಕ್ಷಿಸಿದ ಯಾವ ಪಕ್ಷವೂ ಸ್ಪಷ್ಟವಾಗಿ ಹೇಳಿರಲಿಲ್ಲ. ಇದೆಲ್ಲಕ್ಕಿಂತ ಹೆಚ್ಚು ಮುಖ್ಯವಾಗಿ ಇಲ್ಲಿ ಹೊರಡುವ ಅನುಮಿತಿಯೆಂದರೆ ಸ್ವರದ ತ್ರೈವಿಧ್ಯ. ಸ್ಥಾಯಿಯಲ್ಲಿ ಏಳು ಸ್ವರಗಳೂ ಅವುಗಳ ಅವಾಂತರ ಭೇದಗಳೂ ಸೇರಿ ಹನ್ನೆರಡು ಸ್ವರಸ್ಥಾನಗಳಿದ್ದರೂ ಅವೆಲ್ಲವೂ ಪರಮಾರ್ಥದಲ್ಲಿ ಮೂರೇ ಆಗಿ ನಿಲ್ಲುತ್ತವೆ. ಹೀಗೆ ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿಕ ಪ್ರಮಾಣಗಳಿಂದ ಈ ಹನ್ನೆರಡು ಸ್ವರಸ್ಥಾನಗಳನ್ನೂ ಶಾಸ್ತ್ರೀಯವಾಗಿ ಪಡೆಯಬಹುದೆಂಬುದು ಈ ಪಕ್ಷದ ಸಾರಭೂತವಾದ ಗ್ರಹಿಕೆ. ಅಷ್ಟೇ ಅಲ್ಲದೆ, ಸ್ವರತ್ವಕ್ಕೆ ಈ ಮೂರು ಪ್ರಮಾಣಗಳೇ ಪ್ರಯೋಜಕಗಳು ; ಇದಕ್ಕೆ ಕಡಿಮೆಯಾದರೂ ಹೆಚ್ಚಾದರೂ ಸ್ವರತ್ವವು ಪ್ರಾಪ್ತವಾಗುವುಲ್ಲ. ಆದುದರಿಂದಲೇ ಸ್ಥಾಯಿಯಲ್ಲಿ ಒಂದು ಶ್ರುತಿಯ ಸ್ವರವೂ, ಐದು, ಆರು, ಏಳು ಮುಂತಾದ ಸಂಖ್ಯೆಯ ಶ್ರುತಿಗಳ ಸ್ವರಗಳೂ ಇಲ್ಲ. (ಪಂಚಶ್ರುತಿ ಅಥವಾ ಷಟ್‌ಶ್ರುತಿಯ ರಿಷಭ, ಧೈವತಗಳ ವಿಚಾರವನ್ನು ಸಧ್ಯದಲ್ಲಿಯೇ ಪರೀಕ್ಷಿಸಲಾಗುವುದು.) ಅಷ್ಟೇ ಅಲ್ಲದೆ ಈ ಮೂರನ್ನೂ ಪ್ರತ್ಯೇಕ ಅಸ್ತಿತ್ವವುಳ್ಳವುಗಳೆಂದು ತಿಳಿಯಲೂ ಬೇಕಾಗಿಲ್ಲ. ಇವುಗಳಲ್ಲಿ ಅತ್ಯಂತ ದೊಡ್ಡ ಪ್ರಮಾಣವಾದ ಚತುಃಶ್ರುತಿಯನ್ನು ಆಧಾರವೆಂದು ಗ್ರಹಿಸಿ ಅದರಿಂದ ಒಂದು ಶ್ರುತಿಯು ಹೋಗಲಾಗಿ ತ್ರಿಶ್ರುತಿ ಪ್ರಮಾಣವೂ,

ಇನ್ನೊಂದು ಹೋಗಲಾಗಿ ದ್ವಿಶ್ರುತಿ ಪ್ರಮಾಣವೂ, ಮೂರನೆಯದೂ ಕಳೆದುಹೋಗಲಾಗಿ ಏಕಶ್ರುತಿ ಪ್ರಮಾಣವೂ ಇದೂ ಹೊರಟುಹೋದರೆ ಸ್ವಸ್ವರೂಪವೇ ಪುನಃ ಸಿದ್ಧಿಸುವುದೂ ಆಗುತ್ತದೆ. ಆದುದರಿಂದ, ಪರಮಾರ್ಥದಲ್ಲಿ ಇಡೀ ಸ್ಥಾಯಿಯ ಸ್ವರವ್ಯವಸ್ಥೆಯು ಚತುಃಶ್ರುತಿಕವಾದ ಒಂದೇ ಸ್ವರದಿಂದ-ಷಡ್ಜ, ಮಧ್ಯಮ ಅಥವಾ ಪಂಚಮ ದಿಂದ-ತಾರ್ಕಿಕವಾಗಿ ಪಡೆಯಬಹುದು. ಉತ್ತರೋತ್ತರವಾಗಿ ಒಂದೊಂದು ಶ್ರುತಿಯ ನಿಷ್ಕಾಸದಿಂದ, ಎಂದರೆ ವ್ಯವಕಲನದಿಂದ, ಈ ಮೂರು ಪ್ರಮಾಣಗಳು ಸಿದ್ಧವಾಗುವುದನ್ನು ಅಭಿನವಗುಪ್ತನು ಬಹು ಸ್ಪಷ್ಟವಾಗಿ ಹೇಳಿದ್ದಾನೆ:

ಚತುಃಶ್ರುತಿಸ್ತ್ರಿಶ್ರುತಿರ್ದ್ವಿಶ್ರುತಿರಿತಿ। ತಥಾಹಿ— ಏಕಸ್ಮಿನ್ನೇವೋರಸಿ ಊರ್ಧ್ವಾಧರತಯಾ ಸಪ್ತಸ್ವರಾಃ, ತಥಾ ಹಿ ಚತುಃಶ್ರುತಿಕಾತ್ಪೂರ್ಣಾದಾದ್ಯಾತ್ ತದ್ಗತರೂಪಾದೇಕೈಕಂ ನಿಷ್ಕಾಸಂ ಪ್ರಕ್ರಮೇಣ ಪುನಶ್ಚ ಪ್ರಕೃತಿ-ಭೂತಪೂರ್ವರೂಪಸ್ಪರ್ಶಿತ್ವಚ್ಚತ್ವಾರಃ ಸರಿಗಮಾಃ। [185]

ಮೊದಲನೆಯದೂ ಪೂರ್ಣವೂ ಆಗಿರುವ ಷಡ್ಜದಿಂದ ಪ್ರಾರಂಭಿಸಿದರೆ, ಅದರ ಸ್ವರೂಪದಿಂದ ಒಂದು ಶ್ರುತಿಯನ್ನು ಕಳಚಿದರೆ ತ್ರಿಶ್ರುತಿ ಸ್ವರೂಪವಾದ ರಿಷಭವು ಉಂಟಾಗುತ್ತದೆ. ಇದರಿಂದ ಒಂದು ಶ್ರುತಿಯನ್ನು ತೆಗೆದರೆ ದ್ವಿಶ್ರುತಿಸ್ವರೂಪವಾದ ಗಾಂಧಾರವು ಲಭಿಸುತ್ತದೆ. ಇದರಿಂದ ಒಂದು ಶ್ರುತಿಯನ್ನು ಕಳೆದರೆ ಒಂದೇ ಶ್ರುತಿಯು ಉಳಿದು ಸ್ವರತ್ವವೇ ಇಲ್ಲದೆ ಹೋಗುತ್ತದೆ. ಇದನ್ನೂ ಕಳೆದುಬಿಟ್ಟರೆ ನಿರ್ವಿಶೇಷವಾದ ಸ್ವಸ್ವರೂಪವೇ, ಎಂದರೆ ಚತುಃಶ್ರುತಿಕಸ್ವರೂಪವೇ, ಪ್ರಾಪ್ತವಾಗುತ್ತದೆ; ಆಗ ಮಧ್ಯಮವು ಲಭಿಸುತ್ತದೆ.

ಈ ಉಕ್ತಿಯನ್ನು ಅವಧಾನದಿಂದ ಅಭ್ಯಾಸಮಾಡಬೇಕು. ನಾಲ್ಕರಿಂದ ಒಂದು ಕಳೆದರೆ ಮೂರು, ಮೂರ ರಿಂದ ಒಂದನ್ನು ಕಳೆದರೆ ಎರಡು, ಎಂದು ಮುಂತಾದ ಸರಳವಾದ ವ್ಯವಕಲನವನ್ನು ಇದು ಇಲ್ಲಿ ಬೋಧಿಸುತ್ತಿಲ್ಲ. ಹಾಗಿದ್ದರೆ ಭರತ ಅಥವಾ ಅಭಿನವಗುಪ್ತರಂತಹ ಋಷಿಸದೃಶ ಧೀಮಂತರ ಮಾತಿನ ಆವಶ್ಯಕತೆಯೇ ಇರುತ್ತಿರ ಲಿಲ್ಲ. ಚತುಃಶ್ರುತಿಕ ಷಡ್ಜದಲ್ಲಿ ಒಂದು ಶ್ರುತಿಯನ್ನು ಕಳೆಯುವುದೆಂದರೆ, ಅದರ ಸ್ವರೂಪದಿಂದ ಒಂದನ್ನು ಕಳೆಯುವುದು, ಷಡ್ಜದ ಸ್ವಸಂವೇದ್ಯತೆಯನ್ನು ಉಂಟುಮಾಡುವ ಕಡೆಯ ಶ್ರುತಿಯನ್ನು ಕಳೆಯುವುದು, ಎಂದು ಅರ್ಥ. ಆಗ ಷಡ್ಜದ ಸ್ವಸಂವೇದ್ಯತೆಯು ನಾಶವಾಗಿ, ಈ ವ್ಯವಕಲನದ ಪರಿಣಾಮವಾಗಿ ಸ್ವಸಂವೇದ್ಯತೆಯ ಸಂಸ್ಕಾರವನ್ನು ಮೂರನೆಯ ಶ್ರುತಿಯು ಪಡೆದುಕೊಂಡು ತನ್ಮೂಲಕ ರಿಷಭವು ಸ್ವಸಂವೇದ್ಯಸ್ವರೂಪವನ್ನು ಪಡೆಯುತ್ತದೆ. ಇದೇ ರೀತಿಯಲ್ಲಿ ರಿಷಭದ ಸ್ವಸಂವೇದ್ಯತೆಗೆ ಹೇತುವಾದ ಮೂರನೆಯ ಶ್ರುತಿಯ ವ್ಯವಕಲನದಿಂದ ಸ್ವಸಂವೇದ್ಯತಾ ಸಂಸ್ಕಾರವು ಎರಡನೆಯ ಶ್ರುತಿಗೆ ಶೇಷರೂಪದಲ್ಲಿ ದೊರೆಯುತ್ತದೆ; ಆಗ ಗಾಂಧಾರದ ಉತ್ಪತ್ತಿ. ಇದರಲ್ಲಿಯೂ ಒಂದು ಶ್ರುತಿಯನ್ನು ಕಳೆದರೆ ಒಂದೇ ಶ್ರುತಿಯು ಉಳಿಯುವುದು. ಇದಕ್ಕೆ ಸ್ವರತ್ವವು ಉಂಟಾಗ ಲಾರದು: ಏಕೆಂದರೆ ಸ್ವರತ್ವಕ್ಕೆ ಒಂದಕ್ಕಿಂತ ಹೆಚ್ಚಿನ ಶ್ರುತಿಗಳಿರಲೇಬೇಕು ಎಂಬ ಅತ್ಯಂತ ಮುಖ್ಯ ನಾದವಿಜ್ಞಾನ ಪ್ರಮೇಯವು ಈ ಪಕ್ಷದ ಅನುಮಿತಿಗಳಲ್ಲೊಂದು. ಎಂದರೆ ಸ್ವರತ್ವದ ಪ್ರಾಪ್ತಿಯು ಸ್ವನಿಷ್ಠವಾದ ಸಂಸ್ಕಾರ ವನ್ನೂ ವ್ಯಕ್ತಿತ್ವವನ್ನೂ ಪ್ರಮಾಣವನ್ನೂ ಒಂದು ಶ್ರುತಿಯು ಮುಂದಿನದಕ್ಕೆ ಮಾಡುವುದರಿಂದ ಮಾತ್ರ ಆಗುತ್ತದೆ. ಈ ಸ್ವರಲಕ್ಷಣವು ಪ್ರಾಥಮಿಕವೂ ಮೂಲಭೂತವೂ ಆಗಿದೆ; ಈ ತತ್ತ್ವವು ಭಾರತೀಯ ಸಂಗೀತಕ್ಕೆ ಮಾತ್ರ ಸೀಮಿತವಲ್ಲ. ಇಡೀ ಜಗತ್ತಿನಲ್ಲಿರುವ ಎಲ್ಲಾ ಸಂಗೀತಪದ್ಧತಿಗಳಲ್ಲಿಯೂ ಸ್ವರವು ವಿವಿಧ ಸ್ಥಾನಗಳಲ್ಲಿ ಗೋಚರವಾಗಿ ತನ್ನ ಪೃಥಕ್ತತೆಯನ್ನೂ ವ್ಯಕ್ತಿತ್ವವನ್ನೂ ಆವರ್ತಕತ್ವಾದಿ ಗುಣಗಳನ್ನೂ ಉಳಿಸಿ ಕೊಂಡಿರಲು ಈ ತತ್ತ್ವವೇ ಕಾರಣ. ಈ ಸಂಸ್ಕಾರಪ್ರದಾನವು ಒಂದೇ ಶ್ರುತಿಯಿದ್ದಾಗ ಇರಲಾರದುದರಿಂದಲೇ ಅದಕ್ಕೆ ಸ್ವರತ್ವವಿಲ್ಲ. ಈ ಶ್ರುತಿಯನ್ನೂ ಕಳೆದುಬಿಟ್ಟರೆ ಶೂನ್ಯವು ಸಿದ್ಧಿಸಬೇಕಲ್ಲವೇ ಎಂದರೆ, ಹಾಗಲ್ಲ;

185 ಅದೇ ಗ್ರಂಥ, ಪು. 14.

ಕ್ರಮವಾಗಿ ಒಂದೊಂದು ಶ್ರುತಿಯನ್ನೂ ಕಳೆದುಕೊಳ್ಳುತ್ತಾ ಬರುವಾಗ ಷಡ್ಜವು ವಿಶೇಷತೆಯನ್ನೂ ವೈಲಕ್ಷಣ್ಯವನ್ನೂ ಪಡೆಯುತ್ತಾ ನಡೆದು ಬೇರೆ ಬೇರೆ ಸ್ವರವಾಗಿ ಗೋಚರಿಸುತ್ತಾ ನಡೆಯುತ್ತದೆ. ಇಂತಹ ವಿಶೇಷತೆಯನ್ನು ಉಂಟುಮಾಡುವ ನಿಷ್ಕಾಸವು ಪೂರ್ಣವಾದಾಗ, ಎಂದರೆ ಕಳೆಯಬೇಕಾದುದು ಏನೂ ಇಲ್ಲದಿದ್ದಾಗ ಅದು ಎಲ್ಲಾ ವಿಶೇಷತೆಯನ್ನೂ ಕಳೆದುಕೊಳ್ಳುತ್ತದೆ, ಎಂದರೆ ನಿರ್ವಿಶೇಷವಾಗುತ್ತದೆ; ಎಂದರೆ ಪುನಃ ತನ್ನ ಸ್ವರೂಪವಾದ ಚತುಃಶ್ರುತಿಕತ್ವವನ್ನೇ ಪಡೆಯುತ್ತದೆ. ಹಾಗಾದರೆ ಮಧ್ಯಮವೂ ಷಡ್ಜವೂ ಅಭಿನ್ನಗಳಾಗಬೇಕಷ್ಟೆ, ಎಂದರೆ ಗುಣದಲ್ಲಿ ಇವು ಅತ್ಯಲ್ಪಭಿನ್ನಗಳೇ; ಆದುದರಿಂದಲೇ ಷಡ್ಜಮಧ್ಯಮಗಳಿಗಿರುವಂತೆ ಸಂವಾದಿತ್ವವು ಇಡೀ ಸ್ಥಾಯಿಯಲ್ಲಿಯೇ ಬೇರೆ ಸ್ವರಗಳಿಗಿಲ್ಲ; ಆದುದರಿಂದಲೇ ಮಧ್ಯಮವನ್ನು ನಮ್ಮ ಸಂಗೀತಶಾಸ್ತ್ರದಲ್ಲಿ ಅವಿನಾಶಿಯೆಂದು ವ್ಯವಹರಿಸಿದರು. ಮಧ್ಯಮದ ಅವಿನಾಶಿತ್ವವನ್ನು ಗ್ರಾಮದ ವಿವೇಚನೆಯ ಸಂದರ್ಭದಲ್ಲಿ ಪುನಃ ಪ್ರಸ್ತಾಪಿಸಲಾಗುವುದು. ಅತ್ಯಲ್ಪ ಭಿನ್ನತೆಯು ಸಿದ್ಧಿಸಿದ ಮಧ್ಯಮಕ್ಕೆ ಷಡ್ಜದಿಂದ ಅಭಿನ್ನತೆಯೇ ಏಕೆ ಸಿದ್ಧಿಸಲಿಲ್ಲವೆಂಬುದು ವಿಚಾರಾರ್ಹವಾಗಿದೆ. ಈ ನಿಷ್ಕಾಸಕ್ರಮದಿಂದ ಋಷಭ ಗಾಂಧಾರಗಳು ಹುಟ್ಟಿದುದು ಷಡ್ಜದ ಊರ್ಧ್ವಗಮನದಿಂದ ಎಂಬುದನ್ನಿಲ್ಲಿ ನೆನೆಯಬೇಕು. ಎಂದರೆ, ಷಡ್ಜದ ಸ್ಥಾನದಲ್ಲಿಯೇ ನಾಲ್ಕನೆಯ ಶ್ರುತಿಯನ್ನು ಕಳೆದರೆ ಸ್ವಸಂವೇದ್ಯತಾಹೇತುವಾದ ಅದರ ನಾಶದಿಂದ ಷಡ್ಜತ್ವವು ಲೋಪವಾಗುವುದೇ ಹೊರತು, ಬೇರೆ ಸ್ವರದ ಉತ್ಪತ್ತಿಯಾಗುವುದಿಲ್ಲ. ಏಕೆಂದರೆ ಯಾವುದೇ ಆಧಾರಶ್ರುತಿಯಿಂದ ಮೂರನೆಯ ಶ್ರುತಿಗೆ ರಿಷಭವನ್ನು ಉಂಟುಮಾಡುವ ಸ್ವಸಂವೇದ್ಯತಾಲಕ್ಷಣವು ಲಭಿಸುವುದಿಲ್ಲ. ಈ ವಿಷಯವನ್ನು ಶ್ರುತಿನಿದರ್ಶನದಲ್ಲಿ ಸೂಚಿಸಿದೆಯಾದರೂ ಇಲ್ಲಿ ಪುನಃ ಒತ್ತಿಹೇಳುವುದು ಆವಶ್ಯಕವೇ ಆಗಿದೆ. ಏಕೆಂದರೆ ಎಲ್ಲಾ ನಾದಶಾಸ್ತ್ರಕ್ಕೂ ಇದು ಅಡಿಪಾಯದಂತಿರುವ ತತ್ತ್ವ. ಅದೇ ಷಡ್ಜವು ತನ್ನಿಂದ ಪುನಃ ಚತುಃಶ್ರುತಿಕ ಅಂತರದಲ್ಲಿ ಮೇಲುಮುಖವಾಗಿ ನಡೆದು ಈಗ ಅಂತಿಮಶ್ರುತಿಯ ನಿಷ್ಕಾಸವನ್ನು ಮಾಡಿಕೊಂಡರೆ, ಎಂದರೆ ಏಳನೆಯ ಶ್ರುತಿಯಲ್ಲಿ ನಿಂತರೆ ಆಗ ಋಷಭ ಸ್ವರದ ಜನನ. ಋಷಭವೇ ಪುನಃ ತನ್ನಿಂದ ಮೂರು ಶ್ರುತಿಗಳ ಅಂತರದಲ್ಲಿ ಊರ್ಧ್ವಮುಖವಾಗಿ ಚಲಿಸಿ ಅಂತಿಮ ಶ್ರುತಿಯ ಲೋಪದಿಂದ ಎಂದರೆ ಒಂಬತ್ತನೆಯ ಶ್ರುತಿಯಲ್ಲಿ ಗಾಂಧಾರವಾಗುತ್ತದೆ. ಗಾಂಧಾರವು ಪುನಃ ಎರಡು ಶ್ರುತಿಗಳಷ್ಟು ಮೇಲೆ ನಡೆದು ಒಂದು ಶ್ರುತಿಯನ್ನು ಕಳೆದುಕೊಂಡರೆ ತನ್ನ ಸ್ವರೂಪವನ್ನು ಕಳೆದುಕೊಳ್ಳುತ್ತದೆ. ಇವುಗಳೆಲ್ಲೆಲ್ಲಾ ಷಡ್ಜವೇ ಸಶೇಷರೂಪದಲ್ಲಿ ಊರ್ಧ್ವಮುಖವಾಗಿ ಚಲಿಸುತ್ತಿದೆಯೆಂಬುದನ್ನು ಮರೆಯಲಾಗದು. ಯಾವಾಗ ಗಾಂಧಾರದ ಅಂತಿಮಶ್ರುತಿಯ ನಿಷ್ಕಾಸದಿಂದ ಸ್ವರತ್ವವು ಲೋಪವಾಗಿಹೋಯಿತೋ, ಆಗ ಷಡ್ಜವು ಪುನಃ ತನ್ನ ಚತುಃಶ್ರುತಿಕ ಸ್ವರೂಪದಲ್ಲಿಯೇ ಮೇಲಕ್ಕೆ ಚಲಿಸಿದರೆ ಮಧ್ಯಮದ ಪ್ರಾಪ್ತಿಯಾಗುತ್ತದೆ. ಹೀಗೆ ಮೂರು ಹಂತಗಳಲ್ಲಿ ಊರ್ಧ್ವಮುಖವಾಗಿ ನಡೆದು ಸ್ವಸ್ವರೂಪವನ್ನು ಕಳೆದುಕೊಂಡ ಷಡ್ಜಕ್ಕೆ ಊರ್ಧ್ವಗಮನದಿಂದ ತನ್ನ ಸಂಪೂರ್ಣ ಸ್ವರೂಪವು ಉಂಟಾಗದೆ ಅಂಶತಃ ಮಾತ್ರ ಆಗುತ್ತದೆ. ಇದಕ್ಕೆ ಕಾರಣವು ಸ್ಥಾನಾಂತರದಲ್ಲಿ ಅಭಿವ್ಯಕ್ತಿಯೇ. ಆದರೂ ಚತುಃಶ್ರುತಿಕತ್ವವೆಂಬ ಗುಣವೂ ಚತುರ್ಥ ಶ್ರುತಿಯಲ್ಲಿ ಸ್ವಸಂವೇದ್ಯತೆಯೆಂಬ ಲಕ್ಷಣವೂ ಉಳಿದುಬಂದುದರಿಂದ ತನ್ನಲ್ಲಿನ ಸಾದೃಶ್ಯ ಸಾಮ್ಯಗಳನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ಮಧ್ಯಮಕ್ಕೆ ನೀಡುತ್ತದೆ. ಷಡ್ಜದಿಂದ ಈ ರೀತಿಯಲ್ಲಿ ಮಧ್ಯಮಸ್ವರವು ಉಂಟಾಗುವುದನ್ನು 'ಪುನಶ್ಚ ಪ್ರಕೃತಿಭೂತಪೂರ್ವಸ್ವರೂಪಸ್ಪರ್ಶೈಃ' ಎಂಬ ಮಾತಿನಿಂದಲೂ ಅಂತಿಮಶ್ರುತಿಯ ಏಕವೃದ್ಧಿ ಕ್ರಮದ ನಿಷ್ಕಾಸದಿಂದ ಷಡ್ಜದಲ್ಲಿ ಋಷಭ ಗಾಂಧಾರಗಳು ಊರ್ಧ್ವಸ್ಪರ್ಶದಿಂದ ಹುಟ್ಟುವುದನ್ನು 'ತದ್ಗತರೂಪಾದೇಕೈಕಂ ನಿಷ್ಕಾಸಂ ಪ್ರಕ್ರಮೇಣ' ಎಂಬ ಮಾತಿನಿಂದಲೂ ಶ್ರೀಮದಭಿನವಗುಪ್ತಪಾದನು ಸೂತ್ರರೂಪದಲ್ಲಿ ಹೇಳಿರುವುದು ನಿಸ್ಸಂಶಯವಾಗಿದೆ.

ಒಂದು ಶ್ರುತಿಯಿಂದ ಸ್ವರವಿಲ್ಲ, ನಾಲ್ಕಕ್ಕಿಂತ ಹೆಚ್ಚು ಶ್ರುತಿಗಳಲ್ಲಿಯೂ ಸ್ವರವಿಲ್ಲ ಎಂಬ ಮಾತನ್ನೂ ಅವನೇ ಆಡಿದ್ದಾನೆ:

3, ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಏಕಶ್ರುತ್ಯುತ್ಕರ್ಷಸ್ತು ನೋಕ್ತಃ, ಸ್ಥಾನಸಾಂಕರ್ಯೇಣ ಸ್ವರಸಾಂಕರ್ಯಪ್ರಸಂಗಾದಿತಿ ಹ್ಯುಕ್ತಮ್ | [185]

ಸ್ಥಾನವೆನ್ನುವುದು ಇಲ್ಲಿ ಮಂದ್ರಮಧ್ಯತಾರವೆಂಬ ಅರ್ಥದಲ್ಲಿ ಪ್ರಯುಕ್ತವಾಗಿಲ್ಲ. ಸ್ವರವನ್ನೋ ಶ್ರುತಿಯನ್ನೋ ಉತ್ಪಾದಿಸಲು ಪ್ರಯತ್ನದಿಂದ ಸ್ವೀಕರಿಸಿದ ಯಾವುದೇ ಧ್ವನಿಮಟ್ಟಕ್ಕೆ ಸ್ಥಾನವೆಂದು ಈ ಸಂದರ್ಭದಲ್ಲಿ ಸಂಜ್ಞೆ:

ತತ್ರ ಪ್ರಯತ್ನವಶಾತ್ ಕಸ್ಮಿಂಶ್ಚಿದಭಿಹತೇ ಸ್ಥಾನೇ ಜಾತೇಽಭಿಘಾತಜಾಚ್ಛಬ್ದಾತ್ ಶಬ್ದಾಂತರೇಽನುಸ್ವಾನಾತ್ಮನಿ ಸ್ವರೇ ತದವ್ಯವಹಿತಸ್ಥಾನಾಭಿಘಾತೋ ಯದಿ ಸ್ಯಾತ್ ಸಂಕೀರ್ಯೇತಾವಮ್ । [186]

ಕೇವಲ ವೈಲಕ್ಷಣ್ಯಪ್ರಬೋಧಕವಾದಷ್ಟುಮಟ್ಟಿನ ಅಂತರದಲ್ಲಿ ಇನ್ನೊಂದು ಧ್ವನಿಯನ್ನಿಟ್ಟರೆ ಆಗ ಧ್ವನ್ಯಂತರಾಶ್ರುತಿ, ನೈರಂತರ್ಯ ಎಂಬ ಶ್ರುತಿಲಕ್ಷಣಗಳಿಂದಾಗಿ ಸ್ಥಾನಸಾಂಕರ್ಯವೂ ಸ್ವರಸಾಂಕರ್ಯವೂ ಉಂಟಾಗುತ್ತವೆ; ಏಕೆಂದರೆ, ಇವೆರಡೂ ಕಲಸಿಕೊಂಡುಹೋಗಿ ಭಿನ್ನತೆಯನ್ನು ಇಯತ್ತೆಯಿಂದ ಹೇಳಲು ಅಸಾಧ್ಯವೇ ಆಗುತ್ತದೆ; ಅವುಗಳಿಗೆ ಸ್ವತಂತ್ರ ವ್ಯಕ್ತಿತ್ವವೂ, ಸ್ವತಂತ್ರವಾದ ಅಭಿವ್ಯಕ್ತಿ ಸಾಮರ್ಥ್ಯವೂ ಉಳಿಯುವುದಿಲ್ಲ; ಎಂದೇ ಏಕಶ್ರುತಿ ಸ್ವರವಿಲ್ಲ. ಪಂಚಶ್ರುತಿಕವೇ ಮೊದಲಾದ ಸ್ವರಗಳು ಏಕಿಲ್ಲವೆಂದರೆ ಅವು ನಿಜವಾಗಿ ಸ್ವತಂತ್ರವಾದ ಸ್ವರಗಳೇ ಅಲ್ಲ, ದ್ವೈಸ್ವರ್ಯಗಳು. ಹೀಗೆ ತ್ರಿಶ್ರುತಿಕ ಮತ್ತು ದ್ವಿಶ್ರುತಿಕ ಸ್ವರಗಳ ಸಂಯೋಗವಾದ ಪಂಚಶ್ರುತಿಕ ಸ್ವರವೂ ಎರಡು ತ್ರಿಶ್ರುತಿಗಳ ಸಂಕಲನದಿಂದ ಅಥವಾ ಚತುಃಶ್ರುತಿಕ ಮತ್ತು ದ್ವಿಶ್ರುತಿಕ ಸ್ವರಗಳ ಸಂಯೋಗದಿಂದ ಷಟ್‌ಶ್ರುತಿಕ ಸ್ವರವೂ ಹೀಗೆಯೇ ಸಪ್ತಶ್ರುತಿಕ, ಅಷ್ಟಶ್ರುತಿಕ ಮೊದಲಾದ ಸ್ವರಗಳೂ ಉಂಟಾಗುತ್ತವೆ.

ತತಃ ಪರಂ ಚತುರಾದಿವ್ಯವಧಾನೇ ಽತಿಪ್ರಯತ್ನವಶಾತ್ ದ್ವೈಸ್ವರ್ಯಮಿತಿ ಪಂಚಶ್ರುತಿಕಾದೇರಸಂಭವಃ | [185]

'ತತಃ ಪರಂ' ಎಂದರೆ 'ಚತುಃಶ್ರುತಿಕಾತ್ ಪರಂ' ಎಂದೂ 'ಚತುರಾದಿ' ಎಂದರೆ 'ಸ್ಥಾನಚತುಷ್ಟಯೇನ ವ್ಯವಧಾ' ಎಂದೂ, 'ಆದಿ' ಶಬ್ದಕ್ಕೆ 'ಸ್ಥಾನಪಂಚಕೇನ ವ್ಯವಧಾ, ಸ್ಥಾನಷಟ್ಕೇನ ವ್ಯವಧಾ' ಇತ್ಯಾದಿಯಾಗಿಯೂ ಇಲ್ಲಿ ಅರ್ಥ. 'ಅತಿ ಪ್ರಯತ್ನವಶಾತ್' ಎಂದರೆ ಎರಡು ಸ್ವರಗಳಿಗೆ ಬೇಕಾದ ವಿಸ್ತಾರವನ್ನು ಪಡೆಯಲು ಬೇಕಾದ ವಿಶೇಷ ಶ್ರಮ ಎಂದು ಅರ್ಥ. ಹೀಗೆ ಹೇಳಿದ್ದರಿಂದ ದ್ವಿಶ್ರುತಿಕ, ತ್ರಿಶ್ರುತಿಕ ಮತ್ತು ಚತುಃಶ್ರುತಿಕಗಳೆಂಬ ಮೂರೇ ಸ್ವರಗಳು ಗಾನಪ್ರಪಂಚಸರ್ವಸ್ವದ ಮೂಲದ್ರವ್ಯವಾಗಿ ಉಳಿಯುತ್ತವೆ. ಇದೇ ಈ ಪಕ್ಷದಿಂದ ದೊರೆಯುವ ಇನ್ನೊಂದು ಅತಿಮುಖ್ಯ ಪ್ರಮೇಯ. ಇವುಗಳಲ್ಲಿರುವ ಶ್ರುತಿಗಳನ್ನು ಸೇರಿಸಿದರೆ ಒಟ್ಟು ಒಂಬತ್ತು ಆಗುತ್ತವೆ. ಇವುಗಳನ್ನೇ ಕುರಿತು ವೇಣನೂ ಭರತನೂ ಹೇಳಿರುವುದು. ಈ ಮೂರನ್ನು ಬಿಟ್ಟು ಬೇರೆ ಮೂಲದ್ರವ್ಯವು ಇಲ್ಲವೆಂದು ಅಭಿನವಗುಪ್ತನು ಇನ್ನೂ ಸ್ಪಷ್ಟಪಡಿಸುತ್ತಾನೆ:

ಇಹಾಪ್ಯಲಂಕಾರೇಷು ತ್ರಿಶ್ರುತೇಃ ಕಂಪನಂ ವಕ್ಷ್ಯತೇ | ತಸ್ಯೋರ್ಧ್ವಾಧಃಸ್ವರಸ್ಯ ಸ್ಪರ್ಶನೇಽಪಿ ಸ್ವರತಾಕ್ಷಮತ್ವಾಚ್ಚತುಃಶ್ರುತೇರ್ಹಿ ನೋರ್ಧ್ವಮಸ್ತಿ, ದ್ವಿಶ್ರುತೇರ್ನಾಧರಮಿತಿ | [185]

ಹೀಗೆ ಉಂಟಾದ ಮೂರು ವಿಧದ ಸ್ವರಗಳ ಸ್ವರೂಪಗಳನ್ನು ಶ್ರುತಿಕಲ್ಪನೆಯ ಮೂಲಕ ಅಭಿನವಗುಪ್ತನು ತುಂಬಾ ತಿಳಿಯಾಗಿ ವಿವರಿಸಿದ್ದಾನೆ:

ತತ್ರ ಪ್ರಯತ್ನವಶಾತ್ ಕಸ್ಮಿಂಶ್ಚಿದಭಿಹತೇ ಸ್ಥಾನೇ ಜಾತೇ ಽಭಿಘಾತಜಾಚ್ಛಬ್ದಾತ್ ಶಬ್ದಾಂತರೇ ಽನುಸ್ವಾನಾತ್ಮನಿ ಸ್ವರೇ ತದವ್ಯವಹಿತಸ್ಥಾನಾಭಿಘಾತೋ ಯದಿ ಸ್ಯಾತ್ ಸಂಕೀರ್ಯೇತಾವಮ್ | ಪೂರ್ವಾಪರೇ ಸ್ವರೇ ಸ್ಥಾನಗತೋ ಯಥಾ ತತ್ರ ಸಂಕೀರ್ಣಭಾವಸ್ತಥಾ ಸ್ವರಗತೋಽಪಿ ತದ್ವಿಭಾಗಲಾಭಾರ್ಥಂ ಮಧ್ಯೇ ವರ್ಜನೀಯಸ್ಥಾನಭಾಗೋ ಽನ್ಯತ್ರ ಸ್ವರ ಇತಿ ದ್ವಿಶ್ರುತಿಕಸ್ಯ ಸಂಪತ್ತಿಃ | ಸ್ಥಾನದ್ವಯೇನ ವ್ಯವಧಾ ತ್ರಿಶ್ರುತಿಕಸ್ಯ, ತ್ರಯೇಣ ಚತುಃಶ್ರುತಿಕಸ್ಯ | [185, 186]

186 ಅದೇ ಗ್ರಂಥ, ಪು. 13-14.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಧ್ವನ್ಯಂತರಾಶ್ರುತಿ ಮತ್ತು ನೈರಂತರ್ಯಗಳೆಂಬ ಶ್ರುತಿಲಕ್ಷಣಗಳಿಂದಾಗಿ ನೆರೆಹೊರೆಯ ಶ್ರುತಿಸ್ಥಾನಗಳೂ ಅವುಗಳಲ್ಲಿ ಸ್ವರಗಳಿದ್ದಿದ್ದರೆ ಆ ಸ್ವರಗಳೂ ಹೇಗೆ ಕಲಸುಮೆಲಸಾಗಿ(ಸಂಕರವಾಗಿ)ಬಿಡುತ್ತಿದ್ದವು, ಆದುದರಿಂದ ನೆರೆಹೊರೆಯ ಶ್ರುತಿಗಳಲ್ಲಿ ಸ್ವರವು ಉಪಸ್ಥಿತವಾಗುವುದಿಲ್ಲ ಎಂಬ ಈ ಉದ್ಧೃತಿಯ ಮೊದಲನೆಯ ವಾಕ್ಯದ ಅರ್ಥವನ್ನು ಮೇಲೆ ಈಗಾಗಲೇ ಸೂಚಿಸಿದೆ (ಪು. 260). ಹಿಂದುಮುಂದಿನ ಸ್ವರದಲ್ಲಿ ಇರುವಂತಹ ಸಂಕೀರ್ಣವಾದ (ವಿವಾದಿತ್ವವನ್ನುಂಟುಮಾಡುವುದರಿಂದ ಸಂಕೀರ್ಣವಾದ) ಭಾವವನ್ನೂ, ಅತ್ಯಂತ ಅಲ್ಪಪ್ರಮಾಣವನ್ನೂ ಹೊಂದಿ ಸ್ವರದ ವಿಭಾಗವು ತಿಳಿಯಬೇಕಾದರೆ ಮಧ್ಯದಲ್ಲಿ ಒಂದು (ಶ್ರುತಿ) ಸ್ಥಾನವನ್ನಾದರೂ ಬಿಡಬೇಕು. ಎಂದರೆ ನೆರೆಹೊರೆಯ ಸ್ವರಸ್ಥಾನಗಳಲ್ಲಿ ಎರಡೂ ಕಲಸಿಕೊಂಡು ಹೋಗದೆ ಒಂದರಿಂದ ಇನ್ನೊಂದು ಭಿನ್ನವೆಂದು ತೋರಬೇಕಾದರೆ ಮಧ್ಯದಲ್ಲಿ ಒಂದು ಶ್ರುತಿಸ್ಥಾನವು ವರ್ಜ್ಯವಾಗಬೇಕು. ಹೀಗೆ ಉಂಟಾದ ವ್ಯವಧಿಯಿಂದ ಎಂದರೆ ಅಂತರದಿಂದ, ಅಥವಾ ಅವಕಾಶದಿಂದ, ಅಥವಾ ಪ್ರಮಾಣದಿಂದ, ದ್ವಿಶ್ರುತಿಕ ಸ್ವರದ ಸಂಪತ್ತಿಯು ಎಂದರೆ ಅದು ಪಡೆದುಕೊಂಡಿರುವ ನಾದದ್ರವ್ಯದ ಪ್ರಮಾಣವು ಉಂಟಾಗುತ್ತದೆ. ಹಾಗೆಯೇ ಎರಡು ಸ್ಥಾನಗಳನ್ನು ವರ್ಜಿಸುವುದರಿಂದ ಆದ ವ್ಯವಧಿಯಿಂದ ತ್ರಿಶ್ರುತಿಕ ಸ್ವರದ ಹಾಗೂ ಮೂರರ ವರ್ಜನದಿಂದ ಚತುಃಶ್ರುತಿಕ ಸ್ವರದ ಸಂಪತ್ತಿಗಳೂ ಸಿದ್ಧವಾಗುತ್ತವೆ.

ಈ ಮೂರು ಸ್ವರಗಳ ಮೊತ್ತಕ್ಕೆ, ತ್ರೈಸ್ವರ್ಯವೆಂದು ಹೆಸರು. ಹೀಗೆ ಸ-ರಿ-ಗ ಎಂಬ ಒಟ್ಟು ಪ್ರಮಾಣವು ಒಂದು ತ್ರೈಸ್ವರ್ಯ. ರಿ-ಗ-ಮ, ಪ-ಧ-ನಿ, ಧ-ನಿ-ಸ ಎಂಬವುಗಳೂ ತ್ರೈಸ್ವರ್ಯಗಳೇ. ಸ-ರಿ-ಗ-ಮ ಎಂಬ ನಾಲ್ಕು ಸ್ವರಗಳ ಒಟ್ಟು ಮೊತ್ತಕ್ಕೆ ಒಂದು ಚಾತುಃಸ್ವರ್ಯವೆಂದು ಹೆಸರು. ಷಡ್ಜವೊಂದೇ ಸಶೇಷರೂಪದಲ್ಲಿ ಊರ್ಧ್ವಸ್ಪರ್ಶವನ್ನು ಪಡೆಯುವುದರಿಂದ ತ್ರೈಸ್ವರ್ಯವೂ ನಿರ್ವಿಶೇಷರೂಪದಲ್ಲಿ ಊರ್ಧ್ವಸ್ಪರ್ಶವನ್ನು ಪಡೆಯುವುದರಿಂದ ಚಾತುಃಸ್ವರ್ಯವೂ ಹೇಗೆ ಉಂಟಾಗುವುದೆಂಬುದನ್ನು ಈಗಾಗಲೇ ಹೇಳಿದೆ. ಷಡ್ಜದ ಈ ಸಶೇಷ ಹಾಗೂ ನಿರ್ವಿಶೇಷಗಳೆಂಬ ಉಭಯ ರೀತಿಯ ಊರ್ಧ್ವಸ್ಪರ್ಶದಿಂದಲೇ ಇಡೀ ಸ್ಥಾಯಿಯಲ್ಲಿನ ಸ್ವರವ್ಯವಸ್ಥೆಯು ಶಾಸ್ತ್ರೀಯವಾಗಿ ಸಿದ್ಧಿಸುತ್ತದೆ.

ಹೀಗೆ ಪರಮಾರ್ಥದಲ್ಲಿ ಉಳಿಯುವುದು ಮೂರೇ ಸ್ವರಗಳೆಂದು ಅಭಿನವಗುಪ್ತನು ಅತ್ಯಂತ ಸ್ಪಷ್ಟವಾಗಿಯೇ ಹೇಳಿದ್ದಾನೆ :

ತೇನ ಪರಮಾರ್ಥತಃ ತ್ರಯ ಏವ ಸ್ವರಾಃ --- ಸರಿಗಾಃ, ಪಧನಯಃ | [185]

ಷಡ್ಜವು ತ್ರೈಸ್ವರ್ಯಚಾತುಃಸ್ವರ್ಯಗಳನ್ನು ಉಂಟುಮಾಡಲು ಕಾರಣವಾದ ಊರ್ಧ್ವಸ್ಪರ್ಶತತ್ತ್ವವೇ ಸ್ಥಾಯಿಗೂ ಅದರಲ್ಲಿ ಸ್ವರವ್ಯವಸ್ಥೆಗೂ ಕಾರಣವಾಗಿದೆ. ತ್ರೈಸ್ವರ್ಯದಿಂದ ಹುಟ್ಟುವುದು ಒಟ್ಟು ಒಂಬತ್ತು ಶ್ರುತಿಗಳು. ಚಾತುಃಸ್ವರ್ಯದಿಂದ ಹುಟ್ಟುವುದು ಹದಿಮೂರು ಶ್ರುತಿಗಳೂ ಹೌದು. ಇದೇ ಪ್ರಮಾಣದಲ್ಲಿ ಪುನಃ ಷಡ್ಜ, ಋಷಭ, ಗಾಂಧಾರಗಳು ಊರ್ಧ್ವಸ್ಪರ್ಶಮಾಡುವುದರಿಂದ ಸಂವಾದಿಭಾವದಲ್ಲಿ ಪಧನಿ ಸ್ವರಗಳು ಹುಟ್ಟುತ್ತವೆ. ಆಗ ಅದೇ ಸ್ವರಗಳು ಮತ್ತೊಂದು ಸ್ಥಾನವನ್ನು ಗ್ರಹಿಸಿದಂತೆ ಮಾತ್ರ ಆಗುವುದರಿಂದ, ಅತ್ಯಂತ ಸಾದೃಶ್ಯ ಸಾಮ್ಯಗಳನ್ನು ಪಡೆಯುತ್ತವೆ. ಇದಕ್ಕೆ ಕಾರಣವೇನೆಂದರೆ ಷಡ್ಜದ ಚತುಃಶ್ರುತಿಕತ್ವವೂ, ಚತುರ್ಥಶ್ರುತಿಯಲ್ಲಿ ಅದರ ಸ್ವಸಂವೇದ್ಯತೆಯೂ, ಷಡ್ಜತ್ವಕ್ಕೆ ಉಳಿದ ಪೂರ್ವಶ್ರುತಿಗಳ ಅಪ್ರತ್ಯಕ್ಷಹೇತುತ್ವವೂ ಯಥಾವತ್ತಾಗಿ ಪುನರಭಿವ್ಯಕ್ತಿಯನ್ನು ಪಡೆಯುತ್ತವೆ, ಅಷ್ಟೆ. ಈ ಕಾರಣದಿಂದ ಸಾದೃಶ್ಯವೂ ಸ್ಥಾನಾಂತರದಲ್ಲಿ ಅಭಿವ್ಯಕ್ತಿಯ ಕಾರಣದಿಂದ ಸ್ವಲ್ಪಮಟ್ಟಿನ ವೈದೃಶ್ಯವೂ ಉಂಟಾಗುವುದರಿಂದ ಷಡ್ಜ ಪಂಚಮಗಳಲ್ಲಿ ಸಂವಾದಿತ್ವವೆಂಬ ಲಕ್ಷಣವು ಉಂಟಾಗುತ್ತದೆ. ಆದುದರಿಂದಲೇ ಸ್ಥಾಯಿಯಲ್ಲಿ ಷಡ್ಜಮಧ್ಯಮಪಂಚಮಗಳು ಅತ್ಯಂತ ಮುಖ್ಯವಾದ ಸಂವಾದ

ಭಾವಗಳನ್ನು ನೀಡುತ್ತವೆ. ಇದೇ ರೀತಿಯಾಗಿ ರಿಷಭವೇ ಐದನೆಯ ಸ್ವರದ ಅಂತರದಲ್ಲಿ ಪುನರಭಿವ್ಯಕ್ತಿಯನ್ನು ಪಡೆದು ಧೈವತವನ್ನೂ, ಗಾಂಧಾರವು ನಿಷಾದವನ್ನೂ, ಮಧ್ಯಮವು ಮೇಲುಸ್ಥಾಯಿಯ ಷಡ್ಜವನ್ನೂ ಕೊಡುತ್ತವೆ. ಈ ಮಾತನ್ನು ಅಭಿನವಗುಪ್ತನು ಬಿಚ್ಚಿ ಹೇಳಿದ್ದಾನೆ :

ತಥಾ ಹಿ ಚತುಃಶ್ರುತಿಕಾತ್ ಪೂರ್ಣಾದಾದ್ಯಾತ್, ತದ್ಗತರೂಪಾದೇಕೈಕಂ ನಿಷ್ಕಾಸಂ ಪ್ರಕ್ರಮೇಣ ಪುನಷ್ಷ ಪ್ರಕೃತಿಭೂತಪೂರ್ವರೂಪಸ್ಪರ್ಶೈಶ್ಚತ್ವಾರಃ ಸರಿಗಮಾಃ । ತಥೈವ ಊರ್ಧ್ವಸ್ಪರ್ಶೇ ಪದನಿಸಾಃ, ಕೇವಲಂ ಷಡ್ಜೇನ ದ್ವಿತೀಯಂ ಸ್ಥಾನಂ ಸ್ಪೃಶ್ಯತ ಏವ । . . . . . ತೇಷು ಸರ್ವದಾ ತಾದ್ರೂಪ್ಯಸಂಕ್ರಮಣಾತ್ ತ್ವಂಶಾದಿವ್ಯಪದೇಶ ಏವ, ತತ್‌ಸ್ಥಾನಗತಾನಾಂ ತು ಸಾದೃಶ್ಯಪರತ ಏವ ಸಂವಾದತ್ವಂ ವಕ್ಷ್ಯತೇ । ತೇನ ಪರಮಾರ್ಥತಃ ತ್ರಯ ಏವ ಸ್ವರಾಃ-ಸರಿಗಾಃ, ಪಧನಯಃ । ಮಧ್ಯಮಸ್ತು ಧ್ರುವಕಸ್ಥಾನೀಯೋ ಮಧ್ಯಮತ್ವಾದೇವ । [185]

ಈ ವಿಧದ ಪುನಃಸ್ಪರ್ಶ ಅಥವಾ ಊರ್ಧ್ವಸ್ಪರ್ಶದಲ್ಲಿ ಮಧ್ಯಮದಿಂದ ದೊರೆಯುವ ಮೇಲುಸ್ಥಾಯಿಯ ಷಡ್ಜವು ಅನ್ಯಸ್ವರವಲ್ಲವಷ್ಟೆ. ಎಂದರೆ, ಪಂಚಮಭಾವದ ಊರ್ಧ್ವಸ್ಪರ್ಶದಿಂದಲೇ ಅಷ್ಟಮಸ್ವರದ, ಎಂದರೆ ಸ್ಥಾಯಿಯ ಭಾವವು ಹುಟ್ಟುತ್ತದೆ ಎಂದಾಯಿತು. ಹೀಗೆ ಪಂಚಮದ ಊರ್ಧ್ವಸ್ಪರ್ಶದಿಂದ ರಿಷಭವೂ, ಧೈವತದಿಂದ ಗಾಂಧಾರವೂ ನಿಷಾದದಿಂದ ಮಧ್ಯಮವೂ ಪುನಃ ಪಂಚಮಭಾವದಲ್ಲಿ ಹುಟ್ಟುವುದರಿಂದ ಸ್ವರದ ಆವರ್ತಕತ್ವವು ಇದರಿಂದ ಸಿದ್ಧಿಸುತ್ತದೆ. ಇದು ಅತ್ಯಂತ ಮುಖ್ಯ ತತ್ತ್ವವೆಂಬುದನ್ನು ಪುನಃ ವಿಸ್ತರಿಸಿ ಹೇಳಬೇಕಾಗಿಲ್ಲ. ಈ ತತ್ತ್ವದಿಂದ ಮತ್ತೊಂದು ಅನಿವಾರ್ಯ ಅನುಮಿತಿಯೂ ಹೊರಡುತ್ತದೆ. ಮಧ್ಯಮದ ಊರ್ಧ್ವಸ್ಪರ್ಶದಿಂದ ಹುಟ್ಟಿದ ಅಷ್ಟಮ ಸ್ವರವು ಷಡ್ಜದಿಂದ ಬೇರೆ ಸ್ವರವಲ್ಲವೆಂದು ಸಿದ್ಧವಾದ ಮೇಲೆ ಉಳಿಯುವುದು ಏಳೇ ಸ್ವರಗಳು. ಇವುಗಳಲ್ಲಿ ಮಧ್ಯಮವು ಉಪಲಬ್ಧವಾದುದಾದರೂ ಷಡ್ಜದ ನಿರ್ವಿಶೇಷರೂಪದ ಊರ್ಧ್ವಸ್ಪರ್ಶದಿಂದ. ಇದನ್ನು ಬಿಟ್ಟು ಸಶೇಷರೂಪದ ಊರ್ಧ್ವಸ್ಪರ್ಶವನ್ನು ಮಾತ್ರ ಲೆಕ್ಕಿಸಿದರೆ ಉಳಿಯುವುದು ಮೂರು ಸ್ವರಗಳೇ—ಸ, ರಿ, ಗ ಎಂಬವುಗಳು. ಇವುಗಳೇ ಮತ್ತೆ ಪಂಚಮದ ಅಂತರದಲ್ಲಿ ಪ-ಧ-ನಿ ಎಂಬ ತ್ರೈಸ್ವರ್ಯವನ್ನು ಉಂಟುಮಾಡುತ್ತವೆ. ಈ ಎರಡು ತ್ರೈಸ್ವರ್ಯಗಳನ್ನು ಸಂಬಂಧಿಸುವುದು ಮಧ್ಯದಲ್ಲಿರುವ ಮಧ್ಯಮವೇ. ಹೀಗೆ ಎರಡು ತ್ರೈಸ್ವರ್ಯಗಳನ್ನು ಒಂದುಗೂಡಿಸಿ ಸ್ಥಾಯಿಯ ಸಮಗ್ರತೆಯನ್ನೂ, ಅವುಗಳಿಗೆ ವಿಶಿಷ್ಟವೂ, ಸ್ವತಂತ್ರವೂ ಆದ ವ್ಯಕ್ತಿತ್ವವನ್ನು ಉಂಟುಮಾಡುವುದರಿಂದಲೂ ತಾನೇ ಪಂಚಮಸ್ವರವಾಗಿ ಊರ್ಧ್ವಸ್ಪರ್ಶವನ್ನು ಪಡೆದು ಅಷ್ಟಮಸ್ವರವನ್ನು ಕೊಡುವುದರಿಂದಲೂ, ಈ ಅಷ್ಟಮಸ್ವರದಿಂದಲೇ ಆವರ್ತಕತ್ವದ ಪ್ರಾಪ್ತಿಯೂ ಸ್ವರಸಪ್ತಕದಲ್ಲಿ ಸಂಪೂರ್ಣತೆ (completeness), ಐಕ್ಯತೆಗಳು (unity) ದೊರೆಯುವುದರಿಂದಲೂ ಮಧ್ಯಮವು ಇಡೀ ಸ್ಥಾಯಿಯಲ್ಲಿಯೇ ಅತಿಮುಖ್ಯವಾದ ಸ್ವರವಾಗಿದೆ. ಇದಕ್ಕೆ ಈ ಸಾಮರ್ಥ್ಯವು ದೊರೆಯುವುದು ಆಧಾರಸ್ವರವಾದ ಷಡ್ಜವು ಸ್ಥಾಯಿಯಲ್ಲಿ ಸರಿಯಾಗಿ ಮಧ್ಯಭಾಗದಲ್ಲಿ ಪುನರಭಿವ್ಯಕ್ತಿಯನ್ನು ಪಡೆಯುವುದರಿಂದಲೇ.

ಇನ್ನು, ಊರ್ಧ್ವಸ್ಪರ್ಶವು ಪಂಚಮಸ್ವರದ ಭಾವದಲ್ಲಿಯೇ ಏಕೆ ನಡೆಯಬೇಕೆಂಬುದನ್ನು ಪರಿಶೀಲಿಸಬೇಕು. ಸರಿಗಮ ಎಂಬ ಚಾತುಃಸ್ವರ್ಯವು ಆದ್ಯಂತಗಳಲ್ಲಿ ಚತುಃಶ್ರುತಿಕ ಪ್ರಮಾಣದಿಂದಲೇ ಪರಿಮಿತವಾಗಿದೆಯಷ್ಟೆ. ಈ ಕಾರಣದಿಂದ ಚಾತುಃಸ್ವರ್ಯವನ್ನು ಸ್ವರಾಷ್ಟಕದಂತೆಯೇ ಗಾನಪ್ರಪಂಚದ ಹ್ರಸ್ವಮೂಲದ್ರವ್ಯವೆಂದು (miniature scale) ಪರಿಗಣಿಸಬೇಕು. ಏಕೆಂದರೆ ಆಧಾರಸ್ವರವು ಸ್ಥಾಯಿಯ ಅಂತ್ಯದಲ್ಲಿ ಪುನರಭಿವ್ಯಕ್ತಿಯನ್ನು ಪಡೆದರೆ ಸ್ವರಾಷ್ಟಕವೂ ಮಧ್ಯದಲ್ಲಿ ಪಡೆದರೆ ಚಾತುಃಸ್ವರ್ಯವೂ ಲಭಿಸುತ್ತವೆ. ಇವೆರಡರಲ್ಲಿ ಇರುವ ವ್ಯತ್ಯಾಸವು ಇಷ್ಟೇ. ಆಧಾರಸ್ವರಕ್ಕಿರುವ ಶೇಷರೂಪದ ಊರ್ಧ್ವಸ್ಪರ್ಶ, ನಿರ್ವಿಶೇಷರೂಪದ ಊರ್ಧ್ವಸ್ಪರ್ಶವೆಂಬ ಎರಡರ ಜೊತೆಗೆ ಪಂಚಮಸ್ವರದ ದೂರದಲ್ಲಿ ಪುನರಾವರ್ತನೆ ಅಥವಾ ಪುನರಭಿವ್ಯಕ್ತಿ ಎಂಬ ಮೂರನೆಯದನ್ನೂ ಸೇರಿಸಬೇಕು. ಅದಕ್ಕೆ ಈ ಮೂರನೆಯ ವಿಧದ ಊರ್ಧ್ವಸ್ಪರ್ಶವು ದೊರೆಯುವುದಾದರೂ, ತಾನೇ ಮೇಲೆ ಹೇಳಿದ

ಎರಡು ವಿಧದ ಊರ್ಧ್ವಸ್ಪರ್ಶಗಳಿಂದ ನಿರ್ಮಿಸಿಕೊಂಡ ಚಾತುಃಸ್ವರ್ಯದ ಬಲದಿಂದಲೇ, ಅದರ ಅಂತರದಲ್ಲಿಯೇ. ಸರಿಗಮ ಎಂಬ ಚಾತುಃಸ್ವರ್ಯದಲ್ಲಿರುವ 4, 3, 2, 4 ಎಂಬ ಶ್ರುತಿವಿನಿಯೋಗದಿಂದ ಒಟ್ಟು ಹದಿಮೂರು ಶ್ರುತಿಗಳು ಆಗುತ್ತವೆಯಷ್ಟೆ. ಈ ಅಂತರದಲ್ಲಿ ಷಡ್ಜವು ಊರ್ಧ್ವಸ್ಪರ್ಶವನ್ನು ಪಡೆಯುವುದಕ್ಕೆ ಪಂಚಮಭಾವವೆಂದು ಸಂಜ್ಞೆ. ಹೀಗೆ ಸ್ಥಾಯಿಯಲ್ಲಿ ಅತಿಮುಖ್ಯವಾಗಿರುವ ಮಧ್ಯಮಭಾವ, ಪಂಚಮಭಾವಗಳೆರಡೂ ಆಧಾರಸ್ವರದ ಊರ್ಧ್ವಸ್ಪರ್ಶದಿಂದಲೇ ದೊರೆಯುತ್ತವೆ. ಈ ಅರ್ಥವನ್ನು ಅಭಿನವಗುಪ್ತನು 'ತೇಷು ಸರ್ವಥಾ ತಾದ್ರೂಪ್ಯಸಂಕ್ರಮಣಾತ್ತ್ವಂಶಾದಿವ್ಯಪದೇಶ ಏವ, ತತ್ಸ್ಥಾನಗತಾನಾಂ ತು ಸಾದೃಶ್ಯಪರತ ಏವ ಸಂವಾದತ್ವಂ ವಕ್ಷ್ಯತೇ' ಎಂಬ ವಾಕ್ಯದಲ್ಲಿ ಅಡಗಿಸಿದ್ದಾನೆ.

ಪಂಚಮಸ್ವರದ ಅಂತರದಲ್ಲಿ ಊರ್ಧ್ವಸ್ಪರ್ಶವು ಹೇಗೆ ಶಾಸ್ತ್ರೀಯವೆನ್ನುವುದಕ್ಕೆ ಮೇಲಿನ ಅನುಮಿತಿಯಷ್ಟೇ ಅಲ್ಲದೆ ನೇರವಾದ ಪ್ರಮಾಣೋಕ್ತಿಯೇ ಉಂಟು. ಪಂಚಮಸ್ವರದ ಅಂತರವೆನ್ನುವುದನ್ನು ಆಧಾರಸ್ವರದ ಮತ್ತು ಅದರ ಐದನೆಯ ಸ್ವರದ ನಡುವೆ ಇರುವ ಅಂತರಾಳವೆಂದು ಭಾವಿಸಿದರೆ ಆಗ ಊರ್ಧ್ವಸ್ಪರ್ಶವು ಆಧಾರಸ್ವರದ ಗುಣವಾಗುವುದಿಲ್ಲವಷ್ಟೆ. ಅದು ಹಾಗಲ್ಲ. ಅಂತರವೆಂದರೆ ನಡುವೆ ಇರುವ ಅವಕಾಶವಲ್ಲ, ಆಧಾರಸ್ವರದ ಮತ್ತು ಪಂಚಮದ ಸ್ವರೂಪವೇ ಎಂದು ಶ್ರೀಮದಭಿನವಗುಪ್ತನು ತನಗೆ ಪೂಜ್ಯರಾದ ಉಪಾಧ್ಯಾಯರ ಮಾತಿನಲ್ಲಿ ಹೇಳುತ್ತಾನೆ. ಆದುದರಿಂದ ಹದಿಮೂರು ಶ್ರುತಿಗಳ ಈ ಪ್ರಮಾಣವನ್ನು ಎಂದರೆ ಅಂತರವನ್ನು ಸ್ವರದ ಸ್ವರೂಪ, ಸ್ವಭಾವ ಎಂದು ತಿಳಿಯಬೇಕು:

ಸಂವಾದಿಲಕ್ಷಣಮಾಹ **ನವಕತ್ರಯೋದಶಕಮಂತರಮಿತಿ।** ಏತಚ್ಚ ಸ್ವರಾಭಿಧಾನಮ್ । ಅನ್ಯೇ ತ್ವಾಹುಃ—ಅಷ್ಟೌ ನವೇತಿ ನವಕಾ ಅಷ್ಟಕಾ ಉಚ್ಯಂತೇ । ಸ ಏಷ ತ್ರಯೋದಶಕಾ ದ್ವಾದಶ । ಏತಾವತ್ಯಃ ಶ್ರುತಯಸ್ತಯೋರಂತರಂ ಯಯೋಸ್ತಿ **ಸಂವಾದಿನಾವಿತಿ** । ಉಪಾಧ್ಯಾಯಾಸ್ತ್ವಾಹುಃ- **ಅಂತರಮಿತಿ** ಸ್ವರೂಪಂ, ನಾಂತರಾಲಂ, ತೇನ ನವಶ್ರುತಿಕಂ ಯಸ್ಯ ಸ್ವರೂಪಂ ಸ್ವರಸ್ಯ, ಯಸ್ಯ ಚ ತ್ರಯೋದಶಶ್ರುತಿಕತ್ವಂ ಸ್ವರೂಪಂ ತೌ ಸ್ವರೌ ಪರಸ್ಪರಸಂವಾದಿನೌ । [187]

ಹೀಗಾಗಿ, ಚಾತುಃಸ್ವರ್ಯದ ಅಂತರದಲ್ಲಿ, ಎಂದರೆ ಹದಿಮೂರು ಶ್ರುತಿಗಳ ಅಂತರದಲ್ಲಿ, ಎಂದರೆ ಪಂಚಮಸ್ವರದ ಸ್ವರೂಪದಲ್ಲಿ ಪುನಃ ಊರ್ಧ್ವಸ್ಪರ್ಶವನ್ನು ಪಡೆಯುವುದರಿಂದ ಷಡ್ಜವು ಪಂಚಮವನ್ನೂ ಋಷಭವು ಧೈವತವನ್ನೂ ಗಾಂಧಾರವು ನಿಷಾದವನ್ನೂ ಮಧ್ಯಮವು ಅಷ್ಟಮಸ್ವರವಾದ ಷಡ್ಜವನ್ನೂ ಕೊಡುವುದು ತಾರ್ಕಿಕವಾಗಿ ಈ ಪಕ್ಷದಿಂದ ಸಿದ್ಧವಾಗುತ್ತದೆ. ಈ ಏಳು ಸ್ವರಗಳಲ್ಲದೆ ಸ್ವರಸಾಧಾರಣದಿಂದ ಹುಟ್ಟುವ ತ್ರಿಶ್ರುತಿಕಗಳಾದ ಸಾಧಾರಣಗಾಂಧಾರ, ಕೈಶಿಕಿನಿಷಾದಗಳೂ, ಚತುಃಶ್ರುತಿಕಗಳಾದ ಅಂತರಗಾಂಧಾರ, ಕಾಕಲೀನಿಷಾದಗಳೂ, ಈ ಪಕ್ಷವು ಗ್ರಹಿಸುವ ದ್ವಿಶ್ರುತಿಕ, ತ್ರಿಶ್ರುತಿಕ, ಮತ್ತು ಚತುಃಶ್ರುತಿಕ ಸ್ವರಗಳ ವ್ಯಾಪ್ತಿಯಲ್ಲಿಯೇ ಬರುವುದರಿಂದ ಸ್ಥಾಯಿಯಲ್ಲಿರುವ ಎಲ್ಲಾ ಸ್ವರಸ್ಥಾನಗಳನ್ನೂ ಈ ಪಕ್ಷವು ತಾರ್ಕಿಕವಾಗಿ ಸಿದ್ಧಮಾಡಿಕೊಟ್ಟಂತಾಯಿತು. ಅಂತರಗಾಂಧಾರ, ಕಾಕಲೀಸ್ವರಗಳು ಉಂಟಾಗಬೇಕಾದರೆ ಶುದ್ಧಗಾಂಧಾರ, ಶುದ್ಧನಿಷಾದಗಳಿಗೆ ಕ್ರಮವಾಗಿ ಎರಡು ಶ್ರುತಿಗಳಷ್ಟು ಉತ್ಕರ್ಷವನ್ನು ಹೇಳಬೇಕಾಯಿತಷ್ಟೆ; ಈ ಪ್ರಮಾಣಕ್ಕಿಂತ ಹೆಚ್ಚಿನ ಉತ್ಕರ್ಷವು ಇಡೀ ಸ್ಥಾಯಿಯಲ್ಲಿಯೇ ಇಲ್ಲ; ಎಂದರೆ ವಿಕೃತಿಸ್ವರದ ಉಪಲಬ್ಧಿಯು ಕಡಿಮೆಯೆಂದರೆ ಒಂದು ಶ್ರುತಿಯ, ಹೆಚ್ಚೆಂದರೆ ಎರಡು ಶ್ರುತಿಗಳ ಉತ್ಕರ್ಷಾಪಕರ್ಷಗಳಿಂದ ಮಾತ್ರ ಶಾಸ್ತ್ರೀಯವಾಗಿ ಸಾಧ್ಯ. ಒಂದು ಶ್ರುತಿಗಿಂತ ಕಡಿಮೆಯ ಉತ್ಕರ್ಷದಿಂದ ಸ್ಥಾನಸಾಂಕರ್ಯ, ಸ್ವರಸಾಂಕರ್ಯಗಳಾಗುತ್ತವೆಂಬುದರಿಂದಲೂ, ಎರಡು ಶ್ರುತಿಗಳಿಗಿಂತ ಹೆಚ್ಚಿನ ಉತ್ಕರ್ಷದಿಂದ

187 ಅದೇ ಗ್ರಂಥ, ಪು. 16.

ಸ್ವರದ ಮೂಲದ್ರವ್ಯತೆಯೂ, ಸಂಗೀತೋಪಯುಕ್ತವಾದ ಕನಿಷ್ಠಾಂತರಪ್ರಮಾಣವನ್ನೂ ಸ್ವರತ್ವವನ್ನೂ ಉಳ್ಳ ಅಂತರವೆಂಬ ತತ್ತ್ವವೂ ಮಾಯವಾಗುವುದರಿಂದ ಇವೆರಡೂ ಶಾಸ್ತ್ರನಿಷಿದ್ಧಗಳೆಂಬ ಮಾತನ್ನು ಅಭಿನವಗುಪ್ತಾಚಾರ್ಯನಿಂದ ಈಗಾಗಲೇ ಸಂಗ್ರಹಿಸಿದೆ :

ತತ ಏವ ಶ್ರುತಿದ್ವಯೋತ್ಕರ್ಷೋ ದ್ವಿಶ್ರುತಿಕಯೋರೇವ ಗನ್ಯೋರುಕ್ತಃ । ಏಕಶ್ರುತ್ಯುತ್ಕರ್ಷಸ್ತು ನೋಕ್ತಃ ಸ್ಥಾನಸಾಂಕರ್ಯೇಣ ಸ್ವರಸಾಂಕರ್ಯಪ್ರಸಂಗಾದಿತಿ ಹ್ಯುಕ್ತಮ್ । [185]

ಪರಮಾವಧಿ ಸ್ವರಪ್ರಮಾಣವಾದ ಚತುಃಶ್ರುತಿತ್ವದಮೂಲಕ ಸ್ವರವಿಕೃತಿಯನ್ನು ಪರಮಾವಧಿಯಾದ ಎರಡು ಶ್ರುತಿಗಳಷ್ಟು ಉತ್ಕರ್ಷದಿಂದ ಪಡೆಯಬೇಕಾದರೆ ದ್ವಿಶ್ರುತಿಕಗಳಾಗಿರುವ ಗಾಂಧಾರ ನಿಷಾದಗಳಲ್ಲಿ ಮಾತ್ರ ಸಾಧ್ಯ. ತ್ರಿಶ್ರುತಿಕತ್ವವನ್ನು ಪಡೆಯಬೇಕಾದರೂ ಇವುಗಳಲ್ಲಿ ಮಾತ್ರ ಸಾಧ್ಯವಷ್ಟೆ; ಹಾಗೆಯೇ ತ್ರಿಶ್ರುತಿಕಗಳಾದ ರಿಷಭ-ಧೈವತಗಳಲ್ಲಿ ಒಂದು ಶ್ರುತಿಯ ಉತ್ಕರ್ಷದಿಂದ ಚತುಃಶ್ರುತಿಕಗಳಾದ ವಿಕೃತರಿಷಭ, ಧೈವತಗಳನ್ನೇಕೆ ಪಡೆಯಬಾರದು, ಎಂಬ ಪ್ರಶ್ನೆ ಇಲ್ಲಿ ಏಳುವುದು ನ್ಯಾಯವಾಗಿದೆ. ಹೀಗೆ ಮಾಡಿದರೆ ಎಂಟನೆಯ ಶ್ರುತಿಯಲ್ಲಿ ರಿಷಭವೂ ಒಂಬತ್ತನೆಯದರಲ್ಲಿ ಗಾಂಧಾರವೂ, ಇಪ್ಪತ್ತೊಂದನೆಯದರಲ್ಲಿ ಧೈವತವೂ, ಇಪ್ಪತ್ತೆರಡನೆಯದರಲ್ಲಿ ನಿಷಾದವೂ ಉಪಸ್ಥಿತವಾಗುವುವು; ಇದರಿಂದ ಸ್ಥಾನಸಾಂಕರ್ಯ ಸ್ವರಸಾಂಕರ್ಯಗಳು ಆಗುವುದರಿಂದ ಇದು ನಿಷಿದ್ಧ. ಆದರೂ ಇವುಗಳಲ್ಲಿ ಚತುಃಶ್ರುತಿಕತ್ವವೆಂಬ ವಿಕೃತಿಯನ್ನು ಉಪಾಯಾಂತರದಿಂದ ಶಾಸ್ತ್ರವು ಹೇಳುತ್ತದೆ. ಷಡ್ಜಸಾಧಾರಣವೆಂಬ ಪ್ರಕ್ರಿಯೆಯಲ್ಲಿ ಈ ನಿಷಾದವು ಕೈಶಿಕಿಯಾದಾಗ ಷಡ್ಜದ ಮೊದಲನೆಯ ಶ್ರುತಿಯನ್ನೂ ಷಡ್ಜವು ತನ್ನ ಮೂರನೆಯ ಶ್ರುತಿಯನ್ನೂ ಆಕ್ರಮಿಸುತ್ತವೆ. ಆಗ ರಿಷಭಕ್ಕೆ ನಾಲ್ಕು, ಐದು, ಆರು ಮತ್ತು ಏಳನೆಯ ಶ್ರುತಿಗಳು ದೊರೆತು ಸ್ವಸ್ಥಾನಚ್ಯುತವಾಗದಿದ್ದರೂ ಚತುಃಶ್ರುತಿಕತ್ವವೆಂಬ ವಿಕೃತಿಯುಂಟಾಗುತ್ತದೆ. ಇದೇ ರೀತಿಯಲ್ಲಿ ಮಧ್ಯಮಸಾಧಾರಣ ಕಾಲದಲ್ಲಿ ಗಾಂಧಾರವು ಸಾಧಾರಣವಾದಾಗ ಮಧ್ಯಮದ ಮೊದಲನೆಯ ಶ್ರುತಿಯಾದ ಹತ್ತನೆಯದನ್ನೂ ಮಧ್ಯಮವು ತನ್ನ ಮೂರನೆಯ ಶ್ರುತಿಯಾದ ಹನ್ನೆರಡನೆಯದನ್ನೂ ಆಕ್ರಮಿಸಿಕೊಂಡು ಮಧ್ಯಮಗ್ರಾಮದ ಪಂಚಮಕ್ಕೆ ಚತುಃಶ್ರುತಿಕತ್ವವೆಂಬ ವಿಕೃತಿಯು ಸಿದ್ಧವಾಗುತ್ತದೆ. ಪಂಚಮವು ಮಧ್ಯಮಗ್ರಾಮದಲ್ಲಿ ತ್ರಿಶ್ರುತಿಕವಾದುದರಿಂದ ಧೈವತವು ಸ್ವಸ್ಥಾನವಾದ ಇಪ್ಪತ್ತನೆಯ ಶ್ರುತಿಯಿಂದ ಕದಲದಿದ್ದರೂ ಹದಿನೇಳು. ಹದಿನೆಂಟು, ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶ್ರುತಿಗಳನ್ನು ಪಡೆದು ಚತುಃಶ್ರುತಿಕತ್ವವೆಂಬ ವಿಕೃತಿಯನ್ನು ಪಡೆಯುತ್ತದೆ. ಹೀಗೆ ಷಡ್ಜಮಧ್ಯಮಗಳಿಗೆ ಮಾತ್ರ ಪ್ರಕೃತಿಭೂತವಾದ ಚತುಃಶ್ರುತಿಕತ್ವವೂ, ಏಕಶ್ರುತ್ಯಪಕರ್ಷದಿಂದ ದ್ವಿಶ್ರುತಿಕತ್ವದ ವಿಕೃತಿಯೂ, ಪಂಚಮಕ್ಕೆ ಷಡ್ಜಗ್ರಾಮದಲ್ಲಿ ಚತುಃಶ್ರುತಿಕತ್ವವೂ, ಮಧ್ಯಮಗ್ರಾಮದಲ್ಲಿ ತ್ರಿಶ್ರುತಿಕತ್ವವೆಂಬ ಪ್ರಕೃತಿಯೂ ಮಧ್ಯಮಸಾಧಾರಣದಲ್ಲಿ ಚತುಃಶ್ರುತಿಕತ್ವವೆಂಬ ವಿಕೃತಿಯೂ, ಹಾಗೆಯೇ ರಿಷಭಧೈವತಗಳಿಗೆ ತ್ರಿಶ್ರುತಿಕತ್ವವೂ ವಿಕೃತಿಯಲ್ಲಿ ಚತುಃಶ್ರುತಿಕತ್ವವೂ, ಗಾಂಧಾರನಿಷಾದಗಳಿಗೆ ಪ್ರಕೃತಿಯಲ್ಲಿ ದ್ವಿಶ್ರುತಿಕತ್ವವೂ, ವಿಕೃತಿಯಲ್ಲಿ ತ್ರಿಶ್ರುತಿಕತ್ವ, ಚತುಃಶ್ರುತಿಕತ್ವಗಳೂ ಸ್ಥಾಯಿಯಲ್ಲಿ ಸಿದ್ಧಿಸುತ್ತವೆ. ಇವುಗಳನ್ನು ಇದೇ ಪ್ರಕರಣದಲ್ಲಿ ವಿಕೃತಸ್ವರವಿವೇಚನೆಯಲ್ಲಿಯೂ ಐದನೆಯ ಪ್ರಕರಣದಲ್ಲಿ ಸ್ವರಸಾಧಾರಣಸಂದರ್ಭದಲ್ಲಿಯೂ ಪುನಃ ಪ್ರಸ್ತಾಪಿಸಲಾಗುವುದು. ಈ ಪಕ್ಷದಿಂದ ಸ್ಥಾಯಿಯಲ್ಲಿರುವ ಎಲ್ಲಾ ಪ್ರಕೃತಿ ವಿಕೃತಿ ಸ್ವರಸ್ಥಾನಗಳನ್ನೂ ತಾರ್ಕಿಕವಾಗಿ ಹೇಗೆ ಪಡೆಯಬಹುದೆಂಬುದನ್ನು ತೋರಿಸಲು ಮಾತ್ರ ಇಲ್ಲಿ ಇವುಗಳನ್ನು ಹೇಳಬೇಕಾಯಿತು.

ಪ್ರಕೃತದಲ್ಲಿ, ಊರ್ಧ್ವಸ್ಪರ್ಶತತ್ವದಿಂದ ಪರಸ್ಪರಾನುರೂಪತೆಯುಳ್ಳ (symmetrical) ಎರಡು ಚಾತುಃಸ್ವರ್ಯಗಳು ಸ್ವರಾಷ್ಟಕಕ್ಕೆ ಸಿದ್ಧಿಸುತ್ತವೆ ಎಂಬುದು ಸಾರಾಂಶ. ಪಂಚಮ ಸ್ವರದ ಅಂತರದಲ್ಲಿ ಸರಿಗವೆಂಬ ತ್ರೈಸ್ವರ್ಯದ ಸ್ವರಗಳಲ್ಲಿ ಈ ಊರ್ಧ್ವಸ್ಪರ್ಶವು ನಡೆಯುತ್ತದೆಂಬುದು ಇಲ್ಲಿನ ಅಭಿಸಂಧಿ. ಪಂಚಮ ಸ್ವರದ ಈ ಗುಣವನ್ನು ಅದರ

ನಿಷ್ಪತ್ತಿಯಿಂದಲೇ ನಿಸ್ಸಂಧಿಗ್ಧವಾಗಿ ತಿಳಿಯಬಹುದು. ಹೀಗೆ, ಮತಂಗಮುನಿಯು ಪಂಚಮ ಸ್ವರದ ಹೆಸರನ್ನು ಹೀಗೆ ಪಡೆಯುತ್ತಾನೆ :

ಸ್ವರಾಂತರಾಣಾಂ ವಿಸ್ತಾರಂ ಯೋ ಮಿಮೀತೇ ಸ ಪಂಚಮಃ ।
ಪಾಠಕ್ರಮೇಣ ಗಣನೇ ಸಂಖ್ಯಯಾ ಪಂಚಮೋ ऽಥವಾ ॥ [188]

ಈ ಮಾತು ಉಪಲಬ್ಧ ಬೃಹದ್ದೇಶಿಯಲ್ಲಿ ಗ್ರಂಥಪಾತವಾಗಿರುವುದರಿಂದ ಕಾಣಬರುವುದಿಲ್ಲ ; ಇದು ಕಲ್ಲಿನಾಥನಿಂದ ಉದ್ಧೃತವಾದುದು. ಬೃಹದ್ದೇಶಿಯ ಈ ಭಾಗದಲ್ಲಿ ಸ್ಪಷ್ಟವಾದ ಗ್ರಂಥಪಾತವಿರುವುದರಿಂದಲೂ ಇದರ ನಂತರ ಧೈವತಶಬ್ದ ನಿಷ್ಪತ್ತಿಯು ಕಲ್ಲಿನಾಥನಿಂದ ಉದ್ಧೃತವಾದ ರೀತಿಯಲ್ಲಿಯೇ ಬೃಹದ್ದೇಶಿಯಲ್ಲಿ ಕಂಡುಬರುವುದರಿಂದಲೂ ಈ ಶ್ಲೋಕವು ಮತಂಗನದೆಂದೇ ತಿಳಿಯಬಹುದು. ಐದು ಸ್ವರಗಳ ಅಂತರಗಳನ್ನು ಪಂಚಮವು ಅಳೆಯುವುದರಿಂದ ಅದು ಪಂಚಮ. ಕಲ್ಲಿನಾಥನು ಇದನ್ನು ವಿಸ್ತರಿಸುತ್ತಾ ' ಪಚಿ ವಿಸ್ತಾರೇ ಇತ್ಯಸ್ಮಾದ್ಧಾತೋರ್ಭಾವೇ ಘಞ್ ಪಂಚಂ ವಿಸ್ತಾರಂ ಮಿಮಿತಾತ ಇತಿ, " ಆತೋ ऽನುಪಸರ್ಗೇ ಕಃ " ಇತಿ ಕಪ್ರತ್ಯಯೇ ಪಂಚಮ ಇತಿ ರೂಪಮ್ " [189] ಎಂದು ಮುಂತಾಗಿ ಹೇಳುತ್ತಾನೆ. ' ಪಚ್ ' ಎಂಬ ಭ್ವಾದಿ ಪ್ರಥಮಗಣದ ಉಭಯಪದಿ ಧಾತುವಿಗೆ ಹರಡು, ವಿಸ್ತರಿಸು, ಸ್ಪಷ್ಟಪಡಿಸು ಎಂದು ಮುಂತಾದ ಅರ್ಥಗಳಿವೆ. [190] ಇದು ಇದೇ ಅರ್ಥಗಳಲ್ಲಿ ' ಪಂಚಯತಿ ' ಎಂದು ಮುಂತಾದ ರೂಪಗಳನ್ನು ಪಡೆಯುತ್ತದೆ. ' ಪಞ್ಚ್ ' ಎಂಬ ಅದೇ ಗಣದ ಧಾತುವಿಗೂ ಇವೇ ಅರ್ಥಗಳಿವೆ. ಮಿಮೀತೇ ಎಂಬ ಆಖ್ಯಾತವು ' ಮಾ ' ಎಂಬ ಜುಹೋತ್ಯಾದಿ ತೃತೀಯಗಣದ ಆತ್ಮನೇಪದಿ ಧಾತು. ಅದಕ್ಕೆ ವಿಸ್ತರಿಸು, ವಿಸ್ತಾರವನ್ನು ಆಕ್ರಮಿಸಿಕೋ, ಸ್ವರವನ್ನುಂಟುಮಾಡು ಎಂಬ ಅರ್ಥಗಳಿವೆ. [191] ಇದು ಲೋಟ್ (ಆಜ್ಞಾ) ನಲ್ಲಿ ಪ್ರಥಮ-ಪುರುಷೈಕವಚನದಲ್ಲಿ ಮಿಮಿತೇ ಎಂದಾಗುತ್ತದೆ. (ಮಿಮಿತೇ, ಮಿಮಾತೇ, ಮಿಮತೇ) ಐದು ಸ್ವರಗಳ ವಿಸ್ತಾರವನ್ನು ಇದು ಆಕ್ರಮಿಸಿಕೊಂಡು, ಎಂದರೆ ಈ ಅಂತರವನ್ನು ಸ್ವರೂಪವನ್ನಾಗಿ ಪಡೆದು ಪಂಚಮವಾಗುತ್ತದೆ, ಎಂಬುದು ಈ ಶಬ್ದದ ಅರ್ಥ. ಇದು ಊರ್ಧ್ವಸ್ಪರ್ಶಪರವಾದ ಅರ್ಥವೇ ಆಗಿದೆ. ' ಶಬ್ದಮಾಡು, ಸ್ವರವಾಗು ' ಎಂದು ಅರ್ಥವಿರುವ ' ಮಾ ' ಧಾತುವಿನ ಅರ್ಥವೂ ಇದನ್ನೇ ಸೂಚಿಸುತ್ತದೆ. ಸ್ಥಾಯಿಯಲ್ಲಿರುವ ಷಡ್ಜಾದಿ ಬಿಡಿ ಸ್ವರಗಳನ್ನು ಅಳೆಯುವ, ಸ್ಪಷ್ಟಪಡಿಸುವ, ಅಥವಾ ಸ್ವರವಾಗಿಸುವ ಸಾಮರ್ಥ್ಯವು ಪಂಚಮಕ್ಕಿಲ್ಲದಿರುವುದು ಸ್ಪಷ್ಟವೇ ಆಗಿದೆ. ಆದರೆ ಷಡ್ಜ, ರಿಷಭ, ಗಾಂಧಾರ, ಮಧ್ಯಮಗಳನ್ನು ಊರ್ಧ್ವಸ್ಪರ್ಶದಿಂದ ವಿಸ್ತರಿಸುವ, ಪುನರಭಿ-ವ್ಯಕ್ತಿಯನ್ನು ಕೊಡುವ ಸಾಮರ್ಥ್ಯವು ಅದಕ್ಕಿದೆ. ಸರಿಗಮ ವೆಂಬ ಚಾತುಃಸ್ವರ್ಯದಲ್ಲಿ ಷಡ್ಜದ ವಿಸ್ತಾರವು ಸಶೇಷ ಹಾಗೂ ನಿರ್ವಿಶೇಷ ರೂಪದಲ್ಲಿ ಊರ್ಧ್ವಸ್ಪರ್ಶದ ಮೂಲಕ ಸಾಧಿಸಲ್ಪಡುತ್ತದೆ. ಆದರೆ ಇದು ಚಾತುಃಸ್ವರ್ಯದ ವ್ಯಾಪ್ತಿಗೆ ಮಿತವಾದುದು. ಅದು ಪುನಃ ನಿರ್ವಿಶೇಷ ರೂಪದಲ್ಲಿ ಪುನರಭಿವ್ಯಕ್ತಿಯನ್ನು ಪಡೆಯಬೇಕಾದರೆ ಪಂಚಮದ ದೂರದಲ್ಲಿ ' ಮಾ ' ಮತ್ತು ' ಪಞ್ಚ್ ' ಧಾತುಗಳಲ್ಲಿರುವ ಅರ್ಥದಲ್ಲಿ ವಿಸ್ತರಿಸುವುದರಿಂದ ಮಾತ್ರ ಸಾಧ್ಯ. ಇದು

---

188 ಮತಂಗ, ಉ. ಗ್ರಂ., ಉದ್ಧೃತಿ, ಕಲ್ಲಿನಾಥ, ಉ. ಗ್ರಂ., ಪು. 80.

189 ಕಲ್ಲಿನಾಥ, ಉ. ಗ್ರಂ., ಪು. 81.

190 ಧಾತುಪಾಠ, VI, 14 ; XXIII, 27.

191 ಅದೇ ಗ್ರಂಥ, XXIV, 54. ' ಮಾ ' ಎಂಬ ಎರಡನೆಯ ' ಅದಾದಿ ' ಗಣದ ಪರಸ್ಮೈಪದಿ ಧಾತುವೂ ಒಂದಿದೆ. ಇದಕ್ಕೆ ಪ್ರಾಣಿಗಳಂತೆ ಶಬ್ದವನ್ನುಂಟುಮಾಡು, ಸ್ವರವನ್ನುಂಟುಮಾಡು ಎಂಬ ಅರ್ಥವಿದೆ. ಅಗ ಮಿಮತಿ ಎಂಬ ರೂಪಗಳನ್ನೂ ಧಾತುಪಾಠ XXV, 6ರಂತೆ ಆತ್ಮನೇಪದಿಯಾದಾಗ ಮಿಮಿತೇ ಎಂದು ಮುಂತಾದ ರೂಪಗಳನ್ನೂ ಪಡೆಯುತ್ತದೆ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಚಾತುಃಸ್ವರ್ಯದಲ್ಲಿರುವ ಪ್ರತಿಯೊಂದು ಸ್ವರದಲ್ಲಿಯೂ ಸಾಧ್ಯವಾದುದರಿಂದಲೇ ಪರಸ್ಪರಾನುರೂಪವಾದ ಎರಡನೆಯ ಚಾತುಃಸ್ವರ್ಯವು ನಿರ್ಮಿತವಾಗಿ, ಸ್ಥಾಯಿಯ ಭಾವವು ಉಂಟಾಗಿ, ಸ್ಥಾಯಿಯ ಪ್ರಮಾಣವು ನೆಲೆಯಾಗಿ, ಸ್ವರಸಪ್ತ-ಕವು ಸ್ವರಾಷ್ಟಕವೆನಿಸಿ ಸಂಪೂರ್ಣವಾಗುವುದು. ಸಮಶ್ರುತಿಕತ್ವದ ಕಾರಣ, ಎಂದರೆ ಚತುಃಶ್ರುತಿಕತ್ವವನ್ನೇ ತಾನೂ ಹೊಂದಿರುವುದರಿಂದ ಮಧ್ಯಮಕ್ಕೆ ಈ ಗುಣವು ಸ್ವಲ್ಪವಿದೆ; ಚಾತುಃಸ್ವರ್ಯದ, ಆದುದರಿಂದ ಸ್ಥಾಯಿಯ ಉಳಿದ ಯಾವ ಸ್ವರಕ್ಕೂ ಈ ಸಾಮರ್ಥ್ಯವಿಲ್ಲ. ಆದುದರಿಂದಲೇ ಪಂಚಮದಲ್ಲಿ ಮಾತ್ರ ಊರ್ಧ್ವಸ್ಪರ್ಶವನ್ನು ಹೇಳಿದೆ. ಸರಿಗಮ ಮತ್ತು ಪಧನಿಸ ಎಂಬ ಚಾತುಃಸ್ವರ್ಯಗಳಲ್ಲಿನ ಪರಸ್ಪರ ಸ್ವರಗಳ ವಿಸ್ತಾರವನ್ನು ಅಳೆಯುವುದೇ ಪಂಚಮದ ಕರ್ತವ್ಯ. ಆಯಾ ಚಾತುಃಸ್ವರ್ಯದ ವಿಸ್ತಾರವನ್ನು ಮಧ್ಯಮಭಾವವೂ ಎರಡರ ಮೊತ್ತದ ವಿಸ್ತಾರ ವನ್ನು ಅಷ್ಟಮಭಾವವೂ ಅಳೆದರೂ ಇವೆರಡನ್ನೂ ಸಂಬಂಧಿಸಿ ಐಕ್ಯಗೊಳಿಸುವುದು ಅವರೆಡರ ನಡುವೆ ಇರುವ ಪಂಚಮದ ವಿಸ್ತಾರವೇ.

ಹೀಗೆ ಹೇಳಿದುದರಿಂದ ಸ್ಥಾಯಿಯಲ್ಲಿರುವ ಸ್ವರಸ್ಥಾನಗಳೆಲ್ಲ ಚಾಕ್ರಿಕ ಪಂಚಮಭಾವದಿಂದ ಪಡೆದಿದೆ ಯೆನ್ನಲಾಗದು. ಇದು ಏಕಾಗದೆಂದು ಶ್ರುತಿನಿದರ್ಶನ ಪದ್ಧತಿಗಳನ್ನು ಸಮಷ್ಟಿಯಲ್ಲಿ ವಿವೇಚಿಸುವ ಸಂದರ್ಭದಲ್ಲಿ ಮುಂದೆ ಹೇಳಲಾಗುವುದು. ಒಂದು ಚಾತುಃಸ್ವರ್ಯವು ಪಂಚಮಭಾವದಲ್ಲಿ ಊರ್ಧ್ವಸ್ಪರ್ಶದಿಂದ ಇನ್ನೊಂದು ಅತ್ಯಂತ ಸದೃಶವಾದ ಚಾತುಃಸ್ವರ್ಯವನ್ನು ನಿರ್ಮಿಸಿಕೊಳ್ಳುತ್ತದೆ ಎಂಬುದು ಮಾತ್ರ ಇಲ್ಲಿ ತಿಳಿಯಬೇಕಾದ ಅರ್ಥ.

ಆದುದರಿಂದ ಈ ಪಕ್ಷದಲ್ಲಿ ಸ್ಥಾಯಿಯೂ ಸ್ವರವ್ಯವಸ್ಥೆಯೂ ಹನ್ನೆರಡು ಸ್ವರಸ್ಥಾನಗಳೂ ಸಿದ್ಧವಾಗುತ್ತವೆ. ಸರಿಗವೆಂಬ ಒಂದು ತ್ರೈಸ್ವರ್ಯಕ್ಕೆ ಒಂಬತ್ತು ಶ್ರುತಿಗಳು, ಸ್ಥಾಯಿಯ ಉತ್ತರಾಂಗದಲ್ಲಿ ಪಧನಿ ಎಂಬ ಎರಡನೆಯ ತ್ರೈಸ್ವರ್ಯಕ್ಕೆ ಒಂಬತ್ತು ಶ್ರುತಿಗಳು, ಹೀಗೆ ಒಟ್ಟು ಹದಿನೆಂಟು ಶ್ರುತಿಗಳು. ಇವುಗಳನ್ನು ಸಂಬಂಧಿಸುವ ಮಧ್ಯಮವು ಚತುಃಶ್ರುತಿಕ ಷಡ್ಜದ ನಿರ್ವಿಶೇಷ ರೂಪವಾದುದರಿಂದ ಅದಕ್ಕೆ ನಾಲ್ಕು ಶ್ರುತಿಗಳು. ಆದುದರಿಂದ ಒಟ್ಟು ಇಪ್ಪತ್ತೆರಡು ಶ್ರುತಿಗಳು ಸ್ಥಾಯಿಯಲ್ಲಿ ಲಭಿಸುತ್ತವೆ. ಅಥವಾ ಸರಿಗಮ, ಪಧನಿಸ ಎಂಬ ಚಾತುಃಸ್ವರ್ಯ ಗಳಲ್ಲಿ ಪ್ರತಿಯೊಂದಕ್ಕೂ ಹದಿಮೂರರಂತೆ ಒಟ್ಟು ಇಪ್ಪತ್ತಾರು ಶ್ರುತಿಗಳು. ಆದರೆ ಸ್ಥಾಯಿಯ ಅಂತ್ಯದಲ್ಲಿ ಮಧ್ಯಮದ ಪಂಚಮವಿಸ್ತಾರದ ಊರ್ಧ್ವಸ್ಪರ್ಶದಿಂದ, ಅಥವಾ ಷಡ್ಜದ ನಿರ್ವಿಶೇಷ ಊರ್ಧ್ವಸ್ಪರ್ಶದಿಂದ ಷಡ್ಜವೇ ಉಂಟಾಗುವುದರಿಂದ ಅದರ ನಾಲ್ಕು ಶ್ರುತಿಗಳನ್ನು ಕಳೆದರೆ ಉಳಿಯುವುದು ಇಪ್ಪತ್ತೆರಡೇ ಶ್ರುತಿಗಳು. ಪರಸ್ಪರಾನುರೂಪತೆಯುಳ್ಳ ಈ ಚಾತುಃಸ್ವರ್ಯಗಳಲ್ಲಿ ಶ್ರುತಿವಿನಿಯೋಗವು ಸ್ವಯಂಸಿದ್ಧವಾಗಿಯೇ ಇರುತ್ತದೆ. ಹೀಗೆ ಇದು ಸ್ವರಾಷ್ಟಕದ ಹ್ರಸ್ವರೂಪವೆಂದೂ ಇಪ್ಪತ್ತೆರಡು ಶ್ರುತಿಗಳಿಗೆ ಬೀಜರೂಪದಲ್ಲಿದೆಯೆಂಬುದೂ ಸುಸ್ಪಷ್ಟವಾಗಿದೆ.

ಸಂಗೀತದ ಲಕ್ಷ್ಯದಲ್ಲಿ ಸ್ವರಾಷ್ಟಕವು ಹುಟ್ಟಿ ಬೆಳೆದ ಚರಿತ್ರೆಯನ್ನು ಈ ಚಾತುಃಸ್ವರ್ಯವಾದವು ಹೇಳುತ್ತದೆ. ಒಂದೇ ಸ್ವರದಿಂದ ಎರಡೂ ನಂತರ ಮೂರೂ ಹುಟ್ಟಿದುದನ್ನು ಆರ್ಚಿಕ, ಗಾಥಿಕ ಮತ್ತು ಸಾಮಿಕ ವೇದಪಠನಾ-ಕ್ರಮಗಳು ಸೂಚಿಸುತ್ತವೆ. ಇದೇ ಸಂಗೀತಪ್ರವೃತ್ತಿಯ ಆದಿ. ಇಲ್ಲಿ ಊರ್ಧ್ವಗಮನ ಪ್ರವೃತ್ತಿಯಿಂದ ಒಂದೇ ಸ್ವರವು ಭಿನ್ನತೆಯನ್ನು ಪಡೆದು ನೆರೆಹೊರೆಯ ಅನ್ಯಸ್ವರವಾಗುವುದು ಸ್ಪಷ್ಟವಾಗಿ ಕಾಣುತ್ತದೆ. ಇದನ್ನೇ ಸಶೇಷ-ರೂಪೀ ಊರ್ಧ್ವಸ್ಪರ್ಶತತ್ತ್ವವೆಂದು ಮೇಲೆ ಕರೆದಿದೆ. ಆದರೆ ಒಂದು, ಎರಡು ಅಥವಾ ಮೂರು ಸ್ವರಗಳು ಸಂಗೀತಕ್ಕೆ ವಿಶೇಷ ಪ್ರಯೋಜಕಗಳಲ್ಲ. ಏಕೆಂದರೆ ವಿವಿಧ ಸ್ಥಾನಾಂತರಗಳಲ್ಲಿ ವಿವಿಧವಾದ ಭಾವಗಳನ್ನು ಹೊಂದಿ ವೈವಿಧ್ಯವನ್ನುಂಟುಮಾಡಿದ ಹೊರತು ಸಂಗೀತದಲ್ಲಿ ಮುಖ್ಯಪ್ರಯೋಜನವೂ ಧರ್ಮವೂ ಆದ ರಕ್ತಿಯು ಇರುವುದಿಲ್ಲ. ಆದುದರಿಂದ ನಾಲ್ಕು ಸ್ವರಗಳ ಸಮುದಾಯವೇ ಲೌಕಿಕ ಸಂಗೀತದ ಸೃಷ್ಟಿಗೆ ಮೊದಲನೆಯ ಹೆಜ್ಜೆಯೆನ್ನಬಹುದು. ಜನಪದ ಸಂಗೀತವು ಎಲ್ಲಾ ದೇಶಗಳಲ್ಲಿಯೂ ಸಾಮಾನ್ಯವಾಗಿ ಒಂದು ಚಾತುಃಸ್ವರ್ಯದ ವ್ಯಾಪ್ತಿಯಲ್ಲಿ ಅಡಗಿ ರುವುದೇ ಇದಕ್ಕೆ ಸಾಕ್ಷಿ. ಚಾತುಃಸ್ವರ್ಯಕ್ಕೆ ಪ್ರಾಚೀನಭಾರತೀಯ ಸಂಗೀತಶಾಸ್ತ್ರದಲ್ಲಿ ಮಹತ್ವದ ಸ್ಥಾನವನ್ನು

ಕೊಡಲಾಗಿತ್ತೆನ್ನಲು ಅನೇಕ ಪ್ರಮಾಣಗಳಿವೆ. ಮೊದಲನೆಯದಾಗಿ, ಚಾತುಃಸ್ವರ್ಯದ ಪ್ರಥಮಸ್ವರ ಮತ್ತು ಅಂತ್ಯಸ್ವರಗಳಿಗೆ ಪ್ರಾಧಾನ್ಯ, ಪ್ರಾಥಮ್ಯಗಳನ್ನು ಹೇಳಿ ಅವುಗಳಿಂದ ನಿರ್ಧರಿಸಲ್ಪಟ್ಟ ಷಡ್ಜಗ್ರಾಮ, ಮಧ್ಯಮ-ಗ್ರಾಮಗಳು ಇದಕ್ಕೊಂದು ನಿದರ್ಶನ. ಪ್ರಾಚೀನ ಭಾರತದಲ್ಲಿ ಚಾತುಃಸ್ವರ್ಯವನ್ನೇ ಆಧಾರಮಾಡಿಕೊಂಡ ಗೇಯ ಪದ್ಧತಿಯು ಹಲವು ಪ್ರಾಂತಗಳಲ್ಲಿದ್ದುದನ್ನು ಸಾವಿರದ ಐನೂರು ವರ್ಷಗಳಷ್ಟು ಹಿಂದೆಯೇ ಮತಂಗಮುನಿಯು ಸ್ಪಷ್ಟಪಡಿಸಿದ್ದಾನೆ :

ಚತುಃಸ್ವರಾತ್ ಪ್ರಭೃತಿ ನ ಮಾರ್ಗಃ ಶಬರಪುಲಿಂದಕಾಂಬೋಜವಂಗಕಿರಾತಬಾಹ್ಲೀಕಾಂಧ್ರದ್ರಾವಿಡ-ವನಾದಿಷು ಪ್ರಯುಜ್ಯತೇ । ಅನಿಯಮಾಚ್ಛ್ರುತಿಮಾತ್ರಮತ್ರ ಗ್ರಾಹ್ಯಮ್ ।[192]

ಶಬರ, ಪುಲಿಂದ, ಕಾಂಬೋಜ, ವಂಗ, ಬಾಹ್ಲೀಕ, ಆಂಧ್ರ, ದ್ರಾವಿಡವೆಂಬ ಪ್ರಾಂತಗಳ ವನಗಳಲ್ಲಿ ಚಾತುಃಸ್ವರ್ಯದ ಮಿತಿಯಲ್ಲಿಯೇ ಜನಪದಗಾನವು ಅಥವಾ ಮೂಲಜನಾಂಗ (aboriginal) ಗಾನಪದ್ಧತಿಯು ಕಂಡುಬರುತ್ತಿದ್ದುದನ್ನು ಮತಂಗನು ಹೇಳಿದ್ದಾನೆ. ಇದು ಮಾರ್ಗವಲ್ಲ ; ಸಂಗೀತಶಾಸ್ತ್ರದಲ್ಲಿ ಸ್ವರ, ರಾಗ, ಗೀತ ಮೊದಲಾದವುಗಳಿಗೆ ಹೇಳಿದ ಲಕ್ಷಣಗಳು, ನಿಯಮಗಳೂ ಇಲ್ಲಿ ಕಂಡುಬರುವುದಿಲ್ಲ, ಆದುದರಿಂದ ಕೇಳಿಸಿದ್ದನ್ನೇ ಇಲ್ಲಿ ದೇಶೀ ಎಂಬ ಭಾವದಲ್ಲಿ ಗ್ರಹಿಸಬೇಕು ಎಂದೂ ಅವನು ವಿವರಣೆಯನ್ನು ನೀಡುತ್ತಾನೆ. ಮುಂದೆ ಪ್ರಬಂಧಾ-ಧ್ಯಾಯದಲ್ಲಿ ಕರ್ಣಾಟಕಭಾಷೆಯನ್ನು ಅವನು ಹಲವು ಸಲ ಉಲ್ಲೇಖಿಸಿದ್ದರೂ[193] ಕರ್ಣಾಟಕದ ವನಗಳಲ್ಲಿ ಚಾತುಃಸ್ವರ್ಯಮಿತವಾದ ಗಾಯನವನ್ನು ಅವನು ಹೇಳದಿರುವುದರಿಂದ ಬೃಹದ್ದೇಶಿಯ ರಚನಾಕಾಲದಲ್ಲಿ ಕರ್ಣಾಟಕವು ಎಷ್ಟು ಉಚ್ಚ್ರಾಯ ನಾಗರಿಕತೆಯ ಸ್ಥಿತಿಯಲ್ಲಿತ್ತು ಎಂದು ತಿಳಿಯುತ್ತದೆ. ಶಾಸ್ತ್ರೀಯ ಸಂಗೀತದಲ್ಲಿಯೂ ಚಾತುಃಸ್ವರ್ಯವು ಅವಶೇಷರೂಪದಲ್ಲಿ ಉಳಿದು ಬಂದಿತ್ತೆನ್ನಲು ಎರಡು ಸಾಕ್ಷ್ಯಗಳು ದೊರೆಯುತ್ತವೆ. ಮೊದಲನೆಯದನ್ನು ಭರತನು ಕೊಡುತ್ತಾನೆ. ನಾಟಕಗಳಲ್ಲಿ ಬರುತ್ತಿದ್ದ ಧ್ರುವಾಗಳೆಂಬ ಹಾಡುಗಳಲ್ಲಿ ಅವಕೃಷ್ಟಧ್ರುವಾ ಎಂಬುದು ಒಂದು. ಇದನ್ನು ನಿರೋಧ, ಬೀಳುವುದು, ವ್ಯಾಧಿ ಮೊದಲಾದ ಕರುಣಾಪೂರಿತ ಸನ್ನಿವೇಶಗಳಲ್ಲಿ ಹಾಡಬೇಕೆಂದು ವಿಧಿ. ಅವಕೃಷ್ಟಧ್ರುವಾಗಳಲ್ಲಿ ಚಾತುಃಸ್ವರ್ಯದಮಿತಿಯಲ್ಲಿಯೇ ಗಾನಪ್ರಯೋಗವಾಗಬೇಕೆಂಬುದಕ್ಕೆ ಮತಂಗನು ಭರತನನ್ನು ಉದ್ಧರಿಸುತ್ತಾನೆ.

ಯದಾ ಚತುಃಸ್ವರಪ್ರಯೋಗೋಽಪಿ ಸ್ವರಾಂತರಮಾಹ ಅವ(ಪ)ಕೃಷ್ಟಧ್ರುವಾಸ್ವೇವ ವೇದಿತವ್ಯಮ್ । ಧ್ರುವಂ ಮಧ್ಯೇ ಯೇ ಸ್ಫುಟೀಕರಿಷ್ಯಾಮಃ । ತಥಾ ಚಾಹ ಭರತಃ—

"ಷಟ್‌ಸ್ವರಸ್ಯ ಪ್ರಯೋಗೋ ಽಸ್ತಿ ತಥಾ ಪಂಚಸ್ವರಸ್ಯ ಚ ।
ಚತುಃಸ್ವರಪ್ರಯೋಗೋ ಽಪಿ ಹ್ಯವಕೃಷ್ಟಧ್ರುವಾಸ್ವಪಿ ॥"

ಅಪಿ ಶಬ್ದಾದತ್ರ ಸಂಪೂರ್ಣೋ ಽಪಿ ಗ್ರಾಹ್ಯಃ । ಏವಂ ಚತುರ್ವಿಧಃ ಪ್ರಯೋಗೋ ಧ್ರುವಾಣಾಂ ವೇದಿತವ್ಯಃ ।[192]

ಈ ಪ್ರವೃತ್ತಿಯು ಇಂದಿಗೂ ಉಳಿದುಕೊಂಡು ಬಂದಿದೆ. ಯಕ್ಷಗಾನ, ಕಥಕ್ಕಳಿ ಮೊದಲಾದ ದೃಶ್ಯಪ್ರಯೋಗಗಳಲ್ಲಿ ಪ್ರಯುಕ್ತವಾಗುವ ರಾಗಸಾಮಗ್ರಿಯಲ್ಲಿ ಬಹುಪಾಲು ಚಾತುಃಸ್ವರ್ಯಕ್ಕೇ ಸೀಮಿತವಾಗಿರುವುದನ್ನು ನೋಡಬಹುದು. ಇಂತಹವುಗಳನ್ನು, ಅವು ಕರುಣಾರಸಸನ್ನಿವಿಷ್ಟಸಂದರ್ಭಗಳಲ್ಲಿ ಪ್ರಯುಕ್ತವಾದಾಗ, ಅವಕೃಷ್ಟಧ್ರುವಾ

192 ಮತಂಗಮುನಿ, ಉ. ಗ್ರಂ., ಪು. 59.

193 ಅದೇ ಗ್ರಂಥ, ಪ್ರಬಂಧಾಧ್ಯಾಯ, 397, ಪು. 143 ; 403, ಪು. 144, 411, ಪು. 145, 489, ಪು. 152 ಇತ್ಯಾದಿ.

ಗಳೆನ್ನಬಹುದು. ಎರಡನೆಯ ಸಾಕ್ಷ್ಯವನ್ನು ಅಭಿನವಗುಪ್ತನು ಒದಗಿಸುತ್ತಾನೆ. ಭರತನ ಪಾಠ್ಯಗುಣಗಳನ್ನು ವರ್ಣಿಸುವಾಗ ಸ್ವರಗಳನ್ನು ಹೆಸರಿಸಿರುವುದನ್ನು ವ್ಯಾಖ್ಯಾನ ಮಾಡುತ್ತಾ ಅವನು ಏಳಕ್ಕಿಂತ ಕಡಿಮೆಯಿದ್ದರೂ ಸ್ವರಗಳು ರಕ್ತಿಪ್ರತೀತಿಯನ್ನು ಗಾನದಲ್ಲಿ ಉಂಟುಮಾಡಬಲ್ಲವು, ಹೀಗೆ ಕೃತ್ರಿಮವಂಶದಲ್ಲಿ ತ್ರೈಸ್ವರ್ಯವೂ, ಭಿನ್ನಷಡ್ಜ-ಭಾಷಾರಾಗವಾದ ಕಾಲಿಂದಿಯಲ್ಲಿ ಚಾತುಃಸ್ವರ್ಯವೂ ಪ್ರಯೋಗವಾಗುವುದೆಂಬುದನ್ನು ಅವನು ಹೇಳುತ್ತಾನೆ.

ಪೂರ್ಣಸ್ವರತ್ವಾಭಾವಾದಂಗಾನಾಂ ಭೇದ ಇತಿ ಚೇತ್, ನ, ಅಪೂರ್ಣಸ್ವರತ್ವೇಽಪಿ ಗಾನತತ್ತ್ವಪ್ರತಿಜ್ಞಾನಾತ್, ಷಾಡವೌಡುವಿತಯೋಃ ತ್ರಿಚತುರಸ್ವರತ್ವೇ ಽಪಿ ಗಾನಪ್ರತೀತಿರ್ಭವತ್ಯೇವ, ಯಥಾ ಕೃತ್ರಿಮವಂಶಿಕಾಯಾಂ ತ್ರೈಸ್ವರ್ಯೇ, ಭಿನ್ನಷಡ್ಜಭಾಷಾಯಾಂ ಕಾಲಿಂದ್ಯಾಂ ಚಾತುಃಸ್ವರ್ಯೇ । [194]

ಭರತನೂ ಅಭಿನವಗುಪ್ತನೂ ಹೇಳುವ ಚಾತುಃಸ್ವರ್ಯಕ್ಕೂ ಮೇಲೆ ಲಕ್ಷಿಸಿದ ಚಾತುಃಸ್ವರ್ಯಕ್ಕೂ ವ್ಯತ್ಯಾಸವಿದೆ. ಸ್ಥಾಯಿಯಲ್ಲಿನ ಯಾವುದೇ ನಾಲ್ಕು ಸ್ವರಗಳ ಸಮುಚ್ಚಯವನ್ನು ಅವರು ಸ್ವರಾಂತರ, ಚಾತುಃಸ್ವರ್ಯ ಎನ್ನುತ್ತಾರೆ. ಈ ಸಮುಚ್ಚಯದಲ್ಲಿ ವರ್ಜ್ಯಸ್ವರಗಳ ವಿಸ್ತಾರವೂ ಸೇರಿರಬಹುದು. ಉದಾಹರಣೆಗೆ ಅಭಿನವಗುಪ್ತನು ಹೇಳುವ ಕಾಲಿಂದೀ ರಾಗವು ವಾಸ್ತವಿಕವಾಗಿ ಔಡುವರಾಗ; ರಿಷಭ ಪಂಚಮಗಳು ವರ್ಜ್ಯವಾಗಿ, ಗಾಂಧಾರವು ಅಂಶವಾಗಿಯೂ ಧೈವತವು ನ್ಯಾಸವಾಗಿಯೂ ಇರುವ ಅದರಲ್ಲಿ ನಿಷಾದವು ಅಲ್ಪವಾಗಿರುತ್ತದೆ. ಈ ಲಕ್ಷಣವನ್ನು ಮತಂಗ, ನಾನ್ಯದೇವ, ಜಗದೇಕಮಲ್ಲ, ಹರಿಪಾಲದೇವರುಗಳೆಲ್ಲರೂ ಕೊಡುತ್ತಾರೆ. [195] ನಿಷಾದವು ಅಲ್ಪವಾದುದರಿಂದ ಅದನ್ನು ವರ್ಜ್ಯವೆಂದೇ ತಿಳಿದು ಸ್ವರಾಂತರ ರಾಗವೆಂದು ಅಭಿನವಗುಪ್ತನು ಎಣಿಸಿರಬೇಕು. ಈ ಅರ್ಥವನ್ನು ನಾಲ್ಕು ಸ್ವರಗಳ ಪ್ರಯೋಗದಿಂದ ಏಳು ಸ್ವರಗಳ ಪ್ರಯೋಗವು ಬೆಳೆಯಿತು ಎಂಬ ಚಾರಿತ್ರಿಕ ದೃಷ್ಟಿಯಲ್ಲಿ ನೋಡಲು ಸಹಾಯಕವಾಗಿರಲು ಮಾತ್ರ ಇಲ್ಲಿ ಹೇಳಿದೆಯೇ ಹೊರತು, ಮತಂಗನು ಚಾತುಃಸ್ವರ್ಯಕ್ಕೆ ಕೊಟ್ಟ ಉದಾಹರಣೆಯನ್ನೇ ಇಲ್ಲಿ ಹೆಚ್ಚು ಪ್ರಸಕ್ತವಾದುದೆಂದು ತಿಳಿಯಬೇಕು.

ಚಾತುಃಸ್ವರ್ಯದ ಕಲ್ಪನೆಯು ಪ್ರಾಚೀನ ಭಾರತೀಯ ಸಂಗೀತದ ಲಕ್ಷ್ಯ-ಲಕ್ಷಣಗಳಲ್ಲಿ ಅತ್ಯಂತ ಪ್ರಮುಖಸ್ಥಾನವನ್ನು ಪಡೆದಿತ್ತೆಂಬುದು ಇನ್ನೂ ಒಂದು ಸಂಗತಿಯಿಂದ ಸಿದ್ಧವಾಗುತ್ತದೆ. ಪ್ರಥಮ ಚಾತುಃಸ್ವರ್ಯವಾದ ಸರಿಗಮ ಎಂಬ ವಿಸ್ತಾರದ ಮೊದಲು ಮತ್ತು ಕೊನೆಗಳಲ್ಲಿರುವ ಷಡ್ಜ ಮತ್ತು ಮಧ್ಯಮಗಳಲ್ಲಿ ಮಧ್ಯಮವು ಷಡ್ಜದ ವಿವರ್ತ ಸ್ವರೂಪವೆಂದೂ ಷಡ್ಜದ ಗುಣ ಮತ್ತು ಕರ್ತವ್ಯಗಳಲ್ಲಿ ಅತ್ಯಂತ ಸಾದೃಶ್ಯಸಾಮ್ಯಗಳನ್ನು ಹೊಂದಿದೆಯೆಂದೂ ಈಗಾಗಲೇ ಸೂಚಿಸಿದೆ. ಹೀಗೆ ಷಡ್ಜವು ಆಧಾರಸ್ವರವಾಗಿರುವಂತೆಯೇ ಮಧ್ಯಮವೂ ಆಗಬಲ್ಲದು. ಷಡ್ಜವು ಆಧಾರ ಸ್ವರವಾದಾಗ ಗೇಯಪ್ರವೃತ್ತಿಯೆಲ್ಲವೂ ಈ ನೀಚತಮ ಸ್ವರದೆಡೆಗೇ ಚಲನಾಪ್ರವೃತ್ತಿಯನ್ನು ಹೊಂದಿರುವುದರಿಂದ ಗೇಯವಸ್ತುವು ಊರ್ಧ್ವಗಮನ ಪ್ರವೃತ್ತಿಯನ್ನು ಪಡೆದಿರುವಂತೆ ಭಾಸವಾಗುತ್ತದೆ. ಎಂದರೆ ನೀಚತಮವಾದ ಸ್ವರದಿಂದ ಅದು ಅರಳಿ ಮೇಲುಮುಖವಾಗಿ ನಡೆದು ಅಲ್ಲಿಗೇ ಹಿಂತಿರುಗಿ ವಿರಮಿಸುತ್ತದೆ. ಆಗ ಷಡ್ಜವೇ ಪ್ರಥಮವೂ ಪ್ರಮುಖವೂ ಪ್ರಧಾನವೂ ಆದ ಸ್ವರವಾಗುತ್ತದೆ. ಎಲ್ಲಾ ಗೇಯವಸ್ತುವಿನ ಸಹಜವಾದ ಆದ್ಯಂತಗಳೂ ಇದೇ ಆಗುತ್ತದೆ. ಈಗ ರೂಢಿಯಲ್ಲಿರುವ ನಮ್ಮ ಸಂಗೀತವು ಈ ರೀತಿಯದು. ಈ ಕಾರಣದಿಂದಲೇ ಆಧಾರಸ್ವರವು ಸ್ಪಷ್ಟವಾಗದಿದ್ದ ಸಂದರ್ಭಗಳಲ್ಲಿಯೂ ಸಹ ನಾವು ಬೌದ್ಧಿಕ ಪ್ರಯತ್ನವಿಲ್ಲದೆಯೇ ನೀಚತಮ ಸ್ವರವನ್ನು ಗ್ರಹಿಸಿಕೊಂಡು ಇತರ ಸ್ವರಭಾವಗಳನ್ನು ಸ್ವಾಭಾವಿಕವಾಗಿಯೇ ಸ್ಫುರಿಸಿಕೊಳ್ಳುತ್ತೇವೆ. ಚಾತುಃಸ್ವರ್ಯದ ಅಂತ್ಯದಲ್ಲಿರುವ ಮಧ್ಯಮವು ಆಧಾರಸ್ವರವಾದರೆ ಇದಕ್ಕೆ ವ್ಯತಿರೇಕವಾದ ಪರಿಣಾಮವು ಉಂಟಾಗುತ್ತದೆ. ಗೇಯವಸ್ತುವಿನ ಚಲನೆಯೆಲ್ಲವೂ

194 ಅಭಿನವಗುಪ್ತ, ಉ. ಗ್ರಂ., ಭರತಮುನಿ, ಉ. ಗ್ರಂ., XVII, 102 ವಚನದ ಮೇಲೆ ವ್ಯಾಖ್ಯಾನ, ಪು. 385-386.
195 ರಾಮಕೃಷ್ಣಕವಿ, ಉ. ಗ್ರಂ., ಪು.132.

ಈ ಉಚ್ಚಸ್ವರದೆಡೆಗೆ ತೂಗುತ್ತಿರುವುದರಿಂದ ಅದಕ್ಕೆ ಅಧೋಗಮನ ಪ್ರವೃತ್ತಿಯಿರುವಂತೆ ಭಾಸವಾಗುತ್ತದೆ. ಆಗ ಮಧ್ಯಮವೇ ಪ್ರಧಾನವೂ ಪ್ರಥಮವೂ ಪ್ರಮುಖವೂ ಆದ ಸ್ವರವಾಗುತ್ತದೆ. ಆಗ ಗೇಯವಸ್ತುವಿನ ಕೇಂದ್ರವು ಅಂತರಿಕ್ಷದಲ್ಲಿರುವಂತೆ ಎನ್ನಿಸುತ್ತದೆ. ಈ ಎರಡು ಪ್ರವೃತ್ತಿಗಳನ್ನೇ ಪ್ರಾಚೀನ ಭಾರತೀಯ ಸಂಗೀತಶಾಸ್ತ್ರವು ಕ್ರಮವಾಗಿ ಷಡ್ಜ ಗ್ರಾಮ ಮತ್ತು ಮಧ್ಯಮಗ್ರಾಮಗಳಲ್ಲಿ ಹೇಳಿದೆ. ಇಂತಹ ದ್ವಂದ್ವಾಧಾರಸ್ವರಪದ್ಧತಿಯು ಇಡೀ ವಿಶ್ವಸಂಗೀತದಲ್ಲಿಯೇ ಅತ್ಯಂತ ಅಪರೂಪವಾದುದು. ಇದರ ಅಸ್ತಿತ್ವವನ್ನು ಕುರಿತು ಮುಂದೆ ಪುನಃ ಸಂಕ್ಷೇಪವಾಗಿ ಪ್ರಸ್ತಾಪಿಸಲಾಗುವುದು. ಮುಖ್ಯವಾಗಿ ಬಾಹ್ಯಪ್ರಭಾವಗಳಿಂದ ಇದು ಲುಪ್ತವಾಗಿಹೋಗಿ ಪ್ರಕೃತದಲ್ಲಿ ಷಡ್ಜಾಧಾರ-ಪದ್ಧತಿಯೇ ಏಕೈಕವಾಗಿ ಉಳಿದುಕೊಂಡಿದೆ.

ಭಗವಾನ್ ಭರತನು 'ಇತಿ ತಾವನ್ಮಯಾ ಪ್ರೋಕ್ತಾಃ ಸಮಾಜ್ಯಃ ಶ್ರುತಯೋ ನವ' ಎಂದು ಹೇಳಿದ ಮಾತಿನಲ್ಲಿರುವ ಒಂದು ವಿಶೇಷಾರ್ಥದ ಪ್ರಸ್ತಾಪದೊಡನೆ ಈ ಪಕ್ಷದ ವಿವೇಚನೆಯ ಉಪಸಂಹಾರ ಮಾಡಬಹುದು. ಈ ಮಾತಿನಿಂದ ಅವನು ಶ್ರುತಿಗಳು ಒಂಬತ್ತೇ ಎಂದು ಹೇಳಿರುವನೆಂದು ತಿಳಿಯಲಾಗದು. ಏಕೆಂದರೆ ಅವನೇ ಶ್ರುತಿನಿದರ್ಶನ ಸಂದರ್ಭದಲ್ಲಿ ಇಪ್ಪತ್ತೆರಡು ಶ್ರುತಿಗಳನ್ನು ಹೇಳಿದ್ದಾನಷ್ಟೆ : 'ಅತ್ರಾಶ್ರಿತಾ ದ್ವಾವಿಂಶತಿ ಶ್ರುತಯಃ ಸ್ವರಮಂಡಲಸಾಧಿತಾಃ', 'ಏವಮೇತೇನ ಶ್ರುತಿನಿದರ್ಶನೇನ ದ್ವೌಗ್ರಾಮಿಕ್ಯೌ ದ್ವಾವಿಂಶತಿಶ್ರುತಯಃ ಪ್ರತ್ಯವಗಂತವ್ಯಾಃ' ಮತ್ತು 'ತ್ರಿಸ್ರೋ ದ್ವೇ ಚತಸ್ರಶ್ಚ' ಮುಂತಾದ ಶ್ರುತಿವಿನಿಯೋಗ, ಇವುಗಳಲ್ಲಿ ಇದು ಸ್ಪಷ್ಟವಾಗಿದೆ. ಆದುದರಿಂದ 'ನವ' ಎಂಬ ಶಬ್ದಕ್ಕೆ ಇಲ್ಲಿ ವಿಶೇಷಾರ್ಥವನ್ನು ಕಲ್ಪಿಸಬೇಕು. ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿಗಳೆಂಬ ಪ್ರಮಾಣಗಳನ್ನು ಒಟ್ಟುಗೂಡಿಸಿದರೆ ಒಂಬತ್ತು ಶ್ರುತಿಗಳು ಉಂಟಾಗುತ್ತವೆಂಬುದು ಇಲ್ಲಿ ಅಕ್ಷರಾರ್ಥವು ಮಾತ್ರ. ಒಂದರಿಂದ ಒಂಬತ್ತರವರೆಗಿನ ಶ್ರುತಿಗಳನ್ನು ಎಣಿಸುವ ಈ ಸರಳ ಸಂಕಲನದ ಜ್ಞಾನಕ್ಕಾಗಿ ಮತಿಶೂರನಾದ ಭರತ ಮುನಿಯು ಇದನ್ನು ಬೋಧಿಸಿದ್ದಾನೆಂದು ತಿಳಿಯುವುದು ತಪ್ಪಾಗುತ್ತದೆ. ದ್ವಿಶ್ರುತಿಕ, ತ್ರಿಶ್ರುತಿಕ ಹಾಗೂ ಚತುಃ-ಶ್ರುತಿಕ ಸ್ವರಗಳಲ್ಲಿರುವ ಪ್ರತಿಯೊಂದು ಶ್ರುತಿಯೂ ಬೇರೆ ಬೇರೆ ಸ್ವಭಾವ, ಸ್ವರೂಪಗಳನ್ನುಳ್ಳದುದು, ಆದುದರಿಂದ ಯಾವುದೇ ತ್ರೈಸ್ವರ್ಯದಲ್ಲಿ ಒಟ್ಟು ಒಂಬತ್ತು ವಿಧವಾದ ಶ್ರುತಿಗಳಿರುತ್ತವೆ, ಇವು ಸ್ವರಸಪ್ತಕದ ಮತ್ತು ಸ್ವರಾಷ್ಟಕದ ನಿರ್ಮಿತಿಗೆ ಮೂಲಭೂತವಾದವುಗಳು, ಎಂಬ ಅರ್ಥವನ್ನು ಇಲ್ಲಿ ಗ್ರಹಿಸುವುದೇ ಯುಕ್ತವಾದುದು. ಹೀಗೆ ಮಾಡುವುದರಿಂದ ಪ್ರತಿಯೊಂದು ಶ್ರುತಿಗೂ ವ್ಯಕ್ತಿತ್ವ ವೈಶಿಷ್ಟ್ಯಗಳೂ, ವಿಶಿಷ್ಟಸಂಸ್ಕಾರ ಪ್ರದಾನ ಸಾಮರ್ಥ್ಯವೂ, ಸ್ವರಕ್ಕೆ ಸ್ವಸಂವೇದ್ಯತೆಯೂ ಅನುಮಿತಿಯಿಂದ ಸಿದ್ಧವಾಗುತ್ತವೆ. ಅಲ್ಲದೆ ಈ ಸ್ವರಪ್ರಮಾಣಗಳನ್ನು ಷಡ್ಜ, ರಿಷಭ ಮುಂತಾಗಿ ಹೆಸರಿಸದೆ ಚತುಃಶ್ರುತಿಕ, ತ್ರಿಶ್ರುತಿಕ, ದ್ವಿಶ್ರುತಿಕಗಳೆಂದು ಸಾಮಾನ್ಯ ನಾಮಗಳಾಗಿ ವ್ಯವಹರಿಸಿರುವುದರಿಂದ, ಇವುಗಳಿಗೆ ಸಾಮಾನ್ಯ ಗುಣವನ್ನೂ ಎಂದರೆ ಪುನರಭಿವ್ಯಕ್ತಿ, ಪುನರಾವರ್ತನ ಸಾಮರ್ಥ್ಯಗಳನ್ನೂ ತನ್ಮೂಲಕ ಊರ್ಧ್ವಸ್ಪರ್ಶನವನ್ನೂ, ಶ್ರುತಿಸಂಖ್ಯೆಯಮೂಲಕ ಇಯತ್ತೆಯಿಂದ ಪ್ರಮಾಣವನ್ನೂ, ವಿಕೃತಿಯಿಂದ ಅವಾಂತರ ಭೇದಗಳನ್ನೂ ಹೇಳಿದಂತಾಯಿತು. ದ್ವಾವಿಂಶತಿ ಶ್ರುತಿಗಳನ್ನೂ ಭರತನೇ ಹೇಳುವುದರಿಂದ ಈ ಒಂಬತ್ತೇ ಸ್ಥಾನಾಂತರದಲ್ಲಿ ಪುನರಭಿವ್ಯಕ್ತಿಯನ್ನು ಪಡೆದು ಇಪ್ಪತ್ತೆರಡು ಆಗುತ್ತವೆಂದು ಸೂಚಿಸಿದಂತಾಯಿತು. ಆದುದರಿಂದ ವಿಶ್ವಾವಸುವು ಹೇಳಿದ ಸ್ವರಗತ, ಅಂತರಗತ ಶ್ರುತಿಗಳನ್ನು ವಿವಕ್ಷಿಸಿದಂತಾಯಿತು. ಮೂರು ಸ್ಥಾಯಿಗಳನ್ನು ಭರತನು ಒಪ್ಪುವುದರಿಂದಲೂ ಈ ಎಲ್ಲಾ ಸ್ಥಾಯಿಗಳಲ್ಲಿಯೂ ಏಳೇ ಸ್ವರಗಳನ್ನು ಎಣಿಸಿರುವುದರಿಂದಲೂ ತ್ರೈಸ್ವ-ರ್ಯಕ್ಕೆ ಕಾರಣವಾದ ಪಂಚಮವಿಸ್ತಾರದ ಊರ್ಧ್ವಸ್ಪರ್ಶದಿಂದ ಇಪ್ಪತ್ತೆರಡಾಗಿಯೂ ಇಪ್ಪತ್ತೆರಡು ಶ್ರುತಿಗಳ ಎಂದರೆ ಅಷ್ಟಮಸ್ವರದ ವಿಸ್ತಾರದ ಊರ್ಧ್ವಸ್ಪರ್ಶದಿಂದ ಅರವತ್ತಾರಾಗಿಯೂ ಶಬಲಿತವಾಗುತ್ತವೆಂದೂ ತಿಳಿಯಬೇಕು.

ಹೀಗೆ ಷಡ್ಜವೆಂಬ ಚತುಃಶ್ರುತಿಕವಾದ ಆಧಾರಸ್ವರದಿಂದ ತ್ರೈಸ್ವರ್ಯ, ಚಾತುಃಸ್ವರ್ಯಗಳು, ಇವುಗಳಿಂದ ಕ್ರಮವಾಗಿ ಸ್ವರಸಪ್ತಕ, ಸ್ವರಾಷ್ಟಕಗಳು, ಇವುಗಳ ಮೂಲಕ ಸ್ಥಾಯಿಗಳು ಈ ಭವ್ಯವಾಗಿರುವ, ಮೂಲಭೂತ

ವಾಗಿರುವ ಸ್ವರಶಾಸ್ತ್ರಪ್ರಮೇಯವನ್ನು ಮುನಿ ವೇಣನೂ ಭಗವಾನ್ ಭರತನೂ ಹೇಳಿದ್ದಾರೆ. ಒಟ್ಟಿನಲ್ಲಿ ಇದು ಚಾರಿತ್ರಿಕದೃಷ್ಟಿಯಲ್ಲಿ ಶ್ರುತಿ, ಸ್ವರ, ಸ್ವರಪ್ರಮಾಣ, ಸ್ಥಾಯಿ ಮುಂತಾದ ಪ್ರಮೇಯಗಳು ಲಕ್ಷ್ಯದಲ್ಲಿಯೂ ಶಾಸ್ತ್ರದಲ್ಲಿಯೂ ಹೇಗೆ ಹುಟ್ಟಿ ಬೆಳೆದುವೆಂಬುದನ್ನು ತೋರಿಸುವ ಪಕ್ಷ.

## 7. ಶ್ರುತಿಗಳು ಇಪ್ಪತ್ತೆರಡು

ಶ್ರುತಿಗಳು ಇಪ್ಪತ್ತೆರಡೆಂಬ ಪಕ್ಷವನ್ನು ಹೆಚ್ಚುಕಡಿಮೆ ಎಲ್ಲಾ ಪ್ರಾಚೀನಭಾರತೀಯ ಗಾನಶಾಸ್ತ್ರಸೈದ್ಧಾಂತಿಕರೂ ಒಪ್ಪಿದ್ದಾರೆ. ಬೇರೆ ಬೇರೆ ಸಂಖ್ಯೆಯ ಶ್ರುತಿಗಳನ್ನು ಹೇಳಿದವರೂ ಕೇವಲ ಬೇರೆ ದೃಷ್ಟಿಗಳನ್ನು ಹೇಳಿದ್ದು, ಪರಮಾರ್ಥದಲ್ಲಿ ಇಪ್ಪತ್ತೆರಡನ್ನೇ ಹೇಗೆ ಸ್ವೀಕರಿಸುತ್ತಾರೆಂಬುದನ್ನು ಮೇಲೆ ಸ್ವಲ್ಪ ಸೂಚಿಸಿದೆ. ಹೀಗೆ ಅತ್ಯಂತ ಪ್ರಚಾರ ಮತ್ತು ಸಮ್ಮತಿಗಳು ದೊರತಿರುವುದು ಇದಕ್ಕೇ. ಆದುದರಿಂದ ಸೂತ್ರವೇ ತನ್ನ ಗ್ರಂಥದಲ್ಲಿ ಬೋಧನವಿಧಾನವಾಗಿರುವ ಭರತಮುನಿಯು ಇಪ್ಪತ್ತೆರಡನ್ನೇ ಹೇಳಿ ಉಳಿದವುಗಳನ್ನು ಉಪೇಕ್ಷಿಸಿದ್ದಾನೆ. ಇದಕ್ಕೆ ಕಾರಣವು ಅವನ 'ಪ್ರತ್ಯವಗಂತವ್ಯಾಃ' ಎಂದು ಶ್ರುತಿನಿದರ್ಶನಸಂದರ್ಭದಲ್ಲಿ ಹೇಳಿದ[196] ಮಾತಿನಲ್ಲಿದೆ. 'ಪ್ರತ್ಯವಗಂತವ್ಯಾಃ' ಎಂದರೆ ಇಯತ್ತೆಯಿಂದ ನಿರ್ಣಯವಾಗಿ ತಿಳಿಯಲ್ಪಡುವಂತಹವುಗಳು. ಆದುದರಿಂದ ಶ್ರುತಿವಿಷಯಕವಾದ ವಿವಿಧ ಮತಗಳಲ್ಲಿ ದ್ವಾವಿಂಶತಿಶ್ರುತಿಪಕ್ಷವೇ ಅತ್ಯಂತ ವೈಜ್ಞಾನಿಕವೂ, ಪ್ರಾಯೋಗಿಕವೂ, ಅತ್ಯಂತ ಗ್ರಾಹ್ಯವೂ, ಸಂಗೀತೋಪಯೋಗಿಯೂ ಆಗಿದೆ ಎಂಬ ಅರ್ಥವನ್ನು ಭರತನ ಈ ಮಾತಿನಿಂದ ಹೊರಡಿಸಬಹುದು. ಏಕೆಂದರೆ ಎಲ್ಲಾ ಸಂಗೀತಕ್ಕೂ ಮೂಲದ್ರವ್ಯವು ಸ್ವರ ಮತ್ತು ಸ್ಥಾಯಿ. ಇವೆರಡು ತತ್ತ್ವಗಳನ್ನು ಪ್ರಮಾಣಪೂರ್ವಕವಾಗಿ ಇಯತ್ತೆಯಿಂದ ಸ್ಥಾಪಿಸಿಕೊಡುವುದು ಶ್ರುತಿಯ ಕಲ್ಪನೆಯೇ—ಅದರಲ್ಲಿಯೂ ಇಪ್ಪತ್ತೆರಡು ಶ್ರುತಿಗಳೇ. ಆದುದರಿಂದಲೇ ಬಹುಶಃ ಎಲ್ಲಾ ಪ್ರಾಚೀನಾಚಾರ್ಯರೂ ಇದನ್ನೇ ಸ್ವೀಕರಿಸಿದರು. ಇದರ ಪ್ರಾಯೋಗಿಕ ತಥ್ಯತೆಯನ್ನು ತೋರಿಸಲೆಂದೇ ಭರತನು ಗ್ರಾಮದ ಲಕ್ಷಣವನ್ನು ಹೇಳಿದ ಕೂಡಲೇ, ತನ್ಮೂಲಕ ಸ್ವರ, ಸ್ವರವ್ಯವಸ್ಥೆ, ಸ್ವರಸಪ್ತಕ ಮತ್ತು ಸ್ವರಾಷ್ಟಕಗಳನ್ನು ವಿವಕ್ಷಿಸಿದ ಕೂಡಲೇ, ಇಪ್ಪತ್ತೆರಡು ಶ್ರುತಿಗಳು ಪ್ರತಿಯೊಂದು ಗ್ರಾಮದಲ್ಲಿರುತ್ತವೆಂಬ ಪ್ರಮೇಯವನ್ನು ಹೇಳಿ, ತಕ್ಷಣ ಇದಕ್ಕೆ ಪ್ರಮಾಣವನ್ನು ಶ್ರುತಿನಿದರ್ಶನ ಪ್ರಯೋಗದ ಮೂಲಕ ಒದಗಿಸಿದ್ದಾನೆ. ಹೀಗೆ ಪ್ರಮೇಯವನ್ನು ಮೊದಲು ಹೇಳಿ ಪ್ರಮಾಣವನ್ನು ಆಮೇಲೆ ಹೇಳುವುದು ವೈಜ್ಞಾನಿಕ ಕ್ರಮದ ಸಾರವೇ ಆಗಿದೆ. ಇದು ಭಾರತದಲ್ಲಿಯೂ ಪ್ರೌಢಪ್ರಾಚೀನ ವಿಧಾನವಾಗಿದ್ದು ಎಲ್ಲಾ ಪ್ರಮುಖ ದರ್ಶನಗಳ ಜಿಜ್ಞಾಸೆಯಲ್ಲೂ ಬಳಸಲ್ಪಟ್ಟಿದೆ. ಈ ಕ್ರಮವನ್ನೇ ಮತಂಗಶಾರ್ಙ್ಗದೇವಾದಿಗಳು ಮುಂದೆ ಅನುಸರಿಸಿದರು. ದ್ವಾವಿಂಶತಿಶ್ರುತಿಪಕ್ಷವನ್ನು ಮಂಡಿಸುವಾಗ ಮತಂಗನು ಅದಕ್ಕೆ ವಿಶೇಷವಾದ ಗೌರವವನ್ನು ಸಲ್ಲಿಸಿ, ಅದನ್ನು ಗ್ರಹಿಸುವವರನ್ನು 'ಮೀಮಾಂಸಾಮಾಂಸಲಿತಧಿಯೋ ಧೀರಾಃ' ಎಂದು ಪೂಜಿಸುತ್ತಾನೆ. ಗಾಢವೂ ಸೂಕ್ಷ್ಮವೂ ಆದ ಪರೀಕ್ಷಣದಲ್ಲಿ ಬಲಿಷ್ಠರಾದ, ಧೀರರಾದ, ವಿದ್ವಾಂಸರು ಎಂದು ಇದರ ಅರ್ಥ.

ತತ್ರ ಕೇಚಿನ್ ಮೀಮಾಂಸಾಮಾಂಸಲಿತಧಿಯೋ ಧೀರಾ ದ್ವಾವಿಂಶತಿಶ್ರುತೀರ್ಮನ್ಯಂತೇ । 171

ಈ ಪಕ್ಷವನ್ನು ಅವನು ಭರತನಿಂದಲೇ ಉದ್ಧರಿಸಿಕೊಳ್ಳಬಹುದಾಗಿತ್ತು. ಏಕೆಂದರೆ ಶ್ರುತಿನಿದರ್ಶನಕ್ರಮವನ್ನು ಅವನು ತೆಗೆದುಕೊಂಡಿರುವುದು ಭರತನಿಂದಲೇ; ಆದರೂ ಕೋಹಲನಿಂದ ಈ ಪಕ್ಷವನ್ನು ಅವನು ಗ್ರಹಿಸಿದ್ದಾನೆ.

ಯಥಾ ಚಾಹ ಕೋಹಲಃ— ದ್ವಾವಿಂಶತಿಂ ಕೇಚಿದುದಾಹರಂತಿ ಶ್ರುತೀಃ ಶ್ರುತಿಜ್ಞಾನವಿಚಾರದಕ್ಷಾಃ।

ಈ ಉಕ್ತಿಯಿಂದ ಕೋಹಲನೂ ದ್ವಾವಿಂಶತಿ ಶ್ರುತಿಪಕ್ಷವನ್ನು ತನ್ನ ಹಿಂದಿನವರಿಂದಲೇ ಸಂಗ್ರಹಿಸಿರುವುದು ಸ್ಪಷ್ಟವಾಗುತ್ತದೆ. ಅವನು ಹೇಳುವ ಮೂರು ಪಕ್ಷಗಳಲ್ಲಿಯೂ ಇದಕ್ಕೇ ವಿಶೇಷವಾದ ಪ್ರಾಧಾನ್ಯ, ಪೂಜ್ಯತೆ. ಎಂದೇ ಈ

196 ಭರತಮುನಿ, ಉ. ಗ್ರಂ., XXVIII, 26 ವಚನ, ಪು. 19.

ಅಭಿಮತವುಳ್ಳವರನ್ನು ಅವನೂ 'ಶ್ರುತಿಜ್ಞಾನವಿಚಾರದಕ್ಷ'ರೆಂದು ಗೌರವಿಸಿದ್ದಾನೆ. ಇದನ್ನು ಭರತನಿಂದಲೇ ಅವನು ಪಡೆದುಕೊಂಡಿದ್ದಾನೆಯೋ ಇಲ್ಲವೋ ಎಂಬುದನ್ನು ಸಾವಿರಾರು ವರ್ಷಗಳ ಈ ದೂರದಲ್ಲಿ ಈಗ ನಿರ್ಧರಿಸಲು ಸಾಧ್ಯವಿಲ್ಲ. ಕೋಹಲಮತವೆಂಬ ಅವನ ಉಪಲಬ್ಧಗ್ರಂಥದ ಹಸ್ತಪ್ರತಿಯಲ್ಲಿಯೂ ಇಪ್ಪತ್ತೆರಡು ಶ್ರುತಿಗಳ ಪಕ್ಷವನ್ನೇ ಏಕೈಕವಾಗಿ ಹೇಳಿದೆ ; ಅಲ್ಲಿ ಶ್ರುತಿಯ ಅರವತ್ತಾರು ಭೇದಗಳನ್ನಾಗಲೀ ಆನಂತ್ಯವನ್ನಾಗಲೀ ಹೇಳಿಲ್ಲ.[197] ಅರವತ್ತಾರು ಶ್ರುತಿಗಳ ಪಕ್ಷವನ್ನು ಕೇವಲ ಅನುಮಿತಿಯಿಂದ ಅಲ್ಲಿ ಪಡೆಯಬೇಕು. ಅಲ್ಲದೆ ಮತಂಗನಿಂದ ಉದ್ಧೃತವಾದ ಈ ಶ್ಲೋಕವೇ ಅಲ್ಲಿ ಕಂಡುಬರುವುದಿಲ್ಲ. ಭರತನಾದರೂ ತನ್ನ ಆಕರಗಳನ್ನು ಎಲ್ಲಿಯೂ ಹೆಸರಿಸುವುದಿಲ್ಲ. ಹೀಗೆ ಈ ದ್ವಾವಿಂಶತಿಶ್ರುತಿಪಕ್ಷವನ್ನು ಭರತಮುನಿಯೇ ಮೊದಲು ಹೇಳಿದನೋ, ಅದನ್ನೂ ಶ್ರುತಿನಿದರ್ಶನಪ್ರಯೋಗವನ್ನೂ ತನ್ನ ಪೂರ್ವಾಚಾರ್ಯರಿಂದ ಪಡೆದು ಹೇಳಿದನೋ ತಿಳಿಯುವುದಿಲ್ಲ. ಅಂತೂ ಈಗ ಪರಿಶೀಲಿಸುತ್ತಿರುವ ಒಂಬತ್ತು ಪಕ್ಷಗಳಲ್ಲಿಯೂ ಇದೇ ಅತ್ಯಂತ ಪ್ರಾಚೀನವಾದುದೆಂದು ತೋರುತ್ತದೆ. ಪ್ರಾಚೀನತಮವಲ್ಲದಿದ್ದರೆ ಕಡೆಯ ಪಕ್ಷ ಗಾನವ್ಯವಹಾರದ ದೃಷ್ಟಿಯಿಂದ ಅತ್ಯಂತ ಸಮೀಚೀನವೆಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ ಇದರಿಂದಲೇ ಸ್ಥಾಯಿಯ ಭಾವವು ಪ್ರತ್ಯಕ್ಷವಾಗಿ ಉಂಟಾಗುವುದು; ಇದರಿಂದಲೇ ಗ್ರಾಮದ ಕಲ್ಪನೆ, ಅದರಲ್ಲಿನ ಸ್ವರಪ್ರಮಾಣಗಳ ಇಯತ್ತೆಯ ಕಲ್ಪನೆ ; ಇದರಿಂದಲೇ ವಾದಿಯೇ ಮೊದಲಾದ ಸ್ವರಚಾತುರ್ವಿಧ್ಯದ ಪ್ರಮೇಯ ; ಗ್ರಾಮದಿಂದ ಮೂರ್ಛನೆ, ತಾನ, ಜಾತಿಗಳು ; ಜಾತಿಗಳಿಂದ ಗೀತಪ್ರಕಾರಗಳು, ರಾಗಗಳು ; ಹೀಗೆ ಗಾನಪ್ರಪಂಚಸರ್ವಸ್ವದ ಅಡಿಪಾಯವಾಗಿ ಈ ಇಪ್ಪತ್ತೆರಡು ಶ್ರುತಿಗಳ ಪಕ್ಷವಿದೆ. ಶಾಸ್ತ್ರೀಯ ಪ್ರಮೇಯಗಳ ಶ್ರೇಣಿಯಲ್ಲಿ ಮೂಲಭೂತವಾಗಿದ್ದು ಪ್ರಯೋಗವೆಂಬ ಪ್ರತ್ಯಕ್ಷಪ್ರಮಾಣದ ಮೂಲಕ ತಥ್ಯತೆಯನ್ನು ತಾಳೆನೋಡಿ ತೀರ್ಮಾನಿಸಬಹುದಾದ ಪ್ರಮೇಯವೆಂದರೆ ಈ ದ್ವಾವಿಂಶತಿ ಶ್ರುತಿಪಕ್ಷವೇ. ಈ ಕಾರಣದಿಂದಲೇ ನಮ್ಮ ಸಂಗೀತಶಾಸ್ತ್ರದ ತ್ರಿಮೂರ್ತಿಗಳಾದ ಭರತ, ಮತಂಗ, ಶಾರ್ಙ್ಗದೇವರು ಈ ಪ್ರಯೋಗವನ್ನು ವಿವರಿಸಿದ್ದಾರೆ. ಭರತಮುನಿ, ಅಭಿನವಗುಪ್ತ, ಶಾರ್ಙ್ಗದೇವ—ಇವರುಗಳ ಕಾಲದ ವಿಸ್ತಾರದಲ್ಲಿ ಈ ಪ್ರಯೋಗದ ವಿಧಾನ, ತಂತ್ರ ಮುಂತಾದವುಗಳು ಹೇಗೆ ವ್ಯತ್ಯಾಸವಾಗುತ್ತಾ ಬಂದವೆಂದು ಶ್ರುತಿನಿದರ್ಶನದ ವ್ಯಾಖ್ಯಾನಸಂದರ್ಭದಲ್ಲಿ ಹೇಳಿದೆ. ಆದರೂ ಇಪ್ಪತ್ತೆರಡು ಶ್ರುತಿಗಳ ಇಯತ್ತೆಯು ವ್ಯತ್ಯಾಸವಾಗಲಿಲ್ಲವೆಂಬುದನ್ನು ಗಮನಿಸಿದರೆ ಈ ಪಕ್ಷವು ಅತ್ಯಂತ ಸುದೃಢವೂ ಪ್ರಾಯೋಗಿಕವೂ ತಾತ್ತ್ವಿಕವೂ ಆಗಿರುವ ಬುನಾದಿಯ ಮೇಲೆ ನಿಂತಿರಬೇಕೆಂಬುದು ಸುಲಭವಾಗಿಯೇ ತಿಳಿಯುತ್ತದೆ.

ಭರತನು ಇಪ್ಪತ್ತೆರಡು ಶ್ರುತಿಗಳನ್ನು ಹೇಳಿರುವ ರೀತಿಯನ್ನಿಲ್ಲಿ ಸ್ವಲ್ಪ ವಿಮರ್ಶಿಸಬೇಕು. ಅವನು ಇಪ್ಪತ್ತೆರಡೇ ಶ್ರುತಿಗಳನ್ನು ಏಕೆ ಹೇಳಿದ್ದಾನೆಂಬುದನ್ನು ಈಗಾಗಲೇ ಸೂಚಿಸಿದೆ. ಅವನು ಈ ಶ್ರುತಿಸಂಖ್ಯೆಯನ್ನು ಅನ್ವಯಿಸಿ ಹೇಳಿರುವುದು ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳಿಗೆ. ಇದರಿಂದ ಏಳು ಸ್ವರಗಳ ಒಟ್ಟು ವ್ಯಾಪ್ತಿಯನ್ನೂ, ಅವುಗಳಲ್ಲಿ ಪ್ರತಿಯೊಂದರ ಪ್ರಮಾಣವನ್ನೂ, ಲಕ್ಷ್ಯಪ್ರಸಿದ್ಧವಾದ ಎಲ್ಲಾ ಸ್ವರಗಳ ಮತ್ತು ಅವುಗಳ ಅವಾಂತರ ಭೇದಗಳ ಸ್ಥಾನಗಳನ್ನೂ ಇಪ್ಪತ್ತೆರಡು ಶ್ರುತಿಗಳ ಅನುಕ್ರಮ ಮತ್ತು ವ್ಯಾಪ್ತಿಯಲ್ಲಿ ಅಡಗಿಸಿ ಹೇಳುವುದು ಅವನು ಬಳಸುವ ಬೋಧನವಿಧಾನ. ಇದಕ್ಕೆಂದು ಅವನು ಪ್ರಕೃತಿಭೂತವಾಗಿ ದೊರೆಯುವ ಸ್ವರಗಳು ಏಳೇ, ಇವುಗಳಲ್ಲಿ ಐದನೆಯದು ಅಪಕೃಷ್ಟವಾಗಿ ವಿಕೃತವಾಗಬಲ್ಲುದು, ಈ ವಿಕೃತಿಯಿಂದ ಬೇರೊಂದು ರೀತಿಯ ಸ್ವರವ್ಯವಸ್ಥೆಯು ಸಾಧ್ಯ ಎಂದು ಮುಂತಾದ ಊಹಾಪ್ರತಿಜ್ಞೆಗಳನ್ನು ಸ್ವೀಕರಿಸುವುದು ಅನಿವಾರ್ಯವಾಯಿತು. ಆದುದರಿಂದ ಗ್ರಾಮವನ್ನು ಹೇಳಿದ ಮೇಲೆಯೇ 'ಅತ್ರಾಶ್ರಿತಾ ದ್ವಾವಿಂಶತಿಶ್ರುತಯಃ ಸ್ವರಮಂಡಲಸಾಧಿತಾಃ' ಎಂದು ಅವನು ಹೇಳುವುದು. ಹೀಗೆ ಷಡ್ಜಗ್ರಾಮವೆಂಬ ರೀತಿಯಲ್ಲಿ ಸ್ವರವ್ಯವಸ್ಥೆಯನ್ನುಳ್ಳ ಮತ್ತು ಮಧ್ಯಮಗ್ರಾಮವೆಂಬ ರೀತಿಯಲ್ಲಿ ಸ್ವರವ್ಯವಸ್ಥೆಯನ್ನುಳ್ಳ ಸ್ವರಸಪ್ತಕಗಳಿಗೆ, ಅವುಗಳಲ್ಲಿರುವ ಸ್ವರವ್ಯವಸ್ಥೆಗೆ,

197 ಕೋಹಲ, ಕೋಹಲಮತಮ್, ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರದ ಹಸ್ತಪ್ರತಿ, ಪು. 1-3.

ಮಾತ್ರ ಇಪ್ಪತ್ತೆರಡು ಶ್ರುತಿಗಳ ಇಯತ್ತೆಯನ್ನು ಅವನು ಹೇಳಿದಂತಾಗುತ್ತದೆ. ಅಲ್ಲದೆ ಆಧಾರಸ್ವರವಾದ ಷಡ್ಜವನ್ನು (ಷಡ್ಜವು ಆಧಾರಸ್ವರವೆಂದು ಸಹ ಭರತನು ಎಲ್ಲಿಯೂ ಹೇಳಿಲ್ಲ,) ಯಾವುದೇ ಧ್ವನಿಮಟ್ಟದಲ್ಲಿ ಇಟ್ಟುಕೊಂಡರೂ ಈ ಷಡ್ಜಗ್ರಾಮದ ಸ್ವರಸಪ್ತಕದಲ್ಲಿನ ವಿವಿಧ ಸ್ವರಗಳ ಪರಸ್ಪರ ಪ್ರಮಾಣಗಳು ಮತ್ತು ಒಟ್ಟು ಪ್ರಮಾಣವು ಒಂದೇ ಆಗಿರುತ್ತದೆ ಎಂದು ಹೇಳಬೇಕಾಗುತ್ತದೆ. ಆದರೆ ಈ ನೈಯತ್ಯವನ್ನು ಈ ಅನುಕ್ರಮದಲ್ಲಿರುವ ಯಾವುದಾದರೂ ಏಳು ಸ್ವರಗಳ ಒಂದು ದತ್ತ ಸಮುಚ್ಚಯಕ್ಕೆ ಹೇಳಬೇಕೇ ಹೊರತು ಷಡ್ಜಗ್ರಾಮದ ಸ್ವರವ್ಯವಸ್ಥೆಯನ್ನೇ ಪಡೆದುಕೊಂಡಿರುವ ಆದರೆ ಷಡ್ಜವು ಬೇರೆ ಬೇರೆ ಧ್ವನಿಮಟ್ಟಗಳಲ್ಲಿರುವ ಬೇರೆ ಬೇರೆ ಸ್ವರಸಪ್ತಕಗಳಿಗೆ ಹೇಳುವಂತಿಲ್ಲ. ಏಕೆಂದರೆ ಭರತನು ಈ ಶ್ರುತಿನಿದರ್ಶನವನ್ನು ಸ್ಥಾಯಿಗೆ ಅನ್ವಯಿಸಿ ಹೇಳಲಿಲ್ಲ; ಎದೆ, ಕಂಠ ಮತ್ತು ಶಿರಸ್ಸೆಂಬ ಮೂರು ಸ್ಥಾಯಿಗಳುಂಟು ಎಂದು ಕಾಕುವಿಧಾನದಲ್ಲಿ ಅವನು ಹೇಳಿದ್ದಾನೆಯೇ ಹೊರತು ಈ ಮೂರರಲ್ಲಿಯೂ ಇದೇ ಸ್ವರಗಳು ಅತ್ಯಂತ ಸಾದೃಶ್ಯ ಸಾಮ್ಯಗಳೊಡನೆ ಪುನರಾವರ್ತಿತವಾಗುತ್ತವೆ ಎಂಬುದನ್ನೇನೂ ಅವನು ಇಡೀ ನಾಟ್ಯಶಾಸ್ತ್ರದಲ್ಲಿಯೇ ಹೇಳಲಿಲ್ಲ. ಈ ಮಾತನ್ನು ನಾವು ಕೇವಲ ಅನುಮಿತಿಯಿಂದ ಹೇಳಬೇಕಾಗುತ್ತದೆ, ಅಷ್ಟೆ. ಸ್ಥಾಯಿಸಂಬಂಧಿತವಲ್ಲದುದರಿಂದ ದತ್ತ ಆಧಾರಸ್ವರದ ಧ್ವನಿಮೂಲವನ್ನು ಅವಲಂಬಿಸಿದ ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳಿಗೆ ಮಾತ್ರ ಈ ಲಕ್ಷಣವು ಅನ್ವಿತವಾಗುತ್ತದೆ. ಕಡೆಯ ಸಾರಣದಲ್ಲಿ ಷಡ್ಜವು ನಿಷಾದವನ್ನು ಪ್ರವೇಶಿಸುವಂತೆ ಇಳಿಸಬೇಕು ಎಂಬ ಮಾತಿನಿಂದ ಸ್ಥಾನಾಂತರದಲ್ಲಿ ನಿಷಾದಪ್ರಾಪ್ತಿಯೂ ಆದುದರಿಂದ ಸ್ವರದ ಆವರ್ತಕತ್ವವೂ ಅನುಮಾನದಿಂದ ಸಿದ್ಧವಾದರೂ ಭರತಮುನಿಯು ಶ್ರುತಿನಿದರ್ಶನದಲ್ಲಿ ಪ್ರತಿಜ್ಞೆಮಾಡುವುದೂ ಸಾಧಿಸುವುದೂ ಗ್ರಾಮದಲ್ಲಿನ ಶ್ರುತಿವಿನಿಯೋಗ, ಗ್ರಾಮದ ವಿಸ್ತಾರಕ್ಕೆ ಶ್ರುತಿಪ್ರಮಾಣಗಳನ್ನೇ ಹೊರತು ಸ್ಥಾಯಿಯ ಸ್ವರವ್ಯವಸ್ಥೆ, ಪ್ರಮಾಣ, ಶ್ರುತಿವಿನಿಯೋಗ ಮುಂತಾದವುಗಳನ್ನಲ್ಲ. ಇದನ್ನು ಮೊದಲು ಮಾಡಿದ್ದು ಶ್ರೀ ಶಾರ್ಙ್ಗದೇವನೇ ಎಂದು ಈಗಾಗಲೇ ಹೇಳಿದೆ. ಸ್ಥಾಯಿಗೆ ಅನ್ವಯಿಸಿ ಹೇಳದಿರುವುದರಿಂದ ಒಂದು, ಎರಡು, ಮೂರು, ನಾಲ್ಕು, ಒಂಬತ್ತು, ಅರವತ್ತಾರು ಎಂದು ಮುಂತಾದ ಪಕ್ಷಗಳ ವಿವೇಚನೆಗೆ ಎಡೆಯೇ ಇಲ್ಲ. ವಿಶ್ವಾವಸುವಿನ ಸ್ವರಶ್ರುತಿ, ಅಂತರಶ್ರುತಿ ಎಂಬ ಶ್ರುತಿವಿಭಾಗವೊಂದನ್ನು ಇದಕ್ಕೆ ಅನ್ವಯಿಸಿ ಹೇಳಬಹುದು. ಶ್ರೀ ಶಾರ್ಙ್ಗದೇವನು ಈ ತಾಂತ್ರಿಕದೋಷಗಳನ್ನು ಗಮನಿಸಿಯೇ ಶಾಸ್ತ್ರದಲ್ಲಿ ಶ್ರುತಿಗಳಿಗೆ ಗ್ರಾಮವು ಮಾತೃಕೆ(matrix)ಯಾಗುವುದನ್ನು ತಪ್ಪಿಸಿ ಸ್ಥಾಯಿಯನ್ನು ಮಾತೃಕೆಯನ್ನಾಗಿ ಮಾಡಿದ್ದಾನೆ. ಆದುದರಿಂದಲೇ ಈ ಒಂಬತ್ತು ಪಕ್ಷಗಳ ವಿಮರ್ಶೆಯನ್ನು ಅವನ ಜಿಜ್ಞಾಸಾಕ್ರಮದ ಪರಿಮಿತಿಯಲ್ಲಿದೆಯೆಂದು ಇಲ್ಲಿ ಸೇರಿಸಲು ಸಾಧ್ಯವಾಯಿತು.

ಭಗವಾನ್ ಭರತಮುನಿ ಮತ್ತು ನಿಃಶಂಕ ಶಾರ್ಙ್ಗದೇವರ ದ್ವಾವಿಂಶತಿಶ್ರುತಿಮಂಡನ ವಿಧಾನದಲ್ಲಿ ಇನ್ನೂ ಒಂದು ಮುಖ್ಯ ಭಿನ್ನತೆಯನ್ನಿಲ್ಲಿ ಗಮನಿಸಬೇಕು. ಭರತಮುನಿಯು ಸ್ವರವ್ಯವಸ್ಥೆಯನ್ನೂ ಗ್ರಾಮವನ್ನೂ ಪಡೆದುದು ಇಪ್ಪತ್ತೆರಡು ಸಂಖ್ಯೆಯ ಶ್ರುತಿಗಳಿಂದ. ಇವನ ಕ್ರಮದಲ್ಲಿ ಸ್ವರದ ಊರ್ಧ್ವಸ್ಪರ್ಶವೇ ಮೊದಲಾದ ತತ್ತ್ವಗಳನ್ನೂ ಶ್ರುತಿಯ ಸ್ವರಗತತ್ವ, ಅಂತರಗತತ್ವ, ಶ್ರುತಿಯ ಸಂಸ್ಕಾರಪ್ರದಾನ, ತನ್ನ ಅಂತಿಮ ಶ್ರುತಿಯಲ್ಲಿ ಸ್ವರಕ್ಕೆ ಸ್ವಸಂವೇದ್ಯತೆ ಮೊದಲಾದ ತತ್ತ್ವಗಳನ್ನು ಅಭಿನವಗುಪ್ತನೂ ಮತ್ತು ಇತರ ಶಾಸ್ತ್ರಕಾರರೂ ಹೊರಡಿಸಿದ ಅರ್ಥಾಂತರ, ಅರ್ಥವೈಪರೀತ್ಯ, ಅರ್ಥವಿಸ್ತಾರ ಮುಂತಾದವುಗಳಿಂದ ಪಡೆಯಬೇಕೇ ಹೊರತು ಭರತಮುನಿಯು ಹೇಳಿದ ಇಪ್ಪತ್ತೆರಡು ಎಂಬ ಸಂಖ್ಯೆಯಿಂದಲ್ಲ. ಈ ಸಂಖ್ಯೆ ಕೇವಲ ಭೌತಿಕಪ್ರಮಾಣವನ್ನು ತಿಳಿಸಬಲ್ಲುದೇ ಹೊರತು ಶ್ರುತಿವಿಷಯಕವಾದ ಯಾವ ತತ್ತ್ವ, ಪ್ರಮೇಯಗಳ ಸಿದ್ಧಾಂತಕ್ಕೂ ಎಡೆನೀಡುವುದಿಲ್ಲ. ಆದುದರಿಂದಾಗಿ ವಿವಿಧ ಸ್ವರಗಳ ವ್ಯಕ್ತಿತ್ವ, ವೈಶಿಷ್ಟ್ಯಗಳನ್ನು ಈತನ ಮಾತಿನಿಂದ ಹೊರಡಿಸಲಾಗುವುದಿಲ್ಲ. ಅಷ್ಟೇ ಅಲ್ಲದೆ ಇಪ್ಪತ್ತೆರಡು ಶ್ರುತಿಗಳನ್ನು ಕೇವಲ ಸಂಖ್ಯೆಯಿಂದ ಹೇಳಿದಾಗ ಅವು ಪರಸ್ಪರವಾಗಿ ಸಮವಾಗಿರುವುವೆಂದೇ ಮೊದಲು

ಭಾಸವಾಗುತ್ತದೆ. ಇದು ಅನುಪಪನ್ನವಾದ ಅನುಮಿತಿಯೆಂದು ಮುಂದೆ ತೋರಿಸಲಾಗುವುದು. ಭರತಮುನಿಯು ಶ್ರುತಿಗಳ ಪರಸ್ಪರ ಭೌತಿಕಸಮಾನತೆಯನ್ನು ವಿವಕ್ಷಿಸಿರಲಿ, ಇಲ್ಲದಿರಲಿ, ಆಧುನಿಕರನೇಕರು ಈ ಮಾತಿಗೆ ಈ ಅರ್ಥವನ್ನೇ ಹೊಂದಿಸಲು ತೊಡಗಿ ಸಂಗೀತಶಾಸ್ತ್ರದಲ್ಲಿ ಅನರ್ಥವನ್ನು ಪಡೆಯುತ್ತಿದ್ದಾರೆ. ಶ್ರುತಿಗಳು ಪರಸ್ಪರ ಗಳಲ್ಲವೆಂಬುದನ್ನು ಮೊದಲು ಸ್ಪಷ್ಟವಾಗಿ ಹೇಳಿದವನು ದತ್ತಿಲಮುನಿ. ಮನುಷ್ಯರ ಎದೆಯಲ್ಲಿ ಇಪ್ಪತ್ತೆರಡು **ವಿಧದ** ಧ್ವನಿಗಳು ಹುಟ್ಟುತ್ತವೆ, ಎಂದು ಅವನು ಹೇಳುತ್ತಾನೆ :

ನೃಣಾಮುರಸಿ ಮಂದ್ರಸ್ತು ದ್ವಾವಿಂಶತಿವಿಧೋ ಧ್ವನಿಃ । 50

ಶಾರ್ಙ್ಗದೇವನು ಎಂದಿನಂತೆ ನಿಷ್ಕೃಷ್ಟಶಾಸ್ತ್ರೀಯ ವಿವೇಚನೆಯ ಸಂದರ್ಭವನ್ನು ಬಳಸಿಕೊಂಡು ನಾದದ ಇಪ್ಪತ್ತೆರಡು **ಭೇದ**ಗಳಿವೆ, ಅವುಗಳಿಗೆ ಶ್ರುತಿಗಳೆಂದು ಹೆಸರು, ಎನ್ನುತ್ತಾನೆ :

ತಸ್ಯ(= ನಾದಸ್ಯ) ದ್ವಾವಿಂಶತಿರ್ಭೇದಾಃ ಶ್ರವಣಾಚ್ಛ್ರುತಯೋಮತಾಃ । 198

ಇವರಿಬ್ಬರೂ ಕಂಠ ಮತ್ತು ಶಿರಸ್ಸುಗಳಲ್ಲಿ ಬೇರೆ ಬೇರೆಯಾಗಿ ಇಪ್ಪತ್ತೆರಡು ಶ್ರುತಿಗಳಿರುತ್ತವೆಂದೂ ಒಪ್ಪಿಕೊಳ್ಳುತ್ತಾರೆ. ಇಲ್ಲಿ ಗಮನಿಸಬೇಕಾದುದು ಏನೆಂದರೆ ಇಬ್ಬರೂ ಶ್ರುತಿಯು ಇಪ್ಪತ್ತೆರಡು ವಿಧ, ಇಪ್ಪತ್ತೆರಡು ಭೇದ ಎಂದಿರುವುದು. ಆದುದರಿಂದ ಇವುಗಳಲ್ಲಿ ಪ್ರತಿಯೊಂದೂ ಉಳಿದವುಗಳಿಂದ ಬೇರೆಯಾದುದು ; ಈ ಭಿನ್ನತೆಯು ಪ್ರಮಾಣ, ಸ್ವಭಾವ, ಕ್ರಿಯೆ ಮುಂತಾದವುಗಳಲ್ಲಿರಬಹುದು. ಆದುದರಿಂದ ಪ್ರತಿಯೊಂದು ಶ್ರುತಿಗೂ ಸ್ಥಾಯಿಯಲ್ಲಿ ಪ್ರತ್ಯೇಕ ಸ್ಥಾನಮಾನಗಳು ದೊರೆತು ಸ್ವರದ ವೈಶಿಷ್ಟ್ಯ, ವ್ಯಕ್ತಿತ್ವಗಳಿಗೂ ಸ್ವರದ ಸ್ವಸಂವೇದ್ಯತೆಗೂ ಹೇತುವಾಗಲು ಅವಕಾಶವಾಗುತ್ತದೆ.

ಅಲ್ಲದೆ ಈ ವ್ಯಕ್ತಿಗತವೈಶಿಷ್ಟ್ಯವು ಪ್ರತಿಯೊಂದು ಶ್ರುತಿಯಲ್ಲಿಯೂ ಹಿಂದಿನ ಶ್ರುತಿ ಅಥವಾ ಶ್ರುತಿಗಳು ನೀಡಿದ ಸಂಸ್ಕಾರಗಳ ಸಂಕಲನಸ್ವರೂಪದ್ದು ಎಂದೂ ಅರ್ಥವನ್ನು ಇಲ್ಲಿ ಹೇಳಬಹುದು. ಆಗ ಮೇಲೆ ಹೇಳಿದ ಚಾತುಃಸ್ವರ್ಯವಾದದಲ್ಲಿ ವಿವೇಚಿಸಲಾಗಿರುವ ಸ್ವರದ ತ್ರಿವಿಧವಾದ ಊರ್ಧ್ವಸ್ಪರ್ಶವೂ ವಾದಿಸಂವಾದಿವಿವಾದಿ ಅನುವಾದಿಭಾವಗಳೂ ನೇರವಾಗಿ ಸಿದ್ಧವಾಗುತ್ತವೆ. ಚಾತುಃಸ್ವರ್ಯದಲ್ಲಿ ಪಂಚಮಭಾವದಲ್ಲಿ, ಎಂದರೆ ಹದಿಮೂರನೆಯ ಶ್ರುತಿಯ ದೂರದಲ್ಲಿ, ಊರ್ಧ್ವಸ್ಪರ್ಶಮಾಡಿದ ಶ್ರುತಿಗೆ ಅಥವಾ ಸ್ವರಕ್ಕೆ ಸಾದೃಶ್ಯಸಾಮ್ಯಗಳನ್ನೂ ಸ್ಥಾನಾಂತರದಿಂದ ಹುಟ್ಟಿದ ವೈದೃಶ್ಯವನ್ನೂ ಇಲ್ಲಿ ಒಟ್ಟುಗೂಡಿಸಿ ಮೊತ್ತದಲ್ಲಿ ಭಿನ್ನತ್ವವನ್ನು ಹೇಳಿದ ಹಾಗಾಗುತ್ತದೆ. ಚಾತುಃಸ್ವರ್ಯವಾದವು ಸ್ವರಾಷ್ಟಕವು ಬೆಳೆಯುತ್ತಿರುವಾಗಿನ ಅವಸ್ಥೆಯನ್ನು ಹೇಳಿದರೆ ದ್ವಾವಿಂಶತಿಶ್ರುತಿಪಕ್ಷವು ಆ ಬೆಳವಣಿಗೆಯು ಮುಗಿದು ಸ್ವರಾಷ್ಟಕವು ಏಕಾಂಡವಾಗಿ ಸಮಗ್ರಸ್ವರೂಪದಲ್ಲಿರುವ ಅವಸ್ಥೆಯನ್ನು ಹೇಳುತ್ತದೆ. ಆದುದರಿಂದ ಎರಡಕ್ಕೂ ಪರಮಾರ್ಥದಲ್ಲಿ ವ್ಯತ್ಯಾಸವೇನಿಲ್ಲ. ಅಲ್ಲದೆ ಸ್ಥಾಯಿಯನ್ನು ಗಾನವ್ಯವಹಾರದ ಮೂಲದ್ರವ್ಯವೆಂದಿಟ್ಟು ಕೊಂಡರೆ,—ಇದು ಅತ್ಯಂತ ಸಹಜವಾದ ಪ್ರವೃತ್ತಿ, ಲೋಕಪ್ರಸಿದ್ಧವಾದ ರೀತಿ,—ಆಗ ಶ್ರುತಿಯೆಂಬುದಕ್ಕೆ ಅಭಿನವಗುಪ್ತನೂ ಶಾರ್ಙ್ಗದೇವನೂ ಕೊಟ್ಟ ನೈರಂತರ್ಯ, ಧ್ವನ್ಯಂತರಾಶ್ರುತಿ, ಸ್ವರತ್ವಪ್ರಾಪ್ತಿ ಮೊದಲಾದ ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡರೆ, ಸ್ಥಾಯಿಯಲ್ಲಿ ಇಪ್ಪತ್ತೆರಡಲ್ಲದೆ ಇನ್ನು ಯಾವ ಸಂಖ್ಯೆಯ ಶ್ರುತಿಗಳೂ ಪ್ರಾಯೋಗಿಕವಾಗಿ ಸಿದ್ಧವಾಗಲಾರವು. ಆದುದರಿಂದಲೇ ಈ ಮತಕ್ಕೆ ಇಷ್ಟು ಸಮ್ಮತಿ, ಇಷ್ಟು ಮಾನ್ಯತೆ. ಎಂದೇ ಅಭಿನವಗುಪ್ತನು ಹೀಗೆ ಹೇಳುತ್ತಾನೆ :

ನನು ಸ್ಥಾನಭೇದೇನ ಷಟ್‌ಷಷ್ಟಿಃ ತತ್ಕಥಂ ದ್ವಾವಿಂಶತಿರಿತ್ಯಾಹ—**ಸ್ವರಮಂಡಲಸ್ಯ** ಸ್ವರಸಮೂಹಸ್ಯ ಸಪ್ತಕಸ್ಯ ದ್ವಾವಿಂಶತ್ಯೈವ ಸಿದ್ಧಿಃ । 96

---

198 ಶಾರ್ಙ್ಗದೇವ, ಉ. ಗ್ರಂ., I, 3, 8.

**3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ**

ಕಲ್ಲಿನಾಥನು ಈ ಎಲ್ಲಾ ಒಂಬತ್ತು ಪಕ್ಷಗಳಲ್ಲಿಯೂ ದ್ವಾವಿಂಶತಿಶ್ರುತಿಪಕ್ಷವೇ ಅತ್ಯಂತ ಸಾಧುವಾದುದೆಂದು ವಾದಿಸಿ ಅದಕ್ಕೆ ಈ ಕಾರಣಗಳನ್ನು ಕೊಡುತ್ತಾನೆ :

1. ಈ ಇಪ್ಪತ್ತೆರಡೇ ರಣನ ಅನುರಣನಗಳೆರಡನ್ನೂ ಪಡೆದಿರುತ್ತವೆ.

2. ಸ್ವರಶ್ರುತಿಗಳಲ್ಲಿ ಸಾಕ್ಷಾತ್ತಾಗಿ ಅನುಭವಕ್ಕೆ ಬರುವ ಭೇದವನ್ನು ನಿರಾಕರಿಸದೆ ಈ ಭೇದವನ್ನು ಒಪ್ಪುತ್ತದೆ.

3. ಸಪ್ತಸ್ವರಗಳೇ ಪುನರಾವರ್ತಿತವಾಗಿ ಗುಣಭೇದವನ್ನು ಹೊಂದಿ ವ್ಯವಹಾರದಲ್ಲಿ ಉಪಯೋಗಿಸಲು ಅರ್ಹತೆಯನ್ನು ಪಡೆಯುತ್ತವೆ.

ಅವನ ಮಾತು ಹೀಗಿದೆ :

ಅತ ಏವ ಮತಂಗಾದಿದರ್ಶಿತೇಷು ನವಸು ಪಕ್ಷೇಷು ದ್ವಾವಿಂಶತಿಶ್ರುತಿಪಕ್ಷಮೇವ ರಣನಾನುರಣನಾತ್ಮನಾ ಸಾಕ್ಷಾದನುಭೂಯಮಾನಶ್ರುತಿಸ್ವರಭೇದಾನಪಹ್ನವೇನಾವೃತ್ತ್ಯಾ ಸಪ್ತಾನಾಮೇವ ಸ್ವರಾಣಾಂ ಗುಣಭಿನ್ನಾನಾಂ ವ್ಯವಹಾರೋಪಯೋಗಿತ್ವಸಿದ್ಧೇಶ್ಚ ಸಾರತಮಂ ನಿಶ್ಚಿತ್ಯ ನಿಃಶಂಕೋ ವೀಣಯೋರ್ನಿದರ್ಶಿತಾನಾಂ ತಾಸಾಂ ದ್ವಾವಿಂಶತಿಶ್ರುತೀನಾಂ ಮಧ್ಯೇ ಚತುರ್ಥೀಪ್ರಭೃತಿಷು ಶಾಸ್ತ್ರಾನುಸಾರೇಣ ಪೂರ್ವೋತ್ತರಾವಧಿಪ್ರದರ್ಶನಪೂರ್ವಕಂ ಷಡ್ಜಾದಿಸಪ್ತಸ್ವರಸ್ಥಾನಂ ವಿದಧಾತಿ—**ವೀಣಾದ್ವಯ** ಇತ್ಯಾದಿನಾ |[199]

ಇಪ್ಪತ್ತೆರಡು ಶ್ರುತಿಗಳ ಪಕ್ಷವು ಸರ್ವತ್ರ ಮಾನ್ಯವಾಗಿದ್ದರೂ ಅದಕ್ಕೆ ಕಲ್ಲಿನಾಥನು ಕೊಡುವ ಈ ಮೂರು ಕಾರಣಗಳು ಅಷ್ಟೇನೂ ಸಮರ್ಪಕವಲ್ಲವೆಂದು ತೋರುತ್ತದೆ. ಮೊದಲನೆಯದಾಗಿ ರಣನವೆಂದರೆ ನಾದವನ್ನುಂಟು ಮಾಡುವುದು ; ಅನುರಣನವೆಂದರೆ ಹೀಗೆ ಹುಟ್ಟಿದ ನಾದದೊಡನೆ ಅಲ್ಪವಾಗಿ ಮತ್ತು ಕೂಡಿಕೊಂಡು ನಾದವನ್ನುಂಟುಮಾಡುವುದು. ಇದಕ್ಕೆ ನಾದಶಾಸ್ತ್ರದಲ್ಲಿ ಸಹಸ್ಪಂದನವೆಂದು (resonance) ಹೆಸರು. ಇದರಿಂದಲೇ ಸ್ವರಕ್ಕೆ ರಕ್ತಿಯುಂಟಾಗುವುದು. ಮೇಲೆ (ಪು. 230–231) ಕಲ್ಲಿನಾಥನ ಉದ್ಧೃತಿಯಲ್ಲಿ ಅನುರಣನ ವೆಂದರೆ ರಕ್ತಿಯೆಂದು ಈ ಕಾರಣದಿಂದಲೇ ಅರ್ಥಮಾಡಲಾಯಿತು. ಎಂದರೆ ಏಕರೂಪವಾದ ಒಂದೇ ಕಂಪನಸಂಖ್ಯೆ (frequency) ಯನ್ನುಳ್ಳ ನಾದವು ರಣನ ; ಇದರೊಡನೆ ಆವರ್ತಕಗಳು ಹುಟ್ಟಿಕೊಂಡು ಮೊತ್ತದಲ್ಲಿ ಸಂಕೀರ್ಣ-ಕಂಪನರೀತಿಯನ್ನೂ ರಕ್ತಿಯನ್ನೂ ಪಡೆದುಕೊಂಡಿದ್ದು ಸ್ವರ ; ರಣನವೇ ಶ್ರುತಿ, ಅನುರಣನವೇ ಸ್ವರ ಎಂಬ ಅರ್ಥಗಳನ್ನು ಕಲ್ಲಿನಾಥನು ಇಟ್ಟುಕೊಂಡಿದ್ದಾನೆ. ಶಾರ್ಙ್ಗದೇವನೂ ಅಭಿನವಗುಪ್ತನೂ ಶ್ರುತಿಗೂ ಸ್ವರಕ್ಕೂ ಹೇಳಿರುವ ಲಕ್ಷಣಗಳಿಗಿಂತ ಇದು ಅತ್ಯಂತ ವ್ಯತಿರಿಕ್ತವಾದುದರಿಂದ ಈ ಮತವನ್ನಾಗಲೀ ಕಾರಣವನ್ನಾಗಲೀ ಸ್ವೀಕರಿಸಲಾಗದು. ಶ್ರುತಿ-ಸ್ವರಗಳ ಸಂಬಂಧದಲ್ಲಿ ಇದನ್ನು ಪುನಃ ಪರಿಶೀಲಿಸಲಾಗುವುದು.

ಎರಡನೆಯದಾಗಿ, ಶ್ರುತಿ-ಸ್ವರಗಳಲ್ಲಿ ಭೇದವಿದೆ ; ಇದನ್ನು ಮೊದಲು ಹೇಳಿದ ಆರು ಮತಗಳೂ ಒಪ್ಪಿಲ್ಲ, ಇದು ಒಪ್ಪಿದೆ ; ಆದುದರಿಂದ ಈ ಮತವು ಸ್ವೀಕಾರಾರ್ಹ ಎಂಬ ಮಾತನ್ನು ಕಲ್ಲಿನಾಥನು ಆಡಿದ್ದಾನೆ. ಮೊದಲನೆಯ ಆರು ಪಕ್ಷಗಳು ಶ್ರುತಿಸ್ವರಗಳಲ್ಲಿ ಅಭೇದವನ್ನು ಹೇಳುತ್ತವೆ ಎಂಬ ಅವನ ವ್ಯಾಖ್ಯಾನವೇ ಬಹಳ ಪ್ರಶ್ನಾರ್ಹವಾಗಿದೆ. ಅದನ್ನು ಈ ಒಂಬತ್ತು ಪಕ್ಷಗಳ ವಿವೇಚನೆಯ ಉಪಸಂಹಾರ ಕಾಲದಲ್ಲಿ ಸೂಚಿಸಲಾಗುವುದು. ಅಲ್ಲದೆ ಅರವತ್ತಾರು ಶ್ರುತಿಗಳು, ಅನಂತಶ್ರುತಿಗಳು—ಈ ಪಕ್ಷಗಳಿಗೂ ಇವನು ಹೇಳುವ ಕಾರಣವು ಸಾಧಾರಣವಾಗಿರುವುದರಿಂದ ದ್ವಾವಿಂಶತಿಶ್ರುತಿಪಕ್ಷಕ್ಕೆ ಇದರಿಂದ ವಿಶೇಷವಾದ ಪ್ರಯೋಜನವೇನೂ ಇಲ್ಲ.

---

199 ಕಲ್ಲಿನಾಥ, ಉ. ಗ್ರಂ., ಪು. 73.

ಮೂರನೆಯದಾಗಿ ದ್ವಾವಿಂಶತಿಶ್ರುತಿಪಕ್ಷವು ಸ್ಥಾನಾಂತರದಲ್ಲಿ ಸ್ವರದ ಆವೃತ್ತಿಯನ್ನು ಹೇಳುತ್ತದೆ. ಅದೇ ಏಳು ಸ್ವರಗಳು ಮಂದ್ರ ತಾರ ಸ್ಥಾಯಿಗಳಲ್ಲಿ ಗುಣಭೇದದಿಂದ ಪ್ರಕಟವಾಗುತ್ತವೆ; ಇವುಗಳಿಗೆ ಭಿನ್ನವ್ಯವಹಾರವು ಲೋಕದಲ್ಲಿ ಕಂಡುಬರುವುದಿಲ್ಲ; ಅರವತ್ತಾರು ಶ್ರುತಿಗಳು, ಅನಂತಶ್ರುತಿಗಳು ಮುಂತಾದ ಪಕ್ಷಗಳಲ್ಲಿ ಸ್ವರದ ಅನಾವೃತ್ತಿಯನ್ನೇ ಹೇಳಬೇಕಾಗುತ್ತದೆ; ಆದುದರಿಂದ ಅವು ತ್ಯಾಜ್ಯಗಳು, ಎಂದು ಕಲ್ಲಿನಾಥನ ವ್ಯಾಖ್ಯೆ. ಇದೂ ಸರಿಯಾದ ಮಾತಲ್ಲ. ಏಕೆಂದರೆ ಅರವತ್ತಾರು ಶ್ರುತಿ, ಅನಂತಶ್ರುತಿ ಮುಂತಾದವುಗಳನ್ನು ಒಪ್ಪಿಕೊಂಡುದರಿಂದ ಸ್ವರದ ಆವೃತ್ತಿಗುಣಕ್ಕೇನೂ ಬಾಧೆಯಿಲ್ಲ. ಈ ಪಕ್ಷಗಳಾದರೂ ಒಪ್ಪುವುದು ಏಳು ಸ್ವರಗಳನ್ನೇ, ಇಪ್ಪತ್ತೊಂದು ಮುಂತಾದವನ್ನಲ್ಲ. ದ್ವಾವಿಂಶತಿಶ್ರುತಿಪಕ್ಷವು ನಾದಗುಣವು ಸ್ಥಾನಾಂತರದಲ್ಲಿ ವ್ಯತ್ಯಾಸವಾಗುವುದೆಂಬ ಮುಖ್ಯ ನಾದವಿಜ್ಞಾನ ಪ್ರಮೇಯವನ್ನು (ಪು. 192, 196) ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅದನ್ನು ಈ ಪಕ್ಷಗಳು ಲೆಕ್ಕಿಸಿ ಈ ರೀತಿಯ ನಾದಗುಣಭಿನ್ನತೆಗೂ, ಆವರ್ತನೆಗೂ ಕಾರಣವಾದ ಶ್ರುತಿಗಳನ್ನು ಭಿನ್ನಗಳೆಂದು ವ್ಯವಹರಿಸಿರುವುದು ಸಾಧುವಾಗಿಯೇ ಇದೆ.

## 8. ಶ್ರುತಿಗಳು ಅರವತ್ತಾರು

ಶ್ರುತಿಗಳು ಅರವತ್ತಾರೆಂಬ ಪಕ್ಷವೂ ಭಾರತೀಯ ಸಂಗೀತಶಾಸ್ತ್ರದಲ್ಲಿ ಅತಿ ಪ್ರಾಚೀನವಾದುದೇ. ಇದು ಮೊದಲು ನಮಗೆ ತಿಳಿಯುವುದು ಕೋಹಲನಿಂದ; ಅವನಾದರೂ ತನ್ನ ಪೂರ್ವಾಚಾರ್ಯರಿಂದ ಸಂಗ್ರಹಿಸಿದ ಮತವಿದು : ಮತಂಗನು ಕೋಹಲನನ್ನು ಹೀಗೆ ಉದ್ಧರಿಸಿಕೊಳ್ಳುತ್ತಾನೆ :
ಯಥಾ ಚಾಹ ಕೋಹಲಃ—

ದ್ವಾವಿಂಶತಿಂ ಕೇಚಿದುದಾಹರಂತಿ (ಶ್ರುತೀಃ) ಶ್ರುತಿಜ್ಞಾನವಿಚಾರದಕ್ಷಾಃ ।
ಷಟ್‌ಷಷ್ಟಿಭಿನ್ನಾಃ ಖಲು ಕೇಚಿದ್ ಆಸಾಮಾನಂತ್ಯಮೇವ ಪ್ರತಿಪಾದಯಂತಿ ॥ 171

ಇಲ್ಲಿ 'ಭಿನ್ನಾಃ' ಎಂಬ ಶಬ್ದವನ್ನು ಗಮನಿಸಬೇಕು. ಸಂಖ್ಯೆಯಲ್ಲಿ ಮಾತ್ರವಲ್ಲದೆ ಗುಣ, ಪ್ರಮಾಣ ಇತ್ಯಾದಿಗಳಲ್ಲಿಯೂ ಭಿನ್ನತೆಯು ವಿವಕ್ಷಿತವಾಗಿದೆ. ಈ ಅರವತ್ತಾರೂ ಒಂದೇ ಸ್ಥಾಯಿಯಲ್ಲಿವೆ ಎಂಬ ಭ್ರಮೆಯನ್ನು ಕೆಲವು ಆಧುನಿಕ ಸಂಗೀತಶಾಸ್ತ್ರಜ್ಞರು ಒಂದು ನಿರ್ದಿಷ್ಟವಾದ ಪ್ರಮೇಯದ ವೇಷ ತೊಡಿಸಿ ಪ್ರಚಾರಮಾಡುತ್ತಾರೆ. ಈ ಭಾವನೆಗೆ ಪ್ರಾಚೀನ ಭಾರತೀಯ ಸಂಗೀತಶಾಸ್ತ್ರದಲ್ಲಿ ಎಳ್ಳಷ್ಟೂ ಅವಕಾಶವಿಲ್ಲ. ಇಂತಹ ಸಂದೇಹವು ಹುಟ್ಟಬಾರದೆಂದೇ ಮತಂಗನು ಮೇಲಿನ ಉದ್ಧೃತಿಯ ನಂತರ ಕೂಡಲೇ ಕೋಹಲನ ಮೇಲಿನ ಶ್ಲೋಕಕ್ಕೆ ಈ ವ್ಯಾಖ್ಯಾನವನ್ನು ಬರೆಯುತ್ತಾನೆ :

ಇದಾನೀಂ ಷಟ್‌ಷಷ್ಟಿರ್ಭೇದಭಿನ್ನಾಃ ಶ್ರುತಯಃ ಕಥ್ಯಂತೇ । ಮಂದ(=ಮಂದ್ರ)ಮಧ್ಯಮತಾರೇಷು ಉರಃಕಂಠಶಿರಸ್ಸು ತ್ರಿಷು ಸ್ಥಾನೇಷು ಪ್ರತ್ಯೇಕಂ ದ್ವಾವಿಂಶತಿಪ್ರಕಾರತಯಾ ಭಿದ್ಯಮಾನೇಷು ಶ್ರುತಯೋ ಹಿ ಷಟ್-ಷಷ್ಟಿಭೇದಭಿನ್ನಾ ಭವಂತೀತಿ ಕೇಚಿನ್ಮನ್ಯಂತೇ । 200

ಈ ವ್ಯಾಖ್ಯಾನದಲ್ಲಿ 'ಹಿ' ಎಂಬ ನಿಪಾತದ ಶಕ್ತಿಯನ್ನು ಗಮನಿಸಬೇಕು. ಸಂಶಯನಿವಾರಣ, ಸ್ಪಷ್ಟೀಕರಣಗಳಿಗೆಂದೇ ಅದನ್ನು ಮತಂಗಮುನಿಯು ಬಳಸಿದ್ದಾನೆ. ಎದೆ, ಗಂಟಲು, ತಲೆಗಳೆಂಬ ಮೂರು ಸ್ಥಾನಗಳಲ್ಲಿ ಪ್ರತ್ಯೇಕವಾಗಿ ಇಪ್ಪತ್ತೆರಡು ಪ್ರಕಾರವಾಗಿ ಗೋಚರಿಸುವ ಶ್ರುತಿಗಳೇ ಒಟ್ಟು ಅರವತ್ತಾರು ಭೇದಗಳಾಗುತ್ತವೆ ಎಂದು ಕೆಲವರು ತಿಳಿಯುತ್ತಾರೆ, ಎಂಬುದು ಈ ಮಾತಿನ ಅರ್ಥ. ಈ ಮಾತು ಶಾರ್ಙ್ಗದೇವನಿಗೂ ಸಮ್ಮತವಾಗಿಯೇ ಇದೆ.

200 ಮತಂಗ, ಉ. ಗ್ರಂ., ಪು. 7.

ಅವನೂ ಪ್ರತಿಯೊಂದರಲ್ಲಿಯೂ ಇಪ್ಪತ್ತೆರಡರಂತೆ ಮೂರು ಸ್ಥಾಯಿಗಳಲ್ಲಿ ಒಟ್ಟು ಅರವತ್ತಾರು ಶ್ರುತಿಗಳನ್ನು ಸ್ಪಷ್ಟವಾದ ಮಾತಿನಲ್ಲಿಯೇ ಹೇಳಿದ್ದಾನೆ :

ಏವಂ ಕಂಠೇ ತಥಾ ಶೀರ್ಷೇ ಶ್ರುತಿರ್ದ್ವಾವಿಂಶತಿರ್ಮತಾ | 201

ಆದರೆ ಕಲ್ಲಿನಾಥನು 'ಏವಂ' ಎಂಬುದಕ್ಕೆ ಸಂಪೂರ್ಣ ಸಾದೃಶ್ಯ ಸಾಮ್ಯಗಳನ್ನು ಹೇಳಿ ಶ್ರುತಿಗಳ ಆವೃತ್ತಿಯನ್ನು ಎತ್ತಿ ಹಿಡಿಯುತ್ತಾನೆ. ಇದು ಸಂಗತವೆಂದು ನನಗೆ ತೋರುವುದಿಲ್ಲ. ಸ್ಥಾಯಿಗಳನ್ನು ಹೇಳುವಾಗಲೇ ಶ್ರೀ ಶಾರ್ಙ್ಗದೇವನು ಮೂರು ಸ್ಥಾಯಿಗಳನ್ನೂ ಅವುಗಳು ಉತ್ತರೋತ್ತರವಾಗಿ ದ್ವಿಗುಣವಾಗುವುದನ್ನೂ ಹೇಳಿಬಿಟ್ಟಿದ್ದಾನೆ. ಆದುದರಿಂದ ಸ್ಥಾಯಿಯು ಒಳಗೊಂಡ ದ್ರವ್ಯವೆಲ್ಲವೂ ಹೀಗೆಯೇ ಉತ್ತರೋತ್ತರವಾಗಿ ದ್ವಿಗುಣವಾಗುತ್ತದೆ ಎಂಬ ವಿವಕ್ಷೆ ತನಗೆ ತಾನೇ ಹುಟ್ಟಿಕೊಳ್ಳುತ್ತದೆ. ಒಂದು ಸ್ಥಾಯಿಯಲ್ಲಿ ಇಪ್ಪತ್ತೆರಡು ಶ್ರುತಿಗಳೆಂದು ಹೇಳಿ, ಸಪ್ತಸ್ವರಗಳೆಂದು ಹೇಳಿಬಿಟ್ಟಿದ್ದರೆ ಇತರ ಸ್ಥಾಯಿಗಳಿಗೂ ಇವುಗಳನ್ನು ಸಂಪೂರ್ಣ ಸಾದೃಶ್ಯ ಸಾಮ್ಯಗಳೊಡನೆ ಅನ್ವಯಿಸಬಹುದಾಗಿತ್ತು. ಹಾಗೆ ಮಾಡದೆ ಕಂಠದಲ್ಲಿಯೂ ಶಿರಸ್ಸಿನಲ್ಲಿ ಇಪ್ಪತ್ತೆರಡು ಶ್ರುತಿಗಳಿವೆ ಎಂದು ಅವನು ಹೇಳುವುದರಲ್ಲಿನ ವಿಶೇಷವಾದ ಅಭಿಸಂಧಿಯನ್ನು ಗ್ರಹಿಸಬೇಕು. ಇಲ್ಲದಿದ್ದರೆ ಅವನ ಈ ಮಾತು ನಿರರ್ಥಕವೂ ಪುನರುಕ್ತಿಯೂ ಆಗುತ್ತದೆ. ಈ ದೋಷಗಳಿಗೆ ಶ್ರೀಮತ್ ಶಾರ್ಙ್ಗದೇವನ ಲೇಖನಿ ಎಂದಿಗೂ ಗುರಿಯಾಗಿಲ್ಲ. ಆದುದರಿಂದ ಏವಂ ಎನ್ನುವ ಮಾತಿಗೆ ಇಲ್ಲಿ ಗ್ರಹಿಸಬೇಕಾದುದು ಸಂಪೂರ್ಣ ಸಾದೃಶ್ಯಸಾಮ್ಯಗಳನ್ನಲ್ಲ. ಇವುಗಳನ್ನು ಮೂಲಗ್ರಂಥಕಾರನು ಎಲ್ಲಿಯೂ ಸೂಚಿಸಿ ಸಹ ಇಲ್ಲ. ಹೃದಯಪ್ರದೇಶದಲ್ಲಿ ಅಡ್ಡಲಾಗಿರುವ ಇಪ್ಪತ್ತೆರಡು ನಾಡಿಗಳಿರುವಂತೆಯೇ ಕಂಠಪ್ರದೇಶದಲ್ಲಿಯೂ ಇಪ್ಪತ್ತೆರಡು ನಾಡಿಗಳಿವೆ, ಶಿರಸ್ಸಿನಲ್ಲಿಯೂ ಇಪ್ಪತ್ತೆರಡು ನಾಡಿಗಳಿವೆ ; ಹೃದಯಪ್ರಾಂತದ ಇಪ್ಪತ್ತೆರಡರಲ್ಲಿ ಮಾರುತಾಹತಿಯಿಂದ ಕ್ರಮವಾಗಿ ಉಚ್ಚ-ಉಚ್ಚತರ ಭಾವದಲ್ಲಿ ನಾದವು ಶ್ರುತಿಗಳ ರೂಪದಲ್ಲಿ ಹುಟ್ಟುವಹಾಗೆಯೇ (ಏವಂ=ಹಾಗೆಯೇ) ಕಂಠದ ಇಪ್ಪತ್ತೆರಡು ನಾಡಿಗಳಲ್ಲಿಯೂ ಮಾರುತಾಹತಿಯಿಂದ ಮಧ್ಯಸ್ಥಾಯಿಯ ಇಪ್ಪತ್ತೆರಡು ಶ್ರುತಿಗಳು ಹುಟ್ಟುತ್ತವೆ ; ಶಿರಸ್ಸಿನಲ್ಲಿರುವ ಇಪ್ಪತ್ತೆರಡು ನಾಡಿಗಳಲ್ಲಿಯೂ ಮಾರುತಾಹತಿಯಿಂದ ತಾರಸ್ಥಾಯಿಯ ಇಪ್ಪತ್ತೆರಡು ಶ್ರುತಿಗಳು ಹುಟ್ಟುತ್ತವೆ ಎಂಬುದು ಶಾರ್ಙ್ಗದೇವನ ಅಭಿಮತ. 'ಏವಂ' ಎಂಬುದಕ್ಕೆ ನೈಕಟ್ಯಸಂಬಂಧದಿಂದ ಈ ಅರ್ಥವನ್ನೇ ಹೇಳಬೇಕು. ಹೀಗೆ ಕಂಠ, ಶಿರಸ್ಸುಗಳಲ್ಲಿರುವ ನಾಡಿಗಳಲ್ಲಿ ಪ್ರತಿಯೊಂದೂ ಬೇರೆಬೇರೆಯಾಗಿರುವುದಲ್ಲದೆ ಹೃದಯಪ್ರಾಂತದಲ್ಲಿರುವ ಪ್ರತಿಯೊಂದರಿಂದಲೂ ಭಿನ್ನವಾಗಿರುವುದು ಸ್ಪಷ್ಟವಾಗಿಯೇ ಇದೆ. ಆದುದರಿಂದ ಇವುಗಳಲ್ಲಿ ಹುಟ್ಟುವ ಶ್ರುತಿಗಳು ಬೇರೆಬೇರೆಯಾಗಿವೆಯೆಂದೇ ಸಿದ್ಧವಾಗುತ್ತದೆ. ಈ ಭಿನ್ನತೆಯನ್ನು ಅವನು ವಿವಕ್ಷಿಸಲೆಂದೇ ಭರತ, ಮತಂಗ, ಅಭಿನವ-ಗುಪ್ತಾದಿಗಳ ಪಂಥವನ್ನು ಬಿಟ್ಟು ಕೋಹಲ, ಜಗದೇಕಮಲ್ಲರಿಂದ ಯೋಗದೇಹದ ನಾಡಿಗಳಿಗೂ ಶ್ರುತಿಗಳಿಗೂ ಇರುವ ಸಂಬಂಧವನ್ನು[92-95] ಗ್ರಹಿಸುತ್ತಾನೆ ; ಹಾಗೂ ಅವರಿಗಿಂತ ವಿಷಯವನ್ನು ಇನ್ನೂ ಸ್ಪಷ್ಟವಾಗಿ ಹೇಳುತ್ತಾನೆ. ಮೂರು ಸ್ಥಾಯಿಗಳನ್ನು ಮಾತ್ರ ಭಾರತೀಯ ಸಂಗೀತಶಾಸ್ತ್ರವು ಏಕೆ ಸ್ವೀಕರಿಸುತ್ತದೆಂದು ಮೇಲೆ ಹೇಳಿದೆ (ಪು. 195-196). ಆದುದರಿಂದ ಅರವತ್ತಾರು ಶ್ರುತಿಗಳು ತಾರ್ಕಿಕವಾಗಿಯೇ ಲಭಿಸುತ್ತವೆ. ಇವುಗಳು ಪರಸ್ಪರ ಭಿನ್ನಗಳೆಂಬುದನ್ನು ಕೋಹಲನು ಹಿಂದಿನವರಿಂದ ಉದ್ಧರಿಸಿದರೆ ಪಾರ್ಶ್ವದೇವನು ಅವುಗಳ ಪ್ರಾಯೋಗಿಕ ತಥ್ಯತೆಯನ್ನು ಒತ್ತಿ ಹೇಳಲು ಅರವತ್ತಾರಕ್ಕೂ ಬೇರೆ ಬೇರೆ ಹೆಸರುಗಳನ್ನೇ ಕೊಟ್ಟಿದ್ದಾನೆ. ಇದನ್ನು ಮುಂದಿನ ವಿಭಾಗದಲ್ಲಿ ಹೇಳಲಾಗುವುದು. ಹಾಗಾದರೆ ಅರವತ್ತಾರು ಶ್ರುತಿಗಳನ್ನು ಒಪ್ಪಿದ ಶಾರ್ಙ್ಗದೇವನು ಏಕೆ ಇಪ್ಪತ್ತೆರಡಕ್ಕೇ ಹೆಸರುಗಳನ್ನು ಹೇಳಿದನೆಂಬ ಪ್ರಶ್ನೆಯು ಇಲ್ಲಿ ಸಹಜವಾಗಿ ಏಳುತ್ತದೆ. ಒಂದು ಕ್ಷಣದಲ್ಲಿ ಒಂದೇ

201 ಶಾರ್ಙ್ಗದೇವ, ಉ. ಗ್ರಂ., I, 3, 10.

ಸ್ವರೋಚ್ಚಾರವಿರುವ ನಮ್ಮ ಸಂಗೀತಪದ್ಧತಿಗೆ (homophony) ಒಂದು ಸಲಕ್ಕೆ ಒಂದೇ ಸ್ಥಾಯಿಯ ವ್ಯಾಪ್ತಿಯು ಸಾಕು. ಅಲ್ಲದೆ ಸ್ವರದ ಪ್ರಮಾಣವನ್ನೂ ಅದರ ಅವಾಂತರ ಭಾಗಗಳನ್ನೂ ಗುರುತಿಸಲು ಈ ಇಪ್ಪತ್ತೆರಡು ಶ್ರುತಿಗಳ ಹೆಸರುಗಳು ಬೇಕೇ ಹೊರತು ಸ್ವರವು ಸ್ಥಾನಾಂತರದಲ್ಲಿ ಪಡೆಯುವ ಆವೃತ್ತಿಯನ್ನಾಗಲೀ ಗುಣಭಿನ್ನತೆಯನ್ನಾಗಲೀ ಗುರುತಿಸಿ ಹೇಳಲು ಅಲ್ಲ. ಏಕೆಂದರೆ ಇವು ಸ್ವಯಂಸಿದ್ಧವಾಗಿವೆ. ಆದುದರಿಂದಲೇ ಅರವತ್ತಾರು ಶ್ರುತಿಗಳನ್ನು ಒಪ್ಪಿದರೂ ಶಾರ್ಙ್ಗದೇವನು ಒಂದು ಸ್ಥಾಯಿಯ ವಿಸ್ತಾರವನ್ನು ವ್ಯವಹಾರಕ್ಕೆ ಮೂಲದ್ರವ್ಯವೆಂದೂ ಮೂರು ಸ್ಥಾಯಿಗಳನ್ನು ಒಟ್ಟು ವಿಸ್ತಾರವೆಂದೂ ಸ್ವೀಕರಿಸಿದುದರಿಂದ ಅರವತ್ತಾರಕ್ಕೂ ಹೆಸರುಗಳನ್ನು ಹೇಳಲಿಲ್ಲ.

ಹೀಗೆ 'ಏವಂ' ಎಂಬ ಶಬ್ದಕ್ಕೆ ಆವೃತ್ತಿತನವೆಂಬ ಗುಣವನ್ನು ಅನ್ವಯಿಸಿ ವ್ಯಾಖ್ಯಾನಮಾಡಿದುದರಿಂದ ಕಲ್ಲಿನಾಥನು ಅರವತ್ತಾರು ಶ್ರುತಿಗಳ ಪಕ್ಷಕ್ಕೆ ಬೇರೆ ಅರ್ಥವನ್ನು ಹೊರಡಿಸಿ ಈ ಪಕ್ಷವನ್ನು ನಿರಾಕರಿಸುತ್ತಾನೆ:

ದ್ವಾವಿಂಶತಿಶ್ರುತಿಪಕ್ಷೇ ದ್ವಾವಿಂಶತಿಃ ಶ್ರುತಯ ಏವ ಮಂದ್ರಸ್ಥಾಃ ಸ್ಥಾನಾಂತರಯೋರಪಿ ದ್ವಿಗುಣದ್ವಿಗುಣತ್ವೇನಾವರ್ತಯಂತ ಇತಿ । ಷಟ್‌ಷಷ್ಟಿಶ್ರುತಿಪಕ್ಷೇ ತು ತಾವತ್ಯ ಏವ ಶ್ರುತಯಃ ಸ್ಥಾನತ್ರಯೇಽಪ್ಯನಾವೃತ್ತಾಃ ಪರಸ್ಪರಂ ಭಿನ್ನಾ ಇತಿ ಚ ವೈಷಮ್ಯಮ್ । ತತ್ರಾನಾವೃತ್ತಿಪಕ್ಷಸ್ವೀಕಾರೇ ಷಡ್ಜಾದೀನಾಮಪಿ ಸ್ವರಾಣಾಮಾವೃತ್ತ್ಯಭಾವಾನ್ಮಧ್ಯತಾರಸ್ಥಾಶ್ಚತುರ್ದಶಸ್ವರಾಃ ಪೃಥಗ್ ವ್ಯಪದೇಶಭಾಜೋ ಭವೇಯುಃ । ನೈವ ತಥಾ ವ್ಯವಹಾರಃ ।199

ಹೀಗೆ ಅರವತ್ತಾರು ಶ್ರುತಿಗಳ ಮತವು ಅನಾವೃತ್ತಿ ಪಕ್ಷವನ್ನೇ ಗ್ರಹಿಸಿದೆಯೆಂದು ಅವನು ಸಾಧಿಸುತ್ತಾನೆ. ಶಾರ್ಙ್ಗದೇವನ 'ಏವಂ' ಎಂಬ ಮಾತಿಗೆ ಆವೃತ್ತಿತನವನ್ನೂ ಗುಣಭಿನ್ನತೆಯನ್ನೂ ಸ್ವರದಲ್ಲಿ ಹೇಗೆ ಅನ್ವಯ ಮಾಡಬಹುದೆಂಬುದನ್ನು ಹೀಗೆ ಸೂಚಿಸಬಹುದು: ಭರತ, ದತ್ತಿಲ ಮತಂಗಾದಿಗಳು ಸ್ವೀಕರಿಸುವಂತೆ ಶಾರ್ಙ್ಗದೇವನೂ ಏಳು ಸ್ವರಗಳನ್ನೇ ಒಪ್ಪಿದ್ದಾನಷ್ಟೆ. ಇವುಗಳು ಸ್ಥಾಯಿಭೇದದಿಂದ ಉತ್ತರೋತ್ತರವಾಗಿ ದ್ವಿಗುಣವಾಗುತ್ತವೆಂದು ಅವನು ವಿವಕ್ಷಿಸಿರುವುದರಲ್ಲಿಯೂ, ಆದರೂ ಸಹ ಏಳೇ ಸ್ವರಗಳನ್ನೇ ಹೇಳಿರುವುದರಲ್ಲಿಯೂ ಆವೃತ್ತಿತನವನ್ನೇ ಹೇಳಿದ್ದಾನೆಂಬುದು ಸ್ಪಷ್ಟವಾಗಿದೆ. ದ್ವಿಗುಣವೆನ್ನುವುದು ಆವೃತ್ತಿನವಲ್ಲದೆ ಮತ್ತೇನು? 2, 4, 8, 16 ಎಂದು ಮೊದಲಾಗಿ ಉತ್ತರೋತ್ತರವಾಗಿ ದ್ವಿಗುಣವಾಗುತ್ತಿರುವ ವಸ್ತುವೊಂದರಲ್ಲಿ ಆವೃತ್ತಿತನವು ಇದ್ದರೂ ಪ್ರಮಾಣದಲ್ಲಿ ವ್ಯತ್ಯಾಸವಾಗಿ ತನ್ಮೂಲಕ ಗುಣಗಳಲ್ಲಿ ವ್ಯತ್ಯಾಸವಾಗುವ ಹಾಗೆ ಸ್ವರಗಳಲ್ಲಿ ಆವೃತ್ತಿತನವೂ ಗುಣದಲ್ಲಿ ಭಿನ್ನತೆಯೂ ಸ್ಪಷ್ಟವಾಗಿಯೇ ಸಿದ್ಧವಾಗುತ್ತವೆ. ರಸಾಯನಶಾಸ್ತ್ರದಲ್ಲಿ ಮೂಲಧಾತುಗಳನ್ನು ವರ್ಗೀಕರಿಸುವ ಆವರ್ತನ ನಿಯಮ(Periodic Law)ವನ್ನು ಅಭ್ಯಾಸಮಾಡಿದವರಿಗೂ ಗಣಿತಶಾಸ್ತ್ರದಲ್ಲಿ ಶ್ರೇಣಿ(Series)ಯನ್ನು ಅಭ್ಯಾಸಮಾಡಿದವರಿಗೂ ಸ್ವರದ ಈ ಸ್ವಭಾವದಲ್ಲಿನ ಸಾಮ್ಯವು ಸ್ಪಷ್ಟವಾಗದಿರದು. ಈ ಕಾರಣದಿಂದ ಕಲ್ಲಿನಾಥನು ಹೇಳುವಂತೆ ಮಂದ್ರಸ್ಥಾಯಿಯಲ್ಲಿ ಏಳು, ತಾರಸ್ಥಾಯಿಯಲ್ಲಿ ಏಳು – ಹೀಗೆ ಬೇರೆ ಹದಿನಾಲ್ಕು ಸ್ವರಗಳು ವ್ಯಾವಹಾರಿಕ ಪ್ರಯೋಗವನ್ನು ಪಡೆಯುವ ಆವಶ್ಯಕತೆಯೇನೂ ಹುಟ್ಟುವುದಿಲ್ಲ.

ಅಲ್ಲದೆ ಕಲ್ಲಿನಾಥನು ಮೂಲಗ್ರಂಥಕಾರನ ವಿವಕ್ಷೆಗೆ ವಿಪರೀತಾರ್ಥವನ್ನು ಕಲ್ಪಿಸಿದ್ದಾನೆಂಬುದು ಶಾರ್ಙ್ಗದೇವನ ಮಾತಿನಿಂದಲೇ ತಿಳಿಯುತ್ತದೆ. ಇದೇ ಪ್ರಕರಣದ ಮೂವತ್ತೊಂಬತ್ತನೆಯ ಶ್ಲೋಕದಲ್ಲಿ ಶಾರ್ಙ್ಗದೇವನು ಸ್ವರಗಳು ಬೇರೆ ಬೇರೆ ಸ್ಥಾಯಿಗಳಲ್ಲಿ ಬೇರೆ ಬೇರೆಯೆಂಬ ವ್ಯವಹಾರವನ್ನು ಪಡೆಯುತ್ತವೆಂದೇ ಸುಸ್ಪಷ್ಟವಾಗಿ ಹೇಳಿದ್ದಾನೆ:

ತೇ ಮಂದ್ರಮಧ್ಯತಾರಾಖ್ಯಸ್ಥಾನಭೇದಾತ್ ತ್ರಿಧಾ ಮತಾಃ ।
ತ ಏವ ವಿಕೃತಾವಸ್ಥಾ ದ್ವಾದಶ ಪ್ರತಿಪಾದಿತಾಃ ॥

'ತೇ' ಎಂದರೆ 'ಸ್ವರಾಃ' ಎಂದು ಇಲ್ಲಿ ಅರ್ಥ.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ರುತಿಭ್ಯಃ ಸ್ಯುಃ ಸ್ವರಾಃ ಷಡ್ಜರ್ಷಭಗಾಂಧಾರಮಧ್ಯಮಾಃ ।
ಪಂಚಮೋ ಧೈವತಶ್ಚಾಥ ನಿಷಾದ ಇತಿ ಸಪ್ತ ತೇ ।
ತೇಷಾಂ ಸರಿಗಮಪಧನೀತ್ಯಪರಾ ಮತಾಃ ।

ಎಂದು ಇದೇ ಪ್ರಕರಣದ ಇಪ್ಪತ್ತಮೂರನೆಯ ಶ್ಲೋಕದಲ್ಲಿ 'ತೇ' ಎಂಬ ಶಬ್ದದ ಅನುಕ್ರಮ, ಉಪಕ್ರಮಗಳನ್ನೇ ಹಿಡಿದು ಇಲ್ಲಿ ಅವನು ಹೇಳುತ್ತಿದ್ದಾನೆ. ಇದೇ ಏಳು ಸ್ವರಗಳು ಮಂದ್ರ, ಮಧ್ಯ, ತಾರಗಳೆಂಬ ಮೂರು ಸ್ಥಾನಗಳ ಭೇದದಿಂದ, ಎಂದರೆ, ಈ ಸ್ಥಾನಗಳಲ್ಲಿ ಭಿನ್ನಗಳಾಗಿವೆಯೆಂದು ಗೋಚರಿಸುವುದರಿಂದ, ಅವು ಮೂರು ಬಗೆ. ಒಂದೇ ಹೆಸರಿನ ಸ್ವರವು ಉತ್ತರೋತ್ತರವಾಗಿ ಅಷ್ಟಮಭಾವಗಳಲ್ಲಿ ಪುನರಾವರ್ತನೆಯನ್ನು ಪಡೆಯುತ್ತಿದ್ದರೂ ಅದು ಸ್ವಲ್ಪಮಟ್ಟಿನ ವೈದೃಶ್ಯವನ್ನೂ ವೈಶಿಷ್ಟ್ಯವನ್ನೂ ಪಡೆದು ಪ್ರತ್ಯೇಕವಾದ ಸ್ವರವೆಂದೇ ಗೋಚರವಾಗುತ್ತದೆ ; ಹಿಂದೆ ನೀಚಸ್ಥಾನದಲ್ಲಿ ಕೇಳಿಸಿದ್ದೇ ಇದು ಎಂದು ಭಾವನೆಯನ್ನು ಪ್ರತ್ಯಭಿಜ್ಞಾನದಿಂದ ಉಂಟುಮಾಡದೆ, ನೀಚಸ್ಥಾನದಲ್ಲಿ ಕೇಳಿಸಿದಂತಹ, ಆದರೆ ಬೇರೆಯಾದ ಸ್ವರ ಎಂಬ ಭಾವನೆಯನ್ನು ಉಂಟುಮಾಡುತ್ತದೆ, ಎಂಬ ನಾದವಿಜ್ಞಾನದ ಅತ್ಯಂತ ಪ್ರಮಾಣಭೂತವಾದ ಪ್ರಮೇಯವೊಂದನ್ನು ಶ್ರೀ ಶಾರ್ಙ್ಗದೇವನು ಇಲ್ಲಿ ಹೇಳುತ್ತಿದ್ದಾನೆ. ಸ್ವರ-ಶ್ರುತಿಗಳ ಸಂಬಂಧವನ್ನು ಕುರಿತ ವಿವೇಚನೆಯಲ್ಲಿ ಇದನ್ನು ಪುನಃ ಪ್ರಸ್ತಾಪಿಸಲಾಗುವುದು. 'ಮಧ್ಯತಾರಸ್ಥಾಃ ಚತುರ್ದಶಸ್ವರಾಃ ಪೃಥಗ್ ವ್ಯಪದೇಶಭಾಜೋ ಭವೇಯುಃ। ನೈವ ತಥಾ ವ್ಯವಹಾರಃ' ಎಂಬ ಕಲ್ಲಿನಾಥನ ಮಾತು ಮೂಲಗ್ರಂಥೋಕ್ತಿಗೂ ನಾದವಿಜ್ಞಾನದ ಪ್ರಯೋಗ ಫಲಿತಾಂಶಗಳಿಗೂ ವಿರೋಧವಾಗಿರುವುದರಿಂದ ಅದನ್ನು ಒಪ್ಪಲಾಗದು.

ಮೇಲಿನ ಉದ್ಧೃತಿಯಲ್ಲಿ ಮಂದ್ರಮಧ್ಯತಾರಗಳೆಂಬ ಸ್ಥಾನಗಳಿಗೆ ಮಾತ್ರ ಸ್ವರಭೇದವನ್ನು ಸೀಮಿತಗೊಳಿಸಿರುವುದರಲ್ಲಿ ಶ್ರೀಮತ್ ಶಾರ್ಙ್ಗದೇವನು ಸೂತ್ರರೂಪದಿಂದ ಬಹುವಾದ ಅರ್ಥವಿಸ್ತಾರವನ್ನು ಅಡಗಿಸಿದ್ದಾನೆ. ಇಲ್ಲಿ ಪ್ರಸಕ್ತವಾಗಿರುವ ಒಂದೆರಡನ್ನು ಮಾತ್ರ ಸೂಚಿಸಲಾಗುವುದು. ಏಕಸ್ವರಶ್ರೇಣಿಯಿರುವ ಭಾರತೀಯ ಸಂಗೀತದಂತಹ ಯಾವುದೇ ಸಂಗೀತ ಪದ್ಧತಿಯಲ್ಲಿ ತ್ರಿಸ್ಥಾನಬಾಹಿರವಾದ—ಅದೂ ಮಾನವ ಶಾರೀರ ಸಹಜವಾದ ಮತ್ತು ವಾದ್ಯಗಳಲ್ಲಿ ಅದಕ್ಕೆ ಪರಸ್ಪರವಾದ ಮಂದ್ರ, ಮಧ್ಯ ಮತ್ತು ತಾರಗಳೆಂಬ ಮೂರು ಸ್ಥಾಯಿಗಳ ವಿಸ್ತಾರದ ಆಚೆ ಇರುವ—ಸ್ವರಗಳಲ್ಲಿ ಸಾದೃಶ್ಯಸಾಮ್ಯಗಳು ಕಡಿಮೆಯಾಗಿಬಿಡುತ್ತವೆ ; ವಾದೀತ್ವಭಗ್ನತಾ ಪರಿಣಾಮವು ಅತಿಶಯವಾಗುತ್ತದೆ ; ಆದುದರಿಂದ ಈ ವಿಸ್ತಾರವನ್ನು ಮೀರಿದ ಆವೃತ್ತಿತನಕ್ಕೆ ಈ ವಿಧದ ಸಂಗೀತದಲ್ಲಿ ಪ್ರಸಕ್ತಿಯೂ ಪ್ರಯೋಜನವೂ ಇಲ್ಲ, ಎಂಬುದು ಒಂದು ಅರ್ಥ. ಇದು ವೈಜ್ಞಾನಿಕ ಪ್ರಯೋಗಗಳಿಂದ ಸಿದ್ಧವಾಗಿರುವ ವಿಷಯ. ಎರಡನೆಯದಾಗಿ ಈ ಮೂರು ಸ್ಥಾಯಿಗಳನ್ನು ಅವನು 'ತೇ' ಎಂಬ ಶಬ್ದದಿಂದ ಸಂಬಂಧಿಸಿ ಸ್ವರಗಳಿಗೆ ತ್ರೈವಿಧ್ಯವನ್ನು ಹೇಳಿದ್ದಾನಷ್ಟೆ. ಪ್ರಾರಂಭ— ಉಪಕ್ರಮ—ಉಪಸಂಹಾರಗಳ ದೃಷ್ಟಿಯಿಂದ 'ತೇ' ಎಂಬುದು ಸ್ವರಗಳಿಗೇ ಅನ್ವಯವಾಗುವುದಾದರೂ ನೈಕಟ್ಯಸಂಬಂಧದಲ್ಲಿ ಗ್ರಹಿಸುವುದರಿಂದ ಒಂದು ವಿಶೇಷಾರ್ಥವು ಹೊರಡುತ್ತದೆ. ಈ ಮಾತಿಗೆ ಹಿಂದಿನ ಶ್ಲೋಕದಲ್ಲಿ ದ್ವಾವಿಂಶತಿಶ್ರುತಿಗಳ ದೀಪ್ತಾದಿ ಐದು ಜಾತಿಗಳು ಸ್ವರಗಳಲ್ಲಿ ಹೇಗೆ ವಿನಿಯೋಗವನ್ನು ಪಡೆಯುತ್ತವೆ, ಎಂಬುದನ್ನು ಗ್ರಂಥಕಾರನು ಹೇಳಿದ್ದಾನೆ. ಆದುದರಿಂದ 'ತೇ' ಎಂಬಲ್ಲಿ ಈ ಶ್ರುತಿಗಳನ್ನು ಒಳಗೊಂಡ ಸ್ವರಗಳು ಎಂದು ಅರ್ಥಮಾಡಬೇಕು. ಆಗ ಈ ಸ್ವರಗಳ ಸ್ವಸಂವೇದ್ಯತೆಯನ್ನು ಉಂಟುಮಾಡುವ ಅಂತಿಮ ಶ್ರುತಿಗಳಿಗೂ ಸ್ವಸಂವೇದ್ಯತೆಗೆ ಪೂರ್ವಾಭಿಕಾಂಕ್ಷೆಯಿಂದ ಹೇತುಗಳಾದ ಇತರ ಶ್ರುತಿಗಳಿಗೂ ಈ ತ್ರೈವಿಧ್ಯವನ್ನು ಹೇಳುವುದು ಅನಿವಾರ್ಯವಾಗುತ್ತದೆ. ಎಂದರೆ, ಸ್ವರವೊಂದು ಮಂದ್ರ, ಮಧ್ಯ, ತಾರಗಳೆಂಬ ತ್ರಿಸ್ಥಾಯಿಗಳಲ್ಲಿ ಬೇರೆ ಬೇರೆಯಾಗಿ ಗೋಚರಿಸುವುದಕ್ಕೆ ಸ್ವಸಂವೇದ್ಯತೆಯನ್ನು ಉಂಟುಮಾಡುವ ಸ್ವರಗತಶ್ರುತಿಯೂ, ಇದಕ್ಕೆ ಅಪ್ರತ್ಯಕ್ಷ ಹೇತುಗಳಾದ ಉಳಿದ ಅಂತರತಶ್ರುತಿಗಳೂ ಕಾರಣಗಳೆಂದು ಹೇಳಿದ ಹಾಗಾಯಿತು. ಹೀಗೆ ಇದೊಂದೇ

ಮಾತಿನಿಂದ ವಿಶ್ವಾವಸುವಿನ ಶ್ರುತಿದ್ವೈವಿಧ್ಯ ಪಕ್ಷವನ್ನೂ, 'ಕೇಚಿತ್‌ಸ್ಥಾನತ್ರಯಯೋಗಾತ್ ತ್ರಿವಿಧಾಂ ಶ್ರುತಿಂ ಪ್ರತಿಪ್ರದ್ಯಂತೇ'[142] ಎಂಬ ಶ್ರುತಿತ್ರೈವಿಧ್ಯ ಪಕ್ಷವನ್ನೂ ಶಾರ್ಙ್ಗದೇವನು ಸ್ವೀಕರಿಸಿ, ವಿವಕ್ಷಿಸಿದ್ದಾನೆಂದು ಒಪ್ಪಬೇಕಾಗತ್ತದೆ ; ಏಕೆಂದರೆ ಸ್ವರದ ಸ್ವಸಂವೇದ್ಯತೆಗೆ ಅದರ ಅಂತಿಮಶ್ರುತಿಯು ಪ್ರತ್ಯಕ್ಷಹೇತು, ಉಳಿದ ಹಿಂದಿನವುಗಳು ಪೂರ್ವಾಭಿಕಾಂಕ್ಷೆಯಿಂದ ಹೇತುಗಳು ಎಂಬ ಮಾತನ್ನು ಶಾರ್ಙ್ಗದೇವನೇ ಶ್ರುತಿನಿದರ್ಶನ ಸಂದರ್ಭದಲ್ಲಿ ಆಡಿದ್ದಾನಷ್ಟೆ.[136] ಆದುದರಿಂದ ಸಿಂಹಭೂಪಾಲನು ಶ್ರುತಿತ್ರೈವಿಧ್ಯಪಕ್ಷಕ್ಕೆ ಪ್ರತ್ಯಭಿಜ್ಞಾನದ ಆಕ್ಷೇಪವನ್ನೆತ್ತಿ ಅದನ್ನು ನಿರಾಕರಿಸಿರುವುದು[139] (ಪು. 291-292) ಮೂಲಗ್ರಂಥದ ಅರ್ಥಕ್ಕೆ ವಿರೋಧವಾದುದುದನ್ನೇ ಹೇಳಿದಂತಾಯಿತು ; ಏಕೆಂದರೆ ಅವನ ಆಕ್ಷೇಪದ ಸಾರವು 'ಮಂದ್ರಮಧ್ಯಮತಾರಸ್ಥಾನೇಷ್ವಪಿ ತಾ ಏವೈತಾಃ ಶ್ರುತಯಸ್ತ ಏವಾಮೀ ಸ್ವರಾಃ, ಇತಿ ಪ್ರತ್ಯಭಿಜ್ಞಾನಾದ್ ಭೇದಸ್ಯಾಸಿದ್ಧಿಃ' ಎಂಬ ಮಾತಿನಲ್ಲಿದೆ. ಸ್ವರಗಳ, ಆದುದರಿಂದ ಅವುಗಳಿಗೆ ಹೇತುಗಳಾದ ಶ್ರುತಿಗಳ, ತ್ರೈವಿಧ್ಯವನ್ನು ಸ್ಥಾನತ್ರಯದಲ್ಲಿ ಶಾರ್ಙ್ಗದೇವನು ಹೇಳಿದುದರಿಂದ ಪ್ರತ್ಯಭಿಜ್ಞಾನಪರವಾದ ಆಕ್ಷೇಪಣೆಗೆ ಆಸ್ಪದವೇ ಉಳಿಯುವುದಿಲ್ಲ. ಹೀಗೆ ಶಾರ್ಙ್ಗದೇವನು ನಿದರ್ಶನಪೂರ್ವಕವಾಗಿ ಇಪ್ಪತ್ತೆರಡು ಶ್ರುತಿಗಳನ್ನು ಹೇಳಿದುದರಿಂದ ಅವನು ಅದೊಂದನ್ನೇ ಹೇಳಿ ಇತರ ಪಕ್ಷಗಳನ್ನು ನಿರಾಕರಿಸಿದ್ದಾನೆಂದು ತಿಳಿದು, ಉಳಿದವುಗಳನ್ನು ಹೇಗಾದರೂ ಮಾಡಿ ನಿರಾಕರಿಸಬೇಕೆಂಬ ಉತ್ಸಾಹವನ್ನು ತೋರುವುದರಲ್ಲಿ ಮಾತ್ರ ಇಬ್ಬರು ವ್ಯಾಖ್ಯಾನಕಾರರೂ ಯಶಸ್ವಿಗಳಾಗಿದ್ದಾರೆ; ಮೂಲ ಗ್ರಂಥಕಾರನ ಮಾತುಗಳಲ್ಲಿನ ಸೂಕ್ಷ್ಮಾರ್ಥಗಳನ್ನೂ, ಧ್ವನ್ಯರ್ಥಗಳನ್ನೂ, ಇಂಗಿತಗಳನ್ನೂ ತಿಳಿದು ವಿವರಿಸುವುದರಲ್ಲಿ ವಿಫಲರಾಗಿದ್ದಾರೆ.

ಹೀಗೆ, ಶಾರ್ಙ್ಗದೇವನು ಶ್ರುತಿವಿಷಯವಾಗಿ ಮೇಲೆ ಹೇಳಿದ ಎಲ್ಲಾ ಪಕ್ಷಗಳನ್ನೂ ಅಲ್ಲಲ್ಲಿ ಒಂದೊಂದು ಮಾತಿನಿಂದ, ಸೂಚನೆಯಿಂದ, ಇಂಗಿತದಿಂದ ಒಪ್ಪಿದ್ದಾನೆ, ಹೇಳಿಯೂ ಇದ್ದಾನೆ. ಆದುದರಿಂದಲೇ ಈ ಎಲ್ಲ ಪಕ್ಷಗಳ ವಿವೇಚನೆಯನ್ನು ಸ್ವಲ್ಪ ವಿಸ್ತಾರವಾಗಿಯೇ ಮಾಡಬೇಕಾಯಿತು ; ಇವು ಪರಸ್ಪರ ವಿರುದ್ಧಗಳಾಗಿದ್ದಿದ್ದರೆ ಮತಂಗನಾಗಲೀ ಶಾರ್ಙ್ಗದೇವನಾಗಲೀ ಒಟ್ಟಿಗೆ ಸಂಗ್ರಹಿಸಿ ಹೇಳುತ್ತಿರಲಿಲ್ಲ ; ಇವುಗಳಲ್ಲಿ ಭಿನ್ನತೆಯಿದ್ದಿದ್ದರೆ ಮತಂಗನು ನೇರವಾದ ಮಾತಿನಲ್ಲಿಯೇ ಹೇಳಿ ಅವುಗಳಲ್ಲಿ ಇದು ಸರಿ, ಇದು ತಪ್ಪು, ಇದು ಗ್ರಾಹ್ಯವಾದುದು, ಎಂದು ಮುಂತಾಗಿ ಹೇಳುತ್ತಿದ್ದನು. ಶ್ರುತಿ–ಸ್ವರಸಂಬಂಧದಲ್ಲಿ ತಾದಾತ್ಮ್ಯಾದಿ ವಿಕಲ್ಪಗಳನ್ನು ಹೇಳುವಾಗ ಹೀಗೆ ಅವನು ಮಾಡಿಯೂ ಇದ್ದಾನೆ ಎಂಬುದನ್ನು ಮುಂದೆ ಪ್ರಸ್ತಾಪಿಸಲಾಗುವುದು. ಮೂರ್ಛನಾತಾನಗಳಲ್ಲಿ ಭೇದ ಮುಂತಾದ ಇತರ ವಿಷಯಗಳಲ್ಲಿಯೂ ಅವನು ಹೀಗೆಯೇ ಮಾಡಿದ್ದಾನೆ ; ಶಾರ್ಙ್ಗದೇವನು ಧ್ವನ್ಯಂತರಾಶ್ರುತಿ, ನೈರಂತರ್ಯ ಇತ್ಯಾದಿ ಶ್ರುತಿಲಕ್ಷಣಗಳಿಂದ ಮತಂಗಮುನಿಯ ಏಕಶ್ರುತಿಪಕ್ಷವನ್ನೂ, ಮೇಲೆ ಹೇಳಿದ ರೀತಿಯಲ್ಲಿ ವಿಶ್ವಾವಸುವಿನ ಶ್ರುತಿದ್ವೈವಿಧ್ಯಪಕ್ಷವನ್ನೂ, ಶ್ರುತಿತ್ರೈವಿಧ್ಯವನ್ನೂ ಒಪ್ಪಿ, ಸೂಚಿಸಿದ್ದಾನೆ. ವಾತ ಪಿತ್ತ ಕಫ ಸನ್ನಿಪಾತಗಳಿಂದ ಹುಟ್ಟಿದ ಶಾರೀರಗುಣಗಳನ್ನೂ ಆದುದರಿಂದ ಇವುಗಳನ್ನು ಬೀಜರೂಪದಲ್ಲಿ ಸ್ವರದ ಪ್ರಮಾಣ, ಲಕ್ಷಣ, ಗುಣ ಮುಂತಾದವುಗಳಿಗೆ ಹೇತುಗಳಾದ ಶ್ರುತಿಗಳಲ್ಲಿಯೂ ಹೇಳಿದ್ದಾನೆ. ಹೀಗೆ ಶ್ರುತಿಯ ಚಾತುರ್ವಿಧ್ಯವನ್ನು ಅನುಮಿತಿಯಲ್ಲಿ ಅವನು ಹೇಳಿದ್ದಾನೆಂದು ತಿಳಿಯಲು ಅವಕಾಶವಿದೆ; ಮೇಲಿನ ಶ್ರುತಿಲಕ್ಷಣಗಳನ್ನೂ ಸ್ವರಸ್ವಸಂವೇದ್ಯತೆಯನ್ನೂ ಅವನು ಒಪ್ಪಿ ಊರ್ಧ್ವಸ್ಥಾನಸ್ಪರ್ಶದಿಂದ ಸ್ವರದ ವೈವಿಧ್ಯವನ್ನು ಹೇಳುವುದರಿಂದಲೂ ದ್ವಿ–, ತ್ರಿ–, ಚತುಃಶ್ರುತಿಕ ಸ್ವರಗಳನ್ನೇ ಅವನೂ ಹೇಳುವುದರಿಂದಲೂ ನವಶ್ರುತಿಪಕ್ಷವನ್ನು ಹೇಳಿದಂತಾಯಿತು. ಇಪ್ಪತ್ತೆರಡು ಶ್ರುತಿಗಳ ಪಕ್ಷವನ್ನಂತೂ ಪ್ರಕಟವಾಗಿಯೇ ಹೇಳಿದ್ದಾನೆ. ಅರವತ್ತಾರು ಶ್ರುತಿಗಳನ್ನೂ ಪ್ರಕಟವಾಗಿಯೇ ಹೇಗೆ ಹೇಳಿದ್ದಾನೆಂಬುದನ್ನು ಈಗಾಗಲೇ ತೋರಿಸಿದೆ.

ದ್ವಾವಿಂಶತಿ ಶ್ರುತಿಪಕ್ಷಕ್ಕೂ ಷಟ್‌ಷಷ್ಟಿಶ್ರುತಿಪಕ್ಷಕ್ಕೂ ಇರುವ ಮುಖ್ಯ ವ್ಯತ್ಯಾಸವೇನೆಂದರೆ ದ್ವಾವಿಂಶತಿ ಶ್ರುತಿಪಕ್ಷವು ಸ್ಥಾಯಿಯನ್ನು, ತನ್ಮೂಲಕ ಸ್ವರಾಷ್ಟಕವನ್ನು, ಆಧಾರ ಪ್ರಮೇಯವಾಗಿ ಬಳಸಿದರೆ ಷಟ್‌ಷಷ್ಟಿಶ್ರುತಿಪಕ್ಷವು

ಸಂಗೀತೋಪಯುಕ್ತವಾದ ಇಡೀ ನಾದವ್ಯಾಪ್ತಿಯನ್ನೇ ಮೂರು ಸ್ಥಾಯಿಗಳೆಂದು ವ್ಯವಹರಿಸಿ ಇದರಲ್ಲಿರುವ ಅರವತ್ತಾರು ಹಂತಗಳೂ, ಗುಣದಲ್ಲಿ ಬೇರೆ ಬೇರೆಯಾದರೂ, ಆವೃತ್ತಿತನವನ್ನು ಪಡೆದಿರುತ್ತವೆ ಎಂಬ ಆಧಾರ ಪ್ರತಿಜ್ಞೆಯನ್ನು ಬಳಸುತ್ತದೆ. ಹೀಗೆ ಮಾಡುವುದರ ಆವಶ್ಯಕತೆಯನ್ನು ಸ್ಥಾಯಿಯ ವಿವೇಚನೆಯಲ್ಲಿ (ಪು. 191, 195–196) ಸೂಚಿಸಿ ಆಗಿದೆ.

ಅರವತ್ತಾರು ಶ್ರುತಿಗಳ ಪಕ್ಷವು ಉಳಿದ ಮತಗಳಿಗಿಂತ ಪರಮಾರ್ಥದಲ್ಲಿ ಭಿನ್ನವೇನಲ್ಲ. ಶ್ರುತಿಯ ಧ್ವನ್ಯಂತರಾಶ್ರುತಿ ಮತ್ತು ನೈರಂತರ್ಯಗಳನ್ನು ಒಪ್ಪುವುದರಿಂದ ನಾದದ ಅಖಂಡತೆಯನ್ನೂ ಆದುದರಿಂದ ಮತಂಗನ ಏಕಶ್ರುತಿವಾದವನ್ನೂ ಅದು ಒಳಗೊಂಡಿದೆ. ಈ ಕಾರಣಕ್ಕಾಗಿಯೇ ಅದು ಸ್ವರದ ದ್ವಿ–, ತ್ರಿ–, ಚತುಃಶ್ರುತಿಕ ಪ್ರತ್ಯಯಸ್ವರೂಪಗಳನ್ನೂ ಒಳಗೊಂಡಿದೆ. ದ್ವಾವಿಂಶತಿ ಶ್ರುತಿಪಕ್ಷವನ್ನೇ ಇದು ಮೂಲದಲ್ಲಿ ಗ್ರಹಿಸುವುದರಿಂದ ವಿಶ್ವಾವಸುವಿನ ಸ್ವರಗತಶ್ರುತಿ, ಅಂತರಗತಶ್ರುತಿಯೆಂಬ ವಿಭಾಗವನ್ನೂ, ಸ್ಥಾನಾಂತರದಲ್ಲಿ ಆವೃತ್ತಿಯಿಂದ ತ್ರಿವಿಧ ಶ್ರುತಿಪಕ್ಷವನ್ನೂ ಆವೃತ್ತಿತನವನ್ನು ಅಂಗೀಕರಿಸುವುದರಿಂದ ಸ್ವರದ (ಆದುದರಿಂದ ಶ್ರುತಿಯ) ತ್ರಿವಿಧ ಊರ್ಧ್ವಸ್ಪರ್ಶವನ್ನೂ ಆದುದರಿಂದ ನವವಿಧಶ್ರುತಿಪಕ್ಷವನ್ನೂ ಇದು ಒಳಗೊಂಡಿದೆ. ದ್ವಾವಿಂಶತಿಶ್ರುತಿಪಕ್ಷವನ್ನು ಅದು ಒಳಗೊಂಡಿರುವುದಂತೂ ಸುಸ್ಪಷ್ಟವೇ ಆಗಿದೆ.

ತ್ರಿವಿಧಶ್ರುತಿಪಕ್ಷವನ್ನೂ ದ್ವಾವಿಂಶತಿ ಶ್ರುತಿಪಕ್ಷವನ್ನೂ ಒಟ್ಟುಗೂಡಿಸಿ ಷಟ್‌ಷಷ್ಟಿ ಶ್ರುತಿಪಕ್ಷವನ್ನು ಪಡೆಯಲಾಗಿದೆಯೆಂದು ಬೇಕಾದರೂ ಭಾವಿಸಬಹುದು. ತ್ರಿವಿಧಶ್ರುತಿಪಕ್ಷದಿಂದ ಶ್ರುತಿಗೆ ಊರ್ಧ್ವಸ್ಪರ್ಶದಿಂದ ಆವೃತ್ತಿತನವನ್ನೂ ಸ್ಥಾನಾಂತರದಲ್ಲಿ ವಿಶೇಷತೆಯನ್ನೂ ಹೇಳಿ ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿರುವ ಇಪ್ಪತ್ತೆರಡು ಶ್ರುತಿಗಳಿಗೆ ಇವುಗಳನ್ನು ಅನ್ವಯಿಸಿದರೆ ಅರವತ್ತಾರು ಶ್ರುತಿಗಳು ಲಭಿಸುತ್ತವೆ. ಹೀಗೆ ಈ ಪಕ್ಷವು ವೈಜ್ಞಾನಿಕವಾಗಿದ್ದು ಗಾನ–ಪ್ರಪಂಚಸರ್ವಸ್ವದ ಮೊತ್ತವನ್ನು ತನ್ನ ಪರಿಮಿತಿಯಲ್ಲಿ ಅಡಗಿಸಿಕೊಳ್ಳುತ್ತದೆ. ಒಟ್ಟಿನಲ್ಲಿ ಸಂಗೀತೋಪಯೋಗಿಯಾದ ನಾದದ್ರವ್ಯವನ್ನೆಲ್ಲಾ ಪರಿಶೀಲಿಸಿ ಇದರಲ್ಲಿ ರಕ್ತಿಧರ್ಮವುಳ್ಳ ಹಂತಗಳೆಷ್ಟು ಎಂಬ ವಿವೇಚನೆಯನ್ನು ಈ ಪಕ್ಷವು ನಡೆಸುತ್ತದೆ.

## 9. ಶ್ರುತಿಯು ಅನಂತವಾದುದು

ಕಡೆಯದಾಗಿ, ಶ್ರುತಿಗಳು ಲೆಕ್ಕಿಸಲಾಗದಷ್ಟು ಇವೆ ಎಂಬ ಬಹು ಪ್ರಾಚೀನ ಮತವನ್ನು ಕೋಹಲನು ಇತರರಿಂದ ಸಂಗ್ರಹಿಸಿದುದನ್ನು ಮತಂಗನು ಉದ್ಧರಿಸಿಕೊಳ್ಳುತ್ತಾನೆ.[171] ಇದನ್ನು ಸ್ಪಷ್ಟಪಡಿಸಲು ಅವನು ಬಹು ಸುಂದರವಾದ ಹೋಲಿಕೆಯನ್ನು ಕೊಡುತ್ತಾನೆ: ಧ್ವನಿಶೇಷಗಳು ಆಕಾಶದ ಒಡಲಿನಲ್ಲಿ ಇಷ್ಟೇ ಎಂದು ಲೆಕ್ಕಮಾಡಿ ಹೇಳಲು ಆಗದೆ ಅನಂತವಾಗಿರುವಂತೆಯೇ ಶ್ರುತಿಗಳೂ ಅನಂತವೇ. ಪ್ರಚಂಡವಾದ ಬಿರುಗಾಳಿಯು ಬೀಸುತ್ತಿರಲಾಗಿ ಅತ್ತ ಇತ್ತ ಎಸೆದಾಡಿದ ಜಲರಾಶಿಯಲ್ಲಿ, ಸಮುದ್ರದಲ್ಲಿ ಹುಟ್ಟಿದ ಅಲೆಗಳ ಶ್ರೇಣಿಗಳನ್ನು ಲೆಕ್ಕಿಸಲು ಹೇಗೆ ಸಾಧ್ಯವಿಲ್ಲವೋ ಶ್ರುತಿಗಳನ್ನೂ ಹಾಗೆಯೇ ಇಷ್ಟೇ ಇಂದು ಎಣಿಸಿ ಹೇಳಲು ಅಸಾಧ್ಯ :

ಅಧುನಾ ಶ್ರುತೀನಾಮಾನಂತ್ಯಂ ದರ್ಶಯಾಮಃ —

ಆನಂತ್ಯಂ ತು ಶ್ರುತೀನಾಂ ತು ದರ್ಶಯಂತಿ ವಿಪಶ್ಚಿತಃ |
ಯಥಾ ಧ್ವನಿವಿಶೇಷಾಣಾಮಾನಂತ್ಯಂ ಗಗನೋದರೇ ||
ಉಚ್ಚಂಡಪವನೋದ್ವೇಗಜಲರಾಶಿಸಮುದ್ಭವಾಃ |
ಕಿಯಂತಃ ಪ್ರತಿಪದ್ಯಂತೇ ನ ತರಂಗಪರಂಪರಾಃ || [202]

202 ಮತಂಗ, ಉ. ಗ್ರಂ., 29, 30, ಪು. 7.

ಕಲ್ಲಿನಾಥನು ಇದನ್ನು ಉದ್ಧರಿಸಿಕೊಳ್ಳುತ್ತಾ

ಆನಂತ್ಯಂ ಹಿ ಶ್ರುತೀನಾಂ ಚ ಸೂಚಯಂತಿ ವಿಪಶ್ಚಿತಃ ।
ಯಥಾ ಧ್ವನಿವಿಶೇಷಾಣಾಮಾನಂತ್ಯಂ ಗಗನೋದರೇ ॥
ಉತ್ತಾಲಪವನೋದ್ವೇಲಜಲರಾಶಿಸಮುದ್ಭವಾಃ ।
ಇಯತ್ತಾಂ ಪ್ರತಿಪದ್ಯಂತೇ ನ ತರಂಗಪರಂಪರಾಃ ॥ 172

ಎಂದು ಸ್ವಲ್ಪ ಭಿನ್ನವಾಗಿ ಪಠಿಸಿಕೊಂಡಿದ್ದಾನೆ. ಆಕಾಶದಲ್ಲಿ ಲೆಕ್ಕವಿಲ್ಲದಷ್ಟು ಶಬ್ದಗಳಿವೆ. ಶಬ್ದವು ಆಕಾಶದ ಗುಣವೇ ಆಗಿರುವುದು ಸರಿಯಷ್ಟೆ. ಇವುಗಳೆಲ್ಲವೂ ಒಮ್ಮೆಗೇ ಗೋಚರವಾಗುವುದಿಲ್ಲ. ಕೆಲವು ಮಾತ್ರ ಕಿವಿಗೆ ಗೋಚರವಾಗುತ್ತವೆ. ಹಾಗೆಯೇ ಶ್ರುತಿಗಳೂ ಅನಂತ. ಹಾಗೆಯೇ ಬಿರುಗಾಳಿಗೆ ಸಿಕ್ಕಿದ ಸಮುದ್ರದ ಅಲೆಗಳನ್ನು ಎಣಿಸಿ ಹೇಳಲಾಗುವುದಿಲ್ಲ. ಇಲ್ಲಿ ದ್ರವ್ಯವಾದ ಆಕಾಶಕ್ಕಾಗಲೀ ಜಲರಾಶಿಗಾಗಲೀ ಆನಂತ್ಯವನ್ನು ಹೇಳುತ್ತಿಲ್ಲವೆಂಬುದನ್ನೂ ಅವುಗಳ ಗುಣಗಳಾದ, ಎಂದರೆ ಅಭಿವ್ಯಕ್ತಿ ಪ್ರಕಾರಗಳಾದ ಶಬ್ದ ಮತ್ತು ಅಲೆಗಳಿಗೆ ಮಾತ್ರ ಆನಂತ್ಯವನ್ನು ಹೇಳಲಾಗುತ್ತಿದೆಯೆಂಬುದನ್ನೂ ಗಮನಿಸಬೇಕು. ಹೀಗೆ ಪರಿಮಿತದ್ರವ್ಯದಲ್ಲಿ ಗುಣವನ್ನು ಇಯತ್ತೆಯಿಂದ ಹೇಳಲಾಗದುದರಿಂದ ಅಪರಿಮಿತತ್ವವನ್ನು ತಿಳಿಯಲಾಗಿದೆ. ಅನಂತ ಎಂಬುದನ್ನು ಹೀಗೆ ಎರಡು ಅರ್ಥಗಳಲ್ಲಿ ಹೇಳಬಹುದು : ಅಸಂಖ್ಯಾತವಾದ, ಎಂದರೆ ಎಲ್ಲಾ ಊಹೆಗೂ ಕಲ್ಪನೆಗೂ ಮೀರಿದಷ್ಟು ದೊಡ್ಡ ಸಂಖ್ಯೆಯಲ್ಲಿ (∞)ಎಂಬ ಬೃಹತ್ತ್ವವು ಒಂದು. ಸಂಖ್ಯೆಯಲ್ಲಿ ಅಪರಿಮಿತವಲ್ಲದಿದ್ದರೂ, ದ್ರವ್ಯದಲ್ಲಿ ಆದ್ಯಂತಗಳನ್ನು ಗುರುತಿಸಲಾಗದಿರುವುದು ಇನ್ನೊಂದು. ಅಲೆಗಳಲ್ಲಿ ಅನೇಕತ್ವವೂ ಏಕತ್ವವೂ ಒಟ್ಟಿಗೆ ಭಾಸವಾಗುವ ಹಾಗೆ ಶ್ರುತಿಗಳಲ್ಲಿಯೂ ಏಕಕಾಲದಲ್ಲಿ ಮತಂಗನು ಹೇಳಿದ ಏಕತ್ವವೂ ಉಳಿದವರು ಹೇಳಿದ ಅನೇಕತ್ವವೂ ಭಾಸವಾಗುವುದರಿಂದ ಈ ಪಕ್ಷವು ಹುಟ್ಟಿರಬಹುದು. ಅಥವಾ ಬಹು ದೊಡ್ಡ ಸಂಖ್ಯೆಯದು ಎಂಬುದನ್ನು ಉತ್ಪ್ರೇಕ್ಷೆಯಿಂದ ಅನಂತವೆಂದು ಹೇಳಿದ್ದರೂ ಇರಬಹುದು. ಇದು ಹೇಗೇ ಇರಲಿ, ನೀರಿನ ಅಲೆಯು ಒಂದಾದ ಮೇಲೊಂದರಂತೆ ನೀರಿನಲ್ಲಿ ತನ್ನನ್ನು ತಾನೇ ಉತ್ತರೋತ್ತರವಾಗಿ ಹುಟ್ಟಿಸಿಕೊಂಡು ಕಡೆಯಲ್ಲಿ ದಡವನ್ನು ಮುಟ್ಟುತ್ತದೆ ಎಂಬುದಕ್ಕೂ ಶಬ್ದದ ಅಲೆಯೂ ಆಕಾಶದಲ್ಲಿ (ವಾತಾವರಣದಲ್ಲಿ) ತನ್ನನ್ನು ತಾನೇ ಉತ್ತರೋತ್ತರವಾಗಿ ಉಪಬೃಂಹಿಸಿಕೊಂಡು ಕಡೆಯಲ್ಲಿ ಕಿವಿಯನ್ನು ಮುಟ್ಟುತ್ತದೆ ; ನೀರು ಮತ್ತು ಗಾಳಿ, ಕಲ್ಲು ಮುಂತಾದ ದ್ರವ್ಯಗಳ ಸಂಘಾತದಿಂದ ನೀರಿನ ಅಲೆಯೂ ವಸ್ತುಗಳ ಸಂಘಾತದಿಂದ ಶಬ್ದದ ಅಲೆಯೂ ಹುಟ್ಟುತ್ತವೆ ; ಎರಡರಲ್ಲಿಯೂ ಅನುಭವನಮೂಲವಾದ ಘಟನೆಯು ಏಕೈಕವಾಗಿರುತ್ತದೆ. ಎರಡರಲ್ಲಿಯೂ ಕ್ರಿಯೆಯು ನಿರಂತರವಾಗಿ, ಅಖಂಡವಾಗಿ, ಅವಿಚ್ಛಿನ್ನವಾಗಿರುತ್ತದೆ—ಆದರೂ ಪ್ರತ್ಯೇಕವಾಗಿರುವಂತೆ, ಅನೇಕವಾಗಿರುವಂತೆ ತೋರುತ್ತದೆ ; ಇವುಗಳ ಅನುಭವವಾದರೂ ಏಕರೂಪವಾಗಿ, ಅಖಂಡವಾಗಿ ಇರುತ್ತದೆ ಎಂಬ ಪೂರ್ಣ ಉಪಮಾನದ ಸೌಂದರ್ಯವನ್ನು ಇಲ್ಲಿ ಗಮನಿಸಬೇಕು.

ಈ ಪಕ್ಷದಲ್ಲಿ ಶ್ರುತಿ ಎಂಬುದಕ್ಕೆ ಸಾಮಾನ್ಯಾರ್ಥ, ವಿಶೇಷಾರ್ಥಗಳೆರಡನ್ನೂ ಕಲ್ಪಿಸಬಹುದು. ಸಾಮಾನ್ಯಾರ್ಥದಲ್ಲಿ ಶಬ್ದ, ಧ್ವನಿ, ಕೇಳಿಸಿದ್ದು ಎಂದಿಷ್ಟೇ ಆಗುತ್ತದೆ. ಇದರ ಆನಂತ್ಯವು ಪ್ರಕೃತಿಸಿದ್ಧವೇ ಆಗಿದೆ. ಆದರೆ ಇದರಿಂದ ಸಂಗೀತಶಾಸ್ತ್ರಕ್ಕೆ ಪ್ರಯೋಜನವೇನೂ ಇಲ್ಲ. ಏಕೆಂದರೆ ಪ್ರಮಾಣ, ಅಂತರ, ಸ್ವರೂಪ ಮುಂತಾದವುಗಳಲ್ಲಿ ಇಯತ್ತೆಯೇ ಇಲ್ಲದ ಇವುಗಳಲ್ಲಿ ಸ್ವರತ್ವಕ್ಕೆ ಬೇಕಾದ ಯಾವ ಅಂಶಗಳೂ, ಸ್ಥಾಯಿ ಮುಂತಾದ ನಾದ ಪ್ರಮಾಣಗಳ ಖಚಿತ ನಿಷ್ಕರ್ಷೆಯೂ ಸಾಧ್ಯವಾಗುವುದಿಲ್ಲ ; ವಾಗ್ವ್ಯವಹಾರದ ಹಾಗೂ ಗಾನವ್ಯವಹಾರದ ಸಾಮಗ್ರಿಗಳಿಗೆ ಇಲ್ಲಿ ಭೇದವೇ ಇಲ್ಲದೆ ಹೋಗುತ್ತದೆ. ವಿಶೇಷಾರ್ಥದಲ್ಲಿ ಪುನಃ ಎರಡು ಪಕ್ಷಗಳನ್ನು ಗ್ರಹಿಸಬಹುದು. ಶಾರ್ಙ್ಗದೇವ, ಅಭಿನವಗುಪ್ತರು ಹೇಳುವ ಧ್ವನಿವೈಲಕ್ಷಣ್ಯದ ಎಂದರೆ ಧ್ವನ್ಯಂತರಾಶ್ರುತಿ, ನೈರಂತರ್ಯಗಳನ್ನು

ಶ್ರುತಿಗೆ ಹೇಳುವುದು ಒಂದು ಪಕ್ಷ. ಹೀಗೆ ಮಾಡಿದರೆ ಮಾನವಶ್ರೋತ್ರೇಂದ್ರಿಯಗ್ರಾಹ್ಯವಾದ, ಸಮಗ್ರವಾದ ನಾದವ್ಯಾಪ್ತಿಯಲ್ಲಿ ಇವು ಬಹು ದೊಡ್ಡ ಸಂಖ್ಯೆಯಲ್ಲಿ ದೊರೆಯುತ್ತವೆ ಎಂಬುದನ್ನು ಉತ್ಪ್ರೇಕ್ಷಿಸಿ ಅನಂತವೆಂದು ಹೇಳಿದೆ ಎಂಬ ವ್ಯಾಖ್ಯಾನವನ್ನು ಮಾಡಬೇಕು. ಸ್ವರತ್ವಕ್ಕೆ ಕಾರಣವಾದ ಬಹುಸಂಖ್ಯೆಯ ಅನುರಣನಗಳನ್ನೇ ಶ್ರುತಿಗಳೆಂದಿಟ್ಟುಕೊಂಡರೆ ಇವು ಅಸಂಖ್ಯಾತಗಳೇ. ಈ ಎರಡು ಪಕ್ಷಗಳಲ್ಲಿಯೂ ಶ್ರುತಿಯು ಸ್ವರತ್ವವನ್ನು ಹೊಂದಲು ಬೇಕಾದಷ್ಟು ಉಚ್ಚನೀಚಪ್ರಮಾಣವನ್ನು ಪಡೆದಿದೆಯೆಂದು ಅರ್ಥ. ಎರಡನೆಯ ಪಕ್ಷದಲ್ಲಿ ಸ್ವರತ್ವವನ್ನು ಸಂಬಂಧಿಸದೆಯೇ ಕೇವಲ ಪರಮಾಣುವಿನಷ್ಟು, ಗೋಚರಕ್ಕೇ ಸಿಲುಕದಷ್ಟು ಅಲ್ಪ ಪ್ರಮಾಣದ ನಾದಾಂತರಗಳಿಗೆ ಶ್ರುತಿಯೆಂದು ಸಂಜ್ಞೆಯನ್ನು ಕೊಟ್ಟರೆ—ಇದಕ್ಕೆ ಅಭಿನವಗುಪ್ತನದೂ ಮತಾಂತರದಲ್ಲಿ ಸಮ್ಮತಿಯುಂಟು[109]—ಇವುಗಳನ್ನು ಲೆಕ್ಕಿಸುವ ಸಾಮರ್ಥ್ಯವು ಶ್ರವಣೇಂದ್ರಿಯಕ್ಕೆ ದುಸ್ಸಾಧ್ಯವೆಂದೂ ಇವು ಸಂಖ್ಯೆಯಲ್ಲಿ ಅಪರಿಮಿತವೆಂದೂ ಸುಲಭವಾಗಿಯೇ ಸಿದ್ಧವಾಗುತ್ತದೆ. ಬಿಂದುವಿಗೆ ಉದ್ದ ಅಗಲಗಳಿಲ್ಲ, ಅಸ್ತಿತ್ವಮಾತ್ರವಿದೆ ಎಂದು ರೇಖಾಗಣಿತದಲ್ಲಿ ಲಕ್ಷಣವನ್ನು ಹೇಳಿ, ಯಾವುದಾದರೊಂದು ಸರಳ ಅಥವಾ ವಕ್ರ ರೇಖೆಯಲ್ಲಿ ಅನಂತ ಬಿಂದುಗಳಿವೆ, ಎಂದಂತಿದೆ, ಈ ಪಕ್ಷ. ಇದರಲ್ಲಿ ಸ್ವರಶ್ರುತಿಗಳಿಗೆ ಭೇದವನ್ನೇನೋ ಅಂಗೀಕರಿಸಿದೆ ; ಆದರೆ ತ್ರಸರೇಣುವಿನಂತಹ ಬಿಸಿಲುಕೋಲಿನಲ್ಲಿರುವ ಧೂಳಿನ ಕಣದಷ್ಟು ಸೂಕ್ಷ್ಮವಾದ—ಇವು ಎಷ್ಟು ಸೇರಿ ಒಂದು ಸ್ವರವಾಗುತ್ತವೆ ಎಂದು ಎಣಿಸಿ ಹೇಳಲಾರಿಗೆ ಸಾಧ್ಯ ? ಆದುದರಿಂದಲೇ ಶ್ರುತಿಯು ಅನಂತವಾದುದು. ಈ ದೃಷ್ಟಿಯಲ್ಲಿ ಶ್ರುತಿಗೆ ಹೊಸ ಅರ್ಥವನ್ನೇ ಹೊರಡಿಸಿದಂತಾಗುತ್ತದೆ. ಇದನ್ನು ನಾದವಿಜ್ಞಾನವೂ ಒಪ್ಪುತ್ತದೆ. ಏಕೆಂದರೆ ಶ್ರವಣಸಾಮರ್ಥ್ಯವನ್ನು ಅವಲಂಬಿಸಿ ಸ್ವರವೊಂದರಲ್ಲಿಯೇ ಐನೂರ ನಲವತ್ತಕ್ಕಿಂತ ಹೆಚ್ಚಿನ ಮೆಟ್ಟಲುಗಳನ್ನು ಗ್ರಹಿಸಬಹುದೆಂಬುದು ಪ್ರಯೋಗಸಿದ್ಧ ಸತ್ಯವಾಗಿದೆ. ಧ್ವನಿವೈಲಕ್ಷಣ್ಯವೇ ಗೋಚರಿಸದಷ್ಟು ಅತ್ಯಲ್ಪಪ್ರಮಾಣಗಳಲ್ಲಿ ತಂತಿಯನ್ನು ಬಿಗಿಮಾಡುವುದೂ ಸಡಿಲಮಾಡುವುದೂ ಸಾಧ್ಯವಿದೆಯೆಂಬುದು ತಿಳಿದ ವಿಷಯವೇ ಆಗಿದೆ. ಸಾಮಾನ್ಯವಾಗಿ ಶ್ರೋತ್ರಗ್ರಹಣಕ್ಕೆ ಇಂತಹ ಕನಿಷ್ಠಮಿತಿಯೊಂದು ಉಂಟು. ಇದಕ್ಕೆ ಸ್ವರದ ಅಗಲ(tonal width)ವೆಂದು ನಾದವಿಜ್ಞಾನದಲ್ಲಿ ಸಂಜ್ಞೆ. ಶ್ರೋತ್ರಗ್ರಹಣಸಾಮರ್ಥ್ಯವು ಹೆಚ್ಚಿದಂತೆಲ್ಲಾ ಈ ಕನಿಷ್ಠ ಮಿತಿಯ ಪ್ರಮಾಣವೂ ಕಡಿಮೆಯಾಗುತ್ತಾ ಬರುತ್ತದೆ. ವಾದೀತ್ವಭಗ್ನತಾಪರಿಣಾಮ (ಪು. 196), ಸ್ವರದ ಊರ್ಧ್ವಗಾಮಿತ್ವ (formant formation : ಇದನ್ನು ಮುಂದೆ ವಿವರಿಸಿದೆ) ಮೊದಲಾದ ಸೂಕ್ಷ್ಮಾತಿ-ಸೂಕ್ಷ್ಮತತ್ತ್ವಗಳನ್ನು ಕೇವಲ ತಮ್ಮ ಅವಧಾನದಿಂದಲೇ, ಏಕಾಗ್ರವಾದ ತಪಸ್ಸಿನಿಂದಲೇ, ಸ್ಥೂಲವಾದ ಶ್ರೋತ್ರೇಂದ್ರಿಯದಿಂದಲೇ ಸಾವಿರಾರು ವರ್ಷಗಳ ಹಿಂದೆ ನಿರ್ಧರಿಸಿ ಹೇಳಿದ ನಮ್ಮ ಮಹರ್ಷಿಗಳು ಶ್ರುತಿಗಳು ಅನಂತವೆಂದರೆ ಅವರ ಅನುಭವಕ್ಕೆ ಅದು ಸತ್ಯವೇ ; ಅದಕ್ಕೆ ಆಶ್ಚರ್ಯಪಡಬೇಕಾಗಿಲ್ಲ.

ತ್ರಸರೇಣುವಿನಂತಹ ಶ್ರುತಿಯಿಂದಾದ ಆನಂತ್ಯವನ್ನು ಕಲ್ಲಿನಾಥನು ಹೀಗೆ ವ್ಯಾಖ್ಯಾನಮಾಡುತ್ತಾನೆ :

ಅಸ್ಮಿನ್ ಪಕ್ಷೇ ರಣಾನಾನುರಣನಾತ್ಮಕಯೋಃ ಶ್ರುತಿಸ್ವರಯೋರ್ಭೇದಾಂಗೀಕಾರೇ ಽಪ್ಯನುರಣನರೂಪಾಣಾಮಪಿ ಧ್ವನೀನಾಂ ಶ್ರುತಿತ್ವಮಭಿಧಾಯೋಭಯೇಷಾಮಪಿ ವೀಚೀತರಂಗನ್ಯಾಯೇನೋತ್ಪದ್ಯಮಾನಾನಾಂ ತೇಷಾಮತಿಸೂಕ್ಷ್ಮಭಾಗಕಲ್ಪನಯಾ ಪ್ರತಿಧ್ವನ್ಯವಯಭೂತಧ್ವನಿಬಹುತ್ವವಿವಕ್ಷಯಾ ಽಽನಂತ್ಯಂ ದರ್ಶಿತಮ್ | [199]

ಹೀಗೆ ರಣನವನ್ನು ಶ್ರುತಿಯೆಂದೂ ಅನುರಣನವನ್ನು ಸ್ವರವೆಂದೂ ಅವನು ಗ್ರಹಿಸುತ್ತಾನೆ. ವಸ್ತುಸಂಘಾತದ ಪ್ರಥಮಕ್ಷಣದಲ್ಲಿ ಗೋಚರಿಸುವ ಶಬ್ದವು ರಣನ. ಇದಕ್ಕೆ ಸ್ವರತ್ವವಿಲ್ಲ, ಗಾನವ್ಯವಹಾರವಿಲ್ಲ. ದ್ವಿತೀಯ ಕ್ಷಣದಲ್ಲಿಯೇ ಇದರ ಗುಣವಾದ ಅನುರಣನವು ಉಂಟಾಗುತ್ತದೆ. ಇದರಿಂದಲೇ ಸ್ವರವು ಅಭಿವ್ಯಕ್ತವಾಗುವುದು. ದ್ರವ್ಯವು ಹುಟ್ಟಿದಕೂಡಲೇ ಗುಣಗಳೂ ಅದರೊಡನೆಯೇ ಹುಟ್ಟುವುದಿಲ್ಲವೆಂದೂ, ಈ ಪ್ರಥಮಕ್ಷಣದಲ್ಲಿ ಅದು ಗುಣವಿಲ್ಲದೆಯೇ ಇರುವುದೆಂದೂ, ದ್ವಿತೀಯಕ್ಷಣದಲ್ಲಿ ಗುಣಗಳು ಅದರಲ್ಲಿ ಉಂಟಾಗುವುವೆಂದೂ ತಾರ್ಕಿಕರು ಉಪಯೋ

ಗಿಸುವ ವಾದಕ್ರಮವನ್ನು ಇದು ಹೋಲುತ್ತದೆ. ಈ ರಣನ-ಅನುರಣನಗಳು ವೀಚೀತರಂಗನ್ಯಾಯದಲ್ಲಿರುತ್ತವೆ. ಎಂದರೆ ಅಲೆಗಳು ಒಂದಾದಮೇಲೊಂದರಂತೆ ಎಡೆಬಿಡದೆ (ಎಂದರೆ ನಿರಂತರವಾಗಿ) ಹುಟ್ಟಿಬರುತ್ತಿರುವಂತೆ ರಣನಾತ್ಮಕವಾದ ಶ್ರುತಿಯು ಅಲೆಗಳಿಗೆ ಕಾರಣವಾದ ವಸ್ತುಸಂಘಾತಜಮಾತ್ರವೆಂದೂ ಅನುರಣನಾತ್ಮಕವಾದ ಸ್ವರವು ಅಲೆಗಳೆಂದೂ ಹೋಲಿಕೆಯನ್ನು ಕೊಟ್ಟಂತಾಯಿತು. ಹೀಗೆ ಶ್ರುತಿಗೆ ನೈರಂತರ್ಯವು ಸಿದ್ಧಿಸುತ್ತದೆಯೇ ಹೊರತು ಧ್ವನ್ಯಂತರಾಶ್ರುತಿಯಲ್ಲ. ಆದರೆ ಸ್ವರತ್ವಕ್ಕೆ ಶ್ರುತಿಯ ಧ್ವನ್ಯಂತರಾಶ್ರುತಿ, ನೈರಂತರ್ಯ, ಸ್ವರಗತತ್ವ, ರಕ್ತಿ ಮುಂತಾದ ಲಕ್ಷಣಗಳನ್ನು ಹೇತುಗಳೆಂದು ಈ ಪಕ್ಷವು ತಿಳಿಯುವುದಿಲ್ಲವಾದುದರಿಂದ ಸ್ವರತ್ವಕ್ಕೆ ಧ್ವನ್ಯಂತರಾ-ಶ್ರುತಿಯ ಅಭಾವದಿಂದ ಬಾಧೆಯೇನೂ ಇಲ್ಲ. ಅನುರಣನವೊಂದೇ ಇಲ್ಲಿ ಸ್ವರತ್ವಕ್ಕೆ ಹೇತು. ಅನುರಣನವೆಂದರೆ ಸ್ವರದ ಒಡನೆಯೇ ಸಹಸ್ಪಂದಕಗಳೂ ಅನುನಾದಕಗಳೂ ಆಗಿ ಹುಟ್ಟುವ ಆವರ್ತಕಗಳು (overtones) ಎಂದು ಇಲ್ಲಿ ಅರ್ಥಮಾಡುವುದು ಕಷ್ಟ. ಏಕೆಂದರೆ ಇಂತಹ ಆವರ್ತಕಗಳು ಸ್ವರದ ರಕ್ತಿಗೆ ಸಹಾಯಕಗಳೂ, ಇನ್ನು ಕೆಲವು ಅಸಹಕಾರಿಗಳೂ ಆಗಿವೆ. ಇದನ್ನು ಸ್ವರಗುಣದ ವಿವೇಚನೆಯಲ್ಲಿ ಮುಂದೆ ವಿವರಿಸಲಾಗುವುದು. ಇದು ಹೇಗೇ ಇರಲಿ, ಕಲ್ಲಿನಾಥನು ಈ ಪಕ್ಷವನ್ನೂ ಅಂಗೀಕರಿಸುವುದಿಲ್ಲ :

ತದನುಪಪನ್ನಮಿತಿ ಮಂತವ್ಯಮ್ । ಯದ್ಯಪಿ ಶ್ರವಣಯೋಗ್ಯಸ್ಯ ಧ್ವನೇರಿಂದ್ರಿಯಗ್ರಾಹ್ಯತ್ವಾಕ್ಷಿಪ್ತೇನ ಸಾವಯವತ್ವೇನ ತ್ರಸರೇಣುವದವಯವಾಃ ಸಂತಿ, ತಥಾಽಪಿ ತೇಷಾಂ ಶ್ರೋತ್ರಪ್ರತ್ಯಕ್ಷಮೂಲೇನಾನುಮಾನೇ-ನಾರ್ಥಾಪತ್ತ್ಯಾ ವಾಽನ್ಯತರೇಣೈವ ತ್ರಸರೇಣುಗತಪರಮಾಣುವದ್ಗಮ್ಯತಯಾ ಶ್ರೋತ್ರಗ್ರಾಹ್ಯತ್ವಾಭಾವಾತ್, ಸ್ವತಃ ಸ್ವರಾಭಿವ್ಯಕ್ತಿಹೇತುತ್ವಾಭಾವೇನಾಶ್ರುತಿತ್ವಾದಿತಿ । [199]

ಭಾರತೀಯ ನ್ಯಾಯಶಾಸ್ತ್ರವು ಇಂದ್ರಿಯ ಪ್ರತ್ಯಕ್ಷವಾದುದೆಲ್ಲ ಸಾವಯವವಾದುದು, ಎಂದರೆ ಅವಯವ ಗಳನ್ನುಳ್ಳದುದು ಎಂದು ಬೋಧಿಸುತ್ತದೆ. ಹೀಗೆ ಇಂದ್ರಿಯ ಪ್ರತ್ಯಕ್ಷವಾದುದರಲ್ಲಿ ಅತ್ಯಂತ ಸೂಕ್ಷ್ಮವಾದುದು ತ್ರಸರೇಣುವೆಂಬುದು ; ಈ ಭೌತಿಕ ಜಗತ್ತಿನಲ್ಲಿ ಅನುಭವಗಮ್ಯವಾಗಿರುವ ದ್ರವ್ಯ (matter) ಮತ್ತು ಶಕ್ತಿ (energy)ಗಳೂ, ಅವುಗಳ ವಿವಿಧ ರೂಪಗಳೂ, ಸಮ್ಮಿಶ್ರಗಳೂ ತ್ರಸರೇಣುಗಳು ಅಸಂಖ್ಯವಾಗಿ ಒಟ್ಟುಗೂಡಿರು ವುದರಿಂದಲೇ ಆಗಿವೆ. ಆದುದರಿಂದ ಯಾವ ವಸ್ತುವನ್ನೇ ಆಗಲಿ, ವಿಭಜಿಸುತ್ತಾ ಹೋದರೆ, ಯಾವ ಪ್ರಕಾರ ದಿಂದಲೂ ಮುಂದೆ ವಿಭಾಗಿಸಲಾಗದಂತಹ, ವಿಭಾಗಿಸಿದರೆ ಅದರ ಅಸ್ತಿತ್ವವೇ ಅಪ್ರತ್ಯಕ್ಷವಾಗಿಬಿಡುವಂತಹ ಪ್ರಮಾಣವನ್ನೂ ಅವಸ್ಥೆಯನ್ನೂ ಅದು ಪಡೆಯುತ್ತದೆ. ಇದಕ್ಕೆ ತ್ರಸರೇಣುವೆಂದು ಹೆಸರು. ಇದು ಪ್ರಾಚೀನ ಗ್ರೀಕ್ ದಾರ್ಶನಿಕನಾದ ಡೆಮೋಕ್ರಿಟಸ್ಸನು ಹೇಳಿದ ಅಣುವಾದವನ್ನೂ ಹತ್ತೊಂಬತ್ತನೆಯ ಶತಮಾನದಲ್ಲಿ ಡಾಲ್ಟನ್ನನು ಹೇಳಿದ ಪರಮಾಣುವಾದವನ್ನೂ ಹೋಲುತ್ತಿದ್ದರೂ ಅವುಗಳಿಗಿಂತ ಬಹು ಉತ್ತಮವಾಗಿದೆ. ತ್ರಸರೇಣುವು ಬಿಸಿಲುಕೋಲಿನಲ್ಲಿ ಕಾಣುವ ಧೂಳಿನ ಕಣದಂತಿರುತ್ತದೆ. ಇದನ್ನೇ ಗಾತ್ರ ಮತ್ತು ತೂಕಗಳ ಪ್ರಮಾಣದ್ರವ್ಯ (standard unit) ವನ್ನಾಗಿ ನೈಯ್ಯಾಯಿಕರು ಸ್ವೀಕರಿಸುತ್ತಾರೆ. ತ್ರಸರೇಣುವು ಅಲ್ಪವಾದ, ಆದರೆ ನಿರ್ದಿಷ್ಟವಾದ, ಸಂಖ್ಯೆಯುಷ್ಟು ಪರಮಾಣುಗಳಿಂದ ಆಗಿದೆ. ಆದರೆ ಈ ಪರಮಾಣುವು ಸಾವಯವವಲ್ಲ ; ಏಕೆಂದರೆ ಅದು ಪ್ರತ್ಯಕ್ಷವಲ್ಲ. ಅಲ್ಲದೆ ಮಹತ್ತಿಗಿಂತ ಮಹತ್ತಾದುದು ಉತ್ಕೃಷ್ಟ, ಅಣುವಿಗಿಂತ ಅಣುವಾದುದು ಉತ್ಕೃಷ್ಟ ಎಂಬ ತಾರ್ಕಿಕ ಸಿದ್ಧಾಂತದ ಪ್ರಕಾರವೂ ಪರಮಾಣುವು ಸಾವಯವವಲ್ಲವೆಂದು ಸಿದ್ಧವಾಗುತ್ತದೆ.

ಶ್ರೋತ್ರಗ್ರಾಹ್ಯವಾದುದು ಶ್ರುತಿ ; ಧ್ವನ್ಯಂತರಾಶ್ರುತಿ ಎಂಬ ಲಕ್ಷಣದಿಂದಲೂ 'ಶ್ರವಣೇಂದ್ರಿಯಗ್ರಾಹ್ಯ-ತ್ವಾದ್ ಧ್ವನಿರೇವ ಶ್ರುತಿರ್ಭವೇತ್' ಎಂಬ ಲಕ್ಷಣದಿಂದಲೂ ಶ್ರೋತ್ರಗ್ರಹಣಸಾಮರ್ಥ್ಯಪರವಾದ ಅರ್ಥವನ್ನು ಇಟ್ಟುಕೊಂಡರೆ ಶ್ರುತಿಯು ಕೇಳಿಸಬಲ್ಲ ಎಲ್ಲಾ ಶಬ್ದ, ಸ್ವರಪ್ರಮಾಣಗಳಿಗಿಂತಲೂ ಅತ್ಯಂತ ಸೂಕ್ಷ್ಮವಾದುದು. ಆದುದರಿಂದ ಶ್ರೋತ್ರೇಂದ್ರಿಯಗ್ರಾಹ್ಯವಾದ ವಸ್ತುಗಳಲ್ಲಿ ಶ್ರುತಿಯನ್ನು ತ್ರಸರೇಣುವೆಂದು ತಿಳಿಯಬೇಕು.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ರುತಿಯು ಅನಂತವೆಂಬ ಪಕ್ಷದಲ್ಲಿ, ಮೇಲೆ ಹೇಳಿದ ವೀಚೀತರಂಗ ನ್ಯಾಯದಂತೆ ಶ್ರುತಿಗಳನ್ನೂ ಅಸಂಖ್ಯಾತವಾದ ಪರಮಾಣುಗಳಾಗಿ ಒಡೆಯಬೇಕಾಗುತ್ತದೆ. ಆದರೆ ಹೀಗೆ ಮಾಡಿದರೆ ಶ್ರುತಿಗಿರುವ ಶ್ರೋತ್ರೇಂದ್ರಿಯ ಪ್ರತ್ಯಕ್ಷತೆಯೂ ಇಲ್ಲವಾಗಿ ಅವುಗಳ ಅಸ್ತಿತ್ವವನ್ನು ಅನುಮಾನದಿಂದ ಅಥವಾ ಅರ್ಥಾಪತ್ತಿಯಿಂದ ಸಿದ್ಧಪಡಿಸ ಬೇಕಾಗುತ್ತದೆ ; ಆದರೆ ಹೀಗೆ ಮಾಡಲು ಪ್ರತ್ಯಕ್ಷ ಹೇತುವಾದರೂ ಇರಬೇಕು. ಶ್ರುತಿಗಳ ಅಸ್ತಿತ್ವವನ್ನು ಒಪ್ಪಿರುವು ದಾದರೂ ಸ್ವರತ್ವಕ್ಕೆ ಪ್ರತ್ಯಕ್ಷವೋ ಅಪ್ರತ್ಯಕ್ಷವೋ ಆಗಿರುವ ಹೇತುಗಳಾಗಿವೆಯೆಂಬ ಕಾರಣದಿಂದ. ತ್ರಸರೇಣು ರೂಪದ ಇವುಗಳನ್ನೂ ಪರಮಾಣುಪ್ರಮಾಣದ ಧ್ವನಿಗಳಿಂದ ಆಗಿವೆಯೆಂದು ತಿಳಿದರೆ, ಅಪ್ರತ್ಯಕ್ಷವಾದ ಇವುಗಳಿಗೆ ಸಾವಯವತ್ವವನ್ನೂ ಸ್ವರತ್ವವನ್ನೂ ಹೇಳಲು ಹೇಗೆ ಸಾಧ್ಯ ? ಕೇಳಿಸದೆಯೇ ಇರುವ ಇವುಗಳಲ್ಲಿ ಸ್ವರತ್ವದ ಪ್ರಾಪ್ತಿ ಯಾಗುವುದಾದರೂ ಹೇಗೆ ? ಹೀಗೆ ಪ್ರತ್ಯಕ್ಷಲಿಂಗವೂ ಇಲ್ಲದುದರಿಂದ ಅರ್ಥಾಪತ್ತಿ, ಅನುಮಾನಾದಿಗಳು ಇಲ್ಲಿ ಸಾಧ್ಯವಾಗುವುದಿಲ್ಲ. ಆದುದರಿಂದ ಶ್ರುತಿಗಳು ಅನಂತವೆಂಬ ಪಕ್ಷವನ್ನು ಗ್ರಹಿಸಲಾಗದು.

ಆದರೆ ಈ ವಾದವು ಅಷ್ಟು ಸಮಂಜಸವಾಗಿಲ್ಲ. ಏಕೆಂದರೆ ಒಂದೇ ಸ್ಥಾಯಿಯಲ್ಲಿ ಅನಂತಶ್ರುತಿಗಳೆಂಬ ಅರ್ಥವನ್ನು ಕಲ್ಲಿನಾಥನು ಇಲ್ಲಿ ಸ್ವೀಕರಿಸಿದ್ದಾನೆ ; ಹಾಗಿದ್ದರೂ ಈ ಅನಂತಶ್ರುತಿಗಳಲ್ಲಿ ಸ್ವರತ್ವವನ್ನುಂಟು ಮಾಡುವವುಗಳನ್ನು ಸ್ವರಗತಗಳೆಂದೂ ಉಳಿದವುಗಳನ್ನು ಅಂತರಗತಗಳೆಂದೂ ವಿಭಾಗಿಸಲು ಅಡ್ಡಿಯೇನೂ ಇರದು. ಶ್ರುತಿಗಳನ್ನು ಪುನಃ ಪರಮಾಣುಸ್ವರೂಪದ ಅಂಶಗಳನ್ನಾಗಿ ಒಡೆಯಬೇಕೆಂಬ ವಾದವು ಇಲ್ಲಿ ಪ್ರಸಕ್ತ ವಲ್ಲ ; ಏಕೆಂದರೆ ಆನಂತ್ಯವನ್ನು ಹೀಗೆಯೇ ಸಾಧಿಸಬೇಕೆಂದಿಲ್ಲ. ಶ್ರುತಿಯು ಇಂದ್ರಿಯಪ್ರತ್ಯಕ್ಷವಾದುದು, ಆದುದ ರಿಂದ ಸಾವಯವವಾದುದು ಎಂಬ ಮಾತಿನಿಂದಲೂ ಇಲ್ಲಿ ಪ್ರಯೋಜನವಿಲ್ಲ ; ಏಕೆಂದರೆ ಈ ಅವಯವಗಳನ್ನು ಸಂಗೀತ ಪ್ರಯೋಜಕಗಳೆಂದು ಸಂಗೀತಶಾಸ್ತ್ರವು ಒಪ್ಪಿಯೂ ಇಲ್ಲ, ಇವುಗಳ ಆವಶ್ಯಕತೆಯೂ ಇಲ್ಲ. ಇವುಗಳಿಂದ ತರ್ಕಶಾಸ್ತ್ರಕ್ಕೆ ಪ್ರಯೋಜನವೇ ಹೊರತು, ತ್ರಸರೇಣುಸ್ವರೂಪದ ಶ್ರುತಿಯಷ್ಟು ಸೂಕ್ಷ್ಮವಾದ ಧ್ವನಿಯಲ್ಲಿಯೇ ಸಂಗೀತಶಾಸ್ತ್ರದ ಪರೀಕ್ಷಣವು ಮುಗಿಯುತ್ತದೆ. ಇದರಿಂದ ಆಚೆಗೆ ಇರುವ ವಿಭಜನೆಯು ಈ ಶಾಸ್ತ್ರಮರ್ಯಾದೆ ಯನ್ನು ಮೀರಿದುದು. ಅಲ್ಲದೆ ಒಂದೇ ಸ್ಥಾಯಿಯಲ್ಲಿ ಈ ಅನಂತ ಶ್ರುತಿಗಳು ಇವೆ ಎಂಬ ಅವನ ಮಾತನ್ನು ಒಪ್ಪಲಾಗದು. ಹಾಗಿದ್ದರೆ ಮತಂಗನ ಪ್ರಕಾರ ಒಂದೇ ಶ್ರುತಿ, ವಿಶ್ವಾವಸುವಿನ ಪ್ರಕಾರ ಎರಡೇ ಶ್ರುತಿ, ಎಂದು ಮುಂತಾಗಿ ಹೇಳಿ ಕೇವಲ ಸ್ಥೂಲಾರ್ಥವನ್ನೇ ಹಿಡಿದರೆ ಒಂದು, ಎರಡು ಮುಂತಾದ ಶ್ರುತಿಗಳಿಂದ ಏಳು ಸ್ವರಗಳನ್ನೂ ಅವುಗಳ ಅವಾಂತರಭೇದಗಳನ್ನೂ ಹೇಳಲಾದೀತೆ ? ಆದುದರಿಂದ ಸಮಗ್ರವಾದ ನಾದವ್ಯಾಪ್ತಿಯಲ್ಲಿ ಅಡಗಿರುವ ಧ್ವನಿವೈಲಕ್ಷಣ್ಯಗಳನ್ನು ಇಲ್ಲಿ ಹೇಳಲಾಗಿದೆ ಎಂಬ ಅಭಿಪ್ರಾಯವೇ ಸರಿ.

ಕಲ್ಲಿನಾಥನ ಅಭಿಪ್ರಾಯದಲ್ಲಿ ದ್ವಾವಿಂಶತಿಶ್ರುತಿಪಕ್ಷವೊಂದೇ ಸಮೀಚೀನವಾದುದು. ಆದರೆ ಶ್ರುತಿಯ ಆನಂತ್ಯ ದಿಂದ ಉಳಿದ ಪಕ್ಷಗಳಿಗೂ, ಉಳಿದ ಪಕ್ಷಗಳಿಂದ ಅದಕ್ಕೂ ಬಾಧೆಯಿಲ್ಲವೆಂಬುದು ಅಲ್ಪಾಲೋಚನೆಯಿಂದಲೇ ಸಿದ್ಧ ವಾಗುತ್ತದೆ. ಮೊದಲನೆಯದಾಗಿ ಇಲ್ಲಿ ಶ್ರುತಿಯ ಕಲ್ಪನೆಯೇ ಬೇರೆ. ಈ ಪಕ್ಷವು ಹೇಳುವ ಲಕ್ಷಣಗಳನ್ನು ಸ್ವೀಕರಿಸಿ, ಅನಂತರ ವಿವೇಚನೆಯಿಂದ ಅದರ ಸರಿ ತಪ್ಪುಗಳನ್ನು ವಿಮರ್ಶಿಸಬೇಕೇ ಹೊರತು, ನಮ್ಮ ಪೂರ್ವಗ್ರಹದಲ್ಲಿರುವ, ಅಥವಾ ಅನ್ಯಪಕ್ಷಗಳಲ್ಲಿ ಹೇಳಿದ ಲಕ್ಷಣಗಳನ್ನು, ಅಥವಾ ಅದರ ಮರ್ಯಾದೆಯನ್ನು ಮೀರಿದ ಲಕ್ಷಣಗಳನ್ನು ಅನ್ವಯಿಸಿ ವಾದಫಲಿತಾಂಶಗಳ ಸರಿತಪ್ಪುಗಳನ್ನು ಹೇಳಹೊರಡುವುದು ಉದ್ಧಟತನವಾಗುತ್ತದೆ. ನೈರಂತರ್ಯವೆಂಬ ಲಕ್ಷಣದಿಂದ ಮತಂಗನ ಏಕಶ್ರುತಿವಾದವು ಶ್ರುತಿಯ ಆನಂತ್ಯದ ಪಕ್ಷದಲ್ಲಿಯೂ ಸಿದ್ಧವಾಗುತ್ತದೆ. ಅನಂತವಾದರೂ ಶ್ರುತಿಗಳಲ್ಲಿ ಕೆಲವದರಲ್ಲಿ ಸ್ವರದ ಉಪಸ್ಥಿತಿಯೂ ಮತ್ತೆ ಕೆಲವದರಲ್ಲಿ ಸ್ವರತ್ವದ ಅಪ್ರಾಪ್ತಿಯೂ ಸ್ವಯಂಸಿದ್ಧವಾದುದರಿಂದ ವಿಶ್ವಾ ವಸುವಿನ ಶ್ರುತಿದ್ವೈವಿಧ್ಯಕ್ಕೆ ಇದರಿಂದ ಬಾಧೆಯಿಲ್ಲ. ಅನಂತವಾದುದರಿಂದ, ನಾದದ ಸಮಗ್ರವ್ಯಾಪ್ತಿಯನ್ನು ಪೂರೈ ಸುವುದರಿಂದ, ಈ ಶ್ರುತಿಗಳು ಮಂದ್ರಮಧ್ಯತಾರಸ್ಥಾಯಿಗಳಲ್ಲಿ ವ್ಯಾಪಿಸಿರುತ್ತವಷ್ಟೆ. ಆದುದರಿಂದ ಶ್ರುತಿಯ ತ್ರೈವಿಧ್ಯ

ವನ್ನು ಹೇಳಿದರೂ ಆತಂಕವಿಲ್ಲ. ಈ ಪಕ್ಷದಲ್ಲಿ ಒಂದೇ ಸ್ಥಾಯಿಯಲ್ಲಿ ಅನಂತಶ್ರುತಿಗಳಿವೆ ಎಂದೇನೂ ಹೇಳಿಲ್ಲವಾದುದರಿಂದ ಇಪ್ಪತ್ತೆರಡು ಮತ್ತು ಅರವತ್ತಾರು ಶ್ರುತಿಗಳ ಪಕ್ಷವನ್ನೂ ಇಲ್ಲಿ ಹೊಂದಿಸಬಹುದು. ಶ್ರುತಿಗಳು ಅನಂತವೆಂದು ಹೇಳಿದೆಯೇ ಹೊರತು ಅನಂತವಿಧಗಳೆಂದೇನೂ ಹೇಳಿಲ್ಲ. ಆದುದರಿಂದ ಇವೆಲ್ಲವೂ ಒಂದೇ ಬಗೆಯುವೆಂದೋ ಅಥವಾ ಕೆಲವು ಗುಂಪುಗಳಲ್ಲಿ ವರ್ಗೀಕರಣ ಮಾಡಬಹುದಾದಂತಹವು ಎಂದೋ ಅರ್ಥಮಾಡಿಕೊಳ್ಳಬಹುದು. ಆದುದರಿಂದ ಊರ್ಧ್ವಸ್ಪರ್ಶಾದಿ ತತ್ತ್ವಗಳನ್ನೂ ಶ್ರುತಿಯ ನವವಿಧವನ್ನೂ ಬೇಕಾದರೂ ಹೇಳಿಕೊಳ್ಳಬಹುದು. ಒಂದೇ ಸ್ಥಾಯಿಯ ವಿಸ್ತಾರದಲ್ಲಿ ಅಥವಾ ತ್ರಿಸ್ಥಾಯಿ ವಿಸ್ತಾರದಲ್ಲಿ ಶ್ರುತಿಯ ಆನಂತ್ಯವನ್ನು ಹೇಳಿದರೆ, ಆಗ ಶ್ರುತಿ, ಸ್ವರ, ಸ್ಥಾಯಿ ಮೊದಲಾದವುಗಳ ವಿಷಯದಲ್ಲಿ ನಮ್ಮ ಮೂಲಭೂತ ಕಲ್ಪನೆಗಳನ್ನೇ ಆಮೂಲಾಗ್ರವಾಗಿ ಬದಲಾಯಿಸಿಕೊಂಡ ಹೊರತು ಈ ಪಕ್ಷವು ಅನುಪಪನ್ನವೇ ಆಗುತ್ತದೆ. ಆದರೆ ಈ ಅರ್ಥದ ಅನ್ವಯವು ಇಲ್ಲಿ ಸಲ್ಲುವುದಿಲ್ಲವೆಂದು ಕಾಣುತ್ತದೆ. ಏಕೆಂದರೆ ಮತಂಗನು ಶ್ರುತಿಪಕ್ಷಗಳ ವಿವೇಚನೆಯನ್ನೂ, ಅದರಲ್ಲಿ ಕೋಹಲನು ಶ್ರುತಿಗಳನ್ನು ಹೇಳಿರುವ ಕ್ರಮವನ್ನೂ ನೋಡಿದರೆ, ಸ್ಥಾಯಿಗೆ ಸಂಬಂಧಿಸದೆಯೇ ಶ್ರುತಿಗಳ ನಿರೂಪಣೆ, ಒಂದು ಸ್ಥಾಯಿಯಲ್ಲಿ ಶ್ರುತಿಗಳ ಸಂಖ್ಯೆಯ ನಿರೂಪಣೆ, ಆಮೇಲೆ ಮೂರು ಸ್ಥಾಯಿಗಳಲ್ಲಿರುವ ಶ್ರುತಿಗಳ ಸಂಖ್ಯೆ, ಕಡೆಯಲ್ಲಿ ಅನಂತಶ್ರುತಿಗಳು ಎಂಬ ಅನುಕ್ರಮವು ಕಂಡುಬರುತ್ತದೆ. ಆದುದರಿಂದ ಸಮಗ್ರನಾದವ್ಯಾಪ್ತಿಯನ್ನು ಕುರಿತು ಶ್ರುತಿಗಳನ್ನು ಇಲ್ಲಿ ಹೇಳಿದೆ ಎಂಬ ಅರ್ಥವು ಸರಿಹೊಂದುತ್ತದೆ.

ಒಟ್ಟಿನಲ್ಲಿ ನಾದದ, ಶ್ರುತಿಸ್ವರಗಳ ಸಮ್ಯಗ್‌ಸಂಪೂರ್ಣಸ್ವರೂಪವನ್ನು, ಗಾನಪ್ರಪಂಚಸರ್ವಸ್ವದ ಸಮಗ್ರತೆಯನ್ನು, ಸಂದರ್ಶಿಸುವ ಪಂಥವಿದು.

ಹೀಗೆ, ಶ್ರುತಿಗಳ ಸಂಖ್ಯೆ ಮತ್ತು ಸ್ವಭಾವಗಳನ್ನು ಕುರಿತು ಒಂಬತ್ತು ಪಕ್ಷಗಳಿವೆ. ಅಧಿಕಾಂಶದ ಸಂಗೀತ-ಶಾಸ್ತ್ರಗ್ರಂಥಗಳು ಇವುಗಳನ್ನು ಗಮನಿಸುವುದಿಲ್ಲ : ದ್ವಾವಿಂಶತಿಶ್ರುತಿಪಕ್ಷವನ್ನು ಅವು ಸ್ವೀಕರಿಸುವುದೇ ಇದಕ್ಕೆ ಮುಖ್ಯ ಕಾರಣ ; ಸ್ವತಂತ್ರ ವಿಚಾರಶಕ್ತಿಯನ್ನೂ ಅನ್ಯಶಾಸ್ತ್ರೀಯ ಪ್ರಮೇಯಗಳನ್ನು ವೈಜ್ಞಾನಿಕವಾಗಿ ವಿವೇಚಿಸುವ ಸಾಮರ್ಥ್ಯವನ್ನೂ ಅವು ಪಡೆಯದಿರುವುದು ಇನ್ನೊಂದು ಕಾರಣ. ಮಧ್ಯಕಾಲೀನ ಮತ್ತು ಅರ್ವಾಚೀನ ಶಾಸ್ತ್ರಗ್ರಂಥಗಳೆಲ್ಲವೂ ಕೇವಲ ಲಕ್ಷ್ಯರೂಢವಾದುದನ್ನು ವರ್ಣಿಸುವ ಉದ್ದೇಶವನ್ನೇ ಇಟ್ಟುಕೊಂಡು ರಚಿತವಾದವುಗಳು. ಲಕ್ಷ್ಯಲಕ್ಷಣಸಮನ್ವಯವನ್ನೇ ಪ್ರತಿಜ್ಞೆಯನ್ನಾಗಿ ಪಡೆದವುಗಳೂ ಸಹ ಲಕ್ಷ್ಯವನ್ನು—ಅದು ಸರಿಯೇ ಇರಲಿ, ತಪ್ಪೇ ಇರಲಿ, ಮಾತೃಕೆಯಾಗಿಟ್ಟುಕೊಂಡು ವಿವೇಚನೆಯೇ ಇಲ್ಲದೆ ಶಾಸ್ತ್ರವನ್ನು ಬದಲಾಯಿಸಲು ಪ್ರಯತ್ನ ಮಾಡಿದ ಉದ್ಧಟತನವನ್ನು ತೋರಿ ವಿಫಲವಾಗಿವೆ ಅಥವಾ ಅಲ್ಪಜೀವಿತಗಳಾಗಿವೆ.

ಭರತನೂ ಅವನ ವ್ಯಾಖ್ಯಾನಕಾರರೂ ಈ ನವಪಕ್ಷಗಳ ವಿಮರ್ಶೆಯನ್ನು ಕೈಗೊಳ್ಳುವುದಿಲ್ಲ. ಏಕೆಂದರೆ ನಾಟ್ಯವರ್ಣನೆಯೇ ಅವರ ಗುರಿ : ಮೂವತ್ತೇಳು ಅಧ್ಯಾಯಗಳ ನಾಟ್ಯಶಾಸ್ತ್ರದಲ್ಲಿ ಭರತನು ಗಾನಶಾಸ್ತ್ರಸರ್ವಸ್ವವನ್ನು ಇಪ್ಪತ್ತೆಂಟನೆಯ ಅಧ್ಯಾಯವೊಂದರಲ್ಲಿಯೇ ಅಡಗಿಸಿಬಿಡಲು ಯತ್ನಿಸಿ ವಾದ್ಯ ಮತ್ತು ತಾಳಗಳನ್ನು—ಅವೂ ನಾಟ್ಯೋಪಕಾರಕಗಳಾದುದರಿಂದ—ಇನ್ನೊಂದೊಂದು ಅಧ್ಯಾಯದಲ್ಲಿ ಹೇಳುತ್ತಾನೆ. ಆದುದರಿಂದ ಸಂಗೀತಶಾಸ್ತ್ರದಲ್ಲಿ ಪ್ರಾಥಮಿಕವೂ ಪ್ರಮಾಣಭೂತವೂ ಆಗಿರುವ ಶ್ರುತಿ, ಸ್ವರ, ಗ್ರಾಮ, ಮೂರ್ಛನೆ, ತಾನ, ವರ್ಣಾಲಂಕಾರ, ಜಾತಿ, ಗೀತಿ ಮೊದಲಾದ ಪ್ರಮೇಯಗಳನ್ನು ಹ್ರಸ್ವತಮಸೂತ್ರಗಳಲ್ಲಿ ಹೇಳಿ ಮುಗಿಸಿಬಿಟ್ಟಿದ್ದಾನೆ. ಅವನ ವ್ಯಾಖ್ಯಾನಕಾರರೂ ಮೂಲಗ್ರಂಥದ ಉದ್ದೇಶ, ವ್ಯಾಪ್ತಿಗಳನ್ನು ಮೀರಲಾರದೆ ಅವನ ಮಾತುಗಳನ್ನು ಅದೇ ಚೌಕಟ್ಟಿನಲ್ಲಿಯೇ ವಿಸ್ತಾರಮಾಡಿದ್ದಾರೆ. ಮತಂಗಮುನಿಯು ಈ ಪಕ್ಷಗಳನ್ನು ಸಂಗ್ರಹಿಸದೆ ಇದ್ದರೆ ಅವು ಶಾಶ್ವತವಾಗಿ ಲೋಪವಾಗಿ ಬಿಡುತ್ತಿದ್ದವೋ ಏನೋ ! ಸಿಂಹಭೂಪಾಲ, ಕಲ್ಲಿನಾಥ, ಕುಂಭಕರ್ಣ, ತುಳಜರು

ಇವನ್ನು ಪುನಃ ಪುನಃ ಉದ್ಧರಿಸಿ ಉಪಕರಿಸಿದ್ದಾರೆ. ಶಾರ್ಙ್ಗದೇವನು ನೇರವಾದ ಮಾತಿನಲ್ಲಿ ಇವುಗಳನ್ನು ಹೇಳದಿದ್ದರೂ ಇಂಗಿತದಿಂದ ಹೇಗೆ ಸ್ವೀಕರಿಸಿದ್ದಾನೆಂಬುದನ್ನು ಈಗಾಗಲೇ ಸೂಚಿಸಲಾಗಿದೆ.

ಆದರೆ ಸಿಂಹಭೂಪಾಲಾದಿಗಳು ಒಂದು ಪೂರ್ವಗ್ರಹದಿಂದ ಪೀಡಿತರಾಗಿದ್ದಾರೆ ಎನ್ನದೆ ವಿಧಿಯಿಲ್ಲ. ಈ ಒಂಬತ್ತು ಪಕ್ಷಗಳಲ್ಲಿ ಪ್ರತಿಯೊಂದೂ ಪರಸ್ಪರ ವಿರುದ್ಧವಾದುದು, ಅವು ಹೇಳುವ ಶ್ರುತಿಸಂಖ್ಯೆಯನ್ನು ಸ್ಥೂಲಾರ್ಥದಲ್ಲಿಯೇ ಗ್ರಹಿಸತಕ್ಕದ್ದು ಎಂದು ಇವರೆಲ್ಲರೂ ಭಾವಿಸಿರುವುದು ಸ್ಪಷ್ಟವಾಗಿದೆ. ಮತಂಗನ ಪ್ರಕಾರ ಶ್ರುತಿಯು ಒಂದೇ, ವಿಶ್ವಾವಸುವಿನ ಪ್ರಕಾರ ಶ್ರುತಿಗಳು ಎರಡೇ, ಎಂದು ಮುಂತಾದ ಅಭಿಪ್ರಾಯಗಳನ್ನು ಇವರು ತಳೆದಿದ್ದಾರೆ. ಇದನ್ನು ಮತಂಗನೇ ಅಲ್ಲಗಳೆದಿದ್ದಾನೆ ; ದ್ವಿಪ್ರಕಾರ, ತ್ರಿವಿಧ, ಚತುರ್ವಿಧ, ನವಧಾ, ಷಟ್‌ಷಷ್ಟಿಭೇದಭಿನ್ನ, ಎಂದು ಅವನು ಹೇಳಿರುವುದರಲ್ಲಿ ಶ್ರುತಿಗಳಲ್ಲಿ ಎಷ್ಟು ವಿಧಗಳಿವೆ ಎಂಬ ಅರ್ಥವಿದೆಯೇ ಹೊರತು ಮೂರು, ನಾಲ್ಕು, ಒಂಬತ್ತು, ಮುಂತಾದ **ಸಂಖ್ಯೆಯ** ಶ್ರುತಿಗಳಲ್ಲ ಎಂಬುದನ್ನು ಇವರು ಗಮನಿಸಿರುವ ಹಾಗೆ ಕಾಣುವುದಿಲ್ಲ. ಪ್ರಾಣಿಗಳಲ್ಲಿ ಉದ್ಭಿಜ್ಜ, ಸ್ವೇದಜ, ಅಂಡಜ, ಜರಾಯುಜ ಎಂಬ ನಾಲ್ಕು ವಿಧದ ಪ್ರಾಣಿಗಳಿವೆಯೆಂದರೆ ನಾಲ್ಕೇ ಪ್ರಾಣಿಗಳಿವೆಯೆಂದು ತಿಳಿದುಕೊಂಡಂತಿದೆ ಇವರ ವಾದವೈಖರಿ. ಎರಡು, ಮೂರು, ಅಥವಾ ನಾಲ್ಕು ಶ್ರುತಿಗಳಿಂದ ಲಕ್ಷ್ಯಪ್ರಯುಕ್ತವಾದ ಏಳು ಪ್ರಕೃತಿಸ್ವರಗಳನ್ನೂ ಅವುಗಳ ಅನೇಕ ವಿಕೃತಿಗಳನ್ನೂ ಪಡೆಯಬಹುದೆಂದು ವಿಶ್ವಾವಸುವೇ ಮೊದಲಾದ ಮಹರ್ಷಿಗಳು ತಿಳಿದಿದ್ದರೆಂದು ಭಾವಿಸುವುದು ನಮ್ಮ ವಿಚಾರದಾರಿದ್ರ್ಯವನ್ನು ತೋರಿಸೀತು.

ಹಾಗಾದರೆ ಶ್ರುತಿವಿಷಯಕವಾದ ಈ ಒಂಬತ್ತು ಪಕ್ಷಗಳ ಅಂತರಾರ್ಥವೇನು ?

ಅಂತರಾರ್ಥವಿಷ್ಟೆ : ಇವುಗಳಲ್ಲಿ ಪ್ರತಿಯೊಂದೂ ಶ್ರುತಿಯನ್ನು ವಿವಿಧ ದೃಷ್ಟಿಯಿಂದ ವಿಚಾರಮಾಡಿ ಹೇಳಿದೆ. ಆನೆಯ ಮೇಲೆ ಪ್ರಬಂಧವನ್ನು ಬರೆಯಬೇಕು ಎಂದು ಹಲವು ವಿವಿಧ ಶಾಸ್ತ್ರಗಳಲ್ಲಿ ಉದ್ದಾಮಪಂಡಿತರಾದವರು ಹೊರಟರೆ ಎಲ್ಲರ ಪ್ರಬಂಧಗಳೂ ಒಂದೇ ವರ್ಣನೆಯನ್ನು ಅಥವಾ ವಿಚಾರವನ್ನು ಒಳಗೊಂಡಿರುವುದಿಲ್ಲವಷ್ಟೆ. ಒಬ್ಬರು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅದರ ಬೆಲೆಯನ್ನು ಕುರಿತು ಬರೆದರೆ ಇನ್ನೊಬ್ಬರು ಅದರ ಪೂರ್ವಜ ಪ್ರಾಣಿಯಿಂದ ಆನೆಯು ಹೇಗೆ ರೂಪುಗೊಂಡು ಇಂದಿನ ಸ್ಥಿತಿಗೆ ಬಂತೆಂಬ ವಿಷಯವನ್ನು ವಿವರಿಸಬಹುದು. ಒಬ್ಬರು ಅದರ ದೈಹಿಕವರ್ಣನೆ, ಅಂಗರಚನೆ, ಗಾತ್ರ, ತೂಕ, ಉಪಯೋಗ, ದೊರೆಯುವ ಸ್ಥಳ, ಅಭ್ಯಾಸ, ಸ್ವಭಾವ ಮುಂತಾದವುಗಳನ್ನು ವಿವರಿಸಿದರೆ ಇನ್ನೊಬ್ಬರು ಕಾವ್ಯ, ಶಿಲ್ಪಗಳಲ್ಲಿ ಅದರ ಸ್ಥಾನವನ್ನು ಕುರಿತು ಬರೆಯಬಹುದು. ಹೀಗೆ ಅನೇಕರು ಬೇರೆ ಬೇರೆಯಾಗಿ ಬರೆದರೂ, ಎಲ್ಲರದೂ ಸರಿಯಾದ ವಿಚಾರವೇ ; ಅದರಿಂದ ಆನೆಯ ಮೂಲಸ್ವರೂಪಕ್ಕೆ ಚ್ಯುತಿಯೇನೂ ಇಲ್ಲ. ಅಷ್ಟೇ ಅಲ್ಲ, ಅದರ ಸಂಪೂರ್ಣ ಸ್ವರೂಪದ ಅರಿವು ಆಗಬೇಕಾದರೆ ಇಂತಹ ಎಷ್ಟು ದೃಷ್ಟಿಕೋನಗಳು ದೊರೆತರೆ ಅಷ್ಟೂ ಉತ್ತಮ. ವೈಚಾರಿಕ ಭೇದದಿಂದ ವಿರೋಧವನ್ನು ತಿಳಿಯಲಾಗದು. ಈ ಮಾತುಗಳನ್ನು ಶ್ರುತಿಯ ಅಭ್ಯಾಸಕ್ಕೂ ಅನ್ವಯಿಸಬೇಕು.

ಹೀಗೆ, ಮತಂಗನ ಏಕಶ್ರುತಿವಾದವು ಮುಖ್ಯವಾಗಿ ದಾರ್ಶನಿಕ ಹಿನ್ನೆಲೆಯಲ್ಲಿ ಮಂಡಿತವಾದುದು. ಬೌದ್ಧ, ಜೈನ, ಶಾಕ್ತ, ಮೊದಲಾದ ಹಲವು ಮತಗಳು ಪ್ರಬಲವಾಗಿ ವೈದಿಕಮತ, ವೈದಿಕಸಂಸ್ಕೃತಿಗಳು ಕಾಂತಿಹೀನವಾಗುತ್ತಿದ್ದ ಕಾಲದಲ್ಲಿ ಮತಂಗನು ಬೃಹದ್ದೇಶಿಯನ್ನು ರಚನೆಮಾಡಿದನು. ವೈದಿಕಧರ್ಮದ ಮೂಲಪ್ರಮೇಯಗಳ ಪುನಃಪರಿಶೀಲನೆ, ಮೌಲ್ಯನಿರ್ಣಯ, ಮತ್ತು ಪುನರುಜ್ಜೀವನಗೊಳಿಸುವ ಆವಶ್ಯಕತೆ ಅಂದು ಎಂದಿಗಿಂತ ಹೆಚ್ಚಾಗಿತ್ತು. ಸಮಾಜದಲ್ಲಿಯೂ ಭವಿಷ್ಯತ್ತಿನಲ್ಲಿಯೂ ಈ ಪ್ರಮೇಯಗಳು ಶಾಶ್ವತವಾಗಿ ನಿಲ್ಲುವಂತೆ ಮಾಡುವುದು, ಸಂಸ್ಕೃತಿ, ನಾಗರಿಕತೆಗಳ ಎಲ್ಲಾ ಅಭಿವ್ಯಕ್ತಿ ಪ್ರಕಾರಗಳಲ್ಲಿಯೂ ಇವುಗಳನ್ನು ಸ್ಥಾಪಿಸಿ, ಉಳಿಸಿ, ಬೆಳೆಸುವುದರಿಂದ ಮಾತ್ರ ಸಾಧ್ಯ. ಆದುದರಿಂದಲೇ ಪುರಾಣ, ಇತಿಹಾಸ, ಧರ್ಮ, ಕಲೆ ಮುಂತಾದವುಗಳಲ್ಲೆಲ್ಲಾ ವೇದ ಸರಸ್ವತಿಯು

ಅಂತರಗಂಗೆಯಾಗಿದ್ದವಳು ನವನವೋನ್ಮೇಷಶಾಲಿಯಾಗಿ ಚಿರನೂತನವಾದ ಪ್ರಚಂಡ ಶಕ್ತಿಯಿಂದ ಹರಿದು ಅವುಗಳಲ್ಲಿ ಜೀವತುಂಬಿದಳು. ಈ ಪಾವನಗಂಗೆಯನ್ನು ನಮ್ಮ ಹಿರಿಯರು ಕ್ರಿಸ್ತೋದಯದ ಸುಮಾರಿನ ಹತ್ತು ಶತಮಾನಗಳಲ್ಲಿ ಜಗತ್ತಿನಲ್ಲೆಲ್ಲಾ ಕಾಲುವೆ ತೋಡಿ ಹರಿಸಿ ವೇದಸಂಸ್ಕೃತಿಪುರುಷನು ವಿರಾಟ್‌ಪುರುಷನಾಗಿ, ಸಹಸ್ರಶೀರ್ಷ, ಸಹಸ್ರಾಕ್ಷ, ಸಾಹಸ್ರಪಾತ್ ಆಗುವಂತೆ ಮಾಡಿದರು. ಈ ಸಂಸ್ಕೃತಿಯ ಮಹಾಪೂರವು ಉಕ್ಕಿ ಹರಿದು ಬೃಹದ್ಭಾರತದ ನಿರ್ಮಾಣವಾಯಿತು. ಇದೇ ಕಾಲದಲ್ಲಿಯೇ ಕಾಮಶಾಸ್ತ್ರದಿಂದ ಹಿಡಿದು ಧರ್ಮಶಾಸ್ತ್ರದವರೆಗೆ ವೈದಿಕದೃಷ್ಟಿ—ಸನಾತನದೃಷ್ಟಿ—ತಾನೇತಾನಾಗಿ, ಸರ್ವಾಂಗಸುಂದರವಾಗಿ, ಸರ್ವತೋಮುಖವಾಗಿ ನೆಲೆಸಿ ವಿಜೃಂಭಿಸಿತು. ಈ ಹೊಸ ಸತ್ಯದ, ಶಿವದ ಮಹಾಶಿಲ್ಪಿಗಳು ಹೊಸಭಾರತವನ್ನು ಸುಂದರವಾಗಿ ನಿರ್ಮಿಸಿದರು; ಪ್ರತಿಯೊಂದು ಕಲೆಯಲ್ಲಿಯೂ ಪ್ರತಿಯೊಂದು ಶಾಸ್ತ್ರದಲ್ಲಿಯೂ ವೇದೋಪವಸತಿಯ ಮುದ್ರೆಯನ್ನು ಅಚ್ಚಳಿಯದಂತೆ ಒತ್ತಿದರು.

ಇಂತಹ ಮಹಾಶಿಲ್ಪಿಗಳಲ್ಲಿ ಮತಂಗನೂ ಒಬ್ಬನು. ಭರತಮುನಿಯು ನಾಟ್ಯವೇದಕ್ಕೆ ಸಲ್ಲಿಸಿದ ಸೇವೆಯನ್ನು ಕುರಿತು ಬೇರೆಡೆಯಲ್ಲಿ ಸ್ವಲ್ಪಮಟ್ಟಿಗೆ ಚರ್ಚಿಸಿದ್ದೇನೆ.[203] ಶಾರ್ಙ್ಗದೇವನು ಈ ದಿಕ್ಕಿನಲ್ಲಿ ನಡೆಸಿದ ಕೈಂಕರ್ಯವನ್ನು ಮೇಲೆ ಸೂಚಿಸಿದೆ (ಪು. 177–178). ಮತಂಗನು ನಾದ, ಧ್ವನಿ, ಶ್ರುತಿ ಇವುಗಳನ್ನು ವರ್ಣಿಸುವಾಗಲೂ ಸ್ವರದ ದೈವತ, ಕುಲ, ಋಷಿ ಮುಂತಾದುವುಗಳನ್ನು ವರ್ಣಿಸುವಾಗಲೂ ಗಾಂಧರ್ವವೇದಕ್ಕೆ ಇದೇ ರೀತಿಯ ವೇದೋಪವಸತಿಯನ್ನು ನಿರ್ಮಿಸಿ ಉಪಕರಿಸಿದ್ದಾನೆ. ಶ್ರುತಿ ಎಂಬ ಶಬ್ದಕ್ಕೆ ವೇದಪ್ರಾಮಾಣ್ಯ, ಸಂಗೀತಶಾಸ್ತ್ರೋಕ್ತ ಪ್ರಮೇಯ ಎಂಬ ಅರ್ಥಗಳಿರುವುದನ್ನು ಈಗಾಗಲೇ ಹೇಳಿದೆ (ಪು. 197–198). ಶ್ರುತಿಯು ಒಂದೇ ಎಂಬುದನ್ನು ಶ್ಲೇಷಾರ್ಥದಲ್ಲಿ ನೋಡಲು ಇಲ್ಲಿ ಅವಕಾಶವುಂಟು. ಶ್ರುತಿಯೆಂಬುದು ಒಂದೇ ಎಂದರೆ ವೇದಪ್ರಾಮಾಣ್ಯವೊಂದನ್ನು ಮಾತ್ರ ಒಪ್ಪಿ ಉಳಿದೆಲ್ಲ ಪಕ್ಷಗಳನ್ನೂ ಇದರ ಅಂಶಗಳೆಂದು ಲೆಕ್ಕಿಸಿದಂತಾಯಿತು. ವೇದದಲ್ಲಿ ಹೇಳಿದ ಬ್ರಹ್ಮವಸ್ತುವು ಒಂದೇ, ಅವಿಚ್ಛಿನ್ನವೂ, ಅಖಂಡವೂ, ಅದ್ವಿತೀಯವೂ ಆಗಿದ್ದರೂ ಅವಿದ್ಯೆಯೆಂಬ ಉಪಾಧಿಯಿಂದ ಹೇಗೆ ಶಬಳಿತವಾಗಿ ಪ್ರಪಂಚವೆಂಬ ಪ್ರತ್ಯಯಸ್ವರೂಪದಲ್ಲಿ, ಕಾಣುತ್ತದೆಯೋ, ಹೀಗಾಗಲು ಅಂತರ್ಭೂತಪೂರಣವೆಂಬ ಗುಣವು ಹೇಗೆ ಕಾರಣವೋ, ಗಾಂಧರ್ವವೇದದಲ್ಲಿ ಹೇಳಿದ, ನಾದಬ್ರಹ್ಮದ ವ್ಯಕ್ತಸ್ವರೂಪವಾದ ಶ್ರುತಿಯೂ ಇದೇ ಸ್ವರೂಪದ್ದಾಗಿ, ಇದೇ ಕಾರಣದಿಂದ, ಇದೇ ರೀತಿಯಲ್ಲಿ ಗಾನಪ್ರಪಂಚಕ್ಕೆ ಮಾತೃಕೆಗಳಾದ ಸಪ್ತಸ್ವರಗಳ ಪ್ರತ್ಯಯ ಸ್ವರೂಪದಲ್ಲಿ ಕಾಣುತ್ತದೆ ಎಂಬ ಶ್ಲೇಷಾಲಂಕಾರವು ತುಂಬಾ ಚೆನ್ನಾಗಿ ಒಪ್ಪುತ್ತದೆ. ಶ್ರುತಿಯು ಎಂದರೆ ಶಬ್ದವು, ಆಕಾಶದ ಗುಣವಾದುದರಿಂದ ಅಂತರ್ಭೂತಪೂರಣವನ್ನು ಅದಕ್ಕೆ ಹೇಳಿ ಹೋಲಿಸಿದೆ. ಇದರಿಂದ ಉಳಿದ ಪಕ್ಷಗಳೂ ಹೇಗೆ ಸಾಧಿತವಾಗುತ್ತವೆಂಬುದನ್ನು ಈಗಾಗಲೇ ಸೂಚಿಸಿದೆ. ಈಗಾಗಲೇ ಈ ವಿಷಯವು ನಿರೀಕ್ಷೆ ಮೀರಿ ವಿಸ್ತಾರವಾಗಿರುವುದರಿಂದ ಅನ್ವಯವನ್ನು ಈ ಶಾಸ್ತ್ರಾಭ್ಯಾಸಿಗಳು ಊಹಿಸಿಕೊಂಡು ಮನ್ನಿಸಬೇಕು. ಹೀಗೆ ಮತಂಗನು ಶ್ರುತಿಯ ಚಿತ್ರವನ್ನು ಇಡೀ ಭಾರತೀಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಿಡಿಸಿದ್ದಾನೆ; ಅವನದು ದಾರ್ಶನಿಕ ದೃಷ್ಟಿ.

ವಿಶ್ವಾವಸುವು ಶ್ರುತಿಯನ್ನು ಸ್ವರಾಭಿವ್ಯಕ್ತಿಯ ದೃಷ್ಟಿಯಿಂದ ನೋಡಿದ್ದಾನೆ. ಗಾನಪ್ರಪಂಚದಲ್ಲಿ ಪ್ರತ್ಯಕ್ಷವೂ ಆಧಾರಭೂತವೂ ಆದುದು ಸ್ವರವಷ್ಟೆ. ಆದುದರಿಂದ ಶ್ರುತಿಯಿಂದ ಸ್ವರವನ್ನು ಪಡೆಯದೆ ಸ್ವರದಿಂದ ಶ್ರುತಿಯನ್ನು ಪಡೆದಿದ್ದಾನೆ. ಜ್ಞಾತದಿಂದ ಅಜ್ಞಾತದೆಡೆಗೆ ಕರೆದೊಯ್ಯುವುದು ಅವನ ಬೋಧನಕ್ರಮ. ಸಂಗೀತದಲ್ಲಿರುವುದು ಸ್ವರಾಭಿವ್ಯಕ್ತಿಗೆ ಸಾಧನವಾದ ಕೆಲವು ನಾದಸ್ಥಾನಗಳು, ಸಾಧನವಾಗದಂತಹವು ಕೆಲವು ಎಂಬುದು ಅವನ

203 Sathyanarayana, R., 'Bharatanatya: A Critical Study' (under print in the Sri Varalakshmi Academy Publication Series, Mysore).

ವಿಚಾರಕ್ರಮ. ಸ್ವರಪ್ರಮಾಣದ ಇಯತ್ತೆಗೂ, ನೆರೆಹೊರೆಯ ಸ್ವರಗಳ ನಡುವೆ ನಿರ್ದಿಷ್ಟವಾದ ಅಂತರವಿರುವುದಕ್ಕೂ ತಾರ್ಕಿಕವಾದ ಕಾರಣವನ್ನು ಅವನು ಕೊಡುತ್ತಾನೆ. ಈ ಅಂತರವನ್ನು ಸ್ವರೂಪವೆಂದು (ಅಂತರಾಳವಲ್ಲವೆಂದು) ಭಾವಿಸಿದರೆ ಸ್ವರದ ಸ್ವರೂಪವೂ ಸ್ವಸಂವೇದ್ಯತೆಯೂ ಸಿದ್ಧವಾಗುತ್ತವೆ. ಈ ಪಕ್ಷದಿಂದ ಇತರ ಪಕ್ಷಗಳಿಗೆ ಹೇಗೆ ವಿರೋಧವಿಲ್ಲವೆಂಬುದನ್ನು ಈ ಪಕ್ಷದ ಪರಿಶೀಲನೆಯಲ್ಲಿಯೇ ಸ್ವಲ್ಪಮಟ್ಟಿಗೆ ಸೂಚಿಸಿದೆ.

ಮೂರನೆಯ ಪಕ್ಷವು ನಾದಗುಣವನ್ನು ಶ್ರುತಿಯಿಂದ ತಾರ್ಕಿಕವಾಗಿ ಪಡೆಯುವ ಬಗೆ. ಸ್ಥಾನಾಂತರದಲ್ಲಿ ಅದೇ ಸ್ವರವು ಸ್ವಲ್ಪವಾದ ಗುಣಭಿನ್ನತೆಯನ್ನು ಪಡೆದಿರುತ್ತದೆಂಬುದು ಇದರ ಸಾರಾಂಶ. ಇದರಿಂದ ಶ್ರುತಿ, ಸ್ವರಗಳ ಆವರ್ತಕತ್ವವೂ, ಸ್ವರಗುಣವೂ ದೊರೆಯುತ್ತವೆ. ಶ್ರುತಿಗಳು ಇಷ್ಟೇ ಸಂಖ್ಯೆಯವು ಎಂದೇನೂ ಇದು ನಿರ್ಬಂಧಿಸುವುದಿಲ್ಲ. ಸ್ಥಾಯಿಯಲ್ಲಿ ಎಷ್ಟು ಶ್ರುತಿಗಳೆಂದಿಟ್ಟುಕೊಂಡರೂ ಅದಕ್ಕೆ ವಿರೋಧವಿಲ್ಲದೆ ನಾದಶಾಸ್ತ್ರಕ್ಕೂ ನಾದ-ವಿಜ್ಞಾನಕ್ಕೂ ಮೂಲಭೂತವಾದ ಪ್ರಮೇಯಗಳನ್ನು ಆ ಚೌಕಟ್ಟಿನಲ್ಲಿಯೇ ಇದು ಸಿದ್ಧಪಡಿಸಿಕೊಡುತ್ತದೆ. ಅಲ್ಲದೆ ಇದು ಮುಖ್ಯವಾಗಿ ಮನೋವೈಜ್ಞಾನಿಕ ದೃಷ್ಟಿಕೋನವನ್ನು ಉಳ್ಳದ್ದು; ಶ್ರುತಿಯ ಮತ್ತು ಸ್ವರದ ಮಾನಸಿಕ ಪರಿಣಾಮಗಳು ವಿವಿಧ ಸ್ಥಾನಗಳಲ್ಲಿ ವಿವಿಧ ರೀತಿಯಲ್ಲಿ ಆಗುತ್ತವೆ ಎಂಬ ಮುಖ್ಯ ತತ್ತ್ವವನ್ನು ಬೋಧಿಸುತ್ತದೆ.

ನಾಲ್ಕನೆಯ ಪಕ್ಷವು ಇಂದ್ರಿಯವೈಗುಣ್ಯದಿಂದ ಆಗುವ ಶ್ರುತಿತ್ರೈವಿಧ್ಯವನ್ನು ಹೇಳುತ್ತದೆ. ಇಂದ್ರಿಯ ವೈಗುಣ್ಯವೆಂದರೇನೆಂಬುದು ನನಗೆ ತಿಳಿಯದು. ಅಭಿನವಗುಪ್ತನ ಪ್ರಕಾರ ವಾಗಿಂದ್ರಿಯವನ್ನು ಗ್ರಹಿಸಿದರೆ ಕಂಠದಲ್ಲಿ ಸಹಜ, ದೋಷಜ ಮತ್ತು ಅಭಿಘಾತಜಗಳೆಂಬ ವೈಗುಣ್ಯಗಳನ್ನು ಅನುಸರಿಸಿ ಮೂರು ರೀತಿಯ ಶ್ರುತಿಯು ಹುಟ್ಟುತ್ತದೆ. ಕಲ್ಲಿನಾಥನ ಪ್ರಕಾರ ಮನಸ್ಸೆಂದಿಟ್ಟುಕೊಂಡರೆ ಮನಸ್ಸಿನ ಈ ಬಗೆಯ ಮೂರು ವೈಗುಣ್ಯಗಳಿಂದ ಶ್ರುತಿಯ ಉತ್ಪಾದನೆಯೂ ಗ್ರಹಣವೂ ಮೂರು ಬಗೆಯೆಂದಾಗುತ್ತದೆ. ಶ್ರೋತ್ರೇಂದ್ರಿಯವೆಂದು ಸಮಾಕರಣವನ್ನಿಟ್ಟುಕೊಂಡರೆ ಇವೇ ಮೂರು ವೈಗುಣ್ಯಗಳಿಂದ ಶ್ರುತಿಯು ಮೂರು ವಿಧವಾಗಿ ಕೇಳಿಸುತ್ತದೆ ಎಂದಾಗುತ್ತದೆ. ಇದು ಏನೇ ಇರಲಿ, ಈ ಪಕ್ಷವು ಶ್ರುತಿಯನ್ನೂ ಇಂದ್ರಿಯವನ್ನೂ ಸಂಬಂಧಿಸುತ್ತದೆ. ಎಂದರೆ ಶ್ರುತಿಯ ವಿಷಯದಲ್ಲಿ ಉಂಟಾಗುವ ಇಂದ್ರಿಯಸನ್ನಿಕರ್ಷ ಅನುಭವವನ್ನೂ ತದ್ಭವವಾದ ಜ್ಞಾನವನ್ನೂ ಹೇಳುತ್ತದೆ. ಆದುದರಿಂದ ಇದು ಜ್ಞಾನಶಾಸ್ತ್ರೀಯ (epistemological) ದೃಷ್ಟಿಕೋನವೆನ್ನಬಹುದು.

ಐದನೆಯ ಪಕ್ಷವು ಶ್ರುತಿಯ ಉತ್ಪಾದಕವಾದ ಶರೀರದ ಅವಸ್ಥೆಯನ್ನೂ ತಜ್ಜನ್ಯವಾದ ಶ್ರುತಿರೀತಿಯನ್ನೂ ಸಂಬಂಧಿಸುತ್ತದೆ. ವಾತ ಪಿತ್ತ ಕಫ ಸನ್ನಿಪಾತಗಳಲ್ಲಿ ಒಂದೊಂದರ ಆಧಿಕ್ಯವನ್ನೂ ಅದರಿಂದ ಉಂಟಾಗುವ ಶ್ರುತಿಯ ನಾದಗುಣವನ್ನೂ ಇದು ಸಂಬಂಧಿಸುತ್ತದೆ. ನಾದೋತ್ಪತ್ತಿಗೆ ಮಾನವಕಂಠವನ್ನೇ ಪ್ರಮಾಣಭೂತವಾದ್ಯವನ್ನಾಗಿ ಈ ಪಕ್ಷವು ಸ್ವೀಕರಿಸಿದೆ. ಧ್ವನಿಗೂ ಶ್ರುತಿಗೂ ಸಮಾಕರಣವನ್ನು ಹೇಳಿ ಸ್ವರದ ರಂಜಕತ್ವಕ್ಕೆ ಹೇತುಗಳಾದ ಸ್ನಿಗ್ಧತೆ, ರೂಕ್ಷತೆ, ಘನತೆ, ಮುಂತಾದ ಗುಣಗಳನ್ನೂ ವಾತಪಿತ್ತಾದಿ ಧಾತುಗಳ ಮೂಲಕ ಶ್ರುತಿಯನ್ನೂ ದೈಹಿಕದೃಷ್ಟಿಯಿಂದ (physiological) ವಿಚಾರಿಸುವ ಮತವಿದು.

ಆರನೆಯ ಪಕ್ಷವು ಶ್ರುತಿಯು ಸ್ವರತ್ವವನ್ನು ಪಡೆಯಲು ಅಗತ್ಯವಾದ ಸಂದರ್ಭಗಳನ್ನೂ ಸ್ವರದ ತ್ರಿವಿಧ ಊರ್ಧ್ವಸ್ಪರ್ಶವನ್ನೂ ತನ್ನ ಅಭ್ಯಾಸಕ್ಕೆ ವಿಷಯವನ್ನಾಗಿ ಇಟ್ಟುಕೊಂಡಿದೆ. ಅಲ್ಲದೆ ಗಾನಪ್ರಪಂಚದ ಬೆನ್ನೆಲುಬಾಗಿರುವ ಸ್ವರಾಷ್ಟಕದ ನಿರ್ಮಿತಿಯು ಹೇಗೆ ಸಾಧ್ಯವೆಂದು ತೋರಿಸುತ್ತದೆ. ತ್ರೈಸ್ವರ್ಯವು ಗಾನಪ್ರವೃತ್ತಿಯ ಪ್ರಥಮ ಅಭಿವ್ಯಕ್ತಿ; ಇದು ಚತುಃಶ್ರುತಿಕ, ತ್ರಿಶ್ರುತಿಕ ಮತ್ತು ದ್ವಿಶ್ರುತಿಕ ಸ್ವರಗಳಿಂದ ಆಗಿದೆ; ಇವುಗಳೇ ಬೇರೆ ಬೇರೆ ಸ್ಥಾನಗಳಲ್ಲಿ ಪುನರಭಿವ್ಯಕ್ತಿಯನ್ನು ಪಡೆಯುವುದರಿಂದ ಸ್ವರಾಷ್ಟಕವು ಇಯತ್ತಾಪೂರ್ವಕವಾಗಿ ಹುಟ್ಟಿ ಬೆಳೆಯಿತು

ಎಂಬ ಪ್ರಮೇಯವನ್ನೂ, ಚಾರಿತ್ರಕ ದೃಷ್ಟಿಯಿಂದ ಶ್ರುತಿಯು ಸ್ವರಾಷ್ಟಕದ ಮೂಲದ್ರವ್ಯ, ಅದು ಎರಡು, ಮೂರು, ನಾಲ್ಕು, ಎಂಬ ಮೂರು ವಿಧದ ಸಂಖ್ಯೆಯಲ್ಲಿ ಸೇರಿಕೊಂಡಾಗ ಪ್ರಯೋಗಸಿದ್ಧಿ ದೊರೆಯುತ್ತದೆ ಎಂಬ ಪ್ರಮೇಯವನ್ನೂ ಸಾಧಿಸಿಕೊಡುತ್ತದೆ. ಸಂಗೀತವು ಹುಟ್ಟಿದುದು ಈ ಮೂರು ಸ್ವರಗಳ ವ್ಯಾಪ್ತಿಯಲ್ಲಿಯೇ ; ಈ ಮೂರು ಬೆಳೆದು ಏಳಾದುವು, ಏಳು ಬೆಳೆದು ಹನ್ನೆರಡಾದವು ಎಂಬ ಅನುಮಿತಿಯೂ ಇದರಿಂದ ಹುಟ್ಟುತ್ತದೆ. ನಮ್ಮಲ್ಲಿ ಗಾನಪ್ರವೃತ್ತಿಯ ಬೇರನ್ನು ವೇದಗಳಲ್ಲಿ ಕಾಣಬಹುದು. ಅಲ್ಲಿಂದ ಉದಾತ್ತ, ಸ್ವರಿತ ಅನುದಾತ್ತವೆಂದು ಪ್ರಸಿದ್ಧವಾದ ಸ್ವರಗಳನ್ನೇ ಗಾಂಧರ್ವವೇದವು ಚತುಃಶ್ರುತಿಕ, ತ್ರಿಶ್ರುತಿಕ ಮತ್ತು ದ್ವಿಶ್ರುತಿಕಗಳೆಂದು ವ್ಯವಹರಿಸುತ್ತದೆ. ಇದನ್ನೇ ಪಾಣಿನೀಯ ಶಿಕ್ಷಾ[204] ನಾರದೀಯ ಶಿಕ್ಷಾ[205] ಮೊದಲಾದ ಗ್ರಂಥಗಳು ಈ ವೈದಿಕಸಂದರ್ಭಗಳಲ್ಲಿ ಸಮೀಕರಿಸುತ್ತವೆ. ಆದರೆ ಈ ಸಮೀಕರಣದಲ್ಲಿ ಶ್ರುತಿಯ ಅರ್ಥವನ್ನಿಟ್ಟುಕೊಂಡು ಅತ್ಯಂತ ಸಮೀಚೀನವಾದ ವ್ಯಾಖ್ಯಾನಮಾಡಿರುವುದು ಅಭಿನವಗುಪ್ತನೊಬ್ಬನೇ :

ಚತುಃಶ್ರುತಿರುದಾತ್ತಃ ಉಚ್ಚತ್ವಾತ್, ದ್ವಿಶ್ರುತಿರನುದಾತ್ತಃ ನೀಚೈಸ್ತ್ವಾತ್ । ತ್ರಿಶ್ರುತಿಃ ಸ್ವರಿತಃ ಮಧ್ಯವರ್ತಿತಯಾ ಸಮಾಹಾರತ್ವಾತ್ ।[185]

ಹೀಗೆ ಅತ್ಯಂತ ಪ್ರಾಚೀನಕಾಲದಲ್ಲಿ ಪ್ರಯುಕ್ತವಾಗಿ ಮಾನವಕಂಠ ಸಹಜವಾಗಿದ್ದ, ಕೊಳಲಿನಲ್ಲಿ ನೇರವಾಗಿ ದೊರೆಯುತ್ತಿದ್ದ ದ್ವಿ–, ತ್ರಿ–, ಚತುಃ–, ಶ್ರುತಿಕ ಸ್ವರಗಳ ತ್ರೈಸ್ವರ್ಯವು ಸ್ವರಾಷ್ಟಕದಲ್ಲಿ ಹೇಗೆ ಪರ್ಯವಸನವಾಗುವುದೆಂಬುದರ ಚರಿತ್ರೆಯನ್ನು ಈ ಪಕ್ಷವು ತಿಳಿಸುತ್ತದೆ.

ಗಾನಪ್ರಪಂಚದಲ್ಲಿ ಸ್ವಭಾವಸಿದ್ಧವಾದ ಸ್ಥಾಯಿಯಲ್ಲಿ ಸ್ವರಾಷ್ಟಕವನ್ನೂ ಸ್ವರವ್ಯವಸ್ಥೆಯನ್ನೂ ಸಂವಾದಿ ಮೊದಲಾದ ಚಾತುರ್ವಿಧ್ಯವನ್ನೂ ಗ್ರಾಮದ ವಿಸ್ತಾರ, ಅದರಲ್ಲಿ ಸ್ವರಪ್ರಮಾಣಗಳ ಇಯತ್ತೆ, ಗ್ರಾಮವನ್ನು ಆಶ್ರಯಿಸಿದ ಮೂರ್ಛನೆ, ತಾನ ಮೊದಲಾದವುಗಳನ್ನೂ, ವಾದಿ ಸಂವಾದಿ ಮೊದಲಾದ ಸಂಬಂಧಗಳಿಂದ ಹುಟ್ಟುವ ರಾಗ, ಗೀತಿ ಮೊದಲಾದವುಗಳನ್ನೂ ತಾರ್ಕಿಕವಾಗಿಯೂ ಸಂಪೂರ್ಣವಾಗಿಯೂ ಸಹಜವಾಗಿಯೂ ವಿವರಿಸುವುದು ದ್ವಾವಿಂಶತಿಶ್ರುತಿಪಕ್ಷವೇ. ಆದುದರಿಂದಲೇ ಇದು ಆದರಣೀಯವಾದುದು. ಇದು ಲಕ್ಷ್ಯಪ್ರಸಿದ್ಧಿಯನ್ನು ಶಾಸ್ತ್ರದಿಂದ ವಿವರಿಸಲು, ತಾರ್ಕಿಕವಾಗಿ ಪಡೆಯಲು ನಿರ್ಮಿಸಿಕೊಂಡ ತತ್ತ್ವ, ಪ್ರಮೇಯಗಳ ಸಂಕ್ಷೇಪವೇ ಆಗಿದೆ.

ಎಂಟನೆಯ ಷಟ್‌ಷಷ್ಟಿಶ್ರುತಿಪಕ್ಷವು ಸ್ಥಾಯಿಯೊಂದರ ವಿಸ್ತಾರವನ್ನು ಬಿಟ್ಟು ಗಾನವ್ಯವಹಾರ ಸರ್ವಸ್ವವಾದ ತ್ರಿಸ್ಥಾಯಿಗಳ ವಿಸ್ತಾರದಲ್ಲಿ ಏಳನೆಯ ಪಕ್ಷದಲ್ಲಿ ಹೇಳಿದ ತತ್ತ್ವ, ಪ್ರಮೇಯಗಳನ್ನು ಒಳಗೊಂಡಿದೆ; ಅಲ್ಲದೆ ಸ್ಥಾನಾಂತರದಲ್ಲಿ ನಾದಗುಣದ ಭಿನ್ನತೆಯು ಪ್ರಾಯೋಗಿಕವಾಗಿ ಸಿದ್ಧವಾಗಿರುವುದನ್ನು ಶಾಸ್ತ್ರದಲ್ಲಿಯೂ ವಿವರಿಸುತ್ತದೆ. ಹೀಗೆ ಏಳನೆಯ ಪಕ್ಷದ ಅರ್ಥವಿಸ್ತಾರ ಅಥವಾ ಅನ್ವಯವನ್ನೇ ಎಂಟನೆಯ ಪಕ್ಷವೆಂದು ಹೇಳಬಹುದು.

ಕಡೆಯದಾಗಿ, ಒಂಬತ್ತನೆಯ ಅನಂತಶ್ರುತಿಪಕ್ಷದಲ್ಲಿ ಹೇಳಿರುವ ವಿವಿಧ ಅರ್ಥಗಳಲ್ಲಿ ಶ್ರುತಿಯ ಆನಂತ್ಯವನ್ನು ಲಕ್ಷ್ಯಪ್ರಯೋಜಕವಾಗಿ ಅಥವಾ ನಿರರ್ಥಕವಾಗಿ ಹೇಳಬಹುದು. ಏಕೆಂದರೆ ಸ್ವರದ ಪ್ರಮಾಣದಲ್ಲಿರುವ ಅಂತರಾಳದಲ್ಲಿ ಅಸಂಖ್ಯಾತವಾಗಿ ಶ್ರಾವ್ಯಗೋಚರಾತೀತವಾದ ಅಲ್ಪಾಂತರಗಳಲ್ಲಿ ಹುಟ್ಟುತ್ತವೆ ಎಂಬ ಅರ್ಥದಲ್ಲಿ ಲಕ್ಷ್ಯಕ್ಕೆ ನೇರವಾಗಿ ಉಪಯೋಗವೇನೂ ಇಲ್ಲ. ಶ್ರೋತ್ರೇಂದ್ರಿಯ ಸಾಮರ್ಥ್ಯಪರವಾದ ಅರ್ಥವನ್ನು, ಎಂದರೆ ಶ್ರುತಿಯ ಪರಮಾಣು ಪ್ರಮಾಣವನ್ನು ಮಾತ್ರ ಇಲ್ಲಿ ಹೇಳಬಹುದು. ಅಲ್ಲದೆ ಧ್ವನ್ಯಂತರಾಶ್ರುತಿ, ನೈರಂತರ್ಯ, ಸ್ವರಾಭಿವ್ಯಕ್ತಿಗೆ ಆಶ್ರಯಸ್ಥಾನ ಎಂದು ಮುಂತಾದ ಲಕ್ಷಣಗಳನ್ನು ಶ್ರುತಿಗೆ ಹೇಳಿ ಆನಂತ್ಯವನ್ನು ಪಡೆದರೆ ತ್ರಿಸ್ಥಾಯಿವ್ಯಾಪ್ತಿಯನ್ನು ಮೀರಿದ, ಆಕಾಶದಲ್ಲಿ ಹುಟ್ಟಿದ ಶಬ್ದವು ಅನಂತವಾಗಿ ಪ್ರತಿಧ್ವನಿಗಳನ್ನು ಪಡೆಯುವ ಹಾಗೆ,

204 ಪಾಣಿನಿ, ಪಾಣಿನೀಯ ಶಿಕ್ಷಾ, 12. 205 ನಾರದ, ನಾರದೀಯಶಿಕ್ಷಾ, I, 8, 8.

ಸಮುದ್ರದಲ್ಲಿ ಅಲೆಗಳು ಲೆಕ್ಕವಿಲ್ಲದ ಹಾಗೆ, ಪ್ರಾಣಿಗಳ ಶ್ರಾವ್ಯತೆಯ ಮಿತಿಯಲ್ಲಿ ಅನಂತವಾಗಿಯೇ ಇಂತಹ ಶ್ರುತಿಗಳಿವೆ ಎಂಬ ವ್ಯಾಖ್ಯಾನವು ಸಲ್ಲುತ್ತದೆ. ಈ ಅರ್ಥದಲ್ಲಿ ಹಿಂದೆ ಹೇಳಿದ ಎಂಟು ಪಕ್ಷಗಳೂ ಇದರಲ್ಲಿ ಅಂತರ್ಭೂತವಾಗುತ್ತವೆ.

ಈ ರೀತಿಯಲ್ಲಿ ಒಂಬತ್ತು ಶ್ರುತಿಪಕ್ಷಗಳು ಪರಸ್ಪರ ಅವಿರೋಧವಾಗಿರುವುದಷ್ಟೇ ಅಲ್ಲ, ಪರಸ್ಪರ ಪೂರಕಗಳೂ ಪ್ರೇರಕಗಳೂ ಆಗಿವೆ.

ಇವುಗಳನ್ನು ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ಕಲ್ಲಿನಾಥನು ಮೂಡಿಸುವ ಅಭಿಪ್ರಾಯವೊಂದನ್ನು ಇಲ್ಲಿ ವಿಮರ್ಶಿಸುತ್ತಾ ಈ ಭಾಗದ ಉಪಸಂಹಾರವನ್ನು ಮಾಡಬಹುದು. ಮೇಲೆ ವಿವರಿಸಿದ ಒಂಬತ್ತರಲ್ಲಿ ಮೊದಲನೆಯ ಆರು ಪಕ್ಷಗಳು ಸ್ವರ ಶ್ರುತಿಗಳಲ್ಲಿ ಭೇದವನ್ನೇ ತಿಳಿಯುವುದಿಲ್ಲವೆಂದೂ ಆದುದರಿಂದ ಅಂಗೀಕಾರಕ್ಕೆ ಅನರ್ಹಗಳೆಂದೂ ಅವನು ವಾದಿಸುತ್ತಾನೆ ಅವುಗಳು ಅನರ್ಹವೆನ್ನಲು ಅವನು ಕೊಡುವುದು ಇದೊಂದೇ ಕಾರಣವನ್ನು :

ಏತಾನಿ ಷಣ್ಮತಾನಿ ಸ್ವರಶ್ರುತ್ಯೋರಭೇದಮಂಗೀಕೃತ್ಯ ಪ್ರವರ್ತಿತಾನೀತಿ ಮಂತವ್ಯಮ್ । ತಾನಿ ತ್ವಭಿವ್ಯಂಗ್ಯತ್ವಾಭಿವ್ಯಂಜಕತ್ವಾಭ್ಯಾಂ ಸಾಕ್ಷಾದ್ ಭಿನ್ನರೂಪಯೋಃ ಸ್ವರಶ್ರುತ್ಯೋರ್ಭೇದಾಪಹ್ನವಾನ್ನ ಸಮೀಚೀನಾನಿ । [172]

ಈ ಆರು ಮತಗಳು ಸ್ವರಶ್ರುತಿಗಳಲ್ಲಿ ಅಭೇದವನ್ನು ಅಂಗೀಕರಿಸಿ ಪ್ರವರ್ತಿಸುವಂತಹವುಗಳು ಎಂದು ತಿಳಿಯಬೇಕು ; ಸ್ವರವು ಅಭಿವ್ಯಂಗ್ಯವೆಂದೂ ಶ್ರುತಿಯು ಅಭಿವ್ಯಂಜಕವೆಂದೂ ಸಾಕ್ಷಾತ್ತಾಗಿ ಎಂದರೆ ಪ್ರತ್ಯಕ್ಷಪ್ರಮಾಣದಿಂದಲೇ ಭಿನ್ನರೂಪಗಳಾಗಿ ಗೋಚರಿಸುತ್ತವೆ ; ಈ ಭಿನ್ನತೆಯನ್ನು ತೊಡೆದುಬಿಡುವುದರಿಂದ ಈ ಆರು ಮತಗಳೂ ಸಮೀಚೀನಗಳಲ್ಲ, ಎಂದು ಈ ಮಾತಿನ ತಾತ್ಪರ್ಯ. ಎಂದರೆ ನಾದವು ಸ್ವರತ್ವವೆಂಬ ಅಭಿವ್ಯಂಗ್ಯತೆಯನ್ನು ಎಂದರೆ ಅಭಿವ್ಯಕ್ತಿಯನ್ನು ಪಡೆಯಬೇಕಾದರೆ ಅದಕ್ಕೆ ಅಭಿವ್ಯಂಜಕವಾಗಿ, ಎಂದರೆ ಈ ಗುಣವನ್ನು ಪ್ರಕಾಶಪಡಿಸುವುದಾಗಿ ಶ್ರುತಿಯು ಇರುತ್ತದೆ, ಎಂದು ಇಲ್ಲಿ ಅರ್ಥ. ಸ್ವರ-ಶ್ರುತಿಗಳಿಗಿರುವ ಈ ಸಂಬಂಧವು ಬೇರೆಡೆಯಲ್ಲಿಯೂ ಸಾಮಾನ್ಯರೂಪದಲ್ಲಿ ಇರುವಂತಹುದೇ. ಇದಕ್ಕೆ ಅಭಿವ್ಯಕ್ತಿವಾದವೆಂದು ಹೆಸರು. ಇದನ್ನು ಸ್ವರ-ಶ್ರುತಿಗಳ ಸಂಬಂಧದ ವಿವೇಚನೆಯಲ್ಲಿ ಪುನಃ ಪ್ರಸ್ತಾಪಿಸಲಾಗುವುದು.

ಈ ಆರು ಮತಗಳಲ್ಲಿ, ಕಲ್ಲಿನಾಥನು ಹೇಳುವಂತೆ ಸ್ವರ-ಶ್ರುತಿಗಳಲ್ಲಿ ಅಭೇದವನ್ನು ಅಂಗೀಕರಿಸಲಾಗಿದೆಯೇ ಎಂಬುದೇ ತೀವ್ರವಾಗಿ ಪ್ರಶ್ನಾರ್ಹವಾಗಿದೆ. ಮೊದಲನೆಯದಾಗಿ, ಇವುಗಳಲ್ಲಿ ಅಭೇದವನ್ನು ತಿಳಿದಿದ್ದರೆ ಮತಂಗನು ಇವುಗಳನ್ನು ಶ್ರುತಿಪಕ್ಷಗಳೆಂದು ವ್ಯವಹರಿಸುತ್ತಿರಲಿಲ್ಲ ; ಸ್ವರಶ್ರುತಿಗಳಿಗಿರುವ ತಾದಾತ್ಮ್ಯಾದಿ ವಿಕಲ್ಪಗಳಲ್ಲಿಯೋ ಸ್ವರಲಕ್ಷಣವನ್ನು ಹೇಳುವಾಗಲೋ ಪ್ರಸ್ತಾಪಿಸುತ್ತಿದ್ದನು. ಎರಡನೆಯದಾಗಿ, ಕೇಳಿಸಿದ್ದೆಲ್ಲ ಶ್ರುತಿ ಎಂಬ ಸಾಮಾನಾರ್ಥ್ಯದಲ್ಲಿ ತಿಳಿದರೆ ಮಾತ್ರ ಭ್ರಮಾತ್ಮಕವಾದ ಈ ಅಭೇದವು ಭಾಸವಾಗುತ್ತದೆ. ಸಂಗೀತಕ್ಕೆ ಈ ಅರ್ಥವು ಹೇಗೆ ಅಪ್ರಯೋಜಕವೆಂದು ಈಗಾಗಲೇ ಹೇಳಿದೆ. ಈ ಆರು ಪಕ್ಷಗಳಲ್ಲಿ ಸ್ವರಶ್ರುತಿಗಳಲ್ಲಿ ಅಭೇದವನ್ನು ಹೇಳಿದೆಯೇ ಎಂಬುದನ್ನೂ ಇಲ್ಲಿ ವಿಮರ್ಶಿಸಬಹುದು. ಮೊದಲನೆಯದಾಗಿ, ಮತಂಗನ ಏಕಶ್ರುತಿವಾದದಲ್ಲಿ ಈ ಅಭೇದಕ್ಕೆ ಅವಕಾಶವಿಲ್ಲ. ಏಕೆಂದರೆ ನಾದದ ಅವಿಚ್ಛಿನ್ನತೆ, ನಿರಂತರತೆ, ಅಖಂಡತೆಗಳನ್ನು ಈ ವಾದವು ಹೇಳುತ್ತದೆ. ಪರಮಾಣು ಪ್ರಮಾಣದ ಶ್ರುತಿಗಳು ಅನುಕ್ರಮದ ಸರಣಿಯಿಂದ ನಾದದ ಈ ಸ್ವಭಾವವನ್ನು ಉಂಟುಮಾಡಬಲ್ಲವೇ ಹೊರತು ಧ್ವನ್ಯಂತರಾಶ್ರುತಿಯೆಂಬ ಲಕ್ಷಣವು ಸ್ವರಕ್ಕಿಲ್ಲ. ಸ್ವರವು ವಿಶಿಷ್ಟ ಶ್ರುತಿಪ್ರಮಾಣಗಳ ಅಂತ್ಯಸ್ಥಾನದಲ್ಲಿ ಮಾತ್ರ ಅಭಿವ್ಯಕ್ತವಾಗುವಂತಹದು. ಸಪ್ತಸ್ವರಗಳಾಗಲೀ ಅವುಗಳ ವಿಕೃತಿಗಳಾಗಲೀ ಮೆಟ್ಟಲು ಮೆಟ್ಟಲಾಗಿ ಇರುವುದರಿಂದ ನಾದದ ಅವಿಚ್ಛಿನ್ನತೆಯು ಇವುಗಳಿಂದ ತಿಳಿಯುವುದಿಲ್ಲ. ಅಲ್ಲದೆ ಸ್ವರಗಳು ಪ್ರತ್ಯೇಕ

ವ್ಯಪದೇಶವನ್ನು ಪಡೆದಿರುವಂತೆ ಶ್ರುತಿಗಳು ಪಡೆದಿಲ್ಲ. ಆದುದರಿಂದ ಕಲ್ಲಿನಾಥನು ಆರೋಪಿಸುವ ಶ್ರುತಿ-ಸ್ವರಗಳ ಅಭೇದವು ಇಲ್ಲಿ ಸಲ್ಲುವುದಿಲ್ಲ. ವಿಶ್ವಾವಸುವಿನ ಪಕ್ಷದಲ್ಲಂತೂ ಶ್ರುತಿಸ್ವರಗಳಲ್ಲಿನ ಭೇದವು ಪ್ರಥಮದರ್ಶನಕ್ಕೇ ಸ್ಪಷ್ಟವಾಗಿದೆ. ಏಕೆಂದರೆ ಸ್ವರಗತ ಶ್ರುತಿಗಳಲ್ಲಿ ಉಪಸ್ಥಿತಿಯಿದ್ದಾಗ ಮಾತ್ರ ಶ್ರುತಿಯು ಸ್ವರತ್ವವನ್ನೂ ಎರಡು ಸ್ವರಗಳ ನಡುವೆ ಶ್ರುತಿಯಿದ್ದಾಗ ಅದಕ್ಕೆ ಸ್ವರತ್ವವು ಸಾಧ್ಯವಿಲ್ಲದಿದ್ದರೆ ಅಂತರಗತತ್ವವನ್ನೂ ಹೊಂದುತ್ತದೆಂದು ಈ ಪಕ್ಷದ ಸಾರಾಂಶ. ಶ್ರುತಿಗಳಲ್ಲಿ ಎರಡು ಬಗೆಯೆಂದು ಹೇಳಿ ಅವುಗಳಲ್ಲಿ ಒಂದು ಬಗೆಗೆ ಮಾತ್ರ ಸ್ವರತ್ವವಿದೆಯೆಂದರೆ ಸ್ವರಕ್ಕೂ ಶ್ರುತಿಗೂ ಭೇದವಲ್ಲದೆ ಅಭೇದವು ಹೇಗೆ ಸಿದ್ಧವಾಗುತ್ತದೆ ? ಉಳಿದ ಪಕ್ಷಗಳಲ್ಲಿ ಈ ಭೇದವನ್ನು ಕಾಣ ಬೇಕಾದರೆ ಅಲ್ಪ ಪರೀಕ್ಷಣವಾದರೂ ಬೇಕು. ಇದಕ್ಕೆ ಅದೂ ಬೇಕಾಗಿಲ್ಲ. ಅಭಿನವಭರತಾಚಾರ್ಯನೆಂಬ ಬಿರುದು ಪಡೆದ ಕಲ್ಲಿನಾಥನು ಯಾವ ಭಾವವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಪಕ್ಷದಲ್ಲಿಯೂ ಸ್ವರಶ್ರುತಿಗಳ ಅಭೇದವನ್ನು ಕಂಡನೋ ತಿಳಿಯದು. ಈ ಆರು ಪಕ್ಷಗಳಲ್ಲಿಯೂ ಶ್ರುತಿಯೆಂದರೆ (ಗಾನಸಂದರ್ಭದಲ್ಲಿ) ಕೇಳಿಸಿದ್ದು, ಆದುದರಿಂದ ಶ್ರುತಿಯೆಂದರೆ ಸ್ವರವೇ ಎಂಬ ಸಮೀಕರಣವನ್ನು ಅವನು ಇಟ್ಟುಕೊಂಡಿರುವ ಹಾಗೆ ತೋರುತ್ತದೆ. ಈ ಶ್ರುತಿಲಕ್ಷಣ ದಿಂದ ಸ್ವರ, ಸ್ಥಾಯಿ, ಗ್ರಾಮ, ಮೂರ್ಛನೆ, ತಾನ, ವಾದಿ ವಿವಾದಿ ಸಂವಾದಿ ಮೊದಲಾದ ಭಾವಗಳು— ಇವೆಲ್ಲಕ್ಕೂ ಕಿಂಚಿತ್ತೂ ಪ್ರಯೋಜನವಿಲ್ಲವೆಂಬುದನ್ನು ಪುನಃ ಪುನಃ ಹೇಳಲಾಗುತ್ತಿದೆಯಷ್ಟೆ.

ಮೂರನೆಯ ಪಕ್ಷದಲ್ಲಿಯಾದರೂ ಈ ಭೇದವಿದ್ದೇ ಇದೆ. ಏಕೆಂದರೆ ಸ್ಥಾನಾಂತರಕ್ಕೆ ಕಾರಣವಾದ ಶ್ರುತಿಯು ತ್ರಿವಿಧವಾದರೂ ಸ್ವರವೂ ತ್ರಿವಿಧಮಾತ್ರವಾಗಬೇಕು. ಅಲ್ಲದೆ ಸ್ಥಾಯಿಯಲ್ಲಿ ಎಷ್ಟು ಶ್ರುತಿಗಳಿವೆಯೋ ಅಷ್ಟೂ ಸ್ವರ ಗಳಿರಬೇಕು. ಅರ್ಥಾತ್, ಸ್ವರಶ್ರುತಿಗಳಲ್ಲಿ ಅಭೇದವನ್ನು ಹೇಳಿದರೆ ಏಳು ಸ್ವರಗಳಿಗೆ ಏಳು ಮಾತ್ರ ಶ್ರುತಿಗಳಿರಬೇಕು. ಅಥವಾ ವಿಕೃತಿಸ್ವರಗಳನ್ನೂ ಲೆಕ್ಕಿಸಿದರೆ ಹನ್ನೆರಡು ಸ್ವರಸ್ಥಾನಗಳಿಗೆ ಹನ್ನೆರಡು ಮಾತ್ರ ಶ್ರುತಿಸ್ಥಾನಗಳಿರಬೇಕು. ಅಥವಾ ಶಾರ್ಙ್ಗದೇವನನ್ನು ಅನುಸರಿಸಿ ಪ್ರಕೃತಿ ವಿಕೃತಿ ಸ್ವರಗಳೆಲ್ಲವೂ ಸೇರಿ ಹತ್ತೊಂಬತ್ತು ಆದರೆ ಶ್ರುತಿಗಳೂ ಅಷ್ಟೇ ಇರಬೇಕು. ಈ ಸಂಖ್ಯೆಗಳ ಶ್ರುತಿಗಳನ್ನು ಸ್ಥಾಯಿಯಲ್ಲಿ ಯಾರೂ ಯಾವ ಕಾಲದಲ್ಲಿಯೂ ಹೇಳಿಯೂ ಇಲ್ಲ, ಒಪ್ಪಿಯೂ ಇಲ್ಲ. ಕಲ್ಲಿನಾಥನೇ ಇಪ್ಪತ್ತೆರಡು ಶ್ರುತಿಗಳನ್ನು ಒಪ್ಪಿದ್ದಾನಷ್ಟೆ. ಹೀಗಾದರೆ ಸ್ಥಾಯಿಯಲ್ಲಿ ಇಪ್ಪತ್ತೆರಡು ಸ್ವರಗಳು ಇರಬೇಕಾಗುತ್ತದೆ. ಇದೂ ವ್ಯವಹಾರಶೂನ್ಯವಾದುದೇ. ಆದುದರಿಂದ ಯಾವ ಪಕ್ಷದಲ್ಲಿಯೇ ಆಗಲಿ, ಸ್ವರಶ್ರುತಿಗಳಲ್ಲಿ ಅಭೇದವನ್ನು ಹೇಳಲು ಸಾಧ್ಯವೇ ಇಲ್ಲ. ತ್ರಿಸ್ಥಾನಗಳಲ್ಲಿ ತ್ರಿವಿಧ ಶ್ರುತಿಯನ್ನು ವಿಧಿಸಿದರೆ ಅದರಿಂದ ಸ್ವರದಲ್ಲಿ ಮತ್ತು ಶ್ರುತಿಯಲ್ಲಿ ಅಭೇದವನ್ನು ಹೇಳಿದಂತಾಗಲಿಲ್ಲ. ಅಭೇದವನ್ನು ಹೇಳಿದರೆ ತ್ರಿವಿಧವಾದ ಸ್ವರಗಳು ಮಾತ್ರ ಲಭ್ಯವಾಗುತ್ತವೆ. ಸ್ಥಾನಭೇದದಿಂದ ಹುಟ್ಟಿದ ಒಂದೇ ಸ್ವರವನ್ನು ಬೇರೆ ಬೇರೆಯೆಂದು ನಮ್ಮ ಸಂಗೀತ ಶಾಸ್ತ್ರವಾಗಲೀ ಲಕ್ಷ್ಯವಾಗಲೀ ವ್ಯವಹರಿಸುವುದಿಲ್ಲ ; ಗುಣದಲ್ಲಿ ಸ್ವಲ್ಪ ಭಿನ್ನವಾದ ಒಂದೇ ಸ್ವರವೆಂದು ವ್ಯಪದೇಶ ವಿದೆ. ಆದುದರಿಂದ ಬೇರೆ ಬೇರೆ ಸಂಖ್ಯೆಯ ಶ್ರುತಿಗಳನ್ನು ಹೇಳುವ ಪಕ್ಷಗಳು — ಷಟ್‌ಷಷ್ಟಿ ಶ್ರುತಿಪಕ್ಷವು ಸಹ— ಸ್ವರಗಳು ಏಳೇ ಎಂದು ಒಪ್ಪುತ್ತವೆ. ನಾಲ್ಕನೆಯ ಇಂದ್ರಿಯವೈಗುಣ್ಯಪರವಾಗಿ ಶ್ರುತಿಯ ತ್ರೈವಿಧ್ಯವನ್ನು ಹೇಳುವ ಪಕ್ಷವಾಗಲೀ ಸ್ವರಶ್ರುತಿಗಳಿಗೆ ಅಭೇದವನ್ನು ಹೇಳಲಾರದು. ಹೇಳಿದರೆ ಇಂದ್ರಿಯದೋಷದಿಂದಲೂ ಅಭಿಘಾತದಿಂದಲೂ ಸ್ವರಗಳು ಹುಟ್ಟುತ್ತವೆಂದು ಸಿದ್ಧವಾಗುತ್ತದೆ. ಇದು ಅನುಭವಕ್ಕೂ ತರ್ಕಕ್ಕೂ ವಿರುದ್ಧವಾಗಿದೆ.

ಇವೇ ಮಾತುಗಳನ್ನು ಮುಂದಿನ ಪಕ್ಷಕ್ಕೂ ಅನ್ವಯಿಸಬಹುದು. ಏಕೆಂದರೆ ಶರೀರದ ವಾತ ಪಿತ್ತ ಕಫಗಳಿಂದ ಹುಟ್ಟುವ ಧ್ವನಿಯ ಸ್ನಿಗ್ಧತೆ, ರೂಕ್ಷತೆ, ಘನತೆ ಮುಂತಾದವುಗಳನ್ನು ಸ್ವರತ್ವಕ್ಕೆ ಹೇತುಗಳೆಂದು ಸ್ವೀಕರಿಸ ಬಹುದು. ಇವು ಶ್ರುತಿಗಳಿಗೂ ಇರಬಹುದು. ಗುಣ, ಸ್ವಭಾವ ಅಥವಾ ಧರ್ಮದಲ್ಲಿ ಸಾದೃಶ್ಯವಿದ್ದಮಾತ್ರಕ್ಕೆ ಅಭೇದವು ಸಿದ್ಧವಾಗುವುದಿಲ್ಲ. ಈ ಸಾದೃಶ್ಯವಿಲ್ಲದಿದ್ದರೆ ಶ್ರುತಿಗಳು ಸಂಗೀತೋಪಯೋಗಿಗಳಾಗಲು ಸಾಧ್ಯವೇ ಆಗುತ್ತಿರಲಿಲ್ಲ. ಶ್ರುತಿಗಳಿಂದಲೇ ಸ್ವರಗಳು ಎಂದ ಮೇಲೆ ಸ್ವರದಲ್ಲಿರುವ ಗುಣಗಳನ್ನು ಶ್ರುತಿಗಳಲ್ಲಿ ಹೇತುರೂಪವಾಗಿ

ಹೇಳಿದಲ್ಲದೆ ಆಗದು. ಎರಡು ವಸ್ತುಗಳಲ್ಲಿ ಅಭೇದವನ್ನು ಹೇಳಬೇಕಾದರೆ ಏಕಕಾಲಿಕತೆ, ಏಕದೇಶಸ್ಥತ್ವಗಳೆರಡನ್ನೂ ಸಿದ್ಧಪಡಿಸಬೇಕು ; ಎರಡರ ಅಂಗಗಳಲ್ಲಿ ಅಥವಾ ಅವಯವಗಳಲ್ಲಿ ಸಂಪೂರ್ಣ ಪರಸ್ಪರತೆ ಮತ್ತು ಸಾಮ್ಯಗಳನ್ನು ತೋರಿಸಿದರೂ ಎರಡರಲ್ಲಿಯೂ ಇತರೇತರಾಶ್ರಯವನ್ನು, ಎಂದರೆ ಅವಿನಾಭಾವವನ್ನು ನಿರ್ಣಯಿಸಿದರೂ ಸಹ ಅಭೇದವನ್ನು ಪ್ರಮಾಣಿಸಲಾಗುವುದಿಲ್ಲ. ಈ ಯಾವುದನ್ನೂ ಶ್ರುತಿ-ಸ್ವರಗಳಲ್ಲಿ ಮಾಡಲಾಗುವುದಿಲ್ಲ. ಪ್ರಸಕ್ತವಾದ ಪಕ್ಷದಲ್ಲಿ ಸನ್ನಿಪಾತಜವೆಂಬ ಶ್ರುತಿವಿಧದಲ್ಲಿ ಧ್ವನಿಯು ವಾತ ಪಿತ್ತ ಕಫಗಳಿಂದಾದ ಗುಣಗಳ ಮಿಶ್ರಣವೆಂದಿದೆಯಷ್ಟೆ. ಎಂದರೆ ಬೇರೆ ಬೇರೆ ಗುಣಗಳು ಅಂಶತಃ ಇದರಲ್ಲಿ ಇರುತ್ತವೆಂದಾಯಿತು. ವಿವಿಧ ಶ್ರುತಿರೀತಿಗಳಿಂದಾದ ಈ ಸಂಯುಕ್ತ ಶ್ರುತಿಗೂ ಅದರಿಂದಾದ ಸ್ವರಕ್ಕೂ ಅಭೇದವನ್ನು ವಾದಿಸಿದರೆ ಸ್ವರಕ್ಕೂ ಶ್ರುತಿಗೂ ಅವಯವೀ–ಅವಯವ ಸಂಬಂಧವೋ, ಅಂಗಿ-ಅಂಗದ ಸಂಬಂಧವೋ, ಗುಣಿ-ಗುಣದ ಸಂಬಂಧವೋ ಇರುವುದರಿಂದ ಅಭೇದಕ್ಕೆ ಬಾಧೆಯೇ ತಟ್ಟುತ್ತದೆ.

ಕಡೆಯದಾಗಿ, ನವವಿಧಶ್ರುತಿಪಕ್ಷದಲ್ಲಿ ಶ್ರುತಿ-ಸ್ವರಗಳಿಗೆ ಅಭೇಧವನ್ನು ಆರೋಪಿಸುವುದಂತೂ ಸಾಹಸವೇ ಸರಿ. ಏಕೆಂದರೆ ಒಂಬತ್ತು ಶ್ರುತಿಗಳಿಂದ ಮೂರೇ ಸ್ವರಗಳನ್ನು ಮಾತ್ರ ಹೇಳಿದೆಯಷ್ಟೆ ; ಹೀಗೆ ಸಂಖ್ಯಾಭೇದವು ಮೊದಲ ನೋಟಕ್ಕೇ ಸಿದ್ಧವಾಗುತ್ತದೆ. ದ್ವಿಶ್ರುತಿಕ ಸ್ವರ, ತ್ರಿಶ್ರುತಿಕ ಸ್ವರ ಮತ್ತು ಚತುಃಶ್ರುತಿಕ ಸ್ವರ ಎಂಬ ಲಕ್ಷಣದಲ್ಲಿ ಈ ಹೆಸರುಗಳನ್ನು ಆಯಾ ಸ್ವರಗಳಿಗೆ ಕೇವಲ ಸಂಜ್ಞೆಗಳೆಂದು ತಿಳಿಯಲಾಗದು. ಇವು ಸಂಜ್ಞೆಗಳೂ ಹೌದು, ಅನ್ವರ್ಥನಾಮಗಳೂ ಹೌದು. ಈ ಹೆಸರುಗಳು ಒಟ್ಟು ಪ್ರಮಾಣದಲ್ಲಿರುವ ಅನುಪಾತವನ್ನು, ಎಂದರೆ ತ್ರಿಶ್ರುತಿಕಸ್ವರವು ದ್ವಿಶ್ರುತಿಕಸ್ವರದ ಒಂದೂವರೆಯಷ್ಟೂ, ಚತುಃಶ್ರುತಿಕಸ್ವರವು ದ್ವಿಶ್ರುತಿಕ ಸ್ವರದ ಎರಡರಷ್ಟೂ ಅಥವಾ ತ್ರಿಶ್ರುತಿಕಸ್ವರದ ಒಂದೂ ಮೂರನೆಯಷ್ಟು ($1\frac{1}{3}$), ಇದೆಯೆಂದು ತಿಳಿಸುವುದಿಲ್ಲ. ಈ ಬಗೆಯ ಸಂಖ್ಯಾಸಾಮ್ಯವನ್ನು ಈ ಹೆಸರುಗಳಿಂದ ತಿಳಿಯಬಾರದು ; ಏಕೆಂದರೆ ಇದು ಲಕ್ಷ್ಯದಲ್ಲಿರುವ ವಾಸ್ತವಿಕ ಸಂಗತಿಗೆ ವಿರುದ್ಧವಾಗುತ್ತದೆ. ಇವು ಆಯಾ ಸ್ವರದ ಸ್ವರೂಪವನ್ನು ಮಾತ್ರ ವರ್ಣಿಸುತ್ತವೆಂದೂ ಹೇಳಲು ಸಾಧ್ಯವಿಲ್ಲ ; ಏಕೆಂದರೆ ದ್ವಿ-, ತ್ರಿ-, ಮತ್ತು ಚತುಃಶ್ರುತಿಕ ಸ್ವರಗಳಿಂದ ಒಟ್ಟು ಒಂಬತ್ತು ಶ್ರುತಿಗಳು ಎಂಬುದು ಈ ಪಕ್ಷದ ನಿಲುವು. ಆದುದರಿಂದ ದ್ವಿಶ್ರುತಿಕ ಎಂದರೆ ಬಿಡಿಬಿಡಿಯಾದ ಎರಡು ಶ್ರುತಿಗಳು, ತ್ರಿಶ್ರುತಿಗಳೆಂದರೆ ಬಿಡಿಬಿಡಿಯಾದ ಮೂರು ಶ್ರುತಿಗಳು, ಎಂದು ಮುಂತಾಗಿ ಅರ್ಥಮಾಡಬೇಕು. ಎರಡು ಶ್ರುತಿಗಳುಳ್ಳ ಸ್ವರವೆಂದರೆ ಸ್ವರಶ್ರುತಿಗಳಿಗೆ ಅವಯವ ಸಂಬಂಧವನ್ನು ಹೇಳಿದಂತೆಯೇ ಆಯಿತು. ಆದುದರಿಂದ ಈ ಮತದಲ್ಲಿಯೂ ಸ್ವರಶ್ರುತಿಗಳಿಗೆ ಅಭೇದವಿಲ್ಲ.

ಕಲ್ಲಿನಾಥನು ಒಪ್ಪುವುದಾದರೂ ಭೇದವನ್ನೇ ಎಂಬುದನ್ನಿಲ್ಲಿ ಗಮನಿಸಬೇಕು. ಈ ಭೇದವು ಇರುವುದರಿಂದಲೇ ದ್ವಾವಿಂಶತಿ, ಷಟ್‌ಷಷ್ಟಿ ಮತ್ತು ಅನಂತಶ್ರುತಿಗಳ ಪಕ್ಷಗಳನ್ನು ಪರಿಶೀಲನಾರ್ಹವೆಂದು ಎಣಿಸುತ್ತಾನೆ. ಇಂತಹ ಭೇದಕ್ಕೆ ಅವನು ಹೇಳುವ ಕಾರಣವೆಂದರೆ ಶ್ರುತಿಯು ಅಭಿವ್ಯಂಜಕವಾಗಿಯೂ ಸ್ವರವು ಅಭಿವ್ಯಂಗ್ಯವಾಗಿಯೂ ಸಾಕ್ಷಾತ್ತಾಗಿ ಬೇರೆ ಬೇರೆಯೇ ಅನುಭವಗಮ್ಯಗಳಾಗಿವೆ ಎಂಬುದು. ಸ್ವರಶ್ರುತಿಗಳ ನಡುವೆ ಇರುವ ಈ ಸಂಬಂಧವನ್ನು ಮತಂಗನು ಸ್ವೀಕರಿಸಿದ್ದಾನೆಂದು ಮುಂದೆ ಬರೆಯಲಾಗುವುದು. ಕೇವಲ ಇದರ ಆಧಾರದ ಮೇಲೆ ಕೆಲವು ಶ್ರುತಿಪಕ್ಷಗಳನ್ನು ತಳ್ಳಿಹಾಕಿಬಿಡುವುದು ಅಷ್ಟೇನೂ ಸಾಧುವಾದ ವಿಚಾರಕ್ರಮವೆಂದು ನನಗೆ ಎನ್ನಿಸುವುದಿಲ್ಲ. ಮತಂಗನು ಶ್ರುತಿಗಳನ್ನು ಮೊದಲು ವಿವೇಚಿಸಿ ಅವುಗಳಿಂದ ಸ್ವರಗಳನ್ನು ಪಡೆದಿದ್ದಾನೆ. ಆದುದರಿಂದ ಶ್ರುತಿಯ ಮತ್ತು ಸ್ವರದ ಸ್ವಭಾವಗಳೆರಡನ್ನೂ ಒಟ್ಟಿಗೆ ಪರಿಶೀಲಿಸುವುದರಿಂದ ಶ್ರುತಿಸ್ವರಗಳ ಸಂಬಂಧಗಳನ್ನು ಪಡೆಯಬೇಕೇ ಹೊರತು, ಶ್ರುತಿಸ್ವರಸಂಬಂಧದಿಂದ ಶ್ರುತಿಯ ಸ್ವರೂಪವನ್ನಲ್ಲ. ಎರಡು ವಸ್ತುಗಳ ಸಂಬಂಧದಿಂದ ಅವೆರಡರ ಸ್ವರೂಪಗಳೂ ಅಂಶತಃ ಮಾತ್ರ, ಎಂದರೆ ಸಂಬಂಧದಿಂದ ವಿವಕ್ಷಿತವಾದಷ್ಟು ಮಾತ್ರ, ತಿಳಿಯುತ್ತವೆಯೇ ಹೊರತು, ಎರಡರ ಅಥವಾ ಒಂದರ ಸಂಪೂರ್ಣ ಸ್ವಭಾವವಾಗಲೀ, ನೈಜಸ್ವರೂಪವಾಗಲೀ ತಿಳಿಯುವುದಿಲ್ಲ.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಅಂತೆಯೇ ಅಭಿವ್ಯಂಜಕ–ಅಭಿವ್ಯಂಗ್ಯ ಸಂಬಂಧದಿಂದ ಶ್ರುತಿಯು ಸಂಪೂರ್ಣ ಸ್ವರೂಪವನ್ನಾಗಲೀ ಸ್ವರದ ಸ್ವರೂಪವನ್ನಾಗಲೀ ವಿವರಿಸಲೆಳಸುವುದು ತರ್ಕಶುದ್ಧವಲ್ಲ. ಈ ತಪ್ಪನ್ನು ಮಾಡಿರುವುದು ಕಲ್ಲಿನಾಥನೇ ಹೊರತು ಮತಂಗನಲ್ಲವೆಂಬುದನ್ನು ಇಲ್ಲಿ ಸ್ಪಷ್ಟಪಡಿಸಬೇಕು. ಮತಂಗನು ದ್ವಾವಿಂಶತಿಶ್ರುತಿ ಪಕ್ಷವೊಂದನ್ನು ಮಾತ್ರ ವಿಶೇಷ ಗೌರವದಿಂದ ಹೇಳಿದ್ದಾನೆ. ಆದರೆ ಅವನು ಕೆಲವನ್ನು ಒಪ್ಪುವ, ಕೆಲವನ್ನು ನಿರಾಕರಿಸುವ ತಪ್ಪಿಗೆ ಬಲಿಯಾಗಲಿಲ್ಲ. ಒಂಬತ್ತು ಪಕ್ಷಗಳೂ ಅವಿರೋಧಗಳಲ್ಲವೆಂಬುದನ್ನು ಅವನು ಚೆನ್ನಾಗಿ ತಿಳಿದಿದ್ದನು. ಏಕೆಂದರೆ ಶ್ರುತಿಯು ಒಂದೇ ಎಂದು ತಾನು ಪ್ರಾಥಮ್ಯ ಪ್ರಾಧಾನ್ಯಗಳಿಂದ ಮಂಡಿಸಿದ ಮತವನ್ನು ಉಳಿದವುಗಳಿಗೆ ವಿರೋಧವೆಂದು ಬಗೆದಿದ್ದರೆ ಅವುಗಳನ್ನು ಹೇಳುತ್ತಿರಲಿಲ್ಲ; ಹೇಳಿದ್ದರೆ ಪೂರ್ವಪಕ್ಷವೆಂದು ಸ್ವೀಕರಿಸಿ ಖಂಡಿಸುತ್ತಿದ್ದನು. ಅವನೇ ಅನ್ಯರು ಹೇಳಿದ ದ್ವಾವಿಂಶತಿ ಶ್ರುತಿಪಕ್ಷವನ್ನು ಹೊಗಳಿಲ್ಲವೇ? ವಿಶ್ವಾವಸು, ಕೋಹಲರಲ್ಲಿ ಅತ್ಯಂತ ಪೂಜ್ಯಭಾವವನ್ನಿಟ್ಟಿರುವ ಅವನು ಖಂಡಿಸುವುದಕ್ಕಾಗಿ ಅಥವಾ ನಿರಾಕರಿಸುವುದಕ್ಕಾಗಿ ಮಾತ್ರ ತನ್ನ ಗ್ರಂಥದಲ್ಲಿ ಅವರ ಮತಗಳನ್ನು ಉದ್ಧರಿಸಿಕೊಂಡಿರುವನೆಂದು ತಿಳಿಯುವುದು ಸಾಧುವಾಗಲಾರದು. ಖಂಡನೆಯು, ನಿರಾಕರಣೆಯು, ಹೋಲಿಕೆಯು, ಆ ಅಥವಾ ಈ ಪಕ್ಷವೇ ಸರಿಯೆಂಬ ತೀರ್ಪಿನ ಮಾತನ್ನು ಅವನು ಈ ಸಂದರ್ಭದಲ್ಲಿ ಒಮ್ಮೆಯೂ ಆಡಿಯೂ ಇಲ್ಲ, ಸೂಚಿಸಿಯೂ ಇಲ್ಲ. ಅಲ್ಲದೆ ಭಗವಾನ್ ಭರತನಿಂದಲೇ ಅವನು ದ್ವಾವಿಂಶತಿ ಶ್ರುತಿಪಕ್ಷಕ್ಕೆ ಪ್ರಯೋಗ ನಿದರ್ಶನವನ್ನು ಪಡೆದುಕೊಂಡವನು ಅದೇ ಭರತನಿಂದಲೇ ನವವಿಧಶ್ರುತಿಪಕ್ಷವನ್ನೂ ಮಂಡಿಸಬೇಕಾದರೆ ಎರಡರಲ್ಲಿಯೂ ಪರಸ್ಪರ ವಿರೋಧವಿಲ್ಲ, ಎರಡೂ ಪರಸ್ಪರ ಪೂರಕಗಳು, ಪ್ರೇರಕಗಳು ಎಂಬ ಭಾವನೆಯಿಂದಲೇ ಮಾಡಿರಬೇಕು. ತಾತ್ಪರ್ಯದಲ್ಲಿ, ಮತಂಗನು ಮೊದಲಿನ ಆರು ಪಕ್ಷಗಳು ಸ್ವರಶ್ರುತಿಗಳಲ್ಲಿ ಅಭೇದವನ್ನು ಅಂಗೀಕರಿಸುತ್ತವೆಂದೇನೂ ತಿಳಿಯಲಿಲ್ಲ; ಅವನು ಅವುಗಳನ್ನು ನಿರಾಕರಿಸಲೂ ಇಲ್ಲ.

ಈ ಷಣ್ಮತಗಳೂ ಸ್ವರಶ್ರುತಿಗಳಲ್ಲಿ ಅಭೇದವನ್ನು ಅಂಗೀಕರಿಸುವುದರಿಂದ ಪ್ರವರ್ತಿತವಾಗಿವೆಯೆಂದು ಕಲ್ಲಿನಾಥನು ಹೇಳುವುದು ಸ್ವಂತ, ವೈಯಕ್ತಿಕ ಅಭಿಪ್ರಾಯದಿಂದ; ಇದು ಅವನ ವ್ಯಾಖ್ಯಾನ ರೀತಿ. ಆದರೆ ಇದಕ್ಕೆ ಮತಂಗನಲ್ಲಿಯೂ ಶಾರ್ಙ್ಗದೇವನಲ್ಲಿಯೂ ಆಸ್ಪದವಿಲ್ಲ. ಸ್ವರಶ್ರುತಿಗಳಿಗೆ ಭೇದವನ್ನು ಹೇಳದಿದ್ದರೆ ಇವೆರಡರ ವಿಷಯವಾಗಿ ಪ್ರತ್ಯೇಕವಾದ ಪ್ರಮೇಯಗಳೇ ಹೊರಡುವುದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಸ್ವರ, ಶ್ರುತಿ ಎಂಬ ಬೇರೆ ಬೇರೆ ಶಬ್ದಗಳನ್ನು ಹೇಳಿರುವುದರಿಂದಲೇ ಇವುಗಳಲ್ಲಿ ಭೇದವು ಸಿದ್ಧವಾಗುವುದಿಲ್ಲವೇ? ಚತುಃಶ್ರುತಿಕಸ್ವರ ಎಂದು ಮೊದಲಾಗಿ ಲಕ್ಷ್ಯದಲ್ಲಿ ಭದ್ರವಾಗಿ ಬೇರೂರಿರುವ ಪ್ರಯೋಗದಿಂದಲೇ ಇವು ಬೇರೆ ಬೇರೆಯೆಂದು ತಿಳಿಯುವುದಿಲ್ಲವೇ? ಹೀಗಿರುವಾಗ ಈ ಎರಡು ವಿಷಯಗಳನ್ನೂ ಸ್ಪಷ್ಟವಾಗಿ ವಿವಕ್ಷಿಸುವ, ತಾದಾತ್ಮ್ಯಾದಿ ವಿಕಲ್ಪಗಳನ್ನು ವಿಸ್ತಾರವಾಗಿ ವಿವೇಚಿಸುವ ಮತಂಗಮುನಿಯಾಗಲೀ, ಶ್ರುತಿಗಳಿಗೆ ಹೆಸರಿಡುವುದರಿಂದಲೇ ಇವುಗಳಲ್ಲಿ ಭೇದವನ್ನು ವಿವಕ್ಷಿಸುವ ವಿಶ್ವಾವಸುವಾಗಲೀ, ಸ್ವರಗಳಿಗೆ ಹೆಸರಿಡುವುದರಿಂದಲೇ ಈ ಭೇದವನ್ನು ಧ್ವನಿಸುವ ವೇಣ, ಭರತ ಮೊದಲಾದವರಾಗಲೀ ತಪ್ಪಿರಲು ಸಾಧ್ಯವೇ? ಅಭಿವ್ಯಂಗ್ಯ–ಅಭಿವ್ಯಂಜಕದ ಸಂಬಂಧವು ಮೊದಲಿನ ಷಣ್ಮತಗಳಿಗೆ ಹೇಗೆ ಅನ್ವಿತವೋ ಉಳಿದವುಗಳಿಗೂ ಅಷ್ಟೇ ಅನ್ವಿತ. ಇದರಿಂದ ಸ್ವರಶ್ರುತಿಗಳ ಭೇದವನ್ನು ಮೊದಲಿನ ಆರು ಮತಗಳು ಮುಚ್ಚಿಬಿಡುವುದಾದರೂ ಹೇಗೆ? ಶ್ರುತಿಯು ಒಂದೇ ಎಂಬ ಮತವನ್ನೂ, ಈ ಅಭಿವ್ಯಕ್ತಿ ವಾದವನ್ನೂ, ಎರಡನ್ನೂ ಹೇಳಿರುವುದು ಮತಂಗಮುನಿಯೇ ಎಂಬುದನ್ನು ಕಲ್ಲಿನಾಥನು ಮರೆತುಬಿಟ್ಟಂತೆ ತೋರುತ್ತದೆ.

ವಿಶ್ವಾವಸುವಿನ ಶ್ರುತಿ ದ್ವೈವಿಧ್ಯದಲ್ಲಿಯಾದರೂ ಈ ಅಭಿವ್ಯಕ್ತಿವಾದವು ಸ್ಪಷ್ಟವಾಗಿ ಇದ್ದೇ ಇದೆ. ಏಕೆಂದರೆ ಸ್ವರಗತ ಶ್ರುತಿಯು ಅಭಿವ್ಯಂಜಕವಾಗುವುದರಿಂದಲೇ ಅದರ ಸ್ಥಾನದಲ್ಲಿ ಸ್ವರವು ಅಭಿವ್ಯಂಗ್ಯವಾಗುವುದು. ಎಲ್ಲಾ ಶ್ರುತಿಗಳಲ್ಲಿಯೂ ಈ ಸಂಬಂಧವು ನೇರವಾಗಿ ಉಳಿಯುವುದಿಲ್ಲ; ಕೆಲವು ಶ್ರುತಿಗಳು ನೇರವಾಗಿ ತಾವೇ ಸ್ವರದ

ಅಭಿವ್ಯಕ್ತಿಗೆ ಹೇತುಗಳಾಗಲಾರವು ; ಇವುಗಳು ಉತ್ತರೋತ್ತರ ಸಂಸ್ಕಾರಪ್ರದಾನದಿಂದ ಅಂತ್ಯಶ್ರುತಿಯು ಸ್ವರದ ಸ್ವಸಂವೇದ್ಯತೆಗೆ, ಎಂದರೆ ಸ್ವರವು ಅಭಿವ್ಯಂಗ್ಯವಾಗುವುದಕ್ಕೆ, ಪರೋಕ್ಷ ಹೇತುಗಳಾಗುತ್ತವೆ, ಎಂದರೆ ಪರೋಕ್ಷವಾಗಿ ಅಭಿವ್ಯಂಜಕಗಳಾಗುತ್ತವೆ, ಎಂಬುದಾಗಿ ಅಭಿವ್ಯಕ್ತಿವಾದದ ಎರಡು ಮುಖಗಳನ್ನು ಸ್ಪಷ್ಟವಾಗಿ ಇಲ್ಲಿ ಕಾಣಬಹುದು.

ಹಾಗೆ ನೋಡಿದರೆ, ಅಭಿವ್ಯಕ್ತಿವಾದವನ್ನು ವಿಶ್ವಾವಸುವಿನ ಮತದಿಂದ ನೇರವಾಗಿ, ತಾರ್ಕಿಕವಾಗಿ, ಅದರ ಧ್ವನಿಗಳೆಲ್ಲವನ್ನೂ ಒಳಗೊಂಡು, ಪಡೆಯಲಾಗುವಷ್ಟು ಸುಲಭವಾಗಿ ಬೇರೆ ಪಕ್ಷಗಳಿಂದ ಸಾಧ್ಯವಾಗುವುದಿಲ್ಲ. ವೇಣ ಮತ್ತು ಭರತರು ಹೇಳುವ ನವವಿಧಶ್ರುತಿಪಕ್ಷದಲ್ಲಿಯೂ ಅಭಿವ್ಯಕ್ತಿವಾದವು ಸ್ಪಷ್ಟವಾಗಿಯೇ ಅನುಮಿತವಾಗುತ್ತದೆ. ಏಕೆಂದರೆ ದ್ವಿಶ್ರುತಿಕಸ್ವರ, ತ್ರಿಶ್ರುತಿಕಸ್ವರ, ಚತುಃಶ್ರುತಿಕಸ್ವರ, ಎಂದು ಅವರು ಸ್ವರಗಳ ವರ್ಗೀಕರಣವನ್ನು ಮಾಡುತ್ತಾರೆ. ಇದರಲ್ಲಿ ಸ್ವರವು ತನ್ನ ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಶ್ರುತಿಯಲ್ಲಿ, ಎಂದರೆ ಕಡೆಯ ಶ್ರುತಿಯಲ್ಲಿ, ಅಭಿಘಾತವಾಗುವುದರಿಂದ ಈ ಹೆಸರುಗಳನ್ನು ಪಡೆಯುತ್ತದಷ್ಟೆ. ಭರತನು ಈ ಮಾತನ್ನು, ಎಂದರೆ ನಾಲ್ಕು, ಏಳು, ಒಂಬತ್ತು, ಹದಿಮೂರು, ಹದಿನೇಳು, ಇಪ್ಪತ್ತು ಮತ್ತು ಇಪ್ಪತ್ತೆರಡನೆಯ ಶ್ರುತಿಗಳಲ್ಲಿ ಕ್ರಮವಾಗಿ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದಗಳು ಉಪಸ್ಥಿತಗಳಾಗಿರುತ್ತವೆಂಬ ವಿಧಿಯನ್ನು, ನೇರವಾಗಿ ಎಲ್ಲೂ ಹೇಳುವುದಿಲ್ಲ, ನಿಜ : ಆದರೆ ಷಡ್ಜಕ್ಕೆ ನಾಲ್ಕು ಶ್ರುತಿಗಳು ಎಂದು ಹೇಳಿ, ಶ್ರುತಿನಿದರ್ಶನ ಪ್ರಯೋಗದಲ್ಲಿ, ನಾಲ್ಕು ಶ್ರುತಿಗಳಷ್ಟನ್ನು ಇಳಿಸಿದ್ದರಿಂದ ನಿಷಾದದಲ್ಲಿ ಅದು ಪ್ರವೇಶಿಸುತ್ತದೆಂದು ಹೇಳಿದ್ದಾನಷ್ಟೆ. ಇದರಿಂದ ಷಡ್ಜದ ಅವಧಿಯು ನಿಷಾದದ ಅಂತ್ಯದಿಂದ ಷಡ್ಜದ ಅಂತ್ಯದವರೆಗೆ ಎಂದು ಸಿದ್ಧವಾಗುವುದೇ ಹೊರತು ನಿಷಾದದ ಮೊದಲಿನಿಂದ ಷಡ್ಜದ ಮೊದಲಿನವರೆಗೆ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ ಸ್ವರಸಾಧಾರಣ ಪ್ರಕರಣದಲ್ಲಿ ನಿಷಾದದ ವಿಕೃತಿಯನ್ನು ಹೇಳುವಾಗ ಭರತನು ನಿಷಾದವು ತನ್ನ ಶ್ರುತಿಯನ್ನು ದಾಟಿ ಷಡ್ಜದ ಶ್ರುತಿಯನ್ನು ಆಕ್ರಮಿಸುತ್ತದೆ ; ಈ ಶ್ರುತಿಯಲ್ಲಿ ಅದು ನಿಷಾದ-ಷಡ್ಜ ಸ್ವರಗಳಿಗೆ ಸಾಧಾರಣವಾಗಿರುತ್ತದೆ, ಎಂಬ ಮಾತನ್ನು ಆಡುತ್ತಾನೆ. ಇದರಿಂದ ನಿಷಾದದ ಅಂತ್ಯವು ಇಪ್ಪತ್ತೆರಡನೆಯ ಶ್ರುತಿಯೆಂದೂ ಷಡ್ಜದ ಅಂತ್ಯವು ನಾಲ್ಕನೆಯ ಶ್ರುತಿಯೆಂದೂ ನಿರ್ವಿವಾದವಾಗಿ ಅನುಮಿತಿಯಿಂದ ಸಿದ್ಧವಾಗುತ್ತದೆ. ಗಾಂಧಾರವು ಸಾಧಾರಣವಾಗುವುದನ್ನೂ ಅವನು ಹೀಗೆಯೇ ಹೇಳುತ್ತಾನೆ. ಇದನ್ನು ಇದೇ ಅಧ್ಯಾಯದ ಸಾಧಾರಣ ಪ್ರಕರಣದಲ್ಲಿ ವಿಸ್ತಾರವಾಗಿ ಚರ್ಚಿಸಲಾಗುವುದು. ಭರತಮುನಿಯು ಇದನ್ನು ಕೇವಲ ಅನುಮಿತಿಯಿದ ಹೇಳಿದ್ದರೂ ಅವನನ್ನೇ ಈ ವಿಷಯದಲ್ಲಿ ಸಂಪೂರ್ಣವಾಗಿ ಅವಲಂಬಿಸುವ ದತ್ತಿಲ ಮತಂಗರು ಷಡ್ಜವು ನಾಲ್ಕನೆಯ ಶ್ರುತಿಯಲ್ಲಿಯೂ ರಿಷಭವು ಏಳನೆಯ ಶ್ರುತಿಯಲ್ಲಿಯೂ ಇರುತ್ತವೆ ಎಂದು ಮುಂತಾದ ಮಾತುಗಳನ್ನು ಬಿಚ್ಚಿ ಆಡಿದ್ದಾರೆ. ಶಾರ್ಙ್ಗದೇವನಂತೂ ಅಂಗೈಯಲ್ಲಿನ ನೆಲ್ಲಿಕಾಯಿಯಂತೆ ಇದನ್ನು ಸ್ಫುಟಗೊಳಿಸಿದ್ದಾನೆ.

ಇಲ್ಲಿ ಪ್ರಕೃತವಾದುದು ಏನೆಂದರೆ, ನಾಲ್ಕನೆಯ ಶ್ರುತಿಯಲ್ಲಿ ಷಡ್ಜ ಎಂದು ಭರತನು ಹೇಳಿದರೆ ಷಡ್ಜವು ನಾಲ್ಕನೆಯ ಶ್ರುತಿಯಲ್ಲಿ ಅಭಿವ್ಯಕ್ತವಾಗುತ್ತದೆ, ಎಂದರೆ ನಾಲ್ಕನೆಯ ಶ್ರುತಿಯಲ್ಲಿ ಅಭಿವ್ಯಂಗ್ಯವಾಗುತ್ತದೆ ಎಂದು ಸ್ಪಷ್ಟವಾಗಿಯೇ ಸಿದ್ಧವಾಗುತ್ತದೆ : ಎಂದರೆ ನಾಲ್ಕನೆಯ ಶ್ರುತಿಯು ಷಡ್ಜಕ್ಕೆ ಅಭಿವ್ಯಂಜಕವಾಗುತ್ತದೆ ಎಂಬುದು ಸ್ವಯಂಸಿದ್ಧವೇ ಆಗುತ್ತದೆ. ಅದೇ ರೀತಿಯಲ್ಲಿ ಷಡ್ಜದ ಮೊದಲನೆಯ, ಎರಡನೆಯ ಮತ್ತು ಮೂರನೆಯ ಶ್ರುತಿಗಳು ಷಡ್ಜಕ್ಕೆ ಅಭಿವ್ಯಂಜಕವಾಗಲಾರವು ; ಏಕೆಂದರೆ ಶ್ರುತಿನಿದರ್ಶನಪ್ರಯೋಗದಲ್ಲಿ ಈ ಸ್ಥಾನಗಳಲ್ಲಿ ಶ್ರುತಿಗಳನ್ನು ಪಡೆದಾಗಲೂ ಷಡ್ಜವು ಹುಟ್ಟಲಿಲ್ಲವೆಂಬುದನ್ನು ಇಲ್ಲಿ ಸ್ಮರಿಸಬೇಕು. ಹೀಗೆ ಪುನಃ ಅಭಿವ್ಯಕ್ತಿವಾದವು ತನ್ನ ಎರಡು ಮುಖಗಳಲ್ಲಿಯೂ ಇಲ್ಲಿ ಕಾಣಿಸಿಕೊಳ್ಳುತ್ತದೆ. ಅಷ್ಟೇ ಅಲ್ಲದೆ ಸ್ವರಸಾಧಾರಣಪ್ರಕ್ರಿಯೆಯಿಂದ ಷಡ್ಜದ ಮೊದಲನೆಯ ಶ್ರುತಿಯೂ ಎರಡನೆಯ ಶ್ರುತಿಯೂ ಕ್ರಮವಾಗಿ ನಿಷಾದವು ಕೈಶಿಕೀ ಮತ್ತು ಕಾಕಲೀ ಎಂಬ

ವಿಕೃತಾವಸ್ಥೆಗಳನ್ನು ಪಡೆದು ನಿಷಾದಕ್ಕೆ ಅಭಿವ್ಯಂಜಕವಾಗುತ್ತವೆ. ಆದರೆ ನಿಷಾದವು ಶುದ್ಧವಾಗಿರುವಾಗ, ಎಂದರೆ ಇಪ್ಪತ್ತೆರಡನೆಯ ಶ್ರುತಿಯಲ್ಲಿದ್ದಾಗ, ಇವೆರಡೂ ಸಂಪೂರ್ಣವಾಗಿ ಅನಭಿವ್ಯಂಜಕಗಳೇ; ಮೂರನೆಯ ಶ್ರುತಿಯೂ ಹೀಗೆ ಅಭಿವ್ಯಂಜಕವಲ್ಲದಿದ್ದರೂ ನಿಷಾದವು ಕೈಶಿಕಿಯಾದಾಗ ಮೂರನೆಯ ಶ್ರುತಿಯು ಷಡ್ಜಕ್ಕೆ ಅಭಿವ್ಯಂಜಕವಾಗುತ್ತದೆ. ಹೀಗೆ ನಿಷಾದಷಡ್ಜಗಳ ಅಭಿವ್ಯಕ್ತಿಗೆ ಹೇತುಗಳಾದ ಶ್ರುತಿಗಳನ್ನು ಸ್ವರಗತಗಳೆಂದು ವಿಶ್ವಾವಸುವು ಕೊಟ್ಟ ಹೆಸರಿನಿಂದ ಕರೆಯಬಹುದು. ಇವೆರಡರ ನಡುವೆ ಸ್ವರಕ್ಕೆ ಅಭಿವ್ಯಂಜಕವಲ್ಲದಿದ್ದಾಗ ಅವುಗಳನ್ನು ಅಂತರಗತಗಳೆಂಬ ಹೆಸರಿನಿಂದ ಕರೆಯಬಹುದು. ಹೀಗೆ ನವವಿಧಶ್ರುತಿಪಕ್ಷ, ದ್ವಾವಿಂಶತಿಶ್ರುತಿಪಕ್ಷ, ಷಟ್‌ಷಷ್ಟಿಶ್ರುತಿಪಕ್ಷ, ಅನಂತಶ್ರುತಿಪಕ್ಷಗಳಲ್ಲಿ ಎಲ್ಲದರಲ್ಲಿಯೂ ಶ್ರುತಿಯಲ್ಲಿ ಅಭಿವ್ಯಂಜಕತ್ವವನ್ನೂ ಸ್ವರದಲ್ಲಿ ಅಭಿವ್ಯಂಗ್ಯತ್ವವನ್ನೂ ಧಾರಾಳವಾಗಿ ಹೇಳಬಹುದು. ಶ್ರುತಿಯ ತ್ರೈವಿಧ್ಯ ಮತ್ತು ಚಾತುರ್ವಿಧ್ಯಪಕ್ಷಗಳಲ್ಲಿಯೂ ಈ ಅಭಿವ್ಯಕ್ತಿವಾದವನ್ನು ಅನ್ವಯಿಬಹುದು; ಇದಕ್ಕೆ ಶ್ರುತಿವಿಷಯಕವಾದ ಕೆಲವು ಅನುಮಿತಿಗಳನ್ನೂ ಪ್ರಮೇಯಗಳನ್ನೂ ಮೊದಲು ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ. ಗ್ರಂಥವಿಸ್ತರಭೀತಿಯಿಂದ ಅದನ್ನಿಲ್ಲಿ ಸಾಧಿಸುವುದಿಲ್ಲ. ಇದೆಲ್ಲದರಿಂದಲೂ ಶ್ರುತಿವಿಷಯಕವಾದ ಮೊದಲಿನ ಆರು ಮತಗಳಲ್ಲಿ ಸ್ವರಶ್ರುತಿಗಳಿಗೆ ಅಭಿವ್ಯಂಗ್ಯ-ಅಭಿವ್ಯಂಜಕ ಸಂಬಂಧವು ಕಾಣುವುದಿಲ್ಲವೆಂದು ಕಲ್ಲಿನಾಥನು ಅನುಮತಿಯಿಂದ ಹೇಳಿದ ವಾದವು ಯಾವ ರೀತಿಯಿಂದಲೂ ಒಪ್ಪತಕ್ಕದ್ದಲ್ಲವೆಂದು ಹೇಳಬೇಕಾಗುತ್ತದೆ.

ಕಡೆಯದಾಗಿ, ಕಲ್ಲಿನಾಥನು ಈ ಅಭಿವ್ಯಕ್ತಿವಾದವನ್ನು ಮುಂದೆ ಮಾಡಿಕೊಂಡು ಪ್ರಥಮಷಣ್ಮತಗಳನು ನಿರಾಕರಿಸುವಾಗ ಆಡಿದ 'ಅಭಿವ್ಯಂಗ್ಯತ್ವಾಭಿವ್ಯಂಜಕತ್ವಾಭ್ಯಾಂ ಸಾಕ್ಷಾದ್‌ಭಿನ್ನರೂಪಯೋಃ'' [172] ಎಂಬ ಮಾತನ್ನು ವಿಮರ್ಶಿಸಬೇಕು. ಇವನ ಮತದ ಪ್ರಕಾರ ಸ್ವರಶ್ರುತಿಗಳಲ್ಲಿನ ಅಭಿವ್ಯಂಗ್ಯ ಮತ್ತು ಅಭಿವ್ಯಂಜಕ ಎಂಬ ಭೇದವು ಸಾಕ್ಷಾತ್ತಾಗಿ ಎಂದರೆ ಪ್ರತ್ಯಕ್ಷದಿಂದ, ನೇರವಾದ ಇಂದ್ರಿಯ ಸನ್ನಿಕರ್ಷದಿಂದ ಗೋಚರವಾಗಬೇಕು. ಈ ಅಭಿಮತವು ಅನುಪಪನ್ನವಾದುದು ಎಂದು ವಿಜ್ಞಾಪಿಸಿಕೊಳ್ಳದೆ ವಿಧಿಯಿಲ್ಲ. ಕಲ್ಲಿನಾಥನ ಪ್ರಕಾರ ಶ್ರುತಿಯು ಅಭಿವ್ಯಂಜಕವೆಂದೂ ಸ್ವರವು ಅದರಿಂದ ಅಭಿವ್ಯಂಗ್ಯವೆಂದೂ ಕಿವಿಗೇ ಸ್ಪಷ್ಟವಾಗಿ ಗೊತ್ತಾಗಬೇಕು. ಅಭಿವ್ಯಂಗ್ಯ-ಅಭಿವ್ಯಂಜಕಗಳೆರಡೂ ಪ್ರತ್ಯಕ್ಷವಾಗಿ ಇಂದ್ರಿಯ ಬಾಹ್ಯಗಳಾಗಿಯೇ ಇರಬೇಕೆಂಬುದು ಒಪ್ಪತಕ್ಕ ಮಾತೇ ನಿಜ. ಆದರೆ ಅಭಿವ್ಯಂಜಕವೆಂದು ಇವನು ಶ್ರುತಿಯನ್ನು ಕರೆಯುವುದು ಕೇವಲ ರಣನವಾದುದನ್ನು; ಅಭಿವ್ಯಂಗ್ಯವೆಂದು ಸ್ವರವನ್ನು ಕರೆಯುವುದು ಅನುರಣನವನ್ನು. ಕೇವಲ ಸಂಘಾತದಿಂದ ಪ್ರಥಮಕ್ಷಣದಲ್ಲಿ ಹುಟ್ಟಿ ಗೋಚರಿಸುವುದು ಶ್ರುತಿಯೆಂದೂ ದ್ವಿತೀಯಕ್ಷಣದಲ್ಲೇ ಆವರ್ತಕಸ್ವರಗಳೊಡನೆ ಕೂಡಿರಕ್ತಿಯಿಂದ ಶ್ರೋತ್ರೇಂದ್ರಿಯಗ್ರಾಹ್ಯಯೋಗ್ಯವಾಗುವುದು ಸ್ವರವೆಂದೂ ಅವನ ಸಂಜ್ಞೆ. ಎಂದರೆ ಒಂದೇ ಕಂಪನಸಂಖ್ಯೆಯುಳ್ಳ, ಸಂಘಾತಜನಿತವಾದ, ನಾದವನ್ನು (frequency) ಶ್ರುತಿಯೆಂದೂ ಸಹಸ್ಪಂದಗಳಾದ ಅನೇಕ ಆವರ್ತಕ ಕಂಪನಸಂಖ್ಯೆಗಳನ್ನು ಕೂಡಿರುವುದು (pitch) ಸ್ವರವೆಂದೂ ಕಲ್ಲಿನಾಥನು ವಿವಕ್ಷಿಸಿದಂತಾಯಿತು. ಇದು ಅತ್ಯಂತ ಅನುಪಪನ್ನವಾದ ಲಕ್ಷಣನಿರೂಪಣೆ. ಏಕೆಂದರೆ ಶ್ರುತಿಗೆ ಹೀಗೆ ಲಕ್ಷಣವನ್ನು ಹೇಳಿದರೆ ಇದರಿಂದ ಶಾಸ್ತ್ರೀಯವಾದ ಬೇರೆ ಯಾವ ಪ್ರಮೇಯಗಳನ್ನೂ ತಾರ್ಕಿಕವಾಗಿ ಪಡೆಯಲು ಸಾಧ್ಯವೇ ಆಗುವುದಿಲ್ಲ. ಅಷ್ಟೇ ಅಲ್ಲದೆ ಶ್ರುತಿಗೆ ಭರತ, ವಿಶ್ವಾವಸು, ವಿಶಾಖಿಲ, ಮತಂಗ, ವೇಣ, ಅಭಿನವಗುಪ್ತ, ಶಾರ್ಙ್ಗದೇವ ಮುಂತಾದ ಮೀಮಾಂಸಾಮಾಂಸಲಿತಧಿಯರಾದ ಧೀರರು ಹೇಳಿದ ಲಕ್ಷಣವೊಂದೂ ಕೂಡುವುದಿಲ್ಲ. ಈ ಲಕ್ಷಣಗಳನ್ನು ಅವನು ಎಲ್ಲಿಂದ ಪಡೆದುಕೊಂಡನೋ ಅವನಿಗೇ ಗೊತ್ತು. ಆದುದರಿಂದ ಅಭಿವ್ಯಂಜಕ-ಅಭಿವ್ಯಂಗ್ಯ ಸಂಬಂಧಗಳನ್ನು ಅವನು ಶ್ರುತಿಸ್ವರಗಳಿಗೆ ಅನ್ವಯಿಸುವಾಗ ಅದನ್ನು ಅಭ್ಯಾಸಿಗಳು ಜಾಗರೂಕತೆಯಿಂದಲೇ ಪರಿಶೀಲಿಸಬೇಕು.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## III. ಇತರ ಪ್ರಾಚೀನ ಶ್ರುತಿಪಕ್ಷಗಳು

ಇಲ್ಲಿಯವರೆಗೆ ವಿವರಿಸಿದ ಶ್ರುತಿಪಕ್ಷಗಳು, ಶ್ರುತಿಗಳು ಎಷ್ಟು ವಿಧವೆಂಬುದನ್ನೂ ಯಾವ ದೃಷ್ಟಿಯಿಂದ ಶ್ರುತಿಯ ತತ್ವ, ಪ್ರಮೇಯಗಳನ್ನು ಸಾಧಿಸಬಹುದೆಂಬುದನ್ನೂ ತಿಳಿಸುತ್ತವೆ. ಇವುಗಳಲ್ಲಿ ಕಡೆಯ ಮೂರೇ ಸ್ಥಾಯಿಯನ್ನೂ ಅದರ ವ್ಯಾಪ್ತಿಯಲ್ಲಿ ನಿರ್ದಿಷ್ಟವಾದ ಶ್ರುತಿಸಂಖ್ಯೆಯನ್ನೂ ಹೇಳುತ್ತವೆ. ಇವುಗಳಲ್ಲೆಲ್ಲಾ ದ್ವಾವಿಂಶತಿಶ್ರುತಿ ಪಕ್ಷವೇ ಮುಖ್ಯವಾಗಿ ವಿವಕ್ಷಿತವಾಗಿದೆ. ಈಗ ಶ್ರುತಿವಿಷಯಕವಾದ ಮೂರು ಬೇರೆ ಪ್ರಾಚೀನ ಮತಗಳನ್ನು ಸಂಗ್ರಹಿಸಲಾಗುವುದು. ಇವುಗಳಲ್ಲಿ ಎರಡು ಸ್ಥಾಯಿಯಲ್ಲಿ ಶ್ರುತಿಸಂಖ್ಯೆಯ ಇಯತ್ತೆಯನ್ನು ಹೇಳಿದರೆ ಇನ್ನೊಂದು ಶ್ರುತಿವಿಷಯಕವಾದ ಮೂಲಭೂತ ಕಲ್ಪನೆಯೊಂದನ್ನು ಒಳಗೊಂಡಿದೆ.

### 1. ಶ್ರುತಿಗಳು ಇಪ್ಪತ್ತನಾಲ್ಕು

ಇವುಗಳಲ್ಲಿ ಚತುರ್ವಿಂಶತಿ ಶ್ರುತಿಪಕ್ಷವು ಮೊದಲನೆಯದು. ಇದು ಮೊದಲಬಾರಿಗೆ ಕಂಡುಬರುವುದು ನಾರದನ ಸಂಗೀತಮಕರಂದದಲ್ಲಿ. ಅಲ್ಲಿ ಸ್ವರಗಳಿಗೆ ಶ್ರುತಿವಿನಿಯೋಗವನ್ನು ಹೀಗೆ ಹೇಳಿದೆ: ಷಡ್ಜ (5), ರಿಷಭ (3), ಗಾಂಧಾರ (2), ಮಧ್ಯಮ (4), ಪಂಚಮ (5), ಧೈವತ (3) ಮತ್ತು ನಿಷಾದ (2)[206]. ಇದೇ ಸಂದರ್ಭದಲ್ಲಿ ಈ ಗ್ರಂಥದಲ್ಲಿ—

ಚತುಶ್ಚತುಶ್ಚತುಶ್ಚೈವ ಷಡ್ಜಮಧ್ಯಮಪಂಚಮಾಃ ।<br>
ದ್ವೇ ದ್ವೇ ನಿಷಾದಗಾಂಧಾರೌ ತ್ರಿಸ್ತ್ರಿ ಋಷಭಧೈವತೌ । [207]

ಎಂಬ ಅನ್ಯತ್ರ ಬಹುವಾಗಿ ಉದಾಹರಿಸಿದ ಭಾರತೀಯ ಶ್ರುತಿವಿನಿಯೋಗವೂ ಇದೆ. ಆದರೆ ಈ ಶ್ಲೋಕವನ್ನು ಪ್ರಕ್ಷಿಪ್ತವೆಂದು ತಿಳಿಯಬೇಕು. ಸಂಗೀತಮಕರಂದದ ಉಪಲಬ್ಧಗ್ರಂಥವು ಬಹಳವಾದ ಗ್ರಂಥಪಾತ, ಭ್ರಷ್ಟಪಾಠ, ಪ್ರಕ್ಷಿಪ್ತಗಳಿಂದ ತುಂಬಿಹೋಗಿದೆ. ಅದರಲ್ಲಿ ಪ್ರಾಚೀನವಾದ ಒಂದು ಗ್ರಂಥವೂ ಅರ್ವಾಚೀನವಾದ ಮತ್ತೊಂದೂ ಸೇರಿಹೋಗಿದೆ. ಇವೆರಡನ್ನೂ ಬೇರ್ಪಡಿಸಿ ಗ್ರಂಥ ಸಂಪಾದನಾಕಾರ್ಯವನ್ನು ಕೈಗೊಳ್ಳುವ ಸಂಶೋಧನೆ ಅವಶ್ಯಕವಾಗಿ ಆಗಬೇಕಾಗಿದೆ. ಅದರ ಪ್ರಾಚೀನಭಾಗದಲ್ಲಿ ವಿಶ್ವಕರ್ಮ, ಹರಿಶ್ಚಂದ್ರ, ಕಮಲಾಸ್ಯಕ, ಚಂಡೀ, ವ್ಯಾಲ, ಶೌರಿ, ಅಂಗದ, ಷಣ್ಮುಖ, ಭೃಂಗಿ, ದೇವೇಂದ್ರ, ಕುಬೇರ, ಮುನಿಕುಶಿಕ, ಸಮುದ್ರ, ಸರಸ್ವತೀ, ಬಲಿ, ಯಕ್ಷ, ಕಿನ್ನರೇಶ, ವಿಕ್ರಮ ಎಂಬ ಶಾಸ್ತ್ರಕಾರರ ಹೆಸರನ್ನು ಉಲ್ಲೇಖಿಸಿದೆ.[208] ಇವರ ಹೆಸರುಗಳು ಬೇರೆಲ್ಲಿಯೂ ಸ್ಮೃತವಾಗಿರುವುದು ಕಂಡುಬರುವುದಿಲ್ಲ. ಈ ಪ್ರಾಚೀನಭಾಗವು ಬ್ರಹ್ಮಮತವೆಂದು ಹೇಳಿ ಪುನಃ ಪುನಃ ಪ್ರಮೇಯಗಳನ್ನು ಉದ್ಧರಿಸುತ್ತದೆ. ಮೇಲೆ ಹೇಳಿದ ಇಪ್ಪತ್ತನಾಲ್ಕು ಶ್ರುತಿಗಳನ್ನು ಮಕರಂದಕಾರನು ಯಾರಿಂದ ಉದ್ಧರಿಸಿಕೊಂಡಿದ್ದಾನೆಯೋ ತಿಳಿಯದು. ಬ್ರಹ್ಮನಿಂದಂತೂ ಇರಲಾರದು ; ಏಕೆಂದರೆ 'ಬ್ರಹ್ಮಣಾ ಯದುದಾಹೃತಮ್' ಎಂದು ಇಡೀ ನಾಟ್ಯಶಾಸ್ತ್ರವನ್ನು ರಚಿಸಿದ ಭರತನು ಇಪ್ಪತ್ತೆರಡು ಶ್ರುತಿಗಳನ್ನೇ ಹೇಳುತ್ತಾನೆ.

---

206 ನಾರದ, ಸಂಗೀತಮಕರಂದ, ಸಂಗೀತಾಧ್ಯಾಯ, I, 78-84.

207 ಅದೇ ಗ್ರಂಥ, ಅದೇ ಸ್ಥಾನ, I, 85.

208 ಅದೇ ಗ್ರಂಥ, ಅದೇ ಸ್ಥಾನ, II, 18-20.

ಬ್ರಹ್ಮನೆಂಬ ಚಾರಿತ್ರಕವ್ಯಕ್ತಿಯು ಸಂಗೀತಶಾಸ್ತ್ರಗ್ರಂಥವೊಂದನ್ನು ಬರೆದಿದ್ದಾನೆಯೇ ಎಂಬುದೇ ಸಂದೇಹಾಸ್ಪದವಾಗಿದೆ. ಭರತನು ಬ್ರಹ್ಮನನ್ನು ಸ್ಮರಿಸುವ ಯಾವ ಸಂದರ್ಭದಲ್ಲಿಯೂ ಚಾರಿತ್ರಕತೆಯ ವಿವಕ್ಷೆಯಿಲ್ಲ. ಬ್ರಹ್ಮನಿಂದ ಭರತನು ಉದ್ಧರಿಸಿದ್ದೆಂದು ಮತಂಗನು (ಉ. ಗ್ರಂ., ಪು. 87) ಕೊಡುವ ಶ್ಲೋಕವು ನಾಟ್ಯಶಾಸ್ತ್ರದಲ್ಲಿಯೇ ಎಲ್ಲಿಯೂ ಕಂಡುಬರುವುದಿಲ್ಲ. ಬ್ರಹ್ಮಮತವೆಂದು ಮಕರಂದಕಾರನು ಕೊಡುವ ಉದ್ಧೃತಿಗಳಿಗೆ ಮತ್ತೆಲ್ಲಿಯೂ ಸಮರ್ಥನೆಯಿಲ್ಲ. ಅಲ್ಲದೆ ಚತುರ್ವಿಂಶತಿಶ್ರುತಿ ಪಕ್ಷವು ಬ್ರಹ್ಮನದೆಂದು ಅವನು ಹೇಳುವುದೂ ಇಲ್ಲ. ಈ ಮತವು ಬ್ರಹ್ಮನಿಂದ ಪ್ರವರ್ತಿತವಾಗಿದ್ದರೆ, ಈ ಬ್ರಹ್ಮನು ಪ್ರಾಚೀನ ಲಾಕ್ಷಣಿಕನಾಗಿದ್ದಿದ್ದರೆ ಭರತ, ಮತಂಗ ಅಭಿನವಗುಪ್ತಾದಿಗಳು ಮತಾಂತರದಲ್ಲಿಯಾದರೂ ಅದನ್ನು ಸೂಚಿಸದೆ ಬಿಡುತ್ತಿರಲಿಲ್ಲ. ಆದುದರಿಂದ ಈ ಪಕ್ಷವನ್ನು ಪ್ರಾಚೀನವೆಂದು ತಿಳಿಯಲಾಗದು. ಇದು ಹೇಗೇ ಇರಲಿ, ಇಪ್ಪತ್ತನಾಲ್ಕು ಶ್ರುತಿಗಳ ಮೇಲಿನ ವಿನಿಯೋಗವನ್ನು ನಾರದನು ಹೇಳಿರುವುದು ಕೇವಲ ಲಕ್ಷ್ಯದಲ್ಲಿ ಪ್ರಸಿದ್ಧವಾದ ಸ್ವರಪ್ರಮಾಣಗಳನ್ನು ಶಾಸ್ತ್ರದಲ್ಲಿ ಹೇಳುವುದಕ್ಕಾಗಿ. ಹೀಗೆ, ನಿಷಾದ-ಷಡ್ಜ, ಮಧ್ಯಮ-ಪಂಚಮ ಈ ಅಂತರಗಳು ಪರಸ್ಪರ ಸಮವಾಗಿಯೂ ಗಾಂಧಾರ-ಮಧ್ಯಮದ ಅಂತರಕ್ಕಿಂತ ಹೆಚ್ಚಾಗಿರುವುದೂ ವಿದ್ವಾಂಸರಿಗೆಲ್ಲ ತಿಳಿದ ವಿಷಯವೇ ಆಗಿದೆ. ಭರತಾದಿಗಳು ಈ ಮೂರು ಅಂತರಗಳನ್ನೂ, ಎಂದರೆ ಷಡ್ಜ ಮಧ್ಯಮ ಪಂಚಮಗಳ ಪ್ರಮಾಣಗಳನ್ನೂ, ಪರಸ್ಪರ ಸಮವಾಗಿವೆ, ಏಕೆಂದರೆ ಅವುಗಳನ್ನು ಚತುಃಶ್ರುತಿಕಗಳು ಎಂದು ಹೇಳುತ್ತಾರೆಂದು ತಿಳಿದು ಮಕರಂದಕಾರನೂ ಅವನ ಉದ್ಧೃತಿಗೆ ಆಕರನಾದ ಗ್ರಂಥಕಾರನೂ ತಿಳಿದಿದ್ದಾರೆ, ಹಾಗೂ ಅವನನ್ನು ತಿದ್ದುವ ಸಾಹಸಕ್ಕೆ ಕೈಹಾಕಿದ್ದಾರೆ.

ಮೇಲುನೋಟಕ್ಕೆ ಇದು ತರ್ಕಬದ್ಧವಾಗಿಯೂ ಅಂಗೀಕಾರಾರ್ಹವಾಗಿಯೂ ಕಂಡರೂ ಇದನ್ನು ಸರ್ವಥಾ ಒಪ್ಪಲಾಗದು. ಏಕೆಂದರೆ ಶ್ರುತಿಜಾತಿಗಳ ತತ್ತ್ವವು ಹೇಳುವ ಒಂದೇ ಸಂಖ್ಯೆಯ ಶ್ರುತಿಗಳು ಎರಡು ಸ್ವರಗಳಲ್ಲಿದ್ದರೂ, ಅವು ಬೇರೆ ಬೇರೆಯ ಜಾತಿಯವಾಗಿದ್ದರೆ ಈ ಸ್ವರಗಳ ಪ್ರಮಾಣಗಳು ಬೇರೆಯಾಗಿರುತ್ತವೆ ಎಂಬ ಮೂಲಭೂತ ಶಾಸ್ತ್ರಪ್ರಮೇಯವನ್ನೇ ಇದು ನಿರಾಕರಿಸುತ್ತದೆ. ಅಷ್ಟೇ ಅಲ್ಲದೆ ವಾದಿ ಸಂವಾದಿ ವಿವಾದಿ ಎಂಬ ಸ್ವರಸಂಬಂಧಗಳಿಗೆ ಎಲ್ಲರೂ ಒಪ್ಪಿಕೊಂಡಿರುವ ಶ್ರುತಿ ಅಂತರಗಳನ್ನೂ ಇದು ನಿರಾಕರಿಸುತ್ತದೆ; ಸರಳವಾಗಿಯೂ ಏಕರೂಪವಾಗಿಯೂ ಇರುವ ಬೇರೆ ಶಾಸ್ತ್ರೀಯ ಆಧಾರವನ್ನು ಈ ಸ್ವರಚಾತುರ್ವಿಧ್ಯಕ್ಕೆ ಅದು ಒದಗಿಸಿಕೊಡುವುದಿಲ್ಲ. ವಿಶ್ವಾವಸು, ವಿಶಾಖಿಲ, ಭಟ್ಟತೌತ ಮುಂತಾದ ಪ್ರಾಚೀನಾಚಾರ್ಯರು ಹೇಳಿದ ಸ್ವರಸಂವೇದ್ಯತಾ ತತ್ತ್ವವೂ ಇಲ್ಲಿ ಲೋಪವಾಗಿಬಿಡುತ್ತದೆ. ಶ್ರುತಿಗಳು ಭೌತಿಕ ಪ್ರಮಾಣದಲ್ಲಿ ಪರಸ್ಪರ ಸಮವೆಂದು ಬಗೆದು ಕೇವಲ ಸ್ಥೂಲಾರ್ಥದಲ್ಲಿ ಭೌತಿಕ ವಾಸ್ತವಿಕತೆಗೆ ಶಾಸ್ತ್ರದಲ್ಲಿ ಪರಸ್ಪರತೆಯನ್ನು ಒದಗಿಸಲು ಯತ್ನಿಸುವ ಪಕ್ಷವಿದು. ಶಾಸ್ತ್ರಕ್ಕಾಗಲೀ ಲಕ್ಷ್ಯಕ್ಕಾಗಲೀ ಇದರಿಂದ ವಿಶೇಷವಾದ ಪ್ರಯೋಜನವೇನೂ ಇಲ್ಲ.

ಇದರಿಂದ ಪ್ರಯೋಜನವಿಲ್ಲ, ಅಷ್ಟೆ. ಅದರ ಬದಲು ಸಂಗೀತಶಾಸ್ತ್ರದ ಮೇಲೆ ಧಾಳಿಯನ್ನೇ ಮಾಡುವ ಎರಡು ಚತುರ್ವಿಂಶತಿಶ್ರುತಿ ಪಕ್ಷಗಳು ಕ್ರಿ.ಶ. ಸುಮಾರು 1800ರ ವೇಳೆಗೆ ರಚಿತವಾದ ಎರಡು ಸಂಗೀತಶಾಸ್ತ್ರಗ್ರಂಥಗಳಲ್ಲಿವೆ. ಇವುಗಳನ್ನು ಸಂಗೀತಶಾಸ್ತ್ರಗ್ರಂಥಗಳೆನ್ನುವುದೇ ಅಪಚಾರ; ಸುಪ್ರಸಿದ್ಧ ರಾಗಗಳ ಲಕ್ಷಣಗಳನ್ನು ತಪ್ಪಾಗಿಯೋ ನೆಪ್ಪಾಗಿಯೋ ಕೊಡುವುದಷ್ಟೇ ಇವು ಮಾಡುವ ಕೆಲಸ. ಒಂದರ ಹೆಸರು ಮೇಳಾಧಿಕಾರ ಲಕ್ಷಣ. ಇದರ ಕರ್ತೃವು ತನ್ನ ಅಪರಾಧಕ್ಕೆ ನಾಚಿಯೋ ಏನೋ, ಅಜ್ಞಾತನಾಗಿಯೇ ಉಳಿದಿದ್ದಾನೆ. ಇದಿನ್ನೂ ಪ್ರಕಟವಾಗಿಲ್ಲ. ಇರುವ ದ್ವಾವಿಂಶತಿ ಶ್ರುತಿಗಳಿಗೇ ಹದಿಮೂರನೆಯ ಸ್ಥಾನದಲ್ಲಿ ಒಂದು*, ಇಪ್ಪತ್ತಮೂರನೆಯದರಲ್ಲಿ ಒಂದು*, ಹೀಗೆ ಎರಡನ್ನು ಸೇರಿಸಿ ಇಪ್ಪತ್ತನಾಲ್ಕು ಶ್ರುತಿಗಳನ್ನು ಮೇಳಾಧಿಕಾರಲಕ್ಷಣಕಾರನು ಕೊಡುತ್ತಾನೆ: ಇದರಲ್ಲಿ ಈ ಮಹಾನುಭಾವನು ಕೊಡುವ ಸ್ವರಗಳ ವೈಖರಿಯನ್ನಾದರೂ ನೋಡಿ :

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಶ್ರುತಿಸಂಖ್ಯೆ | ಶ್ರುತಿನಾಮ | ಸ್ವರನಾಮ |
|---|---|---|
| 1 | ತೀವ್ರಾ | ಪ್ರತಿಶುದ್ಧರಿಷಭ |
| 2 | ಕುಮುದ್ವತೀ | ಶುದ್ಧರಿಷಭ |
| 3 | ಮಂದಾ | ಪ್ರತಿಚತುಃಶ್ರುತಿರಿಷಭ ಅಥವಾ ಪ್ರತಿಶುದ್ಧಗಾಂಧಾರ |
| 4 | ಛಂದೋವತೀ | ಚತುಃಶ್ರುತಿರಿಷಭ ಅಥವಾ ಶುದ್ಧಗಾಂಧಾರ |
| 5 | ದಯಾವತೀ | ಪ್ರತಿಷಟ್‌ಶ್ರುತಿರಿಷಭ ಅಥವಾ ಪ್ರತಿಸಾಧಾರಣಗಾಂಧಾರ |
| 6 | ರಂಜನೀ | ಷಟ್‌ಶ್ರುತಿರಿಷಭ ಅಥವಾ ಸಾಧಾರಣಗಾಂಧಾರ |
| 7 | ರತಿಕಾ | ಪ್ರತ್ಯಂತರಗಾಂಧಾರ ಅಥವಾ ಪ್ರತ್ಯಂತರರಿಷಭ |
| 8 | ರೌದ್ರೀ | ಅಂತರಗಾಂಧಾರ |
| 9 | ಕ್ರೋಧಾ | ಚ್ಯುತಮಧ್ಯಮಗಾಂಧಾರ |
| 10 | ವಜ್ರಿಕಾ | ಶುದ್ಧಮಧ್ಯಮ |
| 11 | ಪ್ರಸಾರಿಣೀ | ಪ್ರತ್ಯಂತರ ಮಧ್ಯಮ |
| 12 | ಪ್ರೀತಿ | ಪ್ರತಿಮಧ್ಯಮ |
| 13* | ಕಾಂತಾ* | ಚ್ಯುತಪಂಚಮಮಧ್ಯಮ |
| 14 | ಮಾರ್ಜನೀ | ಶುದ್ಧಪಂಚಮ |
| 15 | ಕ್ಷಿತಿ | ಪ್ರತಿಶುದ್ಧಧೈವತ |
| 16 | ರಕ್ತಾ | ಶುದ್ಧಧೈವತ |
| 17 | ಸಂದೀಪಿನೀ | ಪ್ರತಿಚತುಃಶ್ರುತಿಧೈವತ ಅಥವಾ ಪ್ರತಿಶುದ್ಧನಿಷಾದ |
| 18 | ಆಲಾಪಿನೀ | ಚತುಃಶ್ರುತಿಧೈವತ ಅಥವಾ ಶುದ್ಧನಿಷಾದ |
| 19 | ಮದಂತೀ | ಪ್ರತಿಷಟ್‌ಶ್ರುತಿಧೈವತ ಅಥವಾ ಪ್ರತಿಕೈಶಿಕನಿಷಾದ |
| 20 | ರೋಹಿಣೀ | ಷಟ್‌ಶ್ರುತಿಧೈವತ ಅಥವಾ ಕೈಶಿಕನಿಷಾದ |
| 21 | ರಮ್ಯಾ | ಪ್ರತಿಕಾಕಲೀನಿಷಾದ ಅಥವಾ ಪ್ರತಿಕಾಕಲೀಧೈವತ |
| 22 | ಉಗ್ರಾ | ಕಾಕಲೀನಿಷಾದ |
| 23* | ಉದ್ದೀಪನೀ* | ಚ್ಯುತಷಡ್ಜನಿಷಾದ |
| 24 | ಕ್ಷೋಭಿಣೀ | ಶುದ್ಧಷಡ್ಜ |

**ಪಠಕ** (10)

**ಚತುರ್ವಿಂಶತಿಶ್ರುತಿಪಕ್ಷದಲ್ಲಿ ಸ್ವರವ್ಯವಸ್ಥೆ (ಮೇಳಾಧಿಕಾರಲಕ್ಷಣ)**

ಹೀಗೆ, ಇವನ ಪ್ರಕಾರ ಷಡ್ಜವು ಸ್ಥಾಯಿಯ ಮೊದಲಿನಲ್ಲಲ್ಲ, ಕಡೆಯಲ್ಲಿ, ಅಥವಾ ಶೂನ್ಯ (ಸೊನ್ನೆ) ಶ್ರುತಿಯಲ್ಲಿ! ಚತುಃಶ್ರುತಿ ರಿಷಭ, ಚತುಃಶ್ರುತಿ ಧೈವತ, ಎಂಬ ತಪ್ಪು ಹೆಸರುಗಳು ರೂಢಿಗೆ ಬಂದು ನಿಲ್ಲಲು, ಪಂಚಶ್ರುತಿ ರಿಷಭ, ಪಂಚಶ್ರುತಿ ಧೈವತ, ಎಂಬ ಶಾಸ್ತ್ರೀಯವಾದ ಹೆಸರುಗಳು ಕಣ್ಮರೆಯಾಗಲು ಈ ಅನಭಿಜ್ಞನೇ ಕಾರಣ. ಮುದ್ದುಸ್ವಾಮಿ ದೀಕ್ಷಿತನು ಸರಿಯಾದ ಪಂಚಶ್ರುತಿ ರಿಷಭ ಧೈವತಗಳೆಂಬ ಶಾಸ್ತ್ರೀಯ ನಾಮಗಳನ್ನು ವೆಂಕಟಮಖಿಯಿಂದಲೂ ಅವನ ಪ್ರಪೌತ್ರನಾದ ಮುದ್ದುವೆಂಕಟಮಖಿಯಿಂದಲೂ[209] ಪಡೆದುಕೊಂಡನು. ಸುಬ್ಬರಾಮ ದೀಕ್ಷಿತನು ಇದೇ ಪರಂಪರೆಯಲ್ಲಿ ಬೆಳೆದು ಇವುಗಳನ್ನು ತನ್ನ ಸಂಗೀತಸಂಪ್ರದಾಯಪ್ರದರ್ಶಿನೀಯಲ್ಲಿ

209 ಸುಬ್ಬರಾಮದೀಕ್ಷಿತ, ಸಂಗೀತಸಂಪ್ರದಾಯಪ್ರದರ್ಶಿನೀ, ಪ್ರಥಮಾಭ್ಯಾಸಪುಸ್ತಕ, ಪು. 129.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಪ್ರಚಾರಮಾಡಿದನು. ತ್ಯಾಗರಾಜನೇ ಚತುಃಶ್ರುತಿರಿಷಭ, ಚತುಃಶ್ರುತಿಧೈವತಗಳೆಂಬ ತಪ್ಪು ಹೆಸರುಗಳನ್ನು ರೂಢಿಗೆ ತಂದು ನಿಲ್ಲಿಸಿದನೋ ಇಲ್ಲವೋ ತಿಳಿಯದು ; ಇದು ಸಂದೇಹಾಸ್ಪದ : ಏಕೆಂದರೆ ಮುದ್ದುವೆಂಕಟಮಖಿಯ ಶಿಷ್ಯನಾಗಿದ್ದ ಸೊಂಟಿ ವೆಂಕಟಸುಬ್ಬಯ್ಯನಲ್ಲಿಯೂ ಅವನ ಮಗನಾದ ಸೊಂಟಿ ವೆಂಕಟರಮಣಯ್ಯನಲ್ಲಿಯೂ ಸಂಗೀತಾಭ್ಯಾಸಮಾಡಿದ ತ್ಯಾಗರಾಜನು [209] ಈ ಪರಂಪರೆಯನ್ನು ಮೀರಿ ಸಂಪೂರ್ಣವಾಗಿ ಅಶಾಸ್ತ್ರೀಯವಾದುದನ್ನು ಪ್ರಚಾರಮಾಡಿರಬಹುದೇ ಎಂಬುದು ಪ್ರಶ್ನಾರ್ಹವಾಗಿದೆ. ಅವನ ಶಿಷ್ಯಪರಂಪರೆಯವರು ಈ ಕೆಲಸವನ್ನು ಮಾಡಿದ್ದ ರೆಂಬುದು ನಿರ್ವಿವಾದ. ಏಕೆಂದರೆ ಇವರುಗಳ ಬಳಿ ಮೇಳಾಧಿಕಾರಲಕ್ಷಣದ ಹಸ್ತಪ್ರತಿಗಳಿದ್ದವು ; ಇವರುಗಳು ಪಡೆದುಕೊಂಡ ತ್ಯಾಗರಾಜಕೃತಿಗಳ ಹಸ್ತಪ್ರತಿಗಳಲ್ಲಿರುವ ರಾಗಗಳಿಗೆ ಹೇಳಿದ ಸ್ವರವ್ಯವಸ್ಥೆಯಲ್ಲಿ ಚತುಃಶ್ರುತಿರಿಷಭ, ಚತುಃಶ್ರುತಿಧೈವತಗಳ ಹೆಸರುಗಳು ಕಂಡುಬರುತ್ತವೆ. ಇವರು ಬಹುಸಂಖ್ಯೆಯಲ್ಲಿದ್ದು ಅನೇಕ ಕೃತಿಗಳ ಪ್ರಚಾರ ಮಾಡಿದುದರಿಂದ ಈ ಹೆಸರುಗಳೇ ಲಕ್ಷ್ಯದಲ್ಲಿ ನಿಂತುಹೋದವು. ಇದು ತುಂಬಾ ಶೋಚನೀಯವಾದ ವಿಷಯ ; ನಮ್ಮ ಸಂಗೀತಶಾಸ್ತ್ರದ ಆಧಾರಭೂತ ಪ್ರಮೇಯಗಳಿಗೇ ಇದು ಕೊಡಲಿಯ ಪೆಟ್ಟನ್ನು ಹಾಕುತ್ತದೆ.

ಇಂತಹುದೇ ಇನ್ನೊಂದು ಗ್ರಂಥ ಗೋವಿಂದನ ಸಂಗ್ರಹಚೂಡಾಮಣಿ. ಅವನು ಇಪ್ಪತ್ತನಾಲ್ಕುಶ್ರುತಿ ಗಳನ್ನು ಹೇಳುವುದಿಲ್ಲ, ನಿಜ ; ಆದರೆ ಇಪ್ಪತ್ತೆರಡು ಶ್ರುತಿಗಳಲ್ಲಿ ಇಪ್ಪತ್ತಮೂರು ವಿಕೃತಿಸ್ವರಗಳನ್ನೂ, ಏಳು ಪ್ರಕೃತಿಸ್ವರಗಳನ್ನೂ, ಹೀಗೆ ಒಟ್ಟು ಮೂವತ್ತು ಸ್ವರಗಳನ್ನು ಒಂದೇ ಸ್ಥಾಯಿಯಲ್ಲಿ ಹೇಳುವ ಧೀರನಿವನು. ಇವನು ಗ್ರಂಥರಚನೆ ಮಾಡಿದ್ದು ಕ್ರಿ.ಶ. 1800 ರ ಸುಮಾರಿನಲ್ಲಿಯಾದರೂ ಅದು ಅವನಿಗೆ ಸಾಲದು. ತಾನೇ ಹೇಳಿದ್ದೆಂದರೆ ಕುಹಕಿಗಳಾದ ಹುಲು ಮನುಜರು ನಂಬುತ್ತಾರೋ ಇಲ್ಲವೋ ಎಂದು ಅವನಿಗೆ ಸಂಶಯ. ಎಂದೇ ತನ್ನ ಗ್ರಂಥವನ್ನು ಸ್ಕಾಂದಪುರಾಣದಲ್ಲಿ ಒಂದು ಅಂಶವೆನ್ನುತ್ತಾನೆ. ಅಷ್ಟೇ ಅಲ್ಲ, ಇಲ್ಲಿರುವುದನ್ನೆಲ್ಲಾ ಸಾಕ್ಷಾತ್ತಾಗಿ ಕೈಲಾಸಪತಿಯಾದ ಶಿವನೇ ಪಾರ್ವತಿಗೆ ಹೇಳಿದ್ದು ! ಇನ್ನು ಇದರಲ್ಲಿ ಸುಳ್ಳು, ತಪ್ಪು, ಇರಲು ಸಾಧ್ಯವೇ ? 'ಶ್ರುತಿಜನ್ಯಸ್ವರಲಕ್ಷಣ' ವೆಂದು ಶಿವೆಗೆ ಶಿವನು ಬೋಧಿಸಿದ ರೀತಿ ಹೇಗಿದೆ ನೋಡಿ : ಇಪ್ಪತ್ತಮೂರು ವಿಕೃತಿ, ಏಳು ಪ್ರಕೃತಿ—ಹೀಗೆ ಮೂವತ್ತು ಸ್ವರಗಳನ್ನು (ಗಂಧರ್ವರು ಮಾತ್ರ) ಗಾಂಧರ್ವಗಾನದಲ್ಲಿ ಹಾಡಲು ಸಾಧ್ಯ. ನರಮಾತ್ರರು ಕೇವಲ ಹನ್ನೆರಡನ್ನು ಮಾತ್ರ ಸ್ಥಾಯಿಯಲ್ಲಿ ಹಾಡಬಲ್ಲರು. ಮೇಲಿನ ಹತ್ತನೆಯ ಪಥಕದಲ್ಲಿ ಹದಿಮೂರನೆಯ ಕಾಂತಾ ಮತ್ತು ಇಪ್ಪತ್ತಮೂರನೆಯ ಉದ್ದೀಪನೀಗಳನ್ನು ಕಳೆದುಬಿಟ್ಟರೆ ತೀವ್ರಾದಿಂದ ಮೊದಲುಮಾಡಿ ಕ್ಷೋಭಿಣಿಯ ವರೆಗೆ ಇಪ್ಪತ್ತೆರಡು ಶ್ರುತಿಗಳು ಉಳಿಯುತ್ತವೆಯಷ್ಟೆ. ಅದರಲ್ಲಿ ಮಾರ್ಜನೀ ಎಂಬ ಹದಿಮೂರನೆಯದು, ಕ್ಷೋಭಿಣೀ ಎಂಬ ಇಪ್ಪತ್ತೆರಡನೆಯದು, ಇವುಗಳಲ್ಲಿ ಕ್ರಮವಾಗಿ ಪಂಚಮ, ಷಡ್ಜಗಳು ಪ್ರಕೃತಿಮಾತ್ರಗಳಾಗಿ ಇರುತ್ತವೆ. ಉಳಿದ ಇಪ್ಪತ್ತರಲ್ಲಿ ಎರಡೆರಡು ಶ್ರುತಿಗಳಿಗೆ ಒಂದೊಂದರಂತೆ 'ಮನೆ'. ಈ ಹತ್ತು ಗೃಹಗಳಲ್ಲಿ ಹತ್ತು ವಿಕೃತಿಸ್ವರಗಳು : ತೀವ್ರಾಕುಮುದ್ವತೀ ಗೃಹದಲ್ಲಿ ಶುದ್ಧ ರಿಷಭ, ಮಂದಾ ಛಂದೋವತಿಗಳ ಗೃಹದಲ್ಲಿ ಚತುಃಶ್ರುತಿ ರಿಷಭ, ಅಥವಾ ಶುದ್ಧ ಗಾಂಧಾರ, ಮೂರನೆಯ ಗೃಹವಾದ ದಯಾವತೀ ರಂಜನಿಗಳಲ್ಲಿ ಷಟ್‌ಶ್ರುತಿ ರಿಷಭ ಅಥವಾ ಸಾಧಾರಣಗಾಂಧಾರ, ನಾಲ್ಕನೆಯ ಗೃಹವಾದ ರತಿಕಾರೌದ್ರೀಗಳಲ್ಲಿ ಅಂತರಗಾಂಧಾರ, ಐದನೆಯ ಗೃಹ ಅಥವಾ ಸೋಪಾನವಾದ ಕ್ರೋಧಾ ವಜ್ರಿಕಾಗಳಲ್ಲಿ ಶುದ್ಧಮಧ್ಯಮ, ಆರನೆಯ ಸೋಪಾನವಾದ ಪ್ರಸಾರಿಣೀ ಪ್ರೀತಿಗಳಲ್ಲಿ ಪ್ರತಿಮಧ್ಯಮ, ಏಳನೆಯ ಸೋಪಾನವಾದ ಮಾರ್ಜನಿಯಲ್ಲಿ ಪಂಚಮ, ಎಂಟನೆಯದಾದ ಕ್ಷಿತಿ ರಕ್ತಾಗಳಲ್ಲಿ ಶುದ್ಧ ಧೈವತ, ಒಂಬತ್ತನೆಯದಾದ ಸಂದೀಪಿನೀ ಆಲಾಪಿನೀಗಳಲ್ಲಿ ಚತುಃಶ್ರುತಿಧೈವತ ಅಥವಾ ಶುದ್ಧನಿಷಾದ, ಹತ್ತನೆಯ ಮೆಟ್ಟಿಲಾದ ಮದಂತೀ ರೋಹಿಣೀಗಳಲ್ಲಿ ಷಟ್‌ಶ್ರುತಿ ಧೈವತ ಅಥವಾ ಕೈಶಿಕಿ ನಿಷಾದ, ಹನ್ನೊಂದ ನೆಯ ಸೋಪಾನ ಅಥವಾ ಗೃಹವಾದ ರಮ್ಯಾ ಉಗ್ರಾ ಶ್ರುತಿಗಳಲ್ಲಿ ಕಾಕಲೀ ನಿಷಾದ, ಹನ್ನೆರಡನೆಯ ಕ್ಷೋಭಿಣಿ ಯಲ್ಲಿ ಷಡ್ಜ. ಎಷ್ಟು ಸುಲಭವಾದ, ಸರಳವಾದ ಗಣಿತ ! ಷಡ್ಜ, ಪಂಚಮಗಳಿಗೆ ಒಂದೊಂದು ಶ್ರುತಿ, ಉಳಿದೆಲ್ಲ

ಐದು ಸ್ವರಗಳಿಗೂ ತಲಾ ನಾಲ್ಕರಂತೆ ಇಪ್ಪತ್ತು ಶ್ರುತಿಗಳು ; ಒಟ್ಟು ಇಪ್ಪತ್ತೆರಡು ! ರಿಗಮಧನಿ ಎಂಬ ಐದರಲ್ಲಾದರೂ ತಲಾ ಎರಡೆರಡು ವಿಕೃತಿಗಳು, ಒಂದೊಂದಕ್ಕೂ ಎರಡೆರಡು ಶ್ರುತಿಗಳು. ಗೋವಿಂದನದು – ಅಲ್ಲ, ಪರಶಿವನದು !—ಎಂತಹ ನಿಷ್ಪಕ್ಷಪಾತವಾದ ಶ್ರುತಿವಿನಿಯೋಗ ! ಕೇವಲ ಮನುಷ್ಯರಾದ ಭರತ, ದತ್ತಿಲ, ಮತಂಗ, ಕೋಹಲ, ಶಾರ್ಙ್ಗದೇವ ಮೊದಲಾದವರು ಬೇರೆ ಶ್ರುತಿವಿನಿಯೋಗವನ್ನು ಹೇಳಿದ್ದರೇನಂತೆ ! ಷಡ್ಜ ಮಧ್ಯಮ ಪಂಚಮಗಳಿಗೆ ತಲಾ ನಾಲ್ಕು, ರಿಷಭ ಧೈವತಗಳಿಗೆ ತಲಾ ಮೂರು, ಗಾಂಧಾರ ನಿಷಾದಗಳಿಗೆ ತಲಾ ಎರಡು, ಹೀಗೆ ಅವರು ಶ್ರುತಿಗಳನ್ನು ಹೇಳಿದ್ದರೂ ಸಾಕ್ಷಾತ್ ಪರಮೇಶ್ವರನು ಹೇಳಿದ್ದಕ್ಕೆ, ಅದರಲ್ಲಿಯೂ ಶಿವೆಗೆ ಹೇಳಿದ್ದಕ್ಕೆ ಅಪೀಲು ಉಂಟೆ ? ಆದುದರಿಂದಲೇ ಆಧುನಿಕರು ಹೆದರಿ ಇದನ್ನು ಪ್ರಮಾಣವಾಗಿ ಒಪ್ಪಿಕೊಂಡಿರಬೇಕು. ಶಿವಭಕ್ತರಾದ ಆಧುನಿಕ ಸಂಗೀತಶಾಸ್ತ್ರಸಂಶೋಧಕರು ಕೆಲವರು ಈ ಶಿವವಾಣಿಯನ್ನೇ ಶಿರಸಾವಹಿಸಿ ಭಕ್ತಿಯಿಂದ ಹರಡುತ್ತಿರುವುದೂ ಉಂಟು. ಲೋಕೋಪಕಾರಕ್ಕಾಗಿ ಇವುಗಳನ್ನು ಸಂಗ್ರಹ ' ಚೂಡಾಮಣಿ ' ಯಲ್ಲಿ ಇದನ್ನು ಹೇಳಿದ ಗೋವಿಂದನೇ ಧನ್ಯ !

ಇಷ್ಟೊಂದು ಧೈರ್ಯಮಾಡಿದ ಗೋವಿಂದನು ಇಪ್ಪತ್ತನಾಲ್ಕು ಶ್ರುತಿಗಳನ್ನು ಹೇಳದಿರುವುದಕ್ಕೇ ನಾವು ಕೃತಜ್ಞರಾಗಿರಬೇಕೋ ಏನೋ ! ಇಪ್ಪತ್ತೆರಡು ಶ್ರುತಿಗಳನ್ನು ಹೇಳಿದ್ದರೂ ಅದರಲ್ಲಿ ಹೊಸತನ್ನು ಹೇಳದೆ ಅವನು ಬಿಡಲಿಲ್ಲ. ಬಡಪಾಯಿ ಷಡ್ಜ ಪಂಚಮಗಳಿಗೆ ಒಂದೊಂದೇ ಶ್ರುತಿಯಾದರೂ, ರಿಗಮಧನಿ ಎಂಬ ವಿಕೃತಿಸ್ವರಗಳಿಗೆ ಪ್ರತಿಯೊಂದಕ್ಕೂ ನಾಲ್ಕು ಶ್ರುತಿಗಳಷ್ಟೆ ; ಒಂದೊಂದರಲ್ಲಿಯೂ ಇರುವುದು ನಾಲ್ಕು ಶ್ರುತಿಗಳು ಮಾತ್ರವೇ ಆದರೂ ರಿಷಭ, ಗಾಂಧಾರ, ಧೈವತ, ನಿಷಾದಗಳಲ್ಲಿ ಪ್ರತಿಯೊಂದಕ್ಕೂ ಆರು ಆರರಂತೆ ವಿಕೃತಿಗಳು ; ಮಧ್ಯಮಕ್ಕೆ ಮಾತ್ರ ನಾಲ್ಕು ; ಹೀಗೆ ಇಪ್ಪತ್ತೆರಡು ಶ್ರುತಿಗಳಿಗೆ ಮೂವತ್ತು ಸ್ವರಗಳ ಲೆಕ್ಕವನ್ನು ಅವನು ಈ ರೀತಿಯಲ್ಲಿ ಕೊಡುತ್ತಾನೆ : 210

| | |
|---|---|
| ರಿಷಭ ಗಾಂಧಾರ ಮಧ್ಯಮ ಧೈವತ ನಿಷಾದಗಳಿಗೆ ತಲಾ ಆರರಂತೆ | 24 ಸ್ವರಗಳು |
| ಮಧ್ಯಮಕ್ಕೆ | 4 ಸ್ವರಗಳು |
| ಷಡ್ಜಕ್ಕೆ | 1 ಸ್ವರ |
| ಪಂಚಮಕ್ಕೆ | 1 ಸ್ವರ |
| ಒಟ್ಟು | 30 ಸ್ವರಗಳು |
| ಇವುಗಳಲ್ಲಿ ಶುದ್ಧವಾದವುಗಳು | 7 ಸ್ವರಗಳು |
| ಆದುದರಿಂದ ವಿಕೃತಿಗಳು | 23 ಸ್ವರಗಳು |

ವಾದಿಸಂವಾದಿಗಳ ಶ್ರುತಿವ್ಯವಸ್ಥೆ, ಸ್ವರದ ಸ್ವಸಂವೇದ್ಯತೆ, ಶ್ರುತಿಯ ನೈರಂತರ್ಯ, ಧ್ವನ್ಯಂತರಾಶ್ರುತಿ, ಮೊದಲಾದ ಲಕ್ಷಣಗಳು, ಸ್ವರಗತ, ಅಂತರಗತ ಎಂಬ ಶ್ರುತಿವಿಭಾಗ, ಶ್ರುತಿಗೂ ಸ್ವರಕ್ಕೂ ಇರುವ ವ್ಯತ್ಯಾಸ, ನೆರೆಹೊರೆಯ ಶ್ರುತಿಗಳಲ್ಲಿ ಸ್ವರದ ಉಪಸ್ಥಿತಿಯಿರಲಾರದೆಂಬ ನಿಯಮ ಇವುಗಳೆಲ್ಲವನ್ನೂ ಗೋವಿಂದನು ತನ್ನ ಶಿವಭಕ್ತಿಮಹಿಮೆಯಿಂದ ಒಂದೇ ಏಟಿಗೆ ಮಾಯವಾಗಿಸಿಬಿಟ್ಟಿದ್ದಾನೆ ! ಆಧುನಿಕ ಸಂಗೀತಸಂಶೋಧಕರು ಇದನ್ನು ನಂಬದಿದ್ದರೆ

210 ಗೋವಿಂದ, ಸಂಗ್ರಹಚೂಡಾಮಣಿ, III, 1.108, 1.16, ಪು. 29-41.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇದನ್ನು ನೋಡಿ ನಗಬಹುದಿತ್ತೇನೋ, ಆದರೆ ಈಗ ಅಳುವಂತಾಗಿದೆ. ಇದು ಯಾವಾಗ ಹೋಗುತ್ತದೆಯೋ ಎಂಬುದನ್ನು ಈ ಮಾಯೆಯನ್ನುಂಟುಮಾಡಿದ ಆ ಪರಶಿವನೇ ಬಲ್ಲ !

ಶ್ರುತಿಗಳು ಇಪ್ಪತ್ತೆರಡೇ ಇದ್ದು ಸ್ವರಗಳು ಮೂವತ್ತಾದುದನ್ನು ತಿರುವೇಂಕಟಕವಿಯು ಸಹಿಸಲಿಲ್ಲ ; ಇದು ಲಕ್ಷ್ಯಲಕ್ಷಣವಿರುದ್ಧವಷ್ಟೆ ! ಆದುದರಿಂದ ಈ ಶೂರನು ತನ್ನ ತೆಲುಗುಭಾಷೆಯ ಸಂಗೀತಸಾರಸಂಗ್ರಹದಲ್ಲಿ ಈ ಲೋಪವನ್ನು ತಿದ್ದಿ ಮೂವತ್ತನಾಲ್ಕು ಶ್ರುತಿಗಳನ್ನೇ ಹೇಳಿದ ! ಪೂರ್ವಾಚಾರ್ಯರ ಮಾತಿಗೆ ವಿರುದ್ಧವೂ ಬರಬಾರದಷ್ಟೆ. ಆದುದರಿಂದ ಶ್ರುತಿಗಳು ತನ್ನ ಪೂರ್ವಾಚಾರ್ಯನಾದ ಮೇಳಾಧಿಕಾರ ಲಕ್ಷಣಕಾರನನ್ನು ಅನುಸರಿಸಿ, ಇಪ್ಪತ್ತನಾಲ್ಕೇ ಎಂದಿದ್ದಾನೆ ; ಪಥಕ (10) ರಲ್ಲಿರುವಂತೆಯೇ ಇವನ ಶ್ರುತಿನಾಮಗಳು ಇವೆ. ಗೋವಿಂದನ ಪ್ರೀತಿ (12)ಯು ಇವನ ' ಭೀತಿ ' ಆಯಿತು, ಇಷ್ಟೇ ವ್ಯತ್ಯಾಸ. ಸ್ವರನಾಮಗಳೂ ಬಹುವಾಗಿ ಈ ರೀತಿಯಲ್ಲೇ ಇವೆ. ಆದರೆ ಇಪ್ಪತ್ತನಾಲ್ಕು ಶ್ರುತಿಗಳಲ್ಲಿ ಎರಡು ವಿಧ, ಶುದ್ಧಮಿಶ್ರಗಳೆಂದು. ಹದಿನಾಲ್ಕು ಶ್ರುತಿಗಳು ಶುದ್ಧ ; ಉಳಿದ ಹತ್ತು ಮಿಶ್ರ. ಮಿಶ್ರಶ್ರುತಿಗಳಲ್ಲಿ ಪ್ರತಿಯೊಂದೂ ಎರಡೆರಡರ ಮಿಶ್ರದಿಂದ ಆಗಿದೆ. ಹೀಗೆ ಒಟ್ಟು ಶ್ರುತಿಗಳು ಮೂವತ್ತನಾಲ್ಕು! [211]

ಶ್ರುತಿಗಳು ಇಪ್ಪತ್ತನಾಲ್ಕೆಂದು ಹೇಳಲು ಆಧುನಿಕರು ಇನ್ನೂ ಒಬ್ಬ ಪೂರ್ವಾಚಾರ್ಯನನ್ನು ಉದಾಹರಿಸು ತ್ತಾರೆ ; ಚತುರ್ದಂಡೀಪ್ರಕಾಶಿಕೆಯ ರಚನೆಯಿಂದ ಆಧುನಿಕ ಕರ್ಣಾಟಕಸಂಗೀತಕ್ಕೇ ನಾಂದಿಯನ್ನು ಹಾಡಿದ ವೆಂಕಟಮಖಿಯದೆಂದು ಈ ಪಕ್ಷವನ್ನು ಹೇಳುತ್ತಾರೆ : ಎಪ್ಪತ್ತೆರಡು ಮೇಳಕರ್ತರಾಗಗಳ ಹೆಸರುಗಳನ್ನೊಳ ಗೊಂಡ ಗುಂಡಕ್ರಿಯಾರಾಗದ ಲಕ್ಷಣಗೀತವೊಂದನ್ನು ಸುಬ್ಬರಾಮದೀಕ್ಷಿತನು ವೆಂಕಟಮಖಿಯದೆಂದು ಕೊಡುತ್ತಾನೆ. ಇದರ ಅಂತ್ಯದಲ್ಲಿ ' ರಸಮಂಜರಿ ಶ್ರುತಿ ಚತುರುವಿಂಶತಿ ಕನಕಾಂಬರಿರೀ ರಾಗಾಂಗ ಫೇನದ್ಯುತಿ ರಾಜ ' ಎಂದಿದೆ. [212] ಅವನು ಕೊಡುವ ಲಕ್ಷಣಗೀತೆಗಳೂ ರಾಗಲಕ್ಷಣ ಶ್ಲೋಕಗಳೂ ವೆಂಕಟಮಖಿಯದಲ್ಲ ವೆಂದೂ ಅವನ ಪ್ರಪೌತ್ರನಾದ ಮುದ್ದುವೆಂಕಟಮಖಿಯವೆಂದೂ ಬೇರೆಡೆಯಲ್ಲಿ ತೋರಿಸಿಕೊಟ್ಟಿದ್ದೇನೆ. [213] ಈ ಗೀತವು ಮುದ್ದುವೆಂಕಟಮಖಿಯದೇ ಹೌದೇ ಅಲ್ಲವೇ ಎಂಬುದೂ ಸಂದೇಹಾಸ್ಪದವೇ. ಗೀತದಲ್ಲಿ ವಾಗ್ಗೇಯ ಕಾರನ ಅಂಕಿತವಿಲ್ಲ. ಅಲ್ಲದೆ ಕಡೆಯಲ್ಲಿ ಬಂದಿರುವ ' ಚತುರುವಿಂಶತಿ ಶ್ರುತಿ ' ಎಂಬುದು ಅತ್ಯಂತ ಅಸಂಬದ್ಧವೂ, ಅನಾವಶ್ಯಕವೂ, ಗ್ರಂಥ ಸಂದರ್ಭಕ್ಕೆ ಅಪ್ರಸಕ್ತವೂ ಆಗಿದೆ ; ಇದು ಗೀತದ ಮೂಲಪಾಠದಲ್ಲಿ ಇತ್ತೇ ಎಂಬುದೇ ಸಂದೇಹಾಸ್ಪದವಾಗಿದೆ. ವಾಗ್ಗೇಯಕಾರನ ಅಂಕಿತವನ್ನು ತೆಗೆದುಹಾಕಿ ಆ ಸ್ಥಳದಲ್ಲಿ ಚತುರ್ವಿಂಶತಿ ಶ್ರುತಿಪಕ್ಷದ ಅಭಿಮಾನಿಯೊಬ್ಬನು ಹೀಗೆ ಸೇರಿಸಬಹುದೇ ಎಂಬ ಸಂಶಯವು ಬಲವಾಗುತ್ತದೆ. ಈ ಸಂಖ್ಯೆಯನ್ನು ಹೊರತು ಇನ್ನೇನನ್ನೂ ಹೇಳದ ಈ ಉಕ್ತಿಯು ಇಲ್ಲಿ ಪರಿಶೀಲನೆಗೆ ಅನರ್ಹವಾಗಿದೆ. ಶ್ರೀನಿವಾಸ ಅಯ್ಯಂಗಾರ್ಯನು ಸಂಗ್ರಹ ಚೂಡಾಮಣಿಯ ಮುನ್ನುಡಿಯಲ್ಲಿ ಈ ವಿಷಯದಲ್ಲಿ ಹೇಳಿರುವ ಮಾತುಗಳು [214] ಒಂದೇ ಲಾಳವನ್ನಿಟ್ಟುಕೊಂಡು, ಇನ್ನು ಮೂರುಲಾಳ, ಒಂದು ಕುದುರೆ ಮಾತ್ರ ಉಳಿದಿದೆ ; ಇಷ್ಟು ಮಾತ್ರ ಸಿಕ್ಕಿಬಿಟ್ಟರೆ ಕುದುರೆ ಸವಾರಿ ಮಾಡ ಬಹುದು ಎಂಬ ಆಸೆಯಂತಿದೆ.

---

211 ತಿರುವೇಂಕಟಕವಿ, ಸಂಗೀತಸಾರಸಂಗ್ರಹಮು, ಪು. 2.11.

212 ಸುಬ್ಬರಾಮದೀಕ್ಷಿತ (ಸಂ), ಉ. ಗ್ರಂ., ಪ್ರಥಮಭಾಗ, ಪು. 244.

213 ರಾ. ಸತ್ಯನಾರಾಯಣ, ಕನಕಾಂಬರಿ-ಕನಕಾಂಗಿ ವಿವಾದ, ಸಂಯುಕ್ತಕರ್ಣಾಟಕ, ಸಂಪುಟ 31, ಸಂಚಿಕೆಗಳು 39, 46 3-6-1963 ಮತ್ತು 10-6-1963.

214 ಟಿ. ಆರ್. ಶ್ರೀನಿವಾಸ ಅಯ್ಯಂಗಾರ್, ಗೋವಿಂದ, ಉ. ಗ್ರಂ., ಮುನ್ನುಡಿ, ಪು. XXI-XXII.

## 2. ಶ್ರುತಿಗಳು ಹದಿನೆಂಟು

ಶ್ರುತಿಗಳು ಹದಿನೆಂಟೇ ಎಂಬ ಒಂದು ಪಕ್ಷವೂ ನಮ್ಮ ಸಂಗೀತಶಾಸ್ತ್ರದಲ್ಲಿ ಉಂಟು. ಇದನ್ನು ಹನುಮಂತನು ಹೇಳಿದ್ದೆಂದು ರಾಮಕೃಷ್ಣಕವಿಯು ಪುನಃ ಪುನಃ ಹೇಳುತ್ತಾನೆ.[215] ಈ ಹನುಮಂತನು ಶಾರ್ಙ್ಗದೇವನು ಹೇಳುವ ಆಂಜನೇಯನೇ ಆಗಿದ್ದರೆ ಇದು ಪ್ರಾಚೀನಮತವೇ ಆಗುತ್ತದೆ. ಆದರೂ ಇವನೊಬ್ಬನಲ್ಲದೆ, ಮತ್ತು ಮುಂದೆ ಹೇಳುವ ಎರಡು ಅರ್ವಾಚೀನ ಗ್ರಂಥಗಳಲ್ಲಿನ ಉದ್ಧೃತಿಗಳನ್ನು ಬಿಟ್ಟರೆ ಇದನ್ನು ಇತರ ಪ್ರಾಚೀನಾಚಾರ್ಯರು ಯಾರೂ ಹೇಳದಿರುವುದು ಏಕೋ ತಿಳಿಯದು. ಸ್ಥಾಯಿಯಲ್ಲಿರುವ ಸಪ್ತಸ್ವರಗಳನ್ನು ಹದಿನೆಂಟು ಶ್ರುತಿಗಳ ವ್ಯಾಪ್ತಿಯಲ್ಲಿ ಹೇಳುವುದು ಅರಬ್ಬೀ ಮತ್ತು ಪರ್ಶಿಯಾ ದೇಶಗಳ ಸಂಗೀತಕ್ಕೆ ಸಹಜವಾದುದು. ಇದು ಅವರಲ್ಲಿ ಬಹುಕಾಲದಿಂದಲೂ ರೂಢಿಯಲ್ಲಿದೆ. ಷಡ್ಜ, ರಿಷಭ, ಮಧ್ಯಮ, ಪಂಚಮ, ನಿಷಾದಗಳಿಗೆ ತಲಾ ಮೂರರಂತೆ ಒಟ್ಟು ಹದಿನೈದು, ಗಾಂಧಾರ, ಧೈವತಗಳಿಗೆ ತಲಾ ಒಂದೊಂದರಂತೆ ಎರಡು, ಹೀಗೆ ಹದಿನೇಳು ಶ್ರುತಿಗಳನ್ನು ಅರಬ್ಬೀದೇಶದ ಸಂಗೀತದಲ್ಲಿ ಶೌರೀಂದ್ರಮೋಹನಠಾಕೂರನು ಹೇಳುತ್ತಾನೆ.[216] ಆಧಾರಶ್ರುತಿಯನ್ನೂ ಸೇರಿಸಿ ಹದಿನೆಂಟೆಂದು ಬೇಕಾದರೆ ಇಲ್ಲಿ ತಿಳಿಯಬಹುದು. ಬಾಗ್ದಾದಿನಲ್ಲಿ ಆಳಿದ ಕಡೆಯ ಖಲೀಫನಾದ ಅಲ್ ಮುಸ್ತ 'ಅಜೀಮ್ (ಕ್ರಿ. ಶ. 1242–1258)ನ ಆಶ್ರಯದಲ್ಲಿ ಪ್ರಖ್ಯಾತ ವಾಗ್ಗೇಯಕಾರನೂ ಶಾಸ್ತ್ರಕಾರನೂ ಆಗಿದ್ದ ಷಫಿ ಅಲ್‌ದೀನ್ 'ಅಬ್ದ್ ಅಲ್ ಮೂ'ಮಿನ್ ಅಲ್ ಬಗ್ದಾದ್-ಇ ಎಂಬುವನು ಮುಘ್ನೀ ಮತ್ತು ನುಜ್ಹಾ ಎಂಬ ಎರಡು ಹೊಸ ಬಗೆಯ ತಂತೀ ವಾದ್ಯಗಳನ್ನು ಸೃಷ್ಟಿಸಿದನು. ಅವನೇ ಕಿತಾಬ್ ಅಲ್-ಅದ್ವಾರ್ (ರಾಗಗಳ ಪುಸ್ತಕ) (ಕ್ರಿ.ಶ. 1252), ಮತ್ತು ರಿಸಾಲತ್ ಅಲ್-ಷರಫೀಯಾ ಫಿ'ಲ್-ನಿಸಬ್ ಅಲ್-ತ'ಲೀಫೀಯ (ಸಂಗೀತ ಪ್ರಬಂಧರಚನೆಯ ಪುಸ್ತಕ), (ಕ್ರಿ.ಶ. 1258ಕ್ಕೆ ಮುಂಚೆ) ಎಂಬ ಎರಡು ಶಾಸ್ತ್ರಗ್ರಂಥಗಳನ್ನು ರಚಿಸಿ ಹೊಸ ಸ್ವರಸಪ್ತಕವೊಂದನ್ನು ವರ್ಣಿಸಿ, ಮೇಲಿನ ಎರಡು ವಾದ್ಯಗಳ ಮೂಲಕ ಉದಾಹರಿಸಿದ್ದಾನೆ. ಇದರ ಪ್ರಕಾರ ಸ್ಥಾಯಿಯಲ್ಲಿ ಹದಿನೆಂಟು ಶ್ರುತಿಗಳು; ಇವುಗಳು ಕ್ರಮವಾಗಿ 90 ಸೆಂಟುಗಳ ಲಿಮ್ಮಾ, ಇನ್ನೊಂದು ಇದೇ ಪ್ರಮಾಣದ ಲಿಮ್ಮಾ, ನಂತರ 24 ಸೆಂಟುಗಳ ಕಾಮ, ಹೀಗೆ ಆರು ಸಲ ಸ್ಥಾಯಿಯಲ್ಲಿ ಪುನರಾವರ್ತಿತವಾಗುತ್ತಿದ್ದುವು. ಹೀಗೆ ಸ್ಥಾಯಿಯಲ್ಲಿನ ಈ ಶ್ರುತಿಸ್ಥಾನಗಳ ಭೌತಿಕಪ್ರಮಾಣಗಳು ಕ್ರಮವಾಗಿ 0, 90, 180, 204, 294, 384, 408, 498, 588, 678, 702, 792, 882, 906, 996, 1086, 1176, 1200, ಎಂಬ ಹದಿನೆಂಟು. 0 ಎಂದರೆ ಮುಕ್ತ ತಂತ್ರೀ ಅಥವಾ ಆಧಾರಸ್ವರ; 1200 ಸೆಂಟುಗಳ ಪ್ರಮಾಣವು ಪ್ರಥಮಾವರ್ತನ ಸ್ವರದ್ದು. ಇದರಲ್ಲಿ ಸಂವಾದಭಾವಗಳು ಅತ್ಯಂತ ಸಮರ್ಪಕವಾಗಿವೆಯೆಂದು ರೈಮನ್, ಹೆಲ್ಮ್‌ಹೋಲ್ಟ್ಸ್, ಮುಂತಾದ ನಾದವಿಜ್ಞಾನಿಗಳು ಮುಕ್ತಕಂಠದಿಂದ ಹೊಗಳಿದ್ದಾರೆ.[217] ಸೆಂಟುಗಳಿಂದ ಸ್ವರಪ್ರಮಾಣಗಳನ್ನು ಅಳೆಯುವ ವಿಧಾನವನ್ನು ಮುಂದೆ ವಿಕೃತಸ್ವರ ವಿವೇಚನೆಯ ಸಂದರ್ಭದಲ್ಲಿ ಹೇಳಲಾಗುವುದು. ಮೇಲೆ ಹೇಳಿದ ಗ್ರಂಥರಚನೆಯ ಕಾಲದಲ್ಲಿ ಭಾರತದ ಸಿಂಧೂ ಪ್ರಾಂತ್ಯವು ಅರಬ್ಬೀ ಖಲೀಫರ ಆಳ್ವಿಕೆಯಲ್ಲಿತ್ತು. ಅನೇಕ ಕಲೆ, ಶಾಸ್ತ್ರ, ವಿಜ್ಞಾನಗಳು ಈ ಕಾಲದಲ್ಲಿ ಭಾರತದಿಂದ ಅರಬ್ಬೀಯರ ಮೂಲಕ ಯೂರೋಪಿನಲ್ಲೆಲ್ಲಾ ಹರಡಿದವು, ಎಂಬುದು ಇತಿಹಾಸಪ್ರಸಿದ್ಧ ವಿಷಯವಾಗಿದೆ. ಅಲ್ಲದೆ ಈ ಗ್ರಂಥರಚನಾಕಾಲವು ಶಾರ್ಙ್ಗದೇವನ ಗ್ರಂಥರಚನಾಕಾಲಕ್ಕಿಂತ ನಂತರದ್ದು. ಹದಿನೆಂಟು ಶ್ರುತಿಗಳನ್ನು ಹೇಳಿದ ಹನುಮಂತನು ಶಾರ್ಙ್ಗದೇವನು ಸ್ಮರಿಸುವ

215 ರಾಮಕೃಷ್ಣಕವಿ (ಸಂ), ಉ. ಗ್ರಂ., ಪು. 11, 295, 326 ಇತ್ಯಾದಿ.

216 ಶೌರೀಂದ್ರಮೋಹನ ಠಾಕೂರ, ಉ. ಗ್ರಂ., ಪು. 101.

217 ಉದಾ., ಹೆಲ್ಮ್‌ಹೋಲ್ಟ್ಸ್, ಉ. ಗ್ರಂ., ಪು. 283.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಆಂಜನೇಯನೇ ಆಗಿದ್ದರೆ ಭಾರತದಿಂದಲೇ ಈ ಪದ್ಧತಿಯು ಅರೇಬಿಯಾ ಪರ್ಶಿಯಾ ದೇಶಗಳಿಗೆ ಹೋಗಿ ಮೊಘಲರ ಕಾಲಕ್ಕೆ ಹಿಂತಿರುಗಿ ಬಂತೆಂದು ಭಾವಿಸಲು ಅವಕಾಶವಿದೆ. ಹಾಗಿಲ್ಲದೆ ಈ ಹನುಮಂತನು ಅರ್ವಾಚೀನನಾಗಿದ್ದರೆ, ಜಹಾಂಗೀರ್, ಅಕ್ಬರ್ ಮೊದಲಾದ ಮೊಘಲ್ ಚಕ್ರವರ್ತಿಗಳ ಕಾಲದಲ್ಲಿ ಭಾರತಕ್ಕೆ ಬಂದ ಅಥವಾ ಅದಕ್ಕೂ ಮುಂಚೆ ಖಿಲ್ಜಿ ದೊರೆಗಳ ಆಳ್ವಿಕೆಯಲ್ಲಿ ಅವರ ಆಶ್ರಯದಲ್ಲಿ ಭಾರತದಲ್ಲಿದ್ದ ಅಮೀರ್‌ಖುಸ್ರೋವಿನ ಕಾಲದಲ್ಲಿ ಬಂದ ಈ ಪರಕೀಯ ಪ್ರಭಾವವನ್ನೇ ನಮ್ಮ ಶಾಸ್ತ್ರಕಾರರು ಹೇಳಿರಬಹುದು.

ಪರ್ಶಿಯಾ ದೇಶದಲ್ಲಿಯಾದರೂ ಷಫಿ ಅಲ್‌ದೀನನ ಹದಿನೆಂಟು ಶ್ರುತಿಗಳ ಮತವು ಹದಿನೇಳನೆಯ ಶತಮಾನದ ಅಂತ್ಯದವರೆಗೆ ರೂಢಿಯಲ್ಲಿತ್ತು. ಭಾರತಕ್ಕೂ ಪರ್ಶಿಯಾ, ಅರೇಬಿಯಾ ದೇಶಗಳಿಗೂ ಬಹುಕಾಲದಿಂದಲೂ ಸಾಂಸ್ಕೃತಿಕ ವಿನಿಮಯವಿತ್ತೆಂಬುದು ಇತಿಹಾಸಪ್ರಸಿದ್ಧವೇ ಆಗಿದೆ. ಕ್ರಿ.ಶ. ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ಮೊಘಲ್ ಚಕ್ರವರ್ತಿಗಳ ಆಸ್ಥಾನದಲ್ಲಿ ತಬ್ರಿಜ್, ಅರಿಸ್ಟೋಕ್ಸೇನಿಯ, ಮುಷ್ಹದ್, ಹಿಜಾಜ್, ಖುರಾಸಾನ್, ಇರಾನ್, ತುರಾನ್ ಮುಂತಾದ ದೇಶಗಳಿಂದ ಬಂದು ನೆಲೆಸಿದ್ದ ಸಂಗೀತವಿದ್ವಾಂಸರಿದ್ದರೆಂದು ಆಯಿಾನ್-ಇ-ಅಕ್ಬರೀ,[218] ಪಾದ್‌ಷಾಹ್‌ನಾಮಾ,[219] ಬದೌನಿಯ ಅಬ್ದುಲ್ ಕದಿರ್ ಇಬ್ನ್-ಇ-ಮುಲ್ಕ್ ಷಾಹ್, ಮುಂತಖಬು'ತ್ ತವರೀಖ್, ಮುಂತಖಬ್-ಉಲ್-ಲುಬಾಬ್, ಷಾಹ್‌ನವಾಜ್‌ಖಾನನ ಮ 'ಆಸಿರ್-ಉಲ್-ಉಮಾರಾ, ಖ್ವಾಜಾ ನಿಜಾಮುದ್ದೀನ್ ಅಹ್ಮದನ ಟಬಕಾತ್-ಇ-ಅಕ್ಬರೀ ಮೊದಲಾದ ಗ್ರಂಥಗಳು ಸಿದ್ಧಪಡಿಸುತ್ತವೆ. ಪ್ರಾಚೀನ ಪರ್ಶಿಯಾದೇಶದ ಸಂಗೀತದಲ್ಲಿ ಇಪ್ಪತ್ತನಾಲ್ಕು ಶ್ರುತಿಗಳ ಸ್ವರಾಷ್ಟಕವನ್ನು ಅಲೀ ನಕೀ ಖಾನ್ ವಜೀರೀ ತನ್ನ ತಲೀ' ಮಾತ್ ಮೂಸೀಕೀ ಎಂಬ ಗ್ರಂಥದಲ್ಲಿ ಹೇಳುತ್ತಾನೆ. ಇದರ ಪ್ರಕಾರ ಹಂಗಾಂ (ಸ್ವರಾಷ್ಟಕ) ದಲ್ಲಿ ಆರು ಪೂರ್ಣ ಸ್ವರಾಂತರಗಳು (ಪರ್ದಹ್), ಎಂದರೆ ಏಳು ಸ್ವರಗಳು. ಇವುಗಳಲ್ಲಿ ಪ್ರತಿಯೊಂದಕ್ಕೂ ಎರಡೆರಡು ಅರ್ಧಸ್ವರಗಳು (semitone) ಇವುಗಳಿಗೆ ನೀಮ್ ಪರ್ದಹ್‌ಗಳೆಂದು ಹೆಸರು. ಇವುಗಳಲ್ಲಿ ಪ್ರತಿಯೊಂದಕ್ಕೂ ಎರಡು ಶ್ರುತಿಗಳು. ಹೀಗೆ ಸ್ವರಾಷ್ಟಕದಲ್ಲಿ ಇಪ್ಪತ್ತನಾಲ್ಕು ಶ್ರುತಿಗಳು. ಪ್ರಾಚೀನ ಪರ್ಶಿಯಾ ದೇಶದಲ್ಲಿ ಇದಕ್ಕೂ ಮುಂಚೆ ಬಹುಶಃ ಇದ್ದ ಇಪ್ಪತ್ತೆರಡು ಶ್ರುತಿಗಳ ಸ್ವರಾಷ್ಟಕವನ್ನು ಇಂದಿಗೂ ಅಲ್ಲಿನ ಶಾಸ್ತ್ರಕಾರರು ಪ್ರಮಾಣಭೂತವೆಂದು ತಿಳಿಯುವುದುಂಟು. ಅಲ್ಲಿನ ಪ್ರಸಿದ್ಧ ಆಧುನಿಕ ಸಂಗೀತಶಾಸ್ತ್ರಕಾರನಾದ ಡಾ॥ ಮಹ್ದೀ ಬರ್ಕಶ್ಲೀ ರಚಿಸಿರುವ 'La Gamme de la musique iranienne': ಇರೇನಿಯನ್ ಸಂಗೀತದ ಸ್ವರಾಷ್ಟಕ ಎಂಬ ತನ್ನ ಡಾಕ್ಟೊರೇಟ್ ಪ್ರಬಂಧದಲ್ಲಿ ಆಧುನಿಕ ಪರ್ಶಿಯನ್ ಸ್ವರಾಷ್ಟಕವು ಇಪ್ಪತ್ತೆರಡು ಶ್ರುತಿಗಳಿಂದಾಗಿದೆಯೆಂದು ತೋರಿಸಿಕೊಟ್ಟಿದ್ದಾನೆ.[220] ಈ ರೀತಿಯಲ್ಲಿ ಪರ್ಶಿಯನ್ ಸಂಗೀತವು ಪ್ರಾಚೀನ ಭಾರತೀಯ ಸಂಗೀತದಿಂದ ಬಹುವಾಗಿ ಪ್ರಭಾವಿತವಾಗಿತ್ತು.

ಔತ್ತರೇಯ ಸಂಗಿತವು ಈ ಎರಡು ದೇಶಗಳ ಸಂಗೀತಗಳಿಂದ ಪ್ರಭಾವಿತವಾಗಿ ರೂಪು ತಳೆಯಿತೆಂಬುದನ್ನು ನಮ್ಮ ಸಂಗೀತದ ಇತಿಹಾಸಕಾರರೆಲ್ಲರೂ ಒಪ್ಪುತ್ತಾರೆ. ಔತ್ತರೇಯ ಸಂಗೀತವನ್ನು ಹನೂಮನ್ ಮತವೆಂದೂ ಕರ್ಣಾಟಕಸಂಗೀತವನ್ನು ಭರತಮತವೆಂದೂ (ಅಥವಾ ಅಪರೂಪವಾಗಿ ನಾರದಮತವೆಂದೂ) ಕರೆಯುವ ವಾಡಿಕೆ

---

218 ಅಬ್ದುಲ್ ಫಜ್ಲ್ ಮುಬಾರಕ್, ಆಯಿಾನ್-ಇ-ಅಕ್ಬರಿ, ಆಯಿಾನ್ 30, ಹೆಚ್. ಬ್ಲಾಕ್‌ಮನ್ (ಅನುವಾದಕ ಮತ್ತು ಸಂಪಾದಕ), ಪು. 611 ಮತ್ತು ಮುಂದಕ್ಕೆ.

219 ಪಾದ್‌ಷಾಹ್‌ನಾಮಾ, ii ಇತ್ಯಾದಿ.

220 Mahdi Barkashli, 'La Gamme de la musique iranienne', ('Annales des Telecommunications', V, 5, May 1950.)

ನಮ್ಮಲ್ಲಿರುವುದನ್ನು ಇಲ್ಲಿ ಸ್ಮರಿಸಬಹುದು. ಅಷ್ಟಾದಶ ಶ್ರುತಿಗಳ ಪಕ್ಷವನ್ನು ವೆಂಕಟಸುಂದರಾಸಾನಿಯು ಅಜ್ಞಾತ ಆಕರವೊಂದರಿಂದ ಉದ್ಧರಿಸುತ್ತಾಳೆ :

ಸ್ವರಮಂಡಲ ಲಕ್ಷಣಮ್—

ಸಪ್ತಸ್ವರಾಸ್ತ್ರಯೋ ಗ್ರಾಮಾ ಏಕವಿಶಂತಿಮೂರ್ಧ(!ರ್ಛ)ನಾಃ ।
ಅಷ್ಟಾದಶಸ್ತು ಶ್ರುತಯೋ ತೇನ (! ತಾನ) ಏಕೋನ ಪಂಚ ಚ ।
ಸ್ವರಮಂಡಲಮಿತ್ಯಾಹುರಲಂಕಾರೋ ಭವೇನ್ಮತಃ । [221]

ಇದನ್ನೇ 'ಅಷ್ಟಾದಶ ತು ಶ್ರುತಯಸ್ತಾನಾಸ್ಯೇಕೋನ ಪಂಚ ಚ ।' ಎಂಬ ಶುದ್ಧಪಾಠದೊಡನೆ ಭರತ-ಕಲ್ಪಲತಾಮಂಜರಿಯಲ್ಲಿಯೂ ಉದ್ಧರಿಸಿಕೊಳ್ಳಲಾಗಿದೆ. [222] ಇದು ಹನುಮಂತನ ಉಕ್ತಿಯು ಹೌದೋ ಅಲ್ಲವೊ ತಿಳಿಯುವಂತಿಲ್ಲ.

ಇದು ಹೇಗೇ ಇರಲಿ, ಈ ಮತದ ಪ್ರಕಾರ ಸ್ವರಗಳಿಗೆ ಶ್ರುತಿಗಳ ವಿನಿಯೋಗವು ಹೀಗಿದೆ : ಸ(3), ರಿ(2), ಗ(4), ಮ(2), ಪ(3), ಧ(2), ನಿ(2). ವಾದಿ ಸಂವಾದಿ ಮುಂತಾದ ಶ್ರುತಿಭಾವಗಳು ಈ ಪಕ್ಷದಲ್ಲಿ ದೊರೆಯುವುದಿಲ್ಲವೆಂಬುದು ನಿಜ. ಗಾಂಧಾರವನ್ನೇ ಸ್ವರಸಪ್ತಕದ ಅತ್ಯಂತ ವಿಸ್ತಾರವಾದ ಸ್ವರವನ್ನಾಗಿ ಮಾಡಿರುವುದು ಇದರ ಇನ್ನೊಂದು ವೈಚಿತ್ರ್ಯ ; ಅಷ್ಟೇ ಅಲ್ಲದೆ ಇದರ ಸಂವಾದಿಯಾದ ನಿಷಾದಕ್ಕೆ ಸಮಶ್ರುತಿಕತ್ವವೂ ಇಲ್ಲ ; ಸಮಶ್ರುತಿಕತ್ವವು ಸ–ಪ ; ರಿ–ಮ–ಧ–ನಿ ಗಳಲ್ಲಿ ಮಾತ್ರವಿದೆ. ಇವುಗಳಲ್ಲಿ ರಿ–ಧ ಗಳಲ್ಲಿ ಮಾತ್ರ ಸಂವಾದಿತ್ವವು ಇದೆ, ಮ–ನಿ ಗಳಲ್ಲಿ ಇಲ್ಲ ; ರಿ–ಮ ಗಳಲ್ಲಂತೂ ಇಲ್ಲವೇ ಇಲ್ಲವಷ್ಟೆ. ಸ–ಮ ಗಳಲ್ಲಿಯೂ ಸಮಶ್ರುತಿಕತ್ವವಿಲ್ಲ. ಹೀಗೆ ಸಮಶ್ರುತಿಕತ್ವವು ಸಂವಾದ ಲಕ್ಷಣವಾಗಿರುವಂತೆ ಇಲ್ಲಿ ಕಾಣುವುದಿಲ್ಲ. ಕೇವಲ ಭೌತಿಕಪ್ರಮಾಣವನ್ನೇ ಗಣಿಸಿ ಶ್ರುತಿಗಳು ಇಲ್ಲಿ ಸಮಾನಪ್ರಮಾಣವುಳ್ಳವುಗಳೆಂದು ಭಾವಿಸಿದರೆ ರಿಮಧನಿ ಎಂಬ ನಾಲ್ಕು ಸ್ವರಗಳೂ ಸ–ಪ ಗಳೆರಡೂ ಪರಸ್ಪರ ಸಮವಾಗಿವೆ. ಇದರಿಂದ ಶಾಸ್ತ್ರಕ್ಕೆ ವಿಶೇಷ ಪ್ರಯೋಜನವಿರುವ ಹಾಗೆ ಕಾಣುವುದಿಲ್ಲ. ಇವುಗಳಲ್ಲಿ ಸಮಾನತೆಯಿಲ್ಲದಿದ್ದರೆ, ಮಧ್ಯಮದ ಎರಡು ಶ್ರುತಿಗಳು ಗಾಂಧಾರದ ನಾಲ್ಕಕ್ಕಿಂತ ಎರಡರಷ್ಟಿರಬೇಕಾಗುತ್ತದೆ. ಇಂತಹ ಇತರ ವಿರೋಧಾಭಾಸಗಳು ಈ ಶ್ರುತಿವಿನಿಯೋಗದಲ್ಲಿವೆ. ಇದನ್ನು ಅದರ ಆಕರದ ಪೂರ್ಣವಾದ ಗ್ರಂಥಸಂದರ್ಭದಲ್ಲಿ ಓದಿಕೊಂಡ ಹೊರತು ಸಮೀಚೀನವಾದ ಅರ್ಥವು ಹೊರಡದು. ಈ ದಿಕ್ಕಿನಲ್ಲಿ ಸಂಶೋಧನೆ ಇನ್ನೂ ನಡೆಯಬೇಕಾಗಿದೆ.

ಸ್ವರಾಷ್ಟಕವನ್ನು ಹದಿನೆಂಟು ಪಾಲುಗಳಾಗಿ ಈ ಪಕ್ಷವು ವಿಂಗಡಿಸುತ್ತದೆಯಷ್ಟೆ. ಈ ರೀತಿಯಲ್ಲಿ ಅಲ್ಲದಿದ್ದರೂ ಪರೋಕ್ಷವಾಗಿ ಹದಿನೆಂಟು ಶ್ರುತಿಗಳನ್ನು ಪುಂಡರೀಕವಿಠಲನು ಕ್ರಿ. ಶ. ಹದಿನಾರನೆಯ ಶತಮಾನದಲ್ಲಿ ಹೇಳುತ್ತಾನೆ. ಅಕ್ಬರನ ಆಸ್ಥಾನದಲ್ಲಿದ್ದ ಈ ಕನ್ನಡಿಗ ಶಾಸ್ತ್ರಕಾರನು ಪರ್ಶಿಯನ್ ಸಂಗೀತವನ್ನು ಆಳವಾಗಿ ಅಭ್ಯಾಸಮಾಡಿದ್ದನೆಂದು ಅವನ ರಾಗಮಂಜರಿಯಿಂದ ತಿಳಿದುಬರುತ್ತದೆ. [223] ಕ್ರಿ. ಶ. ಹದಿನಾರು ಹದಿನೇಳನೆಯ ಶತಮಾನಗಳವರೆಗೂ ಪರ್ಶಿಯಾದಲ್ಲಿ ಹದಿನೆಂಟು ಶ್ರುತಿಗಳ ಸ್ವರಾಷ್ಟಕವು ಪ್ರಸಿದ್ಧವಾಗಿತ್ತೆಂದು ಮೇಲೆ ಸೂಚಿಸಿದೆಯಷ್ಟೆ. ಈ ಕಾಲದಲ್ಲಿ ಮೊಘಲ್ ಚಕ್ರವರ್ತಿಗಳ ದೆಹಲಿ ದರ್ಬಾರಿಗೆ ಬಂದ ಪರ್ಶಿಯನ್, ಖುರಾಸಾನ್‌ಗಳ ಸಂಗೀತ ವಿದ್ವಾಂಸರು ಈ ಬಗೆಯ ಸ್ವರಾಷ್ಟಕವನ್ನು ಬಳಸುತ್ತಿದ್ದಿರಬೇಕು. ಇದರಿಂದ ಪ್ರಭಾವಿತನಾಗಿರಬಹುದಾದ,

221 ವೆಂಕಟಸುಂದರಾಸಾನಿ, ರಸಿಕಜನಮನೋಲ್ಲಾಸಿನೀ ಸಾರಸಂಗ್ರಹ ಭರತಶಾಸ್ತ್ರ, ಪು. 134.

222 ಪಟ್ಟವರ್ಧನಂ ಸುಬ್ಬಾಶಾಸ್ತ್ರೀ ಮತ್ತು ಬಾಲಕುಂಟ್ಲ ಅಂಕಾಜಿಶಾಸ್ತ್ರೀ (ಸಂ), ಭರತಕಲ್ಪಲತಾಮಂಜರೀ, ಪು. 88-89.

223 ಪುಂಡರೀಕವಿಠಲ, ರಾಗಮಂಜರೀ, ಅಂತ್ಯಭಾಗ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಅದೇ ಆಸ್ಥಾನದಲ್ಲಿ ಅಗ್ರಗಣ್ಯ ಶಾಸ್ತ್ರಕಾರನಾಗಿದ್ದ ಪುಂಡರೀಕವಿಠಲನು ಸ್ವರಾಷ್ಟಕದಲ್ಲಿ ಹದಿನೆಂಟೇ ಶ್ರುತಿಗಳು ಸ್ವರೋಪಯೋಗಿಗಳೆಂದು ಹೇಳುತ್ತಾನೆ. ಶಾಸ್ತ್ರಮರ್ಯಾದೆಯನ್ನೂ ಪರಂಪರೆಯನ್ನೂ ಮೀರದೆ ಶ್ರುತಿಗಳು ಇಪ್ಪತ್ತೆರಡೇ ಎಂದು ಪೂರ್ವಾಚಾರ್ಯರೊಡನೆ ಅವನು ಸಮ್ಮತಿಸಿದರೂ, ಅವರು ಹೇಳದಿದ್ದ ಒಂದು ಮಾತನ್ನು ವಿಠಲನು ಹೇಳುತ್ತಾನೆ. ಈ ಇಪ್ಪತ್ತೆರಡರಲ್ಲಿ ಐದು, ಆರು, ಹದಿನೆಂಟು ಮತ್ತು ಹತ್ತೊಂಬತ್ತು ಈ ನಾಲ್ಕು ಶ್ರುತಿಗಳು ಸರ್ವಥಾ ಸ್ವರಾಭಿವ್ಯಕ್ತಿಗೆ ಅಪ್ರಯೋಜಕಗಳೆಂದೂ, ಉಳಿದ ಹದಿನೆಂಟೇ ಸಂಗೀತಕ್ಕೆ ಬೇಕಾದವುಗಳೆಂದೂ ಅವನ ಅಭಿಮತ :

ಪಂಚಮ್ಯಷ್ಟಾದಶೀ ಷಷ್ಠೀ ತಥಾ ಚೈಕೋನವಿಂಶತೀಃ ||
ಚತಸ್ರಃ ಶ್ರುತಯಶ್ಚೈತಾ ರಾಗಾದ್ಯೈರಪ್ರಯೋಜಕಾಃ |
ಶೇಷಾ ಅಷ್ಟಾದಶೈವ ಸ್ಯುಃ ಶ್ರುತಯಃ ಸ್ವರಬೋಧಕಾಃ || [224]

ಈ ಮಾತು ಷಡ್ಜಗ್ರಾಮದ ಷಡ್ಜಮೂರ್ಛನೆಗೆ ಅನ್ವಯಿಸುವ ಮಾತು ; ಇಷ್ಟರಮಟ್ಟಿಗೆ ಇದು ನಿಜ. ವಿಕೃತಸ್ವರವಿವೇಚನೆಯಲ್ಲಿ ಇದನ್ನು ಪುನಃ ಪ್ರಸ್ತಾಪಿಸಲಾಗುವುದು. ಆದರೆ ಮೂರ್ಛನಾಪದ್ಧತಿಯಿಂದಲೂ ಸಾಧಾರಣ ಮೂರ್ಛನೆಗಳಿಂದಲೂ ಪ್ರತಿಯೊಂದು ಸಲವೂ ಐದೈದು ಶ್ರುತಿಸ್ಥಾನಗಳು ತೆರವಾಗಿಯೇ ಉಳಿದುಬಿಡುತ್ತವೆಂದೂ ಮುಂದೆ ತೋರಿಸಿಕೊಡಲಾಗುವುದು. ಇಲ್ಲಿ ಐದು, ಆರನೆಯ ಶ್ರುತಿಗಳು ಷಡ್ಜ, ರಿಷಭಗಳ ನಡುವೆಯೂ ಹದಿನೆಂಟು, ಹತ್ತೊಂಬತ್ತನೆಯ ಶ್ರುತಿಗಳು ಪಂಚಮ, ಧೈವತಗಳ ಮಧ್ಯದಲ್ಲಿಯೂ ಇವೆ. ಇವುಗಳು ಪ್ರಾಚೀನ ಭಾರತೀಯ ಸಂಗೀತದ ಲಕ್ಷ್ಯಲಕ್ಷಣಗಳಲ್ಲಿಯಾಗಲೀ ಇಂದಿನ ಸಂಗೀತದಲ್ಲಾಗಲೀ ಉಪಯೋಗವಾಗುತ್ತಿಲ್ಲ. ಆದುದರಿಂದ ಪುಂಡರೀಕವಿಠಲನು ಹೇಳುವ ಮಾತನ್ನು ಅಷ್ಟಾದಶಶ್ರುತಿಪಕ್ಷವೆಂದೇ ಗ್ರಹಿಸಬಹುದು.

## 3. ಶ್ರುತಿಗೆ ಕಾಲಪರವಾದ ಅರ್ಥ

ಶ್ರೀಮದಭಿನವಗುಪ್ತನು ಶ್ರುತಿಗೆ ಕಾಲಪರವಾದ ಒಂದು ಅರ್ಥವನ್ನು ಆಕ್ಷೇಪರೂಪದಲ್ಲಿ ಪುನಃ ಪುನಃ ಇತರರಿಂದ ಉದ್ಧರಿಸಿಕೊಂಡು ಅದನ್ನು ನಿರಾಕರಿಸುತ್ತಾನೆ. ಹಗ್ಗವನ್ನು ಮಿಡಿದರೆ ಕ್ಷಣಮಾತ್ರದಲ್ಲಿ ಶಬ್ದವು ಕೇಳಿಸಿ ನಿಂತುಹೋಗುತ್ತದೆ. ಆದರೆ ತಂತಿಯನ್ನು ಮಿಡಿದರೆ ಪ್ರಥಮಕ್ಷಣದಲ್ಲಿ ಉಂಟಾದ ಶಬ್ದವು ಮುಂದುವರೆಯುತ್ತಲೇ ಇರುತ್ತದೆ. ಏಕೆಂದರೆ ಹಗ್ಗದಿಂದ ಉಂಟಾದ ಶಬ್ದಕ್ಕೆ ಅನುರಣನವಿಲ್ಲ, ತಂತಿಗೆ ಇದೆ. ಅನುರಣನ ಎಂದರೆ ಅನುಸರಿಸಿಕೊಂಡು ಅಲ್ಪವಾಗಿ, ಜೊತೆಯಲ್ಲಿಯೇ ಶಬ್ದವನ್ನುಂಟುಮಾಡುವಿಕೆ, ಎಂದು ಅರ್ಥ. ತಂತಿಯನ್ನು ಮಿಡಿದಾಗ ಅದರಲ್ಲಿ ವಿವಿಧ ಆವರ್ತಕ ಸ್ವರಗಳು ಹೇಗೆ ಹುಟ್ಟಿಕೊಳ್ಳುತ್ತವೆಂದು ಈ ಹಿಂದೆಯೇ (ಪು. 196) ಹೇಳಿದೆ. ಇವುಗಳಿಂದಲೇ ಸ್ವರಕ್ಕೆ ರಕ್ತಿಯೂ, ದೀರ್ಘತ್ವವೂ, ದೂರಶ್ರಾವ್ಯತೆಯೂ ಉಂಟಾಗುವುವು. ಹಗ್ಗದಲ್ಲಿಯಾದರೆ ಹೀಗೆ ಆವರ್ತಕಗಳನ್ನುಂಟುಮಾಡಿಕೊಳ್ಳಬಲ್ಲ ಶಬ್ದವು ಹುಟ್ಟುವುದಿಲ್ಲ. ಇದು ಕೇವಲ ರಣನವನ್ನುಂಟುಮಾಡುತ್ತದೆ. ಇದಕ್ಕೆ ಶ್ರುತಿಯೆಂಬ ಅರ್ಥವನ್ನು ಹೇಳುವವರೂ ಉಂಟು. ತಂತಿಯಲ್ಲಾದರೆ ರಣನದೊಡನೆ ಅನುರಣನವೂ ಉಂಟು. ಆದುದರಿಂದ ಅದರಲ್ಲಿ ಸ್ವರವು ಹುಟ್ಟಬಲ್ಲದು. ತಂತಿಯಲ್ಲಿಯೇ ಆಗಲಿ ಮೊದಲಕ್ಷಣದಲ್ಲಿ ಹುಟ್ಟಿದ ರಣನಕ್ಕೆ ಶ್ರುತಿಯೆಂದೂ ನಂತರ ಕಾಲಕ್ರಮದಲ್ಲಿ ಕೇಳುವ ಅನುರಣನಾತ್ಮಕಶಬ್ದಕ್ಕೆ ಸ್ವರವೆಂದೂ ಈ ಪಕ್ಷವು ವ್ಯವಹರಿಸುತ್ತದೆ. ಇದೇ ರೀತಿಯಲ್ಲಿ ಕಲ್ಲನ್ನು ಹೊಡೆದಾಗ ಕೇವಲ ರಣನ, ಎಂದರೆ ಶ್ರುತಿ ; ಘಂಟೆಯನ್ನು ಹೊಡೆದರೆ ಅನುರಣನ, ಎಂದರೆ ಸ್ವರ ; ಘಂಟೆಯಲ್ಲಿಯೂ ಮೊದಲು ಶ್ರುತಿ, ಅನಂತರ ಸ್ವರ.

224 ಪುಂಡರೀಕವಿಠಲ, ರಾಗಮಾಲಾ, 15, 16, ಪು. 2.

ಅಭಿಘಾತಜಾಚ್ಛಬ್ದಾದನಂತರಂ ಯೋ ಽನುರಣನಲಕ್ಷಣೋ ಽನ್ಯಃ ಶಬ್ದಃ ಉಪಜಾಯತೇ ಸ ತಾವನ್ನಿ-ಸರ್ಗಸ್ನಿಗ್ಧಮಧುರಾಕಾರಃ । ತರ್ಹಿ ರಜ್ಜ್ವಾ ( ? ರಜ್ಜ್ವಾ )[225] ತಂತ್ರ್ಯಾಯಾಮಾಹತಾಯಾಂ ಪಾಷಾಣೇ ಕಾಂಸ್ಯೇ ವಾ ಹತೇ ತದ್ಭಾವಭಾವೌ ( ? ತದಭಾವಭಾವೌ)[225] ಸ್ಫುಟಂ ಲಕ್ಷ್ಯೇತೇ ।[226]

ಕಲ್ಲಿನಾಥನೂ ಇದೇ ಅರ್ಥವನ್ನು ಹೇಳುವುದುಂಟು ; ವಸ್ತುಸಂಘಾತವು ಶಬ್ದಕ್ಕೆ ಉಪಾದಾನಕಾರಣ ವಾದರೂ, ಇದಕ್ಕೆ ಮಾರುತಾಹತಿಯೇ ನಿಮಿತ್ತಕಾರಣವಷ್ಟೆ. ಏಕೆಂದರೆ ಮಾರುತಾಹತಿಯಿಲ್ಲದಿದ್ದರೆ, ಎಂದರೆ ಈ ವಸ್ತುಸಂಘರ್ಷವನ್ನು ಗಾಳಿಯು ಹೊಡೆದು ಅಲೆಯಲೆಯಾಗಿ ದೂರದೂರಕ್ಕೆ ಒಯ್ಯದಿದ್ದರೆ, ಶಬ್ದವು ಕೇಳಿಸುವುದೇ ಇಲ್ಲ ; ಆಗ 'ಶ್ರವಣಾತ್ ಶ್ರುತಿಸಂಜ್ಞಿತಾಃ' 'ಶ್ರೂಯಂತ ಇತಿ ಶ್ರುತಯಃ' ಎಂದು ಮೊದಲಾದ ಶ್ರುತಿಲಕ್ಷಣವು ನಿರರ್ಥಕವಾಗಿಬಿಡುತ್ತದೆ. ಹೀಗೆ ಮಾರುತಾಹತಿಯಾದ ಪ್ರಥಮಕ್ಷಣದಲ್ಲಿ ಯಾವುದು ಕೇಳಿಸುತ್ತದೆಯೋ ಅದು ಶ್ರುತಿ ; ಆಮೇಲೆ ಕೇಳಿಸುವುದು ಸ್ವರ, ಎಂದು ಅವನ ಅಭಿಪ್ರಾಯ :

**ಶ್ರವಣಾತ್** ಶ್ರವಣಯೋಗ್ಯತ್ವಾತ್ ಶ್ರುತಯಃ ಶ್ರೂಯಂತ ಇತಿ ವ್ಯುತ್ಪತ್ತ್ಯಾ । ಏತದುಕ್ತಂ ಭವತಿ—ಯದ್ಯಪಿ ಶ್ರವಣಯೋಗ್ಯತ್ವಂ ಅನುರಣನಾತ್ಮನಃ ಸ್ವರತಾನಾದಿರೂಪೇಣ ದೀರ್ಘದೀರ್ಘಸ್ಯಾಪಿ ಧ್ವನೇರ್ವಿದ್ಯತೇ, ತಥಾ ಽಪ್ಯತ್ರ ಮಾರುತಾದ್ಯಾಹತ್ಯನಂತರೋತ್ಪನ್ನಪ್ರಥಮಕ್ಷಣವರ್ತಿ ಶ್ರವಣಮಾತ್ರಯೋಗ್ಯ-ಧ್ವನಿರೇವಶ್ರುತಿತ್ವಮಿತಿ ।[227]

ಶ್ರವಣಯೋಗ್ಯತ್ವವು ಅನುರಣನಾತ್ಮಕವಾದ ಸ್ವರದಿಂದ, ದೀರ್ಘದೀರ್ಘವಾಗಿ ವಿಸ್ತರಿಸಿಕೊಳ್ಳುವ ಅದರ (ಸ್ವರದ) ಸ್ವಭಾವದಿಂದ ಉಂಟಾದರೂ ಇದರ ಉತ್ಪತ್ತಿಸಮಯದಲ್ಲಿ ಪ್ರಥಮಕ್ಷಣದಲ್ಲಿ ಕೇಳಿಸಿದ್ದು ಶ್ರುತಿ ; ನಂತರ ಕೇಳಿಸಿದ್ದು ಸ್ವರ ಎಂದು ಇದರ ತಾತ್ಪರ್ಯ. 'ಸ್ವರತಾನರೂಪೇಣ' ಎಂದರೆ 'ಸ್ವರದ ವಿಸ್ತಾರ ರೂಪದಿಂದ' ಎಂದು ಅರ್ಥಮಾಡಬೇಕು. 'ತನೋತಿ ತನುತೇ, ವಿಸ್ತಾರೇ' ಎಂಬ ತನ್‌ಧಾತುವಿಂದ ಹುಟ್ಟಿದ[228] ತಾನವೆಂಬ ಶಬ್ದಕ್ಕೆ ವಿಸ್ತರಿಸಲ್ಪಟ್ಟದ್ದು ಎಂದೇ ಇಲ್ಲಿ ಅರ್ಥ. ಇದು ಮುಖ್ಯವಾಗಿ ತಾರ್ಕಿಕರು ಮಾಡುವ ಅರ್ಥ. ಅವರ ಪ್ರಕಾರ ಗುಣವೂ ದ್ರವ್ಯವೂ ಸಹೋದ್ಭವಗಳಲ್ಲ. ದ್ರವ್ಯವು ಮೊದಲು ಹುಟ್ಟಿ, ಉತ್ಪತ್ತಿಯಾದ ಪ್ರಥಮಕ್ಷಣದಲ್ಲಿ ನಿರಾಲಂಬ ವಾಗಿ, ಎಂದರೆ ಗುಣವೇ ಮೊದಲಾದ ಉಪಾಧಿಗಳಿಲ್ಲದೆ ಇರುತ್ತದೆ. ನಂತರ ಇಂದ್ರಿಯ ಸಂಯೋಗದ ಕಾರಣ ಎರಡನೆಯ ಕ್ಷಣದಲ್ಲಿ ಗುಣವು ಅದರೊಡನೆ ಸೇರಿಕೊಳ್ಳುತ್ತದೆ. ಆಗ ದ್ರವ್ಯದ ರೂಪಸ್ವಭಾವಾದಿಗಳು ಗೋಚರ ವಾಗುತ್ತವೆ. ಹಾಗೆಯೇ ವಸ್ತುಸಂಘಾತದಿಂದ ಮೊದಲು ಹುಟ್ಟಿದ ನಾದವೆಂಬ ದ್ರವ್ಯವು ನಿರಾಲಂಬ ಸ್ಥಿತಿಯಲ್ಲಿದ್ದು ಶ್ರುತಿಯೆನ್ನಿಸಿಕೊಳ್ಳುತ್ತದೆ. ಆಮೇಲೆ, ಮರುಕ್ಷಣದಲ್ಲಿಯೇ ರಕ್ತಿಧರ್ಮವೇ ಮೊದಲಾದ ಗುಣಗಳು ಸೇರಿಕೊಂಡು ಸ್ವರವಾಗುತ್ತದೆ. ಈ ಮಾತನ್ನು ಸಂಗೀತಶಾಸ್ತ್ರದ ಸ್ವಮರ್ಯಾದೆಯಲ್ಲಿ ಮಾತ್ರ ತೆಗೆದುಕೊಳ್ಳಬೇಕು. ಏಕೆಂದರೆ ಅನ್ಯತ್ರ ನಾದ ಅಥವಾ ಶಬ್ದವು ಆಕಾಶದ ಗುಣವೆಂದು ವ್ಯವಹರಿಸಲ್ಪಟ್ಟಿದೆ. ಹೀಗೆ ಅರ್ಥಮಾಡಿದರೆ ಈ ಪಕ್ಷವು ನಿರರ್ಥಕವಾಗುತ್ತದೆ. ಶ್ರುತಿಗೂ ಸ್ವರಕ್ಕೂ ಇರುವ ಈ ಕಾಲಗತಸಂಬಂಧವನ್ನು ಆಶಂಕಾರೂಪದಲ್ಲಿ ಅಭಿನವ ಗುಪ್ತನು ಪುನಃ ಹೇಳುತ್ತಾನೆ ; ಆದರೆ ಕೂಡಲೇ ಈ ಶಂಕೆಯನ್ನು ಅವನು ತಳ್ಳಿಹಾಕುತ್ತಾನೆ :

---

225 ಇದು ನಾನು ಮಾಡಿದ ಪಾಠಶೋಧನ ; ಮೂಲಗ್ರಂಥದಲ್ಲಿರುವ ಪಾಠವು ನಿರರ್ಥಕವಾಗಿದೆ.

226 ಅಭಿನವಗುಪ್ತ, ಉ. ಗ್ರಂ., ಪು. 12.13.

227 ಕಲ್ಲಿನಾಥ, ಉ. ಗ್ರಂ., ಪು. 67.

228 ತನ್ ಎಂಬುದು ಸ್ವನಾಮದಿಂದಲೇ ಪ್ರಾರಂಭವಾಗುವ ಎಂಟನೆಯ ತನಾದಿ ಗಣಕ್ಕೆ ಸೇರಿದ ಉಭಯಪದಿಧಾತು, ತನ್ ಧಾತುವಿಗೆ ಶಬ್ದಮಾಡು ಎಂಬ ಅರ್ಥವೂ ಉಂಟು.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಶ್ರುತಿಶ್ಚ ನಾಮ ಶ್ರೋತ್ರಗ್ರಾಹ್ಯಂ ವೈಲಕ್ಷಣ್ಯಂ ಯಾವತಾ ಶಬ್ದೇನೋತ್ಪದ್ಯತೇ। ನನು ಕಾಲಾಂಶಃ ಶ್ರುತಿಃ ಚತುಃಶ್ರುತಿಕಸ್ಯಾಪಿ ಬಿಂದ್ವಾದ್ಯಲಂಕಾರಾದೌ ಮಿತಕಾಲಾವಸ್ಥಾನಾದ್ ದ್ವಿಶ್ರುತಿಕಸ್ಯಾಪಿ ಸ್ಥಾಯಿವರ್ಣಪ್ರಯೋಗೇಽನಲ್ಪಕಾಲತ್ವಾದೇಶಃ ಸ್ಯಾತ್, ಘಂಟಾಶಂಖಾದಿ ಶ್ರುತೇಶ್ಚ ಚಿರಕಾಲತ್ವಾತ್ । ಏತನ್ನ, ಶಬ್ದಾವಯವೋ ನ ಶ್ರುತಿರಿತ್ಯುಕ್ತಮೇವ । [96]

ಅಭಿನವಗುಪ್ತನು ಆಶಂಕೆಯಿಂದಲೂ ಕಲ್ಲಿನಾಥನು ಸ್ವಮತದಿಂದಲೂ ಹೇಳುವ ಕಾಲಪರವಾದ ಅರ್ಥವನ್ನು ಕುಂಭಕರ್ಣನು(ಸಂಗೀತರಾಜ ಗ್ರಂಥದ ಈ ಭಾಗದಲ್ಲಿ ಕೃಷ್ಣಭೂಪನೆಂದಿದೆ!)ವಿಶದಗೊಳಿಸುತ್ತಾನೆ. 32 ತಾವರೆಯ ಎಸಳುಗಳನ್ನು ಒಂದರಮೇಲೊಂದರಂತೆ ಇಟ್ಟು ಸೂಜಿಯ ಮೊನೆಯಿಂದ ಅವುಗಳನ್ನು (ಒಟ್ಟಿಗೆ) ಭೇದಿಸಲು ಬೇಕಾದ ಕಾಲವೇ ಶ್ರುತಿಯ ಮಾನ, ಎಂದರೆ ಅದರ ಗೋಚರಕ್ಕೆ ಆವಶ್ಯಕವಾದ ಕಾಲ, ಎಂದು ಇವನ ಮತ. ಇದನ್ನು ಅವನು ಇತರ ವಿಚಕ್ಷಣರಿಂದ, ಸೂಕ್ಷ್ಮಬುದ್ಧಿಗಳಿಂದ ಸಂಗ್ರಹಿಸುತ್ತಾನೆ. ಆಯತತ್ವದಿಂದ ಉಂಟಾಗುವ ಶ್ರುತಿಯ ಉತ್ಕರ್ಷ, ಮಾರ್ದವದಿಂದ ಉಂಟಾಗುವ ಶ್ರುತಿಯ ಅಪಕರ್ಷ ಇವುಗಳು ಗೋಚರಿಸಬೇಕಾದರೆ ಕಡೆಯ ಪಕ್ಷ ಇಷ್ಟು ಕಾಲವಾದರೂ ಬೇಕೇ ಬೇಕು; ಇದು ಸ್ವಭಾವದಿಂದಲೇ ಅಪ್ರತ್ಯಕ್ಷವಾದರೂ ಸೂಕ್ಷ್ಮಬುದ್ಧಿಯನ್ನುಳ್ಳವರ ಶ್ರವಣೇಂದ್ರಿಯಕ್ಕೆ ಗೋಚರವಾಗುತ್ತದೆ :

ದ್ವಾತ್ರಿಂಶದಬ್ಜಪತ್ರಾಣಾಂ ಸೂಚ್ಯಗ್ರೇಣ ವಿಭೇದನೇ ।
ಯಃ ಕಾಲಃ ಸ ಶ್ರುತೇರ್ಮಾನಮವೋಚತ್ ಕೃಷ್ಣಭೂಪತಿಃ ॥
ತತ್ಕಾಲೋಪಾಧಿವಶತೋ ಽಪ್ರತ್ಯಕ್ಷೋ ಽಪಿ ಸ್ವಭಾವತಃ ।
ಸ ಭವೇತ್ ಸೂಕ್ಷ್ಮಬುದ್ಧೀನಾಂ ಶ್ರವಣೇಂದ್ರಿಯಗೋಚರಃ ॥ [229]

ಹೀಗೆ, ಧ್ವನಿವೈಲಕ್ಷಣ್ಯವು, ಎಂದರೆ ಹಿಂದಿನ ಧ್ವನಿಗಿಂತ ಇದು ಹೆಚ್ಚಾಗಿದೆ ಅಥವಾ ಕಡಿಮೆಯಾಗಿದೆ ಎಂಬ ಅರಿವು ಆಗಬೇಕಾದರೆ ಅವೆರಡರ ನಡುವೆ ಕನಿಷ್ಠನಾದ ಪ್ರಮಾಣದ ಅಂತರವು ಹೇಗೆ ಆವಶ್ಯಕವೋ, ಕನಿಷ್ಠಾಂತರದ ಕಾಲವೂ ಅಷ್ಟೇ ಅಗತ್ಯ ಎಂದು ಇದರ ಭಾವ. ಎಂದರೆ ತಂತಿಯನ್ನು ಬಿಗಿಮಾಡುವುದರಿಂದ ಅಥವಾ ಇತರ ಸಮಾನಕ್ರಿಯೆಯಿಂದ (ಆಯತತ್ವ) ಧ್ವನಿಯು ಉಚ್ಚವಾದರೂ, ಸಡಿಲಗೊಳಿಸುವುದರಿಂದ ಅಥವಾ ಇತರ ಸಮಾನಕ್ರಿಯೆಯಿಂದ (ಮಾರ್ದವ) ಧ್ವನಿಯು ನೀಚವಾದರೂ, ಈ ಹಿಂದಿನ ಧ್ವನಿಗೆ ಹೋಲಿಸಿದಾಗ ಉಂಟಾಗುವ ಈ ಉಚ್ಚನೀಚಭಾವವು ಆಯತತ್ವ ಮಾರ್ದವಗಳನ್ನು ಮಾಡಿದ ಕ್ಷಣದಲ್ಲಿಯೇ ಮನಸ್ಸಿಗೆ ಸ್ಫುರಿಸುವುದಿಲ್ಲ; ಇದಕ್ಕೆ ಅತ್ಯಲ್ಪವಾದರೂ, ನಿಶ್ಚಿತವಾದ ಒಂದು ಪ್ರಮಾಣವು ಬೇಕು. ಇದಕ್ಕಿಂತ ಹ್ರಸ್ವಕಾಲವಾದರೆ ವ್ಯತ್ಯಾಸವು ತಿಳಿಯುವುದಿಲ್ಲ ಎಂಬುದು ಇತರ ತಾತ್ಪರ್ಯ.

ಕಲ್ಲಿನಾಥನೂ ಕುಂಭಕರ್ಣನೂ ಕ್ರಿ. ಶ. ಹದಿನೈದನೆಯ ಶತಮಾನದಲ್ಲಿದ್ದ ಸಮಕಾಲೀನರು. ಇವರಿಗಿಂತ ನೂರುವರ್ಷಗಳ ನಂತರ ಕನ್ನಡಿಗ ಸಂಗೀತಶಾಸ್ತ್ರಕಾರನಾದ ಪುಂಡರೀಕವಿಠಲನು ಇದೇ ಪಕ್ಷವನ್ನು ಹಿಡಿಯುತ್ತಾನೆ:

ಪ್ರಭವಂತ್ಯುಚ್ಚೋಚ್ಚತರಾಃ ಶ್ರುತಯಃ ಶ್ರಾವ್ಯಮಾತ್ರತಃ । [230]
ಪ್ರಾಗ್ಘಾತಮಾತ್ರಶ್ರವಣಾಚ್ಛ್ರುತಿಶ್ಚಾನುಧ್ವಾನರೂಪಃ ಸ್ವರ ಇತ್ಯಕಿಂಚತ್ । [231]

---

229 ಕುಂಭಕರ್ಣ, ಉ. ಗ್ರಂ., II, 1, 2, 87-88, ಪು. 79.

230 ಪುಂಡರೀಕವಿಠಲ, ರಾಗಮಾಲಾ, 9. ಪು. 1.

231 ಪುಂಡರೀಕವಿಠಲ, ಸದ್ರಾಗಚಂದ್ರೋದಯ, 33.

ಹೀಗೆ ಶ್ರವಣಮಾತ್ರವಾದದು, ಎಂದರೆ ದೀರ್ಘತ್ವ, ಅನುರಣನಾದಿಗಳಿಲ್ಲದೆ ಪ್ರಥಮಕ್ಷಣದಲ್ಲಿ ಮಾತ್ರ ಪ್ರವರ್ತಿತವಾದ ಶಬ್ದವೇ ಶ್ರುತಿ. 'ಪ್ರಾಗ್ಜಾತಮಾತ್ರಶ್ರವಣಾತ್ ಶ್ರುತಿಃ' ಎಂದರೆ ಇದೇ ಇಲ್ಲಿ ಅರ್ಥ. ಅನುಧ್ವಾನವನ್ನು ಎಂದರೆ ಅನುರಣನಪೂರ್ವಕವಾಗಿ ದೀರ್ಘತ್ವ, ತೈಲಧಾರೆಯಂತೆ ಅವಿಚ್ಛಿನ್ನತೆ ಮೊದಲಾದವುಗಳನ್ನು ಪಡೆದು ದ್ವಿತೀಯ ಕ್ಷಣದಿಂದ ಗೋಚರಕ್ಕೆ ಬರುವಂತಹುದು ಸ್ವರ ಎಂದು ಪುಂಡರೀಕವಿಠಲನೂ ಅಭಿಪ್ರಾಯ ಪಡುತ್ತಾನೆ.

ಸ್ವರವು ಇಂತಹುದೇ ಎಂದು ಗೋಚರಕ್ಕೆ ಬರಬೇಕಾದರೆ ಆಗಲಿ, ಅಥವಾ ಯಾವುದೇ ಹಿಂದಿನ ಧ್ವನಿಯಿಂದ ಇದು ಬೇರೆಯಾಗಿದೆ ಎಂಬ ವೈಲಕ್ಷಣ್ಯವು ತಿಳಿಯಬೇಕಾದರೆ ಆಗಲಿ, ಅವು ಹುಟ್ಟಿದ ಕೂಡಲೇ ಆಗುವುದಿಲ್ಲ, ಇಂತಹ ಗೋಚರಕ್ಕೆ ಸ್ವಲ್ಪ ಕಾಲವು ಬೇಕಾಗುತ್ತದೆ ಎಂಬುದು ಅಭಿನವಗುಪ್ತಾದಿಗಳ ಮೇಲೆ ಹೇಳಿದ ಮಾತಿನ ತಾತ್ಪರ್ಯ. ಇದು ಪ್ರಾಯೋಗಿಕವಾಗಿ ಸಿದ್ಧವಾದ ಸಂಗತಿಯೇ ಆಗಿದೆ ಎಂಬುದು ನಾದವಿಜ್ಞಾನದಲ್ಲಿ ಇತ್ತೀಚೆಗೆ ನಡೆದ ಸಂಶೋಧನೆಗಳಿಂದ ಸಿದ್ಧವಾಗಿದೆ. ಧ್ವನಿವೈಲಕ್ಷಣ್ಯವು ಮನಸ್ಸಿಗೆ ಸ್ಫುರಿಸಲು ಬೇಕಾಗುವ ಕಾಲವು ಆಯಾ ಧ್ವನಿಮಟ್ಟವನ್ನು ಅವಲಂಬಿಸುತ್ತದೆಂದು ಪ್ರಯೋಗಫಲಿತಾಂಶಗಳಿಂದ ತಿಳಿದುಬರುತ್ತದೆ. ಧ್ವನಿಮಟ್ಟವು ಹೆಚ್ಚಿದಂತೆಲ್ಲಾ ಅದರಲ್ಲಿನ ವೈಲಕ್ಷಣ್ಯವನ್ನು ಗ್ರಹಿಸಲು ಬೇಕಾಗುವ ಕಾಲವು ಕಡಿಮೆಯಾಗುತ್ತದೆ. ಎಂದರೆ ನೀಚಧ್ವನಿ ಪ್ರದೇಶದಲ್ಲಿ ಧ್ವನಿವ್ಯತ್ಯಾಸಗ್ರಹಣವು ನಿಧಾನವಾಗಿಯೂ ಉಚ್ಚನಾದಪ್ರದೇಶದಲ್ಲಿ ಶೀಘ್ರವಾಗಿಯೂ ಇರುತ್ತದೆಂಬುದು ಈ ಪ್ರಯೋಗಫಲಿತಾಂಶಗಳ ಸಾರಾಂಶ. ಕಾರ್ಲ್ ಸೀಷೋರನು ಈ ವಿಷಯದಲ್ಲಿ ಹೀಗೆ ಬರೆಯುತ್ತಾನೆ:

**Duration** : There are three types of musical situations which may be recognized in the measurement oi pitch discrimination : (1) going from one note to another with a complete break between them, as in the standard test where we sound two notes, each of which is one second in duration but differing in pitch and separated by a very short interval of time ; (2) legato rise or fall in pitch or pitch vibrato ; and (3) sudden shift in a single note without break in tone as in erratic intonation.

The discrimination is different for each of these, the necessary increment being about twice as large for the first type as the third, and the second falling between these two. These differences are related to the differences in total duration of each tone.

The minimum duration necessary in order to identify the pitch of a tone clearly varies with the frequency and to some extent with the loudness. It has been found that in order to be heard clearly as of definite pitch, a tone of 128 c.p.s. must have a duration of 0·09 second ; for 256 c.p.s. about 0·07 second ; for 384 c.p.s. about 0·04 second ; and for 512 c.p.s. about the same.[232]

ನಿರ್ದಿಷ್ಟಧ್ವನಿಯನ್ನೂ, ಧ್ವನಿವ್ಯತ್ಯಾಸವನ್ನೂ ಗುರುತಿಸಲು ಕೆಲವು ಕಾಲವು ಬೇಕಾಗುತ್ತದೆಂದು ಕಲ್ವರನೂ ಒಪ್ಪಿಕೊಳ್ಳುತ್ತಾನೆ ; ಆದರೆ ಇದು ಧ್ವನಿಮಟ್ಟಕ್ಕೆ ಅಷ್ಟಾಗಿ ಸಂಬಂಧಿತವಲ್ಲವೆಂದು ಅವನ ಅಭಿಪ್ರಾಯ ; ಹೀಗೆ ಬೇಕಾಗುವ ಕಾಲದ ಅವಧಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಕನಿಷ್ಠವಾದ ಇಂತಹ ಕಾಲಪ್ರಮಾಣವನ್ನು ಸಾಮಾನ್ಯವಾಗಿ ಹೇಳಬಹುದೆಂದೂ ಅವನು ನಿರ್ಣಯಿಸುತ್ತಾನೆ :

232 Carl E. Seashore, Psychology of Music, pp. 61-62.

Another aspect of pitch perception which is coming to have increased significance concerns the minimum time required for the ear to recognize a definite pitch. The data bearing on this point are, as yet, not very concordant, but it would appear that the "pitch perception time" is more or less independent of the frequency, being of the order of one-twentieth of a second.

Not only can the ear catalogue a note as to pitch in a remarkably short time interval, but it can also recognize a sound as such when only two vibrations are made. This means that in the region of $C_3$ we can become conscious of the existence of a sound if it persists for two or three hundredths of a second. However, to recognize the characteristics of a note, anywhere from 2 to 20 oscillations are necessary.[233]

ದ್ರವ್ಯಗಳು ತಮ್ಮ ಗುಣಗಳೊಡನೆ ಗೋಚರಕ್ಕೆ ಬರಬೇಕಾದರೆ ಕನಿಷ್ಠವಾದ ಕಾಲಮಿತಿಯು ಬೇಕೆಂದು ಸಾವಿರಾರು ವರ್ಷಗಳ ಹಿಂದೆ ನಮ್ಮ ದೇಶದ ತರ್ಕಶಾಸ್ತ್ರಸೈದ್ಧಾಂತಿಕರು ಹೇಳಿದುದನ್ನು ಆಧುನಿಕವಿಜ್ಞಾನಿಗಳು ನಿಕರವಾದ ಪ್ರಯೋಗಫಲಿತಾಂಶಗಳ ಹಿನ್ನೆಲೆಯಲ್ಲಿ ಸತ್ಯವೆಂದು ಒಪ್ಪುತ್ತಾರೆ. ದೃಶ್ಯ, ಶ್ರವ್ಯ, ಸ್ಪರ್ಶ ಮೊದಲಾದ ಇಂದ್ರಿಯಸಂಯೋಗದಿಂದ ದ್ರವ್ಯದ ಗುಣವು ಗೋಚರಕ್ಕೆ ಬರಬೇಕಾದರೆ ಎಷ್ಟೆಷ್ಟು ಕಾಲವು ಹಿಡಿಯುತ್ತದೆಂಬುದನ್ನು ಮನೋವಿಜ್ಞಾನಶಾಸ್ತ್ರದಲ್ಲಿ ಕಂಡುಹಿಡಿಯಲಾಗಿದೆ. ಹೀಗೆ ಜಾನ್ ಡೇಷಿಯಲ್ ಈ ವಿಷಯದ ಪ್ರಯೋಗ ಫಲಿತಾಂಶಗಳನ್ನು ಕ್ರೋಡೀಕರಿಸುತ್ತಾ, ಶ್ರಾವ್ಯಗೋಚರಕ್ಕೆ 0·12 ಸೆಕೆಂಡಿನಿಂದ 0·18 ಸೆಕಂಡಿನವರೆಗೆ, ದೃಶ್ಯ ಗೋಚರಕ್ಕೆ 0·15 ಸೆಕೆಂಡಿನಿಂದ 0·225 ಸೆಕಂಡಿನವರೆಗೆ, ಸ್ಪರ್ಶಜ್ಞಾನಕ್ಕೆ 0·130 ಸೆಕಂಡಿನಿಂದ 0·185 ಸೆಕಂಡಿನವರೆಗೆ ಬೇಕಾಗುತ್ತದೆ, ಎನ್ನುತ್ತಾನೆ:

Simple responses to auditory stimuli vary from 120 ms. to 180 ms.; to visual stimuli from 150 ms. to 225 ms.; to tactual pressure, from 130 ms. to 185 ms.[234]

ವುಡ್‌ವರ್ತ್ ಸಹ ಈ ವಿಷಯದಲ್ಲಿ ವಿಶೇಷವಾದ ಸಂಶೋಧನೆ ನಡೆಸಿ ಸದೃಶವಾದ ಫಲಿತಾಂಶಗಳನ್ನು ಪಡೆದಿದ್ದಾನೆ.[235]

ಪಾಶ್ಚಾತ್ಯಸಂಗೀತಶಾಸ್ತ್ರವು ವೈಜ್ಞಾನಿಕ ತಳಹದಿಯ ಮೇಲೆ ನಿಂತಿರಲು ಮೊಟ್ಟಮೊದಲಿಗೆ ವಿಶೇಷವಾಗಿ ಶ್ರಮಿಸಿ, ಪ್ರಖ್ಯಾತ ವಿದ್ವಾಂಸನಾಗಿರುವ ಗ್ಲೆನ್ ಹೇಡನ್ ಸ್ವರಗಳ ಶ್ರಾವ್ಯಗೋಚರವು ನಿರ್ದಿಷ್ಟಕಾಲ ಮಿತಿಯನ್ನು ಅವಲಂಬಿಸುತ್ತದೆಂದು ಫ್ಲೆಚರ್‌ನನ್ನು [236] ಉದ್ಧರಿಸಿಕೊಂಡು ಹೀಗೆ ಹೇಳುತ್ತಾನೆ:

Although the data as to the minimum time that a pure tone must excite the ear for definite pitch to be perceived are rather limited,

233 Charles A. Culver, Musical Acoustics, pp. 47-48.

234 John F. Dashiell, Fundamentals of General Psychology, p. 45, ms = millisecond =1/1000 second.

235 Robert S. Woodworth, Experimental Psychology, pp. 298-339.

236 Harvey Fletcher, Speech and Hearing, pp. 152 ff.

Fletcher suggests that it is about one-twentieth of a second and that it is nearly independent of frequency.[237]

ಆದುದರಿಂದ ಸ್ವರೋತ್ಪತ್ತಿಗೂ ಅದರ ಗ್ರಹಣಕ್ಕೂ ನಿರ್ದಿಷ್ಟವಾದ ಕಾಲದ ಅಂತರವಿರುತ್ತದೆ ಎಂದು ನಿರ್ವಿವಾದವಾಗಿ ಹೇಳಬಹುದು. ಆದರೆ ಗ್ರಹಣಪೂರ್ವದಲ್ಲಿ, ಎಂದರೆ ಕೇವಲ ಉತ್ಪತ್ತಿಕ್ಷಣದಲ್ಲಿರುವುದನ್ನು ಶ್ರುತಿಯೆಂದೂ ಅನಂತರ ಗೋಚರಕ್ಕೆ ಬರುವುದನ್ನು ಸ್ವರವೆಂದೂ ತಿಳಿಯುವುದು ಅಷ್ಟೇನೂ ವೈಜ್ಞಾನಿಕ ಕ್ರಮವಲ್ಲ. ಏಕೆಂದರೆ ಶ್ರುತಿಯು ಅತಿ ಪ್ರಾಚೀನಕಾಲದಿಂದಲೂ ನಿರ್ದಿಷ್ಟಕಲ್ಪನೆ, ಕರ್ತವ್ಯಗಳನ್ನುಳ್ಳ ಪ್ರಮೇಯ. ಹೀಗೆ ಮಾಡಿದರೆ ಶ್ರುತಿಯು ದ್ರವ್ಯವೆಂದೂ ಸ್ವರವು ಅದರ ಗುಣವೆಂದೂ ಆಗುತ್ತದೆ. ಕೆಲವು ಶ್ರುತಿಗಳಲ್ಲಿ ಸ್ವರತ್ವವಿರುವುದನ್ನೂ ಇನ್ನು ಕೆಲವದರಲ್ಲಿ ಇಲ್ಲದಿರುವುದನ್ನು ವಿಶ್ವಾವಸುವಿನ ಶ್ರುತಿದ್ವೈವಿಧ್ಯಪಕ್ಷದಲ್ಲಿ ಹೇಳಿದೆ. ಆದುದರಿಂದ ವ್ಯಾಪ್ತಿಯೇ ಇಲ್ಲದುದರಿಂದ ಈ ಗುಣ-ಗುಣೀಭಾವವು ಇಲ್ಲಿ ಅಸಂಗತವಾಗುತ್ತದೆ. ಅಲ್ಲದೆ ಧ್ವನ್ಯಂತರಾಶ್ರುತಿ, ನೈರಂತರ್ಯ, ರಕ್ತಿಜನಕತ್ವ ಮೊದಲಾದ ಲಕ್ಷಣಗಳು ಶ್ರುತಿಗೆ ಇಲ್ಲದೆ ಹೋಗುತ್ತವೆ. ಸ್ವರಪ್ರಮಾಣಗಳ ಮತ್ತು ಸ್ಥಾಯಿಯ ಇಯತ್ತೆಯು ಸಿದ್ಧಿಸದೆ ಹೋಗುತ್ತದೆ. ಆದುದರಿಂದ ಈ ಪಕ್ಷವು ಅಸಂಗತ. ಎಂದರೆ, ಸ್ವರೋತ್ಪತ್ತಿಗೂ ಅದರ ಗೋಚರಕ್ಕೂ ನಡುವೆ ಕಾಲಾವಕಾಶವು ಬೇಕಾಗುತ್ತದೆಂಬುದನ್ನು ಒಪ್ಪಬಹುದು; ಆದರೆ ಇದು ಶ್ರುತಿ-ಸ್ವರ ಸಂಬಂಧವನ್ನು ಒಳಗೊಂಡಿದೆ ಎಂಬುದನ್ನು ಒಪ್ಪಲಾಗದು ಎಂದು ಇದರ ಅರ್ಥ. ಶ್ರುತಿಗೆ ಕಾಲಪರವಾದ ಅರ್ಥವನ್ನು ಅಭಿನವಗುಪ್ತಾಚಾರ್ಯನೂ ನಿರಾಕರಿಸುತ್ತಾನೆ:

**ಪ್ರಮಾಣೇತಿ** ವದನ್ ನ ಕಾಲಕಲಾ ಶ್ರುತಿರ್ನಾಪಿ ನಾದಾಂಶೋ ನ ಚಾಯುರ್ನ ಸ್ಥಾನಂ ನ ಕರಣಮಿತಿ ದರ್ಶಯತಿ.[120]

ಕಾಲಕಲಾ ಎಂದರೆ ಸ್ವರದ ಉತ್ಪತ್ತಿಗೂ ಅದರ ಗೋಚರಕ್ಕೂ ಇರುವ ಕಾಲದ ಅಂತರವೆಂದೂ, ಆಯುಃ ಎಂದರೆ ಸ್ವರವು ಗೋಚರಿಸಬೇಕಾದರೆ ಕಡೆಯಪಕ್ಷ ಎಷ್ಟು ಕಾಲ ಜೀವಿಸಿರಬೇಕು (ಕೇಳಿಸುತ್ತಿರಬೇಕು) ಎಂದೂ, ನಾದಾಂಶವೆಂದರೆ ಸ್ವರದ ಗೋಚರಕ್ಕೆ ಕಡೆಯಪಕ್ಷ ಎಷ್ಟು ಕಂಪನಗಳಿರಬೇಕು ಎಂದೂ ಅರ್ಥ. ಸೀಷೋರ್, ಕಲ್ವರ್, ವುಡ್‌ವರ್ತ್, ಫ್ಲೆಚರ್‌ರವರುಗಳು ಇಪ್ಪತ್ತನೆಯ ಶತಮಾನದಲ್ಲಿ ಪ್ರಯೋಗ ಮೂಲವಾಗಿ ಕಂಡುಹಿಡಿದ ಫಲಿತಾಂಶಗಳನ್ನು ಸಾವಿರ ವರ್ಷಗಳಿಗೆ ಹಿಂದೆಯೇ ಶ್ರೀಮದಭಿನವಗುಪ್ತಾಚಾರ್ಯನು ಹೇಳಿರುವುದು ಅಭಿಮಾನಾಸ್ಪದವಾಗಿದೆ.

## IV. ಶ್ರುತಿನಾಮಗಳು

ಶ್ರುತಿಗಳನ್ನು ಸಂಖ್ಯೆಯ ಇಯತ್ತೆಯಿಂದ ಬಹುಕಾಲದಿಂದ ನಮ್ಮ ದೇಶದಲ್ಲಿ ಹೇಳಲಾಗುತ್ತಿದ್ದರೂ ಅವುಗಳಿಗೆ ಹೆಸರುಗಳನ್ನು ಕೊಟ್ಟಿರುವುದು ಸಂಗೀತಶಾಸ್ತ್ರದ ಚರಿತ್ರೆಯಲ್ಲಿ ಸುಮಾರು ಸಾವಿರ ವರ್ಷಗಳಷ್ಟು ಮಾತ್ರ ಹಿಂದೆ ಎಂಬುದು ಚಿಂತ್ಯವಾಗಿದೆ. ಹೀಗೆ ಹೆಸರುಗಳನ್ನು ಕೊಟ್ಟಿರುವುದಾದರೂ ದ್ವಾವಿಂಶತಿ, ಷಟ್‌ಷಷ್ಟಿ, ಚತುರ್ವಿಂಶತಿ ಮತ್ತು ಅಷ್ಟಾದಶ ಶ್ರುತಿಪಕ್ಷಗಳಲ್ಲಿ ಮಾತ್ರ. ದ್ವಾವಿಂಶತಿ ಶ್ರುತಿಪಕ್ಷವು ಅತ್ಯಂತ ಪ್ರಚಾರವನ್ನು ಪಡೆದಿದ್ದುದರಿಂದ ಈ ಇಪ್ಪತ್ತೆರಡರ ಹೆಸರುಗಳಲ್ಲಿ ಪಕ್ಷಾಂತರಗಳು ವಿಶೇಷವಾಗಿವೆ.

ಶ್ರುತಿಗಳಿಗೆ ಹೆಸರುಗಳನ್ನು ಕೊಟ್ಟಿರುವುದರಲ್ಲಿ ಮೊದಲಿಗನು ಶಿಕ್ಷಾಕಾರನಾದ ನಾರದನೇ. ಶ್ರುತಿಯೆಂಬ ಶಬ್ದವನ್ನು ಅವನು ಸ್ವರದ ವಿಶೇಷ ಕಂಪನಪ್ರಯತ್ನ ಎಂಬ ಅರ್ಥದಲ್ಲಿಯೇ ಹೆಚ್ಚಾಗಿ ಬಳಸಿದ್ದಾನೆ; ಸಂಗೀತ ಶಾಸ್ತ್ರದಲ್ಲಿ ರೂಢಿಗೆ ಬಂದ ಶ್ರುತಿಕಲ್ಪನೆಗಳು ಅಲ್ಲಿ ಬೀಜರೂಪದಲ್ಲಿ ಮಾತ್ರ ಕಂಡುಬರುತ್ತವೆ ಎಂಬುದನ್ನು

237 Glen Haydon, Introduction to Musicology, p. 68.

ಹಿಂದೆಯೇ (ಪು. 198-201) ವಿವರಿಸಲಾಗಿದೆ. ಇಂತಹ ಶ್ರುತಿಗಳು, ಎಂದರೆ ಕಂಪನರೀತಿಗಳು ಸಾಮ ಗಾಯನದಲ್ಲಿ ಐದು ಬಗೆ. ಇವುಗಳು ಮುಖ್ಯವಾಗಿ ಸ್ವರಸಂದರ್ಭವನ್ನು, ಎಂದರೆ ಯಾವ ಸ್ವರವು ಹಿಂದಿದೆ, ಯಾವುದು ಮುಂದಿದೆ ಎಂಬುದನ್ನು ಅವಲಂಬಿಸುತ್ತವೆ. ಇವುಗಳಿಗೆ ದೀಪ್ತಾ, ಆಯತಾ, ಕರುಣಾ, ಮೃದು, ಮಧ್ಯಾ ಎಂದು ಹೆಸರು. ಇವುಗಳನ್ನು ವಿವಿಧ ಶ್ರುತಿಗಳೆಂದು ನಾರದನು ವ್ಯವಹರಿಸಿದ್ದಾನೆಯೇ ಹೊರತು, ಶ್ರುತಿ-ಜಾತಿಗಳೆಂದು ಎಲ್ಲಿಯೂ ಕರೆದಿಲ್ಲ. ಇವುಗಳನ್ನು ಶ್ರುತಿಜಾತಿಗಳೆಂದು ಮೊದಲು ಕರೆದುದು ಬಹುಶಃ ಯಾಜ್ಞವಲ್ಕ್ಯನೇ. [86]

ಸಂಗೀತಶಾಸ್ತ್ರದಲ್ಲಿಯಾದರೂ ಭರತನೂ ಅವನ ವ್ಯಾಖ್ಯಾನಕಾರರೂ, ದತ್ತಿಲ, ಮತಂಗ, ಚಾಳುಕ್ಯ ಸೋಮೇಶ್ವರ, ಅವನ ಮಗನಾದ ಜಗದೇಕಮಲ್ಲ (?) ಇವರುಗಳೂ ಶ್ರುತಿಗಳಿಗೆ ಹೆಸರನ್ನು ಹೇಳಿರುವುದು ಕಂಡು ಬಂದಿಲ್ಲ. ಕೋಹಲ, ಕಾಶ್ಯಪ, ದುರ್ಗಾಶಕ್ತಿ, ಯಾಷ್ಟಿಕ, ರುದ್ರಟ, ಶಾರ್ದೂಲ, ತುಂಬುರು, ನಾರದ, ನಂದಿಕೇಶ್ವರ, ಬ್ರಹ್ಮಾ, ಮಹೇಶ್ವರ, ವಿಶ್ವಾವಸು, ವಿಶಾಖಿಲ, ವೇಣ ಮೊದಲಾದ ಪೂರ್ವಾಚಾರ್ಯರೂ ಶ್ರುತಿಗಳಿಗೆ ಹೆಸರುಗಳನ್ನು ಹೇಳಿರಲಾರರು. ಹೇಳಿದ್ದರೆ, ಶ್ರುತಿ ವಿಷಯಕವಾಗಿ ಇವರುಗಳಲ್ಲಿ ಅನೇಕರಿಂದ ಮತಗಳನ್ನು ಸಂಗ್ರಹಿಸುವ, ಸ್ವರಗಳ ಕುಲ, ದೈವತ, ಋಷಿ ಇತ್ಯಾದಿಯಾಗಿ ಮೊಟ್ಟಮೊದಲನೆಯ ಬಾರಿಗೆ ಆಗಮಶಾಸ್ತ್ರದಿಂದ ವರ್ಣನಾಸಾಮಗ್ರಿಯನ್ನು ಉದ್ಧರಿಸುವ ಮತಂಗನು ಈ ವಿಷಯದಲ್ಲಿ ಸೂಚನೆಯನ್ನಾದರೂ ಕೊಡುತ್ತಿದ್ದನು.

## 1. ಇಪ್ಪತ್ತೆರಡು ಶ್ರುತಿಗಳು

ಉಪಲಬ್ಧ ದತ್ತಿಲದಲ್ಲಿಯಾಗಲೀ, ಇತರ ಗ್ರಂಥಗಳು ಅದನ್ನು ಉದ್ಧರಿಸುವ ಭಾಗಗಳಲ್ಲಿಯಾಗಲೀ ಇಪ್ಪತ್ತೆರಡು ಶ್ರುತಿಗಳ ಹೆಸರುಗಳಿಲ್ಲವೆಂದು ಈಗಾಗಲೇ ಹೇಳಿದೆ. ಆದರೂ ಅಹೋಬಲನ ಸಂಗೀತಪಾರಿಜಾತವನ್ನು ಸಂಪಾದಿಸಿ ಹಿಂದಿಯಲ್ಲಿ ಅನುವಾದ ಮಾಡಿರುವ "ಕಲಿಂದ"ನು ದಂತಿಲ (= ದತ್ತಿಲ)ನದೆಂದು ಈ ಕೆಳಗಿನ ಶ್ರುತಿನಾಮಗಳನ್ನು ಉದ್ಧರಿಸುತ್ತಾನೆ :

ನಾಂದೀ ಚಾಲನಿಕಾ ರಸಾ ಚ ಸುಮುಖೀ ಚಿತ್ರಾ ವಿಚಿತ್ರಾ ಘನಾ ।
ಮಾತಂಗೀ ಸರಸಾ ಭೃತಾ ಮಧುಕರೀ ಮೈತ್ರೀ ಶಿವಾ ಮಾಧವೀ ॥
ಬಾಲಾ ಶಾರ್ಙ್ಗರವೀ ಕಲಾ ಕಲರವಾ ಮಾಲಾ ವಿಶಾಲಾ ಜಯಾ ।
ಮಾತ್ರೇತಿ ಶ್ರುತಯಃ ಪುರಾಣಕವಿಭಿರ್ದ್ವಾವಿಂಶತಿಃ ಕೀರ್ತಿತಾಃ ॥ [238]

ಆದರೆ ಈ ಉದ್ಧೃತಿಯು ವಿಶ್ವಸನೀಯವಲ್ಲ. ಇದನ್ನು ಎಲ್ಲಿಂದ ಎತ್ತಿಕೊಂಡಿದ್ದದ್ದೆಂದು ಕಲಿಂದನು ತಿಳಿಸದಿದ್ದರೂ ಶುಭಂಕರನ ಸಂಗೀತದಾಮೋದರದಲ್ಲಿ ಇದಕ್ಕೆ ಅಕ್ಷರಶಃ ಪರಸ್ಪರತೆಯು ದೊರೆಯುತ್ತದೆ. ಮೇಲಿನ ಉದ್ಧೃತಿಯಲ್ಲಿನ ಭೃತಾ ಎಂಬುದರ ಬದಲು ಶುಭಂಕರನು ಅಮೃತಾ ಎಂದು ಮಾತ್ರ ವ್ಯತ್ಯಾಸವನ್ನು ಹೇಳುತ್ತಾನೆ. ಇದನ್ನು ಮುಂದೆ ಹೇಳಲಾಗುವುದು.

ದ್ವಾವಿಂಶತಿ ಶ್ರುತಿಗಳಿಗೆ ಮುಂದೆ ಹೇಳುವ ತೀವ್ರಾ ಮೊದಲಾದ ಹೆಸರುಗಳೇ ಇಂದು ಅತ್ಯಂತ ರೂಢಿಯಲ್ಲಿ ಇರುವಂತಹವುಗಳು. ಇದನ್ನು ಕೆಲವು ಅಪವಾದಗಳೊಡನೆ ಎಲ್ಲಾ ಸಂಗೀತಲಾಕ್ಷಣಿಕರೂ ಬಳಸಿದ್ದಾರೆ. ಚತುರ್ವಿಂಶತಿ ಅಥವಾ ಅಷ್ಟಾದಶಶ್ರುತಿಪಕ್ಷಗಳನ್ನು ಗ್ರಹಿಸುವ ಲಾಕ್ಷಣಿಕರು ಸಹ ಮತಾಂತರದಲ್ಲಿ ದ್ವಾವಿಂಶತಿ

238 "ಕಲಿಂದ" (ಸಂಪಾದಕ ಮತ್ತು ಅನುವಾದಕ), ಅಹೋಬಲ, ಸಂಗೀತಪಾರಿಜಾತ, ಪು. 14.

ಶ್ರುತಿಪಕ್ಷವನ್ನೂ ಅವುಗಳಿಗೆ ತೀವ್ರಾ, ಕುಮುದ್ವತೀ ಮೊದಲಾದ ಹೆಸರುಗಳನ್ನೂ ಸ್ವೀಕರಿಸುತ್ತಾರೆ. ಇವುಗಳನ್ನು ಕಾಶ್ಯಪಯಾಷ್ಟಿಕರಿಂದ ಸಂಗ್ರಹಿಸಿದುದಾಗಿ ಗೋವಿಂದದೀಕ್ಷಿತನು ಸಂಗೀತಸುಧೆಯಲ್ಲಿ ಹೇಳುತ್ತಾನೆ :

ದ್ವಾವಿಂಶತಿಃ ಕಾಶ್ಯಪಯಾಷ್ಟಿಕಾದ್ಯೈಃ ಶ್ರುತಿಪ್ರಭೇದಾಃ ಕಥಿತಾಃ ಸ್ಯುರೇವಮ್ | [239]

ಇದು ನಿಜವಾದರೆ ದ್ವಾವಿಂಶತಿಶ್ರುತಿಗಳ ಹೆಸರುಗಳಿಗೆ ಉಪಲಬ್ಧ ಆಕರಗಳಲ್ಲಿ ಕಾಶ್ಯಪ ಮತ್ತು ಯಾಷ್ಟಿಕರೇ ಪ್ರಾಚೀನತಮರಾಗುತ್ತಾರೆ. ಶ್ರುತಿಜಾತಿಗಳನ್ನು ವಿವರಿಸುವ, ವಿನಿಯೋಗಿಸುವ ಸಂದರ್ಭದಲ್ಲಿ ಗೋವಿಂದ ದೀಕ್ಷಿತನು ಆಡಿರುವ ಮಾತುಗಳನ್ನು ಗಮನಿಸಿದರೆ ಅವನು ನಿಜವಾಗಿಯೂ ಕಾಶ್ಯಪ, ಯಾಷ್ಟಿಕ, ದುರ್ಗಾಶಕ್ತಿ, ಶಾರ್ದೂಲ ಮೊದಲಾದವರ ಗ್ರಂಥಗಳನ್ನು ನೋಡಿದ್ದನೇ ಎಂಬ ಸಂದೇಹವು ಬರುತ್ತದೆ. ಉದ್ಧೃತಿ, ಸ್ಮರಣೆ ಮೊದಲಾದವುಗಳಲ್ಲದೆ ಅನಸಂಧಿಗ್ಧವಾಗಿ ಈ ಹೆಸರುಗಳು ಬಳಕೆಯಾಗಿರುವುದು ನಾನ್ಯದೇವನಲ್ಲಿಯೇ ಮೊದಲು. ಶ್ರೀ ಶಾರ್ಙ್ಗದೇವನು ಬಹುಮಟ್ಟಿಗೆ ಇವನಿಂದಲೇ ಈ ಹೆಸರುಗಳನ್ನು ಪಡೆದುಕೊಂಡಿರುವಂತೆ ಕಾಣುತ್ತದೆ :

1) ತೀವ್ರಾ 2) ಕುಮುದ್ವತೀ 3) ಮಂದಾ 4) ಛಂದೋವತೀ–ಷಡ್ಜ; 5) ದಯಾವತೀ 6) ರಂಜನೀ 7) ರಕ್ತಿಕಾ–ರಿಷಭ ; 8) ರೌದ್ರೀ 9) ಕ್ರೋಧಾ–ಗಾಂಧಾರ ; 10) ವಜ್ರಿಕಾ 11) ಪ್ರಸಾರಿಣೀ 12) ಪ್ರೀತಿ 13) ಮಾರ್ಜನೀ–ಮಧ್ಯಮ ; 14) ಕ್ಷಿತೀ 15) ರಕ್ತಾ 16) ಸಂದೀಪನೀ 17) ಆಲಾಪಿನೀ–ಪಂಚಮ ; 18) ಮದಂತೀ 19) ರೋಹಿಣೀ 20) ರಮ್ಯಾ–ಧೈವತ ; 21) ಉಗ್ರಾ 22) ಕ್ಷೋಭಿಣೀ–ನಿಷಾದ. [240]

## 2. ಅರವತ್ತಾರು ಶ್ರುತಿಗಳು

ಮಂದ್ರ, ಮಧ್ಯ ಮತ್ತು ತಾರಗಳೆಂಬ ತ್ರಿಸ್ಥಾಯಿಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತೆರಡರಂತೆ ಒಟ್ಟು ಅರವತ್ತಾರು ಶ್ರುತಿಗಳು ಸಿದ್ಧಿಸುತ್ತವೆಂದು ಕೋಹಲನು ಅನ್ಯರಿಂದ ಉದ್ಧರಿಸಿ ಹೇಳಿದುದನ್ನು ಮೇಲೆ ಸೂಚಿಸಿದೆ ಯಷ್ಟೆ. ಈ ಅರವತ್ತಾರಕ್ಕೂ ಹೆಸರುಗಳನ್ನು ಯಾರು ಮೊದಲು ಕೊಟ್ಟರೋ ತಿಳಿಯದು. ಕೋಹಲಮತದಲ್ಲಿ ಅರವತ್ತಾರು ಶ್ರುತಿಗಳ ಪ್ರಸ್ತಾಪವೇ ಇಲ್ಲ. ಇವುಗಳು ಮೊದಲು ಕಂಡುಬರುವುದು ಪಾರ್ಶ್ವದೇವನ ಸಂಗೀತ–ಸಮಯಸಾರದಲ್ಲಿ. ಮುದ್ರಿತ ಸಂಗೀತಸಮಯಸಾರದ ಪ್ರತಿಯಲ್ಲಿ ಈ ಭಾಗದಲ್ಲಿ ಗ್ರಂಥಪಾತವಿದೆ. ಆದರೆ ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಸಂಗೀತಸಮಯಸಾರದ ಹಸ್ತಪ್ರತಿಯೊಂದರಲ್ಲಿ ಅರವತ್ತಾರು ಶ್ರುತಿಗಳಿಗೆ ಹೆಸರುಗಳಿವೆ ; [241] ಆದರೆ ಶ್ಲೋಕರೂಪದಲ್ಲಿ ಅಲ್ಲ :

**A ಮಂದ್ರಸ್ಥಾಯಿಯಲ್ಲಿ :** 1) ಮಂದ್ರಾ 2) ಅನುಮಂದ್ರಾ 3) ಘೋರಾ 4) ಘೋರತರಾ 5) ಮಂಡನಾ 6) ಸೌಖ್ಯಾ 7) ಸುಮನಾ 8) ಪುಷ್ಕರಾ 9) ಶಂಕಿನೀ 10) ಉತ್ಪಲಾ 11) ಅನುನಾಸಿಕಾ 12) ಘೋಷಾವತೀ 13) ಲೀನಗಾಥಾ 14) ಧ್ವನಿ 15) ಆವರ್ತನೀ 16) ರಣಾ 17) ಗಂಭೀರಾ 18) ದೀರ್ಘತಾರಾ 19) ಅತಿನಾದಿನೀ 20) ಮಂದ್ರಾ 21) ಸುಪ್ರಸನ್ನಾ 22) ಪ್ರಸನ್ನಾ

239 ಗೋವಿಂದದೀಕ್ಷಿತ, ಸಂಗೀತಸುಧಾ, I, 128, ಪು. 18.

240 ಉದಾಹರಣೆಗೆ, ನಾನ್ಯದೇವ, ಉ. ಗ್ರಂ., III, 93–113, ಪು. 99–104 ; ಶಾರ್ಙ್ಗದೇವ, ಉ. ಗ್ರಂ., I, 3, 27-38 ; ಗೋವಿಂದ ದೀಕ್ಷಿತ, ಉ. ಗ್ರಂ., I, 124-141, ಪು. 17-19 ; ಶ್ರೀಕಂಠ, ರಸಕೌಮುದಿ, I, 40-45, ಪು. 6 ; ಪೋಲೂರಿ ಗೋವಿಂದಕವಿ, ರಾಗತಾಳ ಚಿಂತಾಮಣಿ, II, 81–87, ಪು. 52–53, ಇತ್ಯಾದಿ.

241 ಪಾರ್ಶ್ವದೇವ, ಉ. ಗ್ರಂ., ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಗ್ರಂಥಭಂಡಾರದ ಹಸ್ತಪ್ರತಿ, A.67, ಪು. 2–3.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

**B ಮಧ್ಯಸ್ಥಾಯಿಯಲ್ಲಿ :** 1) ನಾದಾಂತಾ 2) ನಿಷ್ಕಲಾ 3) ಗೂಢಾ 4) ಸಕಲಾ 5) ಮಧುರಾ 6) ಏಕಾಕ್ಷರೀ 7) ಭೃಂಗಜಾತೀ 8) ಸರಗೀತೀ 9) ಕರಂಜಿಕಾ 10) ಪೂರ್ಣಾ 11) ಅಲಂಕಾರಿಣೀ 12) ವಾಂಶೀ 13) ವೈಣುಕೀ 14) ಲಲಿತಾ 15) ತ್ರಿಸ್ಥಾನಾ 16) ಸುಸ್ವರಾ 17) ಸೌಮ್ಯಾ 18) ಅಂಗಾ 19) ಭಾಷಾಂಗಾ 20) ವಾರ್ತ್ತಿಕಾ 21) ಸಂಪೂರ್ಣಾ 22) ಪ್ರಸನ್ನಾ

**C ತಾರಸ್ಥಾಯಿಯಲ್ಲಿ :** 1) ಈಶ್ವರೀ 2) ಕೌಮಾರೀ 3) ಅಮರಾಲೀ 4) ಮನೋರಮಾ 5) ವೈಣುಕೀ 6) ಸುಸ್ನಿಗ್ಧಾ 7) ದಿವ್ಯಾಂಗಾ 8) ಸುಲಲಿತಾ 9) ವಿದ್ರುಮಾ 10) ಮಹಾಕಾಲೀ 11) ಶಶಿನೀ 12) ಕಾಲಜಾ 13) ಕಾಲೀ 14) ಏಕಾಕ್ಷರಾ 15) ಸೂಕ್ಷ್ಮಾ 16) ಅತಿಸೂಕ್ಷ್ಮಾ 17) ಸುಪುಷ್ಟಾ 18) ವಿಸ್ಪಷ್ಟಾ 19) ಕಾಕಲೀ 20) ಕರಾಲೀ 21) ವಿಸ್ಫುಟಾ 22) ಅಂತರ್ಭೇದೀ

ಇದು ಅಶುದ್ಧವಾದ ಪಾಠವೆಂಬುದು ಸ್ಪಷ್ಟವೇ ಆಗಿದೆ ; ಏಕೆಂದರೆ A1–A20, B13–C5, A22–B22, B6–C14, ಮೊದಲಾದ ಯುಗ್ಮಗಳು ಸಮಾನಗಳೇ ಆಗಿವೆಯಷ್ಟೆ. C18–C21 ಮುಂತಾದ ಎಡೆಗಳಲ್ಲಿಯೂ ಸಹ ಸಮಾನಾರ್ಥಗಳೇ ಇವೆ. ಇವುಗಳ ಹೆಸರುಗಳನ್ನು ಸಿಂಹಭೂಪಾಲನು ತನ್ನ ಸಂಗೀತಸುಧಾನಿಧಿಯಲ್ಲಿ ಪಾರ್ಶ್ವದೇವನಿಂದಲೇ ಹೆಚ್ಚು ಶುದ್ಧಪಾಠದಲ್ಲಿ ಉದ್ಧರಿಸುತ್ತಾನೆ :[242]

ಮಂದ್ರಾ ಚೈವಾತಿಮಂದ್ರಾ ಚ ಘೋರಾ ಘೋರತರಾ ತಥಾ ।
ಮಂಡನಾ ಚ ತಥಾ ಸೌಮ್ಯಾ ಸುಮನಾಃ ಪುಷ್ಕರಾ ತಥಾ ॥
ಶಂಖಿನೀ ಚೈವ ನೀಲಾ ಚ ಉತ್ಪಲಾ ಚಾನುನಾಸಿಕಾ ।
ಘೋಷಾವತೀ ಲೀನನಾದಾ ಆವರ್ತನ್ಯಪಿ ಚಾಪರಾ ॥
ರಣದಾ ಚೈವ ಗಂಭೀರಾ ದೀರ್ಘತಾರಾ ಚ ನಾದಿನೀ ।
ಮಂದ್ರಜಾ ಸುಪ್ರಸನ್ನಾ ಚ ನಿನದಾ **ಮಂದ್ರಸಪ್ತಕೇ** ॥[243]
ನಾದಾಂತಾ ನಿಷ್ಕಲಾ ಗೂಢಾ ಸಕಲಾ ಮಧುರಾ ಗಲೀ ।
ಏಕಾಕ್ಷರಾ ಭೃಂಗಜಾತೀ ರಸಗೀತೀ ಸುರಂಜಿಕಾ ॥
ಪೂರ್ಣಾ ಽಲಂಕಾರಿಣೀ ಚೈವ ವಾಂಶಿಕಾ ವೈಣಿಕಾ ತಥಾ ।
ತ್ರಿಸ್ಥಾನಾ ಸುಸ್ವರಾ ಸೌಮ್ಯಾ ಭಾಷಾಂಗೀ ವಾರ್ತ್ತಿಕಾ ತಥಾ ॥
ಸಂಪೂರ್ಣಾ ಚ ಪ್ರಸನ್ನಾ ಚ ಸರ್ವವ್ಯಾಪನಿಕಾ ತಥಾ ।
ದ್ವಾವಿಂಶತಿಃ ಸಮಾಖ್ಯಾತಾಃ ಶ್ರುತಯೋ **ಮಧ್ಯಸಪ್ತಕೇ** ॥[243]
ಈಶ್ವರೀ ಚೈವಾ ಕೌಮಾರೀ ಸಮರಾಲೀ ತಥಾ ಪರಾ ।
ಭೋಗವೀರ್ಯಾ ಮನೋರಾಮಾ (? ಮನೋರಮಾ ?) ಸುಸ್ನಿಗ್ಧಾ ಚ ತಥಾ ಪರಾ ॥
ದಿವ್ಯಾಂಗಾ ಽಥೋ ಸುಲಲಿತಾ ವಿದ್ರುಮಾ ಚ ತಥಾ ಪರಾ ।
ಮಹಾಕಾರ್ಾ ಶಂಕಿನೀ ರಾಕಾಲಜ್ಞಾ ಚೈವ ತಥಾ ಪರಾ ॥
ಕಾಲೀ ಸೂಕ್ಷ್ಮಾ ಽತಿಸೂಕ್ಷ್ಮಾ ಚ ಪುಷ್ಟಾ ಚೈವ ಸುಪುಷ್ಟಿಕಾ ।
ವಿಸ್ಪಷ್ಟಾ ಕಾಕಲೀ ಚೈವ ಕರಾಲೀ ಚ ತಥಾ ಪರಾ ॥
ವಿಸ್ಫೋಟಾಂತರ್ಭೇದಿನೀ ಚ ಇತ್ಯೇತಾಸ್ತಾರಸಪ್ತಕೇ ।[243]

242 ಸಿಂಹಭೂಪಾಲ, ಉ. ಗ್ರಂ., ಪು. 74-75. 243 ದಪ್ಪವಾದ ಅಚ್ಚುಕೂಟವು ಸ್ಪಷ್ಟತೆಗಾಗಿ ನಾನು ಹಾಕಿದುದು.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಈ ಎರಡು ಪಾಠಗಳಲ್ಲಿಯೂ A 2, 6, 9, 13, 16, 19, 20, 22; B 6, 8, 9, 13; C 3, 11, 13, 21 ಈ ಹೆಸರುಗಳಲ್ಲಿನ ಪಾಠಭೇದಗಳನ್ನು ಗಮನಿಸಬಹುದು. ಅಂತೆಯೇ ಹಸ್ತಪ್ರತಿಯ ಧ್ವನಿ (A 14), ಲಲಿತಾ (B 14), ಅಂಗಾ (B 18), ವೈಣುಕೀ (C 15), ಕಾಲಜಾ (C 12) ಮತ್ತು ಏಕಾಕ್ಷರಾ (C 14) ಗಳಿಗೆ ಬದಲು ಸಿಂಹಭೂಪಾಲನ ಉದ್ಧೃತಿಯಲ್ಲಿ ಕ್ರಮವಾಗಿ ನೀಲಾ (A 10), ಗಲೀ (B 5), ಸರ್ವವ್ಯಾಪನಿಕಾ (C 22), ಭೋಗವೀರ್ಯಾ (C 4), ರಾಕಾಲಜ್ಜಾ (C 13) ಮತ್ತು ಪುಷ್ಟಾ (C 17) ಎಂಬ ಹೆಸರುಗಳಿರುವುದನ್ನೂ ಗಮನಿಸಬಹುದು. ಈ ಪಾಠಾಂತರಗಳ ಮತ್ತೊಂದು ವೈಶಿಷ್ಟ್ಯವೆಂದರೆ ಈ ಪರಸ್ಪರವಾದ ಭಿನ್ನನಾಮಗಳು ಒಂದೇ ಸಂಖ್ಯೆಯವಲ್ಲದಿರುವುದು; ಎಂದರೆ ಒಂದೇ ಸ್ಥಾನದಲ್ಲಿರುವ ಶ್ರುತಿಗೆ ಭಿನ್ನವಾದ ಹೆಸರುಗಳನ್ನು ಎರಡೂ ಆಕರಗಳು ಕೊಡುವುದಿಲ್ಲ. ಹೀಗೆ ಉದಾಹರಣೆಗೆ, ಮಂದ್ರಸ್ಥಾಯಿಯ ಇಪ್ಪತ್ತೆರಡು ಶ್ರುತಿಗಳಲ್ಲಿ A 14 ಎಂಬುದಕ್ಕೆ ನೀಲಾ ಎಂಬ ಹತ್ತನೆಯ ಹೆಸರನ್ನು ಬಿಟ್ಟರೆ ಹಸ್ತಪ್ರತಿಯ 1-9, ಉದ್ಧೃತಿಯ 1-9 ಈ ಶ್ರುತಿಗಳೂ ಹಸ್ತಪ್ರತಿಯ 10-13 ಮತ್ತು ಉದ್ಧೃತಿಯ 11-14 ಈ ಶ್ರುತಿಗಳೂ, ಹಸ್ತಪ್ರತಿಯ 15-21 ಮತ್ತು ಉದ್ಧೃತಿಯ 15-21 ಶ್ರುತಿಗಳೂ ನಾಮಸಾದೃಶ್ಯಗಳನ್ನು ಪಡೆದಿವೆ. ಎರಡರಲ್ಲಿಯೂ ಇಪ್ಪತ್ತೆರಡನೆಯ ಹೆಸರು ಬೇರೆ ಬೇರೆಯಾಗಿವೆ. ಕಾಲಜಾ ಎಂಬ (C 12) ಶ್ರುತಿಗೆ ಪರಸ್ಪರವಾಗಿ ಸಿಂಹಭೂಪಾಲನ ಉದ್ಧೃತಿಯಾದ ರಾಕಾ ಮತ್ತು ಲಜ್ಜಾ ಎಂಬುದನ್ನು ಒಂದೇ ಪದವಾಗಿ ವ್ಯವಹರಿಸಬೇಕು.

ಇದೇ ಹೆಸರುಗಳನ್ನು ಅಲ್ಲಲ್ಲಿ ಪಾಠಾಂತರಗಳೊಡನೆ ಲಕ್ಷ್ಮೀನಾರಾಯಣನು ಸಂಗೀತಸೂರ್ಯೋದಯದಲ್ಲಿ ಬಳಸುತ್ತಾನೆ.[244] ಮೈಸೂರಿನ ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರದಲ್ಲಿರುವ ಈ ಹಸ್ತಪ್ರತಿಯ ಈ ಭಾಗವು ಸಿಂಹಭೂಪಾಲನ ಉದ್ಧೃತಿಯನ್ನೇ ಅಕ್ಷರಶಃ ಹೋಲುತ್ತಿದ್ದು ವಿಶ್ವಾಸಾರ್ಹವಾಗಿದೆ. ಇಲ್ಲಿಯೂ ಸಹ ಈ ಶ್ರುತಿಗಳ ಹೆಸರನ್ನು ಪೂರ್ವೋಕ್ತವೆಂದು ಮಾತ್ರ ಹೇಳಿದೆ. ಇದರಲ್ಲಿ ಸಿಂಹಭೂಪಾಲನಿಂದ ಮಂದ್ರಸ್ಥಾಯಿಯಲ್ಲಿ ಉದ್ಧೃತವಾದ ಮಂಡನಾ (5), ಶಂಖಿನೀ (9), ಉತ್ಪಲಾ (11), ಘೋಷಾವತೀ (13), ಲೀನನಾದಾ (14), ರಣದಾ (16) ನಾದಿನೀ(19)ರ ಬದಲು ಕ್ರಮವಾಗಿ ಅದೇ ಸ್ಥಾನಗಳಲ್ಲಿ ಮಂಡಲಾ, ಶಂಕಿನೀ, ಉತ್ಫಲ್ಲಾ, ಘೋರಾವತೀ, ಕರಿನಾದಾ, ರಣವಾ ಮತ್ತು ಅತಿನಾದಿನೀ ಎಂಬ ಹೆಸರುಗಳಿವೆ. ಸಿಂಹಭೂಪಾಲನು ಮಧ್ಯಸ್ಥಾಯಿಯಲ್ಲಿ ಹೆಸರಿಸುವ ನಾದಾಂತಾ (1), ಮಧುರಾ, ಗಲೀ (5, 6), ರಸಗೀತೀ (9), ಸುರಂಜಿಕಾ (10) ವಾಂಶಿಕಾ (13) ಮತ್ತು ವೈಣಿಕಾ (14) ಶ್ರುತಿಗಳ ಬದಲು ಅದೇ ಸ್ಥಾನಗಳಲ್ಲಿ ಕ್ರಮವಾಗಿ ನಾಗಾಂತಾ, ಮಧೂವಶಾ, ರಸನೀನೀ, ಸುರಶೀರ್ಷಿಕಾ, ವಾಸಿಕಾ ಮತ್ತು ವೈನಿಕಾ ಎಂಬವುಗಳಿವೆ. ಹಾಗೆಯೇ ಸಿಂಹಭೂಪಾಲನು ತಾರಸ್ಥಾಯಿಯಲ್ಲಿ ಪಾರ್ಶ್ವದೇವನಿಂದ ಉದ್ಧರಿಸುವ ಸವರಾಲೀ (3), ಭೋಗವೀರ್ಯಾ (4), ದಿವ್ಯಾಂಗಾ (7), ವಿದ್ರುಮಾ (9), ಮಹಾರ್ಕಾ (10), ರಾಕಾಲಜ್ಜಾ (12), ಕಾಲೀ, ಸೂಕ್ಷ್ಮಾ (13-14) ಎಂಬ ಹೆಸರುಗಳ ಬದಲು ಈ ಹಸ್ತಪ್ರತಿಯಲ್ಲಿ ಅದೇ ಸ್ಥಾನಗಳಲ್ಲಿ ಕ್ರಮವಾಗಿ ಸವರಾಕೀ, ಭೋಗಾದಿತ್ಯಾ, ದಿವ್ಯದೇಹ, ದಿದ್ರುಮಾ, ಮಹಾಕಾಶೀ, ಕಾಲಜಾತಾ ಮತ್ತು ರಾಮಮಾಕ್ಷಾಲಿ ಎಂಬ ನಾಮಾಂತರಗಳಿವೆ. ಇವುಗಳಲ್ಲಿ ಹಲವು ಲಿಪಿಕಾರನ ದೋಷದಿಂದ ಹುಟ್ಟಿರಬಹುದು.

### 3. ಇಪ್ಪತ್ತೆರಡು ಶ್ರುತಿಗಳಿಗೆ ನಾಮಾಂತರಗಳು

ಈ ಅರವತ್ತಾರು ಶ್ರುತಿಗಳಲ್ಲಿ ಮಧ್ಯಸ್ಥಾಯಿಯ ನಾದಾಂತಾ ಮುಂತಾದ ಇಪ್ಪತ್ತೆರಡನ್ನು ಮಾತ್ರ ದ್ವಾವಿಂಶತಿಶ್ರುತಿಪಕ್ಷವನ್ನು ಗ್ರಹಿಸುವ ಇತರ ಕೆಲವು ಲಾಕ್ಷಣಿಕರು ಅಲ್ಲಲ್ಲಿ ಪಾಠಾಂತರಗಳೊಡನೆ ಉದ್ಧರಿಸಿಕೊಂಡಿದ್ದಾರೆ.

244 ಲಕ್ಷ್ಮೀನಾರಾಯಣ, ಸಂಗೀತಸೂರ್ಯೋದಯ, ಶ್ರೀವರಲಕ್ಷ್ಮೀ ಅಕಾಡಮಿಯ ಗ್ರಂಥಭಂಡಾರದ ಹಸ್ತಪ್ರತಿ, ಪು.223-224.

ಹೀಗೆ ಪಾಲ್ಕುರಿಕೆ ಸೋಮನಾಥನು ಪಂಡಿತಾರಾಧ್ಯಚರಿತ್ರೆಯಲ್ಲಿಯೂ [245] ನಿಜಗುಣನು ವಿವೇಕಚಿಂತಾಮಣಿಯಲ್ಲಿಯೂ [246] ಸುಧಾಕಲಶನು ಸಂಗೀತೋಪನಿಷತ್ ಸಾರೋದ್ಧಾರದಲ್ಲಿಯೂ [247] ಇದನ್ನೇ ಮುಮ್ಮಡಿ ಚಿಕ್ಕ ಭೂಪಾಲನು ಅಭಿನವಭರತಸಾರಸಂಗ್ರಹದಲ್ಲಿಯೂ [248] ಭಾವಭಟ್ಟನು ಅನೂಪಸಂಗೀತವಿಲಾಸದಲ್ಲಿಯೂ [248 *] ವಿವೇಕಚಿಂತಾಮಣಿಯ ಪಾಠವನ್ನು ಮುಮ್ಮಡಿಕೃಷ್ಣರಾಜವಡೆಯರು ಶ್ರೀತತ್ತ್ವನಿಧಿಯಲ್ಲಿಯೂ, ಸ್ವರಚೂಡಾಮಣಿಯಲ್ಲಿಯೂ [249] ಈ ಹೆಸರುಗಳನ್ನು ಅಲ್ಲಲ್ಲಿ ಬೇರೆ ಬೇರೆಯಾಗಿ ಉದ್ಧರಿಸಿಕೊಳ್ಳುತ್ತಾರೆ. ಇದರಲ್ಲಿ ಸುಧಾಕಲಶನು ಹೇಳುವ ಹೆಸರುಗಳು ಮೊದಲನೆಯ ಐದನ್ನು ಬಿಟ್ಟರೆ ಉಳಿದೆಲ್ಲವೂ ಭಿನ್ನವಾಗಿಯೇ ಇವೆ: 1) ನಾದಾಂತಾ 2) ನಿಷ್ಕಲಾ 3) ಗೂಢಾ 4) ಸಕಲಾ 5) ಮಧುರಾ 6) ಕಾಮಾಂಗಾ 7) ಮಧುರಾ 8) ಶ್ಯಾಮಾ 9) ತಾರಾ 10) ಚಂದ್ರಾನನಾ 11) ಶುಭಾ 12) ಅಸಂಪೂರ್ಣಾ 13) ಅಪರಾ 14) ಪೂರ್ಣಾ 15) ರಂಜಿಕಾ 16) ವಾತಿಕಾ (? ವಾರ್ತಿಕಾ) 17) ಪ್ರಸನ್ನಾ 18) ಮದನಾ 19) ವಾಮಾ 20) ಬಾಲಾ 21) ಮಧುಮತೀ 22) ? ಈ ಭಾಗದಲ್ಲಿ ಗ್ರಂಥಪಾತವಾಗಿರುವುದು ನಿಶ್ಚಯ. ಆದರೆ ಗ್ರಂಥಸಂಪಾದನೆಗೆ ಇಲ್ಲಿ ಬಳಕೆಯಾಗಿರುವ ನಾಲ್ಕು ಆಕರಗಳಲ್ಲಿಯೂ ಇಷ್ಟೇ ಪಾಠವಿರುವುದು ಚಿಂತ್ಯವಾಗಿದೆ. ಅಲ್ಲದೆ ಇಲ್ಲಿ ಐದನೆಯ ಹೆಸರು ಏಳನೆಯದರಲ್ಲಿ ಪುನರಾವರ್ತಿತವಾಗಿರುವುದು ಗಮನಾರ್ಹವಾಗಿದೆ. ಇಲ್ಲಿಂದಲೇ ಉದ್ಧರಿಸಿಕೊಂಡಿರುವುದಾಗಿ ಮುಮ್ಮಡಿ ಚಿಕ್ಕ ಭೂಪಾಲನು ಹೇಳಿದರೂ ಅಲ್ಲಿನ ಹೆಸರುಗಳು ಬಹುಮಟ್ಟಿಗೆ ಬೇರೆಯಾಗಿವೆ. ಭಾವಭಟ್ಟನು ಸುಭಗಾ ಎಂಬುದನ್ನು ಇಪ್ಪತ್ತೆರಡನೆಯ ಶ್ರುತಿಯೆಂದು ಕೊಡುತ್ತಾನೆ.[248 *] ಪಾಲ್ಕುರಿಕೆ ಸೋಮನಾಥ ಮತ್ತು ನಿಜಗುಣನು ಒಳಸಿರುವ ಹೆಸರುಗಳಲ್ಲಿ ಸ್ವಲ್ಪಮಟ್ಟಿನ ಸಾಮ್ಯಗಳು ಕಂಡುಬರುತ್ತವೆ.

ದ್ವಾವಿಂಶತಿ ಶ್ರುತಿಪಕ್ಷವನ್ನು ಗ್ರಹಿಸುವವರು ಇವೆರಡನ್ನೇ ಅಲ್ಲದೆ ಬೇರೆ ಪದ್ಧತಿಯ ಹೆಸರುಗಳನ್ನು ಶ್ರುತಿಗಳಿಗೆ ಕೊಟ್ಟಿರುವುದೂ ಅಲ್ಲಲ್ಲಿ ಕಂಡುಬರುತ್ತವೆ. ಉದಾಹರಣೆಗೆ, ರಾಮಕೃಷ್ಣಕವಿಯು ಜಗದೇಕ(ಮಲ್ಲ)ನದೆಂದು ಈ ಇಪ್ಪತ್ತೆರಡು ಶ್ರುತಿನಾಮಗಳನ್ನೂ ಅವುಗಳು ಸ್ವರಗಳಲ್ಲಿ ವಿನಿಯೋಗವಾಗಿರುವುದನ್ನೂ ಉದ್ಧರಿಸಿಕೊಳ್ಳುತ್ತಾನೆ:

1) ನಾಂದೀ 2) ವಿಶಾಲಾ 3) ಸುಮುಖೀ 4) ವಿಚಿತ್ರಾ-ಷಡ್ಜ; 5) ಚಿತ್ರಾ 6) ಘನಾ 7) ಚಾಲನಿಕಾ-ರಿಷಭ; 8) ಸರದ್ಯಾ 9) ಮಾಲಾ-ಗಾಂಧಾರ; 10) ಮಾಗಧೀ (? ಮಾಧವೀ ?) 11) ಶಿವಾ 12) ಮಾತಂಗೀ 13) ಮೈತ್ರಾ-ಮಧ್ಯಮ; 14) ಬಾಲಾ 15) ಕಲಾ 16) ಕಲರವಾ 17) ಶಾರ್ಙ್ಗರವಾ-ಪಂಚಮ; 18) ಮಾತ್ರಾ 19) ರಸಾ 20) ಅಮೃತಾ-ಧೈವತ; 21) ವಿಜಯಾ 22) ಮಧುಕರೀ-ನಿಷಾದ.[250]

---

245 ಪಾಲ್ಕುರಿಕೆ ಸೋಮನಾಥ, ಪಂಡಿತಾರಾಧ್ಯ ಚರಿತ್ರಮು, ಪರ್ವತಪ್ರಕರಣ, ಪು. 451.

246 ನಿಜಗುಣಶಿವಯೋಗಿ, ವಿವೇಕಚಿಂತಾಮಣಿ, ನಾಲ್ಕನೆಯ ಪ್ರಕರಣ, ಪು. 405.

247 ಸುಧಾಕಲಶ, ಸಂಗೀತೋಪನಿಷತ್ ಸಾರೋದ್ಧಾರ, III, 67-69, ಪು. 62.

248 ಮುಮ್ಮಡಿ ಚಿಕ್ಕಭೂಪಾಲ, ಅಭಿನವಭರತಸಾರಸಂಗ್ರಹ, II, 47-50, ಪು. 125.

248 * Bhavabhatta, Anupasangitavilasa, *extr.*, Sambamoorthy, P., South Indian Music, Book IV (3rd edn.), p. 119.

249 ಮುಮ್ಮಡಿ ಕೃಷ್ಣರಾಜ ಒಡೆಯರ್, ಸ್ವರಚೂಡಾಮಣಿ, ಉದ್ಧೃತಿ, ಶ್ರೀತತ್ತ್ವನಿಧಿ, ಪು. 175 ಬೆನ್ನು; ಮೈಸೂರಿನ ಪ್ರಾಚ್ಯವಿದ್ಯಾಸಂಶೋಧನಾಲಯದ ಶ್ರೀತತ್ತ್ವನಿಧಿಯ ಹಸ್ತಪ್ರತಿ.

250 ಜಗದೇಕಮಲ್ಲ, ಸಂಗೀತಚೂಡಾಮಣಿ (?) ಉದ್ಧೃತಿ, ರಾಮಕೃಷ್ಣಕವಿ, ಉ. ಗ್ರಂ., ಪು. 326, 621, 732, 607, 214, 193, 207, 710, 492, 482, 481, 509, 419, 121, 120, 660, 481, 538, 26, 608, 462.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಆದರೆ ಈ ಹೆಸರುಗಳು ಜಗದೇಕಮಲ್ಲನ ಸಂಗೀತಚೂಡಾಮಣಿಯ ಮುದ್ರಿತ ಪ್ರತಿಯಲ್ಲಿಯಾಗಲೀ ಶ್ರೀ ವರಲಕ್ಷ್ಮೀ ಅಕಾಡಮಿಯ ಗ್ರಂಥಭಂಡಾರದ ಹಸ್ತಪ್ರತಿಯಲ್ಲಿಯಾಗಲೀ ಇಲ್ಲ. ಆದರೆ ದತ್ತಿಲನದೆಂದು ಕಲಿಂದನು ಉದ್ಧರಿಸಿದ ಭಾಗದಲ್ಲಿಯೂ [238] ಶುಭಂಕರನ ಸಂಗೀತ ದಾಮೋದರದಲ್ಲಿಯೂ [251] ಇದೇ ಹೆಸರುಗಳು ಅಸ್ತವ್ಯಸ್ತವಾಗಿ ದೊರೆಯುತ್ತವೆ. ಕಲಿಂದನ ಉದ್ಧೃತಿಗೂ ಶುಭಂಕರನು ಕೊಡುವ ಹೆಸರುಗಳಿಗೂ ಅಕ್ಷರಶಃ ಸಾಮ್ಯಗಳು ಕಂಡುಬರುತ್ತವೆ. ಶುಭಂಕರನು ಸ್ವೀಕರಿಸಿದ ಅಮೃತಾ ಎಂಬ ಹೆಸರೇ ಜಗದೇಕಮಲ್ಲನದೆಂದು ರಾಮಕೃಷ್ಣಕವಿಯು ಉದ್ಧರಿಸುವ ಹೆಸರುಗಳಲ್ಲಿ ಕಂಡುಬರುವುದು ಗಮನಾರ್ಹವಾಗಿದೆ.

ಇನ್ನೂ ಒಂದು ದ್ವಾವಿಂಶತಿಶ್ರುತಿಪಕ್ಷವನ್ನು ರಾಮಕೃಷ್ಣಕವಿಯು ಬಹುಶಃ ಭಾವಭಟ್ಟನು ಭಾವನಗರದ ದೊರೆಯಾಗಿದ್ದ ತನ್ನ ಪ್ರಭು ಅನೂಪಸಿಂಹನ ಹೆಸರಿನಲ್ಲಿ ಬರೆದ ಅನೂಪಸಂಗೀತರತ್ನಾಕರದಿಂದ ಉದ್ಧರಿಸುತ್ತಾನೆ. ಈ ಶ್ರುತಿಗಳ ಹೆಸರುಗಳನ್ನು ರಾಮಕೃಷ್ಣಕವಿಯು ಕೇವಲ 'ಅನೂಪಃ' ಎಂಬ ಆಕರಸ್ಮರಣಮಾತ್ರದೊಡನೆ ಕೊಡುತ್ತಾನೆ.[252] ಈ ಹೆಸರುಗಳಲ್ಲಿ ಷಡ್ಜದ ಮೂರನೆಯ ಶ್ರುತಿಯ ಮತ್ತು ನಿಷಾದದ ಮೊದಲನೆಯ ಶ್ರುತಿಯ ಹೆಸರು ಭರತಕೋಶದಲ್ಲಿ ನನಗೆ ದೊರೆಯಲಿಲ್ಲ.

1) ಆಕ್ರಾಂತಾ 2) ಮಂಡಲಾ 3) ? 4) ಸಂಯುತಾ–ಷಡ್ಜ ; 5) ವಿಯುತಾ 6) ಜಯಾ 7) ವಿಜಯಾ–ರಿಷಭ ; 8) ಆಚಾರಾ 9) ಮಾನಿನೀ-ಗಾಂಧಾರ ; 10) ಯಜನೀ 11) ಲಾಕ್ಷಾ 12) ಋದ್ಧಿ–ಮಧ್ಯಮ ; 14) ರತಾ 15) ಪರಾ 16) ಪರಾಜಿತಾ 17) ಸುಕ್ಷತಿ–ಪಂಚಮ ; 18) ನಂದಾ 19) ದಮವತೀ 20) ಶ್ಯಾಮಾ–ಧೈವತ ; 21) ? 22) ರಿಕ್ತಾ–ನಿಷಾದ.

ಪಂಡಿತಮಂಡಲಿಯೊಂದು ಸುಲ್ತಾನ್ ಷಾಹನು ತನ್ನ ವಿಜಯಯಾತ್ರೆಗಳಲ್ಲಿ ಸಂಗ್ರಹಿಸಿಕೊಂಡು ಬಂದಿದ್ದ ಸಂಗೀತಶಾಸ್ತ್ರಗ್ರಂಥಗಳ ಆಧಾರದಮೇಲೆ ಅವನ ಆಶ್ರಯದಲ್ಲಿ ಕ್ರಿ.ಶ. 1429 ರಲ್ಲಿ ಕದಂನಲ್ಲಿ ರಚಿಸಿದ ಸಂಗೀತ ಶಿರೋಮಣಿಯೆಂಬ ಗ್ರಂಥದಿಂದ ರಾಮಕೃಷ್ಣಕವಿಯು ಅರವತ್ತಾರು ಶ್ರುತಿಗಳ ಹೆಸರುಗಳನ್ನು ಅಲ್ಲಲ್ಲಿ ಉದ್ಧರಿಸುತ್ತಾನೆ. ಈ ಹೆಸರುಗಳು ಮೇಲೆ ಹೇಳಿದವುಗಳಿಗಿಂತ ಸ್ವಲ್ಪ ಭಿನ್ನವಾಗಿರುವಂತೆ ತೋರುತ್ತದೆ.

## 4. ಇಪ್ಪತ್ತನಾಲ್ಕು ಶ್ರುತಿಗಳು

ಇನ್ನು, ಇಪ್ಪತ್ತನಾಲ್ಕು ಶ್ರುತಿಗಳ ಹೆಸರುಗಳನ್ನು ಮೊದಲು ಹೇಳಿರುವುದು ಸಂಗೀತಮಕರಂದದಲ್ಲಿರಬಹುದು. ಇಲ್ಲಿ ನಾರದನು ಸಪ್ತಸ್ವರಗಳಿಗೆ ಇಪ್ಪತ್ತನಾಲ್ಕು ಶ್ರುತಿಗಳ ವಿನಿಯೋಗವನ್ನೇ ಹೇಳಿದ್ದರೂ 'ಚತುಶ್ಚತುಶ್ಚತುಶ್ಚೈವ ಷಡ್ಜಮಧ್ಯಮಪಂಚಮಾಃ' ಎಂದು ಮುಂತಾದ ಪ್ರಾಚೀನಗೌರವಿತ ಮತವನ್ನು ಸಂಗ್ರಹಿಸಿದ್ದಾನೆ ; ಆದರೆ ಇವುಗಳಿಗೆ ಹೆಸರುಗಳಿಲ್ಲ. ನಾರದನು ಕೊಡುವ ಈ ಮುಂದಿನ ಇಪ್ಪತ್ತನಾಲ್ಕು ಹೆಸರುಗಳು ಸಂಗೀತಮಕರಂದದ ಮೂಲಪಾಠವಾಗಿದ್ದರೆ ಇದು ಪ್ರಾಚೀನತಮವಾದ ಆಕರವಾಗುತ್ತದೆ ; ಇಲ್ಲದಿದ್ದರೆ ಕೋಹಲಮತವೇ ಉಪಲಬ್ಧ ಆಕರಗಳಲ್ಲಿ ಮೊದಲನೆಯದಾಗುತ್ತದೆ.

> ಸಿದ್ಧಾ ಪ್ರಭಾವತೀ ಕಾಂತಾ ಸುಪ್ರಭಾ ಚ ಮನೋಹರಾ ।
> ಸಾಧಯಂತಿ ಶ್ರುತೀಃ(?ಶ್ರುತಯಃ) ಷಡ್ಜೇ(? ಷಡ್ಜಂ) ಪ್ರಜಾಪತಿಮುಖೋದ್ಗತಾಃ ॥

---

251 ಶುಭಂಕರ, ಸಂಗೀತದಾಮೋದರ, IV, ಪು. 48.

252 ಭಾವಭಟ್ಟ ? ಅನೂಪಸಿಂಹ ? ಉದ್ಧೃತಿ, ರಾಮಕೃಷ್ಣಕವಿ, ಉ. ಗ್ರಂ., ಪು. 47, 453, 763, 617, 225, 608, 49, 484, 512, 572, 88, 634, 522, 355, 730, 307, 268, 677, 552.

ಶಿಖಾ ದೀಪ್ತಿಮತೀ ಚೈವ ಉಗ್ರಾ ಚಾಗ್ನಿಸಮುದ್ಭವಾಃ ।
ಶ್ರುತಯಃ ಸಾಧಯಂತ್ಯೇನಮೃಷಭಂ ನಾಮತಃ ಸ್ವರಮ್ ॥
ಹ್ಲಾದೀ ಚ ನಿರ್ವಿರೀ ಚೈವ ಶ್ರುತೀ ವ್ಯಾಹೃತಿಸಂಭವೇ ।
ಗಾಂಧಾರಂ ಚ ಸಾಧಯತಃ ಯಥಾರ್ಥೇ ಗುಣಸಂಶ್ರಯೇ ॥
ದಿರಾ ಸರ್ವಸಹಾಕ್ಷಾಂತಿರ್ವಿಭೂತಿಸ್ತದನಂತರಮ್ ।
ಮಧ್ಯಮಂ ಸಾಧಯಂತ್ಯೇತಾಃ ಶ್ರುತಯಃ ಪೃಥಿವೀಭವಾಃ ॥
ಮಾಲಿನೀ ಚಪಲಾ ಬಾಲಾ ಸರ್ವರತ್ನಾ ಪ್ರಭಾವತೀ ।
ಶ್ರುತಯಃ ಸೋಮಪುತ್ರ(?ತ್ರ್ಯ)ಸ್ತು ಸಾಧಯಿಷ್ಯಂತಿ ಪಂಚಮಮ್ ॥
ಶಾಂತಾ ವಿಕಲಿನೀ ಚೈವ ಹೃದಯೋನ್ಮಾಲಿನೀ ತಥಾ ।
ಧೈವತಂ ಸಾಧಯಂತ್ಯೇತಾ ಯಕ್ಷರಾಜವಿನಿರ್ಮಿತಾಃ ॥
ವಿಸಾರಿಣೀ ಪ್ರಸೂನಾ ಚ ನಿಷಾದೇನ ಸಮುತ್ಥಿತಮ್ ।
ಶ್ರುತೀ(?ತೀ) ಸಾಧಯತೇ(? ಯೇತೇ) ನಿತ್ಯಂ ಯಮರಾಜಮುಖೋದ್ಭವೇ ॥ [206]

ಈ ಹೆಸರುಗಳಲ್ಲಿ ಪ್ರಭಾವತೀ ಎಂಬುದು ದ್ವಿರುಕ್ತಿಯಾಗಿದೆ : ಸ (2) ಮತ್ತು ಪ (5). ಆದರೂ ಇಲ್ಲಿ ಶ್ರುತಿಗಳು ಇಪ್ಪತ್ತನಾಲ್ಕೇ ; ವಿನಿಯೋಗವು ಸ (5), ರಿ (3), ಗ (2), ಮ (4), ಪ (5), ಧ (3), ನಿ (2) ಎಂಬ ರೀತಿಯಲ್ಲಿಯೇ ಇದೆಯೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಕೋಹಲಮತದಲ್ಲಿ ಈ ಹೆಸರುಗಳ ಶುದ್ಧ ಪಾಠವು ದೊರೆಯುತ್ತದೆ ; ಆದರೆ ಇಪ್ಪತ್ತೆರಡು ಶ್ರುತಿಗಳು ಮಾತ್ರ ಅಲ್ಲಿ ವಿನಿಯುಕ್ತವಾಗಿವೆ. ಕೋಹಲ ಮತದ ಪಾಠವು ಹೀಗಿದೆ :

ಕಾಂತಾಪ್ರಭಾವತೀ ಸಿದ್ಧಿಃ ಸುಪ್ರಭಾ ಚೈವ ಷಡ್ಜಗಾಃ ।
ಉಗ್ರಾ ಶಿವಾ ಚ ದೀಪ್ತಾ ಚ ಸ್ಯುರೇತಾ ಋಷಭಾನುಗಾಃ ॥
ಗಾಂಧಾರಾನುಗತೇ ದ್ವೇ ತು ನಿರ್ಹ್ರಾದೀಂ (?ದೀ) ಹ್ರಾದಿನೀತಿ ಚ ।
ಕ್ಷಾಂತಿಃ ಸರ್ವಸಹಾ ಧೀರಾ ವಿಭೂತಿರ್ಮಧ್ಯಮಾನುಗಾಃ ॥
ಮಾಲಿನೀ ಚಪಲಾ ಲೋಲಾ ಸರ್ವರತ್ನಾಪ್ರಭಾವತೀ ।
ಏತಾಶ್ಚತಸ್ರಃ ಶ್ರುತಯಃ ಪಂಚಮಾನುಗತಾಃ ಸ್ಮೃತಾಃ ॥
ವಿಕಲ್ಪನೀ ಚ ಶಾಂತಾ ಚ ಹೃದಯೋನ್ಮಾಲಿನೀ ತಥಾ ।
(ಏತಾಶ್ಚ ತಿಸ್ರಃ ಶ್ರುತಯಃ ಧೈವತಾನುಗತಾಃ ಸ್ಮೃತಾಃ ॥) [253]
ವಿಸ್ತಾರಿಣೀ ಪ್ರಸಂಗಾ ಚ ನಿಷಧಾ(? ನಿಷಾದಾ)ನುಗತಾಃ ಸ್ವರಾಃ( ? ಸ್ಮೃತಾಃ) । [254]

ಈ ವಿನಿಯೋಗದಲ್ಲಿ ಸಂಗೀತಮಕರಂದದ ಮನೋಹರಾ (ಸ-5) ಮಾಯವಾಗಿದೆ. ಹಾಗೆಯೇ ಅಲ್ಲಿನ ಸರ್ವರತ್ನಾ ಪ್ರಭಾವತಿಗಳೆರಡೂ ಒಟ್ಟುಸೇರಿ ಇಲ್ಲಿ ಸರ್ವರತ್ನಪ್ರಭಾವತಿಯಾಗಿದೆ. ಹೀಗೆ ಇಪ್ಪತ್ತೆರಡು ಶ್ರುತಿಗಳು ಇಲ್ಲಿ ಸಿದ್ಧವಾಗುತ್ತವೆ. ಸಂಗೀತಮಕರಂದದಲ್ಲಿಯೂ ಮೇಲಿನ ಉದ್ಧೃತಿಯ ಮೊದಲನೆಯ ಪಙ್ಕ್ತಿಗೆ ' ಸಿದ್ಧಾ ಪ್ರಭಾವತೀ ಕಾಂತಾ ಸುಪ್ರಭಾ ಚ—ಏತಾಃ ಮನೋಹರಾಃ ಶ್ರುತಯಃ ಷಡ್ಜಂ ಸಾಧಯಂತಿ ' ಎಂದೂ

---

253 ಇಲ್ಲಿ ಹಸ್ತಪ್ರತಿಯಲ್ಲಿ ಗ್ರಂಥಪಾತವಿದೆ. ಇದು ಗ್ರಂಥಪೂರ್ತಿಗೆಂದು ನಾನು ಸೇರಿಸಿರುವ ಶ್ಲೋಕಾರ್ಧ.

254 ಕೋಹಲ, ಕೋಹಲಮತಮ್, ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರದ ಹಸ್ತಪ್ರತಿ, ಪು. 7.

'ಮಾಲಿನೀ ಚಪಲಾ ಬಾಲಾ ಸರ್ವರತ್ನಪ್ರಭಾವತೀತಿ (ಚತಸ್ರಃ) ಶ್ರುತಯಃ ಪಂಚಮಂ ಸಾಧಯಿಷ್ಯಂತಿ' ಎಂದೂ ಅನ್ವಯವನ್ನು ಹೇಳಿಕೊಂಡರೆ ಇಲ್ಲಿಯೂ ದ್ವಾವಿಂಶತಿಶ್ರುತಿಪಕ್ಷವನ್ನೇ ಸಾಧಿಸಬಹುದು. ಏಕೆಂದರೆ ಕೋಹಲಮತದಲ್ಲಿರುವಂತೆ ಪ್ರತಿಯೊಂದು ಸ್ವರಕ್ಕೂ ಶ್ರುತಿಗಳ ಸಂಖ್ಯೆಯನ್ನು ಇಲ್ಲಿ ಎಣಿಸಿ ಹೇಳಿಲ್ಲ. ಆದರೆ ಈ ಗ್ರಂಥದ ಪಾಠಶೋಧನಕ್ಕೆ ಬೇರೆ ಹೊಸ ಆಕರಗಳು ದೊರೆತ ಹೊರತು ಈ ವಿಷಯದಲ್ಲಿ ನಿರ್ದಿಷ್ಟವಾದ ಅಭಿಪ್ರಾಯವನ್ನು ತಳೆಯಲಾಗದು. ಕ್ರಿ.ಶ. ಹದಿನೈದನೆಯ ಶತಮಾನದಲ್ಲಿ ಕುಂಭಕರ್ಣನೂ ನಾನ್ಯದೇವ, ಶಾರ್ಙ್ಗದೇವ ಮೊದಲಾದ ಪೂರ್ವಾಚಾರ್ಯರಿಂದ ಗೌರವಿತವಾದ ತೀವ್ರಾ ಕುಮುದ್ವತೀ ಮೊದಲಾದ ಇಪ್ಪತ್ತೆರಡು ಹೆಸರಗಳನ್ನು ಹೇಳುತ್ತಾನೆ.[255] ಆದರೆ ಇದಕ್ಕೆ ಮೊದಲು ಮೇಲೆ ಹೇಳಿದ ಇಪ್ಪತ್ತೆರಡು ಹೆಸರುಗಳನ್ನೂ ಭಿನ್ನಪಾಠದಲ್ಲಿ ಕೊಡುತ್ತಾನೆ :

ಷಡ್ಜೇ ಕಾಂತಾಪ್ರಭಾವತ್ಯೌ ಸಿದ್ಧಿಶ್ಚೈವ ತು ಸುಪ್ರಭಾ ।
ಉಗ್ರಾ ಶಿಖಾ ಚ ದೀಪ್ತಾ ಚ ಸ್ಯುರೇತಾ ಋಷಭಾನುಗಾಃ ।
ನಿರ್ಹೃತಿಹ್ರಾದಿನೀತಿ ದ್ವೇ ಗಾಂಧಾರೇ ವಸತಿಃ ಶ್ರುತೀ ।
ಕ್ಷಾಂತಿಃ ಸರ್ವ(ಂ?) ಸಹಾ ಧೀರಾ ವಿಭೂತಿರ್ಮಧ್ಯಮೇ ಸ್ಥಿತಾಃ ॥
ಮಾಲಿನೀ ಚಪಲಾ ಲೋಲಾ ತಥಾ ರತ್ನಪ್ರಭಾವತೀ ।
ಚತಸ್ರಃ ಪಂಚಮೇ ಜ್ಞೇಯಾ ಧೈವತಶ್ರುತಯಃ ಪುನಃ ॥
ವಿಕಲ್ಪಿನೀ ಚ ಶಾಂತಾ ಚ[257] ಹೃದಯೋನ್ಮಾಲಿನೀ ತಥಾ ।
ವಿಸ್ತಾರಿಣೀ ಪ್ರಸಕ್ತಾ ಚ ನಿಷಾದಸ್ಯ ಶ್ರುತೀ ಉಭೇ ॥[256]

ಈ ಹೆಸರುಗಳಿಗೆ ದೊರೆಯುವ ಪಾಠಗಳಲ್ಲೆಲ್ಲಾ ಇದೇ ಅತ್ಯಂತ ಶುದ್ಧವಾಗಿದೆಯೆಂದು ಹೇಳಬಹುದು. ಸಂಗೀತಮಕರಂದದಲ್ಲಿ ಪ್ರತಿಯೊಂದು ಸ್ವರವನ್ನೂ ಉಂಟುಮಾಡುವ ಶ್ರುತಿಗಳು ಪ್ರಜಾಪತಿ, ಅಗ್ನಿ, ವ್ಯಾಹೃತಿ, ಪೃಥಿವೀ, ಸೋಮ, ಯಕ್ಷರಾಜ, ಯಮರಾಜರುಗಳಲ್ಲಿ ಕ್ರಮವಾಗಿ ಹುಟ್ಟುತ್ತವೆಂದಿರುವುದು ಕೋಹಲಮತದಲ್ಲಿಯೂ ಸಂಗೀತರಾಜದಲ್ಲಿಯೂ ಕಂಡುಬರುವುದಿಲ್ಲ. ಸಂಗೀತಮಕರಂದದ ಮೇಲಿನ ಶ್ಲೋಕಗಳನ್ನೇ ಮತಾಂತರವೆಂಬ ಶೀರ್ಷಿಕೆಯಲ್ಲಿ ಶೌರೀಂದ್ರಮೋಹನ ಠಾಕೂರನು ಸಂಗೀತಸಾರಸಂಗ್ರಹವೆಂಬ ವಿವಿಧ ಸಂಗೀತಶಾಸ್ತ್ರಗ್ರಂಥಗಳ ಸಂಕಲನರೂಪವಾದ ತನ್ನ ಪುಸ್ತಕದಲ್ಲಿ ಭಿನ್ನಪಾಠಗಳೊಡನೆ ಉದ್ಧರಿಸಿಕೊಂಡಿದ್ದಾನೆ. ಅಲ್ಲಿ ಸಿದ್ಧಾ=ಸಿದ್ಧಿ, ಸುಪ್ರಭಾ=ಸುಭದ್ರಾ, ಹ್ಲಾದೀ=ಭ್ರಾದಿನೀ, ನಿರ್ವಿರೀ=ವಿಶ್ರುತಿ, ದಿರಾ=ವೀರಾ, ಸರ್ಪಸಹಾ=ಸರ್ವಂ ಸಹಾ, ಬಾಲಾ=ಲೋಲಾ, ವಿಕಲಿನೀ=ವಿಕಂಪಿನೀ, ಹೃದಯೋನ್ಮಾಲಿನೀ=ಹೃದಯೋನ್ಮಾದಿನೀ, ವಿಸಾರಿಣೀ=ವಿಸ್ತಾರಿಣೀ, ಪ್ರಸೂನಾ=ಪ್ರಯತ್ನಾ ಎಂಬ ಸಮೀಕರಣಗಳು ಕಂಡುಬರುತ್ತವೆ. ಹಾಗೆಯೇ ಸಂಗೀತಮಕರಂದದ ಸೋಮವು ಇಲ್ಲಿ ಸಾಮವೂ, ಯಕ್ಷರಾಜವು ಯಜ್ಞರಾಜವೂ ಆಗಿವೆ.[258] ಭಿನ್ನಪಾಠಗಳಾದರೂ ಒಟ್ಟಿನಲ್ಲಿ ಈ ಪಾಠವು ಸಮರ್ಥಿತವೇ ಆಗಿರುವುದರಿಂದ ಸಂಗೀತಮಕರಂದದ ಚತುರ್ವಿಂಶತಿ ಶ್ರುತಿಪಕ್ಷವನ್ನು ತಳ್ಳಿಹಾಕಲಾಗದು.

ಸಂಗೀತಮಕರಂದದಲ್ಲಿ ಹೇಳಿರುವುದು ಇಪ್ಪತ್ತೆರಡು ಶ್ರುತಿಗಳನ್ನೇ ಅಥವಾ ಇಪ್ಪತ್ತನಾಲ್ಕನ್ನೇ ಎಂದು

255 ಕುಂಭಕರ್ಣ, ಉ. ಗ್ರಂ., II, 1, 2, 83-86, ಪು. 78-79.

256 ಅದೇ ಗ್ರಂಥ, II, 1, 2, 70-73, ಪು. 77-78.

257 ಅದೇ ಗ್ರಂಥ, ಅದೇ ಸ್ಥಾನ, 'ವಿಲೋಕಿನೀ ವಶಾ ಶ್ರಾಂತಾ' ಎಂಬ ಪಾಠಾಂತರವಿದೆ.

258 ಶೌರೀಂದ್ರಮೋಹನಠಾಕೂರ, ಸಂಗೀತಸಾರಸಂಗ್ರಹ, I, ಪು. 24.

ಸಂದೇಹಪಡಲು ಅವಕಾಶವಾದರೂ ಇದೆ. ತಿರುವೇಂಕಟಕವಿಯ ಸಂಗೀತಸಾರಸಂಗ್ರಹದಲ್ಲಿ ಅದಕ್ಕೆ ಆಸ್ಪದವೇ ಇಲ್ಲ. ಶ್ರುತಿಗಳು ಇಪ್ಪತ್ತನಾಲ್ಕೆಂದು ಅವನು ಪುನಃ ಪುನಃ ಬಿಚ್ಚುಮಾತಿನಲ್ಲಿ ಹೇಳುತ್ತಾನೆ:

ಗಾಯತ್ರಿಯಿರುವದಿ ನಾಲುಗಕ್ಷರಮುಲನು ಇರುವದಿ ನಾಲುಗು ಶ್ರುತುಲಯ್ಯೆನನಿ ತೆಲಿಯನಿದಿ[259]

ಈ ಯಿರುವದಿನಾಲುಗು ಶ್ರುತುಲಲೋ ಮಿಶ್ರಶ್ರುತಲಿನ್ನಿಯನಿಯು ಶುದ್ಧಶ್ರುತುಲಿನ್ನಿಯನಿಯು ವಿವರಿಂಚೆದ.[259]

ಈ ಇಪ್ಪತ್ತನಾಲ್ಕರಲ್ಲಿ ಅವನು ತೀವ್ರಾ, ಕುಮುದ್ವತೀ ಮೊದಲಾದ ಹೆಸರುಗಳನ್ನು ಬಳಸಿಕೊಂಡೂ ಹದಿಮೂರನೆಯ ಸ್ಥಾನದಲ್ಲಿ ಕಾಂತಾ, ಇಪ್ಪತ್ತಮೂರನೆಯದರಲ್ಲಿ ಉದ್ದೀಪನೀ ಎಂಬ ಎರಡನ್ನು ಸೇರಿಸಿಕೊಂಡೂ ಸ್ವರವ್ಯವಸ್ಥೆಯನ್ನು ಹೇಳಿರುವುದನ್ನು ಪಥಕ (10) ರಲ್ಲಿ ತೋರಿಸಿದೆ (ಪು. 349). ಈ ಹೆಸರುಗಳೇ ಅಲ್ಲದೆ ಅವನು ಬೇರೆ ಇಪ್ಪತ್ತನಾಲ್ಕು ಹೆಸರುಗಳನ್ನೂ ಕೊಡುತ್ತಾನೆ. ಇಂದು ಕರ್ಣಾಟಕ ಸಂಗೀತದಲ್ಲಿ ಬಳಕೆಯಾಗುತ್ತಿರುವ ಎಪ್ಪತ್ತೆರಡು ಮೇಳಕರ್ತಗಳನ್ನು ಸುಲಭವಾಗಿ ನೆನಪಿಗೆ ತರಲು ಕ-ಟ-ಪ-ಯಾದಿ ಪದ್ಧತಿಯಲ್ಲಿ ಹೇಗೆ ಹೆಸರುಗಳನ್ನು ಬಹುಶಃ ಮುದ್ದುವೆಂಕಟಮಖಿಯು ಕೊಟ್ಟನೋ[213] ಅದೇ ರೀತಿಯಲ್ಲಿ ತಿರುವೇಂಕಟಕವಿಯು ಚತುರ್ವಿಂಶತಿ ಶ್ರುತಿನಾಮಗಳನ್ನು ಸುಲಭವಾಗಿ ಸ್ಮರಿಸಿಕೊಳ್ಳಲು ಸಾಧ್ಯವಾಗುವಂತೆ ಕಟಪಯಾದಿ ಸಂಖ್ಯಾಕ್ರಮದಲ್ಲಿಯೇ ಕಲ್ಪಿಸಿದ್ದಾನೆ:

1) ಇನ 2) ರಾನ 3) ಲೀನ 4) ಘನ 5) ಮನ 6) ತನು 7) ಸೇನ 8) ದಾನ 9) ಧನ 10) ನಯ 11) ಪಯ 12) ಶಾಯ 13) ಲೋಕ 14) ವಯ 15) ಶುಕ 16) ತೋಯ 17) ಛಾಯ 18) ಜಯ 19) ಧೇಯ 20) ನರ 21) ಖರ 22) ಕರ 23) ಗಿರಿ 24) ವೀರ[259]

ಕಟಪಯಾದಿ ಸಂಖ್ಯಾನಿಯಮವನ್ನು ಈ ಗ್ರಂಥಕರ್ತನು ಸರಿಯಾಗಿ ಹೊಂದಿಸಿಲ್ಲ. ಕಾದಿ ಪಂಚಕ, ಟಾದಿ ಪಂಚಕ, ಪಾದಿಪಂಚಕ ಹಾಗೂ ಯಾದಿ ಅಷ್ಟಕ ಇವುಗಳಲ್ಲಿ ಸಂಖ್ಯೆಗಳನ್ನು ಎಣಿಸಬೇಕೇ ಹೊರತು ಸ್ವರಗಳಲ್ಲಲ್ಲ. ಹೀಗೆ ಇನ ಎಂಬುದು ಈ ವ್ಯಾಪ್ತಿಯನ್ನು ಮೀರುತ್ತದೆ. ಇಪ್ಪತ್ತೊಂದನೆಯ ಕರ, ಇಪ್ಪತ್ತೆರಡನೆಯ ಖರ-ಇವು ಸ್ಥಾನಪಲ್ಲಟವಾಗಿವೆ. ಇನ್ನು ಇಲ್ಲಿ ಸ್ವರಗಳಿಗೆ ಹೇಳಿರುವ ಶ್ರುತಿವಿನಿಯೋಗವಂತೂ ತುಂಬಾ ವಿಚಿತ್ರವಾಗಿದೆ. ಗಾಯತ್ರೀಮಂತ್ರದ ಅಕ್ಷರಗಳು ಇಪ್ಪತ್ತನಾಲ್ಕು. ಇವುಗಳಲ್ಲಿ 2, 6, 10, 15, 7, 21, 23 ಈ ಸ್ಥಾನಗಳಲ್ಲಿ ಸ ರಿ ಗ ಮ ಪ ದ ನಿ ಎಂಬ ಸ್ವರಗಳು ಸಿಗುತ್ತವೆ.[260] ಇದನ್ನು ಅಭಿನವಗುಪ್ತನೂ ಹೇಳಿದ್ದಾನಾದರೂ ಗ್ರಂಥ ಸಂದರ್ಭವು ಬೇರೆ. ಅದನ್ನು ಮುಂದೆ ವಿವೇಚಿಸಲಾಗುವುದು.

## 5. ಹದಿನೆಂಟು ಶ್ರುತಿಗಳು

ಕಡೆಯದಾಗಿ, ಹದಿನೆಂಟು ಶ್ರುತಿಗಳನ್ನು ಹನುಮಂತನು ಹೇಳುತ್ತಾನೆಂದು ರಾಮಕೃಷ್ಣ ಕವಿಯು ಹೇಳಿದರೂ ಅವುಗಳಿಗೆ ಹೆಸರುಗಳನ್ನೂ ಅವನೇ ಕೊಟ್ಟನೇ, ಅಥವಾ ಈ ಮುಂದೆ ಹೇಳುವಂತಹವುಗಳನ್ನೇ ಕೊಟ್ಟನೇ ಎಂಬುದು ಸಂದೇಹಾಸ್ಪದವಾದುದು. ಏಕೆಂದರೆ ಈ ಹದಿನೆಂಟು ಹೆಸರುಗಳೂ ಬಹಳ ಅರ್ವಾಚೀನವಾಗಿ, ಕ್ರಿ. ಶ. ಸುಮಾರು 1800 ರಲ್ಲಿ ರಚಿತವಾದ ಭರತಕಲ್ಪಲತಾಮಂಜರೀ ಮತ್ತು ರಸಿಕಜನ ಮನೋಲ್ಲಾಸಿನೀ ಸಾರಸಂಗ್ರಹ ಭರತಶಾಸ್ತ್ರ—ಈ ಎರಡು ಗ್ರಂಥಗಳಲ್ಲಿ ಕಂಡುಬರುತ್ತವೆ. ರಾಮಕೃಷ್ಣಕವಿಯು ಈ ಎರಡು ಆಕರಗಳನ್ನೂ ಈ ಶ್ರುತಿನಾಮಗಳಲ್ಲಿ ಸ್ಮರಿಸುವುದಿಲ್ಲ. ಆದರೆ ಈ ಎರಡು ಗ್ರಂಥಗಳೂ, ಅದರಲ್ಲಿಯೂ ರಸಿಕಜನಮನೋಲ್ಲಾ-ಸಿನಿಯು, ಹನುಮದ್ಭರತವೆಂಬ ಗ್ರಂಥದಿಂದ ಶಾಸ್ತ್ರೋಕ್ತಿಗಳನ್ನು ಉದ್ಧರಿಸಿಕೊಂಡಿರುವುದಾಗಿ ಮುನ್ನುಡಿಯಲ್ಲಿ

259 ತಿರುವೇಂಕಟಕವಿ, ಉ. ಗ್ರಂ., ಪು. 4-5. 260 ಅದೇ ಗ್ರಂಥ, ಪು. 7.

ಒಳಗೊಂಡಿದ್ದರೂ ಈ ಹದಿನೆಂಟು ಶ್ರುತಿಗಳ ಹೆಸರುಗಳನ್ನು ಹನುಮನ್ಮತದಂತೆಯೇ ಉದ್ಧರಿಸಿದೆ ಎಂದೇನೂ ಹೇಳಿಲ್ಲ. ಅಲ್ಲಿನ ಯಾವ ಉದ್ಧೃತಿಗಳಿಗೂ ಆಕರ ಸ್ಮರಣೆಯೇ ಇಲ್ಲ. ರಾಮಕೃಷ್ಣಕವಿಯು ಈ ಶ್ರುತಿಗಳ ಹೆಸರುಗಳನ್ನು ಭರತಕಲ್ಪಲತಾಮಂಜರಿಯಿಂದ ಉದ್ಧರಿಸಿಕೊಂಡಿರುವುದು ಅವನ ಮಾತಿನಿಂದಲೇ ತಿಳಿಯುತ್ತದೆ.[261] ಇದರಲ್ಲಿ ಹನುಮನ್ಮತವೆಂದೇನೂ ಈ ಶ್ರುತಿಗಳಿಗೆ ಹೇಳಿಲ್ಲ. ಆದರೂ ಆಯಾ ಶ್ರುತಿಯ ಹೆಸರಿನ ಅಡಿಯಲ್ಲಿ ಪ್ರತಿಸಲವೂ ಅವನು ' ಹನುಮನ್ಮತೇ ಅಷ್ಟಾದಶೈವ ಶ್ರುತಯಃ ' ಎಂದು ಯಾವ ಆಧಾರದ ಮೇಲೆ ಹೇಳುತ್ತಾನೆಯೋ ತಿಳಿಯದು. ಭರತಕಲ್ಪಲತಾಮಂಜರಿಯಲ್ಲಿ ಸಪ್ತಸ್ವರಗಳಿಗೆ ಶ್ರುತಿವಿನಿಯೋಗವನ್ನು ಹೀಗೆ ಹೇಳಿದೆ:

ನಾಭಿಕಾಥರ್ವಣೀ ಧಸ್ತ್ರಾ ಚವುರ್ಯತಿ ಚ ಕಂಬಳೀ ।
ಶ್ರವಿಕಾ ಸರಳೀ ನಾಳೀ ರಸನೀ ರಂಜನೀ ತಥಾ ॥
ಘ್ರಾಣ(? ಣಿ)ನೀ ಪಥನೀ ಮಂದಾ ಮೌರ್ಧಾವೀ ಕಂಬಿ ಭಾಷಿಣೀ ।
ಸ್ವರಂತೀತಿ ತಥಾ ಪ್ರೋಕ್ತಾ ಅಷ್ಟಾದಶಶ್ರುತಿ (? ಶ್ರುತಯಃ) ಸ್ಮೃತಾಃ ॥
ನಾಭಿಕಾಥರ್ವಣೀ ಧಸ್ತ್ರಾಃ ಷಡ್ಜಸ್ವರಸಮಾಶ್ರಿತಾಃ ।
ಚವುದ್ಯತಿಚಧಾ ಚೈವ ಋಷಭ ಸ್ವರಸಮಾಶ್ರಿತೇ ॥
ಕಂಬಳಿ ಶ್ರವಿಕಾ ನಾಳೀ ಗಾಂಧಾರಂ ಸರಳೀತಿ ಚ ।
ರಸನೀ ರಂಜನೀ ಚೈವ ಮಧ್ಯಮಸ್ವರಮಾಶ್ರಿತೇ ॥
ಘ್ರಾಣಿನೀ ಪಥನೀ ಮಂದಾ ಪಂಚಮಸ್ವರಮಾಶ್ರಿತಾಃ ।
ಮೌರ್ಧಾವೀ ಕಂಬಿನೀ ಚೈವ ಧೈವತಸ್ವರಮಾಶ್ರಿತೇ ॥
ಭಾಷಿಣೀ ಸ್ವರಂತೀ ಚ ನಿಷಾದಸ್ವರಮಾಶ್ರಿತೇ । [222]

ಇದರ ಉದ್ದೇಶಕ್ರಮದಲ್ಲಿರುವ ಶ್ರುತಿಗಳ ಹೆಸರುಗಳಲ್ಲಿ ತುಂಬಾ ಅಪಪಾಠಗಳಿವೆ. ಹೀಗೆ ರಿಷಭದ ಶ್ರುತಿಗಳು ಚವುದೀ (ಚೌದೀ ?) ಮತ್ತು ಅತಿಚಧಾ ಎಂದು. ಧೈವತದಲ್ಲಿ ಕಂಬಿಯು ಕಂಬಿನೀ ಆಗಿದೆ. ಇದೇ ತಪ್ಪು-ಗಳೊಡನೆ ರಾಮಕೃಷ್ಣಕವಿಯೂ ಉದ್ಧರಿಸಿಕೊಳ್ಳುತ್ತಾನೆ. ವೆಂಕಟಸುಂದರಾಸಾನಿಯು ಉದ್ದೇಶಕ್ರಮದಲ್ಲಿ ಚವುದೀ ಎಂಬುದಕ್ಕೆ ಚವುರೀ ಎಂದೂ ವಿನಿಯೋಗದಲ್ಲಿ ಚಾರೀ ಎಂದೂ ಉದ್ದೇಶದ ಧಸ್ತ್ರಾ ಎಂಬುದಕ್ಕೆ ವಿನಿಯೋಗದಲ್ಲಿ ಧ್ವಸ್ತ್ರಾ, ಶ್ರವಿಕಾ ಎಂಬುದಕ್ಕೆ ಉದ್ದೇಶ ವಿನಿಯೋಗಗಳೆರಡರಲ್ಲಿಯೂ ಶ್ರೀವಿಕಾ ಎಂದೂ ಭಾಷಿಣಿಯ ಬದಲು ಭಾಷನೀ ಎಂದೂ ಉದ್ಧರಿಸಿಕೊಳ್ಳುತ್ತಾಳೆ.[221] ಇದು ಲಿಪಿಕಾರನ ದೋಷವೋ, ಈ ಎರಡು ಗ್ರಂಥಗಳಿಗೂ ಭಿನ್ನಮಾತೃಕೆಗಳಿದ್ದುದು ಕಾರಣವೋ ಹೇಗೆಂದು ತಿಳಿಯುವುದಿಲ್ಲ.

ಶ್ರುತಿಗಳ ಹೆಸರುಗಳನ್ನು ವಿವೇಚಿಸುವ ಸಂದರ್ಭದಲ್ಲಿ ಈ ಹೆಸರುಗಳು ಅನ್ವರ್ಥಕಗಳೇ ಎಂಬುದನ್ನೂ ಪರಿಶೀಲಿಸುವುದು ಅಪ್ರಸಕ್ತವಾಗಲಾರದು ; ಏಕೆಂದರೆ ಕೆಲವು ಆಧುನಿಕ ಸಂಗೀತಶಾಸ್ತ್ರಜ್ಞರು ಇವುಗಳನ್ನು ಅನ್ವರ್ಥಗಳೆಂದು ತಿಳಿಯುತ್ತಾರೆ. ಈ ಪಕ್ಷದಲ್ಲಿ ಶ್ರುತಿಗಳಿಗೆ ಆಯಾ ಹೆಸರುಗಳಲ್ಲಿರುವ ಅರ್ಥವನ್ನು ಅಭಿವ್ಯಕ್ತಗೊಳಿಸುವ ಕರ್ತವ್ಯಗಳನ್ನು ಹೇಳಬೇಕಾಗುತ್ತದೆ ಅಲ್ಲದೆ ಈ ನಾಮಕರಣದಲ್ಲಿ ನಿರ್ದಿಷ್ಟಯೋಜನೆ ಮತ್ತು ಮಾದರಿಗಳನ್ನು ಗುರುತಿಸಬಹುದಾಗುತ್ತದೆ. ಆದರೆ ಯಾವ ಶ್ರುತಿಪದ್ಧತಿಯಲ್ಲಿನ ಹೆಸರುಗಳಲ್ಲಿಯೂ ಏಕರೂಪದ ಅನ್ವಯವುಳ್ಳ ಯೋಜನೆಯು ಕಂಡುಬರುವುದಿಲ್ಲ. ಮೇಲೆ ಹೇಳಿದ ಹದಿನೆಂಟು ಶ್ರುತಿಗಳ ಹೆಸರುಗಳಂತೂ ಅತ್ಯಂತ ಅಸಂಬದ್ಧವಾಗಿ, ನಿರರ್ಥಕವಾಗಿ, ಇವೆ. ತೀವ್ರಾ, ಕುಮುದ್ವತೀ ಮೊದಲಾದವುಗಳಲ್ಲಿಯೇ ಆಗಲೀ ಯಾವುದೇ ಒಂದು ನಿರ್ದಿಷ್ಟ

261 ರಾಮಕೃಷ್ಣಕವಿ, ಉ. ಗ್ರಂ., ಪು. 953.

ಯೋಜನೆಯಂತೆ ಹೆಸರುಗಳು ಕಂಡುಬರುವುದಿಲ್ಲ. ಉದಾಹರಣೆಗೆ, ಕುಮುದ್ವತೀ, ಕ್ಷಿತೀ, ರೋಹಿಣೀ, ಮದಂತೀ ಎಂಬುವುಗಳು ಕೇವಲ ಹೆಸರುಗಳಷ್ಟೇ ಅಲ್ಲದೆ ಆಯಾ ಶ್ರುತಿಗಳ ಸ್ವಭಾವಗಳನ್ನೇನೂ ತಿಳಿಸುವುದಿಲ್ಲ. ತೀವ್ರಾ, ಮಂದಾ, ಛಂದೋವತಿ ಎಂಬುವು ಇದರಿಂದ ಬೇರೆ ರೀತಿಯ ಅರ್ಥವುಳ್ಳವುಗಳು. ಮಾರ್ಜನಿಯೂ ಹಾಗೆಯೇ; ರೌದ್ರೀ, ಕ್ರೋಧಾ, ಪ್ರೀತಿ, ದಯಾವತೀ, ಉಗ್ರಾ, ಕ್ಷೋಭಿಣೀಗಳು ವಿಶಿಷ್ಟ ರಸಸ್ಥಾಯಿಭಾವಗಳ ಅರ್ಥವನ್ನು ಹೊಂದಿವೆ. ರಂಜನೀ, ರಕ್ತಾ, ಆಲಾಪಿನೀ, ಸಂದೀಪನೀ, ರಕ್ತಿಕಾ, ರಮ್ಯಾಗಳು ಚಿತ್ತ ಸ್ವಾಸ್ಥವನ್ನು ಕದಲಿಸಿ ಅದಕ್ಕೆ ಬಣ್ಣ ಕಟ್ಟುವ ಅರ್ಥಗಳನ್ನು ಹೊಂದಿವೆ. ಇದೇ ರೀತಿಯಲ್ಲಿ ಚತುರ್ವಿಂಶತಿ ಶ್ರುತಿಗಳನ್ನೂ ಷಟ್‌ಷಷ್ಟಿ ಶ್ರುತಿಗಳನ್ನೂ ವಿಶ್ಲೇಷಿಸಿದರೆ ಅವುಗಳಿಗೆ ಹೆಸರನ್ನಿಟ್ಟಿರುವುದರಲ್ಲಿ ಯಾವ ಏಕರೂಪವಾಗಿರುವ ನಿಯಮವಾಗಲೀ ತತ್ತ್ವವಾಗಲೀ ಕಂಡುಬರುವುದಿಲ್ಲ.

## V. ಶ್ರುತಿಜಾತಿಗಳು

ಭಾರತೀಯ ಸಂಗೀತಶಾಸ್ತ್ರದಲ್ಲಿ ಶ್ರುತಿಪ್ರಮೇಯವು ಹುಟ್ಟಿರಬಹುದಾದ ಬಗೆಯನ್ನೂ ಅದರಲ್ಲಿ ಶ್ರುತಿಜಾತಿಗಳು ವಹಿಸಿದ ಪಾತ್ರವನ್ನೂ ಕುರಿತು ಮೇಲೆ ಸೂಚಿಸಿದೆ (ಪು. 199-202). ವೈದಿಕಗಾನದಲ್ಲಿಯೂ, ವಿಶೇಷವಾಗಿ ಸಾಮಗಾನದಲ್ಲಿಯೂ, ಬಳಕೆಯಾಗುತ್ತಿದ್ದ ಸ್ವರಗಮನದ ರೀತಿಯನ್ನು ಅನುಸರಿಸಿ ಅವುಗಳಿಗೆ ಲೌಕಿಕ ಗಾನದಲ್ಲಿ ಗಮಕವೆಂದು ಕರೆಯುವ ಪ್ರಕ್ರಿಯೆಯನ್ನು ಅಳವಡಿಸಲಾಗುತ್ತಿತ್ತು. ಈ ಕಂಪನವಿಶೇಷಗಳನ್ನು ನಾರದೀಯ ಶಿಕ್ಷೆಯು ದೀಪ್ತಾ, ಆಯತಾ, ಕರುಣಾ, ಮೃದು ಮತ್ತು ಮಧ್ಯಾ ಎಂಬ ಐದು ವಿಧಗಳನ್ನಾಗಿ ವ್ಯವಹರಿಸಿದೆ. ಈ ಹೆಸರುಗಳನ್ನು ವೈದಿಕಸಂದರ್ಭದಲ್ಲಿ ಮೊದಲು ಹೇಳಿರುವುದು ಈ ಗ್ರಂಥವೇ. ಫುಲ್ಲಸೂತ್ರಗಳು, ಶ್ರೈಸ್ವರ್ಯ ಮೊದಲಾದ ಪ್ರಾಚೀನ ಸಾಮವೇದಸಂಬಂಧೀ ಗ್ರಂಥಗಳಲ್ಲಿ ಇವುಗಳ ಉಲ್ಲೇಖವಿಲ್ಲದಿರುವುದರಿಂದ ಈ ಸ್ವರಕಂಪನಾರೀತಿಗಳು ನಿರ್ದಿಷ್ಟರೂಪವನ್ನೂ ಗ್ರಂಥೋಕ್ತಿಯ ಗೌರವ, ಮನ್ನಣೆಗಳನ್ನೂ ಪಡೆದುದು ಈ ಶಿಕ್ಷೆಯ ಕಾಲದಲ್ಲಿ ಎನ್ನಬಹುದು. ದೀಪ್ತಾ ಮುಂತಾದ ಹೆಸರುಗಳು ಅನ್ವರ್ಥಕಗಳೆಂದು ಅಲ್ಲಿ ಎಲ್ಲಿಯೂ ವ್ಯವಹೃತವಾಗಿಲ್ಲ, ಅಥವಾ ಮುಂದಿನ ಗ್ರಂಥಕಾರರು ಹೇಳಿಯೂ ಇಲ್ಲ. ಇವುಗಳನ್ನು ಯಾರು, ಯಾವಾಗ, ಏಕೆ ಕೊಟ್ಟರು ಎಂಬುದು ಕಾಲಸಾಗರದ ಈಚೆಯ ದಡದಲ್ಲಿ ನಿಂತ ನಮಗೆ ಮಬ್ಬಿನ ಮಸಕಿನಲ್ಲಿ ಮುಚ್ಚಿಹೋಗಿದೆ.

ಆದರೂ 'ಸ್ವರಸ್ಯ ಕಂಪೋ ಗಮಕಃ ಶ್ರೋತೃಚಿತ್ತಸುಖಾವಹಃ' ಎಂದು ಶಾರ್ಙ್ಗದೇವನು ಗಮಕಕ್ಕೆ ಕೊಟ್ಟ ಲಕ್ಷಣವನ್ನು ಇಲ್ಲಿ ಪ್ರಸಕ್ತವೆಂದು ಇಟ್ಟುಕೊಂಡರೆ[262]—ಹೀಗೆಂದು ಇಲ್ಲಿ ಇಟ್ಟುಕೊಳ್ಳದಿರಲು ಕಾರಣಗಳೇನೂ ಇಲ್ಲ, ಎಂಬುದಷ್ಟೇ ಅಲ್ಲ, ನಾರದೀಯ ಶಿಕ್ಷೆಯಲ್ಲಿ ಈ ಅರ್ಥಕ್ಕೆ ಪುಷ್ಟಿಕೊಡುವ ಸಂದರ್ಭಗಳು ಎಷ್ಟೋ ಇವೆ—ಈ ಶ್ರುತಿನಾಮಗಳಿಗೆ ಒಂದು ಬಗೆಯ ಅರ್ಥವನ್ನೇನೋ ಕಲ್ಪಿಸಬಹುದು. ಆಯತ ಎಂದರೆ ವಿಸ್ತಾರವಾದುದು, ಎಂದರೆ ವಿಳಂಬವಾದ ನಡೆಯಲ್ಲಿ ಮಾಡಿದ ಗಮಕಕ್ರಿಯೆ, ಮೃದು ಎಂದರೆ ಇದಕ್ಕೆ ವಿಪರೀತವಾದುದು, ಮಧ್ಯವೆಂದರೆ, ಸ್ವರದ ಕಂಪನವು–ಎಂದರೆ ಸ್ವರದ ಸ್ಥಾನಪಲ್ಲಟವು–ಇವೆರಡಕ್ಕೂ ಮಧ್ಯ ಲಯದಲ್ಲಿ ನಡೆಯುವಂತಹುದು, ದೀಪ್ತವೆಂದರೆ ತೀವ್ರವಾಗಿ, ಉಜ್ಜ್ವಲವಾಗಿ ಸ್ವರವನ್ನು ಕದಲಿಸುವುದು, ಕರುಣಾ ಎಂದರೆ ವಿಳಂಬಲಯದಲ್ಲಿ ಲೀನವೆಂಬ ಗಮಕವನ್ನು ನಡೆಯಿಸುವುದು (ತನ್ಮೂಲಕ ಕರುಣಾರಸದ ಭಾವವನ್ನುಂಟುಮಾಡುವುದು) ಎಂದು ಹೇಳಬಹುದು. ಈ ಬಗೆಯ ಗಮಕಕ್ರಿಯೆಗಳು ಭಾರತೀಯ ಸಂಗೀತದಲ್ಲಿ ಬಳಸುವುದೂ ಅದರಿಂದ ರಾಗಗಳಲ್ಲಿ ವಿವಿಧ ರಸಗಳು ಭಾಸವಾಗುವಂತೆ ಮಾಡುವುದೂ ಕರ್ಣಾಟಕ ಸಂಗೀತದಲ್ಲಿ ಚಿರಪರಿಚಿತವಾದ ತಂತ್ರವೇ ಆಗಿದೆ. ಈ ವಿಷಯವನ್ನು

262 ಶಾರ್ಙ್ಗದೇವ, ಉ. ಗ್ರಂ., 87, III, ಪು. 169.

ಬೇರೆಡೆಯಲ್ಲಿ ಸ್ವಲ್ಪ ಚರ್ಚಿಸಿದ್ದೇನೆ.[263] ಆದರೆ ಈ ಶ್ರುತಿಗಳ ಹೆಸರುಗಳಿಗೆ ಈ ಅರ್ಥವು ಕೇವಲ ಊಹೆಯಿಂದ ಉಂಟಾದುದು. ವಾಸ್ತವವಾಗಿಯೂ ಅರ್ಥವೇನಾದರೂ ಇದೆಯೇ, ಇದ್ದರೆ ಏನು ಎಂಬುದನ್ನು ಖಚಿತವಾಗಿ ಹೇಳಬರುವಂತಿಲ್ಲ.

## 1. ಶ್ರುತಿಜಾತಿಪ್ರವರ್ತಕರು

ವೈದಿಕ ಸಂಗೀತದಲ್ಲಿ ಹೀಗಾದರೆ ಲೌಕಿಕ ಸಂಗೀತದಲ್ಲಿ ಇವುಗಳನ್ನು ಮೊದಲು ಹೇಳಿದುದು ಶಾರ್ದೂಲ, ಯಾಷ್ಟಿಕ, ದುರ್ಗಾಶಕ್ತಿಯೇ ಮೊದಲಾದ ಪ್ರಾಚೀನ ಲಾಕ್ಷಣಿಕರೆಂದು ಕ್ರಿ.ಶ. ಹದಿನಾರನೆಯ ಶತಮಾನದ ಮೊದಲಿನಲ್ಲಿ ಗೋವಿಂದದೀಕ್ಷಿತನು ಹೇಳಿದ್ದಾನೆ :

ತತಃ ಶ್ರುತೀನಾಮಪಿ ಪಂಚ ಜಾತೀರ್ವಕ್ಷ್ಯಾಮಿ ಶಾರ್ದೂಲಮತಾನುಸಾರಾತ್ ।[264]

ಲೌಕಿಕಸಂಗೀತದಲ್ಲಿಯೂ ದೀಪ್ತಾ, ಆಯತಾ, ಕರುಣಾ, ಮೃದು ಮತ್ತು ಮಧ್ಯವೆಂಬ ಇದೇ ಐದು ಜಾತಿಗಳನ್ನೇ ಶ್ರುತಿಗಳಿಗೆ ಹೇಳಿದೆ. ಇಪ್ಪತ್ತೆರಡು ಶ್ರುತಿಗಳಲ್ಲಿ ಯಾವುದು ಯಾವ ಜಾತಿಗೆ ಸೇರಿದುದು ಎಂಬ ವರ್ಗೀಕರಣವು ಉಪಲಬ್ಧ ಆಕರಗಳಲ್ಲೆಲ್ಲಾ ನಾನ್ಯದೇವನಲ್ಲಿಯೇ ಮೊದಲು ದೊರೆಯುತ್ತದೆ. ಆದರೆ ಇಂತಿಂತಹ ಸ್ವರಕ್ಕೆ ಇಂತಿಂತಹ ಶ್ರುತಿಗಳು—ಇವು ಇಂತಿಂತಹ ಜಾತಿಗೆ ಸೇರಿದವುಗಳು ಎಂಬ ವಿಧಿಯನ್ನು ಗೋವಿಂದ ದೀಕ್ಷಿತನು ಮೇಲೆ ಹೇಳಿದ ಪ್ರಾಚೀನಾಚಾರ್ಯರಿಗೆ ಆರೋಪಿಸುತ್ತಾನೆ ; ಹೀಗೆ ದೀಪ್ತಾಜಾತಿಯು ತೀವ್ರಾ, ರೌದ್ರೀ, ರಂಜಿಕಾ, ಉಗ್ರಾ, ಎಂದು ನಾಲ್ಕುವಿಧ ; ಆಯತಾ ಎಂಬುದು ಕುಮುದ್ವತೀ, ಕ್ರೋಧಾ, ಪ್ರಸಾರಿಣೀ, ಸಂದೀಪಿನೀ, ರೋಹಿಣೀ ಎಂದು ಐದು ವಿಧ ; ಕರುಣಾ ಎಂಬುದು ದಯಾವತೀ, ಆಲಾಪಿನೀ, ಮದಂತೀ ಎಂದು ತ್ರಿವಿಧ—ಹೀಗೆ ಕಾಶ್ಯಪನು ಹೇಳುತ್ತಾನೆ ; ಮೃದುವು ಮಂದಾ, ರತಿಕಾ, ಪ್ರೀತಿ, ಕ್ಷ್ಮಾ(?) ಎಂಬ ನಾಲ್ಕು ಬಗೆಯೆಂದು ದುರ್ಗಾ(ಶಕ್ತಿಯ)ಮತ. ಮಧ್ಯಾಜಾತಿಯಲ್ಲಿ ಛಂದೋವತೀ, ರಂಜನೀ, ಮಾರ್ಜನೀ, ರಕ್ತಿಕಾ, ರಮ್ಯಾ, ಕ್ಷೋಭಿಣೀ ಎಂಬ ಆರು ಬಗೆ ಎಂದು ಕಾಶ್ಯಪಯಾಷ್ಟಿಕಾದಿಗಳು ಹೇಳುತ್ತಾರೆ :

ಚತುರ್ವಿಧಾದ್ಯಾ ಖಲು ತತ್ರ ದೀಪ್ತಾ ತೀವ್ರಾ ಚ ರೌದ್ರೀತಿ ಚ ರಂಜಿಕೋಗ್ರಾ ।
ತತ್ರ ಽಯತಾ ಪಂಚವಿಧಾ ಪ್ರಸಿದ್ಧಾ ಕುಮುದ್ವತೀ ಪ್ರಾಥಮಿಕೀ ದ್ವಿತೀಯಾ ॥
ಕ್ರೋಧಾ ಪ್ರಸಾರಿಣ್ಯಪರಾ ಚತುರ್ಥೀ ಸಂದೀಪಿನೀ ಸ್ಯಾದಥ ರೋಹಿಣೀತಿ ।
ಜಾತಿಸ್ತೃತೀಯಾ ಕರುಣಾ ತ್ರಿಧಾ ಸ್ಯಾದ್ ದಯಾವತೀ ಪ್ರಾಥಮಿಕೀ ದ್ವಿತೀಯಾ ॥
ಆಲಾಪಿನೀ ಚೈವ ಮದಂತಿಕಾ ಚ ತ್ರೈವಿಧ್ಯಮುಕ್ತಂ ಕಿಲ ಕಾಶ್ಯಪೇನ ।
ಮೃದುಶ್ಚತುರ್ಥೀ ಕಥಿತಾ ಚ ಮಂದಾ ತತ್ರಾದಿಮಾ ಸ್ಯಾದ್ರತಿಕಾ ದ್ವಿತೀಯಾ ॥
ಪ್ರೀತಿಃ ಪರಾ ಕ್ಷ್ಮಾ ಕಥಿತಾ ಚತುರ್ಥೀ ದುರ್ಗಾಮತಜ್ಞೈಃ ಕಥಿತಂ ಕಿಲೈವಮ್ ।
ಮಧ್ಯಾ ಚ ಷೋಢಾ ಪರಿಕೀರ್ತಿತಾದ್ಯಾ ಚ್ಛಂದೋವತೀ ರಂಜನಿಕಾ ದ್ವಿತೀಯಾ ॥
ಸ್ಯಾನ್ ಮಾರ್ಜನೀ ತತ್ರ ಚ ರಕ್ತಿಕಾ ಽನ್ಯಾ ರಮ್ಯಾ ಪರಾ ಕ್ಷೋಭಿಣಿಕಾ ತಥಾ ಽನ್ಯಾ ।
ದ್ವಾವಿಂಶತಿಃ ಕಾಶ್ಯಪಯಾಷ್ಟಿಕಾದ್ಯೈಃ ಶ್ರುತಿಪ್ರಭೇದಾಃ ಕಥಿತಾಃ ಸ್ಯುರೇವಮ್ ॥[265]

---

263 ರಾ. ಸತ್ಯನಾರಾಯಣ, ಸಂಗೀತದಲ್ಲಿ ರಸಪ್ರತಿಪಾದನೆ, ಭಾರತೀಯ ಕಲಾದರ್ಶನ, ಪು. 119-134.
264 ಗೋವಿಂದ ದೀಕ್ಷಿತ, ಊ.ಗ್ರಂ., I, 122, ಪು. 17.
265 ಅದೇ ಗ್ರಂಥ, I, 124–128, ಪು. 17–18.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಹೀಗೆ ಪ್ರತಿಯೊಂದು ಶ್ರುತಿಯೂ ಎಷ್ಟೆಷ್ಟುವಿಧ ಎಂಬುದನ್ನು ಒಂದೊಂದಕ್ಕೂ ಒಬ್ಬೊಬ್ಬ ಲಾಕ್ಷಣಿಕನಂತೆ ಗೋವಿಂದದೀಕ್ಷಿತನು ವಿಂಗಡಿಸಿದ್ದಾನೆ. ಇವುಗಳಲ್ಲಿ ರಂಜಿಕಾ ಎಂಬುದು ವಜ್ರಿಕಾ ಎಂಬುದಕ್ಕೂ ಕ್ಷ್ಮಾ ಎಂಬುದು ಕ್ಷಿತಿ ಎಂಬುದಕ್ಕೂ ಅಪಪಾಠಗಳು. ಕ್ಷಿತಿ ಎಂಬುದಕ್ಕೆ ಕ್ಷ್ಮಾ ಎಂಬ ಪಾಠಾಂತರವಿರುವಂತೆ ಸಂಗೀತರತ್ನಾಕರದ ಆನಂದಾಶ್ರಮ ಮುದ್ರಣದಿಂದ ತಿಳಿದು ಬರುತ್ತದೆ. ಒಂದೊಂದು ಶ್ರುತಿಗೂ ಬೇರೆ ಬೇರೆ ಜಾತಿಗಳನ್ನು ಹೇಳ ಬೇಕಾದರೆ ಬೇರೆ ಬೇರೆ ಶಾಸ್ತ್ರಕಾರರು ಬೇಕಾಯಿತೇ ಎಂಬುದು ತುಂಬಾ ಸಂದೇಹಾಸ್ಪದವಾದುದು. ಇಲ್ಲಿ ಐದು ಶ್ರುತಿಗಳಿಂದ ಇಪ್ಪತ್ತೆರಡು ಪ್ರಭೇದಗಳನ್ನು ಕಾಶ್ಯಪ, ಯಾಷ್ಟಿಕ ಮೊದಲಾದವರು ಹೇಳಿದರೆಂಬುದು ಮೇಲಿನ ಕಡೆಯ ಪಙ್ಕ್ತಿಯ ಅರ್ಥ. ಆದುದರಿಂದ ಶ್ರುತಿಗಳು ಮೂಲತಃ ಐದೇ ಎಂಬ ಒಂದು ಪಕ್ಷವು ಇಲ್ಲಿ ಸಿದ್ಧವಾಗುತ್ತದೆ. ಇದನ್ನು ಯಾರೇ ಹೇಳಿರಲಿ, ಇದು ಶ್ರುತಿಕಲ್ಪನೆಗೆ ಬುನಾದಿಯಾಗಿರುವ ಪ್ರಮೇಯವೆಂಬುದು ನಿಸ್ಸಂಶಯ ವಾದುದು.

## 2. ಸಾಮಗಾನದಿಂದ ಸಂಗೀತಕ್ಕೆ

ಗೋವಿಂದ ದೀಕ್ಷಿತನು ಸಂಗೀತಶಾಸ್ತ್ರದಲ್ಲಿ ಈ ಶ್ರುತಿಗಳಿಗೆ ಅವಾಂತರಭೇದಗಳನ್ನೂ ಸ್ವರವಿನಿಯೋಗವನ್ನೂ ಶಾರ್ದೂಲಾದಿಗಳಿಂದ ಪಡೆದುಕೊಂಡಂತೆ ಹೇಳಿದರೂ ಈ ಶ್ರುತಿಜಾತಿಗಳನ್ನು ಶಾಸ್ತ್ರೀಯ ಸಂಗೀತದ ಸುವ್ಯವಸ್ಥಿತ ಸಿದ್ಧಾಂತವನ್ನಾಗಿ ಮೊದಲು ಹೇಳಿರುವುದು ನಾನ್ಯದೇವನೇ. ಇವನು ದೀಪ್ತಾದಿ ಶ್ರುತಿಪಂಚಕವನ್ನು ನಾರದೀಯ ಶಿಕ್ಷೆಯಿಂದ ಉದ್ಧರಿಸಿಕೊಂಡಿರುವುದಾಗಿ ಹೇಳುತ್ತಾನೆ; ಈ ಉದ್ಧೃತಿಯಿಂದ ಬಹಳ ಸ್ವಾರಸ್ಯವಾದ ಒಂದು ಸಂಗತಿಯು ಸಿದ್ಧಪಡುತ್ತದೆ. ನಾರದೀಯ ಶಿಕ್ಷೆಯಿಂದ ಅವನು ಎತ್ತಿಕೊಂಡ ಆರು ಶ್ಲೋಕಗಳು, ದೀಪ್ತಾದಿಗಳು ಸಾಮಗಾನಸಂದರ್ಭದಲ್ಲಿ ಕೃಷ್ಟಾದಿ ಸ್ವರಗಳಲ್ಲಿ ಪ್ರಯೋಗವಾಗಬೇಕಾದ ವಿಧಿಯನ್ನು ಒಳಗೊಂಡಿವೆ. ಇವುಗಳನ್ನು ಗ್ರಂಥದಲ್ಲಿ ಪರಿಚಯಮಾಡಿಕೊಡುವಾಗ ನಾನ್ಯದೇವನು ಗ್ರಾಮುಗಳಿಗೆ ಸಂಬಂಧಿಸುತ್ತಾನೆ: [266]

ದೀಪ್ತಾಽಽಯತಾ ಚ ಕರುಣಾ ಮೃದುಮಧ್ಯೇತಿ ನಾಮತಃ ।
ಪಂಚೈವ ಶ್ರುತಯಃ ಪ್ರೋಕ್ತಾ, ಜ್ಞೇಯಾ ಗ್ರಾಮೇಷು ನಿತ್ಯಶಃ ॥

ತಥಾ ಚಾಹ ನಾರದಃ,

" ಸ್ವಭಾವೇನೈವ ದುರ್ಲಕ್ಷ್ಯಾ ಸಾ ಚ ಸ್ವರಗತಾ ಶ್ರುತಿಃ ।
ಅವಧಾನಾದುಪಾಯೇನ ಯೋಗಿನಾಮೇವ ಲಕ್ಷ್ಯತೇ ॥
ಯಥಾ ದಧಿನಿ ಸರ್ಪಿಃ ಸ್ಯಾತ್ ಕಾಷ್ಠಸ್ಥೋ ವಾ ಯಥಾಽನಲಃ ।
ಪ್ರಯತ್ನೇನೋಪಲಭ್ಯೇತ ತದ್ವತ್ ಸ್ವರಗತಾಶ್ರುತಿಃ ॥
ಯಥಾಽಪ್ಸು ಚರತಾಂ ಮಾರ್ಗೋ ಮೀನಾನಾಂ ನೋಪಲಭ್ಯತೇ ।
ಆಕಾಶೇ ವಾ ವಿಹಂಗಾನಾಂ ತದ್ವತ್ ಸ್ವರಗತಾ ಶ್ರುತಿಃ ॥
ದೀಪ್ತಾಽಽಯತಾಕರುಣಾನಾಂ ಮೃದುಮಧ್ಯಮಯೋಸ್ತಥಾ ।
ಶ್ರುತೀನಾಂ ಯೋ ಽವಿಶೇಷಜ್ಞೋ ನ ಸ ಆಚಾರ್ಯ ಉಚ್ಯತೇ ॥
ದೀಪ್ತಾ ಮಂದ್ರೇ ದ್ವಿತೀಯೇ ಚ ಪ್ರಚತುರ್ಥೇ ತಥೈವ ಚ ।
ಅತಿಸ್ವಾರೇ ತೃತೀಯೇ ಚ ಕೃಷ್ಟೇ ತು ಕರುಣಾ ಶ್ರುತಿಃ ॥
ಶ್ರುತಯೋ ಽನ್ಯಾಸ್ತೃತೀಯಸ್ಯ ಮೃಧುಮಧ್ಯಾಽಽಯತಾಃ ಸ್ಮೃತಾಃ ।" 70,72,80,81,84.

266 ನಾನ್ಯದೇವ, ಉ.ಗ್ರಂ., III, 83–89, ಪು. 94.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಹೀಗೆ ವೈದಿಕ ಸಾಮಗಾನಸಂದರ್ಭದಲ್ಲಿ ಪ್ರಸಿದ್ಧವಾಗಿದ್ದ ಲಕ್ಷ್ಯಸಂಬಂಧೀ ತಂತ್ರವೊಂದನ್ನು ಸಂಗೀತ ಶಾಸ್ತ್ರದ ಶ್ರುತಿ ಎಂಬ ಪ್ರಮೇಯವೊಂದಕ್ಕೆ ನಾನ್ಯದೇವನು ಸ್ಪಷ್ಟವಾಗಿ ಅನ್ವಯಿಸುತ್ತಾನೆ. ಸಾಮಗಳ ಪ್ರಯೋಗ ದಲ್ಲಿ ದೀಪ್ತಾದಿ ಐದು ಶ್ರುತಿಜಾತಿಗಳು ಪಡೆದಿದ್ದ ವಿವಿಧ ತತ್ತ್ವ, ಪ್ರಮೇಯ, ಸಿದ್ಧಾಂತಗಳನ್ನು ಇವುಗಳಲ್ಲಿ ಬೀಜರೂಪದಲ್ಲಿ ಕಾಣಲು ಹೇಗೆ ಸಾಧ್ಯವೆಂಬುದನ್ನೂ ಹಿಂದೆಯೇ (ಪು. 198–202) ಬರೆಯಲಾಗಿದೆ. ಆದುದ ರಿಂದ ನಮ್ಮ ಸಂಗೀತಶಾಸ್ತ್ರದಲ್ಲಿ ಶ್ರುತಿಯು ರೂಪುಗೊಂಡ ಇತಿಹಾಸದ ಪ್ರಥಮ ಘಟ್ಟವನ್ನಿಲ್ಲಿ ಸ್ಪಷ್ಟವಾಗಿ ತೋರಿಸಿದ್ದಾನೆನ್ನಲು ಅಡ್ಡಿಯಿಲ್ಲ. ಯಾವ ಯಾವ ಶ್ರುತಿಯು ಯಾವ ಯಾವ ಸ್ವರದಲ್ಲಿರುತ್ತದೆಂಬುದನ್ನು ಅವನೇ ಈ ಮಾತುಗಳಲ್ಲಿ ಹೇಳಿದ್ದಾನೆ :

ಅನೇನ ಚ ನಿಷಾದಗಾಂಧಾರಮಧ್ಯಮಷಡ್ಜೇಷು ದೀಪ್ತಾ, ಧೈವತರ್ಷಭಪಂಚಮೇಷು ಕರುಣಾ । ಅನ್ಯಾಶ್ಚ ಮೃದುಮಧ್ಯಾಽಽಯತಾ ಏತೇಷ್ವೇವ ದ್ವಿತೀಯಾದಿಷು ಯಥಾಯಥಮವಗಂತವ್ಯಾಃ । [267]

## 3. ಶ್ರುತಿಜಾತಿಲಕ್ಷಣ

ಈ ಉಕ್ತಿಯು ಇಲ್ಲಿ ಅಷ್ಟು ಮುಖ್ಯವಾದುದೇನೂ ಅಲ್ಲ. ಏಕೆಂದರೆ ಸ್ವರಗಳಲ್ಲಿ ಈ ಶ್ರುತಿಗಳು ವಿನಿಯೋಗ ವಾಗುವ ಬಗೆಯನ್ನು ಬಹು ವಿವರವಾಗಿ, ಸಂದೇಹಕ್ಕೆ ಎಡೆಯೇ ಇಲ್ಲದಂತೆ ಅವನೇ ಮುಂದೆ ಹೇಳುತ್ತಾನೆ. ಇದು ಪುನರುಕ್ತಿಯೋ ಗ್ರಂಥಪಾತವೋ ತಿಳಿಯುವಂತಿಲ್ಲ. ಆದರೆ ಈ ಐದು ಶ್ರುತಿಜಾತಿಗಳು ಹೇಗೆ ಇಪ್ಪತ್ತೆರಡಾಗುತ್ತ ವೆಂಬುದಕ್ಕೆ ಅವನು ಕೊಡುವ ಕಾರಣರೂಪವಾದ ಶ್ರುತಿಲಕ್ಷಣವು ಅತ್ಯಂತ ಮುಖ್ಯವೂ ಸ್ವಾರಸ್ಯವೂ ಆಗಿದೆ. ಅದನ್ನು ಬೇರೆ ಯಾವ ಶಾಸ್ತ್ರಕಾರರೂ, ಶಾರ್ಙ್ಗದೇವನೂ ಸಹ, ಹೇಳಲಿಲ್ಲ. ಈ ಶ್ರುತಿಲಕ್ಷಣದಿಂದ ಸ್ವರತ್ವ, ಸ್ವರಸ್ವಸಂವೇದ್ಯತೆ, ಮುಂತಾದ ಪ್ರಾಥಮಿಕ ಪ್ರಮೇಯಗಳು ಅನುಮಿತಿಯಿಂದ ಸಿದ್ಧವಾಗುತ್ತವೆ :

ಪಂಚೈತಾಃ ಕಲಾಕಾಲಪ್ರಮಾಣೇನ ವಿಭೇದಿತಾ ದ್ವಾವಿಂಶತಿರಿತಿ ವ್ಯಾಖ್ಯಾತಾಃ । [268]

ದೀಪ್ತಾ, ಆಯತಾ, ಕರುಣಾ, ಮೃದು, ಮಧ್ಯಾಗಳಲ್ಲಿ ಪ್ರತಿಯೊಂದೂ ಇತರ ಶ್ರುತಿಗಳಿಂದ ಕಾಲ, ಕಲಾ ಮತ್ತು ಪ್ರಮಾಣಗಳಲ್ಲಿ ಭಿನ್ನವಾಗಿರುತ್ತದೆ. ಈ **ಗುಣಗಳ** ಲಕ್ಷಣವನ್ನೂ ಇವುಗಳ ಜೊತೆಗೆ ಅನುಕ್ರಮ, ಸ್ಥಾನಾಂತರದಲ್ಲಿ ಊರ್ಧ್ವಸ್ಪರ್ಶ ಎಂಬ ಎರಡನ್ನು ಸೇರಿಸಿಕೊಳ್ಳಬೇಕಾದ ಆವಶ್ಯಕತೆಯನ್ನೂ ಸದ್ಯದಲ್ಲಿಯೇ ಪರಿಶೀಲಿಸಲಾಗುವುದು.

## 4. ಸ್ವರಗಳಲ್ಲಿ ಶ್ರುತಿವಿನಿಯೋಗ

ನಾನ್ಯದೇವನಿಂದ ಉದ್ಧರಿಸಿಕೊಂಡ ಈ ಮುಂದಿನ ಇಪ್ಪತ್ತೊಂದು ಶ್ಲೋಕಗಳಿಂದ ಶ್ರುತಿಗಳ ಹೆಸರುಗಳು, ಅನುಕ್ರಮ, ಶ್ರುತಿಜಾತಿಗಳಿಗೆ ಸ್ವರಗಳಲ್ಲಿ ವಿನಿಯೋಗ, ಈ ಎಲ್ಲದರಲ್ಲಿಯೂ ಶಾರ್ಙ್ಗದೇವನು ನಾನ್ಯದೇವನಿಗೆ ಋಣಿಯಾಗಿದ್ದಾನೆಂಬುದು ಸಂದೇಹವಿಲ್ಲದೆ ಸಿದ್ಧವಾಗುತ್ತದೆ :

ಕಥ್ಯಂತೇ ನಾಮತಃ ।

ತೀವ್ರಾ ಕುಮುದ್ವತೀ ಮಂದಾ ಛಂದೋವತ್ಯಪರಾ ಸ್ಮೃತಾ ।
ತಥಾ ದಯಾವತೀ ಪ್ರೋಕ್ತಾ ರಂಜನೀ ರತಿಕಾ ತಥಾ ॥93॥
ರೌದ್ರೀ ಕ್ರೋಧಾ ತಥಾ ವಜ್ರೀ, ತತಶ್ಚೈವ ಪ್ರಸಾರಿಣೀ ।
ಪ್ರೀತಿಶ್ಚ ಮಾರ್ಜನೀ ಚೈವ ಕ್ಷಿತೀ ರಕ್ತಾ ತತಃ ಪುನಃ ॥94॥

---

267 ಅದೇ ಗ್ರಂಥ, III, 90–91, ಪು. 95.

268 ಅದೇ ಗ್ರಂಥ, III, 92, ಪು. 95.

ತಥಾ ಸಂದೀಪನೀ ಪ್ರೋಕ್ತಾ ತಥೈವಾಽಽಲಾಪಿನೀತಿ ಚ ।
ಮದಂತೀ ರೋಹಿಣೀ ರಮ್ಯಾ ತಥೋಗ್ರಾ ಕ್ಷೋಭಿಣೀ ಹ್ಯಪಿ ॥95॥
ಷಡ್ಜಾದಿಷು ಕ್ರಮಾದೇತಾ ಯಾವತ್ಯೋ ಯತ್ರ ಸಂಶ್ರಿತಾಃ ।
ಶ್ರುತಯಃ ಸಮ್ಯಗಧುನಾ ತದತ್ರ ಪರಿಕೀರ್ತ್ಯತೇ ॥96॥

| | | | |
|---|---|---|---|
| 22 | ಕ್ಷೋಭಿಣೀ | ಮಧ್ಯಾ | . . . ನಿ |
| 21 | ಉಗ್ರಾ | ದೀಪ್ತಾ | |
| 20 | ರಮ್ಯಾ | ಮಧ್ಯಾ | . . . ಧ |
| 19 | ರೋಹಿಣೀ | ಆಯತಾ | |
| 18 | ಮದಂತೀ | ಕರುಣಾ | |
| 17 | ಆಲಾಪಿನೀ | ಕರುಣಾ | . . . ಪ |
| 16 | ಸಂದೀಪನೀ | ಆಯತಾ | |
| 15 | ರಕ್ತಾ | ಮಧ್ಯಾ | |
| 14 | ಕ್ಷಿತಿ | ಮೃದು | |
| 13 | ಮಾರ್ಜನೀ | ಮಧ್ಯಾ | . . . ಮ |
| 12 | ಪ್ರೀತಿ | ಮೃದು | |
| 11 | ಪ್ರಸಾರಿಣೀ | ಆಯತಾ | |
| 10 | ವಜ್ರಿಕಾ | ದೀಪ್ತಾ | |
| 9 | ಕ್ರೋಧಾ | ಆಯತಾ | . . . ಗ |
| 8 | ರೌದ್ರೀ | ದೀಪ್ತಾ | |
| 7 | ರಕ್ತಿಕಾ | ಮೃದು | . . . ರಿ |
| 6 | ರಂಜನೀ | ಮಧ್ಯಾ | |
| 5 | ದಯಾವತೀ | ಕರುಣಾ | |
| 4 | ಛಂದೋವತೀ | ಮಧ್ಯಾ | . . . ಸ |
| 3 | ಮಂದಾ | ಮೃದು | |
| 2 | ಕುಮುದ್ವತೀ | ಆಯತಾ | |
| 1 | ತೀವ್ರಾ | ದೀಪ್ತಾ | |

ಪಥಕ (11)

ಶ್ರುತಿಜಾತಿಗಳು ಮತ್ತು ಸ್ವರವ್ಯವಸ್ಥೆ

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸ್ಮೃತೌ ನಿಷಾದಗಾಂಧಾರೌ ದ್ವಿಶ್ರುತೀ ಶ್ರುತಿವೇದಿಭಿಃ ।
ಋಷಭೋ ಧೈವತಶ್ಚೈವ ತ್ರಿಶ್ರುತೀ ಪರಿಕೀರ್ತಿತೌ ||97||

ತೇ ಚತುಃಶ್ರುತಿಕಾಃ ಪ್ರೋಕ್ತಾಃ ಷಡ್ಜಮಧ್ಯಮಪಂಚಮಾಃ ।
ದೀಪ್ತಾ ಽಽಯತಾ ಮೃದುರ್ಮಧ್ಯಾ ಷಡ್ಜೇ ಶ್ರುತಿಚತುಷ್ಟಯಮ್ ||98||

ಕರುಣಾ ಮಧ್ಯಾ ಮೃದುಶ್ಚೇತಿ ತಿಸ್ರಸ್ತು ಋಷಭೇ ಮತಾಃ ।
ದೀಪ್ತಾ ಽಽಯತಾ ಚ ಗಾಂಧಾರೇ ಮಧ್ಯಮಾಖ್ಯೇ ಸ್ವರೇ ಪುನಃ ||99||

ದೀಪ್ತಾ ಽಽಯತಾ ಮೃದುರ್ಮಧ್ಯಾ ಚತಸ್ರಃ ಶ್ರುತಯೋ ಮತಾಃ ।
ಮೃದುಮಧ್ಯಾ ಽಽಯತಾಖ್ಯಾಶ್ಚ ಪಂಚಮೇ ಕರುಣಾ ತಥಾ ||100||

ಕರುಣಾ ಽಽಯತಾ ಚ ಮಧ್ಯಾ ಚ ಧೈವತೇ ಽಪಿ ಶ್ರುತಿತ್ರಯಮ್ ।
ದೀಪ್ತಾ ಮಧ್ಯಾ ನಿಷಾದೇ ಽಪಿ ಷಡ್ಜಗ್ರಾಮೇ ಶ್ರುತಿಕ್ರಮಃ ||101||

ಚತುರ್ಧಾ ನಾಮ ದೀಪ್ತಾಯಾಸ್ತೀವ್ರಾ ರೌದ್ರೀ ಚ ವಜ್ರಿಕಾ ।
ಉಗ್ರಾ ಭೇದಾಶ್ಚ ವಿಜ್ಞೇಯಾ ನಾನಾಸ್ವರಪ್ರಭೇದತಃ ||102||

ಕುಮುದ್ವತೀ ಚ ಕ್ರೋಧಾ ಚ ತೃತೀಯಾ ತು ಪ್ರಸಾರಿಣೀ ।
ಸಂದೀಪನೀ ರೋಹಿಣೀ ಚೇತ್ಯಾಯತಾ ಪಂಚಧಾ ಸ್ಮೃತಾ ||103||

ದಯಾವತೀ ತಥಾ ಽಽಲಾಪಿನ್ಯಭಿಧಾ ಚ ಮದಂತಿಕಾ ।
ಕರುಣಾ . . .[112] ತ್ರಿವಿಧಾ ಜ್ಞೇಯಾ ಸ್ವರತ್ರಯಸಮಾಶ್ರಯಾ ||104||

ಮೃದ್ವೀ ಚತುರ್ಧಾ ವಿಜ್ಞೇಯಾ ಮಂದಾಖ್ಯಾ ರತಿಕಾ ತಥಾ ।
ಪ್ರೀತಿಃ ಕ್ಷಿತಿರಿತಿ ಪ್ರಾಯಶ್ಚತುಃಸ್ವರಸಮಾಶ್ರಯಾ ||105||

ಮಧ್ಯಾ ಽಪಿ ಷಡ್ವಿಧಾ ಛಂದೋವತ್ಯಾಖ್ಯಾ ರಂಜನೀ ತಥಾ ।
ಮಾರ್ಜನೀ ಚೈವ ರಕ್ತಾ ಚ ರಮ್ಯಾ ಚ ಕ್ಷೋಭಿಣೀತ್ಯಪಿ ||106||

ಷಡ್ಜೇ ತೀವ್ರಾ ಚ ದೀಪ್ತಾಯಾ ಆಯತಾಯಾಃ ಕುಮುದ್ವತೀ ।
ಮೃದೋರ್ಮಂದಾ ತು ಮಧ್ಯಾಯಾಃ ಸ್ಮೃತಾ ಛಂದೋವತೀತಿ ಚ ||107||

ಕರುಣಾಮಧ್ಯಾಮೃದ್ವೀನಾಮೃಷಭೇ ಽಪಿ ಯಥಾಕ್ರಮಮ್ ।
ದಯಾವತೀ ಚ ರಂಜನೀ ಚ ನಾಮ ಸ್ಯಾದ್ ರತಿಕಾ ಽಪಿ ಚ ||108||

ಗಾಂಧಾರೇ ಽಪಿ ಚ ದೀಪ್ತಾಯಾ ಆಯತಾಯಾ ಅಪಿ ಕ್ರಮಾತ್ ।
ರೌದ್ರೀ ಕ್ರೋಧಾ ಚ ನಾಮೇತಿ ದ್ವಿತಯಂ ಸಮುದೀರಿತಮ್ ||109||

ಮಧ್ಯಮೇ ಚ ಕ್ರಮಾದ್ದೀಪ್ತಾಽಽಯತಯೋರ್ಮೃದುಮಧ್ಯಯೋಃ ।
ವಜ್ರಿಕಾ ಽಥ ಪ್ರಸಾರಿಣೀ ಪ್ರೀತಿರ್ಮಾರ್ಜನಿಕೇತಿ ಚ ||110||

ಮೃದುಮಧ್ಯಾಽಽಯತಾಖ್ಯಾನಾಂ ಕರುಣಾಯಾಶ್ಚ ಪಂಚಮೇ ।
ಕ್ಷಿತಿರಕ್ತೇ ತಥಾ ಸಂದೀಪನೀ ಚಾಲಾಪಿನೀ ತಥಾ ||111||

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಧೈವತೇ ಕರುಣಾಽಽಯತಾಮಧ್ಯಾನಾಂ ಚ ಯಥಾಕ್ರಮಮ್ ।
ಮದಂತಾ (? ಮದಂತೀ) ರೋಹಿಣೀ ರಮ್ಯಾ ತ್ರೀಣಿ ನಾಮಾನಿ ಯಾನಿ ತೇ ||112||
ನಿಷಾದೇ ಚ ತಥಾ ದೀಪ್ತಾ ಮಧ್ಯಾಶ್ರುತ್ಯೋರನುಕ್ರಮಾತ್ |
ಉಗ್ರಾ ಚ ಕ್ಷೋಭಿಣೀ ಚೈವ ನಾಮ ದ್ವಿತಯಮೀರಿತಮ್[269] ||113||

ಈ ಶ್ಲೋಕಗಳಲ್ಲಿ ಹೇಳಿರುವ ಸ್ವರ-ಶ್ರುತಿವಿನಿಯೋಗವನ್ನು ಅಭ್ಯಾಸಿಗಳ ಸೌಕರ್ಯಕ್ಕೆಂದು ಸಂಗ್ರಹಿಸಿ ಪಥಕ (11)ರಲ್ಲಿ ಕೊಡಲಾಗಿದೆ.

## 5. ಸ್ವರಸ್ವಸಂವೇದ್ಯತಾಹೇತು : ಗುಣಚತುಷ್ಟಯ

ಈ ಪಕ್ಷದ ಪ್ರಕಾರ ಒಂದೊಂದು ಶ್ರುತಿಯೂ ಬೇರೆ ಬೇರೆ ಸ್ಥಾನದಲ್ಲಿ ಗೋಚರವಾಗಿ ಬೇರೆ ಬೇರೆ ಸ್ವರವು ಉಂಟಾಗಲು ಕಾರಣವಾಗುತ್ತದೆ. ಈ, ಎಂದರೆ ದೀಪ್ತಾ, ಆಯತಾ, ಕರುಣಾ, ಮೃದು, ಮಧ್ಯಾ ಎಂಬ, ಐದೇ ಶ್ರುತಿಗಳು ಮೂಲಭೂತವಾಗಿ ಇರುವಂತಹವುಗಳು. ಇವುಗಳಲ್ಲಿ ಪ್ರತಿಯೊಂದಕ್ಕೂ ಬೇರೆ ಬೇರೆಯಾದ ವೈಶಿಷ್ಟ್ಯ, ವ್ಯಕ್ತಿತ್ವಗಳು ಇವೆ. ಇವುಗಳಲ್ಲಿ ಎರಡು, ಮೂರು ಮತ್ತು ನಾಲ್ಕು ಶ್ರುತಿಗಳು ಬೇರೆ ಬೇರೆಯ ಕ್ರಮದಲ್ಲಿ ಸಂಯೋಜಿತವಾದಾಗ ಬೇರೆ ಬೇರೆ ಪರಿಣಾಮಗಳನ್ನು ಉಂಟುಮಾಡುತ್ತವೆ. ಈ ಪರಿಣಾಮಗಳು ಪ್ರತಿಯೊಂದೂ ಪ್ರತ್ಯೇಕ ವೈಶಿಷ್ಟ್ಯ ವ್ಯಕ್ತಿತ್ವಗಳನ್ನು ಪಡೆದಿರುತ್ತವೆ. ಇವುಗಳಿಗೆ ಸ್ವರಗಳೆಂದು ಹೆಸರು.

ಇದನ್ನು ಒಂದು ಉದಾಹರಣೆಯಿಂದ ಸ್ಪಷ್ಟಗೊಳಿಸಬಹುದು. ಜಲಜನಕ, ಆಮ್ಲಜನಕ, ಇಂಗಾಲ, ಸಾರಜನಕ, ರಂಜಕ ಎಂಬ ಐದು ಮೂಲಧಾತುಗಳನ್ನು ಪರಿಶೀಲಿಸಬಹುದು ; ಇವುಗಳಲ್ಲಿ ಪ್ರತಿಯೊಂದೂ ಸ್ವಭಾವದಲ್ಲಿ, ಲೆಕ್ಕಿಸಿ ಹೇಳಬಹುದಾದ ಗುಣಗಳಲ್ಲಿ ಎಲ್ಲದರಲ್ಲಿಯೂ ಭಿನ್ನ ಭಿನ್ನವಾಗಿವೆ. ಇವುಗಳಲ್ಲಿ ಜಲಜನಕ ಆಮ್ಲಜನಕಗಳು ಸೇರಿದರೆ ನೀರು, ಆಮ್ಲಜನಕ ಇಂಗಾಲಗಳು ಸೇರಿದರೆ ಇಂಗಾಲಾಮ್ಲ ಇತ್ಯಾದಿಯಾಗಿ ಉಂಟಾಗುತ್ತವೆಯಷ್ಟೆ. ಹಾಗೆಯೇ ಜಲಜನಕ, ಆಮ್ಲಜನಕ ಮತ್ತು ಸಾರಜನಕಗಳ ಸಂಯೋಗದಿಂದ ನೈಟ್ರಿಕಾಮ್ಲವು ದೊರೆಯುತ್ತದೆ. ಈ ಎಲ್ಲಾ ಐದೂ ಸೇರಿದರೆ ಪ್ರೋಟೀನ್ ಉಂಟಾಗುತ್ತದೆ. ಹೀಗೆ ದ್ವಿಧಾತು ಸಂಯುಕ್ತವಾದ ನೀರು, ತ್ರಿಧಾತುಕವಾದ ನೈಟ್ರಿಕಾಮ್ಲ, ಪಂಚಧಾತುಕವಾದ ಪ್ರೋಟೀನ್ ಇವುಗಳು ಸಂಪೂರ್ಣ ವಾಗಿ ಭಿನ್ನವಾದವುಗಳಷ್ಟೆ; ಹಾಗೆಯೇ ದ್ವಿಶ್ರುತಿಕ, ತ್ರಿಶ್ರುತಿಕ ಮತ್ತು ಚತುಃಶ್ರುತಿಕಗಳಾದ ಸ್ವರಗಳೂ ಸಂಪೂರ್ಣವಾಗಿ ಭಿನ್ನವಾದವುಗಳು. ಯಾವುದೋ ಎರಡು ಧಾತುಗಳನ್ನು ಸಂಯೋಜಿಸಿದರೆ ನೀರು ಉತ್ಪತ್ತಿ ಯಾಗುವುದಿಲ್ಲ ; ಅದಕ್ಕೆ ಜಲಜನಕ, ಆಮ್ಲಜನಕಗಳನ್ನೇ ಸಂಯೋಜಿಸಬೇಕು. ಹಾಗೆಯೇ ದ್ವಿಶ್ರುತಿಕ ಸ್ವರಗಳಿಗೆ ಯಾವಯಾವುದೋ ಶ್ರುತಿಗಳನ್ನು ಸೇರಿಸಿದರೆ ಹುಟ್ಟುವುದಿಲ್ಲ ; ನಿರ್ದಿಷ್ಟವಾಗಿರುವವುಗಳು ಸೇರಿದಾಗಲೇ ಗಾಂಧಾರ ನಿಷಾದಗಳ ಉತ್ಪತ್ತಿ. ಹೀಗೆಯೇ ತ್ರಿಶ್ರುತಿಕ, ಚತುಃಶ್ರುತಿಕ ಸ್ವರಗಳಿಗೂ ಅನ್ವಯಿಸಿ ಹೇಳಬೇಕು.

ಅಷ್ಟೇ ಅಲ್ಲದೆ ಈ ದೃಷ್ಟಾಂತದಲ್ಲಿ ಪ್ರಮಾಣಕ್ಕೆ ಸಂಬಂಧಿಸಿದ ಸಾಮ್ಯವೊಂದನ್ನೂ ಕಾಣಬಹುದು. ಜಲಜನಕ ಮತ್ತು ಆಮ್ಲಜನಕಗಳು ಪರಸ್ಪರ ಸಂಯೋಗವಾಗಿ ನೀರನ್ನು ಉಂಟುಮಾಡುವುದಾದರೂ ಸ್ವೇಚ್ಛೆ ಯಿಂದ, ಲೆಕ್ಕವಿಲ್ಲದೆ ಸೇರಿಸಿದ ಪ್ರಮಾಣಗಳಿಂದಲ್ಲ. ಅವುಗಳ ತೂಕದಲ್ಲಿ ನಿರ್ದಿಷ್ಟಪ್ರಮಾಣವಿರಬೇಕು. ಆಗಲೇ ನೀರಿಗೆ ಸ್ವಸಂವೇದ್ಯತೆಯುಂಟಾಗುವುದು. ಅಲ್ಲದೆ ಇದೇ ಧಾತುಗಳು ಬೇರೆ ನಿರ್ದಿಷ್ಟಪ್ರಮಾಣದಲ್ಲಿ ಸಂಯೋಜಿತ ವಾದಾಗ ಹೈಡ್ರೊಜನ್ ಪರಾಕ್ಸೈಡನ್ನು ಕೊಡುತ್ತವಷ್ಟೆ. ಅದೇ ರೀತಿಯಲ್ಲಿ ದೀಪ್ತಾ, ಆಯತಾ ಮುಂತಾದ

---

269 ಅದೇ ಗ್ರಂಥ, III, 93–113, ಪು. 99–104.

ಶ್ರುತಿಗಳಲ್ಲಿ ನಿರ್ದಿಷ್ಟವಾದವುಗಳು ನಿರ್ದಿಷ್ಟವಾದ ಅನುಕ್ರಮದಲ್ಲಿ, ನಿರ್ದಿಷ್ಟವಾದ ಪ್ರಮಾಣದಲ್ಲಿ, ನಿರ್ದಿಷ್ಟವಾದ ಸ್ಥಾನದಲ್ಲಿ ಸಂಯೋಜಿತವಾದರೆ ಮಾತ್ರ ನಿರ್ದಿಷ್ಟ ಸ್ವರವನ್ನು ಉಂಟುಮಾಡುತ್ತವೆ. ಈ ನಾಲ್ಕು ಗುಣಗಳಿಂದಲೇ ಆಯಾ ಸ್ವರಕ್ಕೆ ಸ್ವಸಂವೇದ್ಯತೆಯುಂಟಾಗುವುದು. ಇವುಗಳಲ್ಲಿ ಅನುಕ್ರಮದ ಪ್ರಾಮುಖ್ಯವನ್ನು, ಮೇಲಿನ ದೃಷ್ಟಾಂತವನ್ನು ಇನ್ನೂ ಒಂದು ರೀತಿಯಲ್ಲಿ ಮುಂದುವರಿಸಿ,–ಸಾಮ್ಯವನ್ನು ತೋರಿಸುವುದರಿಂದ,–ಸಾಧಿಸ ಬಹುದು. ನಾಲ್ಕು ಇಂಗಾಲದ ಪರಮಾಣುಗಳು, ಹತ್ತು ಜಲಜನಕದ ಪರಮಾಣುಗಳು ಮತ್ತು ಒಂದು ಆಮ್ಲ ಜನಕದ ಪರಮಾಣು–ಇವುಗಳು ಒಂದೇ ನಿಯತವಾದ ಪ್ರಮಾಣದಲ್ಲಿ ಸಂಯೋಜಿತವಾದರೂ ಸಂಪೂರ್ಣವಾಗಿ ಬೇರೆ ಬೇರೆಯಾದ ಬ್ಯೂಟೈಲ್ ಆಲ್ಕೋಹಾಲ್ ಮತ್ತು ಈಥರ್ ಎಂಬ ಸಂಯುಕ್ತಗಳನ್ನು ಕೊಡಬಲ್ಲವು. ಇದಕ್ಕೆ ಈ ಪರಮಾಣುಗಳಲ್ಲಿನ ಅನುಕ್ರಮದಲ್ಲಿನ ವ್ಯತ್ಯಾಸವೇ ಕಾರಣ. ಇದೇ ರೀತಿಯಲ್ಲಿ ಅನುಕ್ರಮದ ವ್ಯತ್ಯಾಸದಿಂದ ಇದೇ ಶ್ರುತಿಗಳು ಬೇರೆ ಬೇರೆ ಸ್ವರಗಳನ್ನು ಉಂಟುಮಾಡಬಲ್ಲವು.

ಹೀಗೆ, ರಿಷಭ ಧೈವತಗಳೆರಡೂ ತ್ರಿಶ್ರುತಿಕಗಳೇ ಆದರೂ ಸಂವಾದಿಭಾವದಿಂದ ಅವುಗಳಲ್ಲಿ ಸಾದೃಶ್ಯಸಾಮ್ಯ ಗಳಿದ್ದರೂ ಅವುಗಳಲ್ಲಿನ ವೈದೃಶ್ಯಕ್ಕೂ ವೈಶಿಷ್ಟ್ಯಕ್ಕೂ ಕಾರಣವೇನೆಂದರೆ ರಿಷಭವು ಕರುಣಾ, ಮೃದು, ಮಧ್ಯಾಗಳು ಸೇರಿ ಆಗಿದೆ; ಆದರೆ ಧೈವತವು ಕರುಣಾ, ಆಯತಾ, ಮಧ್ಯಾಗಳು ಸೇರಿ ಆಗಿದೆ. ಇದೇ ರೀತಿಯಲ್ಲಿ ಗಾಂಧಾರ ನಿಷಾದಗಳೆರಡೂ ದ್ವಿಶ್ರುತಿಕಗಳೇ ಆಗಿದ್ದು, ಈ ಸಮಶ್ರುತಿಕತ್ವದ (ಸಂವಾದಿತ್ವದ) ಕಾರಣ ಸಾದೃಶ್ಯಸಾಮ್ಯಗಳನ್ನು ಪಡೆದಿದ್ದರೂ ಅವುಗಳೆರಡೂ ಬೇರೆ ಬೇರೆಯೆಂದು ಗೋಚರಿಸುವುದು ಕೇವಲ ಊರ್ಧ್ವಸ್ಪರ್ಶದ ಕಾರಣದಿಂದಷ್ಟೇ ಅಲ್ಲ; ಗಾಂಧಾರವು ದೀಪ್ತಾ, ಆಯತಾಗಳಿಂದ ಆಗಿರುವುದೂ ನಿಷಾದವು ದೀಪ್ತಾ, ಮಧ್ಯಾಗಳಿಂದ ಆಗಿರುವುದೂ ಒಂದು ಮುಖ್ಯ ಕಾರಣವಾಗಿದೆ. ಷಡ್ಜ ಪಂಚಮಗಳೆರಡೂ ಸಮಶ್ರುತಿಕಗಳಾಗಿದ್ದರೂ ಅವುಗಳಲ್ಲಿ ಭೇದವು ಎಲ್ಲರಿಗೂ ಏಕೆ ಸ್ಪಷ್ಟವಾಗಿದೆಯೆಂದರೆ ಷಡ್ಜದಲ್ಲಿ ದೀಪ್ತಾ, ಆಯತಾ, ಮೃದು, ಮಧ್ಯಾಗಳೂ ಪಂಚಮದಲ್ಲಿ ಮೃದು, ಮಧ್ಯಾ, ಆಯತಾ, ಕರುಣಾಗಳೂ ಇರುವುದರಿಂದಲೇ. ಈ ಕಾರಣದಿಂದ ಷಡ್ಜ, ಮಧ್ಯಮಗಳ ಭೌತಿಕಪ್ರಮಾಣಗಳಿಗಿಂತ ಪಂಚಮವು ಚತುಃಶ್ರುತಿಕವೇ ಆಗಿದ್ದರೂ ಕಡಿಮೆಯಾಗಿರುವುದು ಕಂಡುಬರುತ್ತದೆ.

ಷಡ್ಜ ಮಧ್ಯಮಗಳ ಉದಾಹರಣೆಯು ಇನ್ನೂ ಒಂದು ಮುಖ್ಯ ಪ್ರಮೇಯವನ್ನು ಹೊರಡಿಸುತ್ತದೆ. ಈ ಎರಡು ಸ್ವರಗಳೂ ಚತುಃಶ್ರುತಿಕಗಳೇ, ಎರಡರಲ್ಲಿಯೂ ಅದೇ ನಾಲ್ಕು ಶ್ರುತಿಗಳು, ಎಂದರೆ ದೀಪ್ತಾ, ಆಯತಾ, ಮೃದು, ಮಧ್ಯಾಗಳು ಇದೇ ಅನುಕ್ರಮದಲ್ಲಿವೆ. ಆದುದರಿಂದಲೇ ಸ್ವರಸಪ್ತಕದಲ್ಲಿ ಏಳು ಸ್ವರಗಳೂ ಪರಸ್ಪರವಾಗಿ ಸಂಪೂರ್ಣವಾಗಿ ಭಿನ್ನವಾಗಿದ್ದರೂ ಷಡ್ಜಮಧ್ಯಮಗಳಿಗೆ ವಿಶೇಷವಾದ ಸ್ಥಾನಮಾನಗಳುಂಟು. ಇವುಗಳಲ್ಲಿಯೇ ಅತ್ಯಂತ ಸಾದೃಶ್ಯ ಸಾಮ್ಯಗಳು. ಲಕ್ಷ್ಯದಲ್ಲಿ ಯಾವ ಸ್ವರಯುಗ್ಮಗಳಲ್ಲಿಯೇ ಆಗಲೀ ಒಂದರ ಬದಲು ಇನ್ನೊಂದನ್ನು ಪ್ರಯೋಗಮಾಡಿದರೆ ವ್ಯತ್ಯಾಸವಾಗದಿರುವುದೂ, ಒಂದು ಇನ್ನೊಂದರ ಸ್ಫುರಣೆಯನ್ನು ತಂದುಕೊಡುವುದೂ ಇವೆರಡರಲ್ಲಿಯೇ; ಈ ಶ್ರುತಿಗಳ ಈ ಸಂಪೂರ್ಣ ಸಾಮ್ಯದಿಂದಲೇ ಹಾಗೂ ಅವುಗಳ ಸ್ವಭಾವ, ವೈಶಿಷ್ಟ್ಯ ಗಳಿಂದಲೇ ಎರಡಕ್ಕೂ ಎಲ್ಲಾ ಪ್ರಯೋಗದಲ್ಲಿಯೂ ಸಹಜವಾಗಿ ನ್ಯಾಸಸ್ವರವಾಗಬಲ್ಲ ಶಕ್ತಿ, ಎಂದರೆ ರಾಗ, ಹಾಡು ಗಳು ಸಹಜವಾಗಿ, ಸ್ವಾಭಾವಿಕವಾಗಿ, ಅತ್ಯಂತ ಸುಲಭವಾಗಿ ಮುಗಿದು ವಿರಮಿಸುವುದು ಈ ಎರಡು ಸ್ವರಗಳಲ್ಲಿಯೇ. ಸ್ವರಾಷ್ಟಕದ ಬೆನ್ನೆಲುಬಾಗಿರುವ ಸಂವಾದ ಭಾವಗಳು (ಎಂದರೆ ಮಧ್ಯಮಭಾವ, ಪಂಚಮಭಾವಗಳು) ಇದರಿಂದಲೇ ಹುಟ್ಟುತ್ತವೆ. ಈ ಎರಡು ಸ್ವರಗಳೇ ಗಾನಪ್ರಪಂಚ ಸರ್ವಸ್ವದ ಅಚ್ಚುಗೂಟ(pivot)ಗಳಾಗಿವೆ. ಆದುದರಿಂದಲೇ ಲಕ್ಷ್ಯದಲ್ಲಿ ತ್ರಿಕಾಲಪ್ರಸಿದ್ಧವಾದ ಗೇಯವಸ್ತುವನ್ನೆಲ್ಲ ಈ ಷಡ್ಜಮಧ್ಯಮಗಳನ್ನು ಆಧರಿಸಿದ ಷಡ್ಜಗ್ರಾಮ, ಮಧ್ಯಮಗ್ರಾಮಗಳಲ್ಲಿ ತಾತ್ತ್ವಿಕವಾಗಿಯೂ ಪ್ರಾಯೋಗಿಕವಾಗಿಯೂ ಹೇಳಲು ಸಾಧ್ಯವಾಯಿತು. ಸ್ವರಾಷ್ಟಕದ ವಿಸ್ತಾರದಲ್ಲಿ ಇವೆರಡೂ ಇರಲೇಬೇಕೆಂದೂ, ಅನಿವಾರ್ಯವಾಗಿ ಒಂದು ಸ್ವರವು ಲೋಪವಾಗಬೇಕಾದಾಗಲೂ

ಮಧ್ಯಮವು ಅವಿನಾಶಿಯಾಗಿ, ತಾನಮೂರ್ಛನೆಗಳಿಲ್ಲದರಲ್ಲಿಯೂ, ಎಲ್ಲ ಗೀತಸಂದರ್ಭಗಳಲ್ಲಿಯೂ ಲೋಪವನಾಡ ಬಾರದ ಸ್ವರವಾಗಿಯೇ ಉಳಿಯುತ್ತಿದ್ದುದು ಈ ಕಾರಣದಿಂದಲೇ. ಷಡ್ಜವನ್ನೂ ಬಿಟ್ಟು ಮಧ್ಯಮಕ್ಕೆ ಏಕೆ ಈ ಅನನ್ಯ ಸದೃಶ ಪ್ರಾಧಾನ್ಯ, ಪ್ರಾಮುಖ್ಯಗಳೆಂಬುದನ್ನು ಮುಂದೆ ವಿವರಿಸಲಾಗುವುದು.

## 6. ಊರ್ಧ್ವಸ್ಪರ್ಶ-ಸ್ವಸಂವೇದ್ಯತೆ

ಇಲ್ಲಿ ಪ್ರಸಕ್ತವಾದ ವಿಷಯವೇನೆಂದರೆ, ನಾಲ್ಕು ಶ್ರುತಿಗಳೂ ಒಂದೇ ಅನುಕ್ರಮದಲ್ಲಿ ಪ್ರಯುಕ್ತವಾದರೂ ಇದು ಷಡ್ಜ, ಇದು ಮಧ್ಯಮ ಎಂದು ಪ್ರತ್ಯೇಕಿಸಿ ಹೇಳಬಹುದಷ್ಟೆ; ಈ ವೈದೃಶ್ಯಕ್ಕೆ ಕಾರಣವೇನು ? ಸ್ವರದ ಸಂವೇದ್ಯತೆಗೆ ದೀಪ್ತಾದಿ ಶ್ರುತಿಗಳಲ್ಲಿ ಯಾವಯಾವುದು, ಯಾವ ಕ್ರಮದಲ್ಲಿ, ಯಾವ ಪ್ರಮಾಣದಲ್ಲಿ, ಯಾವ ಸ್ಥಾನದಲ್ಲಿ ಪ್ರಯುಕ್ತವಾಗುತ್ತವೆ ಎಂದು ಹೇಳಿದ್ದ ನಾಲ್ಕು ಗುಣಗಳನ್ನು ಈಗ ಸ್ಮರಿಸಬೇಕು. ಇವುಗಳಲ್ಲಿ ಮಿಕ್ಕೆಲ್ಲ ಗುಣಗಳು ಸಮವಾಗಿದ್ದರೂ ಸ್ಥಾನಾಂತರ ಸ್ಪರ್ಶದಿಂದ ಭಿನ್ನಸ್ವರದ ಸ್ವಸಂವೇದ್ಯತೆಯು ಉಂಟಾಗಲು ಹೇಗೆ ಸಾಧ್ಯ ಎಂಬುದನ್ನು ಷಡ್ಜಮಧ್ಯಮಗಳ ಉದಾಹರಣೆಯು ಸ್ಪಷ್ಟಪಡಿಸುತ್ತದೆ. ಸ್ವರಸಪ್ತಕದಲ್ಲಿರುವ ಮತ್ತು ಸ್ವರಾಷ್ಟಕದ ವ್ಯವಸ್ಥೆಯಲ್ಲಿರುವ ಸ್ವರಗಳನ್ನು ಆಧಾರಸ್ವರವೊಂದರಿಂದಲೇ ತ್ರಿವಿಧವಾದ ಊರ್ಧ್ವಸ್ಪರ್ಶ ತತ್ತ್ವದಿಂದ ಹೇಗೆ ಪಡೆಯಬಹುದೆಂಬುದನ್ನು ಈಗಾಗಲೇ (ಪು. 225-226, 236, 308-317)ಹೇಳಿದೆಯಷ್ಟೆ. ಇವುಗಳಲ್ಲಿ ನಿರ್ವಿಶೇಷರೂಪದಿಂದ ಆಧಾರಸ್ವರವು ಊರ್ಧ್ವಸ್ಪರ್ಶವನ್ನು ಸ್ವರಾಷ್ಟಕದಲ್ಲಿ ಭೌತಿಕವಾಗಿ ಸರಿಯಾಗಿ ಅರ್ಧಭಾಗದಲ್ಲಿಯೂ, ಗಣನೆಯಿಂದ ಸ್ವರಸಪ್ತಕದಲ್ಲಿ ಸರಿಯಾಗಿ ಮಧ್ಯದಲ್ಲಿಯೂ ಪಡೆಯುವುದು ಮಧ್ಯಮದಲ್ಲಿ. ಈ ನಿರ್ವಿಶೇಷ ಊರ್ಧ್ವಸ್ಪರ್ಶವು ಸಂಪೂರ್ಣವಾಗಿ ಸ್ವಸ್ವರೂಪನಿಷ್ಠವಾದುದು ; ಎಂದರೆ ಅದೇ ಶ್ರುತಿಗಳು ಅದೇ ಕ್ರಮದಲ್ಲಿ ಸ್ಥಾನಾಂತರದಲ್ಲಿ ಪುನರಾವಿರ್ಭವಿಸುವುದು ; ಆದುದರಿಂದ ಇದೇ ಅತ್ಯಂತ ಶುದ್ಧವಾದುದು. ಎಂದೇ ಇವುಗಳಲ್ಲಿ ಈ ಬಗೆಯ ದಾಂಪತ್ಯ, ಈ ವಿಧದ ಪರ್ಯಾಯತೆ (conjugation). ಆದರೆ ಪಂಚಮಸ್ವರದಲ್ಲಿ ಅದೇ ಚತುಃಶ್ರುತಿಕತ್ವದಲ್ಲಿ ಊರ್ಧ್ವಸ್ಪರ್ಶವನ್ನು ಆಧಾರಸ್ವರವು ಪಡೆದರೂ ಬೇರೆ ಶ್ರುತಿಗಳ ಅನುಕ್ರಮವು ಉಂಟಾಗುತ್ತದೆ. ಆದುದರಿಂದಲೇ ಈ ಎರಡು ಬಗೆಯ ಸಂವಾದಿತ್ವಗಳಲ್ಲಿಯೂ ಭಿನ್ನತೆಯು ಕಾಣುವುದು.

ಇದೇ ರೀತಿಯಲ್ಲಿ, ಸ್ವರದ ಸ್ವಸಂವೇದ್ಯತೆಗೆ ಶ್ರುತಿಸಂಖ್ಯಾ ಪ್ರಮಾಣವಷ್ಟೇ ಸಾಲದು ಎಂಬ ತತ್ತ್ವವನ್ನೂ ಮನಗಾಣಬೇಕು. ಏಕೆಂದರೆ ಶುದ್ಧರಿಷಭ, ಸಾಧಾರಣಗಾಂಧಾರ, ಮಧ್ಯಮ ಗ್ರಾಮದ ಪಂಚಮ, ಶುದ್ಧ ಧೈವತ, ಕೈಶಿಕೀ ನಿಷಾದ ಇವುಗಳೆಲ್ಲವೂ ತ್ರಿಶ್ರುತಿಕ ಪ್ರಮಾಣಗಳೂ, ಷಡ್ಜ, ವಿಕೃತ ರಿಷಭ, ಅಂತರಗಾಂಧಾರ, ಮಧ್ಯಮ, ಪಂಚಮ, ವಿಕೃತಧೈವತ, ಕಾಕಲೀ ನಿಷಾದ ಇವುಗಳೆಲ್ಲವೂ ಚತುಃಶ್ರುತಿಕಪ್ರಮಾಣಗಳೂ ಹೌದಷ್ಟೆ. ಆದರೂ ಇವುಗಳಲ್ಲಿ ಪ್ರತಿಯೊಂದೂ ಭಿನ್ನವೆಂದು ಗೋಚರಿಸುವುದು ಯಾವ ಮೂರು ಶ್ರುತಿಗಳು ಅಥವಾ ನಾಲ್ಕು ಶ್ರುತಿಗಳು ಸೇರಿ ಇವು ಆಗಿವೆ ಎಂಬುದನ್ನು ಅವಲಂಬಿಸಿ. ಹೀಗೆ ಷಡ್ಜ ಮಧ್ಯಮಗಳಿಗೆ ದೀಪ್ತಾ, ಆಯತಾ, ಮೃದು, ಮಧ್ಯಾಗಳಿದ್ದರೆ ಅಂತರಗಾಂಧಾರಕ್ಕೆ ದೀಪ್ತಾ, ಆಯತಾ, ದೀಪ್ತಾ, ಆಯತಾಗಳೂ, ಕಾಕಲೀ ನಿಷಾದಕ್ಕೆ ದೀಪ್ತಾ, ಮಧ್ಯಾ, ದೀಪ್ತಾ, ಆಯತಾಗಳೂ ಇರುತ್ತವೆ. ಅಲ್ಲದೆ ಶುದ್ಧರಿಷಭ, ಸಾಧಾರಣಗಾಂಧಾರ ಮುಂತಾದ ಸಮಶ್ರುತಿಕ ಅಂತರಗಳು ಪ್ರಾಯೋಗಿಕವಾಗಿ ಭಿನ್ನಗಳೆಂಬುದೂ ಸ್ಪಷ್ಟವಾಗಿಯೇ ಇದೆ. ಹೀಗೆ ಸ್ವಸಂವೇದ್ಯತೆಯ ಎಲ್ಲಾ ಲಕ್ಷಣಗಳಿಗೂ ಈ ಐದು ಶ್ರುತಿಗಳೇ ಹೇತುಗಳೆಂಬುದನ್ನು ತೋರಿಸಬಹುದು.

## 7. ಅನುಕ್ರಮ-ಸ್ವಸಂವೇದ್ಯತೆ

ಇನ್ನು, ಈ ಐದು ವಿಧದ ಶ್ರುತಿಗಳು ಇಪ್ಪತ್ತೆರಡಾಗಿ ಶಬಲಿತವಾಗುವಾಗ ಪಡೆಯುವ ಅನುಕ್ರಮವನ್ನು ಸ್ಥೂಲವಾಗಿಯಾದರೂ ವಿವೇಚಿಸಬೇಕು. ಸಪ್ತಸ್ವರಗಳ ಸ್ವಸಂವೇದ್ಯತೆಗೆ ಕಾರಣಗಳಾದ ಅಂತಿಮ ಶ್ರುತಿಗಳು

ಹೀಗಿವೆ : ಷಡ್ಜ : ಮಧ್ಯಾ; ರಿಷಭ : ಮೃದು ; ಗಾಂಧಾರ : ಆಯತಾ ; ಮಧ್ಯಮ : ಮಧ್ಯಾ; ಪಂಚಮ : ಕರುಣಾ ; ಧೈವತ : ಮಧ್ಯಾ ; ನಿಷಾದ : ಮಧ್ಯಾ. ಆದುದರಿಂದ ಸ್ವಸಂವೇದ್ಯತೆಗೆ ಅತ್ಯಂತ ಉಪಯುಕ್ತವಾದುದು ಮಧ್ಯಾ ಶ್ರುತಿ. ಕರುಣಾಶ್ರುತಿಯು ಪಂಚಮದ ಸ್ವಸಂವೇದ್ಯತೆಗೆ ಮಾತ್ರ ಹೇತುವಾಗಿರುತ್ತದೆ; ಮಧ್ಯಮ ಗ್ರಾಮದ ಪಂಚಮದಲ್ಲಾದರೆ ಇದು ಆಯತಾ ಆಗಿರುತ್ತದೆ. ಪ್ರಕೃತಿಭೂತವಾದ ಈ ಸಪ್ತಸ್ವರಗಳಲ್ಲಿ ದೀಪ್ತಾ ಶ್ರುತಿಯು ಯಾವಾಗಲೂ ಸ್ವಸಂವೇದ್ಯತೆಗೆ ಹೇತುವಾಗಲಾರದೆಂಬ ಮುಖ್ಯ ಸಂಗತಿಯನ್ನಿಲ್ಲಿ ಗಮನಿಸಬೇಕು. ಈ ಐದು ಶ್ರುತಿಗಳು ಸ್ವರತ್ವಕ್ಕೆ ಕಾರಣವಾಗುವುದರಲ್ಲಿಯೂ ವ್ಯತ್ಯಾಸವಿದೆ. ಹೀಗೆ

ಮಧ್ಯಾ ಆರು ವಿಧ: ಛಂದೋವತೀ, ರಂಜನೀ, ಮಾರ್ಜನೀ, ರಕ್ತಾ, ರಮ್ಯಾ, ಕ್ಷೋಭಿಣೀ
ಆಯತಾ ಐದು ವಿಧ: ಕುಮುದ್ವತೀ, ಕ್ರೋಧಾ, ಪ್ರಸಾರಿಣೀ, ಸಂದೀಪನೀ, ರೋಹಿಣೀ
ದೀಪ್ತಾ ನಾಲ್ಕು ವಿಧ: ತೀವ್ರಾ, ರೌದ್ರೀ, ವಜ್ರಿಕಾ, ಉಗ್ರಾ
ಮೃದು ನಾಲ್ಕು ವಿಧ: ಮಂದಾ, ರತಿಕಾ, ಪ್ರೀತಿ, ಕ್ಷಿತಿ
ಕರುಣಾ ಮೂರು ವಿಧ: ದಯಾವತೀ, ಆಲಾಪಿನೀ, ಮದಂತಿಕಾ
ಒಟ್ಟು ಇಪ್ಪತ್ತೆರಡು ವಿಧ.

ಇದರಲ್ಲಿ ಮಧ್ಯಾ ಒಂದೇ ಷಡ್ಜಮಧ್ಯಮಧೈವತನಿಷಾದಗಳ ಸ್ವರೂಪಸಿದ್ಧಿಗೆ ಕಾರಣವಾಗಿದೆ. ಉಳಿದವುಗಳಲ್ಲಿ ಒಂದೊಂದೂ ಒಂದೊಂದು ಸ್ವರದ ಸ್ವರೂಪಸಿದ್ಧಿಗೆ ಮಾತ್ರ ಹೇತುವಾಗಿದೆ. ದೀಪ್ತಾಶ್ರುತಿಯ ನಾಲ್ಕು ವಿಧಗಳೂ ಷಡ್ಜ, ಗಾಂಧಾರ, ಮಧ್ಯಮ ಮತ್ತು ನಿಷಾದಗಳ ಪ್ರಥಮ ಶ್ರುತಿಗಳಾಗಿವೆ. ಕರುಣಾ ರಿಷಭ ಧೈವತಗಳಲ್ಲಿ ಪ್ರಥಮ ಶ್ರುತಿಯಾಗಿದೆ. ಪಂಚಮವೊಂದೇ ಮೃದುವಿನಿಂದ ಪ್ರಾರಂಭವಾಗಿ ಕರುಣಾಶ್ರುತಿಯಲ್ಲಿ ಮುಗಿಯುತ್ತದೆ. ಆದುದರಿಂದಲೇ ಅದು ಉಳಿದ ಚತುಃಶ್ರುತಿಕಸ್ವರಗಳಿಂದ ಭಿನ್ನವಾಗಿದೆ. ಅಲ್ಲದೆ ಮೃದು, ಮಧ್ಯಾ ಎಂಬ ಅನುಕ್ರಮವು ಇಡೀ ಸ್ಥಾಯಿಯಲ್ಲಿ ನಾಲ್ಕು ಬಾರಿ 3–4, 6–7, 12–13, 14–15 (ಸರಿಮಪಗಳಲ್ಲಿ) ಎಂಬಲ್ಲಿ ಪುನರಾವರ್ತಿತವಾಗಿದೆ. ಹಾಗೆಯೇ ದೀಪ್ತಾ, ಆಯತಾ ಎಂಬ ಅನುಕ್ರಮವು 1–2, 8–9 ಎಂಬ ಎರಡು ಸ್ಥಾನಗಳಲ್ಲಿ (ಷಡ್ಜ ಗಾಂಧಾರಗಳಲ್ಲಿ) ಪುನರಾವರ್ತಿತವಾಗಿದೆ. ಕರುಣಾಶ್ರುತಿಗಿರುವ ಮೂರು (5, 17, 18) ಸ್ಥಾನಗಳಲ್ಲಿ ಎರಡು ನೆರೆಹೊರೆಯ ಸ್ಥಾನಗಳಲ್ಲಿ ಪುನರಾವರ್ತಿತವಾಗುವುದು ಒಂದು ವಿಶೇಷ. ಈ ರೀತಿಯ ಪುನರಾವರ್ತನೆಯು ದ್ವಾವಿಂಶತಿ ಶ್ರುತಿಗಳಲ್ಲಿ ಬೇರೆ ಎಲ್ಲಿಯೂ ಕಂಡುಬರುವುದಿಲ್ಲ. ಇದರಲ್ಲಿ ಪಂಚಮ ವಿಕೃತಿಯಾದರೆ ಹದಿನೇಳನೆಯ ಸ್ಥಾನದಲ್ಲಿ ಕರುಣಾಶ್ರುತಿಗೆ ಸ್ವಸಂವೇದ್ಯತಾ ಶಕ್ತಿಯು ಇಲ್ಲವಾಗುತ್ತದೆ. ಉಳಿದ ಎರಡರಲ್ಲಿ ಅದು ರಿಷಭಧೈವತಗಳ ಪ್ರಥಮ ಶ್ರುತಿಯಾಗಿರುವುದರಿಂದ ಈ ಸ್ಥಾನಗಳಲ್ಲಿ ಎಂದಿಗೂ ಅದು ಸ್ವರತ್ವವನ್ನು ಪಡೆಯಲಾರದು.

ಹೀಗೆ ಈ ಐದು ಶ್ರುತಿಗಳಲ್ಲಿ ದೀಪ್ತಾ ಮತ್ತು ಕರುಣಾ ಎಂಬ ಎರಡಕ್ಕೆ ಸ್ವಸಂವೇದ್ಯತೆಯಿಲ್ಲವೆಂದೂ ಆದರೆ ಸ್ವರದ ಆವಿರ್ಭಾವಕ್ಕೆ ಪ್ರಥಮ ಹೇತುಗಳೆಂದೂ ಸ್ಪಷ್ಟವಾಗುತ್ತದೆ. ಹಾಗೆಯೇ ರಿಷಭದ ಮಧ್ಯಾ ಮತ್ತು ಧೈವತದ ಆಯತಾ ಶ್ರುತಿಗಳಿಗೆ ಎಂದಿಗೂ ಸ್ವರತ್ವವು ಸಿದ್ಧಿಸುವುದಿಲ್ಲ. ಆದುದರಿಂದ ಸ್ವರದ ಸ್ವಸಂವೇದ್ಯತೆಗೆ ಪ್ರಥಮ ಹೇತುವಾಗಿಯೂ ಪ್ರತ್ಯಕ್ಷ ಹೇತುವಾಗಿಯೂ ಈ ಶ್ರುತಿಗಳು ಹೇಗೆ ಇರುತ್ತವೆ ಎಂಬುದು ಇದರಿಂದ ಸಿದ್ಧವಾಗುತ್ತದೆ. ವಿಶ್ವಾವಸುವು ಶ್ರುತಿಗಳನ್ನು ಸ್ವರಗತ, ಅಂತರಗತಗಳೆಂದು ಎರಡು ವಿಧವಾಗಿ ವಿಂಗಡಿಸಿದ್ದಾನಷ್ಟೆ.[117] ಈ ಸ್ವರಗತ ಶ್ರುತಿಗಳಿಂದಲೇ ಸ್ವರದ ಸ್ವಸಂವೇದ್ಯತೆಯೂ ಸಿದ್ಧವಾಗುತ್ತದೆ ಎಂದೂ ಅವನು ಹೇಳಿದ್ದಾನೆ.[142] ಸ್ವರದ ಸ್ವಸಂವೇದ್ಯತೆಗೆ ಈ ಐದು ಶ್ರುತಿಗಳೂ ಕಾರಣವಾಗಬಲ್ಲವು. ಇವುಗಳಲ್ಲಿ ವಿಕೃತಿಸ್ವರ ಸಂದರ್ಭದಲ್ಲಿ ದೀಪ್ತಾ ಎರಡು ಸಲವೂ (1, 10), ಆಯತಾ ಮೂರುಸಲವೂ (2, 11, 16), ಮೃದುವು

ಎರಡು ಸಲವೂ (3, 12) ಸ್ವರಗತಗಳಾಗುತ್ತವೆ ; ಮಧ್ಯಾ, ಕರುಣಾಗಳಿಗೆ ಈ ಶಕ್ತಿಯಿಲ್ಲ. ಆದರೆ ಈ ಐದು ಶ್ರುತಿಗಳೂ ಎರಡು ನೆರೆಹೊರೆಯ (ಪ್ರಕೃತಿ ಅಥವಾ ವಿಕೃತಿ) ಸ್ವರಗಳ ಮಧ್ಯದಲ್ಲಿದ್ದುಕೊಂಡು ಅಂತರಶ್ರುತಿಗಳೂ ಆಗಬಲ್ಲವು. ಹೀಗೆ ದೀಪ್ತಾಶ್ರುತಿಯು ಗಾಂಧಾರನಿಷಾದಗಳಲ್ಲಿಯೂ, ಆಯತಾ ರಿಷಭದಲ್ಲಿಯೂ, ಕರುಣಾ ರಿಷಭ ಧೈವತಗಳಲ್ಲಿಯೂ ಮಧ್ಯಾ ರಿಷಭ ಪಂಚಮಗಳಲ್ಲಿಯೂ ಮೃದುವು ಪಂಚಮದಲ್ಲಿಯೂ ಅಂತರ ಶ್ರುತಿಗಳು. ಷಡ್ಜ ಮಧ್ಯಮಗಳೆರಡರಲ್ಲಿ ಮಾತ್ರ ಅಂತರಶ್ರುತಿಗಳಿಲ್ಲ, ಎಂದರೆ ಅವುಗಳಲ್ಲಿರುವ ಶ್ರುತಿಗಳಿಲ್ಲವೂ ಸ್ವರತ್ವದ ಉತ್ಪತ್ತಿಗೆ ಹೇತುಗಳಾಗಬಲ್ಲವು. ಷಡ್ಜದಲ್ಲಿ ಮೃದುವು ಷಡ್ಜಸಾಧಾರಣದಲ್ಲಿಯೂ ಮಧ್ಯಮದಲ್ಲಿ ಮೃದುವು ಮಧ್ಯಮಸಾಧಾರಣದಲ್ಲಿಯೂ ಕ್ರಮವಾಗಿ ಷಡ್ಜ ಮಧ್ಯಮಗಳ ಸ್ವಸಂವೇದ್ಯತೆಗೆ ಹೇತುಗಳಾಗುತ್ತವೆ. ಈ ಗುಣವು ಎರಡು ಸ್ಥಾನಗಳಲ್ಲಿಯೂ ಲಭಿಸುವುದು ಮೃದುವೆಂಬ ಒಂದೇ ಶ್ರುತಿಯಿರುವುದರಿಂದ. ಆದರೆ ಇದೇ ಮೃದುವು ಪಂಚಮದಲ್ಲಿದ್ದರೂ ಅಲ್ಲಿ ಪಂಚಮದ ಸ್ವಸಂವೇದ್ಯತೆಗೆ ಹೇತುವಾಗಲಾರದು ; ಏಕೆಂದರೆ ಅಲ್ಲಿ ಅದರ ಅನುಕ್ರಮವು ಭಿನ್ನವಾಗಿದೆ. ಅಲ್ಲದೆ ಪಂಚಮದಲ್ಲಿರುವ ನಾಲ್ಕು ಶ್ರುತಿಗಳಲ್ಲಿ ಮೃದು ಮಧ್ಯಾಗಳೆರಡರಲ್ಲೂ ಸ್ವರತ್ವಕ್ಕೆ ಅವಕಾಶವಿಲ್ಲ. ಈ ಕಾರಣಗಳಿಂದ ಪಂಚಮವು ಚತುಃಶ್ರುತಿಕವಾದರೂ ಷಡ್ಜ ಮಧ್ಯಮಗಳಿಂದ ಭಿನ್ನವಾಗಿದೆ. ಲಕ್ಷ್ಯದಲ್ಲಿ ಭಿನ್ನವಾಗಿರುವ ಅದನ್ನು ಶಾಸ್ತ್ರದಲ್ಲಿಯೂ ಭಿನ್ನವಾಗಿ ಸಿದ್ಧಪಡಿಸಿಕೊಡುವುದು ದೀಪ್ತಾದಿ ಶ್ರುತಿಪಂಚಕದ ಕಲ್ಪನೆಯಿಂದ ಮಾತ್ರ ಸಾಧ್ಯ.

## 8. ಶಬಲೀಕರಣ-ಸ್ವಸಂವೇದ್ಯತೆ

ದೀಪ್ತಾದಿ ಐದು ಶ್ರುತಿಗಳೇ ಶಬಳಿತವಾಗಿ ಸ್ವರಸಪ್ತಕ, ಸ್ವರಾಷ್ಟಕ, ಸ್ಥಾಯಿ, ಪ್ರಕೃತಿ-ವಿಕೃತಿ ಸ್ವರ ವ್ಯವಸ್ಥೆ, ವಾದಿ ಸಂವಾದಿ ಮೊದಲಾದ ಭಾವಗಳು ಈ ಎಲ್ಲಾ ಮೂಲಭೂತ ತತ್ತ್ವ ಪ್ರಮೇಯಗಳಿಗೂ ಕಾರಣ ವಾಗಿವೆ. ಇದೆಲ್ಲಕ್ಕೂ ಆಯಾ ಶ್ರುತಿಯು ವಿವಿಧ ಸ್ಥಾನಗಳಲ್ಲಿ ಊರ್ಧ್ವಸ್ಪರ್ಶಮಾಡುವುದೇ ಆಗಿದೆ. ಹೀಗೆ ಅದಕ್ಕೆ ವಿಶಿಷ್ಟವಾದ ಕಾಲ, ಕಲಾ, ಪ್ರಮಾಣಗಳು ಒಂದೇ ಆಗಿದ್ದರೂ ಸ್ಥಾನಾಂತರದಲ್ಲಿರುವುದರಿಂದಲೂ ಹಿಂದಿನ ಶ್ರುತಿಯ ಸಂಸ್ಕಾರವನ್ನು ಪಡೆದುಕೊಂಡಿರುವುದರಿಂದಲೂ ಬೇರೆಯಾಗಿಯೇ ವರ್ತಿಸುತ್ತದೆ. ಅದು ಹೀಗೆ ಊರ್ಧ್ವಸ್ಪರ್ಶವನ್ನು ಪಡೆಯುವುದಾದರೂ ನಿಯತಾಂತರಗಳಲ್ಲಿ ಅಲ್ಲ. ಐದೂ ಶ್ರುತಿಗಳು ಅನಿಯತಾಂತರಗಳಲ್ಲಿ ಊರ್ಧ್ವಸ್ಪರ್ಶವನ್ನು ಪಡೆಯುವುದರಿಂದ ಇವುಗಳಲ್ಲಿ ಪ್ರತಿಯೊಂದರ ಗುಣವೂ ಸನ್ನಿವೇಶವಶದಿಂದ ಸ್ವಲ್ಪ ಸ್ವಲ್ಪ ಭಿನ್ನವಾಗುತ್ತಾ ಬಂದು ಇಪ್ಪತ್ತೆರಡು ಸ್ಥಾನಗಳೂ ಪ್ರತ್ಯೇಕವೂ ಭಿನ್ನವೂ ವಿಶಿಷ್ಟವೂ ಆಗಿರುವ ಗಣನೆಯನ್ನು ಪಡೆಯುತ್ತವೆ. ಆದುದರಿಂದ ಗಾನಪ್ರಪಂಚ ಸರ್ವಸ್ವದ ಬೇರು, ಅಥವಾ ಮೂಲಧಾತುಗಳು ಈ ಐದು ಶ್ರುತಿಗಳು ಎಂದು ನಾದಶಾಸ್ತ್ರದಲ್ಲಿ ಆಧಾರಭೂತವಾದ ಪ್ರಮೇಯವೊಂದು ಸಿದ್ಧವಾಗುತ್ತದೆ. ಇವು ಒಮ್ಮೆ ಸಂಪೂರ್ಣವಾಗಿಯೂ ನಂತರ ಕರುಣಾ ಹೀನವಾಗಿಯೂ ಉಂಟಾದಾಗ ಪ್ರಥಮ ತ್ರೈಸ್ವರ್ಯವು ಲಭಿಸುತ್ತದೆ. ಎರಡನೆಯ ತ್ರೈಸ್ವರ್ಯವಾದ ಪಧನಿಯಲ್ಲಾ ದರೋ ಮಧ್ಯಾ ಶ್ರುತಿಯು ಮೂರುಬಾರಿಯೂ ಕರುಣಾಶ್ರುತಿಯು ತನ್ನ ಅಭಿವ್ಯಕ್ತಿಸ್ಥಾನದ ನಂತರ ಮುಂದಿನ ಸ್ಥಾನದಲ್ಲಿ ಇನ್ನೊಮ್ಮೆಯೂ ಊರ್ಧ್ವಸ್ಪರ್ಶವನ್ನು ಪಡೆದು, ಆಯತಾ ಎರಡು ಸಲ ಊರ್ಧ್ವಸ್ಪರ್ಶವನ್ನು ಪಡೆಯುತ್ತದೆ. ಹೀಗೆ ಭಿನ್ನರೀತಿಯ ಊರ್ಧ್ವಸ್ಪರ್ಶವಿರುವುದರಿಂದಲೇ ದ್ವಿತೀಯ ತ್ರೈಸ್ವರ್ಯವು ಮೊದಲನೆಯದ ರಿಂದ ಭಿನ್ನವೆಂದು ಎಲ್ಲರಿಗೂ ಪ್ರಥಮಗೋಚರದಲ್ಲಿಯೇ ತಿಳಿಯುವುದು. ಈ ಭಿನ್ನತೆಯ ಅವಬೋಧವಾಗದಿದ್ದರೆ ಅತಿಯಾದ ಸಾದೃಶ್ಯಸಾಮ್ಯಗಳಿಂದಾಗಿ ಎರಡನೆಯ ತ್ರೈಸ್ವರ್ಯದ ಸ್ವರಗಳಿಗೆ ಸಾಕಾದಷ್ಟು ವೈಶಿಷ್ಟ್ಯ, ವೈದೃಶ್ಯ, ವ್ಯಕ್ತಿತ್ವಗಳು ಲಭಿಸದೆ ಹೋಗಿ ಗಾನಪ್ರಪಂಚಕ್ಕೆ ಬೇಕಾಗುವಷ್ಟು ವೈವಿಧ್ಯವು ಸಿದ್ಧವಾಗುತ್ತಿರಲಿಲ್ಲ. ಚಾತುಃ-ಸ್ವರ್ಯಗಳ ನಿರ್ಮಾಣಕ್ಕೂ ಇದೇ ವಾದವನ್ನು ಅನ್ವಯಿಸಬೇಕು. ಈ ಐದು ಶ್ರುತಿಗಳೂ ಸಂಪೂರ್ಣವಾಗಿ ಒಮ್ಮೆ

ಶಬಳಿತವಾದರೆ ದ್ವಾವಿಂಶತಿ ಶ್ರುತಿಗಳ ಸ್ವರಸಪ್ತಕವು ಲಭಿಸುತ್ತದೆ. ಈ ಅಂತರದಲ್ಲಿ ಪ್ರತಿಯೊಂದು ಶ್ರುತಿಯೂ ಊರ್ಧ್ವಸ್ಪರ್ಶವನ್ನು ಪಡೆದಾಗಲೆಲ್ಲಾ ಸ್ಥಾಯಿಯು ಲಭಿಸುತ್ತದೆ. ಸಾಮಾನ್ಯಗಾನವ್ಯವಹಾರಕ್ಕೆ ಇಂತಹ ಮೂರು ಸಲದ ಊರ್ಧ್ವಸ್ಪರ್ಶವು ಸಾಕಾಗುತ್ತದೆ ; ಎಂದರೆ ತ್ರಿಸ್ಥಾಯಿಯ ವಿಸ್ತಾರವು ಸಾಕಾಗುತ್ತದೆ.

ದ್ವಾವಿಂಶತಿ ಶ್ರುತಿಗಳನ್ನು ಉಂಟುಮಾಡಲು ಈ ಐದು ಶ್ರುತಿಗಳು ಶಬಳಿತವಾಗುವ ರೀತಿಯೂ ಸ್ವಾರಸ್ಯವಾಗಿದೆ. ಈ ಅವಧಿಯಲ್ಲಿರುವ ಮಧ್ಯಭಾಗದ ಎಂಟು ಶ್ರುತಿಗಳು ಎರಡೆರಡು ಶ್ರುತಿಯುಗ್ಮಗಳ ಪುನರಾವರ್ತನೆಯಿಂದ ಆಗಿವೆಯೆಂಬುದನ್ನು ಗಮನಿಸಬೇಕು. ದೀಪ್ತಾ-ಆಯತಾ, ದೀಪ್ತಾ-ಆಯತಾ, ಮೃದು-ಮಧ್ಯಾ, ಮೃದು-ಮಧ್ಯಾ ಎಂಬ ಅನುಕ್ರಮವು ಈ ಭಾಗದಲ್ಲಿ ಕಂಡುಬರುತ್ತದೆ. ಎಂದರೆ ಗಾಂಧಾರದ ಎರಡು ಶ್ರುತಿಗಳೇ ಮಧ್ಯಮದ ಮೊದಲನೆಯ ಎರಡೂ, ಮಧ್ಯಮದ ಕಡೆಯ ಎರಡು ಪಂಚಮದ ಮೊದಲನೆಯ ಎರಡೂ ಆಗಿವೆ. ಆಧಾರಸ್ವರವಾದ ಷಡ್ಜವು ಒಂದೊಂದು ಶ್ರುತಿಯ ನಿಷ್ಕಾಸದಿಂದ ಸವಿಶೇಷ ಊರ್ಧ್ವಸ್ಪರ್ಶವನ್ನೂ ಸ್ವಸ್ವರೂಪದಿಂದ ನಿರ್ವಿಶೇಷ ಊರ್ಧ್ವಸ್ಪರ್ಶವನ್ನೂ ಪಡೆಯುತ್ತದೆಂದು ಹಿಂದೆ ನಾನು ಸ್ವತಂತ್ರವಾಗಿ ಪಡೆದಿದ್ದ ಅನುಮಿತಿಗೆ (ಪು. 309-310) ಇಲ್ಲಿ ಸಮರ್ಥನೆಯು ದೊರೆಯುತ್ತದೆ. ಷಡ್ಜವು ದೀಪ್ತಾಶ್ರುತಿಯನ್ನು ಕಳೆದುಕೊಂಡು ಆಯತೆಯು ಕರುಣೆಯಾದಾಗ ರಿಷಭವೂ, ರಿಷಭವು ಮೃದುಮಧ್ಯಾಗಳನ್ನು ಕಳೆದುಕೊಂಡಾಗ ಗಾಂಧಾರವೂ ಹುಟ್ಟುತ್ತವೆ ಎಂದಾಯಿತು. ನಿರ್ವಿಶೇಷಸ್ವರೂಪದ ಊರ್ಧ್ವಸ್ಪರ್ಶದಲ್ಲಿ ಮಧ್ಯಮದ ಉತ್ಪತ್ತಿಯಾಗುತ್ತದೆ. ಕರುಣಾ, ಆಯತಾ ಶ್ರುತಿಗಳಿಗೆ ಈ ಪರಸ್ಪರ ವಿನಿಮಯವಾಗಬಲ್ಲ, ಮತ್ತು ನೆರೆಹೊರೆಯ ಶ್ರುತಿಗಳಾದಾಗ ಸಂವಾದಭಾವದಲ್ಲಿ ಸ್ವಸಂವೇದ್ಯತೆಯನ್ನುಂಟುಮಾಡಬಲ್ಲ ಶಕ್ತಿಯಿದೆಯೆಂಬುದು ಪಂಚಮದಿಂದ ತಿಳಿಯುತ್ತದೆ. ಷಡ್ಜದ ಮೃದುಮಧ್ಯಾಯುಗ್ಮವು ವಿಪರ್ಯಾಸವಾಗಿ ರಿಷಭದಲ್ಲಿ ಮಧ್ಯಾ ಮೃದುವಾಗಿರುವಂತೆಯೇ ಪಂಚಮದ ಆಯತಾ-ಕರುಣಾ ಯುಗ್ಮವು ಧೈವತದ ಕರುಣಾ-ಆಯತಾ ಆಗಿದೆ. ಷಡ್ಜ-ರಿಷಭಗಳಲ್ಲಿ ಈ ಯುಗ್ಮಗಳನ್ನು ಸಂಬಂಧಿಸಿರುವುದು ಪಂಚಮಧೈವತಗಳನ್ನು ಸಂಬಂಧಿಸುವ ಕರುಣಾಶ್ರುತಿಯೇ ಎಂಬುದು ಗಮನಾರ್ಹವಾಗಿದೆ. ಈ ಕಾರಣದಿಂದಲೇ ಷಡ್ಜ-ಪಂಚಮ, ರಿಷಭ ಧೈವತಗಳ ಸಂವಾದಿತ್ವವು ಸಿದ್ಧವಾಗುತ್ತದೆಂದು ತೋರುತ್ತದೆ.

## 9. ಸಂವಾದಭಾವಗಳು

ಈ ಶ್ರುತಿಗಳಿಂದ ಉಂಟಾಗುವ ಸಂವಾದಭಾವಗಳನ್ನು ಪರಿಶೀಲಿಸಿದರೆ ಷಡ್ಜ ಮಧ್ಯಮಗಳ ಸಂವಾದಿತ್ವಕ್ಕೆ ಮಧ್ಯಾಶ್ರುತಿಯೂ ಷಡ್ಜಪಂಚಮಗಳಲ್ಲಿ ಸಂವಾದಿತ್ವಕ್ಕೆ ಮಧ್ಯಾ-ಕರುಣಾಗಳೂ, ರಿಷಭ ಧೈವತಗಳ ಸಂವಾದಿತ್ವಕ್ಕೆ ಮೃದು-ಮಧ್ಯಾಗಳೂ, ಗಾಂಧಾರ ನಿಷಾದಗಳಲ್ಲಿ ಸಂವಾದಿತ್ವಕ್ಕೆ ಆಯತಾ-ಮಧ್ಯಾಗಳೂ ಮಧ್ಯಮಗ್ರಾಮದಲ್ಲಿ ರಿಷಭ ಪಂಚಮಗಳಿಗೆ ಮೃದು-ಆಯತಾಗಳೂ ಕಾರಣಗಳಾಗಿರುವುದು ಕಂಡುಬರುತ್ತದೆ. ಅಂತರಕಾಕಲೀ ಸ್ವರಗಳಲ್ಲಿ ಸಂವಾದಿತ್ವಕ್ಕೆ ಕಾರಣವಾದುದು ಆಯತಾ ಶ್ರುತಿಯೊಂದೇ. ಇವುಗಳಲ್ಲಿ ಒಂದೇ ಶ್ರುತಿಯಿಂದ ಲಭಿಸುವ ಷಡ್ಜಮಧ್ಯಮಗಳ ಸಂವಾದಿತ್ವವೇ ಅತ್ಯಂತ ಶ್ರೇಷ್ಠವೂ ಆದುದು. ಅಂತರಕಾಕಲೀಗಳಲ್ಲಿಯೂ ಹಾಗೆಯೇ ; ಏಕೆಂದರೆ, ಇವುಗಳಲ್ಲಿ ಷಡ್ಜಮಧ್ಯಮಗಳ ಲಕ್ಷಣಗಳು ಸಾಧಾರಣ್ಯದಿಂದ ಇದ್ದೇ ಇರುತ್ತವಷ್ಟೆ. ಉಳಿದವುಗಳಲ್ಲಿ ಸ್ವಸಂವೇದ್ಯತೆಯಿಂದ ಭಿನ್ನತೆಯೇ ಸಿದ್ಧವಾಗುವುದರಿಂದ ಭೌತಿಕ ಪ್ರಮಾಣದಿಂದ ಪಂಚಮಭಾವವು ಸಿದ್ಧಿಸಿದರೂ ಸಾದೃಶ್ಯ ಸಾಮ್ಯಗಳ ದೃಷ್ಟಿಯಿಂದ ಇವು ಷಡ್ಜ-ಮಧ್ಯಮಭಾವದಷ್ಟು ಶುದ್ಧ ಸಂವಾದಭಾವಗಳಲ್ಲ. ಈ ಭಿನ್ನತೆಯು ಸ್ಫುರಿಸಲೆಂದೇ ಸ್ವರವು ಪಂಚಮಭಾವದಲ್ಲಿ ಊರ್ಧ್ವಸ್ಪರ್ಶಮಾಡಿ ದ್ವಿತೀಯ ತ್ರೈಸ್ವರ್ಯವನ್ನು ನಿರ್ಮಿಸಿಕೊಳ್ಳುತ್ತದೆ. ಹೀಗೆ ಷಡ್ಜಪಂಚಮಗಳಲ್ಲಿ ಸಾದೃಶ್ಯವು ಆಯತಾ, ಮೃದು, ಮಧ್ಯಾ ಶ್ರುತಿಗಳ ಊರ್ಧ್ವಸ್ಪರ್ಶದಿಂದಲೂ ವೈದೃಶ್ಯವು ಇವುಗಳ ಭಿನ್ನವಾದ ಅನುಕ್ರಮದಿಂದಲೂ ದೀಪ್ತಾಶ್ರುತಿಯ ಬದಲು ಕರುಣಾಶ್ರುತಿಯು

ಪಂಚಮದಲ್ಲಿ ಇರುವುದರಿಂದಲೂ ಸಿದ್ಧವಾಗುತ್ತವೆ. ಹೀಗೆಯೇ ಋಷಭಧೈವತಗಳಲ್ಲಿ ಸಾದೃಶ್ಯವು ಕರುಣಾ, ಮಧ್ಯಾ ಶ್ರುತಿಗಳು ಊರ್ಧ್ವಸ್ಪರ್ಶಮಾಡುವುದರಿಂದಲೂ ವೈದೃಶ್ಯವು ಇವುಗಳ ಭಿನ್ನವಾದ ಅನುಕ್ರಮದಿಂದಲೂ ಋಷಭದಲ್ಲಿ ಮೃದು ಮತ್ತು ಧೈವತದಲ್ಲಿ ಆಯತಾ ಎಂಬ ಬೇರೆ ಶ್ರುತಿಗಳು ಇರುವುದರಿಂದಲೂ ಉಂಟಾಗುತ್ತವೆ. ಇದೇ ರೀತಿ ಯಲ್ಲಿ ಗಾಂಧಾರನಿಷಾದಗಳಲ್ಲಿ ಸಾದೃಶ್ಯವು ದೀಪ್ತಾ ಶ್ರುತಿಯ ಊರ್ಧ್ವಸ್ಪರ್ಶದಿಂದಲೂ, ವೈದೃಶ್ಯವು ಗಾಂಧಾರದ ಆಯತಾ ಬದಲು ನಿಷಾದದಲ್ಲಿ ಮಧ್ಯಾ ಇರುವುದರಿಂದಲೂ ಸಿದ್ಧವಾಗುತ್ತವೆ.

## 10. ಸ್ವಸಂವೇದ್ಯತೆ-ಲಕ್ಷಣತ್ರಯ

ಇನ್ನು ಈ ಶ್ರುತಿಗಳಿಂದ ವಿವಿಧ ಸ್ವರಗಳ ಸ್ವಸಂವೇದ್ಯತೆಯು ಹೇಗೆ ಉಂಟಾಗುತ್ತದೆ ಎಂಬುದನ್ನು ವಿವೇಚಿಸ ಬೇಕು. ಇವುಗಳ ಲಕ್ಷಣಗಳನ್ನು ನಾನ್ಯದೇವನು ಕಲಾ, ಕಲಾ, ಪ್ರಮಾಣ ಎಂದು ತ್ರಿವಿಧವಾಗಿ ಹೇಳಿದ್ದಾ ನಷ್ಟೆ.[268] ಪ್ರಮಾಣವೆಂದರೆ ಹಿಂದಿನ ಧ್ವನಿಗೂ ಈ ಶ್ರುತಿಯನ್ನುಂಟುಮಾಡುವವರೆಗೆ ಇರುವ ಧ್ವನಿಗೂ ಮಧ್ಯದಲ್ಲಿ ಇರುವ ಅಂತರಾಳ ಅಥವಾ ನಾದವಿಸ್ತಾರ; ಕಾಲವೆಂದರೆ ಈ ಶ್ರುತಿಯು ಸ್ವಸ್ವರೂಪದಲ್ಲಿ ಗೋಚರಿಸಲು ಹಿಡಿಯುವ ಕನಿಷ್ಠ ಕಾಲಾವಕಾಶ. ಕಲೆ ಎಂದರೆ ಈ ಶ್ರುತಿಯ ಪ್ರತ್ಯೇಕವಾದ ಅಸ್ತಿತ್ವವು ಗೋಚರಿಸುವುದಕ್ಕೆ ಬೇಕಾಗುವ ಕನಿಷ್ಠ ಕಂಪನಬಾಹುಲ್ಯ. ಇವುಗಳನ್ನು ಈಗಾಗಲೇ (ಪು. 359-361) ಸೂಚಿಸಿದೆ. ನಾದಶಾಸ್ತ್ರದಲ್ಲಿ ಆಧುನಿಕ ಪಾಶ್ಚಾತ್ಯ ನಾದವಿಜ್ಞಾನವು ಕ್ಲಿಷ್ಟವಾದ ಸಂಶೋಧನಾ ಫಲಿತಾಂಶಗಳ ಆಧಾರದಿಂದ ಹೊರಡಿಸುತ್ತಿರುವ ವೈಜ್ಞಾನಿಕ ಪ್ರಮೇಯಗಳನ್ನು ಸುಮಾರು ಸಾವಿರ ವರ್ಷಗಳ ಹಿಂದೆಯೇ ಪ್ರಕಟವಾಗಿ ನಾನ್ಯದೇವನೂ, ವಿವಕ್ಷೆ ಯಿಂದ ಅವನ ಪೂರ್ವಾಚಾರ್ಯರೂ ನಮ್ಮ ದೇಶದಲ್ಲಿ ಹೇಳಿದ್ದಾರೆಂಬುದು ನಿಜಕ್ಕೂ ಹೆಮ್ಮೆಯ ಸಂಗತಿಯೇ ಸರಿ. ಶ್ರುತಿಪಂಚಕದಲ್ಲಿ ಪ್ರತಿಯೊಂದಕ್ಕೂ ಕಾಲ, ಕಲಾ ಮತ್ತು ಪ್ರಮಾಣಗಳು ನಿರ್ದಿಷ್ಟವಾಗಿಯೂ ಬೇರೆ ಬೇರೆ ಯಾಗಿಯೂ ಇರುವುದರಿಂದ ಪ್ರತಿಯೊಂದಕ್ಕೂ ಒಂದು ವಿಶಿಷ್ಟ ವ್ಯಕ್ತಿತ್ವವು ಲಭಿಸುತ್ತದೆ. ಆದರೆ ಸ್ಥಾನಾಂತರದಲ್ಲಿ ಊರ್ಧ್ವಸ್ಪರ್ಶ ಮಾಡುವ ಕಾರಣದಿಂದ ಇದೇ ಲಕ್ಷಣಗಳು ಅಲ್ಪಸ್ವಲ್ಪವಾಗಿ ಮಾರ್ಪಟ್ಟು ಈ ಅವಾಂತರ ಭೇದ ಗಳಿಗೂ ವಿಶಿಷ್ಟ ವ್ಯಕ್ತಿತ್ವಗಳು ಲಭಿಸುತ್ತವೆ. ಆದುದರಿಂದ ಸ್ವರವೊಂದರ ಸ್ವರೂಪವು ಅದರಲ್ಲಿ ಈ ಶ್ರುತಿಪಂಚಕದ ಯಾವುದು ಯಾವುದರೊಡನೆ ಯಾವ ಕ್ರಮದಲ್ಲಿ ಸೇರಿದೆ ಎಂಬುದನ್ನು ಅವಲಂಬಿಸುತ್ತದೆ. ಯಾವ ಸ್ವರದಲ್ಲಿಯೇ ಆಗಲೀ ಎಲ್ಲಾ ಶ್ರುತಿಗಳೂ ಇರಲಾರವು, ಮತ್ತು ಇಂತಹ ಎರಡು ಶ್ರುತಿಗಳಿಗಿಂತ ಕಡಿಮೆ ಇರಲಾರವು, ಸ್ವರದಲ್ಲಿನ ಪ್ರತಿಯೊಂದು ಶ್ರುತಿಯೂ ಬೇರೆ ಬೇರೆಯದೇ ಆಗಿರಬೇಕು ಎಂಬ ನಿಯಮಗಳು ಸ್ವರನಿರ್ಮಿತಿಯಲ್ಲಿ ಕಂಡುಬರುತ್ತವೆ. ಇದೆಲ್ಲದರ ಫಲಿತಾಂಶವಾಗಿ ಷಡ್ಜಮಧ್ಯಮಗಳನ್ನು ಬಿಟ್ಟರೆ ಉಳಿದೆಲ್ಲಾ ಸ್ವರಗಳಲ್ಲಿಯೂ ಒಂದರಲ್ಲಿರುವ ಶ್ರುತಿಪ್ರಸ್ತಾರವು ಮತ್ತೊಂದರಲ್ಲಿ ಇರುವುದಿಲ್ಲ. ಷಡ್ಜಮಧ್ಯಮಗಳಲ್ಲಿ ಕಡೆಯಪಕ್ಷ ಸ್ಥಾನಾಂತರ ಸ್ಪರ್ಶವಿದೆ. ಈ ಎಲ್ಲಾ ಕಾರಣಗಳಿಂದಲೇ ಸ್ವರದ ಸ್ವಸ್ವರೂಪ ಸಿದ್ಧಿಯಾಗುವುದು. ಸ್ವರಕ್ಕೆ ಇವು ಹೇತುಗಳಾದುದ ರಿಂದ ಸ್ವರದ ರಕ್ತಿಧರ್ಮವನ್ನೇ ಈ ಶ್ರುತಿಪಂಚಕದಲ್ಲಿ ಪ್ರತಿಯೊಂದಕ್ಕೂ ಹೇಳಬೇಕು. ವಿವಿಧ ಸ್ವರಗಳಿಗೆ ವಿವಿಧ ಪ್ರಮಾಣದ ರಕ್ತಿಯಿರುವಂತೆಯೇ ಈ ಶ್ರುತಿಗಳಿಗೂ ಇವೆ. ಹೀಗೆ ಮಧ್ಯಾಶ್ರುತಿಯು ನಾಲ್ಕು ಸ್ವರಗಳ ಸ್ವಸಂವೇ ದ್ಯತೆಗೆ ನೇರವಾಗಿ ಕಾರಣವಾದುದರಿಂದ ಅದರ ರಕ್ತಿ ಧರ್ಮವು ಅತ್ಯಂತ ಪ್ರಬಲವಾದುದು. ದೀಪ್ತಾ ಶ್ರುತಿಯು, ಪ್ರಾಥಮ್ಯದಿಂದಾಗಿ, ಯಾವ ಸ್ವರದ ಸ್ವಸಂವೇದ್ಯತೆಗೂ ನೇರವಾಗಿ ಕಾರಣವಲ್ಲ. ಆದುದರಿಂದ ಅದರ ರಕ್ತಿಧರ್ಮವು ಕನಿಷ್ಠವಾದುದು.

ಸ್ವರತ್ವವನ್ನು ಉಂಟುಮಾಡಲು ಶ್ರುತಿಯು ಕಾಲ, ಕಲಾ ಮತ್ತು ಪ್ರಮಾಣಗಳ ವಿಶಿಷ್ಟವಾದ ಮೊತ್ತದ ಪರಿಣಾಮವಾಗಿದೆಯೆಂದು ಹೇಳಿದೆ.[268] ಇದರ ದೆಸೆಯಿಂದ ಪ್ರತಿಯೊಂದು ಶ್ರುತಿಯೂ ತನ್ನದೇ ಆದ ಸಂಸ್ಕಾರವನ್ನು

ಪಡೆದುಕೊಳ್ಳುತ್ತದೆ ಹಾಗೂ ಮುಂದಿನ ಶ್ರುತಿಗೆ ಈ ಸಂಸ್ಕಾರದ ಮೊತ್ತವನ್ನು ಕೊಡುವ ಶಕ್ತಿಯನ್ನು ಪಡೆಯುತ್ತದೆ. ಈ ಶಕ್ತಿಯು ದೀಪ್ತಾ, ಆಯತಾ, ಕರುಣಾ, ಮೃದು, ಮಧ್ಯಾಗಳಲ್ಲಿ ಪ್ರತಿಯೊಂದಕ್ಕೂ ಬೇರೆ ಬೇರೆಯಾಗಿರುತ್ತದೆ. ಇಂತಹ ಸಂಸ್ಕಾರಗಳ ಪ್ರದಾನವು ಸಾಕಷ್ಟು ನಡೆದು, ಅದರ ಮೊತ್ತವು ಒಂದು ನಿರ್ದಿಷ್ಟ ಪ್ರಮಾಣವನ್ನು ತಲುಪಿದಾಗ ಆ ಶ್ರುತಿಯಲ್ಲಿ ಸ್ವರತ್ವವು ಉಂಟಾಗುತ್ತದೆ. ಬೇರೆ ಬೇರೆ ಸ್ವರಗಳಿಗೆ ಈ ಪ್ರಮಾಣವು ಬೇರೆ ಬೇರೆಯಾಗಿರುತ್ತದೆ; ಸಂಸ್ಕಾರಪ್ರದಾನವು ಎರಡು, ಮೂರು ಮತ್ತು ನಾಲ್ಕು ಹಂತಗಳಲ್ಲಿ ಸಾಮಾನ್ಯವಾಗಿ ಸ್ವರಾಷ್ಟಕದಲ್ಲಿ ನಡೆಯುತ್ತದೆ. ಇನ್ನೊಂದು ಶ್ರುತಿಗೆ ಸಂಬಂಧಿಸದೆ ಇರುವ ಯಾವುದೇ ಒಂದೇ ಒಂದು ಶ್ರುತಿಯ ಸ್ವತಂತ್ರ ಸಂಸ್ಕಾರವು ಸ್ವರತ್ವಕ್ಕೆ ಸಾಕಾಗುವುದಿಲ್ಲ. ಅಂತಹ ಒಂದೇ ಶ್ರುತಿಯ ಅಂತರದಲ್ಲಿರುವ ಎರಡು ಧ್ವನಿಗಳು ಒಂದರಲ್ಲೊಂದು ಸಾಂಕರ್ಯವನ್ನು ಪಡೆದು ಬಿಡುತ್ತವೆ, ಎಂದರೆ ಕಲಬೆರಕೆಯಾಗಿಬಿಡುತ್ತವೆ, ಎಂಬ ಅಭಿನವಗುಪ್ತನ ಮಾತನ್ನು—

ತತ್ರ ಪ್ರಯತ್ನವಶಾತ್ ಕಸ್ಮಿಂಶ್ಚಿದಭಿಹತೇ ಸ್ಥಾನೇ ಜಾತೇಽಭಿಘಾತಜಾಚ್ಛಬ್ದಾತ್ ಶಬ್ದಾಂತರೇಽನುಸ್ವಾನಾತ್ಮನಿ ಸ್ವರೇ ತದ್ವ್ಯವಹಿತಸ್ಥಾನಾಭಿಘಾತೋ ಯದಿ ಸ್ಯಾತ್ ಸಂಕೀರ್ಯೇತಾವನ್ । ಪೂರ್ವಾಪರೇ ಸ್ವರೇ ಸ್ಥಾನಗತೋ ಯಥಾ ತತ್ರ ಸಂಕೀರ್ಣಭಾವಸ್ತಥಾ ಸ್ವರಗತೋಽಪಿ ತದ್ವಿಭಾಗಲಾಭಾರ್ಥಂ ಮಧ್ಯೇ ವರ್ಜನೀಯಸ್ಥಾನಭಾಗೋಽನ್ಯತ್ರ ಸ್ವರ ಇತಿ ದ್ವಿಶ್ರುತಿಕಸ್ಯ ಸಂಪತ್ತಿಃ | 186

ಏಕಶ್ರುತ್ಯುತ್ಕರ್ಷಸ್ತು ನೋಕ್ತಃ ಸ್ಥಾನಸಾಂಕರ್ಯೇಣ ಸ್ವರಸಾಂಕರ್ಯಪ್ರಸಂಗಾದಿತಿ ಹ್ಯುಕ್ತಮ್ | 185

ಈಗಾಗಲೇ ಉದ್ಧರಿಸಿದೆ. ಇದೇ ರೀತಿಯಲ್ಲಿ ನಾಲ್ಕು ಶ್ರುತಿಗಳಿಗಿಂತ ಸಂಸ್ಕಾರದ ಮೊತ್ತವನ್ನು ಯಾವುದೇ ಸ್ವರವು ನಿರ್ವಹಿಸಲಾರದು :

ತತಃ ಪರಂ ಚತುರಾದಿವ್ಯವಧಾನೇ ಽತಿಪ್ರಯತ್ನವಶಾತ್ ದ್ವೈಸ್ವರ್ಯಮಿತಿ ಪಂಚಶ್ರುತಿಕಾದೇರಸಂಭವಃ |

. . . ಇಹಾಪ್ಯಲಂಕಾರೇಷು ತ್ರಿಶ್ರುತೇಃ ಕಂಪನಂ ವಕ್ಷ್ಯತೇ । ತಸ್ಯೋರ್ಧ್ವಾಧಃಸ್ವರಸ್ಯ ಸ್ಪರ್ಶನೇಽಪಿ ಸ್ವರತಾಕ್ಷಮತ್ವಾತ್ ಚತುಶ್ರುತೇರ್ಹಿ ನೋರ್ಧ್ವಮಸ್ತಿ, ದ್ವಿಶ್ರುತೇರ್ನಾಧರಮಿತಿ | 185

## 11. ಸ್ವರನಿರ್ಮಿತಿ ನಿಯಮಗಳು

ಹೀಗೆ, ದೀಪ್ತಾದಿ ಶ್ರುತಿಗಳಲ್ಲಿ ಸ್ವರನಿರ್ಮಿತಿಗೆ ಈ ನಿಯಮಗಳನ್ನು ಹೇಳಬಹುದು : 1) ಒಂದೇ ಒಂದರ ಸ್ವತಂತ್ರಸಂಸ್ಕಾರವು ಸ್ವರತ್ವಕ್ಕೆ ಸಾಕಾಗುವುದಿಲ್ಲ; 2) ಒಂದೇ ಶ್ರುತಿಯು ಒಂದೇ ಸ್ವರದಲ್ಲಿ ಎರಡು ಅಥವಾ ಹೆಚ್ಚುಸಲ ಸಂಸ್ಕಾರಪ್ರದಾನವನ್ನು ಮಾಡಲಾಗದು; ಆದುದರಿಂದಲೇ ಹದಿನೇಳನೆಯ ಮತ್ತು ಹದಿನೆಂಟನೆಯ ಶ್ರುತಿಗಳಲ್ಲಿ ಎರಡರಲ್ಲಿಯೂ ಕರುಣಾಶ್ರುತಿಯಿದ್ದರೂ ಮೊದಲನೆಯದು ಪಂಚಮದ ಸ್ವಸಂವೇದ್ಯತೆಗೆ ಕಾರಣ; ಎರಡನೆಯದು ಧೈವತದ ಪ್ರಥಮಹೇತು. ಧೈವತವು ಮಧ್ಯಮಗ್ರಾಮದಲ್ಲಿ ಚತುಃಶ್ರುತಿಕವಾದಾಗ ಮಾತ್ರ ಈ ನಿಯಮವು ಭಂಗವಾಗುತ್ತದೆ. ಇಡೀ ಸ್ವರಾಷ್ಟಕದ ಸ್ವರವ್ಯವಸ್ಥೆಯಲ್ಲಿ ಇದೊಂದೇ ಈ ನಿಯಮಕ್ಕೆ ಅಪವಾದ. ಇದು ಹೀಗಿರುವುದು ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮಗಳಲ್ಲಿರುವ ವ್ಯತ್ಯಾಸವನ್ನು ಉಂಟುಮಾಡುವುದಕ್ಕಾಗಿ. ಇವೆರಡು ಗ್ರಾಮಗಳಿಗೂ ವ್ಯತ್ಯಾಸವು ಉಂಟಾಗುವುದು, ಪಂಚಮಕ್ಕೆ ಷಡ್ಜಗ್ರಾಮದಲ್ಲಿ ಚತುಃಶ್ರುತಿಕತ್ವವೂ ಮಧ್ಯಮಗ್ರಾಮದಲ್ಲಿ ತ್ರಿಶ್ರುತಿಕತ್ವವೂ ಇರುವುದರಿಂದ. ಆದರೆ ಪಂಚಮವು ತಾನ, ಅಲಂಕಾರಾದಿ ಗೀತಸಂದರ್ಭಗಳಲ್ಲಿ ಲೋಪವಾಗಿಬಿಟ್ಟರೆ ಆಗ ಗೀತವು ಅಥವಾ ರಾಗವು ಯಾವ ಗ್ರಾಮಕ್ಕೆ ಸೇರಿದ್ದು ಎಂಬುದೇ ತಿಳಿಯದೆ ಹೋಗುತ್ತದೆ; ಇದನ್ನು ನಿವಾರಿಸಲೆಂದೇ ಗ್ರಾಮವೊಂದರಲ್ಲಿ ಭೇದವನ್ನು ಪಂಚಮದ ಮೂಲಕ ಹೇಳಿದಂತೆಯೇ ಧೈವತದ ಮೂಲಕವೂ ಹೇಳಲಾಗಿದೆ; ಗ್ರಾಮಭೇದಹೇತುವಾದ ಧೈವತಕ್ಕೆ ಪಂಚಮದಿಂದ ವಿಪರ್ಯಾಸವಾದ

ಲಕ್ಷಣ, ಎಂದರೆ ಷಡ್ಜಗ್ರಾಮದಲ್ಲಿ ತ್ರಿಶ್ರುತಿ, ಮಧ್ಯಮಗ್ರಾಮದಲ್ಲಿ ಚತುಃಶ್ರುತಿ. ಆದುದರಿಂದ ಪಂಚಮವು ಲೋಪವಾದರೂ ಧೈವತದ ಪ್ರಮಾಣದಿಂದ ಗೀತ ಅಥವಾ ರಾಗವು ಯಾವ ಗ್ರಾಮದಿಂದ ಹುಟ್ಟಿತೆಂದು ನಿರ್ಧರಿಸ ಬಹುದು. ಆದುದರಿಂದಲೇ ಎಲ್ಲಾ ಗೀತಸಂದರ್ಭಗಳಲ್ಲಿಯೂ ಷಡ್ಜಗ್ರಾಮದಲ್ಲಿ ಧೈವತವನ್ನೂ ಮಧ್ಯಮ ಗ್ರಾಮದಲ್ಲಿ ಪಂಚಮವನ್ನೂ ಎರಡೂ ಗ್ರಾಮಗಳಲ್ಲಿ (ಎಂದರೆ ಗೀತಸಂದರ್ಭವು ಯಾವುದೇ ಇರಲಿ), ಮಧ್ಯಮ ವನ್ನೂ ಲೋಪಮಾಡಕೂಡದೆಂಬ ನಿಯಮವನ್ನು ದತ್ತಿಲಾದಿ ಪೂರ್ವಾಚಾರ್ಯರು ಬಹುಕಾಲದಿಂದಲೂ ವಿಧಿಸುತ್ತಲೇ ಬಂದಿದ್ದಾರೆ :

ಪಂಚಮಂ ಮಧ್ಯಮಗ್ರಾಮೇ ಷಡ್ಜಗ್ರಾಮೇ ತು ಧೈವತಮ್ ।
ಅನಾಶಿನಂ ವಿಜಾನೀಯಾತ್ ಸರ್ವತ್ರೈವ ತು ಮಧ್ಯಮಮ್ ॥[270]

ಈ ಗ್ರಾಮಗಳಲ್ಲಿ ವ್ಯತ್ಯಾಸವನ್ನುಂಟುಮಾಡುವುದು ಕರುಣಾಶ್ರುತಿ ಎಂಬುದನ್ನಿಲ್ಲಿ ಸ್ಮರಿಸಬೇಕು. ಕರುಣಾದಲ್ಲಿ ಪಂಚಮವಿದ್ದರೆ ಷಡ್ಜಗ್ರಾಮ ; ಅದರ ಬದಲು ಅದು ಆಯತಾದಲ್ಲಿ ಉಪಸ್ಥಿತವಾಗಿ ವಿಕೃತವಾದರೆ ಮಧ್ಯಮಗ್ರಾಮ. ಪಂಚಮವಾದರೂ ಸ್ಥಾನಪಲ್ಲಟದಿಂದ ವಿಕೃತವಾಗಬಲ್ಲುದು. ಆದರೆ ಧೈವತಕ್ಕೆ ವಿಕೃತಿಯು ಸ್ಥಾನಪಲ್ಲಟದಿಂದ ಆಗಲಾರದುದರಿಂದ ಅದಕ್ಕೆ ಇಡೀ ಸ್ವರಸಪ್ತಕದಲ್ಲಿ ಎಲ್ಲಿಯೂ ಇಲ್ಲದ ಒಂದು ವಿಶೇಷ ಲಕ್ಷಣ ವನ್ನು ಗ್ರಾಮಭೇದಹೇತುವನ್ನಾಗಿ ಹೇಳಬೇಕಾಯಿತು. ಆದುದರಿಂದಲೇ ಪಂಚಮದ ಕೊನೆ, ಧೈವತದ ಮೊದಲು ಈ ಪ್ರದೇಶದಲ್ಲಿ ಕರುಣಾಶ್ರುತಿಯ ದ್ವಿರುಕ್ತಿಯನ್ನು ಪೂರ್ವಾಚಾರ್ಯರು ಹೇಳಿದರು. ಇದರಿಂದಾಗಿ ಒಂದೇ ಕರುಣಾ ಶ್ರುತಿಯ ಸಂಸ್ಕಾರವಿದ್ದರೆ ಧೈವತವು ಷಡ್ಜಗ್ರಾಮದ್ದು ; ಎರಡು ಕರುಣಾಶ್ರುತಿಗಳ ಅನುಕ್ರಮದ ಸಂಸ್ಕಾರವಿದ್ದರೆ ಮಧ್ಯಮಗ್ರಾಮ, ಹೀಗೆ ಇಲ್ಲಿ ಶಾಸ್ತ್ರದ ಅಭಿಸಂಧಿ. ಷಡ್ಜಗ್ರಾಮದಲ್ಲಿ ಪಂಚಮವಾಗಲೀ ಮಧ್ಯಮಗ್ರಾಮದಲ್ಲಿ ಧೈವತವಾಗಲೀ ಲೋಪವಾದರೂ ಆಯಾ ಗ್ರಾಮದ ವೈಶಿಷ್ಟ್ಯವು ನಾಶವಾಗದಿರಲಿ ಎಂಬುದು ಇದರ ಉದ್ದೇಶ. ಹೀಗೆ ಕರುಣಾಶ್ರುತಿಯು ಸ್ವರಾಷ್ಟಕದಲ್ಲಿ ಬಹು ಪ್ರಮುಖವಾದ ಸ್ಥಾನವನ್ನು ಗಳಿಸಿದೆ. ಇದೇ ರೀತಿಯಲ್ಲಿ ಷಡ್ಜಸಾಧಾರಣವಾದಾಗ ಋಷಭವು ಚತುಃಶ್ರುತಿಕವಾದಾಗಲೂ ಕರುಣಾಶ್ರುತಿಯು ಷಡ್ಜಗ್ರಾಮದ ವೈಶಿಷ್ಟ್ಯವನ್ನು ಕಾದಿರಿಸುತ್ತದೆ. 3) ಐದೂ ಶ್ರುತಿಗಳು ಒಂದೇ ಸ್ವರದಲ್ಲಿ ಎಂದಿಗೂ ಬರಲಾರವು. ಹಾಗೆ ಬಂದರೆ, ದ್ವೈಸ್ವರ್ಯಕ್ಕೆ ಕಾರಣವಾಗುತ್ತವೆ. 4) ಐದೂ ಶ್ರುತಿಗಳು ಅನುಕ್ರಮದಲ್ಲಿ ಬರುವುದು ಸ್ವರಾಷ್ಟಕದ ಪ್ರಾರಂಭದಲ್ಲಿ ಮಾತ್ರ.

## 12. ಸಂಯೋಜನೆಗಳು

ದೀಪ್ತಾ ಮೊದಲಾದ ಐದು ಶ್ರುತಿಗಳಲ್ಲಿ ಎರಡು, ಮೂರು ಮತ್ತು ನಾಲ್ಕು ಶ್ರುತಿಗಳ ಸಂಯೋಜನೆಗಳು ಬಹುಸಂಖ್ಯೆಯಲ್ಲಿ ದೊರೆಯುತ್ತವೆ. ದ್ವಿಶ್ರುತಿಕ ಸಂಯೋಜನೆಗಳನ್ನು $^5C_2$ ಎಂಬ ಬೀಜಗಣಿತ ನಿಯಮ ದಿಂದಲೂ ತ್ರಿಶ್ರುತಿಕ ಸಂಯೋಜನೆಗಳನ್ನು $^5C_3$ ಎಂದೂ, ಚತುಃಶ್ರುತಿಕ ಸಂಯೋಜನೆಗಳನ್ನು $^5C_4$ ಎಂದೂ ಪಡೆಯಬಹುದು.

ಹೀಗೆ, ದ್ವಿಶ್ರುತಿಕ ಸಂಯೋಜನೆಗಳು $= {}^5C_2 = \frac{5\,!}{2\,!} = \frac{5 \times 4}{1 \times 2} = 10$

ತ್ರಿಶ್ರುತಿಕ ಸಂಯೋಜನೆಗಳು $= {}^5C_3 = {}^5C_2 \; (\because {}^nC_r = {}^nC_{n-r}) = 10$

ಚತುಃಶ್ರುತಿಕ ಸಂಯೋಜನೆಗಳು $= {}^5C_4 = \frac{5\,!}{4\,!} = \frac{5 \times 4 \times 3 \times 2}{1 \times 2 \times 3 \times 4} = 5$

270 ದತ್ತಿಲ, ಉ.ಗ್ರಂ., 20.

ದೀಪ್ತಾ = ದೀ, ಆಯತಾ = ಆ, ಕರುಣಾ = ಕ, ಮಧ್ಯಾ = ಮ, ಮೃದು = ಮೃ ಎಂಬ ಸವಿಾಕರಣಗಳ ನ್ನಿಟ್ಟುಕೊಂಡರೆ, 1) ದೀಆ 2) ದೀಮೃ 3) ದೀಮ 4) ದೀಕ 5) ಆಮೃ 5) ಆಮ 7) ಆಕ 8) ಮೃಮ 9) ಮೃಕ ಮತ್ತು 10) ಮಕ ಎಂಬ ಹತ್ತು ದ್ವಿಶ್ರುತಿಕ ಸಂಯೋಜನೆಗಳಾಗುತ್ತವೆ. ಇವುಗಳಲ್ಲಿ ಕ್ರಮವು ವಿಪರ್ಯಾಸವಾಗುವುದರಿಂದ, ಆದೀ, ಮೃದೀ ಇತ್ಯಾದಿಯಾದ ಹತ್ತು ಅವಾಂತರ ಭೇದಗಳೂ ಲಭಿಸುತ್ತವೆ. ತ್ರಿಶ್ರುತಿಕ ಸಂಯೋಜನೆಗಳೂ ಸಹ 1) ದೀಆಮೃ 2) ದೀಆಮ 3) ದೀಆಕ 4) ದೀಮೃಮ 5) ದೀಮೃಕ 6) ದೀಮಕ 7) ಆಮೃಮ 8) ಆಮೃಕ 9) ಆಮಕ ಮತ್ತು 10) ಮೃಮಕ ಎಂಬ ಹತ್ತಾಗುತ್ತವೆ. ಇವುಗಳಲ್ಲಿ ಪ್ರತಿಯೊಂದರಲ್ಲಿ $^nP_r = n(n-1)(n-2) \ldots (n-r+1)$ ಎಂಬ ಬೀಜಗಣಿತ ನಿಯಮದಂತೆ $^3P_3 = 6$ ಭೇದಗಳು ಹುಟ್ಟುತ್ತವೆ. ಉದಾಹರಣೆಗೆ, ಮೊದಲನೆಯದರಲ್ಲಿ 1) ದೀಆಮೃ 2) ದೀಮೃಆ 3) ಆದೀಮೃ 4) ಆಮೃದೀ 5) ಮೃದೀಆ ಮತ್ತು 6) ಮೃಆದೀ ಎಂಬ ಆರು ಬೇರೆ ಬೇರೆಯ ಅನುಕ್ರಮಗಳು ಹುಟ್ಟುತ್ತವೆ. ಇದೇ ರೀತಿಯಲ್ಲಿ ಚತುಃಶ್ರುತಿಕ ಸಂಯೋಜನೆಗಳು 1) ದೀಆಮೃಮ 2) ಆಮೃಮಕ 3) ಮೃಮಕದೀ 4) ಮಕದೀಆ ಮತ್ತು 5) ಕದೀಆಮೃ ಎಂಬ ಐದು ಹುಟ್ಟುತ್ತವೆ. ಇವುಗಳಲ್ಲಿ ಪ್ರತಿಯೊಂದ ರಲ್ಲಿಯೂ $^4P_4$ ಎಂಬ ನಿಯಮವನ್ನು ಅನುಸರಿಸಿ ಇಪ್ಪತ್ತನಾಲ್ಕು ಅನುಕ್ರಮದ ಪ್ರಭೇದಗಳು ಹುಟ್ಟುತ್ತವೆ. ಉದಾಹರಣೆಗೆ ಐದನೆಯ ಕದೀಆಮೃ ಎಂಬ ಸಂಯೋಜನೆಯಲ್ಲಿ ಒಂದರಲ್ಲೇ

| | | | |
|---|---|---|---|
| 1 ಕದೀಆಮೃ | 7 ಮೃಕದೀಆ | 13 ಆಮೃಕದೀ | 19 ದೀಆಮೃಕ |
| 2 ಕದೀಮೃಆ | 8 ಮೃಕಆದೀ | 14 ಆಮೃದೀಕ | 20 ದೀಆಕಮೃ |
| 3 ಕಆದೀಮೃ | 9 ಮೃಆಕದೀ | 15 ಆದೀಮೃಕ | 21 ದೀಕಆಮೃ |
| 4 ಕಆಮೃದೀ | 10 ಮೃಆದೀಕ | 16 ಆದೀಕಮೃ | 22 ದೀಕಮೃಆ |
| 5 ಕಮೃಆದೀ | 11 ಮೃದೀಕಆ | 17 ಆಕಮೃದೀ | 23 ದೀಮೃಕಆ |
| 6 ಕಮೃದೀಆ | 12 ಮೃದೀಆಕ | 18 ಆಕದೀಮೃ | 24 ದೀಮೃಆಕ |

ಎಂಬ ಇಪ್ಪತ್ತುನಾಲ್ಕು ಬೇಧಗಳಾಗುತ್ತವೆ. ಆದುದರಿಂದ ಒಟ್ಟಿನಲ್ಲಿ ಸಂಯೋಜನಾವ್ಯುತ್ಕ್ರಮಗಳನ್ನೆಲ್ಲ ಸೇರಿಸಿ ಈ ಐದು ಶ್ರುತಿಗಳಿಂದ

| | |
|---|---|
| ದ್ವಿಶ್ರುತಿಕಗಳು | $10 \times 2 = 20$ |
| ತ್ರಿಶ್ರುತಿಕಗಳು | $10 \times 6 = 60$ |
| ಚತುಃಶ್ರುತಿಕಗಳು | $5 \times 24 = 120$ |
| ಒಟ್ಟು | 200 |

ಎಂಬ ಇನ್ನೂರು ಸ್ವರಭೇದಗಳು ಗಣಿತರೀತ್ಯಾ ಸಿದ್ಧವಾಗುತ್ತವೆ. ಸ್ಥಾನಾಂತರದಿಂದ ಇವು ಹೊಂದುವ ಸಂಸ್ಕಾರ ವಿಶೇಷಗಳನ್ನು ಲೆಕ್ಕಿಸಿದರೆ ಇವು ಅಸಂಖ್ಯಾತವಾಗುತ್ತವೆ. ಆದರೂ ಪ್ರಯೋಗದಲ್ಲಿ ಮಾತ್ರ ಏಳೇ ಪ್ರಕೃತಿ ಸ್ವರಗಳೂ ಮತ್ತು ಕೇವಲ ಹನ್ನೆರಡು ವಿಕೃತಿಸಂದರ್ಭಗಳೂ, ಇವುಗಳಲ್ಲಿ ಕೇವಲ ಐದು ವಿಕೃತಿಸ್ಥಾನಗಳೂ ಕೂಡಿ ಲಕ್ಷ್ಯದಲ್ಲಿ ಹನ್ನೆರಡೇ ಸ್ವರಸ್ಥಾನಗಳು ಲಭಿಸುತ್ತವೆ. ಇದು ಹೇಗೆ? ಇದಕ್ಕೆ ಎರಡು ಕಾರಣಗಳಿವೆ. ಮೊದಲನೆ ಯದಾಗಿ, ಇವುಗಳಲ್ಲಿ ಯಾವುದೇ ಸಂಯೋಜನೆಯನ್ನೂ ಅದರ ವ್ಯುತ್ಕ್ರಮಗಳನ್ನೂ ಪೂರ್ವಾಪರ ಸಂಬಂಧ ವಿಲ್ಲದೆ ಗಣಿಸಿದರೆ ಅದಕ್ಕೆ ಸ್ವರತ್ವದ ಪ್ರಾಪ್ತಿಯುಂಟಾಗುವುದಿಲ್ಲ. ಶ್ರುತಿಗಳು ಹೇಗೆ ತಮ್ಮ ತಮ್ಮ ಸಂಸ್ಕಾರಗಳನ್ನೂ,

ಹಿಂದಿನ ಶ್ರುತಿಗಳು ಉತ್ತರೋತ್ತರವಾಗಿ ಅರ್ಪಿಸಿದ ಸಂಸ್ಕಾರವನ್ನೂ ಮುಂದಿನವುಗಳಿಗೆ ಅರ್ಪಿಸುವುದರಿಂದ ಸ್ವರಕ್ಕೆ ಸ್ವಸಂವೇದ್ಯತೆಯುಂಟಾಗುವುದೋ, ಅದೇ ರೀತಿಯಲ್ಲಿ ಸ್ವರಗಳೂ ತಮ್ಮ ಸ್ವಸಂವೇದ್ಯತೆಯ ಮೊತ್ತವನ್ನು ಉತ್ತರೋತ್ತರವಾಗಿ ಅರ್ಪಿಸುತ್ತಾ ಬರುವುದರಿಂದಲೇ ಬೇರೆ ಬೇರೆ ಸ್ವರಗಳ ಉತ್ಪತ್ತಿಯಾಗುವುದು. ಹೀಗೆ ಧೈವತವು ಪಂಚಮದಿಂದ ತ್ರಿಶ್ರುತಿಕವಾದುದರಿಂದ ಮಾತ್ರ ರಮ್ಯಾ ಎಂಬ ಮಧ್ಯಾಶ್ರುತಿಜಾತಿಯಲ್ಲಿ ಸ್ವಸಂವೇದ್ಯತೆಯನ್ನು ಪಡೆಯುವುದಿಲ್ಲ. ಷಡ್ಜವು ತನ್ನ ಸ್ವಸಂವೇದ್ಯತೆಯನ್ನು ಸವಿಶೇಷ ಊರ್ಧ್ವಸ್ಪರ್ಶದಿಂದ ರಿಷಭದಲ್ಲಿ ಅರ್ಪಿಸುತ್ತದೆ. ರಿಷಭವು ತನ್ನದೇ ಆದ ಸ್ವಸಂವೇದ್ಯತೆಯನ್ನೂ ರಿಷಭದಿಂದ ಸಂಗ್ರಹಿಸಿದುದನ್ನೂ ಸೇರಿಸಿ ಆದ ಸಂಕೀರ್ಣಮೊತ್ತದ ಸಂಸ್ಕಾರ, ಸಂವೇದ್ಯತೆಗಳನ್ನು ಗಾಂಧಾರದಲ್ಲಿ ಅರ್ಪಿಸುತ್ತದೆ. ಹೀಗೆಯೇ ಧೈವತದ ವರೆಗೂ ಈ ಕ್ರಿಯೆಯು ಮುಂದುವರೆಯುವುದರಿಂದಲೇ ಧೈವತಕ್ಕೆ ಸ್ವಸಂವೇದ್ಯತೆಯೇ ಹೊರತು ಅದು ಕೇವಲ ತ್ರಿಶ್ರುತಿಕವೆಂಬ ಕಾರಣದಿಂದಾಗಲೀ ಕರುಣಾ, ಆಯತಾ ಮತ್ತು ಮೃದುಗಳ ಸಂಕಲನವೆಂಬುದರಿಂದಾಗಲೀ ಅಲ್ಲ. ಹೀಗೆಯೇ ಇತರ ಸ್ವರಗಳಲ್ಲಿಯೂ ಈ ವಾದವನ್ನು ಅನ್ವಯಿಸಿಕೊಳ್ಳಬೇಕು. ಹಾಗಾದರೆ ಇದೇ ಕ್ರಿಯೆಯನ್ನು ಮುಂದುವರಿಸುತ್ತಾ ಲೆಕ್ಕವಿಲ್ಲದಷ್ಟು ಸ್ವರಗಳನ್ನು ಪಡೆಯಬಾರದೇಕೆ? ಏಕೆಂದರೆ ಈ ಬಗೆಯ ಸಂಸ್ಕಾರ-ಪ್ರದಾನಕ್ಕೂ ಸ್ವಸಂವೇದ್ಯತೆಯ ಅರ್ಪಣಕ್ಕೂ ಒಂದು ಮಿತಿಯುಂಟು. ಈ ಮಿತಿಯು ಅಷ್ಟಮಸ್ವರವೇ, ಎಂದರೆ ಸ್ಥಾಯಿಯ ವಿಸ್ತಾರ. ಇದೇ ಪ್ರಕರಣದ ಮೊದಲಿನಲ್ಲಿ ಸ್ಥಾಯಿಯ ವಿವೇಚನೆ ನಡೆಸುವಾಗ ದ್ವಿಘಟಕವಾದದ ಸಂದರ್ಭದಲ್ಲಿ ಸ್ವರವು ದ್ವೈಗುಣ್ಯದಿಂದ ಆವರ್ತನ ಸ್ವಭಾವವನ್ನೂ ಇದರಿಂದ ಅತ್ಯಂತ ಸಾದೃಶ್ಯಸಾಮ್ಯಗಳನ್ನು ಪಡೆಯುತ್ತದೆಂದು (ಪು. 191–194) ಹೇಳಿದೆ. ಇದಕ್ಕೆ ಕಾರಣವು ಅನುರಣನವನ್ನು ಉಂಟುಮಾಡುವ ವಿವಿಧ ಆವರ್ತಕ ಕಂಪನಗಳು ಸ್ವರ – ದ್ವಿಗುಣಸ್ವರ ಇವೆರಡರಲ್ಲಿಯೂ ಸಮಾನ ಸಂಖ್ಯೆ, ಪ್ರಮಾಣ ಮತ್ತು ಶಕ್ತಿಗಳಲ್ಲಿರುವುದೇ ಆಗಿದೆ ಎಂದೂ ಅಲ್ಲಿಯೇ ಸೂಚಿಸಿದೆ. ಈ ಮೂರನ್ನೇ ನಾನ್ಯದೇವನು ಕಾಲ, ಕಲಾ ಮತ್ತು ಪ್ರಮಾಣಗಳೆಂಬ ಶ್ರುತಿಯ ಗುಣಗಳಾಗಿ ವ್ಯವಹರಿಸಿದ್ದಾನೆ. ಆದುದರಿಂದ ದ್ವಿಗುಣಸ್ವರದಲ್ಲಿ ಶ್ರುತಿಯ ಸಂಸ್ಕಾರಪ್ರದಾನ ಗುಣದಿಂದಾಗಿ ಆವರ್ತಕತ್ವವು ಉಂಟಾಗುತ್ತದೆ. ಆದುದರಿಂದ ಸ್ವರಗಳ ಉತ್ತರೋತ್ತರಸಂಸ್ಕಾರಪ್ರದಾನ ಮತ್ತು ಸ್ವಸಂವೇದ್ಯತಾ ಅರ್ಪಣಗಳಿಂದ ಅಸಂಖ್ಯಾತ ಸ್ವರಗಳನ್ನು ಪಡೆಯಲಾಗುವುದಿಲ್ಲ.

## 13. ಶ್ರುತಿಜಾತಿಗಳ ವ್ಯುತ್ಕ್ರಮ-ಸಂಯೋಜನೆಗಳು

ಹಾಗಾದರೆ ತ್ರಿಸ್ಥಾನವ್ಯಾಪ್ತಿಯಲ್ಲಿ ಅರವತ್ತಾರು ಶ್ರುತಿಗಳನ್ನು ಪೂರ್ವಾಚಾರ್ಯರು ಪ್ರತ್ಯೇಕವೆಂದು ಹೇಳದ್ದೇಕೆ? ಶಾರ್ಙ್ಗದೇವನು ಸಹ ಮಂದ್ರ ಮಧ್ಯ ತಾರಸ್ಥಾಯಿಗಳ ಗುಣದಿಂದ ಪ್ರತಿ ಸ್ವರವೂ ಮೂರುವಿಧವೆಂದು—' ತೇ ಮಂದ್ರಮಧ್ಯತಾರಾಖ್ಯಸ್ಥಾನಭೇದಾತ್ ತ್ರಿಧಾ ಮತಾಃ | '[271]—ಎಂದು ಹೇಳಿದ್ದೇಕೆ? ಏಕೆಂದರೆ, ದ್ವೈಗುಣ್ಯದಿಂದ ಸ್ವರವೈವಿಧ್ಯದಲ್ಲಿ ಮಿತಿಯುಂಟಾದರೂ ಮೇಲೆ ಹೇಳದ ಶ್ರುತಿಯು ಮೂರು ಗುಣಗಳಲ್ಲಿ ಸಂಪೂರ್ಣವಾಗಿ ಸಾಮ್ಯವನ್ನು ಸ್ಥಾನಾಂತರಗಳಲ್ಲಿ ಪಡೆಯದಿರುವುದರಿಂದ ವಾದೀತ್ವಭಗ್ನತಾಪರಿಣಾಮವು ಉಂಟಾಗುವುದೆಂದು ಮೇಲೆ (ಪು. 196) ಹೇಳಿದೆ. ಶ್ರುತಿಯ ಲಕ್ಷಣಗಳಲ್ಲಿ ಸ್ಥಾನಾಂತರವನ್ನೂ ಎಣಿಸುವುದರಿಂದ ಅದರ ಸ್ವಭಾವ, ಸಂಸ್ಕಾರಾದಿಗಳಲ್ಲಿ ವ್ಯತ್ಯಾಸವಾಗುವುದೆಂಬ ತತ್ತ್ವವನ್ನು ಈಗಾಗಲೇ ಹೇಳುತ್ತಾಬರಲಾಗಿದೆ. ಈ ಕಾರಣದಿಂದಲೇ ದೀಪ್ತಾದಿ ಪಂಚಶ್ರುತಿಗಳು ಸ್ವಲ್ಪ ಭಿನ್ನಗಳಾಗಿ ಬೇರೆ ಬೇರೆ ಸ್ಥಾನಗಳಲ್ಲಿ ವರ್ತಿಸಿ ವಾದೀತ್ವ-ಭಗ್ನತಾಪರಿಣಾಮವನ್ನು ಸ್ವಲ್ಪ ಸ್ವಲ್ಪವಾಗಿ ಉಂಟುಮಾಡುತ್ತಾಬರುತ್ತವೆ. ಎಂದೇ ಒಂದೇ ಸ್ವರವು ಬೇರೆ ಬೇರೆ ಸ್ಥಾಯಿಯಲ್ಲಿ ನಿರ್ದಿಷ್ಟವ್ಯಕ್ತಿತ್ವವನ್ನು ಪಡೆದಿರುವುದು.

271 ಶಾರ್ಙ್ಗದೇವ, ಉ.ಗ್ರಂ., , 3, 39.

ಎರಡನೆಯ ಕಾರಣವೇನೆಂದರೆ ಸ್ವರಸಪ್ತಕದಲ್ಲಿ ಈ ಐದು ಶ್ರುತಿಗಳ ವಿವಿಧ ಸ್ಥಾನಗಳನ್ನು ನಿಯತವಮಾಡಿರುವುದು. ಇದರಿಂದ ಇಪ್ಪತ್ತೆರಡರ ಅನುಕ್ರಮವು ನಿಯತವಾಗಿ ಸಿದ್ಧವಾಗಿಬಿಡುತ್ತದೆ. ಆದುದರಿಂದ ಮೇಲೆ ಹೇಳಿದ ಇನ್ನೂರರಲ್ಲಿ ಇಷ್ಟಬಂದ ಸಂಯೋಜನೆಯನ್ನು ಇಷ್ಟಬಂದ ವ್ಯುತ್ಕ್ರಮದಲ್ಲಿ ಪಡೆಯಲು ಅಸಾಧ್ಯ. ದ್ವಿ–, ತ್ರಿ–, ಅಥವಾ ಚತುಃ-ಶ್ರುತಿಗಳ ಸಂಯೋಜನೆಯಾಗಲೀ ವ್ಯುತ್ಕ್ರಮವಾಗಲೀ ಸ್ವರಸಪ್ತಕದಲ್ಲಿ ಈ ರೀತಿ ನಿಗದಿಯಾಗಿ ಬಿಟ್ಟಿವೆ: ದ್ವಿಶ್ರುತಿಗಳು: 1) ದೀಪ್ತಾ-ಆಯತಾ: ಚ್ಯುತಷಡ್ಜ (ಷಡ್ಜಸಾಧಾರಣದಲ್ಲಿ); 2) ಮೃದು-ಮಧ್ಯಾ: ಅಚ್ಯುತಷಡ್ಜ (ಕಾಕಲೀ ನಿಷಾದದಲ್ಲಿ); 3) ದೀಪ್ತಾ-ಆಯತಾ: ಶುದ್ಧ ಗಾಂಧಾರ; 4) ಆಯತಾ-ಮೃದು: ಚ್ಯುತಮಧ್ಯಮ: (ಮಧ್ಯಮಸಾಧಾರಣದಲ್ಲಿ); 5) ಮೃದು-ಮಧ್ಯಾ: ಚ್ಯುತಮಧ್ಯಮ (ಅಂತರಗಾಂಧಾರದಲ್ಲಿ) 6) ದೀಪ್ತಾ-ಮಧ್ಯಾ: ಶುದ್ಧನಿಷಾದ.

ತ್ರಿಶ್ರುತಿಕಗಳು: 1) ದೀಪ್ತಾ-ಮಧ್ಯಾ-ದೀಪ್ತಾ: ಕೈಶಿಕಿ ನಿಷಾದ; 2) ಕರುಣಾ-ಮಧ್ಯಾ-ಮೃದು: ಶುದ್ಧ ರಿಷಭ; 3) ದೀಪ್ತಾ-ಆಯತಾ-ದೀಪ್ತಾ: ಸಾಧಾರಣ ಗಾಂಧಾರ 4) ಮೃದು-ಮಧ್ಯಾ-ಆಯತಾ: ವಿಕೃತ ಪಂಚಮ; 5) ಕರುಣಾ-ಆಯತಾ-ಮಧ್ಯಾ: ಶುದ್ಧ ಧೈವತ.

ಚತುಃಶ್ರುತಿಕಗಳು: 1) ದೀಪ್ತಾ-ಆಯತಾ-ಮೃದು-ಮಧ್ಯಾ: ಷಡ್ಜ; 2) ಮಧ್ಯಾ-ಕರುಣಾ-ಮಧ್ಯಾ-ಮೃದು: ವಿಕೃತರಿಷಭ (ಷಡ್ಜಸಾಧಾರಣದಲ್ಲಿ); 3) ದೀಪ್ತಾ-ಆಯತಾ-ದೀಪ್ತಾ-ಆಯತಾ: ಅಂತರ ಗಾಂಧಾರ; 4) ದೀಪ್ತಾ-ಆಯತಾ-ಮೃದು-ಮಧ್ಯಾ: ಮಧ್ಯಮ; 5) ಮೃದು-ಮಧ್ಯಾ-ಆಯತಾ-ಕರುಣಾ: ಪಂಚಮ; 6) ಕರುಣಾ-ಕರುಣಾ-ಆಯತಾ-ಮಧ್ಯಾ: ವಿಕೃತ ಧೈವತ; 7) ದೀಪ್ತಾ-ಮಧ್ಯಾ-ದೀಪ್ತಾ-ಆಯತಾ: ಕಾಕಲೀ ನಿಷಾದ; 8) ಮಧ್ಯಾ-ಮೃದು-ಮಧ್ಯಾ-ಆಯತಾ: ಕೈಶಿಕ ಪಂಚಮ (ಮಧ್ಯಮಸಾಧಾರಣದಲ್ಲಿ). ಹೀಗೆ ಶಾರ್ಙ್ಗದೇವನು ಹೇಳುವ ಹತ್ತೊಂಬತ್ತು ಸ್ವರಸಂದರ್ಭಗಳಿಗೆ ದೀಪ್ತಾದಿ ಶ್ರುತಿಪಂಚಕದಲ್ಲಿ ಸಂಯೋಜನೆಗಳೂ ವ್ಯುತ್ಕ್ರಮಗಳೂ ದೊರೆಯುತ್ತವೆ. ಉಳಿದ ಸಂಯೋಜನೆಗಳಿಗೂ ವ್ಯುತ್ಕ್ರಮಗಳಿಗೂ ಸ್ವರತ್ವವನ್ನುಂಟುಮಾಡಲು ಬೇಕಾದ ಸಂಸ್ಕಾರ-ಸಂಚಯವೂ ಸ್ವಸಂವೇದ್ಯತಾ ಸಾಮರ್ಥ್ಯವೂ ಇಲ್ಲ.

## 14. ಶ್ರುತಿಜಾತಿಗಳ ಪ್ರಾಮುಖ್ಯ

ಹೀಗೆ ಈ ಶ್ರುತಿಗಳು ಸಂಗೀತಶಾಸ್ತ್ರಕ್ಕೆ ಆಧಾರಭೂತಪ್ರಮೇಯಗಳಾದ ನಾದ, ಶ್ರುತಿಜಾತಿ, ಸ್ವರ, ಅದರ ವಾದಿ ಸಂವಾದಿಯೇ ಮೊದಲಾದ ನಾಲ್ಕು ವಿಧ, ಸ್ಥಾಯಿ, ಗ್ರಾಮ—ಈ ಎಲ್ಲಾ ಕಲ್ಪನೆಗಳನ್ನೂ ಯಶಸ್ವಿಯಾಗಿ ವಿವರಿಸಬಲ್ಲವು. ಆದುದರಿಂದಲೇ ಶ್ರೀ ಶಾರ್ಙ್ಗದೇವನು ಶಾರ್ದೂಲ, ಕಾಶ್ಯಪ, ಯಾಷ್ಟಿಕ, ದುರ್ಗಾಶಕ್ತಿಗಳಿಂದ ಬೀಜರೂಪವಾದ ಇವುಗಳ ಕಲ್ಪನೆಯನ್ನು ಪಡೆದುಕೊಂಡು (?), ನಾನ್ಯದೇವನನ್ನು ಅನುಸರಿಸಿ ವಿಸ್ತರಿಸಿ, ಅನ್ವಯಿಸಿದ್ದಾನೆ. ಸಂಗೀತಶಾಸ್ತ್ರದ ತತ್ತ್ವಜಿಜ್ಞಾಸೆಗೂ ವಿಧಾನಶಾಸ್ತ್ರಕ್ಕೂ ಅವನಿಂದ ಆಗಿರುವ ಮಹೋಪಕಾರಗಳಲ್ಲಿ ಇದೂ ಒಂದು. ಆದುದರಿಂದಲೇ ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸಪ್ರಕರಣವೆಂದು ಹೆಸರಿಟ್ಟ ಪ್ರಕೃತಭಾಗದಲ್ಲಿರುವ ಒಟ್ಟು 59 ಶ್ಲೋಕಗಳಲ್ಲಿ ನಾದಕ್ಕೆ 6 ಶ್ಲೋಕಗಳನ್ನೂ, ಸ್ಥಾನಕ್ಕೆ ಒಂದು ಶ್ಲೋಕವನ್ನೂ, ಶ್ರುತಿಗೆ 31 ಶ್ಲೋಕಗಳನ್ನೂ (ಇದರಲ್ಲಿ ಶ್ರುತಿನಿದರ್ಶನಕ್ಕೆ 14 ಶ್ಲೋಕಗಳನ್ನೂ ದೀಪ್ತಾದಿ ಶ್ರುತಿಪಂಚಕಕ್ಕೆ 11 ಶ್ಲೋಕಗಳನ್ನೂ), ಸ್ವರ ಚಾತುರ್ವಿಧ್ಯಕ್ಕೆ ನಾಲ್ಕು ಶ್ಲೋಕಗಳನ್ನೂ ಸ್ವರದ ಕುಲ, ದೈವತ, ಋಷಿ, ಛಂದಸ್ಸು, ರಸ ಮುಂತಾದವುಗಳಿಗೆಲ್ಲಾ ಒಟ್ಟು 9 ಶ್ಲೋಕಗಳನ್ನೂ ವಿನಿಯೋಗಿಸಿದ್ದಾನೆ. ಆದುದರಿಂದ ಶ್ರುತಿಗಳಿಗೂ ಅದರಲ್ಲಿಯೂ ಈ ಶ್ರುತಿಪಂಚಕಕ್ಕೂ ಅವನು ಕೊಟ್ಟಿರುವ ಪ್ರಾಮುಖ್ಯವನ್ನು ಸುಲಭವಾಗಿಯೇ ಊಹಿಸಿಕೊಳ್ಳಬಹುದು.

## 15. ಮಾತೃಗುಪ್ತಾಚಾರ್ಯಪ್ರಣೀತವಾದ ಪ್ರಮೇಯ

ದೀಪ್ತಾ, ಆಯತಾ, ಕರುಣಾ, ಮೃದು ಮತ್ತು ಮಧ್ಯಾ ಎಂಬ ಈ ಐದು ಶ್ರುತಿಗಳಿಗೆ ಸಂಸ್ಕಾರಪ್ರದಾನ-ಸಾಮರ್ಥ್ಯವೂ ಸ್ವರಸ್ವಸಂವೇದ್ಯತೆಯೂ ಅವುಗಳಲ್ಲಿರುವ ಕಾಲ, ಕಲಾ, ಪ್ರಮಾಣ ಮತ್ತು ಊರ್ಧ್ವಸ್ಪರ್ಶಗಳೆಂಬ ಗುಣಗಳಿಂದ ಆಗುತ್ತವೆಂದು ಸೂಚಿಸಿದೆಯಷ್ಟೆ. ಇದು ಸ್ವರದಲ್ಲಿ ಹೇಗೆ ಆಗುತ್ತದೆಂಬುದಕ್ಕೆ ನಾಟಶಾಸ್ತ್ರಕ್ಕೆ ತನಗಿಂತಲೂ ಹಿಂದೆಯೇ ಭಾಷ್ಯವನ್ನು ರಚಿಸಿದ ಆಚಾರ್ಯ ಮಾತೃಗುಪ್ತನಿಂದ ಶ್ರೀಮದಭಿನವಗುಪ್ತನು ಒಂದು ಸಮ್ಮತಿವಚನವನ್ನು ಉದ್ಧರಿಸಿಕೊಳ್ಳುತ್ತಾನೆ :

ಹೀಯಮಾನೇ ಸ್ವರೇ ಶ್ರೋತುಃ ಸ್ವಸಂವೇದ್ಯೋ ೞಣುಶಃ ಕ್ರಮಃ ।
ಶ್ರೂಯಮಾಣಃ ಪುನರ್ನಾದ ಏಕ ಏವಾದ್ಯ ರಂಜಿತಃ ॥ 115

ಇದನ್ನು ಅವನು ಉದ್ಧರಿಸುವುದು ಅಂತ್ಯಶ್ರುತಿಯಲ್ಲಿ ಸ್ವರಸ್ಫುಟತೆಯುಂಟಾಗುತ್ತದೆ ಎಂಬುದನ್ನು ತೋರಿಸಿ ಕೊಡುವ ಸಲುವಾಗಿ ; ಈ ಸಂದರ್ಭದಲ್ಲಿ ವಿಶಾಖಿಲಾಚಾರ್ಯನು ಹೇಳಿದ ಸ್ವರಗತ ಶ್ರುತಿ ಮತ್ತು ಅಂತರಗತ ಶ್ರುತಿಗಳನ್ನೂ ಈ ಪ್ರಮೇಯದ ಪರಿಮಿತಿಯಲ್ಲಿ ಅವನು ಸೇರಿಸಲೆಳಸುತ್ತಾನೆ. ಮೇಲಿನ ಶ್ಲೋಕದ ತಾತ್ಪರ್ಯವನ್ನು ಹೀಗೆ ಬಿಡಿಸಬೇಕು : ಸ್ವರವೊಂದರಲ್ಲಿ ನಿಯತಸಂಖ್ಯೆಯ ಶ್ರುತಿಗಳಿರುತ್ತವೆ. ಇವುಗಳಲ್ಲಿ ಒಂದೊಂದನ್ನೂ ದಾಟಿಕೊಂಡು ಬರುತ್ತಿರುವಾಗ ಸ್ವರದ ಪ್ರಮಾಣವು ಕಡಿಮೆಯಾಗುತ್ತಾ ಬರುತ್ತದಷ್ಟೆ ; ಎಂದರೆ ಸ್ವರವು ಕ್ರಮವಾಗಿ ಅಣುಶಃ —ಸ್ವಲ್ಪಸ್ವಲ್ಪವಾಗಿ— ಹೀಯಮಾನವಾಗುತ್ತದೆ. ಅಣುಶಃ ಎಂಬ ಕನಿಷ್ಠಾರ್ಥಕ ಶಬ್ದವನ್ನು ಇಲ್ಲಿ ಏಕೆ ಬಳಸಿದೆಯೆಂದರೆ, ಶ್ರುತಿ ಶಬ್ದಕ್ಕೆ ಪರ್ಯಾಯವಾಗಿ. ಧ್ವನ್ಯಂತರಾಶ್ರುತಿ, ನೈರಂತರ್ಯಗಳೆಂಬ ಲಕ್ಷಣಗಳಿಂದ ಲಕ್ಷಿತವಾದ ಶ್ರುತಿಗಳ ಅನ್ಯತಮವಾದ ಅಥವಾ ಅನ್ಯತರವಾದ ನಿಷ್ಕಾಸದಿಂದ ಸ್ವರದ ಪ್ರಮಾಣವನ್ನು ಪೂರ್ತಿಮಾಡಬೇಕಾಗುತ್ತದೆ ಎಂಬುದು ಇಲ್ಲಿನ ಅರ್ಥ. ಹೀಗೆ ಅಭಿನವಗುಪ್ತನು ಶ್ರುತಿಗೆ ತಾನು ಹೇಳಿದ ಈ ಎರಡು ಲಕ್ಷಣಗಳನ್ನು ವಿಶಾಖಿಲ, ವಿಶ್ವಾವಸು ಮತ್ತು ಮಾತೃಗುಪ್ತರುಗಳಿಂದ ಪಡೆದುಕೊಂಡಿರುವಂತೆ ಕಾಣುತ್ತದೆ. ಹೀಗೆ ಅಣುಶಃ ಕ್ರಮವಾಗಿ ಹೀಯಮಾನವಾಗುತ್ತಿರುವ ಸ್ವರವು ಶ್ರೋತೃವಿಗೆ ಅಣುಶಃ ಕ್ರಮವಾಗಿ ಸ್ವಸಂವೇದ್ಯವಾಗುತ್ತಾ ಬರುತ್ತದೆ. ಆದರೂ ಪುನಃ (ಒಟ್ಟಿನಲ್ಲಿ) ಕೇಳಿದಾಗ ನಾದವು ಒಂದೇ ಆಗಿ ರಂಜಿಸುತ್ತದೆ (ಆದಕಾರಣ ಸ್ವರವಾಗುತ್ತದೆ).

ಹೀಗೆ ಮಾತೃಗುಪ್ತನು ಶ್ರುತಿವಿಷಯಕವಾದ ಮತ್ತು ಸ್ವರಸ್ವಸಂವೇದ್ಯತೆಗೆ ಸಂಬಂಧಪಟ್ಟ ಒಂದು ಬಹು ಮುಖ್ಯವಾದ ಪ್ರಮೇಯವನ್ನು ಹೇಳುತ್ತಿದ್ದಾನೆ. ಸ್ವರವು ಎರಡು, ಮೂರು ಅಥವಾ ನಾಲ್ಕು ಶ್ರುತಿಗಳಿಂದ ಆದುದಷ್ಟೆ. ಚತುಃಶ್ರುತಿಕವಾದ ಷಡ್ಜವನ್ನು ತೆಗೆದುಕೊಂಡರೆ, ಈ ಪ್ರಮಾಣವು ಪೂರ್ತಿಯಾದ ಹೊರತು ಅದಕ್ಕೆ ಸ್ವರತ್ವವಾಗಲೀ ಷಡ್ಜತ್ವವಾಗಲೀ ಸಿದ್ಧಿಸುವುದಿಲ್ಲ. ಷಡ್ಜವೆಂಬುದು ಒಂದೇ ಎಂದು ಶಾಸ್ತ್ರದಲ್ಲಿಯೂ ವ್ಯಪದೇಶದಲ್ಲಿಯೂ ಸಿದ್ಧವಾಗಿದೆ. ಆದರೂ ಇದು, ಎಂದರೆ ಈ ವಿಸ್ತಾರವು ಅವಿಚ್ಛಿನ್ನವಾದ, ಅಖಂಡವಾದ, ಏಕಾಂಡವಾದ ಒಂದೇ ವಿಸ್ತಾರ ಅಥವಾ ಪ್ರಮಾಣವಲ್ಲ. ದೀಪ್ತಾ (ತೀವ್ರಾ), ಆಯತಾ (ಕುಮುದ್ವತೀ), ಮೃದು (ಮಂದಾ) ಮತ್ತು ಮಧ್ಯಾ (ಛಂದೋವತೀ) ಎಂಬ ನಾಲ್ಕು ಶ್ರುತಿಗಳು ಹಂತಹಂತವಾಗಿ ಅನುಕ್ರಮದಲ್ಲಿ ಪ್ರತ್ಯೇಕವಾಗಿ ಇರುವುದರಿಂದ ಈ ಸ್ವರವು ಆಗಿದೆ. ಇವುಗಳಲ್ಲಿ ಪುನಃ ಪ್ರತಿಯೊಂದೂ ಅನಂತವಾದ ನಾದಕಣಗಳ ಸರಣಿಯಿಂದ ಆಗಿದೆ. ಈ ನಾದಕಣಗಳು ಪೂರ್ವಾಪರ ಸಂಬಂಧದಲ್ಲಿ ಗೋಚರಕ್ಕೆ ಸಿಕ್ಕದಷ್ಟು ಸಮೀಪದಲ್ಲಿರುವುದರಿಂದ ಇವು ಗಾನವ್ಯವಹಾರಕ್ಕಾಗಲೀ ವಾಗ್ವ್ಯವಹಾರಕ್ಕಾಗಲೀ ಅನರ್ಹಗಳೇ. ನಿರ್ದಿಷ್ಟವಾದ ಅಂತರಾಳವನ್ನೂ ಲಕ್ಷಣದಿಂದ ನಿರ್ದಿಷ್ಟವಾಗಿ ಹೇಳಬಹುದಾದ (ಉದಾಹರಣೆಗೆ ಕಾಲ, ಕಲಾ, ಪ್ರಮಾಣ, ಸ್ಥಾನ,

ಅನುರಣನ, ನೈರಂತರ್ಯ, ಧ್ವನ್ಯಂತರಾಶ್ರುತಿ, ರಕ್ತಿ ಇತ್ಯಾದ) ಸ್ವಭಾವವುಳ್ಳ, ಸ್ವರೂಪವುಳ್ಳ ಶ್ರುತಿಯೇ ಸಂಗೀತದಲ್ಲಿ ಲಕ್ಷ್ಯಲಕ್ಷಣಗಳಿಗೆ ಉಪಯುಕ್ತವಾದ ಮೂಲದ್ರವ್ಯ.

ಷಡ್ಜದ ಮೇಲೆ ಹೇಳಿದ ಪ್ರಮಾಣವನ್ನು ಎಂದರೆ ನಿಷಾದದ ಅಂತ್ಯದಿಂದ ಷಡ್ಜದ ಅಂತ್ಯದವರೆಗೆ ಇರುವ ನಾದಪ್ರದೇಶ ಅಥವಾ ವಿಸ್ತಾರವನ್ನು ಅನುಕ್ರಮವಿಲ್ಲದೆ, ಅದರ ಎಲ್ಲಾ ಭಾಗಗಳನ್ನೂ ಒಂದೇ ಕ್ಷಣದಲ್ಲಿ ಪಡೆಯಲಾಗದು ಎಂಬುದು ಸುಲಭವಾಗಿ ತರ್ಕಸಿದ್ಧವಾಗಿಯೇ ಇದೆ. ಏಕೆಂದರೆ ಸ್ವರವು ಕಾಲದೇಶಸಂಬಂಧಿತವಾದುದರಿಂದ ಮತ್ತು ಇವೆರಡೂ ಅನುಕ್ರಮದ ಸ್ವಭಾವವನ್ನು ಪಡೆದಿರುವುದರಿಂದ ಸ್ವರವನ್ನು ಒಂದು ಶ್ರುತಿಯ ನಂತರ ಇನ್ನೊಂದರಂತೆ ಉಪಕ್ರಮಿಸಿದ ಹೊರತು ಗತ್ಯಂತರವಿಲ್ಲ. ಹೀಗೆ ಒಂದೊಂದನ್ನಾಗಿ ಸಾಕ್ಷಾತ್ಕರಿಸಿಕೊಳ್ಳಲು ಶ್ರುತಿಯನ್ನು ಆಕ್ರಮಿಸಿ ಮುಂಬರುವಾಗ ಸ್ವರದ ಪ್ರಮಾಣವು ಕಡಿಮೆಯಾಗುತ್ತದೆ, ಆದರೆ ಅದರ ಸ್ವಸಂವೇದ್ಯತೆಯು ಹೆಚ್ಚಾಗುತ್ತಾ ಬರುತ್ತದೆ. ಹೀಗೆ ದೀಪ್ತಾ, ಆಯತಾ, ಮೃದು, ಮಧ್ಯಾಗಳಲ್ಲಿ ದೀಪ್ತಾದಿಂದ ಹೀಯಮಾನವಾದ ಷಡ್ಜದ ಪ್ರಮಾಣವು ದೀಪ್ತಾ ಶ್ರುತಿಯ ಪ್ರಮಾಣವನ್ನು ಅವಲಂಬಿಸಿ ಕಡಿಮೆಯಾಯಿತು. ಆದರೆ ಈ ಶ್ರುತಿಯ ಕಾಲ, ಕಲಾ, ರಕ್ತಿ, ಅನುರಣನ ಮುಂತಾದ ಇತರ ಗುಣಗಳನ್ನು ಅವಲಂಬಿಸಿ ಅಷ್ಟರಮಟ್ಟಿಗೆ ಷಡ್ಜದ ಸ್ವಸಂವೇದ್ಯತೆಯು ಪ್ರಾರಂಭವಾಯಿತು. ಇದರ ಒಟ್ಟು ಸಂಸ್ಕಾರವನ್ನು ದೀಪ್ತಾಶ್ರುತಿಯು ಆಯತಾ(ಕುಮುದ್ವತೀ)ದಲ್ಲಿ ಅರ್ಪಿಸುತ್ತದೆ. ಈಗ ಆಯತೆಯನ್ನು ಆಕ್ರಮಿಸಿ ದಾಟುವುದರಿಂದ ಆಯತೆಯ ಪ್ರಮಾಣವನ್ನು ಅನುಸರಿಸಿ ಷಡ್ಜವು ಪುನಃ ಅಷ್ಟರಮಟ್ಟಿಗೆ ಹೀಯಮಾನವಾಗುತ್ತದೆ; ಆದರೆ ದೀಪ್ತಾದಿಂದ ಪಡೆದ ಮತ್ತು ಆಯತೆಯ ಕಾಲಕಲಾದಿ ಇತರ ಗುಣಗಳ ಸಂಕೀರ್ಣ ಪರಿಣಾಮವನ್ನು ಅವಲಂಬಿಸಿ ಷಡ್ಜದ ಸ್ವಸಂವೇದ್ಯತೆಯು ಹೆಚ್ಚಾಗಿ ಬೆಳೆಯುತ್ತದೆ. ಹೀಗೆಯೇ ಮೃದು (ಮಂದಾ)ವಿನಲ್ಲಿ ಷಡ್ಜದ ಪ್ರಮಾಣವು ಕಡಿಮೆಯಾಗಿ ಸ್ವಸಂವೇದ್ಯತೆಯು ಹೆಚ್ಚುತ್ತದೆ. ಕಡೆಯದಾದ ಮಧ್ಯಾ(ಛಂದೋವತಿ)ದಲ್ಲಿ ತನ್ನ ಪ್ರಮಾಣವನ್ನು ಹೀಗೆ ಪೂರ್ತಿಮಾಡಿಕೊಂಡು ಸ್ವಸಂವೇದ್ಯತೆಯನ್ನೂ ಪೂರ್ತಿಮಾಡಿಕೊಳ್ಳುತ್ತದೆ. ಆದುದರಿಂದಲೇ ಇಲ್ಲಿ ಸ್ವರತ್ವವೂ ಷಡ್ಜತ್ವವೂ ಪ್ರತ್ಯಕ್ಷವಾಗುವುದು. ಇಲ್ಲಿ ಸ್ವರತ್ವಕ್ಕೆ ನಾಲ್ಕನೆಯ ಮಧ್ಯಾಶ್ರುತಿಯು ಅನುರಣನಾದಿ ವ್ಯಾಪಾರದಿಂದಲೂ, ರಕ್ತಿಧರ್ಮದಿಂದಲೂ, ಸ್ವರಗತತ್ವದಿಂದಲೂ ಪ್ರತ್ಯಕ್ಷ ಹೇತುವಾಗುತ್ತದೆ. ಉಳಿದ ಮೂರು ಪರೋಕ್ಷಲಿಂಗಗಳಾಗುತ್ತವೆ. ಷಡ್ಜತ್ವದ ಸಾಕ್ಷಾತ್ಕಾರಕ್ಕೆ, ಎಂದರೆ ಷಡ್ಜದ ಸ್ವಸಂವೇದ್ಯತೆಗೆ, ಎಂದರೆ ಷಡ್ಜವು ಇತರ ಎಲ್ಲಾ ಸ್ವರಗಳಿಂದಲೂ ಭಿನ್ನವಾಗಿದ್ದು ತನ್ನದೇ ಸ್ವಭಾವ, ಸ್ವರೂಪ, ವೈಶಿಷ್ಟ್ಯ, ಲಕ್ಷಣಾದಿಗಳಿಂದ ಮಾತ್ರ ಅನುಭವಗಮ್ಯವಾಗುವುದಕ್ಕೆ, ದೃಷ್ಟಾಂತದ ಮೂಲಕ ತಿಳಿಯಲಾಗದುದಕ್ಕೆ, ಕ್ರಮವಾಗಿ, ಹಂತಹಂತವಾಗಿ, ಹೆಚ್ಚುತ್ತಿದ್ದು ನಾಲ್ಕನೆಯ ಶ್ರುತಿಯಲ್ಲಿ ಸ್ವಯಂಪೂರ್ಣವೂ, ಸ್ವಯಂಸಿದ್ಧವೂ ಆಗಿ ನಾಲ್ಕನೆಯ ಶ್ರುತಿಯಲ್ಲಿ ಪ್ರಕಟವಾಗುವುದೇ ಕಾರಣ.

ಇದಕ್ಕೆ ಶ್ರುತಿಯ ಇತರ ಲಕ್ಷಣಗಳು ಹೇಗೆ ಮುಖ್ಯವೋ ಶ್ರುತಿಯು ಊರ್ಧ್ವಸ್ಪರ್ಶಪಡೆಯುವ ಸ್ಥಾನಾಂತರವೂ, ಅನುಕ್ರಮವೂ ಅಷ್ಟೇ ಮುಖ್ಯ. ಇವುಗಳಿಂದ ಅದು ಸ್ವಲ್ಪವಾಗಿ ವೈದೃಶ್ಯವನ್ನು ಪಡೆಯುತ್ತಾ ಇರುತ್ತದೆ. ಆದುದರಿಂದಲೇ ಶ್ರುತಿಗಳು ಐದೇ ಆದ:ೂ ಇಪ್ಪತ್ತೆರಡು ವಿಧಗಳಾಗಿ ಭಿನ್ನಗಳೆಂಬ ಶಾಸ್ತ್ರವ್ಯವಹಾರಕ್ಕೂ, ಲಕ್ಷ್ಯಪ್ರಸಿದ್ಧಿಗೂ, ಶ್ರುತಿಗಳು ಐದೇ ಆದರೂ ಎಲ್ಲಾ ಪ್ರಕೃತಿ ವಿಕೃತಿಸ್ವರಗಳೂ ತಮ್ಮತಮ್ಮದೇ ಆದ ಬೇರೆ ಬೇರೆ ಸ್ವಸಂವೇದ್ಯತೆಗಳನ್ನು ಪಡೆಯುವುದಕ್ಕೂ ಕಾರಣವಾಗಿದೆ. ಹೀಗೆ ರಿಷಭವು ಸ್ವಸಂವೇದ್ಯತೆಯನ್ನು ಪಡೆಯಲು ಏಳೂ ಶ್ರುತಿಗಳ ಸಂಸ್ಕಾರಪ್ರದಾನವೂ, ಈ ಪ್ರಮಾಣದ ಅಣುಶಃ ಕ್ರಮವಾದ ಹೀಯಮಾನತೆಯೂ ಕ್ರಮವಾಗಿ ಅಣುಶಃ ಹೆಚ್ಚಿದ ಸ್ವಸಂವೇದ್ಯತೆಯೂ ಕಾರಣವಾಗಿವೆ. ಆದುದರಿಂದ ಯಾವುದೇ ಒಂದು ಸ್ವರದ ಸ್ವಸಂವೇದ್ಯತೆಯನ್ನು ಇಡೀ ಸ್ಥಾಯಿಯಲ್ಲಿ ತೀವ್ರಾದಿಂದ ಎಷ್ಟು, ಯಾವ ಅನುಕ್ರಮದ ಮತ್ತು ಯಾವ ಶ್ರುತಿಗಳನ್ನು ಪಡೆದಿದೆ ಎಂಬ ಒಟ್ಟು ಪ್ರಮಾಣದ ದೃಷ್ಟಿಯಿಂದ ಪರಿಶೀಲಿಸಿದಾಗ ಸಿದ್ಧವಾಗುತ್ತದೆ. ಸ್ವರಾಷ್ಟಕ

ದಲ್ಲಿರುವ ಇತರ ಸ್ವರಗಳೊಡನೆ ಅದರ ಸಂಬಂಧವು ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿ, ಮುಂತಾದ ಲಕ್ಷಣಗಳಿಂದ ಸಿದ್ಧವಾಗುತ್ತದೆ. ಹೀಗೆ ಸ್ವರದ ಸ್ವರೂಪವು ಸಮಗ್ರವಾಗಿ ತಿಳಿಯಬೇಕಾದರೆ ಅದನ್ನು ಈ ಎರಡೂ ಬಗೆಯ ಪ್ರಮಾಣಗಳಿಂದ ವಿವೇಚಿಸಿದಲ್ಲದೆ ಸಾಧ್ಯವಾಗದು.

## 16. ಯೌಗಪದ್ಯ–ಅನುಕ್ರಮ

ಇಲ್ಲಿ ಮಾತೃಗುಪ್ತಾಚಾರ್ಯನ ಮಾತಿನಲ್ಲಿನ ಮತ್ತೊಂದು ಪ್ರಸಕ್ತಿಯೆಂದರೆ, ಹೀಗೆ ಅನುಕ್ರಮದಿಂದ ಶ್ರುತಿಗಳನ್ನು ಕಳೆಯುತ್ತಾ, ಸ್ವರದ ಪ್ರಮಾಣವನ್ನೂ ಸ್ವಸಂವೇದ್ಯತೆಯನ್ನೂ ಪೂರ್ತಿಮಾಡಿದರೂ, ನಾದವು,–ಎಂದರೆ ಸ್ವರವು,–ಖಂಡಿತವಾಗಿ, ಎಂದರೆ ಭಿನ್ನವಾದ ಬೇರೆ ಬೇರೆ ಅಂಶಗಳನ್ನು ಒಂದಾದಮೇಲೊಂದರಂತೆ ಜೋಡಿಸಿ ಕೂಡಿದ ಸಂಕೀರ್ಣದ್ರವ್ಯ, ಅನೇಕ ಅವಯವಗಳಿಂದ ಕೂಡಿದ ಅವಯವಿ ಎಂಬ ಅನುಭವವನ್ನು ಕೊಡುವುದಿಲ್ಲ ; ಒಂದೇ ಆಗಿ, ಅಖಂಡವಾಗಿ, ರಂಜಿಸುತ್ತದೆ: 'ಪುನರ್ನಾದ ಏಕ ಏವಾದ್ಯ ರಂಜಿತಃ' ; ಮೊದಲಿನಿಂದಲೇ ರಂಜಿಸುತ್ತದೆ ; ಎಂದರೆ ದೀಪ್ತಾ ಮುಂತಾದವುಗಳಲ್ಲಿ ಷಡ್ಜತ್ವವು ಪೂರ್ಣವಾಗಿರುವುದಿಲ್ಲ, ನಿಜ. ಆದರೂ ಷಡ್ಜವನ್ನು ಪ್ರಾರಂಭಿಸಿದಾಗಿನಿಂದಲೇ ಅದರ ರಂಜನೆಯೂ ಪ್ರಾರಂಭವಾಗಿರುತ್ತದೆ. ಹೀಗೆ ಸ್ವರದ್ದು ವಿಚಿತ್ರವೂ ಸ್ವಲ್ಪ ವಿರೋಧಾಭಾಸವೆಂದು ತೋರುವಂತಹುದೂ ಆದ ಸ್ವಭಾವ. ಅನುಕ್ರಮವಿಲ್ಲದೆ ಅದರ ಸಿದ್ಧಿಯಿಲ್ಲ. ಅನುಕ್ರಮಕ್ಕೆ ಕಾರಣವಾದ ಈ ಶ್ರುತಿಗಳಲ್ಲಿ ಅದು ಸಂಪೂರ್ಣ ಸ್ವಸಂವೇದ್ಯತೆಯನ್ನು ಪಡೆದಿರುವುದಿಲ್ಲವೆಂಬುದೂ ನಿಜವೇ ; ಆದುದರಿಂದ ಇಲ್ಲಿ ಅದರ ರಕ್ತಿಗೆ ಪ್ರತ್ಯಕ್ಷಲಿಂಗವಿಲ್ಲವೆಂಬುದೂ ನಿಜವೇ. ಆದರೆ ಸ್ವರವನ್ನು ಪ್ರಾರಂಭಮಾಡಿದಾಗಲೇ ಅದಕ್ಕೆ ರಕ್ತಿಧರ್ಮ. ಈ ವಿರೋಧಕ್ಕೆ ಸಮಾಧಾನವೇನು ? ಈ ವಿರೋಧವು ತೋರಿಕೆಯದು ಮಾತ್ರ, ನಿಜವಾದುದಲ್ಲ. ಏಕೆಂದರೆ ಕೇವಲ ಷಡ್ಜವೊಂದನ್ನೇ ಹಾಡಿದರೆ ಅದಕ್ಕೆ ಷಡ್ಜತ್ವವಿಲ್ಲ, ಧ್ವನಿತ್ವ ಮಾತ್ರ ಎಂಬುದು ಸ್ಪಷ್ಟವಾಗಿಯೇ ಇದೆ. ಅದರ ಷಡ್ಜತ್ವವು ಎಂದರೆ ಸ್ವಸಂವೇದ್ಯತೆಯು ಸಿದ್ಧವಾಗುವುದು ನಿಷಾದದ ಸಂಬಂಧದಿಂದ ಮಾತ್ರ. ನಿಷಾದಕ್ಕೆ ಸಂಬಂಧಿಸಿ ಷಡ್ಜವನ್ನು ಹಾಡಿದಾಗ ಮಧ್ಯದಲ್ಲಿರುವ ಅಂತರವು ಪ್ರತ್ಯಕ್ಷಗಮ್ಯವಾಗಿಯೇ ಇದೆ. ಈ ಅಂತರದಲ್ಲಿ ವಿವಿಧ ಅಂಶಗಳಿಗೆ ರಕ್ತಿಧರ್ಮವಿಲ್ಲವೆಂಬುದೂ ಪ್ರತ್ಯಕ್ಷಗಮ್ಯವೇ. ಈ ಅಂತರವನ್ನು ಪೂರ್ತಿಮಾಡಿದಾಗಲೇ, ಅದಕ್ಕೆ ಸ್ವರವೆಂಬ, ಷಡ್ಜವೆಂಬ ವ್ಯಪದೇಶವೂ, ರಕ್ತಿಧರ್ಮವೂ ಉಂಟಾಗುವುದು. ಆದುದರಿಂದ ಷಡ್ಜವು ಒಂದೇ ನಾದವಾಗಿ, ಅಖಂಡವಾಗಿ ರಂಜಿಸುತ್ತದೆ. ಹೀಗೆ ಮಾತೃಗುಪ್ತ, ವಿಶಾಖಿಲ, ವಿಶ್ವಾವಸು ಮೊದಲಾದ ಪೂರ್ವಾಚಾರ್ಯರ ಮಾತು ನಿರರ್ಥಕವೂ ಅಲ್ಲ, ಶಾಸ್ತ್ರವಿರುದ್ಧವೂ, ಲಕ್ಷ್ಯವಿರುದ್ಧವೂ ಅಲ್ಲ. ಆದುದರಿಂದ ವಿಶ್ವಾವಸುವಿನ ಶ್ರುತಿದ್ವೈವಿಧ್ಯ ಪಕ್ಷದಲ್ಲಿಯೂ ಭರತ, ವೇಣ ಮೊದಲಾದವರ ನವಶ್ರುತಿ ಪಕ್ಷದಲ್ಲಿಯೂ ಹೇಳಿರುವುದನ್ನು ಅಂತರ ಶ್ರುತಿಗಳು ಸ್ವರದ ಸ್ವಸಂವೇದ್ಯತೆಗೆ ಪರೋಕ್ಷಹೇತುಗಳು, ಸ್ವರಗತ ಶ್ರುತಿಗಳು ಪ್ರತ್ಯಕ್ಷ ಹೇತುಗಳು ಎಂಬ ಈ ಮೇಲಿನ ಅರ್ಥದಲ್ಲಿ ತಿಳಿಯಬೇಕು. ಈ ಇಬ್ಬಗೆಯ ಹೇತುಗಳನ್ನು ಶ್ರೀ ಶಾರ್ಙ್ಗದೇವನೂ ಒಪ್ಪಿದ್ದಾನೆ:

ನನು ಶ್ರುತಿಶ್ಚತುರ್ಥ್ಯಾದಿರಸ್ತ್ವೇವಂ ಸ್ವರಕಾರಣಮ್ |
ತ್ರ್ಯಾದೀನಾಂ ತತ್ರ ಪೂರ್ವಾಸಾಂ ಶ್ರುತೀನಾಂ ಹೇತುತಾ ಕಥಮ್ ?
ಬ್ರೂಮಃ, ತುರ್ಯಾತೃತೀಯಾಽಽದಿಃ ಶ್ರುತಿಃ ಪೂರ್ವಾಭಿಕಾಂಕ್ಷಯಾ |
ನಿರ್ಧಾರ್ಯತೇಽತಃ ಶ್ರುತಯಃ ಪೂರ್ವಾ ಅಪ್ಯತ್ರ ಹೇತವಃ || 136

ಮಾತೃಗುಪ್ತನು ಸ್ವರ ಶ್ರುತಿಗಳಿಗೆ ಅವಯವೀ–ಅವಯವ ಭಾವವಿಲ್ಲವೆಂದೂ ಅದು ವಿವಿಧ ಶ್ರುತಿಗಳನ್ನು ಏಕಕಾಲದಲ್ಲಿ ಮಾಡಿದ ಸಂಚಯವಲ್ಲವೆಂದೂ ತಾತ್ಪರ್ಯದಲ್ಲಿ ಹೇಳಿದ ಮಾತನ್ನು ಶ್ರೀಮದಭಿನವಗುಪ್ತಪಾದನು ಸ್ಪಷ್ಟವಾದ ಮಾತುಗಳಲ್ಲಿಯೇ ಹೇಳಿದ್ದಾನೆ :

ನ ಚಾವಯವೈಃ ಸ್ವರಃ, ನಾಪಿ ಸಂಚಯಃ ಯೌಗಪದ್ಯಾಭಾವಾತ್ । ಕ್ರಮಿಕತ್ವೇಪಿ ಹಿ ನೈರಂತರ್ಯಾತ್, ನಾಶುಭವಿಕೃತಾದ್ಯೌಗಪದ್ಯಾಭಿಮಾನಃ, ಕ್ರಮಿಕಶ್ರುತಿಜನಿತಸಂಸ್ಕಾರವಿಶೇಷೇ ಚಾನ್ಯೇ ಶ್ರುತಿಸ್ಥಾನೇ ಸ್ವರಸಮುದಾಯ ಇತ್ಯಾಸ್ತಾಂ ತಾವತ್ । 132

ಈ ಶ್ರುತಿಪಂಚಕಕ್ಕೆ ಸಂಸ್ಕಾರಪ್ರದಾನ, ಸ್ವರಸ್ವಸಂವೇದ್ಯತೆಗಳು ಪ್ರಯೋಜನಗಳೆಂದೂ ಕಲಾಕಾಲಪ್ರಮಾಣಾದಿಗಳು ಲಕ್ಷಣಗಳೆಂದೂ ತಿಳಿಯದ ಆಧುನಿಕ ಸಂಗೀತಶಾಸ್ತ್ರಜ್ಞರು ಕೆಲವರು—ಉದಾಹರಣೆಗೆ, ಶಿವಶರಣನು (ಡೇನಿಯಲೌ)—ಇವುಗಳಿಗೆ ಕೇವಲ ಭೌತಿಕ ಪ್ರಮಾಣಗಳನ್ನು ಹೇಳುವ ಸಾಹಸಮಾಡಿದ್ದೂ ಉಂಟು. ಚತುಃಶ್ರುತಿಕ ಮುಂತಾದ ಶಬ್ದಗಳನ್ನು ಸ್ವಸಂವೇದ್ಯತಾದಿ ಲಕ್ಷಣಗಳ ಸಂದರ್ಭದಿಂದ ಕಿತ್ತು ಅಧುನಾಲಕ್ಷ್ಯಪ್ರಸಿದ್ಧವಾಗಿರುವ, ಸಂಖ್ಯಾತ್ಮಕವಾದ, ಅನುಪಾತಗಳಲ್ಲಿ ಹೇಳಬಹುದಾದ ಪ್ರಮಾಣಗಳಿಗೆ ಅನ್ವಯಿಸಿ ಈ ಶ್ರುತಿಗಳ ಪ್ರಮಾಣಗಳನ್ನು ಪಡೆಯಲು ಅಂತಹವರು ಪ್ರಯತ್ನಿಸುತ್ತಾರೆ. ಆದರೆ ಇದು ಈ ಶಾಸ್ತ್ರಮರ್ಯಾದೆಯನ್ನೂ ಪೂರ್ವಾಚಾರ್ಯರ ಹೃದಯವನ್ನೂ ತಿಳಿಯದೆ ಮಾಡಿದ ಪ್ರಯತ್ನ. ಇದು ನಿರರ್ಥಕವೂ ಅನರ್ಥಕವೂ ಆಗಿದೆಯೆಂಬುದು ಸ್ಥೂಲಪರೀಕ್ಷಣದಿಂದಲೇ ಸಿದ್ಧವಾಗುತ್ತದೆ. ಏಕೆಂದರೆ ಭೌತಿಕವಾಗಿ ಷಡ್ಜಮಧ್ಯಮಗಳ ಪ್ರಮಾಣಗಳೂ, ರಿಷಭಧೈವತಗಳ ಪ್ರಮಾಣಗಳೂ ಗಾಂಧಾರನಿಷಾದಗಳ ಪ್ರಮಾಣಗಳೂ ಒಂದೇ ಸಮವಾಗಿವೆಯಷ್ಟೆ. ರಿಷಭಧೈವತಗಳ ಸಮಾನತೆಯಿಂದ ಮೃದುವು ಆಯತೆಗೆ ಪ್ರಮಾಣದಲ್ಲಿ ಸಮಾನವಾಗಬೇಕಾಗುತ್ತದೆ. ಅಂತೆಯೇ ಗಾಂಧಾರಕ್ಕೂ ನಿಷಾದಕ್ಕೂ ಒಂದೇ ಭೌತಿಕಪ್ರಮಾಣವು ಲಕ್ಷ್ಯಪ್ರಸಿದ್ಧವಾಗಿರುವುದರಿಂದ ಈ ಶ್ರುತಿಜಾತಿಗಳನ್ನೂ ಸಮೀಕರಿಸಿದರೆ ಆಯತಾ ಶ್ರುತಿಯು ಮಧ್ಯಾಶ್ರುತಿಗೆ ಸಮನಾಗುತ್ತದೆ. ಆದುದರಿಂದ ಮೃದು = ಆಯತಾ = ಮಧ್ಯಾ ! ಕೇವಲ ಚತುಃಶ್ರುತಿಕಗಳೆಂಬ ಕಾರಣದಿಂದ ಸ = ಮ = ಪ ಎಂಬ ಲಕ್ಷ್ಯವಿರುದ್ಧವಾದ ಸಮೀಕರಣದಿಂದ ದೀಪ್ತಾ=ಕರುಣಾ ಆಗುತ್ತದೆ ! ಷಡ್ಜಸಾಧಾರಣದಲ್ಲಿ ಚತುಃಶ್ರುತಿಕವಾದ ವಿಕೃತ ರಿಷಭ, ಕೈಶಿಕಪಂಚಮದಲ್ಲಿ ವಿಕೃತವಾದ, ಎಂದರೆ ಮಧ್ಯಮಸಾಧಾರಣದಲ್ಲಿ ಚತುಃಶ್ರುತಿಕವಾದ ವಿಕೃತಧೈವತ, ಇವುಗಳನ್ನು ಸಮೀಕರಿಸಿದರೆ ಮಧ್ಯಾ = ಕರುಣಾ ಎಂಬ ಸಮೀಕರಣವೂ ಸಿದ್ಧಿಸುತ್ತದೆ. ಹೀಗೆ ಮಧ್ಯಾ = ಕರುಣಾ, ಮಧ್ಯಾ = ಆಯತಾ = ಮೃದು ; ಕರುಣಾ=ದೀಪ್ತಾ. ಆದುದರಿಂದ ದೀಪ್ತಾ = ಆಯತಾ=ಕರುಣಾ = ಮೃದು = ಮಧ್ಯಾ! ಎಂದರೆ ಪರಮಾರ್ಥದಲ್ಲಿ ಇವೆಲ್ಲ ಪ್ರಮಾಣದಲ್ಲಿ ಸಮಾನಗಳೆಂದುದರಿಂದ ಇವುಗಳಲ್ಲಿ ಭಿನ್ನತೆಯೇ ಇಲ್ಲ. ಹೆಸರು ಬೇರೆ, ಅರ್ಥ ಒಂದೇ ಎಂದಾಯಿತು. ಹೀಗಿದೆ, ಈ ವಾದದ ವೈಖರಿ ! ಸಂಗೀತಶಾಸ್ತ್ರದ ದೃಷ್ಟಿಯಿಂದ ಕೇವಲ ನಿಷ್ಪ್ರಯೋಜಕವಾದುದು ಈ ವಾದ. ಗಣಿತಶಾಸ್ತ್ರದ ಆಟಾಟೋಪದಿಂದ ಸಿದ್ಧಿಸುವುದಾದರೂ ಹೆಚ್ಚುಕಡಿಮೆ ಇದೇ ರೀತಿಯ ಸಮೀಕರಣಗಳು. ಅಂತಹ ಒಂದನ್ನಿಲ್ಲಿ ಉದಾಹರಿಸಬಹುದು. ಗಣಿತಶಾಸ್ತ್ರರೀತ್ಯಾ ಸ್ವರಪ್ರಮಾಣಗಳನ್ನು ಕೂಡುವಾಗ ಅವುಗಳನ್ನು ಗುಣಿಸಬೇಕೆಂದೂ ಕಳೆಯಬೇಕಾದಾಗ ಭಾಗಿಸಬೇಕೆಂದೂ ಇಲ್ಲಿ ತಿಳಿಯಬೇಕಾದ ವಾದಸಂದರ್ಭ. ಹಾಗೆಯೇ ಸ್ವರದ ಪ್ರಮಾಣವನ್ನು ತೋರಿಸುವಾಗ ಅನುಪಾತದಲ್ಲಿ ಕೆಳಗಿನ ಸಂಖ್ಯೆಯು (ಭಾಜಕವು) ಸ್ವರವು ನುಡಿಯಲು ಬೇಕಾದ ತಂತಿಯ ಉದ್ದವೆಂದೂ ಭಾಜ್ಯವು ಹಿಂದಿನ ಸ್ವರವು ನುಡಿಯಲು ಬೇಕಾದ ತಂತಿಯ ಉದ್ದವೆಂದೂ ಪರಿಭಾಷೆ. ಇದನ್ನು ವಿಕೃತ ಸ್ವರಸಂದರ್ಭದಲ್ಲಿ ವ್ಯಾಖ್ಯಾನ ಮಾಡುವಾಗ ವಿವರಿಸಲಾಗುವುದು :

ಚತುಃಶ್ರುತಿ(ಪಂಚಶ್ರುತಿರಿಷಭ) =9/8, ತ್ರಿಶ್ರುತಿ (= ಶುದ್ಧರಿಷಭ) = 16/15 ಎಂಬುದು ಇಲ್ಲಿನ ಸಮೀಕರಣ.

ಕಮೃಮಆ =9/8 (ಪಂಚಮ) (1)

ಕಮೃಮ =16/15 (ಶುದ್ಧರಿಷಭ) (2)

∴ (1)ನ್ನು (2)ರಿಂದ ಭಾಗಿಸಿದರೆ, ಆ $= \frac{9}{8} \times \frac{15}{16} = \frac{135}{128}$

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಕವ್ಯುವುಳ = ಪಂಚಮ = ಚತುಃಶ್ರುತಿ = ದೀಆವ್ಯುವು = ಷಡ್ಜ = 9/8.

∴ ದೀ = ಕ !

ಅಲ್ಲದೆ ಕವ್ಯುವುಳ = ಪಂಚಮ = 9/8 (3)

ಕವುಳ = ಶುದ್ಧಧೈವತ = 16/15 (4)

$$\therefore$$ (3) ನ್ನು (4) ರಿಂದ ಭಾಗಿಸಿದರೆ ವ್ಯು $= \frac{9}{8} \times \frac{15}{16} = \frac{135}{128}$ ; ∴ ಆ = ವ್ಯು!

## 17. ಶ್ರುತಿಜಾತಿಗಳು ಅನ್ವರ್ಥನಾಮಕಗಳೇ ?

### (ಅ) ಪೂರ್ವವ್ಯಾಖ್ಯಾನಗಳಲ್ಲಿ ದೋಷಗಳು : ಸಿಂಹಭೂಪಾಲ

ದೀಪ್ತಾದಿ ಐದು ಶ್ರುತಿಜಾತಿಗಳನ್ನು ಕುರಿತು ಶಾರ್ಙ್ಗದೇವನ ವ್ಯಾಖ್ಯಾನಕಾರರು ಮಾಡಿರುವ ವಿವೇಚನೆ ಯೊಡನೆ ಈ ಭಾಗದ ಉಪಸಂಹಾರವಮಾಡಬಹುದು. ಸಿಂಹಭೂಪಾಲನು ಮುಖ್ಯವಾಗಿ ಮನೋವೈಜ್ಞಾನಿಕ ದೃಷ್ಟಿ ಯಿಂದ ಇವುಗಳಿಗೆ ಪ್ರಯೋಜನಗಳನ್ನು ಹೇಳುತ್ತಾನೆ. ಸ್ವರವು ತನ್ನ ವಿವಿಧ ಅಂಶಗಳಲ್ಲಿ ಪಡೆದಿರುವ ಮಾನಸಿಕ ಪರಿಣಾಮಗಳನ್ನು ಈ ಶ್ರುತಿಗಳು ಒಳಗೊಂಡಿವೆಯೆಂದು ಅವನ ಅಭಿಪ್ರಾಯ. ಆಯಾಯಾ ಶ್ರುತಿಯನ್ನು ಕೇಳಿ ದಾಗ ಆಯಾಯಾ ಪರಿಣಾಮವನ್ನು ಶ್ರೋತೃವಿನ ಮನಸ್ಸು ಅನುಭವಿಸುತ್ತದೆಂದು ಅವನು ಈ ಸಂದರ್ಭದಲ್ಲಿ ವ್ಯಾಖ್ಯಾನ ಮಾಡುತ್ತಾನೆ :

ನನು ಕಿಂ ಶ್ರುತಿಜಾತಿನಿರೂಪಣೇನ ಪ್ರಯೋಜನಮ್ ? ಉಚ್ಯತೇ—ತತ್ತಜ್ಜಾತಿಕಾಂ ಶ್ರುತಿಂ ಶ್ರುತ್ವಾ ಮನಸೋ ನಾಮಸಾಮ್ಯೇನ ತಥಾ ತಥಾ ವಿಕಾರ ಉತ್ಪದ್ಯತ ಇತಿ ಸೂಚಯಿತುಂ ಶ್ರುತಿಜಾತಿನಿರೂಪಣಮ್ । ತತಶ್ಚ ದೀಪ್ತಾಂ ಶ್ರುತಿಮಾಕರ್ಣ್ಯ ಮನಸೋ ದೀಪ್ತತ್ವಮಿವ ಭವತಿ ; ಆಯತಾಂ ಶ್ರುತಿಮಾಕರ್ಣ್ಯಾಯತತ್ವಮಿವ ; ಏವಂ ಕರುಣತ್ವಾದಿ ಜ್ಞಾತವ್ಯಮ್ ।[272] ಸ್ವರೋತ್ಪತ್ತಿಗೆ ಈ ಶ್ರುತಿಜಾತಿಗಳೇ ಕಾರಣವೆಂದು ಅವನು ಶಾರ್ಙ್ಗ ದೇವನ ' ಶ್ರುತಿಭ್ಯಃ ಸ್ಯುಃ ಸ್ವರಾಃ ' ಎಂಬ ಮಾತಿಗೆ ಅರ್ಥಮಾಡುತ್ತಾನೆ :

ಏವಂ ಶ್ರುತೀಃ ಶ್ರುತಿಜಾತೀಃ ಶ್ರುತಿಜಾತಿಭ್ಯಃ ಸ್ವರೋತ್ಪತ್ತಿಂ ಚ ಕಥಯಿತ್ವಾ[273]

ಹೀಗೆ ಸಿಂಹಭೂಪಾಲನ ಪ್ರಕಾರ ಈ ಶ್ರುತಿಜಾತಿಗಳು ಅನ್ವರ್ಥ ನಾಮಕಗಳು. ದೀಪ್ತಾ ಶ್ರುತಿಯು ಕೇಳು ವವರ ಮನಸ್ಸಿನಲ್ಲಿ ದೀಪ್ತಿಯನ್ನು ಎಂದರೆ ಪ್ರಕಾಶ, ಸೌಂದರ್ಯ, ತೀಕ್ಷ್ಣತೆ, ಉದ್ರೇಕಗಳನ್ನು ಉಂಟುಮಾಡಿ ಅದರ ಮಧ್ಯಸ್ಥತಾ ಸ್ವರೂಪದಿಂದ, ಎಂದರೆ ಉದಾಸೀನ ಭಾವದಿಂದ ಅಥವಾ ಸಾಕ್ಷೀ ಸ್ಥಿತಿಯಿಂದ, ವಿಕಾರಗೊಳಿಸು ತ್ತದೆ. ಆಯತಾ ಶ್ರುತಿಯು ಮನಸ್ಸನ್ನು ಆಕರ್ಷಿಸಿ ವಿಸ್ತಾರಗೊಳಿಸುತ್ತದೆ ; ಎಂದರೆ ಮನಸ್ಸನ್ನು ತನ್ನ ಬಳಿಗೆ ಸೆಳೆದುಕೊಂಡು ಇದರ ಗೋಚರ, ಅನುಭವಗಳಿಗೆ ಬೇಕಾಗುವಂತಹ, ಚಿತ್ತವೃತ್ತಿಗೆ ಆವಶ್ಯಕವಾದ ವಿಸ್ತಾರವನ್ನುಂಟು ಮಾಡುತ್ತದೆ. ಕರುಣಾಶ್ರುತಿಯು ಕೇಳುವವರ ಮನಸ್ಸಿನಲ್ಲಿ ಕರುಣೆಯು ಉಂಟಾಗುವಂತೆ ಮಾಡುತ್ತದೆ. ಮೃದುವು ಮನಸ್ಸನ್ನು ಒರಟುತನ, ಕಾಠಿನ್ಯ, ಮುಂತಾದವುಗಳನ್ನುಂಟುಮಾಡುವ ಸನ್ನಿವೇಶಗಳಿಂದ ವಿಮುಖಗೊಳಿಸಿ ಮೃದುವನ್ನಾಗಿ ಮಾಡುತ್ತದೆ. ಮಧ್ಯಾಶ್ರುತಿಯು ಮನಸ್ಸನ್ನು ಪುನಃ ಮಧ್ಯಸ್ಥವನ್ನಾಗಿ ಮಾಡುತ್ತದೆ.

ಮೇಲುನೋಟಕ್ಕೆ ಮಾತ್ರ ಈ ಅರ್ಥವು ಸಮಂಜಸವಾಗಿಯೂ ಆಕರ್ಷಕವಾಗಿಯೂ ಕಂಡೀತು. ಸಿಂಹ-ಭೂಪಾಲನು ಹೀಗೆ ಅರ್ಥಮಾಡುವಾಗ ವಿಶಾಖಿಲ, ವಿಶ್ವಾವಸು, ಮಾತೃಗುಪ್ತ, ಅಭಿನವಗುಪ್ತ, ಮೊದಲಾದ

---

272 ಸಿಂಹಭೂಪಾಲ, ಉ.ಗ್ರಂ., ಪು. 87. 273 ಅದೇ ಗ್ರಂಥ, ಪು. 88.

ಪೂರ್ವಾಚಾರ್ಯರೆಲ್ಲರ ಅಭಿಮತವನ್ನೂ ಶಾಸ್ತ್ರಪರಂಪರೆಯನ್ನೂ, ನಾನ್ಯದೇವನು ಹೇಳಿದ ಸ್ಪಷ್ಟಾರ್ಥವನ್ನೂ, ನಾರದೀ ಶಿಕ್ಷೆಯೇ ಮೊದಲಾದವುಗಳಲ್ಲಿ ವೈದಿಕ ಲೌಕಿಕ ಸಂಗೀತಗಳಲ್ಲಿ ಈ ಶ್ರುತಿಜಾತಿಗಳು ಪಡೆದಿರುವ ಇತಿಹಾಸವನ್ನೂ ಉಲ್ಲಂಘಿಸಿ ತನ್ನದೇ ಆದ ಅರ್ಥವನ್ನು ಹೊರಡಿಸಲು ಯತ್ನಿಸಿದ್ದಾನೆ. ನಾನ್ಯದೇವನ ಮತ್ತು ಅಭಿನವಗುಪ್ತಪಾದನ ಗ್ರಂಥಗಳನ್ನು ಅವನು ಅವಲೋಕಿಸಿರಲಾರನೆಂಬುದಕ್ಕೆ ಇಲ್ಲಿಯೂ ಸೂಚನೆಯಿದೆ. ವ್ಯಾಖ್ಯಾನಕಾರನಾದವನು ಮೂಲಗ್ರಂಥಕಾರನ ಅರ್ಥವನ್ನು ವಿಸ್ತರಿಸಬೇಕೇ ಹೊರತು, ಅವನ ಪ್ರಮೇಯ, ತತ್ತ್ವ, ಜಿಜ್ಞಾಸಾಕ್ರಮ ಮುಂತಾದವುಗಳಿಗೆ ಪೋಷಕವಾಗಿ ಇತರ ಸಾಮಗ್ರಿಯನ್ನು ಸೇರಿಸಬೇಕೇ ಹೊರತು, ಮೂಲದಲ್ಲಿನ ಅರ್ಥವನ್ನು ಮೀರಬಾರದು. ತನಗೆ ತಿಳಿಯದಿದ್ದಾಗ ನಿಗದ ವ್ಯಾಖ್ಯೆಯನ್ನು ಮಾಡಲೂ, ಒಪ್ಪದಿದ್ದ ಕಡೆ ವಿರುದ್ಧಾಭಿಪ್ರಾಯ ವನ್ನು ಸೂಚಿಸಲೂ ಅವನಿಗೆ ಸ್ವಾತಂತ್ರ್ಯವಿದ್ದೇ ಇದೆ. ಆದರೆ ವ್ಯಾಖ್ಯಾನದ ನೆಪದಲ್ಲಿ ಶಾಸ್ತ್ರಮರ್ಯಾದೆಯನ್ನೂ, ಪ್ರಮೇಯಪರಂಪರೆಯನ್ನೂ ಉಲ್ಲಂಘಿಸಲಾಗದು. ಸಿಂಹಭೂಪಾಲನು ಕೊಡುವ ಅರ್ಥಕ್ಕೆ ಶಾರ್ಙ್ಗದೇವನಲ್ಲಿ ಸೂಚನೆಯೂ, ಅವಕಾಶವೂ ಇಲ್ಲ ; ಶಾರ್ಙ್ಗದೇವನು ಬಳಸಿರುವ ಉಪಲಬ್ಧ ಆಕರಗಳಲ್ಲಿ ಒಂದರಲ್ಲಿಯೂ ಇಲ್ಲ. ಇಲ್ಲದಿದ್ದರೆ ಬೇಡ, ಮೂಲಗ್ರಂಥಕಾರನ, ಅಥವಾ ಅವನು ಪ್ರಮಾಣವೆಂದು ಸ್ವೀಕರಿಸಿದ ಪೂರ್ವಾಚಾರ್ಯರ ಅರ್ಥಪರಿಮಿತಿಯಲ್ಲಿ ಈ ಅರ್ಥವನ್ನು ಸೇರಿಸಲಾದೀತೇ, ಎಂದರೆ ಅದೂ ಇಲ್ಲ. ಇವೆಲ್ಲ ಇಲ್ಲದಿದ್ದರೂ ಪರವಾಯಿಲ್ಲ, ಅನುಭವಸಿದ್ಧವಾದ ಪ್ರತ್ಯಕ್ಷಗಮ್ಯ ವಿಷಯವಾಗಿದ್ದರೆ ಈ ಎಲ್ಲಾ ಆಕ್ಷೇಪಗಳನ್ನೆಲ್ಲಾ ತಳ್ಳಿಹಾಕಬಹುದಾಗಿತ್ತು. ಸಿಂಹಭೂಪಾಲನ ಈ ಅರ್ಥವು ಪ್ರತ್ಯಕ್ಷಗಮ್ಯವಂತೂ ಮೊದಲೇ ಅಲ್ಲ. ಕೇವಲ ಶಬ್ದಸಾಮ್ಯದ ಮೋಹದಿಂದ ಅವನು ಈ ಅರ್ಥಗಳನ್ನು ಹೊರಡಿಸಿದ್ದಾನೆ. ಇದನ್ನು ಒಪ್ಪಲಾಗದು.

ಏಕೆಂದರೆ ವಿಶಾಖಿಲಾಚಾರ್ಯನೂ ಆಚಾರ್ಯ ವಿಶ್ವಾವಸುವೂ ಅಂತರಗತ ಶ್ರುತಿಗಳು ಸ್ವರಕ್ಕೆ ಪ್ರತ್ಯಕ್ಷ ಹೇತು ಗಳಲ್ಲವೆಂದು ಹೇಳಿದ್ದಾರೆ ; ಶಾರ್ಙ್ಗದೇವನೂ ಈ ಮಾತನ್ನು ಒಪ್ಪಿ ಉದ್ಧರಿಸಿಕೊಂಡಿದ್ದಾನೆ. ಇವುಗಳಿಗೂ ಸ್ವರಕ್ಕೂ ಕಾರಣಕಾರ್ಯಭಾವವಿರುವುದೇನೋ ನಿಜ. ಕಾರಣದ ಸ್ವಭಾವ, ಲಕ್ಷಣಗಳು ಕಾರ್ಯದಲ್ಲಿಯೂ ಗೋಚರಿಸ ಬೇಕು ; ಅಷ್ಟೇ ಏಕೆ, ಕಾರಣವೇ ಕಾರ್ಯದಲ್ಲಿ ಗೋಚರಿಸಬೇಕು. ದೀಪ್ತಾ ಮುಂತಾದ ಶ್ರುತಿಗಳು ಮನಸ್ಸಿನಲ್ಲಿ ಉಂಟುಮಾಡುವ ವಿಕಾರಗಳನ್ನು ಕಾರ್ಯಗಳೆಂದಿಟ್ಟುಕೊಂಡರೆ ಈ ಶ್ರುತಿಗಳೆಂಬ ಕಾರಣಗಳಿಗೆ ಎರಡು ಕಾರ್ಯಗಳನ್ನು ಹೇಳಿದಂತಾಗುತ್ತದೆ : ಇವುಗಳಲ್ಲಿ ಮನೋವಿಕಾರವು ಸನ್ನಿಹಿತಕಾರ್ಯ ಎಂದರೆ ಅದುಷ್ಟೇಂದ್ರಿಯ ಸನ್ನಿಕರ್ಷದಿಂದ ತತ್ಕ್ಷಣ ಪ್ರತ್ಯಕ್ಷವಾದ ಕಾರ್ಯ. ಇನ್ನೊಂದು ಕಾಲಾನಂತರದಲ್ಲಿ ಉಂಟಾಗುವ ಸ್ವರತ್ವ, ಎಂದರೆ ಸ್ವರವು ಯಾವಾಗಲಾದರೂ ಮುಂದೆ ಅಭಿವ್ಯಕ್ತವಾಗಲೀ ಆಗದಿರಲಿ, ಅಂತರಶ್ರುತಿಯ ಅಸ್ತಿತ್ವಕ್ಕೆ ಬಾಧೆಯಿಲ್ಲವಷ್ಟೆ. ಬಾಧೆಯಿದ್ದು ಅಂತರಗತ ಮತ್ತು ಸ್ವರಗತ ಶ್ರುತಿಗಳು ಇತರೇತರಾಶ್ರಯಸಂಬಂಧದಿಂದ ವಿವಕ್ಷಿತವಾಗಿದ್ದಿದ್ದರೆ ಇವುಗಳನ್ನು ವಿಧರ್ಮಿಗಳಾದ ಎರಡು ಪ್ರತ್ಯೇಕ ವಿಧಗಳೆಂದು ಪೂರ್ವಾಚಾರ್ಯರು ಹೇಳುತ್ತಲೇ ಇರಲಿಲ್ಲ. ಆದುದ ರಿಂದ ಭವಿಷ್ಯತ್ತಿನಲ್ಲಿ ಸ್ವರತ್ವದ ಪ್ರಾಪ್ತಿಯಿರಲಿ, ಇಲ್ಲದಿರಲಿ ಈ ಶ್ರುತಿ ಜಾತಿಗಳು ಸ್ವನಾಮನಿಷ್ಠಾರ್ಥವುಳ್ಳ ಮನೋವಿಕಾರಗಳನ್ನು ಉಂಟುಮಾಡಬೇಕು. ಇದು ತರ್ಕವಿರುದ್ಧವೂ ಹೌದು, ಅನುಭವವಿರುದ್ಧವೂ ಹೌದು.

ಸ್ವರಕ್ಕೆ ಮನಸನ್ನು ರಂಜಿಸುವ—ಎಂದರೆ ಬಣ್ಣ ಕಟ್ಟುವ—ಗುಣವನ್ನು ಹೇಳಿದೆಯೇ ಹೊರತು ಶ್ರುತಿಗಲ್ಲ. ಚಿತ್ತವೃತ್ತಿಮಧ್ಯಸ್ಥತಾಸ್ವರೂಪವಾದ ಸ್ವಾಸ್ಥ್ಯಾವಸ್ಥೆಯನ್ನು ಪರಿತ್ಯಾಗಮಾಡಿಸಿ ಅತಿಶಯವಾದ ಹೃದ್ಯತೆಯಿಂದ ಉಪತಾಪನಗೊಳಿಸಬಲ್ಲ (ಮನಸ್ಸನ್ನು ಬೆಚ್ಚಗೆ ಮಾಡಬಲ್ಲ) ಶಕ್ತಿಯು ಸ್ವರಕ್ಕೆ ಮಾತ್ರ ಹೇಗೆ ಇದೆಯೆಂಬುದನ್ನು ಸ್ವರದ ವಿವೇಚನೆಯಲ್ಲಿ ಮುಂದೆ ವಿವರಿಸಲಾಗುವುದು. ಸ್ವರವಾದರೂ ಅಂತರಶ್ರುತಿಗಳನ್ನೆಲ್ಲಾ ದಾಟಿಕೊಂಡು ಸ್ವರಗತಶ್ರುತಿಯಲ್ಲಿ ಅಭಿಘಾತವಾಗಿ ಅನುರಣನಾದಿ ವ್ಯಾಪಾರವನ್ನೂ ರಕ್ತಿಧರ್ಮವನ್ನೂ ಪಡೆದ ಹೊರತು ಪೂರ್ಣ ವಾಗುವುದಿಲ್ಲ. ಆದುದರಿಂದ ಅಂತರಗತ ಶ್ರುತಿಗೆ ಸ್ವತಂತ್ರವಾಗಿ ಈ ಬಗೆಯ ಮಾನಸಿಕ ವ್ಯಾಪಾರವನ್ನು ಹೇಳು

ವುದು ತಪ್ಪಾಗುತ್ತದೆ. ಅಲ್ಲದೆ ವಿಶ್ವಾವಸು ವಿಶಾಖಿಲಾದಿಗಳ ಮಾತಿನಿಂದ ಶ್ರುತಿಗಳ ಅನುಕ್ರಮವಿದ್ದರೂ ಸ್ವರವು ಅಂತ್ಯಶ್ರುತಿಯಲ್ಲಿ ಮಾತ್ರ ಸ್ಫುಟತೆಯನ್ನು ಪಡೆಯುತ್ತದೆಂಬುದನ್ನು ಈಗಾಗಲೇ ತೋರಿಸಿದೆ. ದೀಪ್ತಾಶ್ರುತಿಯನ್ನೇ ಏಕೆ ಇಲ್ಲಿ ಉದಾಹರಣೆಯನ್ನಾಗಿ ತೆಗೆದುಕೊಂಡಿದೆಯೆಂದರೆ, ಅದಕ್ಕಿರುವ ನಾಲ್ಕು ಪ್ರಭೇದಗಳಲ್ಲಿ ಪ್ರತಿಯೊಂದೂ ಪ್ರಕೃತಿಸ್ವರಗಳಲ್ಲಿ ಅಂತರಗತವಾಗಿಯೇ ಇದೆ! ಸಿಂಹಭೂಪಾಲನ ಮಾತನ್ನು ಪಕ್ಷವಾಗಿ ಇಟ್ಟುಕೊಂಡರೆ ಷಡ್ಜ ಸ್ವರವು ಹೀಗೆ ಹುಟ್ಟಬೇಕು: ಮನಸ್ಸಿಗೆ ಮೊದಲು ದೀಪ್ತಾಶ್ರುತಿಯಿಂದ ಪ್ರಕಾಶ, ಸೌಂದರ್ಯ, ತೀಕ್ಷ್ಣತೆ, ಉದ್ರೇಕಗಳಾಗಬೇಕು. ಅನಂತರ ಆಯತಾ ಶ್ರುತಿಯಿಂದ ಮನಸ್ಸು ಸೆಳೆಯಲ್ಪಟ್ಟು ವಿಸ್ತಾರಗೊಳ್ಳಬೇಕು. ಆಮೇಲೆ ಮೃದು ಶ್ರುತಿಯಿಂದ ಮೃದುವಾಗಬೇಕು. ಇಷ್ಟೆಲ್ಲ ಆದಮೇಲೆ ಮಧ್ಯಾಶ್ರುತಿಯಿಂದ ಮನಸ್ಸು ಮಧ್ಯಸ್ಥತಾರೂಪಕ್ಕೆ ಹಿಂತಿರುಗಿ ಉದಾಸೀನವಾಗಿ ಸಾಕ್ಷೀರೂಪವಾಗಿಬಿಡುತ್ತದೆ—ಇದೇ ಷಡ್ಜದ ಸ್ಥಾಯಿಭಾವ; ರಂಜನೆಯಲ್ಲ! ಮಧ್ಯಮ, ಧೈವತ, ನಿಷಾದಗಳಿಗೂ ಚಿತ್ತದ ಈ ಔದಾಸೀನ್ಯವೇ ಗತಿ. ಅಷ್ಟೇ ಅಲ್ಲ, ಪಂಚಮದ ಅಂತ್ಯಶ್ರುತಿಯು ಕರುಣಾ ಆದುದರಿಂದ ಪಂಚಮವು ಎಲ್ಲಾ ಕಾಲದಲ್ಲಿಯೂ, ಎಲ್ಲರಲ್ಲಿಯೂ, ಎಲ್ಲಾ ಗೀತಸಂದರ್ಭ ಗಳಲ್ಲಿಯೂ ಕರುಣಾ ಸ್ಥಾಯಿಭಾವವನ್ನೇ ಉಂಟುಮಾಡಬೇಕು! ಹೇಗಿದೆ, ಈ ಪಕ್ಷದ ಅನುಮಿತಿಗಳು!

ಅಷ್ಟೇ ಅಲ್ಲದೆ ಅಂತರಗತಿಶ್ರುತಿಗಳ ಅನುಕ್ರಮವನ್ನು ಒಪ್ಪಿಕೊಂಡರೂ ಅವು ಪ್ರತ್ಯೇಕವಾಗಿ ಕೇಳಿಸುವುದಿಲ್ಲ ವೆಂದು ಮಾತೃಗುಪ್ತನ 'ಪುನರ್ನಾದ ಏಕ ಏವಾದ್ಯ ರಂಜಿತಃ'[115] ಎಂಬ ಮಾತಿನಿಂದಲೂ ಅಭಿನವಗುಪ್ತನ ವಾಣಿ ಯಿಂದಲೂ ಸಿದ್ಧಪಡಿಸಿದೆ. ಷಡ್ಜದಲ್ಲಿ ದೀಪ್ತಾ, ಆಯತಾ ಮತ್ತು ಮೃದುಗಳೂ ರಿಷಭದಲ್ಲಿ ಕರುಣಾ, ಮೃದುಗಳೂ ಇತ್ಯಾದಿಯಾಗಿ ಪ್ರತ್ಯೇಕವಾಗಿ ಕೇಳಿಸುವುದಿಲ್ಲವೆಂಬುದು ಪ್ರತ್ಯಕ್ಷಗಮ್ಯವಾಗಿಯೇ ಇದೆ. ಆದುದರಿಂದ ಅಂತರಗತ ಶ್ರುತಿಯು ಈ ಸನ್ನಿಹಿತಕಾರ್ಯವನ್ನು ಒಪ್ಪಲಾಗದು.

ಸನ್ನಿಹಿತ ಕಾರ್ಯವೆಂದು ಒಪ್ಪದಿದ್ದರೆ ಬೇಡ, ಈ ಮನೋವಿಕಾರಗಳು ಕಾರಣಗಳಾದ ಶ್ರುತಿಗಳ ಲಕ್ಷಣ, ಸ್ವಭಾವಗಳು, ಅಥವಾ ನಿಮಿತ್ತ ಕಾರಣ ಅಥವಾ ವಿಶೇಷ ಕಾರಣಗಳು, ಆದುದರಿಂದ ಕಾರ್ಯವಾದ ಸ್ವರದಲ್ಲಿ ಇವು ಗಳನ್ನು ಕಾಣಲು ತಾರ್ಕಿಕವಾಗಿ ಅಡ್ಡಿಯಿಲ್ಲ ಎಂಬ ಪಕ್ಷವನ್ನೂ ಇಲ್ಲಿ ಗ್ರಹಿಸಬಹುದು. ಇದೂ ಅಸಾಂಪ್ರತವೇ. ಏಕೆಂದರೆ ಕಾರ್ಯದಲ್ಲಿ ಕಾರಣವು ಪ್ರತ್ಯಕ್ಷನಷ್ಟೆ. ನಿಮಿತ್ತಕಾರಣ, ವಿಶೇಷ ಕಾರಣವಾಗಿದ್ದರೆ ಅನುಮಾನ, ಅರ್ಥಾಪತ್ತಿಗಳಿಂದಾದರೂ ಸಿದ್ಧವಾಗಬೇಕು. ಅಲ್ಲದೆ ಕಾರಣವು ಕಾರ್ಯದಲ್ಲಿ ವ್ಯಾಪ್ತಿಯಿಂದಲೂ ಸಿದ್ಧವಾಗಬೇಕು. ದೀಪ್ತಾಶ್ರುತಿಯು ಎಲ್ಲರಲ್ಲಿಯೂ ಯಾವಾಗಲೂ ಪ್ರಕಾಶ, ಉದ್ವೇಗಾದಿ ಮನೋವಿಕಾರಗಳನ್ನು ಉಂಟುಮಾಡುತ್ತದೆ, ಇದು ಷಡ್ಜದಲ್ಲಿ ಯಾವಾಗಲೂ ಕಾಣಿಸಿಕೊಳ್ಳುತ್ತದೆ, ದೀಪ್ತಾ ಇದ್ದಾಗಲೆಲ್ಲ ಷಡ್ಜವಿರುತ್ತದೆ, ಷಡ್ಜವಿದ್ದಾಗಲೆಲ್ಲ ದೀಪ್ತಾ ಇರುತ್ತದೆ ಎಂಬ ಪ್ರತ್ಯಕ್ಷಲಿಂಗವಿರಬೇಕು. ಅದು ಯಾರ ಅನುಭವದಲ್ಲಿಯೂ ಇಲ್ಲ. ಷಡ್ಜವಲ್ಲದೆ ಬೇರೆ ಕಡೆ ಯಲ್ಲಿಯೂ ಇದು ಸಿದ್ಧವಾಗಿರಬೇಕು. ಇಲ್ಲಿ ಪ್ರತ್ಯಕ್ಷ ಲಿಂಗವಿಲ್ಲದುದರಿಂದ ವ್ಯಾಪ್ತಿಯೂ, ಅನುಮಾನವೂ, ಅರ್ಥಾಪತ್ತಿಯೂ ಸಿದ್ಧವಾಗುವುದಿಲ್ಲ. ಮತ್ತು ದೀಪ್ತಾ, ಆಯತಾ, ಮೃದು, ಮಧ್ಯಾಗಳೆಲ್ಲದರಿಂದ ಆದ ಮನೋ ವಿಕಾರಗಳೂ ಷಡ್ಜದಲ್ಲಿ ಪ್ರತ್ಯೇಕವಾಗಿ ಕಾಣಬೇಕು, ಹಾಗೂ ಮಧ್ಯಾದಲ್ಲಿ ಷಡ್ಜಕ್ಕೆ ಸ್ವಸಂವೇದ್ಯತೆಯಿರುವುದರಿಂದ ಮಧ್ಯಾದಿಂದ ಉಂಟಾಗುವ ಮನೋವಿಕಾರವೇ ಸ್ಥಾಯಿಭಾವದಲ್ಲಿರಬೇಕು. ಷಡ್ಜವು ಈ ಎಲ್ಲಾ ಮನೋವಿಕಾರ ಗಳು ಯೌಗಪದ್ಯದಲ್ಲಿ, ಎಂದರೆ ಒಮ್ಮೆಗೇ, ಮಿಶ್ರವಾಗಿರುವ ಅನುಭವವೆಂದು ಯಾರಿಗೂ ಗೋಚರವಿಲ್ಲ. ಆದರೆ ಈ ಬಗೆಯ ಯೌಗಪದ್ಯವಿಲ್ಲವೆಂದು ಅಭಿನವಗುಪ್ತನ ಮಾತಿನಿಂದಲೇ ಸಿದ್ಧವಾಗುತ್ತದೆ.[132] ಅದೂ ಅಲ್ಲದೆ ಸಿಂಹಭೂಪಾಲನು ಸುಲಭವಾಗಿ ಅರ್ಥ ಹೇಳಬಹುದಾದ ದೀಪ್ತಾ, ಆಯತಾಗಳಿಗೆ ಮಾತ್ರ. ಅರ್ಥವಿಸ್ತಾರವನ್ನು ಮಾಡಿ, ಅನರ್ಥಕವೋ ನಿರರ್ಥಕವೋ ಆಗುವ ಕರುಣಾ, ಮೃದು, ಮಧ್ಯಾ, ಶ್ರುತಿಗಳ ವಿಷಯದಲ್ಲಿ ನಿಗದವ್ಯಾಖ್ಯೆ ಮಾಡಿರುವುದು ಅವನ ಪಕ್ಷಕ್ಕೆ ಬಲವನ್ನೇನೂ ಉಂಟುಮಾಡುವುದಿಲ್ಲ

ಅವನ ಜಿಜ್ಞಾಸಾಕ್ರಮದಲ್ಲಿರುವ ಮತ್ತೊಂದು ದೋಷವೆಂದರೆ ಎಂಟು ಅಥವಾ ಒಂಬತ್ತು ಸ್ಥಾಯಿಭಾವಗಳ ಪೈಕಿ ಕರುಣಾರಸವೊಂದಕ್ಕೇ ಇಲ್ಲಿ ಸ್ಥಾನವನ್ನು ಕಲ್ಪಿಸಿರುವುದು. ಎಂದರೆ ಪಂಚಮವೊಂದು ಕರುಣಾರಸವೊಂದನ್ನು ಉತ್ಪಾದಿಸುತ್ತದೆಂದೂ, ಋಷಭ ಧೈವತಗಳು ಸೂಚನೆಯಿಂದ ಮಾತ್ರ ಮಾಡಬಲ್ಲವೆಂದೂ, ಉಳಿದ ಸ್ವರಗಳು ಕರುಣಾರಸವನ್ನು ಉಂಟುಮಾಡಲಾರವೆಂದೂ, ಸಪ್ತಸ್ವರಗಳೆಲ್ಲ ಕರುಣೆಯನ್ನುಳಿದ ಇತರ ರಸಗಳ ಪ್ರತೀತಿಯನ್ನುಂಟುಮಾಡಲಾರವೆಂದೂ ಈ ಪಕ್ಷದ ಅನುಮಿತಿಗಳಾಗುತ್ತವೆ! ಅಲ್ಲದೆ ಶ್ರುತಿಜಾತಿಗಳಿಂದ ಸ್ವರಗಳು ಉತ್ಪತ್ತಿಯಾಗುತ್ತವೆಂದು ಹೇಳಿದ್ದರಿಂದ ಈ ಮನೋವಿಕಾರಗಳಿಂದಲೇ ಎಲ್ಲಾ ಸ್ವರಗಳೂ ಹುಟ್ಟುತ್ತವೆಂದು ಹೇಳಿದಂತಾಯಿತು. ವಿಕಾರಗಳಲ್ಲಿ (ಮಧ್ಯಾಜಾತಿಗೆ) ಮಧ್ಯಸ್ಥತಾಸ್ವರೂಪವನ್ನು ಹೇಳುವುದು ಅತ್ಯಂತ ಅನುಪಪನ್ನವಾದುದು. ಸ್ವರವನ್ನೂ ಮನಸ್ಸನ್ನೂ ನೇರವಾಗಿ ಸಂಬಂಧಿಸುವುದು ರಂಜನೆ, ಉಪತಾಪನ. ಇವುಗಳಲ್ಲಿ ಯಾವುದನ್ನೂ ಶ್ರುತಿಗಳಿಗೆ ಸಂಬಂಧಿಸದೆ ಈ ಸಂಬಂಧದಲ್ಲಿ ಮನೋವೈಜ್ಞಾನಿಕ ಪ್ರಮೇಯವೊಂದನ್ನು ಸಿದ್ಧಗೊಳಿಸಲು ಹೊರಡುವುದು ಇನ್ನೊಂದು ತಾಂತ್ರಿಕದೋಷ.

ಹೀಗೆ ಪ್ರತ್ಯಕ್ಷಾನುಭವಕ್ಕೂ ಶಾಸ್ತ್ರಕ್ಕೂ ವಿರುದ್ಧವಾಗಿರುವ ಸಿಂಹಭೂಪಾಲನ ಅರ್ಥವನ್ನು ಗ್ರಹಿಸಲಾಗದು.

### (ಆ) ಪೂರ್ವವ್ಯಾಖ್ಯಾನಗಳಲ್ಲಿ ದೋಷಗಳು : ಕಲ್ಲಿನಾಥ

ಕಲ್ಲಿನಾಥನಾದರೋ ಈ ಶ್ರುತಿಜಾತಿಗಳಿಗೆ ಬೇರೆ ಪ್ರಯೋಜನವನ್ನು ಹೇಳುತ್ತಾನೆ. ಅವನು ಈ ಶ್ರುತಿ-ಪ್ರಯೋಜನದಿಂದ ಹೊರಡಿಸುವ ಅರ್ಥವು ಗ್ರಾಹ್ಯವಾಗಿದ್ದರೂ ಅವುಗಳ ವಿಷಯದಲ್ಲಿ ವಿಶೇಷವಾದ ತಿಳುವಳಿಕೆಯನ್ನೇನೂ ಉಂಟುಮಾಡುವುದಿಲ್ಲ. ಶ್ರುತಿಗಳು ಅನ್ಯೋನ್ಯವಾಗಿ ಕಲಬೆರಕೆಯಾಗದೆ ಹೋಗಿ ಅವುಗಳ ಸ್ವರೂಪಜ್ಞಾನವು ಉಂಟಾಗಲು ಅವುಗಳನ್ನು ವಿವಿಧ ಸ್ವರಗಳಲ್ಲಿ ಹೊಂದುವ ವ್ಯವಸ್ಥೆಯ ಮೂಲಕ ಹೇಳಿದೆ; ಅವುಗಳಲ್ಲಿ ಸಜಾತೀಯವಾದವುಗಳ ಸಂಗತಿಯಿಂದ ಎಂದರೆ ಸೇರುವಿಕೆಯಿಂದ ರಕ್ತಿಲಾಭವಾಗುತ್ತದೆ. ಆದುದರಿಂದಲೇ ಶ್ರುತಿಪಂಚಕವನ್ನು ಅವಾಂತರಭೇದಗಳೊಡನೆ ಸ್ವರಗಳಲ್ಲಿ ಅವು ಪಡೆದಿರುವ ವ್ಯವಸ್ಥೆಯಿಂದ ಹೇಳಿದೆ:

ಶ್ರುತೀನಾಮನ್ಯೋಽನ್ಯಮಸಂಕೀರ್ಣತಯಾ ಸ್ವರೂಪಪರಿಜ್ಞಾನಾಯ ಕ್ವಚಿತ್ಸಾಸಾಂ ಸಾಜಾತ್ಯೇನ ಸಂಗತಾ ರಕ್ತಿಲಾಭಾಯ ಚಾವಾಂತರಭೇದಸಹಿತಾನಾಂ ಜಾತೀನಾಂ ಸ್ವರೇಷು ವ್ಯವಸ್ಥಾನಂ ದರ್ಶಯತಿ— **ದೀಪ್ತಾಽಽಯತೇತ್ಯಾದಿನಾ** । [274]

ಇದರಲ್ಲಿ ಶ್ರುತಿಗಳು ಸಂಕೀರ್ಣವಾಗಿಬಿಡದೆ ಅವುಗಳ ಸ್ವರೂಪವನ್ನು ತಿಳಿಸಲು ದೀಪ್ತಾ ಆಯತಾದಿ ಶ್ರುತಿಗಳನ್ನು ಹೇಳಿದೆಯೆಂಬುದು ಮೊದಲನೆಯ ಅಂಶ. ಎಂದರೆ ಒಂದರಿಂದ ಇನ್ನೊಂದು ಭಿನ್ನವಾಗಿದೆಯೆಂದು ತಿಳಿಸಲು ಜಾತಿಗಳನ್ನು ಹೇಳಿದೆ. ಆದರೂ ಹೇಗೆ ಇವು ಭಿನ್ನವಾಗಿವೆಯೆಂಬುದನ್ನಾಗಲೀ ಇವುಗಳ ಸ್ವರೂಪವು ಎಂತಹುದೆಂದಾಗಲೀ ಇಲ್ಲಿ ಹೇಳಿಲ್ಲ. ಸಂಕೀರ್ಣತೆ ಎಂಬುದಕ್ಕೆ ಅಭಿನವಗುಪ್ತನು ಹೇಳಿದ ಅರ್ಥವನ್ನು ಗ್ರಹಿಸಿದರೆ ಮಾತ್ರ ಈ ಮಾತಿನಿಂದ ಒಂದು ವಿಶೇಷಾರ್ಥವನ್ನು ಹೊರಡಿಸಬಹುದು. ಅಣುವಿನಷ್ಟು ಸಮೀಪದಲ್ಲಿರುವ ಧ್ವನಿಗಳಿಂದ ಶ್ರುತಿಯು ಉಂಟಾದರೂ ನೆರೆಹೊರೆಯ ಶ್ರುತಿಗಳು ಈ ಸಾಮೀಪ್ಯಕಾರಣದಿಂದ ಸಂಕರವಾಗಿ ಹೋಗುತ್ತವೆ ಎಂದರೆ ಬೇರೆ ಬೇರೆಯಾಗಿ ತಿಳಿಯಲಾಗುವುದಿಲ್ಲ. ಆದುದರಿಂದ ಈ ಸಂಕೀರ್ಣತೆಯನ್ನು ಹೋಗಲಾಡಿಸುವ ಸಾಧನಗಳು ಈ ಶ್ರುತಿಗಳು ಎಂದಾಗುತ್ತದೆ. ಅನುರಣನ, ರಕ್ತಿ ಮುಂತಾದ ಧರ್ಮಗಳನ್ನು ಪಡೆದು, ನಿರ್ದಿಷ್ಟವಾದ ಪ್ರಮಾಣವನ್ನು ಪಡೆದು, ಆದರೆ ಈ ಪ್ರಮಾಣವು ಸ್ವರತ್ವಕ್ಕೆ ಸಾಲದೆ, ಇಂತಹ ಎರಡು, ಮೂರು

274 ಕಲ್ಲಿನಾಥ, ಉ.ಗ್ರಂ., ಪು. 86.

ಮತ್ತು ನಾಲ್ಕು ಪ್ರಮಾಣಗಳಿಂದ ಸ್ವರ ಎಂಬುದನ್ನು ಹೇಳುವ ಸಲುವಾಗಿ ಈ ಶ್ರುತಿಗಳ ನಿರೂಪಣೆ ಎಂದು ಕಲ್ಲಿನಾಥನ ವಾಕ್ಯಕ್ಕೆ ಅರ್ಥಮಾಡಬಹುದು. ಬೇರೆ ಬೇರೆ ಸ್ವರಗಳನ್ನು ನಿರ್ಮಿಸಬೇಕಾದರೆ ಇಂತಹ ವಿವಿಧ ಪ್ರಮಾಣಗಳು ಬೇಕಾಗುತ್ತವೆ. ಒಟ್ಟಿನಲ್ಲಿ ಇಂತಹ ಐದು ಬೇರೆ ಬೇರೆ ಪ್ರಮಾಣಗಳನ್ನು ಗುರುತಿಸಬಹುದು; ಇವುಗಳೇ ದೀಪ್ತಾ, ಆಯತಾ ಮುಂತಾದ ಶ್ರುತಿ ಜಾತಿಗಳು ಎಂಬುದು ಇಲ್ಲಿ ಧ್ವನಿ.

ಎರಡನೆಯದಾಗಿ 'ಸಾಜಾತ್ಯೇನ ಸಂಗತ್ಯಾ ರಕ್ತಿಲಾಭಾಯ' ಎಂಬ ಮಾತಿನಿಂದಲೂ ಒಂದು ಅರ್ಥವನ್ನು ಸಿದ್ಧಪಡಿಸಬಹುದು. ಸಜಾತೀಯವಾದ ಈ ಶ್ರುತಿಗಳ ಸಂಗತಿಯಿಂದ ಷಡ್ಜ, ರಿಷಭ, ಮಧ್ಯಮ, ಪಂಚಮಗಳಲ್ಲಿ ಸಜಾತೀಯಗಳಾದ ಮೃದುಮಧ್ಯಾಗಳ ಸಂಗತಿಯಿಂದ ಈ ಸ್ವರಗಳ ಸ್ವಸಂವೇದ್ಯತೆಯೂ ಸ್ವರತ್ವವೂ ಉಂಟಾಗುವುದರಿಂದ, ರಕ್ತಿಲಾಭವೂ ಆಯಿತು ಎಂದೇನೋ ಇಟ್ಟುಕೊಳ್ಳಬಹುದಾದರೂ ಇದಕ್ಕೆ ವ್ಯಾಪ್ತಿಯಿಲ್ಲ. ಏಕೆಂದರೆ ರಕ್ತಿ ಎಂಬುದು ಸಾಮಾನ್ಯಧರ್ಮವಾದರೂ ವಿಧರ್ಮಿಗಳಾದ ಈ ಬೇರೆ ಬೇರೆ ಸ್ವರಗಳಲ್ಲಿ ಬೇರೆ ಬೇರೆ ಸ್ವಸಂವೇದ್ಯತೆಯನ್ನು ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಉಂಟುಮಾಡುವುದು ಇವುಗಳೇ ಆದುದರಿಂದ ಒಂದೇ ಕಾರಣದಿಂದ ಬೇರೆ ಬೇರೆ ಕಾರ್ಯಗಳನ್ನು ಹೇಳಿದ ಹಾಗಾಗುತ್ತದೆ. ಇದು ತಾರ್ಕಿಕವಾಗಿಯಾಗಲೀ ರೂಢಿಯಲ್ಲಾಗಲೀ ಸಾಧ್ಯವೂ ಅಗದೆ; ಉದಾಹರಣೆಗೆ, ಮೃತ್ಪಿಂಡವೆಂಬ ಒಂದೇ ಉಪಾದಾನಕಾರಣದಿಂದ ಘಟಮಣಿಕಾದಿ ವಿವಿಧಕಾರ್ಯಗಳು ಆಗಬಹುದಷ್ಟೆ. ಆದರೆ ಹೀಗಾಗಲು ನಿಮಿತ್ತಕಾರಣಗಳೂ ವಿಶೇಷಕಾರಣಗಳೂ ಬೇರೆ ಬೇರೆಯಾಗಿರಬೇಕು. ಏಕೆಂದರೆ ಸಾಧಾರಣ, ಉಪಾದಾನ, ನಿಮಿತ್ತ ಮತ್ತು ಅಸಮವಾಯ ಕಾರಣಗಳೆಲ್ಲ ಒಂದೇ ಆಗಿದ್ದರೆ ಬೇರೆ ಬೇರೆ ಕಾರ್ಯಗಳನ್ನು ಉಂಟು ಮಾಡಲಾರವು. ಇಲ್ಲಿ ಅನುಕ್ರಮ, ಊರ್ಧ್ವಸ್ಪರ್ಶಗಳನ್ನು ನಿಮಿತ್ತಕಾರಣ, ವಿಶೇಷ ಕಾರಣಗಳೆಂದು ಇಟ್ಟುಕೊಂಡರೆ ವಿವಿಧ ಸ್ವರಗಳ ಕಾರ್ಯತ್ವವು ಸಾಧ್ಯವಾಗುತ್ತದೆ. ಆದರೆ ಉಳಿದ ಸ್ವರಗಳಿಗೆ ಈ ಶ್ರುತಿಗಳನ್ನೇ ಕಾರಣಗಳೆಂದು ಹೇಳಲು ಅವಕಾಶವಿಲ್ಲ. ಆದುದರಿಂದ 'ಸಾಜಾತ್ಯೇನ' ಎಂಬ ಮಾತಿಗೆ ಅರ್ಥವಿಲ್ಲದೆ ಹೋಗುತ್ತದೆ. ಅಲ್ಲದೆ ಇಲ್ಲಿ 'ಸಂಗತ್ಯಾ' ಎಂಬುದಕ್ಕೆ ಸಜಾತೀಯವಾದ ಶ್ರುತಿಗಳು (ನಿರ್ದಿಷ್ಟವೂ ನಿಯತವೂ ಅಲ್ಲದ ಕ್ರಮದಲ್ಲಿ) ಸೇರುವುದರಿಂದ ಎಂಬ ಶಬ್ದಾರ್ಥವನ್ನು ಮಾತ್ರ ವಿವಕ್ಷಿಸಿ ಅನುಕ್ರಮದ ವಿಷಯದಲ್ಲಿ ಯಾವ ವಿಧಿಯನ್ನೂ ಹೇಳದೆ ಇರಬೇಕಾಗುತ್ತದೆ; ಕಡೆಯಪಕ್ಷ, ಸಜಾತೀಯವಾದ ಶ್ರುತಿಗಳು ಹಿಂದೆ ಬಂದ ಕ್ರಮದಲ್ಲಿಯೇ ಪುನರುಕ್ತವಾದರೆ ಮಾತ್ರ ಸ್ವರತ್ವದ ಸಿದ್ಧಿ, ಇಲ್ಲದಿದ್ದರೆ ಇಲ್ಲ ಎಂದೂ ಗ್ರಹಿಸಲು ಸಾಧ್ಯವಿರುವ ಪಕ್ಷವನ್ನು ನಿರಾಕರಿಸಬೇಕಾಗುತ್ತದೆ. ಆದುದರಿಂದ ತನ್ನ ವ್ಯಾಖ್ಯಾನದಿಂದ ಮೂಲಗ್ರಂಥದ ಭಾವವನ್ನು ವಿಶೇಷವಾಗಿ, ಅಸಂದಿಗ್ಧವಾಗಿ ಸ್ಪಷ್ಟಗೊಳಿಸದಿದ್ದರೂ, ಮೂಲಗ್ರಂಥದ ಮತ್ತು ಅದರ ಆಕರಗಳ ಅರ್ಥಪರಂಪರೆಗೆ ವಿರೋಧವಾಗಿಲ್ಲದಿರುವುದರಿಂದ ಕಲ್ಲಿನಾಥನ ಈ ಮಾತನ್ನು ಗ್ರಹಿಸಬಹುದೆಂದು ತೋರುತ್ತದೆ.

## 18. ಗ್ರಂಥರಚನಾತಂತ್ರ

ಈ ಸಂದರ್ಭಕ್ಕೆ ಸಂಬಂಧಿಸಿದ ಗ್ರಂಥರಚನಾತಂತ್ರವೊಂದನ್ನಿಲ್ಲಿ ಸ್ಮರಿಸಬಹುದು. ಶ್ರೀ ಶಾರ್ಙ್ಗದೇವನು ಪ್ರಕೃತವಾದ ಸ್ವರಗತಾಧ್ಯಾಯದಲ್ಲಿ ತಾನು ನಿರೂಪಿಸಲಿರುವ ವಿಷಯಗಳ ಪಟ್ಟಿಯನ್ನೂ ಅವುಗಳ ಅನುಕ್ರಮವನ್ನೂ ಗ್ರಂಥಾರಂಭದಲ್ಲೇ ಹೀಗೆ ಹೇಳಿಕೊಂಡಿದ್ದಾನಷ್ಟೆ:

ಶರೀರಂ ನಾದಸಂಭೂತಿಃ ಸ್ಥಾನಾನಿ ಶ್ರುತಯಸ್ತಥಾ |
ತತಃ ಶುದ್ಧಾಃ ಸ್ವರಾಃ ಸಪ್ತ ವಿಕೃತಾ ದ್ವಾದಶಾಪ್ಯಮೀ |
ವಾದ್ಯಾದಿಭೇದಾಶ್ಚತ್ವಾರೋ ರಾಗೋತ್ಪಾದನಹೇತವಃ |

**3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ**

ಕುಲಾನಿ ಜಾತಯೋ ವರ್ಣಾ ದ್ವೀಪಾನ್ಯಾರ್ಷಂ ಚ ದೈವತಮ್ |
ಛಂದಾಸಿ ವಿನಿಯೋಗಾಶ್ಚ ಸ್ವರಾಣಾಂ ಶ್ರುತಿಜಾತಯಃ || [275]

ಈ ಉದ್ಧೃತಿಯಲ್ಲಿ ಶರೀರಂ ಎಂಬುದನ್ನು ಎರಡನೆಯ ಪಿಂಡೋತ್ಪತ್ತಿಪ್ರಕರಣದಲ್ಲಿಯೂ ಉಳಿದುದನ್ನು ಈ ಮೂರನೆಯ ಪ್ರಕರಣದಲ್ಲಿಯೂ ಅವನು ವಿವರಿಸಿದ್ದಾನೆ. ಅದರಲ್ಲಿಯೂ ನಾದಸಂಭೂತಿಃ ಎಂಬ ಭಾಗದಲ್ಲಿನ ಅನಾಹತನಾದಸಂಭೂತಿಯನ್ನು ಸ್ವಲ್ಪವಾಗಿ ಎರಡನೆಯ ಪ್ರಕರಣದಲ್ಲಿಯೇ ಹೇಳಿದ್ದಾನೆ. ಮೂರನೆಯ ಪ್ರಕರಣ ದಲ್ಲಿಯಾದರೋ ನಾದಸಂಭೂತಿಯಾದಮೇಲೆ ಸ್ಥಾನಗಳನ್ನೂ, ಆಮೇಲೆ ಶ್ರುತಿಗಳನ್ನೂ ಕ್ರಮವಾಗಿಯೇ ನಿರೂಪಿ ಸಿದ್ದಾನೆ. ಆದರೆ ಇದರ ಮುಂದಕ್ಕೆ ಉದ್ದೇಶದಲ್ಲಿ ಹೇಳಿರುವ ಕ್ರಮಕ್ಕೂ ಗ್ರಂಥದಲ್ಲಿ ವಿವರಿಸಿರುವ ಅನುಕ್ರಮಕ್ಕೂ ವ್ಯತ್ಯಾಸವಿದೆ. ಹೀಗೆ, ಶ್ರುತಿಗಳಾದಮೇಲೆ ಸ್ವರಗಳು, ನಂತರ ಅಂತರಗತ ಶ್ರುತಿಗಳ ಸ್ವರಹೇತುತ್ವ, ಶ್ರುತಿಜಾತಿ ಗಳು, ಅವುಗಳ ಅವಾಂತರ ಭೇದಗಳಾದ ತೀವ್ರಾ ಇತ್ಯಾದಿ ದ್ವಾವಿಂಶತಿ ಶ್ರುತಿಗಳು, ಹಾಗೂ ಸ್ವರಗಳಲ್ಲಿ ಅವುಗಳ ವ್ಯವಸ್ಥೆ, ಆಮೇಲೆ ಶುದ್ಧಸ್ವರಗಳು ಮತ್ತು ವಿಕೃತಿಸ್ವರಗಳು, ಪ್ರಾಣಿಧ್ವನಿಗಳಿಗೂ ಸ್ವರಗಳಿಗೂ ಇರುವ ಸಾಮ್ಯಗಳು, ನಂತರ ವಾದಿಯೇ ಮೊದಲಾದ ಸ್ವರಚಾತುರ್ವಿಧ್ಯ, ಕಡೆಯಲ್ಲಿ ಸ್ವರಗಳ ದೈವತ, ಕುಲ, ಋಷಿ, ಛಂದಸ್ಸು, ರಸ, ಇತ್ಯಾದಿಗಳು—ಈ ಅನುಕ್ರಮವು ಕಂಡುಬರುತ್ತದೆ. ಹೀಗೆ ಪ್ರಕರಣದ ಕಡೆಯಲ್ಲಿ ಹೇಳಬೇಕಾಗಿದ್ದ ಶ್ರುತಿಜಾತಿ ಗಳನ್ನು ಸ್ವರದ ಲಕ್ಷಣವಾದಮೇಲೂ ಪ್ರಕೃತಿ ವಿಕೃತಿ ಸ್ವರನಿರೂಪಣೆಗಿಂತ ಮುಂಚೆಯೂ ಹೇಳಲಾಗಿದೆ. ಉದ್ದೇಶಕ್ರಮದ ಈ ಉಲ್ಲಂಘನೆಗೆ ಕಾರಣವೇನು ?

ಇದಕ್ಕೆ ಕಲ್ಲಿನಾಥನು ಕೊಡುವ ಕಾರಣವು ಎರಡು ರೀತಿಯಾಗಿದೆ. ಮೊದಲನೆಯದಾಗಿ, ಉದ್ದೇಶಕ್ರಮದಲ್ಲಿ ಶ್ರುತಿಜಾತಿಗಳನ್ನು ಎಲ್ಲಿಯೇ ಹೇಳಿರಲಿ, ಅವುಗಳು ಶ್ರುತಿಸ್ವರಗಳ ವಿವೇಚನಾಸಂದರ್ಭಕ್ಕೆ ಅತ್ಯಂತ ಪ್ರಸಕ್ತವಾಗಿವೆ. ಪರಸ್ಪರ ಸಂಬಂಧಿತವಾದ ವಿಷಯಗಳನ್ನು ಒಟ್ಟಾಗಿಯೋ ಅನುಕ್ರಮದಲ್ಲಿಯೋ ಚರ್ಚಿಸುವುದೇ ಸಾಧುವಾದ ಕ್ರಮ. ಉದ್ದೇಶಕ್ರಮದಲ್ಲಿ ಹೇಳಿರಬಹುದಾದ ಕ್ರಮಕ್ಕಿಂತ ತತ್ತ್ವಜಿಜ್ಞಾಸಾಪದ್ಧತಿಯಲ್ಲಿರುವ ಕ್ರಮವೇ ಹೆಚ್ಚು ಮುಖ್ಯ ವಾದುದು, ಹೆಚ್ಚು ಗ್ರಾಹ್ಯವಾದುದು. ಯಾವುದಾದರೂ ಒಂದು ವಿಷಯವನ್ನು ಚರ್ಚಿಸುತ್ತಿರುವಾಗ ಅದರ ಮೇಲೆ ಬೆಳಕು ಚೆಲ್ಲುವ, ಅಥವಾ ಅದು ಬೆಳಕು ಚೆಲ್ಲುವ, ಸಂಬಂಧಿತವಾದ, ಪೋಷಕವಾದ, ಪೂರಕವಾದ, ಪೀಠಿಕೆಯಾದ ಇತರ ವಿಷಯಗಳನ್ನೂ ಅಲ್ಲಿಯೇ ಸೇರಿಸಿಕೊಳ್ಳುವುದು ಶಾಸ್ತ್ರಾಭ್ಯಾಸದಲ್ಲಿ ಚಿರಪರಿಚಿತವಾದ, ಸರ್ವಸಮ್ಮತವಾದ, ತಂತ್ರವೇ ಆಗಿದೆ. ಎರಡನೆಯದಾಗಿ, ಮೇಲಿನ ಉದ್ದೇಶಪ್ರಪಂಚದಲ್ಲಿ ಹೇಳಿರುವ ವಿಷಯಗಳಲ್ಲಿ ಇದೇ ಕ್ರಮದಲ್ಲಿ ನಿರೂಪಿಸಲ್ಪಡುತ್ತವೆ ಎಂಬ ವಿವಕ್ಷೆಯು ಗ್ರಂಥಕಾರನಲ್ಲಿ ಇಲ್ಲ, ಎಂದು ಕಲ್ಲಿನಾಥನು ಎನ್ನುತ್ತಾನೆ. ಉದ್ದೇಶಕ್ರಮದಲ್ಲಿ ಮುಂದೆ ನಿರೂಪಿಸಿರುವ ವಿಷಯಗಳ ಪಟ್ಟಿಯನ್ನು ಶೀರ್ಷಿಕಾರೂಪದಲ್ಲಿ ಮಾತ್ರ ಕೊಟ್ಟಿದೆ; ಅನುಕ್ರಮವನ್ನು ವಿವಕ್ಷಿಸಿಲ್ಲ, ಎಂದರೆ ಉದ್ದೇಶದಲ್ಲಿ ವ್ಯುತ್ಕ್ರಮವಿದೆ ಎನ್ನಲು ಈ ಗ್ರಂಥಭಾಗದಲ್ಲಿ ಇನ್ನೂ ಒಂದು ಉದಾಹರಣೆಯಿದೆ; ಮೇಲಿನ ಉದ್ಧೃತಿಯಲ್ಲಿ ಹೇಳಿರುವ ಹಾಗೆ ಸ್ವರಗಳ ಕುಲ, ಜಾತಿ, ವರ್ಣ, ದ್ವೀಪ, ಋಷಿ, ದೈವತ, ಛಂದಸ್ಸು, ವಿನಿಯೋಗ—ಇವುಗಳನ್ನಾದರೂ ಇದೇ ಕ್ರಮದಲ್ಲಿ ಹೇಳಿಲ್ಲ, ಆದುದರಿಂದ ಇಲ್ಲಿ ಉದ್ದೇಶದಲ್ಲಿರುವ ಅನುಕ್ರಮದ ವಿವಕ್ಷೆಯನ್ನು ಇಟ್ಟುಕೊಳ್ಳಬಾರದು, ಎಂಬುದು ಅವನು ಕೊಡುವ ವಿವರಣೆ :

ಸ್ವರವಿನಿಯೋಗಾನಂತರಮುದ್ದಿಷ್ಟಾನಾಮಪಿ ಶ್ರುತಿಜಾತೀನಾಮಿಹ ನಿರೂಪಣಂ ಶ್ರುತಿಸ್ವರವಿವೇಚನರೂಪಾ- ರ್ಥಸಂಗತಿವಶಾದುಪಪನ್ನಮ್ | ವ್ಯುತ್ಕ್ರಮೇಣೋದ್ದೇಶಸ್ತು ಕ್ವಚಿತ್ ಕ್ರಮಸ್ಯಾವಿವಕ್ಷಿತತ್ವಜ್ಞಾಪನಾ- ರ್ಥಮ್ | ಏತೇನ " ಕುಲಾನಿ ಜಾತಯಃ—" ಇತ್ಯಾದಿ ಕ್ರಮಸ್ತ್ವವಿವಕ್ಷಿತ ಇತಿ ಮಂತವ್ಯಮ್ | [274]

---

275 ಶಾರ್ಙ್ಗದೇವ, ಉ.ಗ್ರಂ., I, 1, 31-32.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಕಲ್ಲಿನಾಥನ ಈ ಮಾತು ಉಪಪನ್ನವಲ್ಲವೆಂದು ಹೇಳಬೇಕು. "ಕುಲಾನಿಜಾತಯಃ ಇತ್ಯಾದಿ ಕ್ರಮಸ್ತ್ವವಿವಕ್ಷಿತ ಇತಿ ಮಂತವ್ಯಮ್" ಎಂದು ಅವನು ಹೇಳುವುದು ತುಂಬಾ ಆಶ್ಚರ್ಯಕರವಾಗಿದೆ. ಏಕೆಂದರೆ ಇದೇ ಪ್ರಕರಣದಲ್ಲಿ ಕಡೆಯ ಎಂಟು ಶ್ಲೋಕಗಳಲ್ಲಿ ಶ್ರೀ ಶಾರ್ಙ್ಗದೇವನು ಉದ್ದೇಶಪ್ರಪಂಚದಲ್ಲಿ ಮಾಡಿರುವ ಅನುಕ್ರಮದ ಪ್ರತಿಜ್ಞೆಯನ್ನು ಚಾಚೂ ತಪ್ಪದಂತೆ ಅನುಸರಿಸಿರುವುದು ಪ್ರಥಮದರ್ಶನಕ್ಕೇ ಸ್ಪಷ್ಟವಾಗುತ್ತದೆ : ಅಲ್ಲಿ ಸ್ವರಗಳ ಕುಲ, ವಂಶ, ಜಾತಿ, ವರ್ಣ, ಋಷಿ, ದೈವತ, ಛಂದಸ್ಸು, ವಿನಿಯೋಗ—ಈ ಕ್ರಮವೇ ಇದೆ. ಸಂಗೀತರತ್ನಾಕರದ ಎಲ್ಲಾ ಮುದ್ರಿತಪಾಠಗಳಲ್ಲಿಯೂ, ಹಸ್ತಪ್ರತಿಗಳಲ್ಲಿಯೂ ಇದೇ ಕ್ರಮವಿದೆ. ಸಿಂಹಭೂಪಾಲನೂ ಮೂಲಗ್ರಂಥದ ಇದೇ ಕ್ರಮವುಳ್ಳ ಪಾಠಕ್ಕೆ ವ್ಯಾಖ್ಯಾನಮಾಡಿದ್ದಾನೆ. ಕಲ್ಲಿನಾಥನೊಬ್ಬನು ಮಾತ್ರ ನಿಗದ ವ್ಯಾಖ್ಯಾನಮಾಡಿದ್ದಾನೆ. ಅಲ್ಲಿ ಅವನು ಹೇಳಿರುವುದಾದರೂ ತನ್ನ ಹಿಂದಿನ ಮಾತಿಗೆ ವಿರೋಧವಾಗಿರುವುದನ್ನು ಮರೆತುಬಿಟ್ಟನೇನೋ !

ಜ್ಞಾತ್ವಾ ಪ್ರಯೋಗೇ ಽದೃಷ್ಟಾತಿಶಯೋ ಽಪ್ಯಸ್ತೀತಿ ಸ್ವರಾಣಾಂ ಕುಲಾದೀನ್ಯುದ್ದೇಶಕ್ರಮೇಣಾಹ— **ಗೀರ್ವಾಣಕುಲೇತ್ಯಾದಿನಾ** । [276]

ಅಲ್ಲದೆ ಉದ್ದೇಶಕ್ರಮದಲ್ಲಿ ಮೇಲೆ ಉದ್ಧರಿಸಿದ ಶ್ಲೋಕಗಳಿಗೆ ಅವನು ವ್ಯಾಖ್ಯಾನಮಾಡಿರುವುದಾದರೂ ಹೀಗೆ: 'ಅತೋ ಗೀತಂ ಪ್ರಧಾನತ್ವಾದತ್ರಾದಾವಭಿಧೀಯತೇ' [277] ಎಂಬ ಪ್ರತಿಜ್ಞೆಗೆ ಅನುಸಾರವಾಗಿ ಗೀತವನ್ನು ಮೊದಲು ಹೇಳಬೇಕಾಗಿದ್ದ ಶಾರ್ಙ್ಗದೇವನು ಸ್ವರಗತಾಧ್ಯಾಯವನ್ನು ಮೊದಲು ಹೇಳಿರುವುದು ಅನುಚಿತವಲ್ಲವೇ, ಅಲ್ಲದೆ ಸ್ವರಗತಾಧ್ಯಾಯವೆಂದು ಹೇಳಿಕೊಂಡು ಶರೀರವರ್ಣನೆಯನ್ನು ಪ್ರಾರಂಭಿಸುವುದರಿಂದ ಪ್ರತಿಜ್ಞಾಪ್ರತಿಪಾದನೆಗಳಲ್ಲಿ ವೈಯಧಿಕರಣ್ಯವು ಆಗಲಿಲ್ಲವೇ ಎಂಬ ಆಕ್ಷೇಪವನ್ನು ಮೊದಲು ಹೇಳಿ, ಅದಕ್ಕೆ ಸಮಾಧಾನವನ್ನೂ ಹೇಳುತ್ತಾನೆ : ಶರೀರ, ಸ್ವರ ಮುಂತಾದವುಗಳ ಪರಂಪರೆಯಿಂದಲೇ ಗೀತವು ಹುಟ್ಟುವುದಷ್ಟೆ ; ಪ್ರಕಾರಾಂತರದಲ್ಲಿ ಗೀತವನ್ನೇ ಇಲ್ಲಿ ಪ್ರತಿಪಾದಿಸಲಾಗುತ್ತಿದೆ ; ಆದುದರಿಂದ ಇಲ್ಲಿ ದೋಷವೇನೂ ಇಲ್ಲ, ಅವಿರೋಧವೂ ಇಲ್ಲ :

ನನು, ಪೂರ್ವತ್ರ ಗೀತಸ್ಯ ಪ್ರತಿಪಾದನೇ ಪ್ರಾಥಮ್ಯಂ ಪ್ರತಿಜ್ಞಾತಮ್, ಇದಾನೀಂ ಪ್ರಥಮೇ ಸ್ವರಗತಾಧ್ಯಾಯ ಇತ್ಯಧಿಕೃತ್ಯ ಶರೀರಾದಿಪ್ರತಿಪಾದನಸ್ಯ ಪ್ರಾಥಮ್ಯಮುಚ್ಯತೇ, ಅತಃ ಪ್ರತಿಜ್ಞಾಪ್ರತಿಪಾದನಯೋರ್ಭಿನ್ನವಿಷಯತ್ವಾದ್ ವೈಯಧಿಕರಣ್ಯಮಿತಿ ಚೇನ್ನೈಷ ದೋಷಃ ; ಸ್ವರಗತೇ ಶರೀರಾದೇಃ ಪರಂಪರಯಾ ಗೀತಂ ಪ್ರತ್ಯುಪಕಾರಕತ್ವಾತ್ ಸ್ವರಗತಪ್ರತಿಪಾದನಂ ಪ್ರಕಾರಾಂತರೇಣ ಗೀತಪ್ರತಿಪಾದನಮೇವೇತ್ಯವಿರೋಧಾತ್ । [278]

ಅಲ್ಲದೆ ಕಾರ್ಯಕಾರಣಭಾವವಿರುವಂತಹ ಕೆಲವಕ್ಕೆ ಉದ್ದೇಶಕ್ರಮದಲ್ಲಿರುವಂತೆಯೇ ಅನುಕ್ರಮದ ವಿವಕ್ಷೆ ; ಅದಿಲ್ಲದಿರುವಂತಹ ಕೆಲವಕ್ಕೆ ಈ ವಿವಕ್ಷೆಯಿಲ್ಲ, ಎಂಬುದು ಅವನು ಕೊಡುವ ಸಮಾಧಾನ :

ತತ್ರ ಶರೀರಾದಿ ತ್ರಿಂಶತ್ ಪದಾರ್ಥಾನಾಂ ಮಧ್ಯೇ ಕೇಷಾಂಚಿತ್ ಕಾರ್ಯಕಾರಣಭಾವಾದಿಸಂಗತಿವಶಾದ್ ಉದ್ದೇಶಕ್ರಮೋ ವಿವಕ್ಷಿತಃ, ಕೇಷಾಂಚಿದ್ ತದಭಾವೇನಾವಿವಕ್ಷಿತಃ । ಉತ್ತರತ್ರಾಯಮರ್ಥಃ ಪ್ರಕಾಶ್ಯತೇ । [278]

ಆಲ್ಲದೆ ಮುಂದೆ ಈ ಅರ್ಥವನ್ನು ಪ್ರಕಾಶಪಡಿಸಿರುವುದು, ಎಂದರೆ ಪ್ರಸ್ತುತ ವಿಷಯವಾದ ಶ್ರುತಿಜಾತಿಗಳ ಪ್ರತಿಪಾದನೆಯ ಅನುಕ್ರಮದಲ್ಲಿ ಅವನು ವ್ಯಾಖ್ಯಾನ ಮಾಡಿರುವುದು, ಅಸಮರ್ಪಕವಾಗಿಯೇ ಇದೆ. ಏಕೆಂದರೆ ನಾದಸಂಭೂತಿ, ಸ್ಥಾನ, ಶ್ರುತಿ, ಸ್ವರ ಇವುಗಳಲ್ಲಿ ಉತ್ತರೋತ್ತರವಾಗಿ ಕಾರ್ಯಕಾರಣವೋ ಜನಕಜನ್ಯವೋ

276 ಕಲ್ಲಿನಾಥ, ಉ.ಗ್ರಂ., ಪು. 95.

277 ಶಾರ್ಙ್ಗದೇವ, ಉ.ಗ್ರಂ., I, 1, 25.

278 ಕಲ್ಲಿನಾಥ, ಉ.ಗ್ರಂ., ಪು. 18.

ಮುಂತಾದ ಸಂಬಂಧಗಳಿದ್ದರೆ ಶ್ರುತಿಜಾತಿಗಳಿಗೂ ಸ್ವರಗಳಿಗೂ ಈ ಎರಡು ಸಂಬಂಧಗಳಂತೂ ಸ್ಪಷ್ಟವಾಗಿಯೇ ಇವೆ. ಕುಲ, ವಂಶ, ವರ್ಣ, ದ್ವೀಪ, ಋಷಿ ಇತ್ಯಾದಿಯಾಗಿ ಈ ರೀತಿ ಸಂಬಂಧವಿಲ್ಲದ ಪದಾರ್ಥಗಳನ್ನೇ ಉದ್ದೇಶಾನುಕ್ರಮದಲ್ಲಿ ಪ್ರತಿಪಾದನೆ ಮಾಡಿದ ಶಾರ್ಙ್ಗದೇವನು ಈ ಸ್ಪಷ್ಟ ಸಂಬಂಧವಿರುವ ಶ್ರುತಿಜಾತಿ-ಸ್ವರಗಳನ್ನು ವ್ಯುತ್ಕ್ರಮದಲ್ಲಿ ಪ್ರತಿಪಾದಿಸುತ್ತಾನೆಂದು ಹೇಳುವುದು ಅನುಪಪನ್ನವಾದುದು. ಈ ಸಂಬಂಧವನ್ನು ಶಾರ್ಙ್ಗ-ದೇವನೇ ಬಿಚ್ಚುಮಾತಿನಲ್ಲಿ ಒಪ್ಪಿದ್ದಾನೆ.

ಶ್ರೀಮತ್ ಶಾರ್ಙ್ಗದೇವನು ಅನುಸರಿಸುವ ಗ್ರಂಥರಚನಾ ತಂತ್ರವು ಅತ್ಯಂತ ವೈಜ್ಞಾನಿಕವಾಗಿಯೂ ಪೂರ್ವಚಾರ್ಯಸಮ್ಮತವೂ ಆಗಿದೆ. ಉದ್ದೇಶಾನುಕ್ರಮದಲ್ಲಿ ಹೇಳಿರುವುದನ್ನೇ ಪ್ರತಿಪಾದನೆಯಲ್ಲಿಯೂ ತಪ್ಪದೆ ಅವನು ಅನುಸರಿಸುತ್ತಾನೆ. ಭಗವಾನ್ ಭರತನಾದರೂ ಅಷ್ಟೆ; ಮೂವತ್ತೇಳು ಅಧ್ಯಾಯಗಳ ಷಟ್‌ಸಾಹಸ್ರಿಯು ಭರತನು ಮೊದಲಿನಲ್ಲಿ ಪ್ರತಿಜ್ಞೆಯಲ್ಲಿ ಹೇಳಿದ ಉದ್ದೇಶ ಕ್ರಮವನ್ನು ಹೇಗೆ ಅಕ್ಷರಶಃ ಅನುಸರಿಸಿದೆ, ಎಂದು ಅಭ್ಯಾಸಮಾಡುವುದೇ ಬಹಳ ಪ್ರಯೋಜನಕಾರಿಯೂ ಸಂತೋಷಕರವೂ ಆದ ಕೆಲಸ. ಶಾರ್ಙ್ಗದೇವನಲ್ಲಿಯಾದರೂ ಅಷ್ಟೆ. ಈ ವಿಷಯವನ್ನು ಈ ಗ್ರಂಥದಲ್ಲಿ ಅಲ್ಲಲ್ಲಿ ಸೂಚಿಸಲಾಗುತ್ತಿದೆ (ಉದಾಹರಣೆಗೆ, ಪು. 37, 38, 40, 126, 174, 175 ಇತ್ಯಾದಿ). ಆದರೂ ಗ್ರಂಥವು ಮುಂದೆ ಸಾಗಿದಂತೆಲ್ಲ ಅದರ ರಚನೆಯು ಅಲ್ಪಸ್ವಲ್ಪವಾಗಿ ವ್ಯತ್ಯಾಸವಾಗುತ್ತಾ ಬಂದಿತೆಂಬುದಕ್ಕೆ ಸಂಗೀತರತ್ನಾಕರದಲ್ಲಿ ಅಲ್ಲಲ್ಲಿ ಸೂಚನೆಗಳಿವೆ. ಇವನ್ನು ವಿಸ್ತೃತವಾದ ಪೀಠಿಕೆಯಲ್ಲಿ ವಿವೇಚಿಸಲಾಗುವುದು. ಹೀಗೆ 'ಸ್ವರಾಣಾಂ ಶ್ರುತಿಜಾತಯಃ' ಎಂಬಲ್ಲಿ ವ್ಯುತ್ಕ್ರಮವಿರುವುದು ನಿಜವಾದರೂ ಅದಕ್ಕೆ ಕಲ್ಲಿನಾಥನು ಕೊಡುವ ಕಾರಣವನ್ನು ಅಂಗೀಕರಿಸಲಾಗದು.

## 19. ಶ್ರುತಿಜಾತಿಗಳಿಗೆ ರಸವಿನಿಯೋಗ

ಕಡೆಯದಾಗಿ, ದೀಪ್ತಾ, ಆಯತಾ, ಕರುಣಾ, ಮೃದು, ಮಧ್ಯಾ ಮತ್ತು ಆಯತಾ ಶ್ರುತಿಗಳಿಗೆ ನಿರ್ದಿಷ್ಟವಾದ ರಸಗಳನ್ನು ಹೇಳುವ ಪ್ರಸಂಗವೂ ಒಮ್ಮೆ ನಮ್ಮ ಸಂಗೀತಶಾಸ್ತ್ರದಲ್ಲಿ ಬಂದಿದೆ. ಹೀಗೆ ಹೇಳುವವನು ನಾನ್ಯದೇವ:

### 7. ಅಥ ಸಪ್ತಮಂ ಶ್ರುತಿರಸವಿನಿಯೋಗಪ್ರಕರಣಮ್

ಹಾಸ್ಯಶೃಂಗಾರಯೋರ್ದೀಪ್ತಾಶ್ರುತಿರ್ಭರತಸಮ್ಮತಾ ।
ಆಯತಾ ಚಾಪಿ ಕರ್ತವ್ಯಾ ವೀರರೌದ್ರಾದ್ಭುತೇಷು ಚ ॥
ಕರುಣಾ ಹಿ ಶ್ರುತಿಃ ಪ್ರೋಕ್ತಾ ಬೀಭತ್ಸೇ ಸಭಯಾನಕೇ ।
ಮೃದುರ್ಮಧ್ಯಾ ಚ ಸರ್ವೇಷು ರಸೇಷು ವಿನಿಯುಜ್ಯತೇ ॥ [279]

ಈ ರಸವಿನಿಯೋಗವು ಅಷ್ಟು ಶಾಸ್ತ್ರೀಯವಾಗಿರುವಂತೆ ಕಾಣುವುದಿಲ್ಲ. ಏಕೆಂದರೆ ಕರುಣಾರಸಕ್ಕೆ ಇಲ್ಲಿ ಸ್ಪಷ್ಟವಾದ ವಿನಿಯೋಗವನ್ನು ಹೇಳಿಲ್ಲ. ಕರುಣಾಶ್ರುತಿಯು ಇಲ್ಲಿ ಅನ್ವರ್ಥನಾಮಕವೂ ಅಲ್ಲ. ಏಕೆಂದರೆ, ಕರುಣಾ ಶ್ರುತಿಯು ಇಲ್ಲಿ ಉತ್ಪಾದಿಸುವುದು, ಅಥವಾ ನಿರ್ವಹಿಸುವುದು, ಅಥವಾ ಪ್ರತೀತಿಗೊಳಿಸುವುದು ಬೀಭತ್ಸ, ಭಯಾನಕಗಳನ್ನು! ಒಂದೇ ಶ್ರುತಿಯು ಈ ಮತದಲ್ಲಿ ಅನೇಕ ರಸಪ್ರತೀತಿಯುಂಟುಮಾಡಬಲ್ಲುದು; ಮೃದು, ಮಧ್ಯಾಗಳಲ್ಲಿ ಒಂದೊಂದೂ ಎಲ್ಲಾ ರಸಗಳ ಪ್ರಬೋಧವನ್ನುಂಟುಮಾಡಬಲ್ಲದು! ಇದು ತುಂಬಾ ಅಸಂಗತವಾದ ಮಾತು. ಸ್ವರಗಳು ತಮ್ಮಿಂದ ತಾವೇ ರಸಪ್ರತೀತಿಯನ್ನು ಉಂಟುಮಾಡಲಾರವೆಂಬುದನ್ನು ಈ ಪ್ರಕರಣದ ಅಂತ್ಯದಲ್ಲಿ ವಿವೇಚಿಸಲಾಗುವುದು. ಹಾಗಿರುವಾಗ ಅವುಗಳಿಗೆ ಕಾರಣಗಳಾದ, ರಕ್ತಿ, ಅನುರಣನ ಮುಂತಾದ ವ್ಯಾಪಾರಗಳೇ

279 ನಾನ್ಯದೇವ, ಉ.ಗ್ರಂ., III, 7, 134-135, ಪು. 107.

ಇಲ್ಲದ, ಶ್ರುತಿಗಳು ಇದನ್ನು ಮಾಡುವುದೆಂತು ? ಸ್ವರದಲ್ಲಿ ರಸವಿನಿಯೋಗವನ್ನು ಯಾವ ಕಾರಣದಿಂದ ಹೇಳಿದೆಯೋ ಅದೇ ಕಾರಣವನ್ನು ಸ್ವರಕಾರಣವಾದ ಶ್ರುತಿಗೂ ಅನ್ವಯಿಸಿ ಕಾರ್ಯದಲ್ಲಿ ಕಾರಣದ ಲಕ್ಷಣವನ್ನು ಕಾಣಬೇಕಲ್ಲವೇ, ಎಂಬ ಪ್ರಶ್ನೆಯು ಇಲ್ಲಿ ಏಳಬಹುದು. ಆದರೆ ಸ್ವರಕ್ಕೆ ರಸವಿನಿಯೋಗವನ್ನು ಹೇಳಿರುವುದು ಆಯಾ ಸ್ವರವು ಅತ್ಯಂತ ಬಹುಳಪ್ರಯೋಗದಿಂದ ಅಂಶವಾಗಿರುವಾಗ ಗೀತಸಂದರ್ಭದಲ್ಲಿ ; ಎಂದರೆ, ಸ್ವತಂತ್ರವಾಗಿ, ಗೀತಸಂದರ್ಭ ರಹಿತವಾಗಿರುವಾಗ ಈ ವಿನಿಯೋಗವಿಲ್ಲ. ಅಲ್ಲದೆ ರಸವುಂಟಾಗುವುದು ಚಿತ್ತವೃತ್ತಿಯ ಮಧ್ಯಸ್ಥತಾರೂಪವಾದ ಚಿತ್ತಸ್ವಾಸ್ಥ್ಯಾವಸ್ಥೆಯನ್ನು ಎಂದರೆ ಔದಾಸೀನ್ಯವನ್ನು ಕದಲಿಸುವುದರಿಂದ. ಸ್ವರಕ್ಕೆ ಲಕ್ಷಣವನ್ನು ಶಾಸ್ತ್ರದಲ್ಲಿ ನಿಷ್ಪತ್ತಿಯಿಂದ ಹೇಳಿದೆಯೇ ಹೊರತು ಶ್ರುತಿಗಲ್ಲ. ಸ್ವರಗತ ಶ್ರುತಿಯಲ್ಲಿ ಆಯಾ ಸ್ವರದ ವಿನಿಯೋಗದಲ್ಲಿ ಹೇಳಿದ ರಸಗಳನ್ನು ಬೇಕಾದರೆ ಅನ್ವಯಿಸಿ ಹೇಳಿಕೊಳ್ಳಬಹುದು ; ಇದರಿಂದ ಶಾಸ್ತ್ರಕ್ಕೆ ಪ್ರಯೋಜನವಾಗಲೀ ಬಾಧೆಯಾಗಲೀ ಇಲ್ಲ. ಆದರೆ ಮೇಲೆ ಹೇಳಿದ ವಿನಿಯೋಗವು ಶ್ರೀ ಶಾರ್ಙ್ಗದೇವನು ಈ ಪ್ರಕರಣದ ಕಡೆಯ ಶ್ಲೋಕದಲ್ಲಿ ಹೇಳಿರುವುದಕ್ಕೂ ಭರತಮುನಿಯು ಹೇಳುವ ಸ್ವರ-ರಸವಿನಿಯೋಗಕ್ಕೂ ತುಂಬಾ ವಿರುದ್ಧವಾಗಿದೆ :

ಪಾಠ್ಯಪ್ರಯೋಗವಿಹಿತಾನ್ ಸ್ವರಾಂಶ್ಚಾಪಿ ನಿಬೋಧತ ।
ಹಾಸ್ಯಶೃಂಗಾರಯೋಃ ಕಾರ್ಯೌ ಸ್ವರೌ ಮಧ್ಯಮಪಂಚಮೌ ।
ಷಡ್ಜರ್ಷಭೌ ಚ ಕರ್ತವ್ಯೌ ವೀರರೌದ್ರಾದ್ಭುತರಸೇಷ್ವಥ ॥
ಗಾಂಧಾರಶ್ಚ ನಿಷಾದಶ್ಚ ಕರ್ತವ್ಯೌ ಕರುಣೇ ರಸೇ ।
ಧೈವತಶ್ಚ ಪ್ರಯೋಗಜ್ಞೈರ್ಬೀಭತ್ಸೇ ಸಭಯಾನಕೇ ॥ [280]

ಅಷ್ಟೇ ಅಲ್ಲದೆ, ಪ್ರತಿಯೊಂದುಸ್ವರಕ್ಕೂ ಅದನ್ನುಂಟುಮಾಡುವ ಶ್ರುತಿಗಳಿಗೆ ಹೇಳಿದ ರಸಗಳ ಮಿಶ್ರಣವನ್ನು ವಿನಿಯೋಗ ಮಾಡಬೇಕಾಗುತ್ತದೆ. ಇದು ಅನುಪಪನ್ನವಾದುದು. ಭರತಮುನಿಯ ನಾಟ್ಯಶಾಸ್ತ್ರಕ್ಕೆ ತನ್ನ ಗ್ರಂಥವು ಭಾಷ್ಯರೂಪವಾಗಿದೆಯೆಂದು ಸೂಚಿಸಲು ಭರತಭಾಷ್ಯವೆಂದು ಹೆಸರಿಟ್ಟ ನಾನ್ಯದೇವನು ಈ ಶ್ರುತಿಗಳ ಈ ರಸ-ವಿನಿಯೋಗವು ಭರತನಿಗೆ ಸಮ್ಮತವೆಂದು ಹೇಳುವುದು ಬಹಳ ಆಶ್ಚರ್ಯಕರವಾಗಿದೆ. ಭರತಮುನಿಯು ಈ ಶ್ರುತಿಗಳನ್ನು ಹೇಳಿರುವುದೇ ಹೇಗೆ ಸಂದೇಹಾಸ್ಪದವಾಗಿದೆಯೆಂದು ಹಿಂದೆ (ಪು. 199-200) ಸೂಚಿಸಲಾಗಿದೆ. ಇವುಗಳಿಗೆ ರಸಗಳನ್ನು ಅವನು ವಿನಿಯೋಗಿಸುವ ಪ್ರಶ್ನೆಯು ಇನ್ನು ದೂರವೇ ಉಳಿಯಿತು. ಮೇಲೆ ರಸವಿನಿಯೋಗವನ್ನು ಕುರಿತು ಉದ್ಧರಿಸಿರುವ ಶ್ಲೋಕಗಳನ್ನು ಪ್ರಕ್ಷಿಪ್ತವಾಗಿ ಒಳಗೊಂಡ ನಾಟ್ಯಶಾಸ್ತ್ರದ ಮಾತೃಕೆಯನ್ನು ನಾನ್ಯದೇವನು ಬಳಸಿರಬಹುದೆಂದು ತೋರುತ್ತದೆ. ಇದು ಹೇಗೇ ಇರಲಿ, ಶ್ರುತಿಗಳಿಗೆ ರಸವಿನಿಯೋಗಮಾಡುವುದು ಪ್ರತ್ಯಕ್ಷಕ್ಕೂ, ಅನುಮಾನಕ್ಕೂ ವಿರುದ್ಧವಾಗುತ್ತದೆ.

---

280 ಭರತಮುನಿ, ಉ.ಗ್ರಂ., XXIX, ಪು. 73 ; ಇದು ಪ್ರಕ್ಷಿಪ್ತಪಾಠ ; ಇದರ ಶುದ್ಧಪಾಠವು ಭರತಮುನಿಯು ಪಾಠ್ಯ-ಗುಣಗಳನ್ನು ವರ್ಣಿಸುವ ಸಂದರ್ಭದಲ್ಲಿ (ಉ.ಗ್ರಂ., XVIII, 103–105, ಪು. 387) ಹೀಗೆ ದೊರೆಯುತ್ತದೆ :

ಸಪ್ತಸ್ವರಾ ನಾಮ — ಷಡ್ಜರ್ಷಭಗಾಂಧಾರಮಧ್ಯಮಪಂಚಮಧೈವತನಿಷಾದಾಃ । ತ ಏತೇ ರಸೇಷೂಪಪಾದ್ಯಾಃ । ಯಥಾ —

ಹಾಸ್ಯಶೃಂಗಾರಯೋಃ ಕಾರ್ಯೌ ಸ್ವರೌ ಮಧ್ಯಮಪಂಚಮೌ ।
ಷಡ್ಜರ್ಷಭೌ ತಥಾ ಚೈವ ವೀರರೌದ್ರಾದ್ಭುತರಸೇಷ್ವಥ ।
ಗಾಂಧಾರಶ್ಚ ನಿಷಾದಶ್ಚ ಕರ್ತವ್ಯೌ ಕರುಣೇ ರಸೇ ॥
ಧೈವತಶ್ಚೈವ ಕರ್ತವ್ಯೋ ಬೀಭತ್ಸೇ ಸಭಯಾನಕೇ ।

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## VI. ಶ್ರುತಿಗಳನ್ನು ಲೆಕ್ಕಿಸುವ ವಿಧಾನಗಳು

ಈಗ ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿರುವ ಶ್ರುತಿಗಳ ಇಯತ್ತೆಯನ್ನು ಬೋಧಿಸುವ ವಿಧಾನಗಳನ್ನು ವಿವೇಚಿಸಬಹುದು. ಈ ಮುಂದಿನ ವಿವೇಚನೆಯಲ್ಲಿ ದ್ವಾವಿಂಶತಿಶ್ರುತಿ ಪಕ್ಷವನ್ನೇ ವಿವಕ್ಷಿಸಲಾಗಿದೆ. ಏಕೆಂದರೆ, ಉಳಿದೆಲ್ಲ ಪಕ್ಷಗಳೂ ಪರಮಾರ್ಥದಲ್ಲಿ ಅದನ್ನೇ ಹೇಳುತ್ತವೆ ಅಥವಾ ಅವಿರೋಧವಾಗಿವೆ. ಶ್ರುತಿಯ ಅರ್ಥವನ್ನು ಅವಲಂಬಿಸಿ ಅದರ ಇಯತ್ತೆಯನ್ನು ತಿಳಿಸುವ ವಿಧಾನವು ಬೇರೆ ಬೇರೆಯಾಗಿರುತ್ತದಷ್ಟೆ. ತಾನು ಅನುಸರಿಸುವ ಕ್ರಮವನ್ನೂ ಪ್ರತಿಜ್ಞೆಗಳನ್ನೂ ಅವಲಂಬಿಸಿ ಪ್ರತಿಯೊಂದು ವಿಧಾನವೂ ಬೇರೆ ಬೇರೆ ಪ್ರಾಯೋಗಿಕ ಫಲಿತಾಂಶಗಳನ್ನು ಕೊಡಬಹುದು. ಆದರೂ ವಿಧಾನವೂ, ಅದರ ಪ್ರತಿಜ್ಞೆಗಳೂ ಏನೇ ಆಗಿರಲಿ, ಅದು ಶ್ರುತಿಗೆ ಸಾಧಾರಣವಾದ ಒಂದು ಲಕ್ಷಣವನ್ನಂತೂ ಇಟ್ಟುಕೊಳ್ಳಬೇಕು : ಲಕ್ಷ್ಯಪ್ರಪಂಚಸರ್ವಸ್ವದಲ್ಲಿ ಪ್ರಸಿದ್ಧವಾಗಿರುವ ಎಲ್ಲಾ ಸ್ವರಗಳ ಎಲ್ಲಾ ಅವಾಂತರಭೇದಗಳನ್ನೂ, ಅವುಗಳ ಪ್ರಮಾಣಗಳನ್ನೂ, ಪರಸ್ಪರ ಸಂಬಂಧಗಳನ್ನೂ, ವೈಶಿಷ್ಟ್ಯಗಳನ್ನೂ ಅದು ತಾರ್ಕಿಕವಾಗಿ ಸಿದ್ಧಪಡಿಸಬೇಕು ; ಹಾಗೂ ಸ್ವರತ್ವದ ಲಕ್ಷಣಗಳನ್ನು ಬೀಜರೂಪದಲ್ಲಿ ಒಳಗೊಂಡಿರಬೇಕು ; ಸ್ವರದ ಸ್ವಸಂವೇದ್ಯತೆಯನ್ನು ವಿವರಿಸಬೇಕು. ಅಷ್ಟೇ ಅಲ್ಲದೆ, ಸ್ವರತ್ವಕ್ಕೆ ಹೇತುವಾಗುವಷ್ಟು ಅಲ್ಪಪ್ರಮಾಣದ ಮೂಲದ್ರವ್ಯವಾಗಿರಬೇಕು. ಎಂದರೆ ತಾನೇ ಸ್ವತಃ ಸ್ವರತ್ವವನ್ನು ಪಡೆಯಲಾರದಾದರೂ ಇತರ ಶ್ರುತಿಗಳೊಡನೆ ಸೇರಿದಾಗ ಸ್ವರತ್ವವನ್ನು ಉಂಟುಮಾಡುವ ಪ್ರಮಾಣ, ಲಕ್ಷಣಗಳನ್ನು ಪಡೆದಿರಬೇಕು. ಹೀಗೆ ಹೇಳಿದ್ದರಿಂದ ಅದು ಒಂದೇ ಪ್ರಮಾಣದ್ದೇ ಆಗಿರುತ್ತದೆಂದು, ಎಂದರೆ ಎಲ್ಲಾ ಶ್ರುತಿಗಳೂ ಪರಸ್ಪರವಾಗಿ ಒಂದೇ ಪ್ರಮಾಣವನ್ನು ಪಡೆದಿರುತ್ತವೆಂಬ, ಅನುಮಿತಿಯನ್ನು ಪಡೆಯಲಾಗದು ; ಶ್ರುತಿಪ್ರಮಾಣದ ಬಗೆಗೆ ಸ್ವತಂತ್ರವಾದ ವಿವೇಚನೆಯೇ ಸಲ್ಲುತ್ತದೆ.

ದ್ವಾವಿಂಶತಿಶ್ರುತಿಗಳನ್ನು ಪಡೆಯುವ ವಿಧಾನಗಳನ್ನು, (ಅ) ಗಣಿತಶಾಸ್ತ್ರವನ್ನು ಅವಲಂಬಿಸುವಂತಹವು (mathematical), (ಆ) ನಾದವಿಜ್ಞಾನಶಾಸ್ತ್ರವನ್ನು ಅವಲಂಬಿಸುವಂತಹವು (acoustical), (ಇ) ಕೇವಲ ಪ್ರತ್ಯಕ್ಷಪ್ರಮಾಣಿತವಾದವು (empirical), (ಈ) ಗಾನಶಾಸ್ತ್ರವಿವಕ್ಷಿತವಾದ ಸೌಂದರ್ಯಮೀಮಾಂಸೆ ಅಥವಾ ರಸಮೀಮಾಂಸೆಯನ್ನು ಅವಲಂಬಿಸುವಂತಹವು (aesthetic), (ಉ) ಮನೋವಿಜ್ಞಾನಶಾಸ್ತ್ರವನ್ನವಲಂಬಿಸುವಂತಹವು (psychological), ಎಂದು ಮುಂತಾಗಿ ವಿಭಾಗಿಸಬಹುದು. ಇವುಗಳಲ್ಲಿ ಮುಖ್ಯವಾದ, ಹೆಚ್ಚು ಪ್ರಚಾರವುಳ್ಳ ಈ ಐದನ್ನು ಮಾತ್ರ ಇಲ್ಲಿ ಸಂಕ್ಷೇಪವಾಗಿಯೂ ಪ್ರಾತಿನಿಧಿಕವಾಗಿಯೂ ಪರೀಕ್ಷಿಸಲಾಗುವುದು :

1) ಧ್ರುವವೀಣೆ–ಚಲವೀಣೆಗಳಲ್ಲಿ ಹೇಳಿದ ಸಾರಣಾವಿಧಾನ
2) ಸ್ವರಪ್ರಮಾಣಗಳಿಗೆ ಅನ್ವಿತವರೌಲ್ಯಗಳಿಂದ ಶ್ರುತಿಪ್ರಮಾಣದ ಅನುಮಿತಿ
3) ಸ್ಥಾಯಿಯ ಪ್ರಮಾಣವನ್ನು ಭೌತಿಕವಾಗಿ ಇಪ್ಪತ್ತೆರಡು ಸಮಪಾಲುಗಳನ್ನಾಗಿ ವಿಭಾಗಿಸುವುದು
4) ಸಂವಾದಭಾವಗಳ ವಿಧಾನ
5) ಗಣಿತಶಾಸ್ತ್ರವಿಧಾನ

### 1. ಸಾರಣಾವಿಧಾನ

ಇದನ್ನು ಈಗಾಗಲೇ ವಿಸ್ತಾರವಾಗಿ ಪರಿಶೀಲಿಸಲಾಗಿದೆಯಾದುದರಿಂದ (ಪು. 210–275) ಮೇಲೆ ಹೇಳಿರುವುದರಲ್ಲಿ ಅಡಕವಾಗಿರುವ ಕೆಲವು ವಿಶೇಷಾರ್ಥಗಳನ್ನು ಮಾತ್ರ ಇಲ್ಲಿ ಹೇಳಲಾಗುವುದು. ಭರತಮತಂಗಾದಿಗಳ ಪಕ್ಷದಲ್ಲಿ ಸ್ವರಪ್ರಮಾಣಗಳ ಪೂರ್ವಸಂಚಿತಜ್ಞಾನದಿಂದ ಶ್ರುತಿಗಳನ್ನು ಪಡೆಯಬೇಕು. ವಿವಿಧಸ್ವರಗಳು ತಮ್ಮ

ಹಿಂದಿನ ಸ್ವರಗಳಲ್ಲಿ ಲೀನವಾಗಲು ಆವಶ್ಯಕವಾದಷ್ಟು ಪ್ರಮಾಣದಲ್ಲಿ ನೀಚಗೊಳಿಸುವುದು ಇದರ ತಂತ್ರ; ಆದರೆ ಇಪ್ಪತ್ತೆರಡು ಶ್ರುತಿಗಳನ್ನೂ ಪರಸ್ಪರ ಹೋಲಿಸಿ ಒಂದೇ ವಾದ್ಯದಲ್ಲಿ ಒಮ್ಮೆಗೇ ತಿಳಿದುಕೊಳ್ಳಲು ಇಲ್ಲಿ ಸಾಧ್ಯವಾಗದು ; ಶಾರ್ಙ್ಗದೇವನ ಪದ್ಧತಿಯಲ್ಲಿ ಇದು ಸಾಧ್ಯ. ಇದರಲ್ಲಿ ಶ್ರುತಿಗೆ ನಿರ್ದಿಷ್ಟಲಕ್ಷಣಗಳನ್ನು ಹೇಳಿ, ಅಂತಹ ಇಪ್ಪತ್ತೆರಡನ್ನು ಉತ್ತರೋತ್ತರವಾಗಿ ಉಚ್ಚವಾಗಿರುವಂತೆ ನಿರ್ಮಿಸಿಕೊಂಡು ಇವುಗಳಲ್ಲಿ ವಿವಿಧ ಸ್ವರಗಳು, ಅವುಗಳ ಅವಾಂತರಭೇದಗಳು, ಪ್ರಮಾಣಗಳು, ಸಂವಾದವೇ ಮೊದಲಾದ ಭಾವಗಳು, ಸ್ಥಾಯಿಪ್ರಮಾಣ ಮೊದಲಾದವು ಗಳನ್ನು ತಾರ್ಕಿಕವಾಗಿ ಪಡೆಯಲು ಸಾಧ್ಯ. ಉಪಲಬ್ಧವಾಗಿರುವ ಎಲ್ಲಾ ವಿಧಾನಗಳಿಗಿಂತಲೂ ಇದೇ ಅತ್ಯುತ್ತಮ ವಾದುದೆಂದು ತೋರುತ್ತದೆ. ಈ ವಿಧಾನದಲ್ಲಿ ಅಡಗಿರುವ ಗುಣದೋಷಗಳನ್ನು ಹೀಗೆ ಸಂಕ್ಷೇಪವಾಗಿ ಸಂಗ್ರಹಿಸ ಬಹುದು :

### ಗುಣಗಳು

i) ಒಂದೇ ಸ್ಥಾಯಿಯ ವ್ಯಾಪ್ತಿ ಸಾಕು.

ii) ಅಂತರಗತಶ್ರುತಿ, ಸ್ವರಗತಶ್ರುತಿಗಳ ಲಕ್ಷಣಗಳನ್ನೂ, ಸ್ವಭಾವ, ಕ್ರಿಯೆಗಳನ್ನೂ ವಿವರಿಸುತ್ತದೆ.

iii) ಸ್ವರಸ್ವಸಂವೇದ್ಯತೆಯನ್ನು ಶ್ರುತಿಜಾತಿಗಳ ಮೂಲಕ ವಿವರಿಸುತ್ತದೆ ; ಸ್ವರಸ್ವಸಂವೇದ್ಯತೆ ಯನ್ನು ಕೇವಲ ಭೌತಿಕಪ್ರಮಾಣದ ಬಲದಿಂದಲೇ ಹೇಳಲಾಗದೆಂಬುದನ್ನು ಸೂಚಿಸುತ್ತದೆ. ಬೇರೆ ಬೇರೆ ಜಾತಿಯ ಶ್ರುತಿಗಳ ಅಸ್ತಿತ್ವವನ್ನೂ ಪ್ರಮಾಣಗಳನ್ನೂ ಪ್ರಾಯೋಗಿಕವಾಗಿ ತೋರಿಸಿಕೊಡುತ್ತದೆ.

iv) ನಾದವಿಜ್ಞಾನದಲ್ಲಿ ಬಹು ಮುಖ್ಯವಾದ ಊರ್ಧ್ವಸ್ಪರ್ಶತತ್ತ್ವವನ್ನು ವಿವರಿಸುತ್ತದೆ. ಎಂದರೆ, ಸವಿಶೇಷ ಊರ್ಧ್ವಸ್ಪರ್ಶ, ನಿರ್ವಿಶೇಷ ಊರ್ಧ್ವಸ್ಪರ್ಶ, ವಿಶಿಷ್ಟಸಂಸ್ಕಾರಪ್ರದಾನ ಇತ್ಯಾದಿಯಾಗಿ ಸ್ವರಸ್ವಸಂವೇದ್ಯತಾ ತತ್ತ್ವಕ್ಕೆ ಪ್ರಯೋಜಕವಾದ ಪ್ರಮೇಯಗಳನ್ನು ಒಳಗೊಂಡಿದೆ.

v) ಶ್ರುತಿಯೇ ಪ್ರಾಥಮಿಕವೂ ಆಧಾರಭೂತವೂ ಆದ ತತ್ತ್ವವೆಂದೂ ಅದರಿಂದ ಸ್ವರದ ಹುಟ್ಟೆಂದೂ ಅನುಮಿತಿಯನ್ನು ಕೊಡುತ್ತದೆ.

vi) ಒಂದೇ ಸ್ಥಾಯಿಯ ವ್ಯಾಪ್ತಿಯಲ್ಲಿ ಪ್ರಯೋಗವು ಅಡಕವಾಗುವುದರಿಂದ ವಾದಿತ್ವಭಗ್ನತಾ ಪರಿಣಾಮವು ಉಂಟಾಗುವುದಿಲ್ಲ. ಆದುದರಿಂದ ಈ ಪ್ರಯೋಗದಿಂದ ಸಿದ್ಧವಾದ ಸ್ವರಸ್ಥಾನಗಳನ್ನು ವಾದಿಸಂವಾದಿ ಮುಂತಾದ ಭಾವಗಳ ಕಾರಣದಿಂದಾಗಲೀ ಲಕ್ಷ್ಯ ಪ್ರಸಿದ್ಧಿಯೊಡನೆ ಸಮನ್ವಯಮಾಡಲೆಂದಾಗಲೀ ಕದಲಿಸುವ ಆಗತ್ಯ ಬರುವುದಿಲ್ಲ ; ಎಂದರೆ, ಈ ಪ್ರಯೋಗದಿಂದ ಲಭ್ಯವಾಗುವ ಸ್ವರಸ್ಥಾನಗಳು ಈ ಭಾವಗಳನ್ನೂ ಲಕ್ಷ್ಯ-ಪ್ರಸಿದ್ಧಿ ಸಮನ್ವಯವನ್ನೂ ನೈಸರ್ಗಿಕವಾಗಿಯೇ ಪಡೆದಿರುತ್ತವೆ.

vii) ಎಲ್ಲಾ ಶ್ರುತಿಗಳೂ ಒಂದೇ ಪ್ರಮಾಣವನ್ನು ಪಡೆದಿರುತ್ತವೆ ಎಂಬ ಪ್ರತಿಜ್ಞೆಯನ್ನು ಅವಲಂಬಿಸುವುದಿಲ್ಲ. ಇಂತಹ ಪ್ರತಿಜ್ಞೆಯು ಲಕ್ಷ್ಯವಿರುದ್ಧವೆಂದೂ ತರ್ಕರಹಿತವೆಂದೂ ಸಧ್ಯದಲ್ಲಿಯೇ ತೋರಿಸಿಕೊಡಲಾಗುವುದು.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## ದೋಷಗಳು

ಈ ವಿಧಾನದಲ್ಲಿ ಕೆಲವು ಆಕ್ಷೇಪಗಳನ್ನು ಹೀಗೆ ಹೇಳಬಹುದು :

i) ಒಂದೇ ಸ್ಥಾಯಿಯ ವ್ಯಾಪ್ತಿಯನ್ನು ಕೊಡುತ್ತದೆ; ಇತರ ಸ್ಥಾಯಿಗಳ ಪ್ರಾಪ್ತಿಗೆ ಮೂರ್ಛನಾತತ್ತ್ವವನ್ನು ಆಶ್ರಯಿಸಬೇಕು.

ii) ವಿವಿಧ ಶ್ರುತಿಗಳ ಅಥವಾ ವಿವಿಧ ಶ್ರುತಿಜಾತಿಗಳ ಪ್ರಮಾಣಗಳನ್ನು ಸಂಖ್ಯಾಮೂಲವಾದ ಇಯತ್ತೆಯಿಂದ, ಎಂದರೆ ಅನುಪಾತ, ತಂತಿಯ ಉದ್ದ, ಕಂಪನಸಂಖ್ಯೆ ಮುಂತಾದವುಗಳಿಂದ ಹೇಳುವುದಿಲ್ಲ.

iii) ಸಾಧಕನಲ್ಲಿ ವಿಶೇಷ ಸಾಮರ್ಥ್ಯವನ್ನು ಅಪೇಕ್ಷಿಸುತ್ತದೆ (ಪು. 256).

iv) ಧ್ವನ್ಯಂತರಾಶ್ರುತಿ, ನೈರಂತರ್ಯ, ಮುಂತಾದವುಗಳು ಸ್ವಲ್ಪಮಟ್ಟಿಗೆ ವ್ಯಕ್ತಿಗತವಾದವುಗಳು ; ಸಾರ್ವತ್ರಿಕವಾಗಿ ಏಕರೂಪವಾದವುಗಳಲ್ಲ ; ಇದನ್ನು ಮುಂದೆ ವಿವೇಚಿಸಲಾಗುವುದು. ಹಾಗೆಯೇ ರಕ್ತಿ, ಕಾಲ, ಕಲಾ, ಪ್ರಮಾಣ,ಅನುರಣನಗಳಿಗೆ ನಿಷ್ಕೃಷ್ಟವೂ ಅನಾಂತರಿಕವೂ ಆಗಿರುವ ಲಕ್ಷಣಗಳನ್ನು ಕೊಟ್ಟಿಲ್ಲ. ಇವುಗಳ ಅರ್ಥಗಳನ್ನೂ, ಲಕ್ಷಣಗಳನ್ನೂ ಅನುಮಿತಿಯಿಂದ ಮಾತ್ರ ಪಡೆಯಬೇಕಾಗುತ್ತದೆ.

ಊರ್ಧ್ವಸ್ಪರ್ಶತತ್ತ್ವವನ್ನು ಇಪ್ಪತ್ತೆರಡು ಶ್ರುತಿಗಳ ಅಂತರದಲ್ಲಿ ಅನ್ವಯಿಸುವುದರಿಂದ ಮೊದಲನೆಯ ಆಕ್ಷೇಪಣೆಯನ್ನು ನಿವೃತ್ತಿಗೊಳಿಸಬಹುದು. ಅರವತ್ತಾರು ಶ್ರುತಿಗಳ ಪಕ್ಷವು ಮಾಡಿರುವುದಾದರೂ ಇದನ್ನೇ. ಮೂರು ಸ್ಥಾಯಿಗಳಿಗೆ ಮಾತ್ರ ಈ ತತ್ತ್ವವನ್ನು ಮಿತಿಗೊಳಿಸಿದರೆ ವಾದೀತ್ವಭಗ್ನತಾಪರಿಣಾಮದಿಂದ ತೊಂದರೆಯೇನೂ ಆಗದು. ಇದು ಬೇಡದಿದ್ದರೆ ಶ್ರುತಿಕಲ್ಪನೆಯಿಂದ ಸಂಪೂರ್ಣವಾಗಿ ಮುಕ್ತವಾಗಿ, ಸ್ವತಂತ್ರವಾಗಿ ಹೇಳಲ್ಪಟ್ಟಿರುವ ಮೂರ್ಛನಾ ಪದ್ಧತಿಯಿಂದ ಬೇರೆ ಸ್ಥಾಯಿಗಳನ್ನು ಪಡೆಯಬಹುದು. ಶ್ರುತಿಕಲ್ಪನೆಯಿಂದ ಸ್ಥಾಯಿಕಲ್ಪನೆಯನ್ನೂ ಸ್ವತಂತ್ರಗೊಳಿಸಲಾಗಿದೆಯಷ್ಟೆ : ಕೇವಲ ದ್ವೈಗುಣ್ಯವೊಂದೇ ಸ್ಥಾನಾಂತರಪ್ರಾಪ್ತಿಗೆ ಸಾಕು. ಇಂತಹ ಮೂರು ಸ್ಥಾಯಿಗಳನ್ನು ಮಾತ್ರ ಹೇಳಿರುವುದರಿಂದ ವಾದೀತ್ವಭಗ್ನತಾ ಪರಿಣಾಮವು ಉಂಟಾಗುವುದಿಲ್ಲ.

ಎರಡನೆಯದಾಗಿ, ಸಂಖ್ಯಾಮೂಲವಾದ ಇಯತ್ತೆಯಿಂದ ವಿಶೇಷ ಪ್ರಯೋಜನವೇನೂ ಇಲ್ಲ. ಸುಮಾರು ಎರಡು ಸಾವಿರ ವರ್ಷಗಳ ಹಿಂದೆಯೇ ಗಣಿತಶಾಸ್ತ್ರ ಮತ್ತು ಭೌತಶಾಸ್ತ್ರಗಳಲ್ಲಿ ಇಡೀ ಜಗತ್ತಿನಲ್ಲಿಯೇ ಪ್ರಥಮಸ್ಥಾನದಲ್ಲಿದ್ದ ಭಾರತೀಯ ಋಷಿಗಳು ಇಂತಹ ಇಯತ್ತೆಯನ್ನು ತಿಳಿಸಲಾಗದ ಅಸಾಮರ್ಥ್ಯದಿಂದಾಗಿ ಹೇಳಲಿಲ್ಲವೆಂಬುದು ನಂಬಲಾಗದ ಮಾತು. ಏಕೆಂದರೆ ವಿವಿಧ ಅನುಪಾತಗಳಿಗೆ ಬೇಕಾದ ಬಹು ಕ್ಲಿಷ್ಟವೂ ಸಂಕೀರ್ಣವೂ ಆಗಿದ್ದ ಗಣಿತಶಾಸ್ತ್ರೀಯ ಪ್ರಮೇಯ ಸಾಮಗ್ರಿಯನ್ನು ಮೊದಲು ಕಂಡುಹಿಡಿದು ಹೇಳಿದವರು ಭಾರತೀಯರು ; ಹಾಗೆಯೇ ವಿವಿಧ ಶ್ರುತಿಪ್ರಮಾಣಗಳನ್ನೂ ಶ್ರುತಿಜಾತಿಗಳನ್ನೂ ಲಕ್ಷ್ಯಸಾಮಗ್ರಿಯಿಂದ ಸಮೀಕರಣಗಳ ಸಹಾಯದಿಂದ ಹೇಳಲು ಬೇಕಾದ ಬೀಜಗಣಿತವು ಹುಟ್ಟಿದುದು ಈ ದೇಶದಲ್ಲಿಯೇ. ನಾದಶಾಸ್ತ್ರದಲ್ಲಿ ಸ್ವರವೊಂದರ ಆವರ್ತಕ-ಕಂಪನಗಳ ಸ್ವಭಾವವನ್ನು ಸ್ಪಷ್ಟವಾಗಿ ಸಾವಿರಾರು ವರ್ಷಗಳ ಹಿಂದೆ ಹೇಳಿದುದೂ ನಮ್ಮ ಋಷಿಗಳೇ. ಮತಂಗನು ಈ ವಿಷಯದಲ್ಲಿ ತೋರಿರುವ ಪ್ರತಿಭೆಯನ್ನು ಮುಂದೆ ಪ್ರಸ್ತಾಪಿಸಲಾಗುವುದು. ಉದ್ದ ಮುಂತಾದವುಗಳನ್ನು ಅಳೆಯಲು ಬೇಕಾದ ಸಂಖ್ಯಾಸಾಮಗ್ರಿಯನ್ನು ಗಣಿತವೂ, ವೇದಾಂಗಜ್ಯೋತಿಷವೂ ಅತ್ಯಂತ ನಿಷ್ಕೃಷ್ಟವಾಗಿ, ನಿಖರವಾಗಿ ಸಿದ್ಧಪಡಿಸಿಕೊಟ್ಟಿದ್ದವು. ಭರತಾದಿಗಳ ಕಾಲಕ್ಕಾಗಲೇ ಇವೆಲ್ಲವೂ ಪ್ರಸಿದ್ಧವಾಗಿದ್ದವು. ಕ್ರಿ.ಶ. ಹದಿನೆಂಟನೆಯ

ಶತಮಾನದಲ್ಲಿ ಅಹೋಬಲನ ಕಾಲದವರೆಗೂ ಯಾವ ಲಾಕ್ಷಣಿಕನೂ ಸ್ವರಪ್ರಮಾಣಗಳನ್ನೂ ಸಹ ತಂತಿಯ ಉದ್ದದಿಂದ ಹೇಳಲಿಲ್ಲ. ಮಹತ್ತು ಬೃಹತ್ತುಗಳಲ್ಲಿ ಸಮಾನ ವೈಜ್ಞಾನಿಕ ಪ್ರತಿಭೆಯನ್ನು ಮೆರೆಯುವ ಶಾರ್ಙ್ಗದೇವನೂ ಸಹ ಇದನ್ನು ಮಾಡಲಿಲ್ಲ. ಏಕೆ?

ಏಕೆಂದರೆ ಅದಿಲ್ಲದಿದ್ದರೂ ನಮ್ಮ ಸಂಗೀತದ ಲಕ್ಷ್ಯಲಕ್ಷಣಗಳಿಗೆ ಬಾಧೆಯಿಲ್ಲ. ಅಲ್ಲದೆ ಪ್ರಮಾಣಗಳನ್ನು ಮಾತ್ರ ಹೇಳಿಬಿಟ್ಟಿದ್ದರೆ ಸ್ವರಸ್ವಸಂವೇದ್ಯತೆ, ಊರ್ಧ್ವಸ್ಪರ್ಶ ಮುಂತಾದ ಅಮೂಲ್ಯ ತತ್ತ್ವಗಳ ಬೋಧನೆಗೆ ಅವಕಾಶವು ಉಳಿಯುತ್ತಿರಲಿಲ್ಲ. ಮಧ್ಯಮ, ಪಂಚಮ, ಆವರ್ತಕಸ್ವರ, ಅಂತರಗಾಂಧಾರ, ಈ ಸ್ವರಗಳು ಸ್ವಯಂಭೂಗಳಾದುದರಿಂದ — ಎಂದರೆ ಬೇರೆ ಪ್ರಯತ್ನವೇ ಇಲ್ಲದೆ ಆಧಾರಸ್ವರದಲ್ಲಿ ಅಥವಾ ಅದರಿಂದ ಹುಟ್ಟಿದ ಇತರ ಸ್ವರಗಳಲ್ಲಿ ತಮಗೆ ತಾವೇ ಹುಟ್ಟುವುದರಿಂದ — ಮತ್ತು ಸ್ಥಾಯಿಯ ವ್ಯಾಪ್ತಿಯು ಭೌತಿಕವಾಗಿ ನಿರ್ಧರವಾಗುವುದರಿಂದ, ಸಂವಾದಭಾವಗಳಿಂದ ಸ್ವರಸ್ಥಾನಗಳನ್ನೂ, ಅವುಗಳಲ್ಲಿ ಅಡಕವಾದ ಶ್ರುತಿಸ್ಥಾನಗಳನ್ನೂ, ನೈಸರ್ಗಿಕವಾಗಿ ತಿಳಿಯಬಹುದೆಂಬುದು ಪ್ರಾಚೀನ ಲಾಕ್ಷಣಿಕರ ಅಭಿಪ್ರಾಯವಿರಬೇಕು. ಸಂಖ್ಯಾಮೂಲವಾದ ಇಯತ್ತೆಗೂ ಶ್ರುತಿಗಳ ಸ್ವಭಾವ, ಕರ್ತವ್ಯ, ಸ್ವರೂಪಗಳಿಗೂ ಅವರು ಸಂಬಂಧವನ್ನು ಕಲ್ಪಿಸದಿರುವುದು ಉದ್ದೇಶಪೂರ್ಣವೆಂದೇ ಹೇಳಬೇಕು. ಆಧುನಿಕ ನಾದಶಾಸ್ತ್ರವು ಸ್ವರದ ಲಕ್ಷಣ, ಗುಣ ಮುಂತಾದವುಗಳನ್ನು ಈ ಇಯತ್ತೆಯಿಂದ ವರ್ಣಿಸುವಷ್ಟೇ ಯಶಸ್ವಿಯಾಗಿ ಪ್ರಾಚೀನರ ಶ್ರುತಿಕಲ್ಪನೆಗಳು ವಿವರಿಸುತ್ತವೆ; ಅಲ್ಲದೆ ಶ್ರುತಿಯು ಕೇವಲ ಶಾಸ್ತ್ರೀಯವೂ ತಾತ್ತ್ವಿಕವೂ ಆದ ಪ್ರಮೇಯವೆಂಬುದನ್ನು ಮರೆಯಲಾಗದು. ತಾತ್ತ್ವಿಕ ಕಲ್ಪನೆಗೆ ಪ್ರಾಯೋಗಿಕವಾದ, ಸಂಖ್ಯೆಯಿಂದ ಮಿತವಾದ, ಮೌಲ್ಯಗಳನ್ನು ಹೇಳಿದರೆ ಅದರ ಸಾಮರ್ಥ್ಯವೂ ಬೆಲೆಯೂ ಪ್ರಯೋಜನವೂ ಕಡಿಮೆಯಾಗುತ್ತವೆ.

ಮೂರನೆಯದಾಗಿ, ಈ ಸಾರಣಾವಿಧಾನವು ಸಾಧಕನಲ್ಲಿ ವಿಶೇಷ ಸಾಮರ್ಥ್ಯವನ್ನು ಅಪೇಕ್ಷಿಸುವುದು ನಿಜ. ಆದರೆ ಶ್ರುತಿನಿದರ್ಶನಕ್ರಮವನ್ನು ಅದು ಹೇಳುವುದು ಸಾಮಾನ್ಯನನ್ನು ಉದ್ದೇಶಿಸಿ ಅಲ್ಲ ಎಂಬುದಂತೂ ಸ್ಪಷ್ಟವಾಗಿಯೇ ಇದೆ. ಏಕೆಂದರೆ ಶ್ರುತಿಯ ಕಲ್ಪನೆ, ಶ್ರುತಿಯ ಜಾತಿ, ಸ್ವರೂಪ, ಪ್ರಮಾಣ, ಕರ್ತವ್ಯ ಮುಂತಾದವುಗಳಿಂದ ಲಕ್ಷಣಕ್ಕೆ ಪ್ರಯೋಜನವೇ ಹೊರತು ಲಕ್ಷ್ಯದಲ್ಲಿ ಇವುಗಳ ಪ್ರತ್ಯಕ್ಷ ಪ್ರಯೋಗವಾಗಲೀ, ಪ್ರಯೋಜನವಾಗಲೀ ಇಲ್ಲ.

ಸಾಮಾನ್ಯ ಸಂಗೀತವಿದ್ವಾಂಸನಿಗೆ ಈ ಕ್ರಮವನ್ನು ಹೇಳಲಾಯಿತೇ ಎಂಬ ಸಂದೇಹವು ನನ್ನ ಮಟ್ಟಿಗಂತೂ ಇದ್ದೇ ಇದೆ. ಏಕೆಂದರೆ, ಯಾವ ಕಾಲದಲ್ಲಿಯೇ ಆಗಲಿ, ಸಾಮಾನ್ಯ ಸಂಗೀತವಿದ್ವಾಂಸನು ಶಾಸ್ತ್ರದ ವಿಷಯದಲ್ಲಿ, ಅದರಲ್ಲಿಯೂ ಶ್ರುತಿಯಂತಹ ಕೇವಲ ತಾತ್ತ್ವಿಕ ಕಲ್ಪನೆಗಾಗಿ ವಿಚಾರಮಾಡಬಯಸಿದ್ದಾಗಲೀ, ವಿಚಾರಮಾಡಿ ತಲೆಯನ್ನು ಬಿಸಿಮಾಡಿಕೊಂಡಿದ್ದಾಗಲೀ ಅಪರೂಪವೇ. ಶುದ್ಧ ವಿಜ್ಞಾನದ (pure science) ಮತ್ತು ಅನ್ವಿತ ವಿಜ್ಞಾನದ (applied science) ಅಭ್ಯಾಸಿಗಳಿಗೆ ಇರುವ ವ್ಯತ್ಯಾಸವೇ ಸಂಗೀತಶಾಸ್ತ್ರಕಾರರಲ್ಲಿ ಮತ್ತು ಸಂಗೀತವಿದ್ವಾಂಸರುಗಳಲ್ಲಿ ಇದೆ. ಶಾಸ್ತ್ರಕಾರನು ತತ್ತ್ವಗಳ ಅನ್ವೇಷಣೆ, ನಿರೂಪಣೆ, ವಿವೇಚನೆ, ಪ್ರಾಯೋಗಿಕ ತಥ್ಯತೆಯ ವಿವರಣೆ—ಇವುಗಳಲ್ಲಿ ತೊಡಗುತ್ತಾನೆ. ಲಕ್ಷ್ಯಕಾರನಾದರೋ ಈ ತತ್ತ್ವಗಳ ಪ್ರಾಯೋಗಿಕಸ್ವರೂಪಗಳನ್ನೋ ನಿಯಮಗಳನ್ನೋ ಮಾತ್ರ ಬಳಸಿಕೊಂಡು ಲಕ್ಷ್ಯವನ್ನು ಬೆಳೆಸುತ್ತಾನೆ; ಅವನಿಗೆ ಜಿಜ್ಞಾಸೆ, ವಿವೇಚನೆಗಳ ಅಗತ್ಯವೂ ಇಲ್ಲ, ಅವುಗಳಲ್ಲಿ ಆಸಕ್ತಿಯೂ ಅಪರೂಪ. ಆದುದರಿಂದ ಸಾಧಕನಲ್ಲಿ ಭರತಾದಿಗಳು ವಿಶೇಷ ಸಾಮರ್ಥ್ಯವನ್ನು ಅಪೇಕ್ಷಿಸುವುದರಲ್ಲಿ ಆಕ್ಷೇಪವೇನೂ ಸಲ್ಲದು.

ನಾಲ್ಕನೆಯ ಆಕ್ಷೇಪವು ಸ್ವಲ್ಪಮಟ್ಟಿಗೆ ಒಪ್ಪುವಂತಹುದೇ. ವ್ಯಕ್ತಿಗತ ಅಂತರಗಳು ಧ್ವನ್ಯಂತರಾಶ್ರುತಿ, ನೈರಂತರ್ಯ, ಕಾಲ, ಕಲಾ, ಪ್ರಮಾಣ ಮುಂತಾದವುಗಳಲ್ಲಿ ಇವೆ. ಅಲ್ಲದೆ ಇವುಗಳ ಕಲ್ಪನೆಗಳನ್ನು ನಿಷ್ಕೃಷ್ಟವಾಗಿ

ಹೇಳಿಯೂ ಇಲ್ಲ. ಆದರೂ ಸಹ ನಾದವಿಜ್ಞಾನವು ಅನಾಂತರಿಕವಾಗಿ ಸಿದ್ಧಪಡಿಸುವ ಇವುಗಳ ಕಲ್ಪನೆಗಳಿಂದ ಶ್ರುತಿಗಳ ಬಗೆಗೆ ನಿರ್ದಿಷ್ಟವೂ ಖಚಿತವೂ ಆಗಿರುವ ನಿರ್ಧಾರಕ್ಕೆ ಬರಬಹುದು. ಪ್ರಾಚೀನಕಾಲದಲ್ಲಿ ಹೇಳಿದ ಕಲ್ಪನೆಗಳಿಗೆ ಆಧುನಿಕ ಯುಗದ ಅರ್ಥಗಳನ್ನು ಅನ್ವಯಿಸುವುದು ವೈಜ್ಞಾನಿಕ ಕ್ರಮವಾದೀತೇ ಎಂಬ ಸಂಶಯವು ಇಲ್ಲಿ ಮೂಡಬಹುದು. ಆದರೆ ನಾದವಿಜ್ಞಾನದ ಪ್ರಮೇಯಗಳು ಎಲ್ಲಾ ಕಾಲಕ್ಕೂ ಸತ್ಯವಷ್ಟೆ; ಇವುಗಳಲ್ಲಿ ಅನೇಕವನ್ನು ಪ್ರಾಚೀನರು ತಿಳಿದಿದ್ದರೆಂಬುದಕ್ಕೆ ಆಧಾರಗಳನ್ನು ಈಗಾಗಲೇ ಅಲ್ಲಲ್ಲಿ ಸೂಚಿಸಲಾಗಿದೆ ಮತ್ತು ಮುಂದೆಯೂ ಸೂಚಿಸಲಾಗುವುದು. ಮಿಗಿಲಾಗಿ, ಆಧುನಿಕ ಜ್ಞಾನದ ಅರ್ಥವಿಸ್ತಾರವನ್ನು ಪ್ರಾಚೀನ ಕಲ್ಪನೆಗಳಿಗೆ ಅನ್ವಯಿಸಿ ಅವುಗಳನ್ನು ಪ್ರಾಚೀನ ಪ್ರಮೇಯಗಳೆಂದು ತಿಳಿಯುವುದು ತಾರ್ಕಿಕ ದೋಷವೇ ಹೊರತು, ಆಧುನಿಕ ಅರ್ಥವಿಸ್ತಾರವನ್ನು ಪ್ರಾಚೀನಕಲ್ಪನೆಗಳಿಗೆ ಅನ್ವಯಿಸಿ ಆಧುನಿಕ ಪ್ರಮೇಯಗಳಿಗೆ ಪ್ರಯೋಜಕಗಳನ್ನಾಗಿ ಪಡೆಯುವುದರಲ್ಲಿ ತಪ್ಪೇನೂ ಇಲ್ಲ. ಸೂಕ್ಷ್ಮಶ್ರವಣ ಶಕ್ತಿ, ಸಂಗೀತಶಾಸ್ತ್ರ ಮತ್ತು ಲಕ್ಷ್ಯಗಳಲ್ಲಿ ಪರಿಣತಿ ಮುಂತಾದ ಅರ್ಹತೆಗಳಿಲ್ಲದ ಸಾಧಕನಿಗೆ ಈ ವಿಧಾನವನ್ನು ಹೇಳಿಲ್ಲವೆಂಬುದನ್ನೂ, ಅಂತಹ ಸಾಧಕರಲ್ಲಿ ಇರಬಹುದಾದ ವ್ಯಕ್ತಿಗತ ಭಿನ್ನತೆಗಳಿಂದ ಈ ವಿಧಾನದ ತಥ್ಯತೆ ಅಥವಾ ತಾರ್ಕಿಕತೆ ಅಥವಾ ವೈಜ್ಞಾನಿಕತೆಗಳಿಗೆ ಬಾಧೆಯಿಲ್ಲವೆಂಬುದನ್ನೂ, ನಾದವಿಜ್ಞಾನದ ಸಾಧನ, ಸಾಮಗ್ರಿಗಳಿಂದ ಅಳೆದಾಗ ಇಂತಹ ಭಿನ್ನತೆಗಳು ಮಾಯವಾಗುತ್ತವೆ ಅಥವಾ ಪರಿಗಣನೆಗೆ ಅನರ್ಹವಾದಷ್ಟು ಅಲ್ಪವಾಗುತ್ತವೆ ಎಂಬುದನ್ನೂ ಗಮನದಲ್ಲಿಟ್ಟುಕೊಂಡರೆ ಈ ಆಕ್ಷೇಪವೂ ಅಷ್ಟೇನೂ ಬಲವತ್ತರವಾಗಿ ಕಾಣುವುದಿಲ್ಲ.

ಆದುದರಿಂದ ಉಳಿದೆಲ್ಲ ವಿಧಾನಗಳಿಗಿಂತಲೂ ಇದೇ ಅತ್ಯಂತ ನಿರ್ದುಷ್ಟವಾದ, ಸಮೀಚೀನವಾದ ಸಾಧನ.

## ೨. ಅನ್ವಿತಮೌಲ್ಯಗಳು

ಪ್ರಾಚೀನ ಭಾರತೀಯ ಲಾಕ್ಷಣಿಕರು ಸ್ವರಗಳಿಗೆ ಹೇಳಿದ ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿ ಎಂಬ ಪ್ರಮಾಣಗಳಿಗೂ, ಷಡ್ಜಗ್ರಾಮ ಮತ್ತು ಮಧ್ಯಮಗ್ರಾಮ ಎಂಬ ಸ್ವರಾಷ್ಟಕಗಳಿಗೂ, ಪೂರ್ವಗ್ರಹ ಪೀಡಿತವಾದ ಸಮೀಕರಣಗಳನ್ನು ಇಟ್ಟುಕೊಂಡು ಅದರಿಂದ ಶ್ರುತಿಗಳ ಪ್ರಮಾಣಗಳನ್ನು ಪಡೆಯುವ ಅನಪೇಕ್ಷಣೀಯ ಪ್ರವೃತ್ತಿಯು ಪಾಶ್ಚಾತ್ಯ ಸಂಗೀತಶಾಸ್ತ್ರಕಾರರಲ್ಲಿ ಕೆಲವರಲ್ಲಿಯೂ ಅವರ ಮಾತುಗಳನ್ನೇ ಭಕ್ತಿಪುರಸ್ಸರವಾಗಿ ಶಿರಸಾ ವಹಿಸಿದ ಕೆಲವು ಭಾರತೀಯ ಸಂಗೀತ ಶಾಸ್ತ್ರಕಾರರಲ್ಲಿಯೂ ಕಂಡುಬರುತ್ತದೆ. ಇದರ ತಾರ್ಕಿಕ ದೋಷಗಳನ್ನು ಇಲ್ಲಿ ವಿಸ್ತಾರವಾಗಿ ಬರೆಯುವ ಆವಶ್ಯಕತೆಯಿಲ್ಲವೆಂದು ಆಶಿಸಲಾಗಿದೆ. ಪ್ರಶ್ನಾಯಾಚಕವಾದ ಈ ವಿಧಾನವು ವಿಚಾರದರಿದ್ರವೂ ಆಗಿದೆಯೆಂದು ಹೇಳಿದರೆ ಇಲ್ಲಿ ಸಾಕು. ಷಡ್ಜಗ್ರಾಮದ ಸಮೀಕರಣಕ್ಕಾಗಿ ಶ್ರುತಿಪ್ರಮಾಣಗಳು ವಿವಕ್ಷಿತವಾಗಿರುವ ಸ್ವರಪ್ರಮಾಣಗಳನ್ನು ಆಧಾರವಾಗಿ ಪಡೆದು, ಶ್ರುತಿಪ್ರಮಾಣಗಳನ್ನು ಷಡ್ಜಗ್ರಾಮದಿಂದಲೇ ಹೇಳಹೊರಡುವ ಈ ಪದ್ಧತಿಯು ಅವಿಚಾರರಮಣೀಯವಾದುದು; ಅನಾವಶ್ಯಕವಾದ ಗಣಿತಶಾಸ್ತ್ರದ ಆಟಾಟೋಪದಿಂದ ಮೆರೆಯುವಂತಹುದು. ಹೀಗಾಗಿ ಕನಕಾಂಗಿ, ಹನುಮತೋಡಿ, ನಠಭೈರವಿ, ಖರಹರಪ್ರಿಯ. ಹರಿಕಾಂಭೋಜಿ, ಧೀರಶಂಕರಾಭರಣ, ಮೇಚಕಲ್ಯಾಣಿ-ಇವನ್ನೆಲ್ಲಾ ಈ ಪಂಡಿತಸಮುದಾಯದಲ್ಲಿ ಅವರವರ ರುಚಿಗೆ ತಕ್ಕಂತೆ ಷಡ್ಜಗ್ರಾಮವೆಂದೇ ತಿಳಿಯುತ್ತಾರೆ!

ಹೀಗೆ, ಫಾಕ್ಸ್ ಸ್ಟ್ರ್ಯಾಂಗ್‌ವೇಸ್ ಮುಂತಾದವರು ದ್ವಿಶ್ರುತಿಕ ಸ್ವರಗಳಿಗೆ 16/15, ತ್ರಿಶ್ರುತಿಕ ಸ್ವರಗಳಿಗೆ 10/9, ಚತುಃಶ್ರುತಿಕ ಸ್ವರಗಳಿಗೆ 9/8 ಎಂಬ ಅನುಪಾತಗಳ ಮೂಲಕ ಪ್ರಮಾಣಗಳನ್ನು ಹೇಳುತ್ತಾರೆ. ಲಕ್ಷ್ಯ ಸಾಮಗ್ರಿಯಲ್ಲಿ ಯಾವ ರಾಗಕ್ಕೆ ಇದನ್ನು ಯಾರು ಸಮಸೆಂದು ಹೇಳುತ್ತಾರೆ ಎಂಬುದು ಇಲ್ಲಿ ಅಪ್ರಕೃತ. ಏಕೆಂದರೆ ಬೇರೆ ಬೇರೆಯವರು ಬೇರೆ ಬೇರೆ ರಾಗಗಳ ಸಮೀಕರಣವನ್ನು ಪಡೆಯುವುದರಿಂದ ಶ್ರುತಿಪ್ರಮಾಣಗಳ ಬಗೆಗೆ

ಸರ್ವಸಮ್ಮತವಾದ, ಅಥವಾ ಬಹುಸಮ್ಮತವಾದ, ಅಥವಾ ತರ್ಕಸಮ್ಮತವಾದ ಸಾಧಾರಣ ಅನುಮತಿ ಇಲ್ಲಿ ಹುಟ್ಟುವುದಿಲ್ಲ. ಆದುದರಿಂದ ಚತುಃಶ್ರುತಿ, ತ್ರಿಶ್ರುತಿ ಮತ್ತು ದ್ವಿಶ್ರುತಿಗಳೆಂಬುದರಿಂದ ಯಾವ ಯಾವ ವಿವಿಧ ಸ್ವರ ಪ್ರಮಾಣಗಳನ್ನೇ ಅವರು ವಿವಕ್ಷಿಸಿರಲಿ, ಇಲ್ಲಿ ಮೂಲತಃ ಸರ್ವತ್ರ ಸ್ವೀಕೃತವಾದ ಮೇಲ್ಕಂಡ ಸಮೀಕರಣಗಳನ್ನು ಪರೀಕ್ಷಿಸಿದರೆ ಸಾಕು. ಈ ಸಮೀಕರಣದಲ್ಲಿ ಅಡಗಿದ ಪ್ರತಿಜ್ಞೆಯಲ್ಲಿ ದ್ವಾವಿಂಶತಿಶ್ರುತಿಗಳು ಭೌತಿಕಪ್ರಮಾಣದಲ್ಲಿ ಪರಸ್ಪರ ಸಮವಾಗಿವೆ ಅಥವಾ ಇಲ್ಲ ಎಂಬ ಎರಡು ಪಕ್ಷಗಳನ್ನೂ ವಿವೇಚಿಸಬೇಕು. ಈ ಶ್ರುತಿಗಳೆಲ್ಲ ಒಂದೇ ಪ್ರಮಾಣವನ್ನು ಪಡೆದಿವೆ ಎಂದು ಹೇಳಿದರೆ, a ಎಂಬುದು ಒಂದು ಶ್ರುತಿಯ ಪ್ರಮಾಣವಾಗಿರಲಿ :

ಆಗ ದ್ವಿಶ್ರುತಿ $= (16/15)$ ; ಎಂದರೆ $a \times a = a^2 = 16/15$ [281]

$$\therefore \quad a = (16/15)^{\frac{1}{2}} = 1{\cdot}3804$$

ತ್ರಿಶ್ರುತಿ $= 10/9$ ; ಒಂದು ಶ್ರುತಿಯ ಪ್ರಮಾಣವು b ಎಂದಿರಲಿ.

$$b \times b \times b = b^3 = 10/9.$$

$$\therefore \quad b = (10/9)^{\frac{1}{3}} = 1{\cdot}4213$$

ಚತುಃಶ್ರುತಿ $= 9/8$ ; ಒಂದು ಶ್ರುತಿಯ ಪ್ರಮಾಣವು c ಎಂದಿರಲಿ.

$$c \times c \times c \times c = c^4 = 9/8.$$

$$\therefore \quad c = (9/8)^{\frac{1}{4}} = 1{\cdot}3420$$

ಹೀಗೆ a, b, c ಗಳ ಪ್ರಮಾಣಗಳು ಬೇರೆ ಬೇರೆಯಾಗಿರುವುದು ಪ್ರಥಮ ದರ್ಶನಕ್ಕೇ ಸ್ಪಷ್ಟವಾಗುವುದರಿಂದ ಇಪ್ಪತ್ತೆರಡೂ ಶ್ರುತಿಗಳೂ ಪರಸ್ಪರ ಸಮಾನಗಳಲ್ಲವೆಂಬುದು ಸ್ಪಷ್ಟವಾಗುತ್ತದೆ ; ಈ ಮೂರು ಪ್ರಮಾಣಗಳಲ್ಲಿ ಯಾವುದನ್ನು ತೆಗೆದುಕೊಂಡರೂ 22 ಶ್ರುತಿಗಳಿಂದ ಸ್ಥಾಯಿಯ ಪ್ರಮಾಣವಾದ 2/1 ಸಿದ್ಧಿಸುವುದಿಲ್ಲ. ಹೀಗೆ

$$\left[(16/15)^{\frac{1}{2}}\right]^{22} = (1{\cdot}3804)^{22} = 2{\cdot}0324$$

$$\left[(10/9)^{\frac{1}{3}}\right]^{22} = (1{\cdot}4213)^{22} = 2{\cdot}1672$$

$$\left[(9/8)^{\frac{1}{4}}\right]^{22} = (1{\cdot}3420)^{22} = 1{\cdot}9111$$

ದ್ವಾವಿಂಶತಿಶ್ರುತಿಗಳು ಒಂದೇ ಪ್ರಮಾಣದವುಗಳಲ್ಲವೆಂದರೆ ದ್ವಿಶ್ರುತಿಕಗಳಲ್ಲಿ ಪ್ರತಿಯೊಂದು ಶ್ರುತಿಯೂ ಒಂದೇ ಪ್ರಮಾಣವನ್ನುಳ್ಳದ್ದು, ತ್ರಿಶ್ರುತಿಕ, ಚತುಃಶ್ರುತಿಕಗಳಲ್ಲಿಯೂ ಹಾಗೆಯೇ ಎಂಬ ಪಕ್ಷವೇ ಉಳಿಯುತ್ತದೆ. ಅದೂ ಅನುಪಪನ್ನವೇ. ಏಕೆಂದರೆ ಈ ಪಕ್ಷದಂತೆ ಮೇಲೆ ಹೇಳಿದ $a = 1{\cdot}3804$, $b = 1{\cdot}4213$, $c = 1{\cdot}3420$ ಎಂಬ ಮೂರು ಶ್ರುತಿಜಾತಿಗಳು ಸಿದ್ಧಿಸುತ್ತವಷ್ಟೆ. ಪೂರ್ವಾಚಾರ್ಯರೂ ಶಾರ್ಙ್ಗದೇವನೂ ಹೇಳಿದ ಐದು ಶ್ರುತಿಜಾತಿಗಳಲ್ಲಿ ಈ ಮೂರನ್ನೇ ಸ್ವೀಕರಿಸಿ ಎರಡನ್ನು ಲೆಕ್ಕಿಸದಿರುವುದರಿಂದ ಇದು ಅಶಾಸ್ತ್ರೀಯವಾಗುತ್ತದೆ. ಅದೂ

281 ಒಂದು ನಾದಪ್ರಮಾಣಕ್ಕೆ ಇನ್ನೊಂದನ್ನು ಕೂಡುವುದೆಂದರೆ ಅವೆರಡನ್ನೂ ಗುಣಿಸುವುದೆಂದೂ ಒಂದರಿಂದ ಇನ್ನೊಂದನ್ನು ಕಳೆಯಬೇಕಾದರೆ ಒಂದನ್ನು ಇನ್ನೊಂದರಿಂದ ಭಾಗಿಸಬೇಕೆಂದೂ ನಾದವಿಜ್ಞಾನದಲ್ಲಿ ನಿಯಮ.

ಅಲ್ಲದೆ ಇವುಗಳ ಮೊತ್ತದಿಂದ ಸ್ಥಾಯಿಯ ಪ್ರಮಾಣವು ಲಭಿಸಿದರೂ ಪ್ರಯೋಜನವಿಲ್ಲ ; ಚತುಃಶ್ರುತಿಕ ಸ್ವರಗಳು ಮೂರೂ, ತ್ರಿಶ್ರುತಿಕಗಳು ಎರಡೂ, ದ್ವಿಶ್ರುತಿಕಗಳು ಎರಡೂ ಇರುವುದರಿಂದ ಚತುಃಶ್ರುತಿಕ ಜಾತಿಯು ಹನ್ನೆರಡು ಶ್ರುತಿಗಳೂ, ತ್ರಿಶ್ರುತಿಕ ಜಾತಿಯವು ಆರೂ, ದ್ವಿಶ್ರುತಿಕ ಜಾತಿಯವು ನಾಲ್ಕೂ ಲಭಿಸುತ್ತವಷ್ಟೆ (ಪು. 228). ಆದುದರಿಂದ ಇವುಗಳ ಮೊತ್ತವು

$$c^{12}\times b^{6}\times a^{4} = (9/8)^{3}\times(10/9)^{2}\times(16/15)^{2} = 2{\cdot}0000$$

ಆದರೆ ಒಂದು ಮುಖ್ಯ ಸಂಗತಿಯೇನೆಂದರೆ 9/8 ಎಂಬ ಪ್ರಮಾಣವನ್ನು ಈ ಪಕ್ಷವು ಷಡ್ಜಮಧ್ಯಮ ಗಳಿಗೆ ಹೇಳುವುದಿಲ್ಲ ; ಷಡ್ಜ-ಪಂಚಶ್ರುತಿರಿಷಭ, ಪಂಚಮ-ಪಂಚಶ್ರುತಿಧೈವತ, ಶುದ್ಧಮಧ್ಯಮ-ಪಂಚಮ ಈ ಅಂತರಗಳಿಗೆ ಹೇಳುತ್ತದೆ ! ಹಾಗೆಯೇ ತ್ರಿಶ್ರುತಿ ಪ್ರಮಾಣವನ್ನು ಶುದ್ಧರಿಷಭ, ಶುದ್ಧಧೈವತಗಳಿಗೆ ಹೇಳದೆ ಚತುಃಶ್ರುತಿರಿಷಭ-ಅಂತರಗಾಂಧಾರ, ಚತುಃಶ್ರುತಿಧೈವತ-ಕಾಕಲೀ ನಿಷಾದ, ಈ ಪ್ರಮಾಣಗಳಿಗೂ, ದ್ವಿಶ್ರುತಿ ಪ್ರಮಾಣವನ್ನು ಶುದ್ಧಗಾಂಧಾರ, ಶುದ್ಧನಿಷಾದಗಳಿಗೆ ಹೇಳದೆ ಷಡ್ಜ-ಶುದ್ಧರಿಷಭ, ಪಂಚಮ-ಶುದ್ಧಧೈವತ, ಕಾಕಲೀ ನಿಷಾದ-ಷಡ್ಜ, ಈ ಅಂತರಗಳಿಗೆ ಹೇಳುತ್ತದೆ ! ಅಲ್ಲದೆ ಶಾಸ್ತ್ರದಲ್ಲಿ ಚತುಃಶ್ರುತಿಕ ಅಂತರಗಳೆಂದು ಸಿದ್ಧವಾದ ಶುದ್ಧರಿಷಭ-ಅಂತರಗಾಂಧಾರಕ್ಕೆ 300 : 256 ಎಂಬ ಪ್ರಮಾಣವನ್ನೂ ಶುದ್ಧಧೈವತ-ಕಾಕಲೀ ನಿಷಾದಕ್ಕೆ 450 : 384 ಎಂಬ ಪ್ರಮಾಣವನ್ನು ಕೊಡುತ್ತದೆ ; ಇವು 9/8 ಎಂಬ ಪ್ರಮಾಣಕ್ಕಿಂತ (9/64ರಷ್ಟು) ತುಂಬಾ ಹೆಚ್ಚಾಗಿವೆ ಮತ್ತು ಕಡಿಮೆಯಾಗಿವೆ. ಅಲ್ಲದೆ ಚತುಃಶ್ರುತಿಕವೆಂದು ಸಿದ್ಧವಾದ ಮಧ್ಯಮ-ಪಂಚಮಕ್ಕೆ ಹೇಳುವ 9/8 ಎಂಬ ಪ್ರಮಾಣವನ್ನೇ ತ್ರಿಶ್ರುತಿಕವೆಂದು ಶಾಸ್ತ್ರಪ್ರಸಿದ್ಧವಾದ ಶುದ್ಧರಿಷಭ-ಸಾಧಾರಣಗಾಂಧಾರಕ್ಕೂ, ದ್ವಿಶ್ರುತಿಯೆಂದು ಶಾಸ್ತ್ರಪ್ರಸಿದ್ಧವಾದ ಪಂಚಶ್ರುತಿಧೈವತ-ಕಾಕಲೀ ನಿಷಾದಕ್ಕೂ ಈ ಪಕ್ಷವು ಹೇಳುತ್ತದೆ. ವ್ಯವಹಾರಜ್ಞಾನಕ್ಕೂ, ತರ್ಕಕ್ಕೂ, ಶಾಸ್ತ್ರಮರ್ಯಾದೆಗೂ ವಿರುದ್ಧವಾದ ಈ ಅನ್ವಿತ ಮೌಲ್ಯವಿಧಾನವನ್ನು ಯಾವ ರೀತಿಯಿಂದಲೂ ಒಪ್ಪಲಾಗದು.

### 3. ಶ್ರುತಿಗಳ ಭೌತಿಕ ಸಮಾನತೆ

ಈ ವಿಧಾನದಲ್ಲಿ ಸ್ಥಾಯಿಯಲ್ಲಿರುವ ಪ್ರಮಾಣವನ್ನು ಇಪ್ಪತ್ತೆರಡು ಸಮಪಾಲುಗಳಾಗಿ ಭೌತಿಕವಾಗಿ ವಿಭಾಗಿಸ ಲಾಗುತ್ತದೆ. ಎಂದರೆ ಸ್ಥಾಯಿಯಲ್ಲಿರುವ ಪ್ರತಿಯೊಂದು ಶ್ರುತಿಯೂ ಒಂದೇ ಪ್ರಮಾಣವನ್ನು ಪಡೆದಿರುತ್ತದೆ. ರಾನಡೆ ಮೊದಲಾದ ಸಂಗೀತಶಾಸ್ತ್ರಜ್ಞರು ಹೇಳುವ ರೀತಿಯಲ್ಲಿ, ಒಂದು ಶ್ರುತಿಯ ಪ್ರಮಾಣವು x ಎಂದಿದ್ದರೆ $x^{22} = 2$ ಎಂದಾಗುತ್ತದೆ. ಆದುದರಿಂದ $x = 1{\cdot}3703$.

ಇದು ಪ್ರಥಮದರ್ಶನಕ್ಕೆ ಆಕರ್ಷಕವಾಗಿಯೂ ಸಹಜವಾಗಿಯೂ ತೋರುವುದರಿಂದ ಬಹುಜನರು ಇದನ್ನು ಸ್ವೀಕರಿಸುತ್ತಾರೆ. ಸ್ಥಾಯಿಯಲ್ಲಿ ಇಪ್ಪತ್ತೆರಡು ಶ್ರುತಿಗಳಿವೆ, ಇವುಗಳಲ್ಲಿ ಷಡ್ಜಕ್ಕೆ ನಾಲ್ಕು, ರಿಷಭಕ್ಕೆ ಮೂರು, ಎಂದು ಮುಂತಾಗಿ ವಿನಿಯೋಗ, ಈ ಇಪ್ಪತ್ತೆರಡರನ್ನು ಸೇರಿಸಿದರೆ ಸ್ಥಾಯಿಯ ಪ್ರಮಾಣವು ಸಿದ್ಧಿಸುತ್ತದೆ, ಎಂದರೆ ಈ ಎಲ್ಲಾ ಶ್ರುತಿಗಳು ಪರಸ್ಪರ ಸಮಾನ ಪ್ರಮಾಣವನ್ನು ಹೊಂದಿವೆಯೆಂದು ಸಹಜವಾಗಿಯೇ ಭಾಸವಾಗುತ್ತದೆ. ಆದರೆ ಅಲ್ಪ ವಿಚಾರದಿಂದಲೇ ಇದು ಅವಿಚಾರರಮಣೀಯವೆಂದು ತಿಳಿಯದೆ ಇರದು. ಈ ತಪ್ಪುಭಾವನೆಯನ್ನು ನಿವಾರಿಸಲೆಂದೇ ಶ್ರೀ ಶಾರ್ಙ್ಗದೇವನು ದೀಪ್ತಾದಿ ಐದು ಶ್ರುತಿಜಾತಿಗಳನ್ನು ಹೇಳಿರುವುದು ; ನಾನ್ಯದೇವನು ಈ ಶ್ರುತಿಜಾತಿಗಳು ಪ್ರಮಾಣದಲ್ಲಿ ಭಿನ್ನವೆಂದು ಸ್ಪಷ್ಟವಾಗಿ ಹೇಳಿರುವುದು :

ಪಂಚೈತಾಃ ಕಲಾಕಾಲಪ್ರಮಾಣೇನ ವಿಭೇದಿತಾ ದ್ವಾವಿಂಶತಿರಿತಿ ವ್ಯಾಖ್ಯಾತಾಃ । [268]

ಅಷ್ಟೇ ಅಲ್ಲದೆ, ಶ್ರುತಿಗಳೆಲ್ಲವೂ ಒಂದೇ ಪ್ರಮಾಣದಲ್ಲಿ ಇರುವಂತಹವು ಎಂದು ಭರತನು ವಿವಕ್ಷೆಯುನು

ಹೊಂದಿದ್ದರೆ, ಷಡ್ಜಗ್ರಾಮದ ಪಂಚಮದಿಂದ ಮಧ್ಯಮಗ್ರಾಮದ ಪಂಚಮಕ್ಕೆ ಇಳಿಸಲು ಬೇಕಾದ, ಪ್ರಥಮ ಸಾರಣೆಯಿಂದ ಸಿದ್ಧವಾದ ಪ್ರಮಾಣದಿಂದಲೇ ಉಳಿದ ಎಲ್ಲಾ ಸಾರಣೆಗಳನ್ನೂ ಮಾಡಬೇಕೆಂದು ಸ್ಪಷ್ಟವಾಗಿ ಹೇಳುತ್ತಿದ್ದನು, ಅಥವಾ ಸೂಚನೆಯನ್ನಾದರೂ ಕೊಡುತ್ತಿದ್ದನು; ಕಡೆಯ ಪಕ್ಷ, ಅವನ ಈ ವಿವಕ್ಷೆಯನ್ನು ಮತಂಗ, ಅಭಿನವಗುಪ್ತರು ಒಮ್ಮೆಯಾದರೂ – ಅವರು ಒಪ್ಪಲಿ, ಒಪ್ಪದಿರಲಿ,- ಸೂಚಿಸದೆ ಬಿಡುತ್ತಿರಲಿಲ್ಲ. ಪ್ರಕೃತ ಗ್ರಂಥದಲ್ಲಿಯೂ ಶ್ರುತಿನಿದರ್ಶನ ವಿವೇಚನೆಯ ಸಂದರ್ಭದಲ್ಲಿ (ಪು. 223, ಪ್ಯಾರಾ 3) ಈ ಸಮಾನತೆಯನ್ನು ಗೌಣವಾಗಿ ಒಪ್ಪಿಯೇ ಇದೆಯಲ್ಲವೆ ಎಂದರೆ, ಹಾಗಲ್ಲ ; ಏಕೆಂದರೆ ಎರಡು, ಮೂರು ಮತ್ತು ನಾಲ್ಕು ಶ್ರುತಿಗಳ ಪ್ರಮಾಣಗಳಲ್ಲಿ ಚತುಃಶ್ರುತಿ ಪ್ರಮಾಣವು ದ್ವಿಶ್ರುತಿ ಪ್ರಮಾಣದ ಎರಡರಷ್ಟು, ತ್ರಿಶ್ರುತಿ ಪ್ರಮಾಣವು ದ್ವಿಶ್ರುತಿ ಪ್ರಮಾಣದ ಒಂದೂವರೆಯಷ್ಟು ಎಂದು ಮುಂತಾದ ಅರ್ಥವನ್ನೂ, ಧ್ವನಿಯನ್ನೂ, ಅನುಮಿತಿಯನ್ನೂ ಅಲ್ಲಿ ವಿವಕ್ಷಿಸಿಲ್ಲ. ಈ ವಿವಿಧ ಪ್ರಮಾಣಗಳು ಕಲಾ, ಕಾಲ, ಪ್ರಮಾಣಗಳಲ್ಲಿ ವಿಭಿನ್ನವಾದ ಬೇರೆ ಬೇರೆ ಶ್ರುತಿಗಳು ಏಕವೃದ್ಧಿ ಕ್ರಮದಿಂದ ವಿಶಿಷ್ಟ ಸಂಸ್ಕಾರಪ್ರದಾನದಿಂದಾಗಿ ಕಡೆಯ ಶ್ರುತಿಯಲ್ಲಿ ಸ್ವರಸ್ವಸಂವೇದ್ಯತೆಯನ್ನು ಹೇಗೆ ಉಂಟುಮಾಡುತ್ತವೆಂಬುದನ್ನು ಪುನಃ ಪುನಃ ಹೇಳಲಾಗಿದೆಯಷ್ಟೆ.

ಪ್ರತಿಯೊಂದು ಸ್ವರದಲ್ಲಿಯೂ ಅದರ ಅಂತರಗಾಂಧಾರ, ಶುದ್ಧ ಮಧ್ಯಮ ಮತ್ತು ಪಂಚಮ ಭಾವಗಳು ಅಡಕವಾಗಿಯೇ ಇರುತ್ತವೆ ; ಇವು ವಿಶೇಷ ಪ್ರಯತ್ನದ ಆವಶ್ಯಕತೆಯಿಲ್ಲದೆ ತಮಗೆ ತಾವೇ ಅಭಿವ್ಯಕ್ತಿಯನ್ನು ಪಡೆಯುತ್ತವೆ. ಇವುಗಳಿಗೆ ಸ್ವಯಂಭೂ ಸ್ವರಗಳೆಂದು ಹೆಸರು. ಸ್ವರಾಷ್ಟಕದ ಇತರ ಸ್ವರಗಳಾದರೆ ಮಾನವನ ಸಂಗೀತಸೃಷ್ಟಿ ಪ್ರವೃತ್ತಿಯಿಂದ ಹುಟ್ಟಿ ಅವನ ಸೌಂದರ್ಯಮೀಮಾಂಸಾ ಪ್ರವೃತ್ತಿಯಿಂದ ಮಾರ್ಪಾಟಾಗಿ ನಿರ್ದಿಷ್ಟ ರೂಪನ್ನು ಪಡೆದಂತಹವುಗಳು; ಇವು ಕಾಲ ಕಾಲಕ್ಕೂ ದೇಶ ದೇಶಕ್ಕೂ ಬೇರೆ ಬೇರೆಯಾಗಿರುತ್ತವೆ ; ಆದರೆ ಸ್ವಯಂಭೂ ಸ್ವರಗಳೆಂದರೆ ಪ್ರಕೃತಿ ಸಿದ್ಧವಾದವುಗಳು. ಪ್ರಕೃತಿ ಸಿದ್ಧವಾದ ಈ ಸ್ವರಗಳ ಪ್ರಮಾಣಗಳನ್ನು ಈ ಪಕ್ಷವು ಹೇಗೆ ಸಿದ್ಧಪಡಿಸುತ್ತದೆ ? ಅಂತರಗಾಂಧಾರವು ಹನ್ನೊಂದನೆಯ ಶ್ರುತಿಯಲ್ಲಿದ್ದರೂ, ಷಡ್ಜದಿಂದ ಏಳನೆಯದು ; ಹಾಗೆಯೇ ಶುದ್ಧ ಮಧ್ಯಮವು ಷಡ್ಜದಿಂದ ಒಂಬತ್ತನೆಯದು, ಪಂಚಮವು ಹದಿಮೂರನೆಯದು. ಶ್ರುತಿಗಳೆಲ್ಲವೂ ಸಮಾನ ಪ್ರಮಾಣವನ್ನು ಹೊಂದಿರುವುದರಿಂದ, ಮತ್ತು ಸ್ಥಾಯಿಯಲ್ಲಿ 22 ಶ್ರುತಿಗಳಿರುವುದರಿಂದ, ಶ್ರುತಿಯ ಪ್ರಮಾಣವನ್ನು x ಎಂದಿಟ್ಟುಕೊಂಡರೆ,

$$x^{22} = 2, \therefore x = 2^{\frac{1}{22}} = 1{\cdot}3703$$

$$\therefore \text{ಅಂತರ ಗಾಂಧಾರ} = \left[2^{\frac{1}{22}}\right]^{7} \qquad = (1{\cdot}3703)^{7}$$

$$\text{ಶುದ್ಧಮಧ್ಯಮ} = \left[2^{\frac{1}{22}}\right]^{9} \qquad = (1{\cdot}3703)^{9}$$

$$\text{ಪಂಚಮ} = \left[2^{\frac{1}{22}}\right]^{13} \qquad = (1{\cdot}3703)^{13}$$

ಈ ಸ್ವರಗಳು ಕ್ರಮವಾಗಿ 5/4, 4/3, 3/2 ಎಂಬ ಅನುಪಾತಗಳ ಪ್ರಮಾಣಗಳನ್ನು ಷಡ್ಜದಿಂದ ಪಡೆದುಕೊಂಡಿವೆ. ಈ ಅಂತರಗಳು ಮೇಲೆ ಹೇಳಿದವುಗಳಿಂತ ಭಿನ್ನವಾಗಿಯೇ ಇವೆಯೆಂಬುದನ್ನು ಗಮನಿಸಬಹುದು. ರಾನಡೆಯು ಈ ಲೆಕ್ಕದಂತೆ ವಿವಿಧ ಸ್ವರಗಳ ಪ್ರಮಾಣಗಳನ್ನು ಹೀಗೆ ಕೊಡುತ್ತಾನೆ : [282]

282 Ranade, G. H., Hindusthani Music, p. 40.

| ಸ್ವರ | ಲೆಕ್ಕಿಸಿದ ಶ್ರುತಿಪ್ರಮಾಣ | ಶಾಸ್ತ್ರೋಕ್ತ ಶ್ರುತಿಪ್ರಮಾಣ |
|---|---|---|
| ಅಷ್ಟಮ | 22 | 22 |
| ಪಂಚಮ | 12·86 | 13 |
| ಮಧ್ಯಮ | 9·14 | 9 |
| ಅಂತರ ಗಾಂಧಾರ | 7·08 | 7 |
| ಸಾಧಾರಣ ಗಾಂಧಾರ | 5·78 | 6 |
| ಚತುಃಶ್ರುತಿ | 3·72 | 4 |
| ತ್ರಿಶ್ರುತಿ | 3·36 | 3 |
| ದ್ವಿಶ್ರುತಿ | 2·06 | 2 |

**ಶ್ರುತಿಪ್ರಮಾಣಗಳು**

**ಪಥಕ (12) (ರಾನಡೆ)**

ಈ ಪಥಕದಲ್ಲಿ ದ್ವಿಶ್ರುತಿಗಳ ಮತ್ತು ಅಂತರಗಾಂಧಾರದ ಲೆಕ್ಕಿಸಿದ ಪ್ರಮಾಣಗಳು ಶಾಸ್ತ್ರೋಕ್ತವಾದ ಅವುಗಳ ಮೌಲ್ಯಗಳೊಡನೆ ಸ್ವಲ್ಪಮಟ್ಟಿಗೆ ಹೊಂದುತ್ತವೆ. ಪ್ರಮುಖ ಸ್ವಯಂಭೂ ಸ್ವರಗಳಾದ ಮಧ್ಯಮ ಪಂಚಮಗಳೂ, ಸ್ವರಾಷ್ಟಕದಲ್ಲಿ ಅತ್ಯಂತ ಪ್ರಮುಖವಾದ ಚತುಃಶ್ರುತಿ ಪ್ರಮಾಣವೂ ಬಹುವಾಗಿ ಭಿನ್ನವಾಗಿರುವುದನ್ನಿಲ್ಲಿ ಗಮನಿಸಬೇಕು. ಒಂದು ಸ್ವರದ ಪ್ರಮಾಣದಲ್ಲಿ ಸಾವಿರ ಸಮಸಾಲುಗಳಲ್ಲಿ ಎರಡರಷ್ಟು ಸೂಕ್ಷ್ಮವಾದ ಅಂತರವನ್ನು ಸಂಗೀತವಿದ್ವಾಂಸರು ಗಮನಿಸಬಲ್ಲರೆಂದೂ ಸ್ವರದ ಆಯತತ್ವದ (tone width) ಪ್ರಮಾಣವು ಇದಕ್ಕಿಂತ ಬಹು ಅಲ್ಪವಾಗಿದೆಯೆಂಬುದನ್ನೂ ಮುಂದೆ ಹೇಳಲಾಗುವುದು. ಹೀಗಿರುವಲ್ಲಿ ಚತುಃಶ್ರುತಿ ಪ್ರಮಾಣದಲ್ಲಿಯೇ ಸಾವಿರಕ್ಕೆ ಎಪ್ಪತ್ತರಷ್ಟೂ, ಪಂಚಮದಲ್ಲಿ ಸಾವಿರಕ್ಕೆ ಸುಮಾರು ಹನ್ನೆರಡರಷ್ಟೂ, ಸಾಧಾರಣ ಗಾಂಧಾರದಲ್ಲಿ ಸಾವಿರಕ್ಕೆ ಸುಮಾರು ಮೂವತ್ತೇಳರಷ್ಟೂ ಕಡಿಮೆಯಿರುವ, ಅಂತರಗಾಂಧಾರದಲ್ಲಿ ಸಾವಿರಕ್ಕೆ ಸುಮಾರು ಹನ್ನೆರಡರಷ್ಟೂ ಶುದ್ಧಮಧ್ಯಮದಲ್ಲಿ ಸಾವಿರಕ್ಕೆ ಸುಮಾರು ಹದಿನಾರರಷ್ಟೂ ಅಧಿಕವಾಗಿ ಇರುವ ಈ ಸ್ವರಪ್ರಮಾಣಗಳನ್ನು ಒಪ್ಪಿಕೊಳ್ಳಬೇಕೆಂದು ಈ ಪಕ್ಷವು ಕೇಳುವುದು ಸಾಹಸವಲ್ಲದೆ ಮತ್ತೇನು ! ತ್ರಿಶ್ರುತಿಯ ಪ್ರಮಾಣದಲ್ಲಿ ಇರುವ ವ್ಯತ್ಯಾಸವಂತೂ ಸಾವಿರಕ್ಕೆ ನೂರಿಪ್ಪತ್ತರಷ್ಟು ! ಭಿನ್ನರಾಶಿಗಳನ್ನು ಅದರ ಅತ್ಯಂತ ಸಮೀಪಸ್ಥವಾದ ಪೂರ್ಣಾಂಕಕ್ಕೆ ಸರಿಮಾಡಿಬಿಡುವುದು ಗಣಿತ ಶಾಸ್ತ್ರಜ್ಞರಿಗೆ ಸುಲಭವೂ ಹೌದು, ಅನುಕೂಲವೂ ಹೌದು ; ಆದರೆ ಕಿವಿಯೂ ಹಾಗೆ ಮಾಡಿದರೆ ತಾನೇ ಈ ಲೆಕ್ಕಕ್ಕೆ ಬೆಲೆ ! ಕಿವಿಯು ಹೀಗೆ ಮಾಡಲಾರದೆಂದು ನಾದವಿಜ್ಞಾನವು ನಿಸ್ಸಂದಿಗ್ಧವಾಗಿ ತೋರಿಸಿಕೊಟ್ಟಿದೆ.

ಶ್ರುತಿಗಳು ಪರಸ್ಪರ ಸಮಾನ ಪ್ರಮಾಣವನ್ನು ಹೊಂದಿವೆ ಎಂಬ ಭೌತಿಕವಾದವನ್ನು ನಿರಾಕರಿಸುವಲ್ಲಿ ಇನ್ನೂ ಒಂದು ಸಂಗತಿಯನ್ನು ಗಮನಿಸಬಹುದು ; ಈ ವಾದವು ಸಮಸ್ಯೆಯನ್ನು ಅತ್ಯಂತ ಸರಳಗೊಳಿಸಿಕೊಂಡುಬಿಟ್ಟಿರುವುದೇ ಅದರಲ್ಲಿನ ದೋಷಗಳಿಗೆ ಕಾರಣ. ಶ್ರೋತ್ರೇಂದ್ರಿಯಗ್ರಹಣಸಾಮರ್ಥ್ಯವು ಧ್ವನಿವೈಲಕ್ಷಣ್ಯ, ಧ್ವನಂತರಾ–ಶ್ರುತಿ, ನೈರಂತರ್ಯ, ಕಾಲ, ಕಲಾಗಳಲ್ಲಿಯೂ, ವಿವಿಧ ನಾದಪ್ರದೇಶಗಳಲ್ಲಿಯೂ, ಸಾರ್ವತ್ರಿಕವಾಗಿ ಏಕರೂಪವಾಗಿರುತ್ತದೆಂಬ ಅನುಕ್ತ ಆಧಾರಪ್ರತಿಜ್ಞೆಯನ್ನು ಅದು ಅವಲಂಬಿಸುತ್ತದೆ. ಇದು ನಾದವಿಜ್ಞಾನ ಪ್ರಯೋಗಫಲಿತಾಂಶಗಳಿಂದ ನಿರಾಕರಿಸಲ್ಪಟ್ಟಿದೆ ; ಹಾಗೂ, ಧ್ವನ್ಯಂತರಾಶ್ರುತಿಯೆಂಬ ಲಕ್ಷಣವನ್ನು ಗ್ರಹಿಸಿ ವಿವಿಧ ಧ್ವನಿಮಟ್ಟಗಳನ್ನು ಒಂದೇ ಪ್ರಮಾಣದಲ್ಲಿ ಉತ್ತರೋತ್ತರವಾಗಿ ಪಡೆಯುತ್ತಾ ಬಂದರೆ ಈ ಧ್ವನಿಮಟ್ಟಗಳಲ್ಲಿ ಮೇಲೆ ಹೇಳಿದ ಉಳಿದ

ಲಕ್ಷಣಗಳೂ ಸ್ವರತ್ವಸಿದ್ಧಿಗೆ ಮುಖ್ಯ ಲಕ್ಷಣವಾದ ರಕ್ತಿಯೂ ಉಂಟಾಗುತ್ತವೆಂಬುದು ಈ ಪಕ್ಷವು ಒಳಗೊಂಡ ಇನ್ನೊಂದು ಅನುಕ್ತ ಅಭಿಸಂಧಿ; ಇದು ತಾರ್ಕಿಕವಾಗಿಯೂ ಪ್ರಾಯೋಗಿಕವಾಗಿಯೂ ಅನುಪಪನ್ನವಾದುದು. ಅಲ್ಲದೆ ಈ ರೀತಿಯಲ್ಲಿ ಧ್ವನಿವೈಲಕ್ಷಣ್ಯ, ಧ್ವನ್ಯಂತರಾಶ್ರುತಿಗಳೆಂಬ ಲಕ್ಷಣಗಳಿಂದ ಸಮಾನ ಪ್ರಮಾಣಗಳಲ್ಲಿ ಪಡೆದ ಧ್ವನಿಗಳಲ್ಲಿ ನಾಲ್ಕು, ಏಳು, ಒಂಬತ್ತು ಮುಂತಾದ ಸ್ಥಾನಗಳಲ್ಲಿ ಷಡ್ಜ, ರಿಷಭ, ಗಾಂಧಾರ ಮುಂತಾದವುಗಳ ಸ್ವಸಂವೇದ್ಯತೆಯು ಉಂಟಾಗುತ್ತದೆಂಬ ಅರ್ಥವನ್ನೂ ಈ ಪಕ್ಷವು ಅನುಮಿತಿಯಿಂದ ಒಳಗೊಂಡಿದೆ. ಇದಂತೂ ಅತ್ಯಂತ ಅಸಾಂಪ್ರತವಾಗಿರುವ ಮಾತು. ನಮ್ಮ ಪೂರ್ವಗ್ರಹಪೀಡಿತವಾದ ಅನುಮಿತಿ, ವಾದ, ತರ್ಕ ಮುಂತಾದವುಗಳನ್ನು ಪ್ರಕೃತಿಯು ಅನುಸರಿಸಬೇಕೆಂದು ಅಥವಾ ಅನುಸರಿಸಿದೆಯೆಂದು ಹೇಳುವುದು ಸರಿಯಲ್ಲ.

ಶ್ರೀ ಶಾರ್ಙ್ಗದೇವನ ಮಾತಿನಿಂದಲೇ ಈ ಅನುಮಿತಿಗಳನ್ನು ಪಡೆದುದಾಗಿ ಈ ಪಕ್ಷವು ಹೇಳುವುದು ಪ್ರಚಾರ, ಗೌರವಗಳನ್ನು ಪಡೆಯಲು ಸಾಧಕವಾದರೂ ಸತ್ಯದಿಂದ ದೂರವಾಗಿಯೇ ಇದೆ. ಏಕೆಂದರೆ ಶ್ರೀ ಶಾರ್ಙ್ಗದೇವನು ಇಪ್ಪತ್ತೆರಡು ಶ್ರುತಿಗಳು ಭೌತಿಕವಾಗಿ ಸಮಾನ ಪ್ರಮಾಣವುಳ್ಳವುಗಳೆಂಬ ಮಾತನ್ನು ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ಎಲ್ಲಿಯೂ ಹೇಳಿಲ್ಲ; ಈ ಅರ್ಥವನ್ನು ಕಲ್ಪಿಸಲು ಸಹ ಅವನು ಎಲ್ಲಿಯೂ ಎಡೆಮಾಡಿ ಕೊಟ್ಟಿಲ್ಲ. ಈ ಬಗೆಯ ಸಮಾನತೆಯನ್ನು ಅವನು ವಿವಕ್ಷಿಸಿದ್ದರೆ ಉತ್ತರೋತ್ತರವಾಗಿ ಧ್ವನ್ಯಂತರಾಶ್ರುತಿ ಮತ್ತು ನೈರಂತರ್ಯಗಳನ್ನು ಶ್ರುತಿನಿದರ್ಶನ ಸಂದರ್ಭದಲ್ಲಿ ಅವನು ಹೇಳುತ್ತಲೇ ಇರಲಿಲ್ಲ; ಮೊದಲು ಈ ಲಕ್ಷಣಗಳುಳ್ಳ ಒಂದು ಪ್ರಮಾಣವನ್ನು ಪಡೆದು, ಇದೇ ಪ್ರಮಾಣದಲ್ಲಿಯೇ ಒಟ್ಟು ಇಪ್ಪತ್ತೆರಡನ್ನು ಉತ್ತರೋತ್ತರವಾಗಿ ಪಡೆಯಬೇಕು ಎಂದೇ ಅವನು ಹೇಳುತ್ತಿದ್ದನು. ಶ್ರುತಿನಿದರ್ಶನದಲ್ಲಿ ಶ್ರೀಮತ್ ಶಾರ್ಙ್ಗದೇವನು ನಿಃಶಂಕನೆಂಬುದು ನಿಸ್ಸಂಶಯವಾದುದು. ಸಮಾನ ಪ್ರಮಾಣಗಳ ವಾದವನ್ನು ಶ್ರುತಿಜಾತಿಗಳಿಂದಲೂ, ಉತ್ತರೋತ್ತರವಾಗಿ ಪ್ರತಿಯೊಂದು ಶ್ರುತಿಗೂ ಹೇಳಿದ ಮೇಲಿನ ಎರಡು ಲಕ್ಷಣಗಳಿಂದಲೂ, ಉತ್ಕರ್ಷವನ್ನು 'ತತ್‌ಪ್ರಮಾಣೇನೈವ ಉತ್ಕರ್ಷಃ ಕಾರ್ಯಃ' ಎಂದು ಮುಂತಾಗಿ ಹೇಳದೆ 'ಅಧರಾಧರತೀವ್ರಾಃ' ಎಂಬ ಲಕ್ಷಣಮಾತ್ರದಿಂದಲೂ ಸ್ಪಷ್ಟವಾಗಿ ನಿರಾಕರಿಸಿದ್ದಾನೆ.

ವಿರುದ್ಧ ಧರ್ಮ, ವಿರುದ್ಧ ಜಾತಿ ಮುಂತಾದ ಲಕ್ಷಣಗಳನ್ನು ವಿಶೇಷೋಕ್ತಿಯಿಂದ ಹೇಳದೆ ಇರುವಾಗ ಉಕ್ತವಸ್ತುಗಳಲ್ಲಿ ಸಮಾನ ಧರ್ಮ, ಸಮಾನ ಜಾತಿ ಮುಂತಾದವುಗಳನ್ನು ಗ್ರಹಿಸಬೇಕಷ್ಟೆ; ಇಪ್ಪತ್ತೆರಡರಲ್ಲಿ ಎರಡು ಮುಂತಾದ ವಿಭಾಗಗಳನ್ನು ಮಾಡಿರುವುದರಿಂದಲೂ, ನಾಲ್ಕು, ಏಳು, ಒಂಬತ್ತು ಮುಂತಾದ ಸ್ಥಾನಗಳೆಂದು ಹೇಳಿರುವುದರಿಂದಲೂ ಸಮಾನ ಪ್ರಮಾಣವೆಂಬ ವಿವಕ್ಷೆಯೇ ಸಲ್ಲುವುದಿಲ್ಲವೇ, ಎಂಬ ಶಂಕೆಯು ಇಲ್ಲಿ ಮೂಡಬಹುದು. ಸಮಾನತೆಯು ವಿವಕ್ಷಿತವೆಂದೇ ಇಟ್ಟುಕೊಂಡರೂ ಇದು ಭೌತಿಕವಾದ ಸಮಾನತೆಯೆಂದು ಏಕೆ ಇಟ್ಟುಕೊಳ್ಳಬೇಕು? ಸಂಖ್ಯಾಮೂಲಕವಾದ ಇಯತ್ತೆಯಿಂದ ಹೇಳಿದ ಮಾತ್ರಕ್ಕೆ ಭೌತಿಕ ಪ್ರಮಾಣಕ್ಕೂ ಇಯತ್ತೆ, ಈ ಸಮಾನತೆ ಸಿದ್ಧಿಸುವುದೆಂದು ತರ್ಕದಿಂದಾಗಲೀ ವ್ಯವಹಾರಜ್ಞಾನದಿಂದಾಗಲೀ ಹೇಳಲು ಸಾಧ್ಯವಿಲ್ಲ. ಒಂಬತ್ತು ಮನುಷ್ಯರಲ್ಲಿ ನಾಲ್ಕು, ಮೂರು ಮತ್ತು ಎರಡು ಹೀಗೆ ಗುಂಪುಮಾಡಿದರೆ ಒಂಬತ್ತು ಜನರೂ ಸಮಾನವಾದ ತೂಕ, ಗಾತ್ರ ಮುಂತಾದವುಗಳನ್ನು ಪಡೆದಿರುತ್ತಾರೆಂಬ ವಿವಕ್ಷೆಯಾದರೂ ಎಲ್ಲಿ ಸಿದ್ಧಿಸುತ್ತದೆ? ಆಯಾಯಾ ಗುಂಪಿನ ವೈಶಿಷ್ಟ್ಯವು ಅದರಲ್ಲಿರುವ ಜನರ ಸಂಖ್ಯೆ ಮತ್ತು ವ್ಯಕ್ತಿಗತ ವೈಶಿಷ್ಟ್ಯಗಳನ್ನು ಅವಲಂಬಿಸುತ್ತದಷ್ಟೆ. ಕೇವಲ ಭೌತಿಕ ಪ್ರಮಾಣದ ಸಮಾನತೆಯನ್ನು ಪ್ರಧಾನವಾಗಿಟ್ಟುಕೊಂಡು ಚತುಃಶ್ರುತಿಯೇ ಮೊದಲಾದ ಪ್ರಮಾಣಗಳನ್ನು ಷಡ್ಜವೇ ಮೊದಲಾದ ಸ್ವರಗಳ ಲಕ್ಷಣ, ಸ್ವಸಂವೇದ್ಯತೆ ಮೊದಲಾದವುಗಳನ್ನು ವಿವರಿಸಲು ತೊಡಗುವುದು, ಒಂದು ತಲೆ, ಎರಡು ಕೈ, ಎರಡು ಕಾಲು ಎಂದು ಮುಂತಾದ ಸಂಖ್ಯಾಬಲದಿಂದ ಒಬ್ಬ ಮನುಷ್ಯನ ಸ್ವಭಾವ, ವ್ಯಕ್ತಿತ್ವ ಮುಂತಾದವುಗಳನ್ನು ವಿವರಿಸಲು ಹೊರಟಂತೆ ಆದೀತು! ಅಥವಾ ಆರು ಅಡಿ ಎತ್ತರದ ಒಬ್ಬ ಮನುಷ್ಯ

ನನ್ನು ಎಪ್ಪತ್ತೆರಡು ಅಂಗುಲಗಳ ಸಮಭಾಗಗಳೆಂದು ತಿಳಿದು ಇವುಗಳಲ್ಲಿ ಇಷ್ಟಿಷ್ಟರಲ್ಲಿ ಇಂತಿಂತಹ ಅಂಗ ಪ್ರತ್ಯಂಗ ಗಳಿವೆ, ಆದುದರಿಂದ ಮನುಷ್ಯನ ಸ್ವಭಾವ, ವೈಶಿಷ್ಟ್ಯಗಳು ಇಂತಹವು ಎಂದು ಹೇಳಲು ಯತ್ನಿಸಿದ ಹಾಗೆ! ಭೌತಿಕ ಪ್ರಮಾಣದ ಇಯತ್ತೆಯ ಜ್ಞಾನವು ಸಂಗೀತಶಾಸ್ತ್ರಕ್ಕಾಗಲೀ ಸಂಗೀತ ಕಲೆಗಾಗಲೀ ಪ್ರಯೋಜಕವೂ ಅಲ್ಲ, ಸ್ವಾಭಾವಿಕವೂ ಅಲ್ಲ. ಅದರಲ್ಲೂ ಅಳೆಯಲಾಗದ ಸ್ವಸಂವೇದ್ಯತೆ ಮುಂತಾದ ಲಕ್ಷಣಗಳಿಂದ ಕೂಡಿದ ಶ್ರುತಿಯ ಕೇವಲ ಭೌತಿಕ ಪ್ರಮಾಣದಿಂದ ವಿಶೇಷ ಪ್ರಯೋಜನವು ಈ ಶಾಸ್ತ್ರದಲ್ಲಿ ಅಂತೂ ಇಲ್ಲ ; ಪಾಶ್ಚಾತ್ಯ ನಾದವಿಜ್ಞಾನ ಮತ್ತು ಪಾಶ್ಚಾತ್ಯ ಸಂಗೀತಗಳಿಗೆ ಇರುವ ಸಂಬಂಧವು ಶ್ರುತಿಗೂ ನಾದವಿಜ್ಞಾನಕ್ಕೂ ಇಲ್ಲ ; ಏಕೆಂದರೆ ಒಂದೇ ಪ್ರಮಾಣದಲ್ಲಿ ಸ್ಥಾನಾಂತರದಲ್ಲಿ ಊರ್ಧ್ವಸ್ಪರ್ಶ ಪಡೆದರೆ ಶ್ರುತಿಯು ಅನ್ಯಸ್ವಭಾವವನ್ನು ಪಡೆಯುತ್ತದೆಂಬ ಮೂಲ ಪ್ರತಿಜ್ಞೆ ನಮ್ಮ ಸಂಗೀತಶಾಸ್ತ್ರದಲ್ಲಿದೆ.

ಅಲ್ಲದೆ ಸಮಾನತೆಯ ವಿವಕ್ಷೆಯನ್ನು ಒಪ್ಪಿಕೊಂಡರೂ ಮೇಲೆ ಹೇಳಿದ ಶ್ರುತಿಯ ಕರ್ತವ್ಯಗಳು ಶ್ರುತಿಗಳ ಬೇರೆ ಬಗೆಯ ಸಮಾನತೆಗಳಿಂದಲೇ ಸಿದ್ಧವಾಗಬೇಕು ; ಭೌತಿಕ ಪ್ರಮಾಣದಿಂದಲ್ಲ. ನಾದಪ್ರಮಾಣಗಳಲ್ಲಿ ಉಂಟಾಗುವ ನಾಲ್ಕು ಬಗೆಯ ಸಮಾನತೆಗಳನ್ನು ಈಗಾಗಲೇ (ಪು. 234) ಸೂಚಿಸಿದೆ. ಇವುಗಳಲ್ಲಿ ಭೌತಿಕ ಉಪಾಧಿಗಳಾದ ಕಂಪನಸಂಖ್ಯೆ, ಕಂಪನಶಕ್ತಿ, ಆವರ್ತಕಸಮುಚ್ಚಯದ ಸ್ವಭಾವ, ಕಂಪನಾರೀತಿ ಮುಂತಾದವುಗಳ ಸಮಾನತೆ ಮೊದಲನೆಯದು. ಅದು ಇಲ್ಲಿ ಹೇಗೆ ವಿವಕ್ಷಿತವಲ್ಲವೆಂಬುದನ್ನು ತೋರಿಸಲು ಪ್ರಯತ್ನಿಸಿದೆ. ಎರಡನೆಯದು ಮಾನಸಿಕ ಸಮಾನತೆ, ಎಂದರೆ ಮನಸ್ಸು ಅವಧಾನಪಡೆದಿರುವ ಕಿವಿಗೆ ಸಮಾನವೆಂದು ತೋರುವುದು. ಎಂದರೆ, ಮನಸ್ಸಿನಲ್ಲಿ ಉಂಟಾಗುವ ಸಂವೇದನೆ, ಬಿಗಿತ (tension), ಉಪತಾಪನ ಮೊದಲಾದವುಗಳಲ್ಲಿ ಸಮಾನತೆ. ಭೌತಿಕ ಉಚ್ಚತೆಗೂ ಮಾನಸಿಕವಾಗಿ ಅನುಭವಿಸಿದ ಉಚ್ಚತೆಗೂ ವ್ಯತ್ಯಾಸವಿದೆ. ನಾದದ ಈ ವಿಧದ ಉಚ್ಚತೆಯ ಕಲ್ಪನೆಯು ಭೌತಿಕ ಉಚ್ಚತೆಗಿಂತ ನೇರವಾಗಿ ಹೆಚ್ಚು ಪ್ರಯೋಜಕವಾದುದು, ಮುಖ್ಯವಾದುದು. ಮೂರನೆಯದು ಗೇಯಾರ್ಥದಲ್ಲಿ ನಿಷ್ಠವಾದುದು ; ಎಂದರೆ ನಾದಸೌಂದರ್ಯಮೀಮಾಂಸಾ ಸಂದರ್ಭದಲ್ಲಿ, ರಕ್ತಿದ್ಯೋತನ ಸನ್ನಿವೇಶದಲ್ಲಿ, ಸಮಾನವೆಂದು ತೋರುವಂತಹುದು. ನಾಲ್ಕನೆಯದು ಗೀತ-ಸಂದರ್ಭತಂತ್ರಗಳಲ್ಲಿ ಸಮಾನವೆಂದು ತೋರುವಂತಹ ಸಮಾನತೆ. ಇವೆಲ್ಲವೂ ಬೇರೆ ಬೇರೆಯೇ ಹೌದು. ಸಂಗೀತ ಸೌಂದರ್ಯದ ಸಾಕ್ಷಾತ್ಕಾರದಲ್ಲಿ ಇವೆಲ್ಲವೂ ಸಮಷ್ಟಿಯಲ್ಲಿ ಪಾತ್ರವಹಿಸುತ್ತವೆ. ಆದುದರಿಂದ ಕೇವಲ ಭೌತಿಕ ಸಮಾನತೆಯಿಂದ ದ್ವಾವಿಂಶತಿ ಶ್ರುತಿಗಳನ್ನು ಲೆಕ್ಕಿಸತೊಡಗುವುದು ಶಾಸ್ತ್ರಕ್ಕೆ ವಿಶೇಷ ಪ್ರಯೋಜಕವೂ ಅಲ್ಲ ; ಲಕ್ಷ್ಯಕ್ಕೆ ಆವಶ್ಯಕವೂ ಅಲ್ಲ. ಈ ಮೇಲೆ ಹೇಳಿರುವ ವಿವಿಧ ಸಮಾನತೆಗಳೆಲ್ಲವನ್ನೂ ದೃಷ್ಟಿಯಲ್ಲಿಟ್ಟುಕೊಂಡು, ಶ್ರುತಿಗೆ ಪ್ರಾಚೀನಾಚಾರ್ಯರು ಹೇಳಿದ ಲಕ್ಷಣಗಳಿಂದ ವ್ಯಾಪಕವೂ ಶಾಸ್ತ್ರೀಯವೂ ಆಗಿರುವ ಶ್ರುತಿಸಿದ್ಧಾಂತವನ್ನು ನಿರ್ಮಿಸುವುದು ಭಾರತೀಯ ಸಂಗೀತಕ್ಕೇ ಏಕೆ, ಪ್ರಪಂಚದ ಸಂಗೀತಕ್ಕೇ ಮುಖ್ಯವಾದ ಕೆಲಸ.



### 4. ಸಂವಾದಭಾವಗಳ ವಿಧಾನ

ದ್ವಾವಿಂಶತಿಶ್ರುತಿಗಳನ್ನು ಲೆಕ್ಕಿಸುವ ವಿಧಾನಗಳಲ್ಲೆಲ್ಲಾ ಇದೇ ಅತ್ಯಂತ ಪ್ರಚಾರವನ್ನು ಪಡೆದಿದೆ. ಮೇಲು ನೋಟಕ್ಕೆ ಸಹಜವಾಗಿ ಕಾಣುವುದೂ, ಸುಲಭವಾಗಿರುವುದೂ ಇದಕ್ಕೆ ಕಾರಣಗಳು. ಮಧ್ಯಮ ಪಂಚಮಗಳು ಷಡ್ಜದಲ್ಲಿ ಸಹಜವಾಗಿಯೇ ಸ್ಫುರಿಸುವುದರಿಂದ ಈ ಕ್ರಮವು ಪ್ರಾಕೃತಿಕವೆಂದೇ ಸಾಮಾನ್ಯವಾಗಿ ನಂಬುಗೆ ಮೂಡುತ್ತದೆ. ಆಧಾರಸ್ವರವೊಂದರಿಂದ ಊರ್ಧ್ವಗತಿಯಿಂದ ಪಂಚಮವನ್ನೂ ಅಧೋಗತಿಯಿಂದ ಮಧ್ಯಮವನ್ನೂ ಚಾಕ್ರಿಕವಾಗಿ ಪುನಃ ಪುನಃ ನಡೆಸಿ ಹೀಗೆ ಬೇರೆ ಬೇರೆ ಸ್ಥಾಯಿಗಳಲ್ಲಿ ದೊರೆಯುವ ಸ್ವರಸ್ಥಾನಗಳನ್ನು ಪ್ರಥಮಸ್ಥಾಯಿಗೇ ಪರಿವರ್ತಿಸಿಕೊಂಡು ಅವುಗಳನ್ನು ಶ್ರುತಿಗಳೆಂದು ಈ ವಿಧಾನವು ವ್ಯವಹರಿಸುತ್ತದೆ. ಆಧಾರ ಸ್ವರವೇ ಪುನಃ (ಸ್ಥಾನಾಂತರದಲ್ಲಿ) ದೊರೆಯುವವರೆಗೂ ಈ ಚಾಕ್ರಿಕ ಚಲನೆ ಮುಂದುವರೆಯುತ್ತಲೇ ಇರುತ್ತದೆ.

ಹೀಗೆ ಆಧಾರಸ್ವರದಿಂದ ಪಂಚಮವನ್ನು ಹಿಡಿದು ಅದಕ್ಕೆ ಪಂಚಮವನ್ನು ಪಡೆಯಬೇಕು. ನಂತರ ಇದನ್ನು ಆಧಾರಸ್ವರವೆಂದು ಗಣಿಸಿ ಅದರ ಪಂಚಮವನ್ನು ಪಡೆಯಬೇಕು ; ಹೀಗೆಯೇ ಆಧಾರಸ್ವರವು ಸಿಕ್ಕುವವರೆಗೂ ಮುಂದುವರಿಸುತ್ತಿರಬೇಕು. ಅಥವಾ ಆಧಾರಸ್ವರದಿಂದ ಅದರ ಕೆಳಗಿನ ಸ್ಥಾಯಿಯ ಮಧ್ಯಮವನ್ನು ಹಿಡಿಯಬೇಕು ; ಇದನ್ನೇ ಆಧಾರಸ್ವರವೆಂದು ಎಣಿಸಿ ಅದರ ಕೆಳಗಿನ ಸ್ಥಾಯಿಯ ಮಧ್ಯಮವನ್ನು ಹಿಡಿಯಬೇಕು. ಹೀಗೆಯೇ ಮುಂದುವರಿಸುತ್ತಾ ಬಂದರೆ ಆಧಾರಸ್ವರವೇ ಸ್ಥಾನಾಂತರದಲ್ಲಿ ಪ್ರಾಪ್ತವಾಗುತ್ತದೆ. ಆಗ ಈ ಚಕ್ರವು ಸಂಪೂರ್ಣವಾಗುತ್ತದೆ. ಇದು ತಾತ್ಪರ್ಯದಲ್ಲಿ ಪಂಚಮ ವಿಸ್ತಾರದ ಅಧೋಮುಖ ಚಲನೆಯೇ ಆಗುತ್ತದೆ ; ಆದುದರಿಂದ ಈ ಎರಡರಲ್ಲಿ ಪಂಚಮವಿಸ್ತಾರದ ಊರ್ಧ್ವಗತಿಯ ಚಾಕ್ರಿಕ ಚಲನೆಯೊಂದನ್ನೇ ಪರಿಶೀಲಿಸಿದರೆ ಸಾಕು.

ಈಗ ಪಂಚಮದ ಚಾಕ್ರಿಕ ಊರ್ಧ್ವಗತಿಯನ್ನು ಮೊದಲನೆಯ ಕೆಲವು ಹಂತಗಳಲ್ಲಿಯಾದರೂ ಪರೀಕ್ಷಿಸಬೇಕು ; ಇದರಿಂದ ಒಂದು ಆಕರ್ಷಕವಾದ ಅನುಮಿತಿಯು ಹೊರಡುತ್ತದೆ ; ಇದೇ ಈ ವಿಧಾನವು ಹುಟ್ಟಿಕೊಳ್ಳಲು ಮುಖ್ಯಕಾರಣ. ಆಧಾರ ಷಡ್ಜದಿಂದ ಪಂಚಮ ; ಪಂಚಮದ ಪಂಚಮವು ಪಂಚಶ್ರುತಿರಿಷಭ (ಅದರ ಈಗಿನ ವ್ಯಾವಹಾರಿಕ ಹೆಸರನ್ನು ಕೊಡುವುದಾದರೆ, ಚತುಃಶ್ರುತಿ ರಿಷಭ) ; ಅದಕ್ಕೆ ಪಂಚಮವು ಪಂಚ(ಚತುಃ-)ಶ್ರುತಿ ಧೈವತ. ಇದಕ್ಕೆ ಪಂಚಮವು ಅಂತರಗಾಂಧಾರ, ಅದಕ್ಕೆ ಪಂಚಮವು ಕಾಕಲೀ ನಿಷಾದ ; ಕಾಕಲೀ ನಿಷಾದಕ್ಕೆ ಪ್ರತಿಮಧ್ಯಮ ; ಹೀಗೆ ಐದು ಬಾರಿ ಪಂಚಮವನ್ನು ನಡೆಸಿದರೆ ಸಪ್ತಸ್ವರಗಳೂ ದೊರೆಯುತ್ತವೆ ; ಇದೇ ಇಂದಿನ ಮೇಚಕಲ್ಯಾಣಿಯೆಂಬ ಮೇಳಕರ್ತರಾಗ. ಇಲ್ಲಿಂದ ಮುಂದಕ್ಕೆ ಪಂಚಮಭಾವಗಳಲ್ಲಿ ಕ್ರಮವಾಗಿ ಶುದ್ಧರಿಷಭ, ಶುದ್ಧಧೈವತ, ಸಾಧಾರಣಗಾಂಧಾರ, ಕೈಶಿಕಿನಿಷಾದ, ಶುದ್ಧಮಧ್ಯಮ, ಷಡ್ಜ ಮತ್ತು ಪಂಚಮಗಳು ದೊರೆತು ಚಕ್ರವು ಸಂಪೂರ್ಣವಾಗುತ್ತದೆ. ಹೀಗೆ ಸ್ಥಾಯಿಯಲ್ಲಿರುವ ಹನ್ನೆರಡು ಸ್ವರಸ್ಥಾನಗಳೂ ಈ ಕ್ರಮದಿಂದ ಉಪಲಬ್ಧವಾಗುವುದಕ್ಕೆ ಮತ್ತು ಚಕ್ರಪೂರ್ತಿಗೆ ಹದಿಮೂರು ಪಂಚಮಗಳ ವಿಸ್ತಾರವು ಬೇಕಾಗುತ್ತದೆ. ಹೀಗೆ, ಷಡ್ಜಸ್ಥಾನವಾದ ನಾಲ್ಕನೆಯ ಶ್ರುತಿಯಿಂದ ಪಂಚಮವನ್ನು ಎಣಿಸುತ್ತಾ, ತತ್ಸಂಬಂಧಿತವಾದ ಸ್ಥಾಯಿಗಳ ಸಂಖ್ಯೆಯನ್ನು ಕಳೆಯುತ್ತಾ ಬಂದರೆ ಪ್ರಥಮಸ್ಥಾಯಿಯಲ್ಲಿ ಆಯಾ ಸ್ವರದ ಸ್ಥಾನವನ್ನು ಗುರುತಿಸುವುದು ಈ ವಿಧಾನವು ಅನುಸರಿಸುವ ಕ್ರಮ :

| | | | | |
|---|---|---|---|---|
| 1. | $4 + 13 \times 1$ | | $= 17$ | ಪಂಚಮ |
| 2. | $4 + 13 \times 2$ | $- 22$ | $= 8$ | ಪಂಚಶ್ರುತಿರಿಷಭ |
| 3. | $4 + 13 \times 3$ | $- 22$ | $= 21$ | ಪಂಚಶ್ರುತಿಧೈವತ |
| 4. | $4 + 13 \times 4$ | $- 44$ | $= 12$ | ಅಂತರಗಾಂಧಾರ |
| 5. | $4 + 13 \times 5$ | $- 66$ | $= 3$ | ಕಾಕಲೀ ನಿಷಾದ |
| 6. | $4 + 13 \times 6$ | $- 66$ | $= 16$ | ಪ್ರತಿಮಧ್ಯಮ |
| 7. | $4 + 13 \times 7$ | $- 88$ | $= 7$ | ಶುದ್ಧರಿಷಭ |
| 8. | $4 + 13 \times 8$ | $- 88$ | $= 20$ | ಶುದ್ಧಧೈವತ |
| 9. | $4 + 13 \times 9$ | $- 110$ | $= 11$ | ಸಾಧಾರಣಗಾಂಧಾರ |
| 10. | $4 + 13 \times 10$ | $- 132$ | $= 2$ | ಕೈಶಿಕಿ ನಿಷಾದ |
| 11. | $4 + 13 \times 11$ | $- 132$ | $= 15$ | ಶುದ್ಧಮಧ್ಯಮ |
| 12. | $4 + 13 \times 12$ | $- 154$ | $= 6$ | ಷಡ್ಜ |
| 13. | $4 + 13 \times 13$ | $- 154$ | $= 19$ | ಪಂಚಮ |

**ಪಠಕ (13) ಪಂಚಮದ ಚಾಕ್ರಿಕಗತಿ**

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇವುಗಳಲ್ಲಿ ಶುದ್ಧರಿಷಭ, ಶುದ್ಧಧೈವತಗಳ ಸ್ಥಾನಗಳೆರಡೇ ಶಾಸ್ತ್ರೋಕ್ತಸ್ಥಾನಗಳಿಗೆ ಹೊಂದುವಂತಹವು. ಉಳಿದೆಲ್ಲವೂ ಹೆಚ್ಚಾಗಿವೆ ಅಥವಾ ಕಡಿಮೆಯಾಗಿವೆ. ಹೀಗೆ, ಪಂಚಶ್ರುತಿರಿಷಭ, ಪಂಚಶ್ರುತಿಧೈವತಗಳ ಸ್ಥಾನಗಳು ಆಯಾ ಶಾಸ್ತ್ರೋಕ್ತಸ್ಥಾನಗಳಿಗಿಂತ ಒಂದೊಂದು ಶ್ರುತಿಯಷ್ಟು ಕಡಿಮೆಯಾಗಿವೆ. ಅಂತರಗಾಂಧಾರ, ಕಾಕಲೀ ನಿಷಾದಗಳು ಒಂದೊಂದು ಶ್ರುತಿಯಷ್ಟು ಅಧಿಕವಾಗಿವೆ. ಕಲ್ಲಿನಾಥನು ಹದಿನೈದನೆಯ ಶತಮಾನದಲ್ಲಿ ಪಂಚಮಕ್ಕೆ ಹೇಳಿದ ಸ್ಥಾನಕಿಂತ ಪ್ರತಿ ಮಧ್ಯಮಸ್ಥಾನವು ಒಂದು ಶ್ರುತಿಯಷ್ಟು ಹೆಚ್ಚಾಗಿದೆ ಅಥವಾ ಭರತಾದಿಗಳು ಹೇಳಿದ ಸ್ಥಾನಕ್ಕೆ ಸರಿಯಾಗಿದೆ. ಸಾಧಾರಣಗಾಂಧಾರ, ಕೈಶಿಕಿನಿಷಾದ, ಶುದ್ಧಮಧ್ಯಮ, ಷಡ್ಜ ಮತ್ತು ಪಂಚಮಗಳು ಪ್ರತಿಯೊಂದೂ ಆಯಾ ಶಾಸ್ತ್ರೋಕ್ತಸ್ಥಾನಗಳಿಗಿಂತ ಎರಡೆರಡು ಶ್ರುತಿಗಳಷ್ಟು ಹೆಚ್ಚಾಗಿವೆ. ಆದುದರಿಂದ ಪಂಚಮದ ಊರ್ಧ್ವಗತಿಯ ಚಕ್ರದಲ್ಲಿ ಮೊದಲನೆಯ ತೃತೀಯಾಂಶದಲ್ಲಿ ನೀಚವಾಗಿಯೂ, ಮಧ್ಯ ಭಾಗದಲ್ಲಿ ಸರಿಯಾಗಿಯೂ, ಕಡೆಯ ತೃತೀಯಾಂಶದಲ್ಲಿ ಅತಿ ಉಚ್ಚವಾಗಿಯೂ ಸ್ವರಗಳು ದೊರೆಯುತ್ತವೆ. ಎಂದರೆ ಕೇವಲ ಎರಡು ಸ್ಥಾಯಿಗಳ ವಿಸ್ತಾರದಲ್ಲಿ ನೀಚತೆಯೂ, ಏಳು ಸ್ಥಾಯಿಗಳ ವಿಸ್ತಾರಲ್ಲಿ ಉಚ್ಚತೆಯೂ ಸ್ವರಗಳಿಗೆ ಲಭಿಸಿ ವಾದಿತ್ವಭಗ್ನತಾಪರಿಣಾಮವು ಅತ್ಯಂತ ತೀವ್ರವಾಗಿಯೇ ಇರುತ್ತದೆ. ಆದುದರಿಂದ ಈ ವಿಧಾನ ವನ್ನು ಸರ್ವಥಾ ಒಪ್ಪಲಾಗದು. ಚಕ್ರಪೂರ್ತಿಯಲ್ಲಿ ಆಧಾರಸ್ವರವು ಎರಡು ಶ್ರುತಿಗಳಷ್ಟು ವಾದಿತ್ವಭಗ್ನತಾ-ಪರಿಣಾಮವನ್ನು ಪಡೆಯುತ್ತದೆಂಬ ಸಂಗತಿಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇದನ್ನು ಮುಂದಿನ ವಿಧಾನದಲ್ಲಿ ಪುನಃ ಸ್ಮರಿಸಲಾಗುವುದು. ತಾತ್ಪರ್ಯದಲ್ಲಿ, ಹದಿಮೂರು ಪಂಚಮಗಳ ಮತ್ತು ಏಳು ಅಷ್ಟಮಸ್ವರಗಳ (ಎಂದರೆ ಏಳು ಸ್ಥಾಯಿಗಳ) ವಿಸ್ತಾರದಲ್ಲಿ ಚಕ್ರಪೂರ್ತಿಯಾದರೂ ಎರಡು ಶ್ರುತಿಗಳಷ್ಟು ಮಿಗುತ್ತದೆ; ಮೊದಲನೆಯ ಮೂರು ಪಂಚಮಗಳ ವಿಸ್ತಾರದಲ್ಲಿ ಒಂದು ಶ್ರುತಿಯಷ್ಟು ಕಡಿಮೆಯಾಗಿಯೂ ನಾಲ್ಕರಿಂದ ಎಂಟು ಪಂಚಮಗಳ ವಿಸ್ತಾರದಲ್ಲಿ ಶೂನ್ಯವಾಗಿಯೂ ಒಂಬತ್ತು, ಹತ್ತನೆಯ ಪಂಚಮಗಳ ವಿಸ್ತಾರದಲ್ಲಿ ಒಂದು ಶ್ರುತಿಯಷ್ಟು ಹೆಚ್ಚಾಗಿಯೂ ಕಡೆಯ ಮೂರರಲ್ಲಿ ಎರಡು ಶ್ರುತಿಗಳಷ್ಟೂ ವಾದಿತ್ವಭಗ್ನತಾಪರಿಣಾಮವು ಗೋಚರವಾಗುತ್ತದೆ.

ಇನ್ನು ಮಧ್ಯಮದ ಚಾಕ್ರಿಕ ಊರ್ಧ್ವಗತಿಯಿಂದ ದ್ವಾವಿಂಶತಿ ಶ್ರುತಿಗಳನ್ನೂ ಸ್ವರಾಷ್ಟಕದಲ್ಲಿ ಹನ್ನೆರಡು ಸ್ವರಗಳ ಸ್ಥಾನಗಳನ್ನೂ ಪಡೆಯುವ ಸಾಹಸೀ ಸಂಗೀತಶಾಸ್ತ್ರಜ್ಞರೂ (!) ನಮ್ಮಲ್ಲಿ ಉಂಟು. ಷಡ್ಜಸ್ಥಾನವಾದ ನಾಲ್ಕನೆಯ ಶ್ರುತಿಯಿಂದ ಮಧ್ಯಮ ಭಾವವನ್ನು ಪಡೆದು, ಎಂದರೆ ಹದಿಮೂರನೆಯ ಶ್ರುತಿಯನ್ನು ಪಡೆದು, ಇದನ್ನು ಆಧಾರಸ್ವರವೆಂದು ತಿಳಿದು, ಇದರ ಮಧ್ಯಮವನ್ನು ಪಡೆಯಬೇಕು. ಹೀಗೆಯೇ ಮುಂದುವರೆಸಿ ಆಧಾರ ಸ್ವರವು ಪುನಃ ದೊರೆತಾಗ ಮಧ್ಯಮದ ಚಾಕ್ರಿಕ ಗತಿಯು ಪೂರ್ಣವಾಯಿತೆಂದು ತಿಳಿಯಬೇಕು. ಹೀಗೆ ಬಂದ ಸ್ಥಾನಗಳನ್ನು ಆವಶ್ಯಕವಿದ್ದಷ್ಟು ಸ್ಥಾಯಿಗಳಷ್ಟು ಇಳಿಸಿ ಪ್ರಥಮಸ್ಥಾಯಿಯಲ್ಲಿ ಆಯಾ ಸ್ವರಸ್ಥಾನವನ್ನು ಪಡೆಯ ಬೇಕು. ಹೀಗೆ ಉಪಲಬ್ಧವಾದ ಸ್ಥಾನಗಳನ್ನು ಮುಂದಿನ ಕೋಷ್ಟಕದಲ್ಲಿ ತೋರಿಸಿದೆ.

| ಕ್ರಮಸಂಖ್ಯೆ | ಶ್ರುತಿಸ್ಥಾನ | ಸ್ವರ |
|---|---|---|
| 1. | $4 + 9 \times 1 = 13$ | ಶುದ್ಧಮಧ್ಯಮ |
| 2. | $4 + 9 \times 2 = 22$ | ಕೈಶಿಕಿನಿಷಾದ |
| 3. | $4 + 9 \times 3 - 22 = 9$ | ಸಾಧಾರಣಗಾಂಧಾರ |
| 4. | $4 + 9 \times 4 - 22 = 18$ | ಶುದ್ಧಧೈವತ |
| 5. | $4 + 9 \times 5 - 44 = 5$ | ಶುದ್ಧರಿಷಭ |
| 6. | $4 + 9 \times 6 - 44 = 14$ | ಪ್ರತಿಮಧ್ಯಮ |

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಕ್ರಮಸಂಖ್ಯೆ | ಶ್ರುತಿಸ್ಥಾನ | ಸ್ವರ |
|---|---|---|
| 7. | 4 + 9 × 7 — 66 = 1 | ಕಾಕಲೀ ನಿಷಾದ |
| 8. | 4 + 9 × 8 — 66 = 10 | ಅಂತರಗಾಂಧಾರ |
| 9. | 4 + 9 × 9 — 66 = 19 | ಪಂಚಶ್ರುತಿಧೈವತ |
| 10. | 4 + 9 × 10 — 88 = 6 | ಪಂಚಶ್ರುತಿರಿಷಭ |
| 11. | 4 + 9 × 11 — 88 = 15 | ಪಂಚಮ |
| 12. | 4 + 9 × 12 — 110 = 2 | ಷಡ್ಜ |
| 13. | 4 + 9 × 13 — 110 = 11 | ಶುದ್ಧಮಧ್ಯಮ |
| 14. | 4 + 9 × 14 — 110 = 20 | ಕೈಶಿಕಿನಿಷಾದ |
| 15. | 4 + 9 × 15 — 132 = 7 | ಸಾಧಾರಣಗಾಂಧಾರ |
| 16. | 4 + 9 × 16 — 132 = 16 | ಶುದ್ಧಧೈವತ |
| 17. | 4 + 9 × 17 — 154 = 3 | ಶುದ್ಧರಿಷಭ |
| 18. | 4 + 9 × 18 — 154 = 12 | ಪ್ರತಿಮಧ್ಯಮ |
| 19. | 4 + 9 × 19 — 154 = 21 | ಕಾಕಲೀ ನಿಷಾದ |
| 20. | 4 + 9 × 20 — 176 = 8 | ಅಂತರಗಾಂಧಾರ |
| 21. | 4 + 9 × 21 — 176 = 17 | ಪಂಚಶ್ರುತಿಧೈವತ |
| 22. | 4 + 9 × 22 — 198 = 4 | ಪಂಚಶ್ರುತಿರಿಷಭ |

**ಮಧ್ಯಮದ ಚಾಕ್ರಿಕ ಗತಿ**

**ಪಟ್ಟಿಕೆ (14)**

ಇದರಲ್ಲಿ ಪ್ರಥಮ ಮಧ್ಯಮವನ್ನುಳಿದು ಉಳಿದ ಪ್ರತಿಯೊಂದು ಸ್ಥಾನವೂ ಶಾಸ್ತ್ರೋಕ್ತಸ್ಥಾನಕ್ಕಿಂತ ಅತ್ಯಂತ ಭಿನ್ನವಾಗಿರುವುದನ್ನು ಗಮನಿಸಬೇಕು. ಇದು ಅತ್ಯಂತ ಅಸಾಂಪ್ರತವಾದ ವಿಧಾನ.

ಇನ್ನು ಈ ವಿಧಾನದಲ್ಲಿರುವ ಇತರ ದೋಷಗಳನ್ನು ಪರೀಕ್ಷಿಸಬಹುದು. ಈ ಪಕ್ಷದಲ್ಲಿ ದ್ವಾವಿಂಶತಿ ಶ್ರುತಿ ಸ್ಥಾನಗಳನ್ನು ಪಡೆಯಲು ಎರಡು ತಂತ್ರಗಳನ್ನು ಬಳಸಲಾಗಿದೆಯಷ್ಟೆ : ಉತ್ತರೋತ್ತರವಾಗಿ ಪಂಚಮದ ವಿಸ್ತಾರದಲ್ಲಿ ಚಾಕ್ರಿಕ ಗತಿ ; ಸ್ಥಾನಾಂತರದಲ್ಲಿ ದೊರೆಯುವ ಸ್ವರಸ್ಥಾನಗಳನ್ನು ಪ್ರಥಮಸ್ಥಾಯಿಗೆ ಪರಿವರ್ತಿಸಿಕೊಳ್ಳುವುದು. ಇದರಲ್ಲಿ ಮೊದಲನೆಯದಕ್ಕೆ ಈ ಮತಪ್ರವರ್ತಕರಿಗೆ ಶಾಸ್ತ್ರದಲ್ಲಿ ಯಾವ ಆಧಾರವೂ ಇಲ್ಲ ; ಈ ರೀತಿಯಲ್ಲಿ ಸ್ವರಗಳನ್ನು ಪಡೆಯುವ ಕ್ರಮವು ಪಾಶ್ಚಾತ್ಯ ಸಂಗೀತಶಾಸ್ತ್ರದ್ದು. ಅಲ್ಲಿ ಅನೇಕ ಸ್ವರಗಳನ್ನು ಏಕಕಾಲದಲ್ಲಿ ಪಡೆಯುವ ಪದ್ಧತಿಯಿರುವುದರಿಂದ ಸ್ವರಸ್ಥಾನಗಳನ್ನು ಅವುಗಳ ಶಾಸ್ತ್ರೋಕ್ತವೂ ನೈಸರ್ಗಿಕವೂ ಆದ ಸ್ಥಾನಗಳಿಗಿಂತ ಹಿಂದಕ್ಕೆ ಮುಂದಕ್ಕೆ ಕದಲಿಸುತ್ತಾರೆ ಹಾಗೂ ಸ್ವರಸ್ಥಾನಗಳನ್ನು ಈ ರೀತಿಯ ಪಂಚಮ ಚಕ್ರದಿಂದ (quinary cycle) ಪಡೆಯುತ್ತಾರೆ, ಈ ಸಂಗೀತದ ಸ್ವಭಾವ, ಶಾಸ್ತ್ರ, ಮುಂತಾದವುಗಳನ್ನು ಅರಿಯದೆ ಕೇವಲ ಪ್ರಥಮದರ್ಶನದ ಆಕರ್ಷಣೆಯಿಂದ ಪ್ರಭಾವಿತರಾದ ನಮ್ಮ ಸಂಗೀತಶಾಸ್ತ್ರಜ್ಞರು ನಮ್ಮ ಸಂಗೀತಶಾಸ್ತ್ರ ಮರ್ಯಾದೆಯನ್ನು ಉಲ್ಲಂಘಿಸಿ ಅದೇ ತತ್ತ್ವವನ್ನು ಇಲ್ಲಿಯೂ ಅನ್ವಯಿಸುವ ಯತ್ನ ಮಾಡಿದ್ದಾರೆ. ಹೇಗಾದರೂ ಒಂದು ಪ್ರಾಚೀನ ಆಧಾರವನ್ನು ಪಡೆಯದಿದ್ದರೆ ಈ ಪಕ್ಷಕ್ಕೆ ಮಾನ್ಯತೆಯು ದೊರೆಯಲಾರದೆಂಬ ಭೀತಿಯಿಂದ

ಭರತಮುನಿಯು ಶ್ರುತಿನಿದರ್ಶನಸಂದರ್ಭದಲ್ಲಿ ಹೇಳಿದ 'ಮಾರ್ದವಾದಾಯತತ್ವಾದ್ವಾ' ಎಂಬಲ್ಲಿ ಮಾರ್ದವತ್ವಕ್ಕೆ ಮಧ್ಯಮ ಭಾವದ ಚಾಕ್ರಿಕಗತಿಯನ್ನೂ ಆಯತತ್ವಕ್ಕೆ ಪಂಚಮಭಾವದ ಚಾಕ್ರಿಕಗತಿಯನ್ನೂ ಹೇಳಿಬಿಟ್ಟಿದ್ದಾರೆ! ಇದು ಹೇಗೆ ಅತ್ಯಂತ ಅವಿಚಾರರಮಣೀಯವೆಂದೂ ಶಾಸ್ತ್ರವಿರುದ್ಧವೆಂದೂ ಅಭಿನವಗುಪ್ತನ ಮಾತುಗಳಲ್ಲಿ ಈಗಾಗಲೇ ಹೇಳಿದೆ[108] (ಪು. 211-212). ಎರಡನೆಯದಾಗಿ, ಈ ಬಗೆಯ ಚಾಕ್ರಿಕ ಗತಿಯನ್ನು ಭರತನು ನೇರವಾಗಿಯೂ ವಿವಕ್ಷೆಯಲ್ಲಿಯೂ ಎಲ್ಲಿಯೂ ಹೇಳಿಲ್ಲ. ಮತಂಗ, ಅಭಿನವಗುಪ್ತ, ಶಾರ್ಙ್ಗದೇವರುಗಳಲ್ಲಿಯಾದರೂ ಅಷ್ಟೆ. ಮೂರನೆಯದಾಗಿ, ಈ ಬಗೆಯ ಗತಿಯಿಂದ ದೊರೆಯುವುದು ಪ್ರತಿಯೊಂದೂ ಸ್ವರವಷ್ಟೆ; ಪಂಚಮಭಾವದಲ್ಲಿ ವ್ಯಕ್ತವಾಗುವುದರಿಂದ ವಿಶೇಷವಾದ ಪುಷ್ಟಿಯನ್ನೂ ಸ್ವರತ್ವವನ್ನೂ ಈ ಸ್ಥಾನಗಳು ಪರಸ್ಪರವಾಗಿ ಪಡೆದಿರುತ್ತವೆ. ಹೀಗಿರುವಾಗ ಇಪ್ಪತ್ತೆರಡು ಸ್ಥಾನಗಳಲ್ಲಿಯೂ ಸ್ವರಗಳೇ ಇದ್ದ ಹಾಗಾಯಿತು. ಇದು ಅಸಮಂಜಸವಾದುದು. ಏಕೆಂದರೆ ವಿಶ್ವಾವಸುವು ಹೇಳಿದ ಅಂತರಗತ ಶ್ರುತಿಗಳಿಗೆ ಸ್ಥಾನವೇ ಇಲ್ಲದೆ ಹೋಗುತ್ತದೆ; ನೆರೆಹೊರೆಯ ಶ್ರುತಿಗಳಲ್ಲಿ ಸ್ವರಗಳು ಉಪಸ್ಥಿತವಾದರೆ ಸ್ಥಾನಸಾಂಕರ್ಯ, ಸ್ವರಸಾಂಕರ್ಯಗಳು ಉಂಟಾಗುವುದರಿಂದ ಇದು ಕೂಡದೆಂದು ಅಭಿನವಗುಪ್ತನು ಹೇಳಿದ ಮಾತು ನಿರರ್ಥಕವಾಗುತ್ತದೆ; ಅಷ್ಟೇ ಅಲ್ಲದೆ, ಉಚ್ಚತಮ ಸ್ಥಾಯಿಗಳಲ್ಲಿ ವಾದೀತ್ವಭಗ್ನತಾಪರಿಣಾಮದಿಂದ ಉದ್ಭವಿಸಿದ ಸಂಕೀರ್ಣವೂ ಕ್ಲಿಷ್ಟವೂ ಆದ ಭಾವಗಳನ್ನೆಲ್ಲಾ ಶ್ರುತಿಗಳೆಂದು ಇಪ್ಪತ್ತೆರಡರಲ್ಲಿ ಎಣಿಸಬೇಕಾಗುತ್ತದೆ.

### ಅಶಾಸ್ತ್ರೀಯ ಸ್ಥಾಯಿವಿಸ್ತಾರ

ಕಡೆಯದಾಗಿ, ಈ ವಿಧಾನವು ಹನ್ನೆರಡು ಸ್ವರಗಳನ್ನು ಸ್ಥಾಯಿಯಲ್ಲಿ ಪಡೆಯಲು ಹದಿಮೂರು ಪಂಚಮಗಳ ಮತ್ತು ಏಳು ಸ್ಥಾಯಿಗಳ ವಿಸ್ತಾರವನ್ನು ಅಪೇಕ್ಷಿಸುತ್ತದಷ್ಟೆ. ಇಷ್ಟಾದರೂ ಇದರಿಂದ ದೊರೆತುದು ಇಪ್ಪತ್ತೆರಡು ಶ್ರುತಿಸ್ಥಾನಗಳಲ್ಲಿ ಕೇವಲ ಹನ್ನೆರಡು ಮಾತ್ರ. ಇಪ್ಪತ್ತೆರಡನ್ನೂ ಪಡೆಯಬೇಕಾದರೆ ಹದಿಮೂರು ಸ್ಥಾಯಿಗಳ ವ್ಯಾಪ್ತಿಯು ಬೇಕಾಗುತ್ತದೆ! ಭಾರತೀಯ ಸಂಗೀತದಲ್ಲಿ ಸಾರ್ವತ್ರಿಕವಾಗಿ ಎಲ್ಲಾ ಕಾಲದಲ್ಲಿಯೂ ತ್ರಿಸ್ಥಾಯಿಯ ವ್ಯಾಪ್ತಿ, ವಿಸ್ತಾರಗಳನ್ನು ಮಾತ್ರ ಹೇಳುತ್ತಾ ಬರಲಾಗಿದೆಯೆಂಬುದನ್ನಿಲ್ಲಿ ನೆನೆಯಬೇಕು. ಮೂರು ಸ್ಥಾಯಿಗಳನ್ನು ಮೀರಿದ ನಾದವಿಸ್ತಾರವನ್ನು ಒಬ್ಬನೇ ಒಬ್ಬ ಲಾಕ್ಷಣಿಕನೂ ಸಹ, ಧ್ವನಿಯಲ್ಲಿ ಸಹ, ಹೇಳದಿರುವಾಗ ಹದಿಮೂರು ಸ್ಥಾಯಿಗಳ ವ್ಯಾಪ್ತಿಯು ಈ ಸಮುದ್ರವನ್ನು ಈ ಆಧುನಿಕ ಆಂಜನೇಯರು ಹೇಗೆ ಹಾರುವ ಸಾಹಸಮಾಡುತ್ತಾರೋ ತಿಳಿಯದು. ಹದಿಮೂರು ಸ್ಥಾಯಿಗಳ ವ್ಯಾಪ್ತಿಯೆಂದರೆ, ಅತ್ಯಂತ ಮಂದ್ರವಾದ ಧ್ವನಿಯೆಂದು ಇಟ್ಟುಕೊಳ್ಳಬಹುದಾದ ಪಿಯಾನೋವಿನ ಮೊದಲನೆಯ ತಂತಿಯ ಸೆಂಕಂಡಿಗೆ 34.7 ಕಂಪನವನ್ನಿಟ್ಟುಕೊಂಡರೆ ಹದಿಮೂರನೆಯ ಸ್ಥಾಯಿಯ ಅಂತ್ಯಸ್ಥಾನವು ಸೆಕಂಡಿಗೆ 2,84,256.4 ಕಂಪನಗಳಷ್ಟಾಗುತ್ತದೆ! ಶ್ರಾವ್ಯತೆಯ ನೀಚಮಿತಿಯಾದ 32 ಅಂಗುಲದ ಆರ್ಗನ್ ಕೊಳವೆಯು ಸೆಕಂಡಿಗೆ ಉಂಟುಮಾಡುವ 16.4 ಕಂಪನಗಳನ್ನೇ ಇಟ್ಟುಕೊಂಡರೂ ಹದಿಮೂರನೆಯ ಅಷ್ಟಮಸ್ವರವು ಸೆಕಂಡಿಗೆ 2,63,577.6 ಕಂಪನಗಳನ್ನು ಕೊಡುತ್ತದೆ! ಈ ಮಿತಿಯನ್ನು ಮಾನವನು ಸಾಮಾನ್ಯವಾಗಿ ಮುಟ್ಟಲಾರನೆಂಬುದೂ, ಸುಮಾರು ಸೆಕಂಡಿಗೆ 120 ಕ್ಕಿಂತ ನೀಚವಾದ ಕಂಪನಗಳಿಂದ ಸಂಗೀತಕ್ಕೆ ವಿಶೇಷವಾದ ಪ್ರಯೋಜನವೇನೂ ಇಲ್ಲವೆಂಬುದೂ, ಪ್ರಯೋಗಸಿದ್ಧವಾಗಿದೆ.

ಗಾಯನ ಸಂದರ್ಭದಲ್ಲಿ ಪ್ರಯುಕ್ತವಾಗುವ ಅತ್ಯಂತ ನೀಚಸ್ವರವೆಂದು (ಅಲೆಕ್ಸಾಂಡರ್ ವುಡ್ ಹೇಳುವ) ಸೆಕಂಡಿಗೆ 66 ಕಂಪನಗಳನ್ನೇ (ಪು. 185) ಆಧಾರಸ್ವರವೆಂದು ಇಟ್ಟುಕೊಂಡರೂ ಹದಿಮೂರನೆಯ ಅಷ್ಟಮಸ್ವರವು ಸೆಕಂಡಿಗೆ 5,72,502 ಕಂಪನಗಳನ್ನು ಪಡೆದಿರುತ್ತದೆ! ಪುರುಷಕಂಠದಲ್ಲಿ ಉಪಲಬ್ಧವಾಗುವ ಅತ್ಯಂತ ನೀಚಧ್ವನಿಯಾದ (ಬೇಸ್) ಸೆಕಂಡಿಗೆ 82.4 ಕಂಪನಗಳನ್ನು ಆಧಾರವಾಗಿಟ್ಟುಕೊಂಡರೆ ಹದಿಮೂರನೆಯ ಅಷ್ಟಮಸ್ವರದ ಕಂಪನವು ಸೆಕಂಡಿಗೆ 13,50,345.6 ರಷ್ಟಾಗುತ್ತದೆ. ಅಲೆಕ್ಸಾಂಡರ್ ವುಡ್ ಹೇಳುವಂತಹ (ಪು. 185) ಪುರುಷ

ಶಾರೀರದ ಸರಾಸರಿ ಆಧಾರಸ್ವರವನ್ನು ಸೆಕಂಡಿಗೆ 145 ಕಂಪನಗಳೆಂದೂ, ಸ್ತ್ರೀ ಶಾರೀರದ ಸರಾಸರಿ ಆಧಾರಸ್ವರದ ಕಂಪನವು ಸೆಕಂಡಿಗೆ 230 ಕಂಪನಗಳೆಂದೂ ಇಟ್ಟುಕೊಂಡರೆ ಇವುಗಳ ಹದಿಮೂರನೆಯ ಅಷ್ಟಮಸ್ವರಗಳು ಕ್ರಮವಾಗಿ ಸೆಕಂಡಿಗೆ 11, 87, 480 ಮತ್ತು 18, 84,160 ಕಂಪನಗಳನ್ನು ಪಡೆದಿರುತ್ತವೆ. ಶ್ರಾವ್ಯತೆಯ ಉಚ್ಚ ಮಿತಿಯು ಸಂಗೀತದಲ್ಲಿ ಸೆಕಂಡಿಗೆ ಕೇವಲ 10,000 ಕಂಪನಗಳೆಂದೂ, ಸಂಗೀತ ಬಾಹಿರವಾದುದು ಕೇವಲ 16,000 ಕಂಪನಗಳೆಂದೂ ಪಥಕ (1) ರಲ್ಲಿ ಈಗಾಗಲೇ ತೋರಿಸಿದೆ (ಪು.186). ಇಲ್ಲಿ ಹದಿಮೂರನೆಯ ಅಷ್ಟಮಸ್ವರಕ್ಕೆ ಬೇಕಾದ ಕಂಪನಗಳ ವ್ಯಾಪ್ತಿಯು ಶಬ್ದವನ್ನು ಮೀರಿದ್ದು ; ಏಕೆ, ಬೆಳಕಿನ ಕಂಪನಗಳನ್ನೇ ಮೀರಿದ್ದು! ರೇಡಿಯೋ ಅಲೆಗಳನ್ನು ಮೀರಿದ ಈ ಕಂಪನಗಳನ್ನು ಯಾವ ಯಂತ್ರವೂ ಗ್ರಹಿಸಿ ಅಳೆಯಲಾರದು. ಅಷ್ಟೇ ಏಕೆ, ಪಿಯಾನೋ ಒಂದನ್ನು ಬಿಟ್ಟರೆ ಏಳು ಸ್ಥಾಯಿಗಳ ವ್ಯಾಪ್ತಿಯನ್ನು ಮಾನವ ನಿರ್ಮಿತವಾದ ಯಾವ ವಾದ್ಯವೂ ಪಡೆಯಲಾರದೆಂದಮೇಲೆ ಹದಿಮೂರು ಸ್ಥಾಯಿಗಳ ವಿಸ್ತಾರವು ಇನ್ನು ದೂರವೇ ಉಳಿಯಿತು. ಕೇವಲ ಏಳು ಸ್ಥಾಯಿಗಳ ವಿಸ್ತಾರದಲ್ಲೇ ವಾದೀತ್ವಭಗ್ನತಾಪರಿಣಾಮವು ಅತಿ ತೀವ್ರವಾಗಿದ್ದರೆ ಹದಿಮೂರು ಸ್ಥಾಯಿಗಳ ವಿಸ್ತಾರದಲ್ಲಿ ಹೇಳುವುದು ಏನಿದೆ! ಈ ಮತದ ಪ್ರವರ್ತಕರು ಸರಳವಾಗಿರುವ ಈ ಲೆಕ್ಕಗಳನ್ನು ಲಕ್ಷಿಸದೆ ತಮ್ಮ ವಾದವನ್ನು ಮಂಡಿಸುವುದು ಆಶ್ಚರ್ಯಕರವೇ ಸರಿ.

ಇದಕ್ಕಿಂತ ವಿಸ್ಮಯಕರವಾದ ಒಂದು ಸಂಗತಿಯೂ ಇವರಲ್ಲುಂಟು. ಏಳು ಅಥವಾ ಹದಿಮೂರು ಸ್ಥಾಯಿಗಳ ವಿಸ್ತಾರವನ್ನೇನೂ ಇವರು ಎಂದೂ ಅಳೆದುದಿಲ್ಲ. ಅದರ ಬದಲು ಪಂಚಮಭಾವವನ್ನು ದ್ವಿತೀಯ ಸ್ಥಾಯಿಯವರೆಗೆ ಏರಿಸಿಕೊಂಡು, ಅದರ ಸ್ಥಾನವನ್ನೇ ಪ್ರಥಮಸ್ಥಾಯಿಗೆ ಅವರು ಪರಿವರ್ತಿಸಿಕೊಳ್ಳುತ್ತಾರೆ. ಈ ಪರಿವರ್ತಿತ ಸ್ಥಾನದಿಂದ ಪುನಃ ಪಂಚಮ ಭಾವವನ್ನು ದ್ವಿತೀಯ ಸ್ಥಾಯಿಯಲ್ಲಿ ಪಡೆಯುವುದು ; ಅದನ್ನು ಪುನಃ ಪ್ರಥಮ ಸ್ಥಾಯಿಗೆ ಪರಿವರ್ತಿಸಿಕೊಳ್ಳುವುದು—ಇದು ಇವರ ಕ್ರಮ. ನಮ್ಮ ಆಧುನಿಕ ವೀಣೆಯಲ್ಲಿ ಸ್ವರಸ್ಥಾನಗಳನ್ನು ಪಡೆಯುವುದು ಅಥವಾ ಶ್ರುತಿಮಾಡುವುದಾದರೂ ಇದೇ ಬಗೆಯದೆಂದು ಅವರ ವಾದ. ಇದರಲ್ಲಿ ಏನೂ ಹುರುಳಿಲ್ಲವೆಂಬುದು ಸ್ಪಷ್ಟವಾಗಿದೆ. ಏಕೆಂದರೆ ಆಧುನಿಕ ವೀಣೆಯಲ್ಲಿ ಆಧಾರಸ್ವರದಿಂದ ಅಂತರಗಾಂಧಾರ, ಶುದ್ಧಮಧ್ಯಮ ಮತ್ತು ಪಂಚಮ ಈ ಸ್ವಯಂಭೂ ಸ್ವರಗಳ ಆಧಾರದಿಂದ ದ್ವಾದಶ ಸ್ವರಸ್ಥಾನಗಳನ್ನು ನಿರ್ಣಯಿಸಲಾಗುತ್ತದೆ. ಇದಕ್ಕೆ ತಂತಿಯು ವಿವಿಧ ಮೆಟ್ಟುಗಳಲ್ಲಿ ತನಗೆ ತಾನೇ ಉಂಟುಮಾಡುವ ವಿವಿಧ ಆವರ್ತಕಸ್ವರಗಳ (upper partials) ಸಹಾಯವನ್ನೂ ತೆಗೆದುಕೊಳ್ಳಲಾಗುತ್ತದೆ. ಇದಕ್ಕೂ ಅಂತರಗಾಂಧಾರ, ಶುದ್ಧಮಧ್ಯಮ ಮತ್ತು ಪಂಚಮಗಳ ಚಾಕ್ರಿಕ ಚಲನೆಗೂ ಯಾವ ಸಂಬಂಧವೂ ಇಲ್ಲ. ಹೀಗೆ ವೀಣೆಯಲ್ಲಿ ಸ್ವರಸ್ಥಾನನಿರ್ಣಯಕ್ಕೆ ಒಂದು ಸ್ಥಾಯಿಯ, ಹೆಚ್ಚೆಂದರೆ ಎರಡು ಸ್ಥಾಯಿಗಳ ವಿಸ್ತಾರವು ಸಾಕು. ಇದರಲ್ಲಿ ವಾದೀತ್ವ ಭಗ್ನತಾಪರಿಣಾಮವು ವಿಶೇಷವಾಗಿರದೆಂದು ಮೇಲೆ ಈಗಾಗಲೇ (ಪು. 196) ಸೂಚಿಸಿದೆ. ಅದೂ ಅಲ್ಲದೆ ವೀಣೆಯಲ್ಲಿ ಪಡೆಯುವುದಾದರೂ ಹನ್ನೆರಡು ಸ್ವರಸ್ಥಾನಗಳನ್ನಲ್ಲದೆ ಇಪ್ಪತ್ತೆರಡು ಶ್ರುತಿಸ್ಥಾನಗಳನ್ನಲ್ಲ.

### ಒಪ್ಪದಿರಲು ಕಾರಣಗಳು

ಈ ವಿಧಾನವು ಶ್ರುತಿಗೆ ಪೂರ್ವಾಚಾರ್ಯರು ಹೇಳಿದ ಧ್ವನ್ಯಂತರಾಶ್ರುತಿ, ನೈರಂತರ್ಯ, ಧ್ವನಿವೈಲಕ್ಷಣ್ಯಕ್ಕೆ ಬೇಕಾದ ಅಣುಶಃ ಉತ್ಕರ್ಷಾಪಕರ್ಷ, ಕಾಲ, ಕಲಾ, ಪ್ರಮಾಣ ಮುಂತಾದ ಯಾವ ಲಕ್ಷಣಗಳನ್ನೂ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಶ್ರುತಿನಿದರ್ಶನಕ್ಕೆಂದು ಪೂರ್ವಾಚಾರ್ಯರು ಬಳಸಿದ ತತ್ತ್ವ, ತಂತ್ರ ಒಂದೂ ಈ ಪಕ್ಷದವರಿಗೆ ಬೇಡ ; ಪೂರ್ವಾಚಾರ್ಯರು ಚತುಃಶ್ರುತಿಕ, ತ್ರಿಶ್ರುತಿಕ ಮತ್ತು ದ್ವಿಶ್ರುತಿಕ ಸ್ವರಗಳ ಪ್ರಮಾಣಗಳನ್ನು ಪಡೆಯಲು ಬೇಕೆಂದು ಹೇಳಿದ ಏಕೋತ್ತರವೃದ್ಧಿಯ ನಿಷ್ಕಾಸವು ಇಲ್ಲಿ ಸಲ್ಲುವುದಿಲ್ಲ ; ವಿವಿಧ ಸ್ವರಾಂತರಗಳನ್ನು ಸ್ಥಾಯಿಯ ಮತ್ತು ತ್ರಿಸ್ಥಾಯಿಯ ವಿಸ್ತಾರದಲ್ಲಿ ಪಡೆಯಲು ಅವರು ನಿರ್ಮಿಸಿದ ತ್ರಿವಿಧವಾದ ಊರ್ಧ್ವಸ್ಪರ್ಶತತ್ತ್ವವೂ ಇಲ್ಲಿ

ವಾಯವಾಗುತ್ತದೆ. ಸಂಗೀತೋಪಯುಕ್ತವಾದ ನಾದದ ವಿಸ್ತಾರವನ್ನು ಪೂರ್ವಾಚಾರ್ಯರೆಲ್ಲರೂ ಏಕಕಂಠದಿಂದ ಮೂರೇ ಸ್ಥಾಯಿಗಳೆಂದುದನ್ನು ಈ ಮತಪ್ರವರ್ತಕರು ಲೆಕ್ಕಿಸದೆ ತಮ್ಮದೇ ಆದ ಹತ್ತು ಸ್ಥಾಯಿಗಳ ವಿಸ್ತಾರವನ್ನು ಸೇರಿಸಿ ಮಾನವಬುದ್ಧಿಗೆ ಗಮ್ಯವಲ್ಲದ ಈ ವಿಸ್ತಾರವನ್ನು ಕಲ್ಪನೆಯ ಕುದುರೆಯ ಬೆನ್ನೇರಿ ದಾಟುತ್ತಾರೆ. ಪೂರ್ವಾಚಾರ್ಯರು ವಿವಕ್ಷಿಸಿದ ವಾದೀತ್ವಭಗ್ನತಾಪರಿಣಾಮವು ಇವರಿಗೆ ಲೆಕ್ಕವೇ ಇಲ್ಲ. ಪೂರ್ವಸೂರಿಗಳು ಹೇಳಿದ ಸ್ಥಾನಸಾಂಕರ್ಯತತ್ತ್ವವೂ, ಅಂತರಗತಶ್ರುತಿವಿಭಾಗವೂ ಇಲ್ಲಿ ಹೇಳಹೆಸರಿಲ್ಲವಾಗಿವೆ. ಹೀಗೆ ಪೂರ್ವಪಂಡಿತರ ಅನುಭವ, ಸಂಶೋಧನೆಗಳಿಗೂ, ವ್ಯವಹಾರಜ್ಞಾನಕ್ಕೂ, ಗಣಿತಶಾಸ್ತ್ರವ್ಯವಹಾರಕ್ಕೂ, ನಾದವಿಜ್ಞಾನದ ಪ್ರಯೋಗ ಫಲಿತಾಂಶಗಳಿಗೂ, ಸಂಗೀತಸೌಂದರ್ಯಮೀಮಾಂಸಾಶಾಸ್ತ್ರಮರ್ಯಾದೆಗೂ ಹೊರತಾಗಿರುವ ಈ ವಿಧಾನವು ಸರ್ವಥಾ ಗ್ರಾಹ್ಯವಲ್ಲ.

ದ್ವಾವಿಂಶತಿಶ್ರುತಿಗಳ ಸ್ಥಾನಗಳನ್ನು ಪಂಚಮದ ಚಾಕ್ರಿಕಚಲನೆಯಿಂದ ಪಡೆಯಲು ಹದಿನಾಲ್ಕು ಸ್ಥಾನಗಳ ವಿಸ್ತಾರವು ಹೇಗೆ ಬೇಕಾಗುವುದೆಂಬುದನ್ನು ಈ ಮುಂದಿನ ಪಥಕದಲ್ಲಿ ತೋರಿಸಿದೆ. ಆಧಾರಸ್ವರವಾದ ಷಡ್ಜವನ್ನು ನಾಲ್ಕನೆಯ ಶ್ರುತಿಯಲ್ಲಿ ನೆಟ್ಟು* ಇದರಿಂದ ಹದಿಮೂರು ಶ್ರುತಿಗಳ ಅಂತರದಲ್ಲಿ ಪಂಚಮವನ್ನು ಪಡೆಯಲಾಗಿದೆ. ಇದರ ಪಂಚಮ ಮುಂತಾದವುಗಳ ಸ್ಥಾನಗಳನ್ನು ಪ್ರಥಮ ಸ್ಥಾಯಿಗೇ ಪರಿವರ್ತನ ಮಾಡಿಕೊಳ್ಳಲಾಗಿದೆ. ಇವರಲ್ಲಿ ವಾದೀತ್ವಭಗ್ನತಾ ಪರಿಣಾಮವನ್ನು ಲೆಕ್ಕಿಸದೆ ವಿವಿಧ ಪಂಚಮಭಾವಗಳನ್ನು ಆಯಾ ಶಾಸ್ತ್ರೋಕ್ತಸ್ಥಾನಗಳಲ್ಲಿಯೇ ಇಡಲಾಗಿದೆ. ಹೀಗೆ ಹುಟ್ಟುವ ಪಂಚಮಭಾವಗಳನ್ನು ಸಂಖ್ಯೆಯಿಂದ ಮಾತ್ರ ಈ ಪಥಕದಲ್ಲಿ ತೋರಿಸಿದೆ; ಉದಾಹರಣೆಗೆ, 14 ಎಂದರೆ ಹದಿನಾಲ್ಕನೆಯ ಪಂಚಮ ಎಂದು ತಿಳಿಯಬೇಕು. ಶಾಸ್ತ್ರಕ್ಕೆ ಪ್ರಯೋಜಕವಲ್ಲದಿದ್ದರೂ ಮಧ್ಯಮಭಾವದ ಚಾಕ್ರಿಕಗತಿಯಿಂದ ಇಪ್ಪತ್ತೆರಡು ಶ್ರುತಿಗಳನ್ನು ಪಡೆಯಲು ಒಂಬತ್ತು ಸ್ಥಾಯಿಗಳು ಬೇಕಾಗುತ್ತವೆಂದು ತೋರಿಸಲು ಇನ್ನೂ ಒಂದು ಪಥಕವನ್ನು ಕೊಡಲಾಗಿದೆ. ಪಂಚಮಭಾವದ ಪಥಕಕ್ಕೆ ಹೇಳಿರುವ ನಿಯಮಗಳನ್ನೇ ಇಲ್ಲಿಯೂ ಅನ್ವಯಿಸಿಕೊಳ್ಳಬೇಕು.

| ಶ್ರುತಿ / ಸ್ಥಾಯಿ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 61 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|
| 1 | | | | * | | | | | | | | | | | | | 1 | | | | | |
| 2 | | | | | | | | 2 | | | | | | | | | | | | | 3 | |
| 3 | | | | | | | | | | | | 4 | | | | | | | | | | |
| 4 | | | 5 | | | | | | | | | | | | | 6 | | | | | | |
| 5 | | | | | | | 7 | | | | | | | | | | | | | 8 | | |
| 6 | | | | | | | | | | | 9 | | | | | | | | | | | |
| 7 | | 10 | | | | | | | | | | | | | 11 | | | | | | | |
| 8 | | | | | | 12 | | | | | | | | | | | | | 13 | | | |
| 9 | | | | | | | | | | 14 | | | | | | | | | | | | |
| 10 | 15 | | | | | | | | | | | | | 16 | | | | | | | | |
| 11 | | | | | 17 | | | | | | | | | | | | | 18 | | | | |
| 12 | | | | | | | | | 19 | | | | | | | | | | | | | 20 |
| 13 | | | | | | | | | | | | | 21 | | | | | | | | | |
| 14 | | | | 22 | | | | | | | | | | | | | | | | | | |

ಪಥಕ (15)
ಚಾಕ್ರಿಕ ಪಂಚಮಭಾವದಿಂದ ದ್ವಾವಿಂಶತಿಶ್ರುತಿಗಳ ಉತ್ಪತ್ತಿ

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಶ್ರುತಿ / ಸ್ಥಾಯಿ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
|---|---|---|---|---|---|---|---|---|---|---|---|---|---|---|---|---|---|---|---|---|---|---|
| 1 | | | | * | | | | | | | | | 1 | | | | | | | | | 2 |
| 2 | | | | | | | | | 3 | | | | | | | | | 4 | | | | |
| 3 | | | | | 5 | | | | | | | | | 6 | | | | | | | | |
| 4 | 7 | | | | | | | | | 8 | | | | | | | | | 9 | | | |
| 5 | | | | | | 10 | | | | | | | | | 11 | | | | | | | |
| 6 | | 12 | | | | | | | | | 13 | | | | | | | | | 14 | | |
| 7 | | | | | | | 15 | | | | | | | | | 16 | | | | | | |
| 8 | | | 17 | | | | | | | | | 18 | | | | | | | | | 19 | |
| 9 | | | | | | | | 20 | | | | | | | | | 21 | | | | | |
| 10 | | | | 22 | | | | | | | | | | | | | | | | | | |

ಪಥಕ (16)

ಚಾಕ್ರಿಕ ಮಧ್ಯಮಭಾವದಿಂದ ದ್ವಾವಿಂಶತಿ ಶ್ರುತಿಗಳ ಉತ್ಪತ್ತಿ

### 5. ಗಣಿತಶಾಸ್ತ್ರವಿಧಾನ

ದ್ವಾವಿಂಶತಿ ಶ್ರುತಿಗಳನ್ನು ಲೆಕ್ಕಿಸುವುದರಲ್ಲಿ ವಿವಿಧ ಗಣಿತಶಾಸ್ತ್ರ ವಿಧಾನಗಳು ದೊರೆಯುತ್ತವೆ. ಆದರೆ ಇವುಗಳಲ್ಲೆಲ್ಲಾ ಲಕ್ಷ್ಯಪ್ರಸಿದ್ಧಿ, ಶಾಸ್ತ್ರಮರ್ಯಾದೆ, ಹಾಗೂ ನಮ್ಮ ಸಂಗೀತದ ಅಂತಃಸ್ವರೂಪಗಳನ್ನು ಯಾವುದೂ ಗಣನೆಗೆ ತೆಗೆದುಕೊಂಡಿಲ್ಲ. ಕೇವಲ ಗಣಿತಶಾಸ್ತ್ರದ ತತ್ತ್ವಗಳ ವಿವೇಚನೆಯಲ್ಲಿಯೇ ಇವುಗಳಲ್ಲಿ ಹಲವು ಪರ್ಯವಸಾನವನ್ನು ಹೊಂದಿವೆ.

ಬೊಸಾಂಕ್ವೆಯು ಕ್ರಿ. ಶ. 1877 ರಲ್ಲಿ ಲಂಡನ್ನಿನ ರಾಯಲ್ ಸೊಸೈಟಿಯಲ್ಲಿ ಮಾಡಿದ ಇಂತಹ ಒಂದು ಭಾಷಣವನ್ನಿಲ್ಲಿ ಗಮನಿಸಬಹುದು.[283] ಫೆಟಿಸ್ ಎಂಬ ಫ್ರೆಂಚ್ ವಿದ್ವಾಂಸನು ಬರೆದ Histoire Generale de la Musiqueval ಮತ್ತು ಶೌರೀಂದ್ರಮೋಹನ ಠಾಕೂರನ Hindu Music ಎಂಬ ಗ್ರಂಥಗಳಲ್ಲಿ ಭಾರತೀಯ ಸಂಗೀತವು ಸ್ವರಾಷ್ಟಕದಲ್ಲಿ ಇಪ್ಪತ್ತೆರಡು ಶ್ರುತಿಗಳನ್ನು ಬಳಸುತ್ತದೆಂದೂ ಇವುಗಳು ಷಡ್ಜಗ್ರಾಮದಲ್ಲಿ 'ಚತುಶ್ಚತುಶ್ಚತುಶ್ಚೈವ ಷಡ್ಜಮಧ್ಯಮಪಂಚಮಾಃ' ಎಂದು ಮುಂತಾದ ವಿನಿಯೋಗವನ್ನು ಪಡೆದಿವೆಯೆಂದೂ ಮಾತ್ರ ಇವನು ಬಲ್ಲನು; ಈ ಸಂಗೀತದ ವಿಷಯದಲ್ಲಿಯಾಗಲೀ ಶ್ರುತಿಗಳ ವಿಷಯದಲ್ಲಿಯಾಗಲೀ ಆತನಿಗೆ ಇನ್ನೇನೂ ಗೊತ್ತಿಲ್ಲ. ಶ್ರುತಿಗಳು ಪರಸ್ಪರ ಸಮಾನವಾಗಿ ಬಹುಶಃ ಇಲ್ಲವೆಂದು ಹೇಳಿ ಪ್ರಾರಂಭಿಸಿದವನು ಅವು ಸಮಾನಗಳೆಂಬ ಪ್ರತಿಜ್ಞೆಯನ್ನೇ ಅನುಮಿತಿಯಲ್ಲಿ ಬಳಸಿ ತನ್ನದೊಂದು ಸಿದ್ಧಾಂತವನ್ನು ಸ್ಥಾಪಿಸಿದ್ದಾನೆ. ಷಡ್ಜದಿಂದ ರಿಷಭಕ್ಕೆ ನಾಲ್ಕು ಶ್ರುತಿಗಳು, ರಿಷಭದಿಂದ ಗಾಂಧಾರಕ್ಕೆ ಮೂರು ಶ್ರುತಿಗಳು ಎಂದು ಮುಂತಾಗಿ ಅವನು ತಪ್ಪು ತಿಳಿದಿರುವುದೂ ಅಲ್ಲಿಯೇ ಕಂಡುಬರುತ್ತದೆ.

ಪಾಶ್ಚಾತ್ಯ ಸಂಗೀತದಲ್ಲಿರುವ ಸ್ಥಾನಪಲ್ಲಟಹೊಂದಿದ (equal temperament) ಸ್ವರಸ್ಥಾನಗಳೊಡನೆ ದ್ವಾವಿಂಶತಿ ಶ್ರುತಿಯಿಂದ ಸಿದ್ಧವಾದವುಗಳು ಬಹುವಾಗಿ ಹೊಂದುತ್ತವೆ, ಆದುದರಿಂದ ದ್ವಾವಿಂಶತಿ ಶ್ರುತಿಪಕ್ಷವು

283 Bosanquet, R.H.M., On the Hindu Division of the Octave, with Some Additions to the Theory of Systems of the Higher Orders ; Proceedings of the Royal Society of London, March 1, 1877 to December 20, 1877, Vol. XXV, p. 540 ff.

ಅತ್ಯಂತ ಗ್ರಾಹ್ಯವಾದುದು ಎಂಬುದು ಇವನ ಸಿದ್ಧಾಂತದ ಸಾರಾಂಶ! ಭಾರತೀಯ ಸಂಗೀತದಲ್ಲಿ ತನಗೆ ಬೇಕಾದ ಪಾಶ್ಚಾತ್ಯ ಸಂಗೀತಶಾಸ್ತ್ರ ಪ್ರಮೇಯವನ್ನು ಆರೋಪಿಸುವ ಇವನನ್ನು ಈ ಸಾಹಸಕ್ಕಾಗಿ ಮೆಚ್ಚತಕ್ಕದ್ದೇ ಆದರೂ ಅವನ ಅನುಮಿತಿಗಳನ್ನು ಸರ್ವಥಾ ಒಪ್ಪುವಂತಿಲ್ಲ. ಇವನು ಬಳಸುವುದಾದರೂ ಪಂಚಮದ ಊರ್ಧ್ವಮುಖ ಚಾಕ್ರಿಕ ಚಲನೆಯ ತತ್ತ್ವವನ್ನೇ. ಶ್ರುತಿಗಳ ವಿಷಯದಲ್ಲಿ ಬೊಸಾಂಕ್ವೆಯು ಹೀಗೆ ಪೀಠಿಕೆಯನ್ನು ಹಾಕಿದ್ದಾನೆ:

" Are the Srutis all equal in value? The native writers say nothing about this, but the European ones for the most part suggest that they are not. For instance, an English reviewer recently wrote, "A Sruti is a quarter tone or a third of a tone according to its position in the scale." This appears to be a misapprehension arising from the modern idea that each interval of a tone in the scale is necessarily the same. But the language in which the different forms of the scale is (? are) described distinctly indicates that a note rises or falls when it gains or loses a sruti; consequently we may infer that the srutis are intended to be equal in a general sort of way, probably without any very great precision.[284]

ದ್ವಾವಿಂಶತಿಶ್ರುತಿಪಕ್ಷದಲ್ಲಿ ಅವನಿಗೆ ಅತಿಶಯವಾದ ಅಭಿಮಾನ: ಏಕೆಂದರೆ ಅಂತರಗಾಂಧಾರ ಮತ್ತು ಪಂಚಮ ಭಾವಗಳು ಇದರಲ್ಲಿ ದೊರೆಯುವಷ್ಟು ಶುದ್ಧವಾಗಿ ಮತ್ತೆಲ್ಲಿಯೂ ದೊರೆಯುವುದಿಲ್ಲ; ಇದಕ್ಕೆ ಕಾರಣ ಇದರಲ್ಲಿರುವ ಅತಿ ಕಡಿಮೆ ಸಂಖ್ಯೆಯ ಸ್ವರಗಳು. ಅನೇಕಸ್ವರಶ್ರೇಣಿಯ ಪದ್ಧತಿಯಿರುವ ಪಾಶ್ಚಾತ್ಯ ಸಂಗೀತದಲ್ಲಿ ಬಳಸಬೇಕಾದರೆ ಮಾತ್ರ ಇವುಗಳನ್ನು ಸ್ವಲ್ಪ ಕದಲಿಸಬೇಕಾಗುತ್ತದೆಯಂತೆ; ಅದಿಲ್ಲದ ನಮ್ಮ ಸಂಗೀತಕ್ಕೆ ಇದೇ (ಎಂದರೆ ಅವನು ತಿಳಿದುಕೊಂಡ ದ್ವಾವಿಂಶತಿಶ್ರುತಿ ಪದ್ಧತಿಯೇ) ಅತ್ಯುತ್ಕೃಷ್ಟವಾದುದು:

The system of 22 possesses, then, remarkable properties; it has both fifths and thirds considerably better than any other cyclical system having so low a number of notes. The only objection, as far as the concords go, to its practical employment for our own purposes lies in the fifths; these lie just beyond the limit of what is tolerable in the case of instruments with continuous tones. (The mean tone system is regarded as the extreme limit; this has fifths $\frac{1}{4}$ of a comma flat.) For purposes of the Hindus the system is already so perfect that improvement could hardly be expected.

It is thus wrong to suppose that the system of 22 would need much tempering to bring its concords into tune.[285]

### ಅರ್ಧಸ್ವರಗಳ ಲೆಕ್ಕ

ಇದನ್ನು ಓದಿದರೆ ಬಹಳ ಆಕರ್ಷಕವಾಗಿಯೇ ಕೇಳಿಸುತ್ತದೆ. ಪರದೇಶದ ವಿದ್ವಾಂಸನೊಬ್ಬನು ನಮ್ಮ ಶ್ರುತಿ ಪದ್ಧತಿಯನ್ನು ಮೆಚ್ಚಿದ್ದಾನೆನ್ನುವುದಕ್ಕಿಂತ ಬೇರೆ ಶಿಫಾರಸು ಇನ್ನು ಬೇಕೆ? ಎಂದೇ ನಮ್ಮ ವಿದ್ವಾಂಸರು ಕೂಡಲೇ ಇದನ್ನು ಒಪ್ಪಿಕೊಂಡರು; ಅಷ್ಟೇ ಅಲ್ಲ, ಅವನು ನಮ್ಮ ಸ್ವರಾಷ್ಟಕವು ಚಾಕ್ರಿಕಪದ್ಧತಿಯದೆಂದು ತಪ್ಪು ಹೇಳಿದು

284 *Ibid., extr.*, Tagore, S.M., Hindu Music, p. 322.

285 *Ibid., loc. cit.*, p. 323.

ದನ್ನೂ ಶಿರಸಾವಹಿಸಿ ಅದನ್ನೇ ಉಳಿಸಿ ಬೆಳೆಸಿಕೊಂಡು ಬಂದರು! ನಮ್ಮ ದೇಶದಲ್ಲಿ ಹಿರಿದಾದುದನ್ನು, ಉತ್ಕೃಷ್ಟವಾದುದನ್ನು, ಸುಂದರವಾದುದನ್ನು ನಾವೂ ಮೆಚ್ಚಿ ಹೊಗಳಬೇಕಾದರೆ ಪರಕೀಯರ ಶಿಫಾರಸಿಗಾಗಿ ಕಾಯುತ್ತ ಕುಳಿತುಕೊಳ್ಳುವ ದುರವಸ್ಥೆ ಎಂದಿಗೆ ತಪ್ಪೀತೋ, ಆ ಭಗವಂತನೇ ಬಲ್ಲ! ತನ್ನ ವಾದಕ್ಕೆ ಬೊಸಾಂಕ್ವೆಯು ಬಳಸುವ ಗಣಿತಶಾಸ್ತ್ರ ಪ್ರಮೇಯಗಳು ನಾದವಿಜ್ಞಾನದ ಮಟ್ಟಿಗಂತೂ ಪ್ರಶ್ನಾರ್ಹಗಳೇ ಆಗಿವೆ. ಪಂಚಮ, ಅಂತರಗಾಂಧಾರ ಮುಂತಾದವುಗಳನ್ನು ಲೆಕ್ಕಿಸುವಾಗ ಅವನು ಸ್ವರಾರ್ಧ (semitone) ಗಳ ಮೂಲಕ ಎಣಿಸುತ್ತಾನೆ. ಆದರೆ ಇವುಗಳ ವ್ಯವಕಲನವನ್ನು ಭಾಗಾಹಾರದಿಂದಲೂ ಸಂಕಲನವನ್ನು ಗುಣಾಕಾರದಿಂದಲೂ ಮಾಡುವುದಿಲ್ಲ! ಅವನ ಲೆಕ್ಕದಂತೆ ಶುದ್ಧಪಂಚಮವು 7.01955 ಅಥವಾ ಸುಮಾರು $7\frac{1}{81}$ ಅರ್ಧಸ್ವರಗಳು; ಶುದ್ಧವಾದ ಅಂತರಗಾಂಧಾರವು 4 — 0.13686 ಅಥವಾ ಸುಮಾರು 4 — $\frac{3}{7\cdot3}$ ಅರ್ಧಸ್ವರಗಳು! ಆದುದರಿಂದ ದ್ವಾವಿಂಶತಿಶ್ರುತಿ ಪದ್ಧತಿಯಲ್ಲಿ ಒಟ್ಟು ಹನ್ನೆರಡು ಸ್ವರಾರ್ಧಗಳಿರುವುದರಿಂದ ಒಂದು ಶ್ರುತಿಗೆ 12/22 ರಷ್ಟು ಪ್ರಮಾಣವಾಯಿತು; ಆದುದರಿಂದ x ಶ್ರುತಿಗಳ ಪ್ರಮಾಣವು (12/22) x ಅಥವಾ (6/11) x ಅರ್ಧಸ್ವರಗಳಾಗುತ್ತವೆ. ಅಂತರಗಾಂಧಾರಕ್ಕೆ (ಷಡ್ಜದಿಂದ) ಏಳು ಶ್ರುತಿಗಳಾದುದರಿಂದ (x=7) ಅದರ ಪ್ರಮಾಣವು $6/11 \times 7 = 3{\cdot}8182$ ಅರ್ಧಸ್ವರಗಳಷ್ಟು. ಪಂಚಮಕ್ಕೆ ಹದಿಮೂರು ಶ್ರುತಿಗಳಾದುದರಿಂದ $6/11 \times 13 = 7{\cdot}0909$ ಅರ್ಧ ಸ್ವರಗಳಷ್ಟು ಪ್ರಮಾಣ. ಆದರೆ ಅಂತರಗಾಂಧಾರಕ್ಕೆ ನಿಕರವಾದ ಪ್ರಮಾಣವು 3·8631 ಅರ್ಧ ಸ್ವರಗಳಷ್ಟು; ಆದುದರಿಂದ ದ್ವಾವಿಂಶತಿಶ್ರುತಿ ಪದ್ಧತಿಯ ಅಂತರಗಾಂಧಾರವು ಅದರ ಶುದ್ಧಸ್ಥಾನದಿಂದ 0·0449 ಅರ್ಧ ಸ್ವರದಷ್ಟು ಅಥವಾ ಒಂದು ಕಾಮಾದ (ಎಂದರೆ $81/80 = 0{\cdot}21506$ ಎಂಬ ಪ್ರಮಾಣದ *) ಪಂಚಮಾಂಶದಷ್ಟು ಕಡಿಮೆ. ಹಾಗೆಯೇ ಪಂಚಮದ ನಿಕರವಾದ ಪ್ರಮಾಣವು 7·0195 ಅರ್ಧಸ್ವರಗಳಷ್ಟು. ಆದುದರಿಂದ ಅದು ತನ್ನ ಶುದ್ಧ ಸ್ಥಾನಕ್ಕಿಂತ $7{\cdot}0909 - 7{\cdot}0195 = 0{\cdot}0714$ ರಷ್ಟು, ಎಂದರೆ ಕಾಮಾದ ಸುಮಾರು ತೃತೀಯಾಂಶದಷ್ಟು ಹೆಚ್ಚಾಗಿದೆ. ಇದೇ ರೀತಿಯಲ್ಲಿ ಮುಂದುವರೆದು ಬೊಸಾಂಕ್ವೆಯು ಎರಡು, ಮೂರು, ನಾಲ್ಕು, ಆರು ಮತ್ತು ಒಂದು ಶ್ರುತಿಗಳ ಪ್ರಮಾಣಗಳಿಗೆ ಹೀಗೆ ಒಂದು ಪಥಕವನ್ನು ಸಿದ್ಧಪಡಿಸುತ್ತಾನೆ:

**System of 22** [286]

| No. | Interval | Difference of | Units | Interval | Exact Interval | ಭಾರತೀಯ ಸಂಗೀತದ ಸ್ವರಪ್ರಮಾಣಗಳು |
|---|---|---|---|---|---|---|
| 1 | Fourth | Fifth and octave | 2 | 4.9091 | 4.9805 | ಶುದ್ಧ ಮಧ್ಯಮ |
| 2 | Major tone | Fourth and fifth | 4 | 2.1818 | 2.0391 | ಚತುಃಶ್ರುತಿ |
| 3 | Minor tone | Third and major tone | 3 | 1.6363 | 1.8240 | ತ್ರಿಶ್ರುತಿ |
| 4 | Major semitone | Third and fourth | 2 | 1.0909 | 1.1174 | ದ್ವಿಶ್ರುತಿ |
| 5 | Minor third | Fifth and third | 6 | 3.2727 | 3.1564 | ಸಾಧಾರಣಗಾಂಧಾರ |
| 6 | Minor semitone | Major third and minor third | 1 | 0.5454 | 0.7067 | ಏಕಶ್ರುತಿ |

ಪಥಕ (17) ದ್ವಾವಿಂಶತಿಶ್ರುತಿ ಪದ್ಧತಿ ಮತ್ತು ಸ್ವರಪ್ರಮಾಣಗಳು: ಬೊಸಾಂಕ್ವೆ

286 *Ibid.*, *loc. cit.*, p. 324. * ಬೊಸಾಂಕ್ವೆಯು ಈ ಉತ್ತರವನ್ನು ಹೇಗೆ ಪಡೆದನೋ ತಿಳಿಯದು!

ಇದರಲ್ಲಿ ಶುದ್ಧಮಧ್ಯಮಭಾವಕ್ಕೆ ಎರಡು ಶ್ರುತಿಗಳೆಂದು ತಪ್ಪಿದೆ. ಇದು ಅಚ್ಚಿನ ದೋಷ. ಆದುದರಿಂದ ಬೊಸಾಂಕ್ವೆಯು ಇದಕ್ಕೆ ಕೊಡುವ 2 ಶ್ರುತಿ ಎಂಬುದನ್ನು 9 ಎಂದು ತಿದ್ದಿಕೊಳ್ಳಬೇಕು. ಈ ಸ್ವರಗಳು ಪಾಶ್ಚಾತ್ಯ ಸಂಗೀತದಿಂದ ಭಿನ್ನವಾದವುಗಳೆಂದು ಅವನೇ ಗತ್ಯಂತರವಿಲ್ಲದೆ ಒಪ್ಪಿಕೊಳ್ಳಬೇಕಾಯಿತು; ಚಾಕ್ರಿಕ ಪಂಚಮದ ಗತಿಯಿಂದ ಅವನೇ ಪಡೆದು ಭಾರತೀಯ ಸಂಗೀತದವುಗಳೆಂದು ತಿಳಿದ ಸ್ವರಗಳೇ ಹೀಗಾದಮೇಲೆ, ನಿಜವಾದ ಭಾರತೀಯ ಸಂಗೀತದ ಸ್ವರಗಳು ಭಿನ್ನವಾಗಿರುವಲ್ಲಿ ಆಶ್ಚರ್ಯವಾಗಲೀ ಸಂದೇಹವಾಗಲೀ ಏನು!

But although the consonance error of fifth and third is small, it is far otherwise with the deviations of other intervals of the scale from the values to which Europeans are accustomed.[286]

### ಗಣಿತಶಾಸ್ತ್ರಸಿದ್ಧಾಂತ

ಇನ್ನು, ದ್ವಾವಿಂಶತಿ ಶ್ರುತಿ ಪದ್ಧತಿಗೆ ಅವನು ಒದಗಿಸುವ ಗಣಿತಶಾಸ್ತ್ರ ಸಿದ್ಧಾಂತವನ್ನು ಪರೀಕ್ಷಿಸಬಹುದು: ಪಾಶ್ಚಾತ್ಯ ಸಂಗೀತದ ಸ್ವರಾಷ್ಟಕದಲ್ಲಿ ಸಮಾನಪಲ್ಲಟನ ತತ್ತ್ವವು (equal temperament) ಪ್ರಸಿದ್ಧವಾಗಿದೆಯಷ್ಟೆ. ಇವುಗಳಿಗೆ ಹೋಲಿಸಿದಾಗ ಯಾವುದೇ ಸಂಗೀತಪದ್ಧತಿಯಲ್ಲಿರುವ ಸ್ವರಗಳ ಸ್ಥಾನಗಳೇನು ಎಂಬುದೇ ಈ ಸಿದ್ಧಾಂತವು ಬಿಡಿಸಲಿರುವ ಸಮಸ್ಯೆ. ಸ್ವರಾಷ್ಟಕಕ್ಕೆ ಹನ್ನೆರಡು ಸ್ವರಾರ್ಧಗಳಂತೆ ಏಳು ಸ್ಥಾಯಿಗಳಿಗೆ ಒಟ್ಟು 84 ಸ್ವರಾರ್ಧಗಳಾಗುತ್ತವೆ. ಆದರೆ ಶುದ್ಧಪಂಚಮ ಭಾವವು $7\frac{1}{51}$ ಸ್ವರಾರ್ಧಗಳಷ್ಟಿರುವುದರಿಂದ ಇಂತಹ ಹನ್ನೆರಡು ಪಂಚಮಗಳ ವಿಸ್ತಾರವು $12 \times 7\frac{1}{51} = 84\frac{12}{51}$ ರಷ್ಟಾಗುತ್ತದೆ. ಹೀಗೆ ಏಳು ಅಷ್ಟಮಸ್ವರಗಳ ಮತ್ತು ಹನ್ನೆರಡು ಪಂಚಮಗಳ ವಿಸ್ತಾರಗಳು ಸಮನಾಗಿಲ್ಲ; ಇದಕ್ಕೆ ಕಾರಣವು ಸಮಾನಪಲ್ಲಟನತತ್ತ್ವ. ಇಲ್ಲಿ ಇವುಗಳ ವ್ಯತ್ಯಾಸವು $\frac{12}{51}$ ಸ್ವರಾರ್ಧದಷ್ಟು. ಯಾವುದೇ ಸಂಗೀತಪದ್ಧತಿಯಲ್ಲಿ ಈ ಬಗೆಯ (ಆದರೆ ಬೇರೆ ಪ್ರಮಾಣದ) ವ್ಯತ್ಯಾಸವಿದ್ದೇ ಇರುತ್ತದೆ.

ಹೀಗೆ, ಅಷ್ಟಮಸ್ವರದ ಪ್ರಮಾಣವು 2 : 1 ಎಂದೂ ಪಂಚಮದ ಪ್ರಮಾಣವು 3 : 2 ಎಂದೂ ಇರುವುದರಿಂದ ಏಳು ಅಷ್ಟಮಸ್ವರಗಳಿಗೆ $2^7=128$ ಎಂದೂ ಹನ್ನೆರಡು ಪಂಚಮಗಳ ವಿಸ್ತಾರಕ್ಕೆ $(3/2)^{12}=129{\cdot}5046$ ಎಂದೂ ಪ್ರಮಾಣಗಳು ಲಭಿಸುತ್ತವೆ. ಇವುಗಳ ವ್ಯತ್ಯಾಸವು 129·5046/128 ಎಂದು ಕಳೆದರೆ 1·0117 : 1 ಎಂದೂ, 129·5046 – 128 ಎಂದು ಕಳೆದರೆ 1·5046, ಎಂದರೆ ಶೇಕಡಾ 1·176 ರಷ್ಟು ಆಗುತ್ತದೆ. ಈ ಅಂತರವನ್ನು ಎಷ್ಟು ಸಮಪಾಲುಗಳಾಗಿ ವಿಭಾಗಿಸಿ ಅವುಗಳಲ್ಲಿ ಒಂದನ್ನು ಸ್ವರಾಷ್ಟಕದ ಮೂಲದ್ರವ್ಯವಾದ ಕನಿಷ್ಠಾಂತರ ಪ್ರಮಾಣವೆಂದು ಇಟ್ಟುಕೊಂಡರೆ ಆಯಾ ಸಂಗೀತಪದ್ಧತಿಯು ಅಷ್ಟನೆಯ ವರ್ಗಕ್ಕೆ ಸೇರಿದ್ದೆಂಬ ಸಂಜ್ಞೆಯನ್ನು ಬೊಸಾಂಕ್ವೆ ಇಟ್ಟುಕೊಳ್ಳುತ್ತಾನೆ. ಹೀಗೆ ಈ ಅಂತರವು ಮೂರು ಪಾಲುಗಳಾದರೆ ಅದು ಮೂರನೆಯ ವರ್ಗದ ಪದ್ಧತಿ; 'r' ಸಮಪಾಲುಗಳಾದರೆ 'r' ವರ್ಗದ್ದು, ಇತ್ಯಾದಿ. ಹೀಗೆ ಉಂಟಾದ ವಿವಿಧ ವರ್ಗಗಳಲ್ಲಿ ಪ್ರತಿಯೊಂದರಲ್ಲಿಯೂ ಒಟ್ಟು ಅಂತರಗಳು ಹನ್ನೆರಡರಷ್ಟು ಹೆಚ್ಚುತ್ತಾ ಬರುತ್ತವೆ; ದ್ವಾವಿಂಶತಿ ಶ್ರುತಿಪದ್ಧತಿಯು ಇದರಲ್ಲಿ ಎರಡನೆಯ ವರ್ಗಕ್ಕೆ ಸೇರಿದುದು. ಏಕೆಂದರೆ ಇದರಲ್ಲಿ ಹದಿಮೂರು ಪಂಚಮಗಳ ವಿಸ್ತಾರಕ್ಕೂ ಏಳು ಅಷ್ಟಮಸ್ವರಗಳ ವಿಸ್ತಾರಕ್ಕೂ ಎರಡು ಶ್ರುತಿಗಳಷ್ಟು ಅಂತರವಿದೆ (ಪಥಕ 13, ಪು. 414). ಮೊದಲನೆಯ ಮೂರು ವರ್ಗಗಳಲ್ಲಿ ಉಂಟಾಗುವ ಈ 'ಶ್ರುತಿ'ಗಳನ್ನು ಬೊಸಾಂಕ್ವೆ ಹೀಗೆ ಕೊಡುತ್ತಾನೆ.[287]

ಪ್ರಥಮವರ್ಗ : 17, 29, 41, 53
ದ್ವಿತೀಯವರ್ಗ : 22, 34, 46, ....118
ತೃತೀಯವರ್ಗ : 15, 27, 39, —

287 *Ibid.*, *loc. cit.* p. 326.

**3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ**

ಪಂಚಮಭಾವದ ಚಾಕ್ರಿಕ ಚಲನೆಯಿಂದ ದ್ವಾವಿಂಶತಿ ಶ್ರುತಿಪದ್ಧತಿಯು ದ್ವಿತೀಯ ವರ್ಗದ್ದೆಂದು ಅವನು ಈ ಪಥಕದಿಂದ ತೋರಿಸುತ್ತಾನೆ :[288] ಈ ಪಥಕದಲ್ಲಿ ಈ ಕೆಳಗಿನ ಸವಿಾಕರಣಗಳನ್ನು ಉತ್ತರೋತ್ತರವಾದ ಪಂಚಮಭಾವಗಳಿಂದ ಪಡೆಯಲಾಗಿದೆ :

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 2 | | | | | | | | | | | | 2 |
| | | | | | | | | | | | 11 | |
| | | | | | | | | | | 20 | | |
| | | | | | | | | | 7 | | | |
| | | | | | | | | 16 | | | | |
| | | | | | | | 3 | | | | | |
| 1 | | | | | | 12 | | | | | | 1 |
| | | | | | 21 | | | | | | | |
| | | | | 8 | | | | | | | | |
| | | | 17 | | | | | | | | | |
| | | 4 | | | | | | | | | | |
| | 13 | | | | | | | | | | | |
| 0 | | | | | | | | | | | | 0 |

1 = ಷಡ್ಜ
2 = ಪಂಚಮ
3 = ಪಂಚಶ್ರುತಿ ರಿಷಭ
4 = ಪಂಚಶ್ರುತಿ ಧೈವತ
5 = ಅಂತರಗಾಂಧಾರ
6 = ಕಾಕಲೀ ನಿಷಾದ
7 = ಪ್ರತಿಮಧ್ಯಮ
8 = ಶುದ್ಧ ರಿಷಭ
9 = ಶುದ್ಧ ಧೈವತ
10 = ಸಾಧಾರಣಗಾಂಧಾರ
11 = ಕೈಶಿಕಿ ನಿಷಾದ
12 = ಶುದ್ಧ ಮಧ್ಯಮ
13 = ಅಷ್ಟಮಸ್ವರ (ಪ್ರಥಮಾವರ್ತಕ)

ಪಥಕ (18)

ಪಂಚಮಭಾವದ ಚಾಕ್ರಿಕ ಚಲನೆ : ಬೊಸಾಂಕ್ವೆ

ಏಳು ಅಷ್ಟಮ ಸ್ವರಗಳಿಗೂ ಹನ್ನೆರಡು ಪಂಚಮಗಳಿಗೂ ಇರುವ ಅಂತರವನ್ನು 'r' ಶ್ರುತಿಗಳಾಗಿ ವಿಭಾಗಿಸಿದರೆ 'r' ವರ್ಗದ ಸಂಗೀತಪದ್ಧತಿಯು ಉಂಟಾಗುವುದಷ್ಟೆ; ಈಗ ಇಂತಹ 'r' ಸಂಖ್ಯೆಯ ಪಂಚಮ ಚಕ್ರಗಳನ್ನು ಪ್ರತಿಯೊಂದು ಚಕ್ರದಲ್ಲಿರುವ ಸ್ವರವೂ ಹಿಂದಿನದರ ಆಯಾ ಸ್ವರಕ್ಕಿಂತ ಒಂದು 'ಶ್ರುತಿ' ಯಷ್ಟು ಅಂತರದಲ್ಲಿರುವಂತೆ ಒಂದರ ಪಕ್ಕದಲ್ಲಿ ಒಂದರಂತೆ ಜೋಡಿಸಬೇಕು; ಇದರಲ್ಲಿ ಅತ್ಯಂತ ಉಚ್ಚಶ್ರೇಣಿಯಲ್ಲಿನ ಮೊದಲನೆಯ ಸ್ವರದ ಕೆಳಗೆ ಎಷ್ಟನೆಯ ಶ್ರೇಣಿಯಲ್ಲಿ ಅಂತರಗಾಂಧಾರವು ದೊರೆಯುತ್ತದೆಯೋ, ಅಷ್ಟನೆಯ ಜಾತಿ (class) ಯದೆಂದು ಆಯಾ ಸಂಗೀತಪದ್ಧತಿಯನ್ನು ತಿಳಿಯಬೇಕು. ಈ ಲೆಕ್ಕದಲ್ಲಿ ದ್ವಾವಿಂಶತಿಶ್ರುತಿಪದ್ಧತಿಯು ದ್ವಿತೀಯ ವರ್ಗದ ಪ್ರಥಮಜಾತಿಗೆ ಸೇರುತ್ತದೆ; x ಶ್ರೇಣಿಗಳಷ್ಟು ಕೆಳಗೆ ಅಂತರಗಾಂಧಾರವು ದೊರೆತರೆ ಆ ಸಂಗೀತಪದ್ಧತಿಯು ಆಯಾ ವರ್ಗದಲ್ಲಿ x ನೆಯ ಜಾತಿಗೆ ಸೇರಿದ್ದೆಂದು ತಿಳಿಯಬೇಕು.

ಈ ಪದ್ಧತಿಯನ್ನು ಬೊಸಾಂಕ್ವೆ ಮೂಲತಃ ಹೇಳಿದ್ದು ಪಾಶ್ಚಾತ್ಯ ಸಂಗೀತದಲ್ಲಿ ಅನೇಕ ಸ್ವರಶ್ರೇಣಿಯ (polyphonic) ತತ್ತ್ವಕ್ಕೆ ಲಕ್ಷ್ಯದಲ್ಲಿ ಅನುಕೂಲಿಸುವಂತಹ ಅಂತರಗಾಂಧಾರ, ಪಂಚಮಗಳನ್ನು ಪಡೆಯು ವುದಕ್ಕಾಗಿ. ಪಂಚಮದ ಚಾಕ್ರಿಕ ಗತಿಯಲ್ಲಿ ಅಂತರಗಾಂಧಾರವು ಐದನೆಯ ಪಂಚಮವೂ ಅಧೋಗತಿಯ ಪಂಚಮ ಭಾವದಲ್ಲಿ ನಡೆದಾಗ ಒಂಬತ್ತನೆಯದೂ ಹೌದಷ್ಟೆ. ಇದು ಶಾಸ್ತ್ರೋಕ್ತ ಶುದ್ಧಸ್ಥಾನದಲ್ಲಿಯೇ ಇದ್ದುಬಿಟ್ಟರೆ ಯಾವ ತೊಡಕೂ ಇರದು; ಎಂದರೆ ಆಧಾರಸ್ವರದಿಂದ ನಾಲ್ಕು ಪಂಚಮಗಳಷ್ಟು ಏರಿ ನಡೆದರೆ ಇಂತಹ

288 *Ibid., loc. cit.*, p. 327.

ಅಂತರಗಾಂಧಾರವು ದೊರೆತರೆ ಆಯಾ ಸಂಗೀತ ಪದ್ಧತಿಯು ಅತ್ಯಂತ ಸರಳವಾದುದೆಂದು ತಿಳಿಯಬೇಕು. ಉದಾಹರಣೆಗೆ, ದ್ವಾವಿಂಶತಿಶ್ರುತಿಪಕ್ಷದಲ್ಲಿ ನಾಲ್ಕು ಪಂಚಮಗಳನ್ನು ಏರಿಹೋದರೆ ದೊರೆಯುವ ಅಂತರಗಾಂಧಾರವು ಈ ರೀತಿ ಶಾಸ್ತ್ರೋಕ್ತಸ್ಥಾನದಲ್ಲಿರುವುದಿಲ್ಲ ; ಒಂದು ಶ್ರುತಿಯಷ್ಟು ಅಧಿಕವಾಗಿರುತ್ತದೆ (ಪಥಕ 18). ಹೀಗೆ ಬೇರೆ ಬೇರೆ ಪ್ರಮಾಣಗಳಲ್ಲಿ ಹುಟ್ಟುವ ಅಂತರಗಾಂಧಾರಗಳ ಸ್ವಭಾವವನ್ನು ತಿಳಿಯಲು ಬೊಸಾಂಕ್ವೆ ಎರಡು ಗಣಿತಸೂತ್ರಗಳನ್ನು ನಿರ್ಮಿಸಿಕೊಳ್ಳುತ್ತಾನೆ. 'r' ವರ್ಗದ ಒಂದು ಜಾತಿಯಲ್ಲಿ 'n' 'ಶ್ರುತಿ'ಗಳಿವೆಯೆಂದು ಇಟ್ಟುಕೊಂಡರೆ, 'r' ಪ್ರಮಾಣದಷ್ಟು ಅಂತರವು 'n' ಶ್ರುತಿಗಳಿಂದಾಗುತ್ತದೆ. ಆದುದರಿಂದ ಒಂದು ಪಂಚಮದ ವಿಸ್ತಾರಕ್ಕೆ ಈ ಅಂತರವು $r/n$ ಎಂಬಷ್ಟು ಆಗುತ್ತದೆ. ಅಂತರಗಾಂಧಾರವು ನಾಲ್ಕು ಪಂಚಮಗಳ ಉತ್ತರೋತ್ತರ ಗತಿಯಿಂದ ಲಭಿಸುತ್ತದೆ. ಆದುದರಿಂದ ಈ ಅಂತರಗಾಂಧಾರವು ತನ್ನ ಶಾಸ್ತ್ರೋಕ್ತಸ್ಥಾನದಿಂದ $4r/n$ ನಷ್ಟು ವ್ಯತ್ಯಾಸವಾಗಿರುತ್ತದೆ.

'r' ವರ್ಗದ 'x' ಜಾತಿಯ ಪದ್ಧತಿಯಲ್ಲಿ ಶುದ್ಧವಾದ ಅಂತರಗಾಂಧಾರವು 'x' ಶ್ರುತಿಗಳಷ್ಟು ನೀಚವಾಗಿರುತ್ತದೆಯೆಂದು ಈಗಾಗಲೇ ಸೂಚಿಸಿದೆ; ಉದಾಹರಣೆಗೆ ದ್ವಿತೀಯ ವರ್ಗದ $(r=2)$ ಪ್ರಥಮಜಾತಿಗೆ $(x=1)$ ಸೇರಿದ ದ್ವಾವಿಂಶತಿ ಶ್ರುತಿಪದ್ಧತಿಯಲ್ಲಿ ಅಂತರಗಾಂಧಾರವು ಶಾಸ್ತ್ರೋಕ್ತವಾಗಿ (ಷಡ್ಜದಿಂದ) ಏಳನೆಯ ಶ್ರುತಿಯಲ್ಲಿರಬೇಕಾದುದು ಎಂಟನೆಯ ಶ್ರುತಿಯಲ್ಲಿರುತ್ತದೆ ; ಆದುದರಿಂದ ಅಂತರಗಾಂಧಾರದ ಒಟ್ಟು ವ್ಯತ್ಯಾಸವು $4r/n - x.12/n = -4\,(3x - r)/n$ ಎಂದಾಗುತ್ತದೆ. ಆದರೆ ಶುದ್ಧವಾದ ಅಂತರಗಾರವು $-0.13686$ ಅಥವಾ $-1/7{\cdot}3$ ರಷ್ಟು ವ್ಯತ್ಯಾಸವಾಗಿರುತ್ತದೆಂಬುದನ್ನು ಸ್ಮರಿಸಿದರೆ

$$4/(3x - r)/n = -1/7.3$$

$$\therefore \; -(3x - r)/n = -1/29.2 \text{ ಅಥವಾ } 3x - r = n/29{\cdot}2$$

ದ್ವಾವಿಂಶತಿಶ್ರುತಿಪಕ್ಷದ $r=2, x=1$ ಎಂಬುದನ್ನು ಇಲ್ಲಿ ಇಟ್ಟುಕೊಂಡರೆ $-4(3x-r)/n$ ಎಂಬಲ್ಲಿ $-4(3-2)/n = -4/n$ ಎಂದಷ್ಟೇ ಉಳಿಯುತ್ತದೆ ; $n = 22$ ಆದರೆ ಈ ಪ್ರಮಾಣವು $-4/22$ ಎಂದಾಗುತ್ತದೆ. $n = 34, r = 2, x = 1$ ಆದರೆ ಇದರಲ್ಲಿ ಅಂತರಗಾಂಧಾರ ಪಂಚಮಗಳು ಪಾಶ್ಚಾತ್ಯ ಸಂಗೀತಕ್ಕೆ ಅತ್ಯುತ್ತಮವಾದವುಗಳು. ಇತರ ಪದ್ಧತಿಗಳಲ್ಲಿ ಬೇರೆ ಬೇರೆ ಸಂಖ್ಯೆಯ 'ಶ್ರುತಿ'ಗಳು ಹೀಗೆಯೇ ಲಭಿಸುತ್ತವೆ ; ಹೀಗೆ ತೃತೀಯ ವರ್ಗದ ದ್ವಿತೀಯ ಜಾತಿಯಲ್ಲಿ 87 'ಶ್ರುತಿ'ಗಳೂ, ಚತುರ್ಥವರ್ಗದ ದ್ವಿತೀಯ ಜಾತಿಯಲ್ಲಿ 56 'ಶ್ರುತಿ'ಗಳೂ ಲಭಿಸುತ್ತವೆ. ಆದರೆ ಇವುಗಳಿಂದ ಸಂಗೀತಕ್ಕೆ ವಿಶೇಷ ಪ್ರಯೋಜನವೇನೂ ಇಲ್ಲವೆಂದು ಬೊಸಾಂಕ್ವೆಯೇ ಹೇಳುತ್ತಾನೆ.

### ದೋಷಗಳು

ಆದರೆ ಈ ವಿಧಾನವು ಭಾರತೀಯ ಸಂಗೀತಶಾಸ್ತ್ರದಲ್ಲಿ ಅತ್ಯಂತ ಅನುಪಪನ್ನವಾದುದು. ಏಕೆಂದರೆ

1) ನಾದಪ್ರಮಾಣಗಳ ಸಂಕಲನವನ್ನು ಗುಣಾಕಾರದಿಂದಲೂ, ವ್ಯವಕಲನವನ್ನು ಭಾಗಾಹಾರದಿಂದಲೂ ಮಾಡದೆ ಕೇವಲ ಸಂಕಲನ ವ್ಯವಕಲನಗಳಿಂದಲೇ ಮಾಡಲಾಗಿದೆ.

2) ಚಾಕ್ರಿಕ ಪಂಚಮಗತಿಯನ್ನು ಈ ವಿಧಾನವು ಅವಲಂಬಿಸಿದೆ. ಹೀಗೆ ಮಾಡಲು ನಮ್ಮ ಪ್ರಾಚೀನಾ-ಚಾರ್ಯರ ಮತದಲ್ಲಿಯಾಗಲೀ ಲಕ್ಷ್ಯಪ್ರಸಿದ್ಧ ಸ್ವರವ್ಯವಸ್ಥೆಯಲ್ಲಿಯಾಗಲೀ ಸ್ವಲ್ಪವೂ ಎಡೆಯಿಲ್ಲ.

3) ಪಾಶ್ಚಾತ್ಯ ಸಂಗೀತದಲ್ಲಿ ಸ್ವರವ್ಯವಸ್ಥೆಯ ಸ್ವರಪಲ್ಲಟನ ತತ್ತ್ವಕ್ಕೆ ಉಪಷ್ಟಂಭಕವಾಗಿ, ಅಥವಾ ಅದರ ಅನಿವಾರ್ಯ ಪ್ರಯೋಗದಿಂದ ಉದ್ಭವಿಸುವ ತೊಂದರೆಗಳನ್ನು ನಿವಾರಿಸಲು ಈ ವಿಧಾನವು ಹುಟ್ಟಿಕೊಂಡಿದೆಯೇ ಹೊರತು ಭಾರತೀಯ ಸಂಗೀತಶಾಸ್ತ್ರದ ಯಾವ ಪ್ರಮೇಯವನ್ನೂ ಒಳಗೊಂಡಿಲ್ಲ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

4) ದ್ವಾವಿಂಶತಿ ಶ್ರುತಿಸ್ಥಾನಗಳನ್ನು ಪಡೆಯದೆ ಕೇವಲ ಹನ್ನೆರಡು ಸ್ವರಸ್ಥಾನಗಳ ಪ್ರಾಪ್ತಿಗೆ ಮಾತ್ರ ಇದರ ಪ್ರಯೋಜನವು ಸೀಮಿತವಾಗಿದೆ.

5) ಅನ್ವಿತ ಮೌಲ್ಯಗಳಿಂದ ಶ್ರುತಿಪ್ರಮಾಣಗಳನ್ನು ನಿರ್ಧರಿಸಲು ತೊಡಗುತ್ತದೆ.

6) ಭಾರತೀಯ ಸಂಗೀತಶಾಸ್ತ್ರದಲ್ಲಿ ಪ್ರಾಚೀನರು ಶ್ರುತಿಗೆ ಹೇಳಿದ ಧ್ವನ್ಯಂತರಾಶ್ರುತಿ, ನೈರಂತರ್ಯ, ಕಲಾ, ಕಾಲ ಮುಂತಾದ ಲಕ್ಷಣಗಳನ್ನೂ, ಊರ್ಧ್ವಸ್ಪರ್ಶ, ವಿಶಿಷ್ಟ ಸಂಸ್ಕಾರಪ್ರದಾನ ಮುಂತಾದ ಕ್ರಿಯೆಗಳನ್ನೂ, ವಾದೀತ್ವಭಗ್ನತಾ ಪರಿಣಾಮ ಮೊದಲಾದ ತತ್ತ್ವಗಳನ್ನೂ ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.

7) ಇದು ಹೇಳುವ ಅಂತರಗಾಂಧಾರವನ್ನು ಆಧರಿಸಿದ ಗ್ರಹಭೇದದಿಂದ ಸ್ವರಾಷ್ಟಕದ ಸ್ವರಸ್ಥಾನಗಳನ್ನೂ ದ್ವಾವಿಂಶತಿ ಶ್ರುತಿಗಳನ್ನೂ ಪಡೆಯುವುದು ತರ್ಕ, ಶಾಸ್ತ್ರ, ಲಕ್ಷ್ಯಪ್ರಸಿದ್ಧಿಗಳೆಲ್ಲಕ್ಕೂ ಹೊರತಾಗಿದೆ.

## VII. ಶ್ರುತಿವಿಷಯಕವಾದ ತಪ್ಪು ಕಲ್ಪನೆಗಳು

ಆಧುನಿಕ ಸಂಗೀತಶಾಸ್ತ್ರಜ್ಞರಲ್ಲಿ ದ್ವಾವಿಂಶತಿ ಶ್ರುತಿಗಳ ಬಗೆಗೆ ಚರ್ಚೆ ನಡೆಸುವ ಆಸಕ್ತಿ, ಪ್ರವೃತ್ತಿಗಳು ವಿಪುಲವಾಗಿ ಬೆಳೆಯುತ್ತಿವೆ. ಆದರೆ ಈ ಅಭ್ಯಾಸವೆಲ್ಲಾ ಈ ಶ್ರುತಿಗಳ ಭೌತಿಕಪ್ರಮಾಣವನ್ನು ನಿರ್ಧರಿಸುವುದಕ್ಕಾಗಿ ಮೀಸಲಾಗಿದೆಯೇ ಹೊರತು ಅವುಗಳ ಸ್ವರೂಪ, ಸ್ವಭಾವ, ಕರ್ತವ್ಯ ಮೊದಲಾದವುಗಳನ್ನು ಕುರಿತು ಅದು ಚಕಾರವನ್ನೂ ಎತ್ತುವುದಿಲ್ಲ. ಈ ಒಂದೇ ವಿಷಯದಲ್ಲಿ ಕಳೆದ ಅರ್ಧಶತಮಾನದಲ್ಲಿ ಬೃಹತ್ತಾದ ಸಾಹಿತ್ಯರಚನೆಯಾಗಿದೆ. ಕಳೆದ ಶತಮಾನದ ಅಂತ್ಯಭಾಗದಿಂದ ಪಾಶ್ಚಾತ್ಯರು ಶ್ರುತಿಗಳ ವಿಷಯದಲ್ಲಿ ವಿವೇಚನೆ ನಡೆಸಲು ತೊಡಗಿದ್ದು ಭಾರತೀಯ ವಿದ್ವಾಂಸರಿಗೆ ಸ್ಫೂರ್ತಿಯನ್ನೂ ಪ್ರೇರಣೆಯನ್ನೂ ಕೊಟ್ಟದೆಯೆಂದು ತಿಳಿದರೂ ತಪ್ಪಲ್ಲ. ಸುಮಾರು 80 ವರ್ಷಗಳ ಕಾಲದಲ್ಲಿ ಸುಮಾರು ನೂರು ವಿದ್ವಾಂಸರಾದರೂ ಈ ವಿವೇಚನೆಯನ್ನು ನಡೆಸಿದ್ದಾರೆ; ಆದರೂ ಶ್ರುತಿಗಳ ಭೌತಿಕ ಪ್ರಮಾಣಗಳ ವಿಷಯದಲ್ಲಿ ಒಮ್ಮತವಿಲ್ಲ; ತರಪೇತು, ಅರ್ಹತೆ ಮುಂತಾದವುಗಳಿರಲಿ, ಇಲ್ಲದಿರಲಿ, ಈ ವಾದ ಭೂಮಿಗೆ ಧುಮುಕಿ ಇತರ ವಿದ್ವಾಂಸರೊಡನೆ ಸೆಣಸಿ ಮಲ್ಲಯುದ್ಧದಲ್ಲಿ ತಮ್ಮ ಶೌರ್ಯವನ್ನು ತೋರಿಸಿಕೊಂಡವರೆಷ್ಟು ಮಂದಿಯೋ, ಮೈ ಕೈ ನೋಯಿಸಿಕೊಂಡು ಹಿಂತಿರುಗಿದವರೂ ಅಷ್ಟೇ ಇದ್ದಾರೆ. ಆದರೆ ಈ ಅಖಾಡಾದಿಂದ ಕೇವಲ ಶೌರ್ಯಪ್ರದರ್ಶನ, ಬೌದ್ಧಿಕ ಕುಶಲತೆ,ವಾದ ಸಾಮರ್ಥ್ಯಗಳು ಬೆಳಕಿಗೆ ಬರಲು ಪ್ರಯೋಜನವಾಯಿತೇ ಹೊರತು ಶಾಸ್ತ್ರಕ್ಕಾಗಲೀ ಕಲೆಗಾಗಲೀ ಕಿಂಚಿತ್ತೂ ಉಪಯೋಗವಾಗಲಿಲ್ಲ; ಹಾಗೆ ನೋಡಿದರೆ ಶಾಸ್ತ್ರಾಭ್ಯಾಸದ ಪ್ರಗತಿಗೆ ಈ ಬಗೆಯ ಅಭ್ಯಾಸದಿಂದ ಸ್ವಲ್ಪ ಅಡ್ಡಿಯೇ ಆಯಿತು; ಏಕೆಂದರೆ ಶ್ರುತಿಯನ್ನು ಕುರಿತ ಈ ಕೋಲಾಹಲದಲ್ಲಿ ಉಳಿದ ಅಂಶಗಳೆಡೆಗೆ ಗಮನವೇ ಹರಿಯಲಿಲ್ಲ. ದಿಗ್ಭ್ರಾಂತಗೊಳಿಸುವ ಈ ಮತ ವೈವಿಧ್ಯದಿಂದ ಗಂಡಹೆಂಡಿರ ಜಗಳದಲ್ಲಿ ಕೂಸಿನಂತೆ ಶ್ರುತಿಕಲ್ಪನೆಯು ಬಡವಾಯಿತು.

ಎಷ್ಟು ವಿದ್ವಾಂಸರು ವಿವೇಚನೆಯನ್ನು ನಡೆಸಿದ್ದಾರೋ ಅಷ್ಟೇ ಮತಗಳಿವೆಯೆಂದರೆ ಉತ್ಪ್ರೇಕ್ಷೆಯಾಗಲಾರದು; ವಿಶೇಷವೆಂದರೆ ಕೆಲವು ವಿದ್ವಾಂಸರು ಐದು, ಆರು ಮುಂತಾಗಿ ಬೇರೆ ಬೇರೆ ಪರಸ್ಪರ ವಿರುದ್ಧವಾದ ಸಿದ್ಧಾಂತಗಳನ್ನು ಮಂಡಿಸಿದ್ದೂ ಉಂಟು; ಎಲ್ಲರನ್ನೂ ಸಂತೋಷಗೊಳಿಸುವ ಇವರ ಪ್ರಯತ್ನವನ್ನೇನೋ ಮೆಚ್ಚತಕ್ಕದ್ದೇ ಆದರೂ ಶ್ರುತಿಕಲ್ಪನೆಗಾಗಲೀ, ಶಾಸ್ತ್ರಜಿಜ್ಞಾಸೆಗಾಗಲೀ ಇವರಿಂದ ಸಹಾಯವಾಗಲಿಲ್ಲ. ಬರೋಡಾ ದೊರೆಯಾದ ಗಾಯಕವಾಡನು ಶ್ರುತಿಕಲ್ಪನೆಯ ವಿವೇಚನೆಗಾಗಿ ಅಖಿಲಭಾರತೀಯ ಮಟ್ಟದಲ್ಲಿ ಒಂದು ಹಿರಿಯ ಸಮ್ಮೇಳನವನ್ನೇ ನಡೆಸಿದನು; ತಂಜಾವೂರಿನಲ್ಲಿ ವೈದ್ಯನಾಗಿದ್ದ ಅಬ್ರಹಾಂ ಪಂಡಿತನು ಕರುಣಾಮೃತಸಾಗರವೆಂಬ ಒಂದು ಉದ್ಗ್ರಂಥವನ್ನು ಇತರರ ಶ್ರುತಿವಿವೇಚನೆಗಳನ್ನು ಖಂಡಿಸುವುದಕ್ಕಾಗಿಯೇ ಬರೆದನು; ಅವನು ಪ್ರಾಚೀನ ತಮಿಳು ಸಂಗೀತವೆಂದು ತಿಳಿದಿದ್ದರ ಆಧಾರದ ಮೇಲೆ ನಿರ್ಮಿಸಿದ ಶ್ರುತಿಸಿದ್ಧಾಂತವೂ ಅವನು ಇತರರನ್ನು ಖಂಡಿಸಿರುವಷ್ಟು ಉಗ್ರವಾಗಿಯೇ ಖಂಡನಾರ್ಹವಾಗಿದೆಯೆಂಬುದು ಸ್ವಾರಸ್ಯವಾದ ಸಂಗತಿ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## 1. ತಪ್ಪುಕಲ್ಪನೆಗಳ ತಾಯಿಬೇರು

ಇದು ಏನೇ ಇರಲಿ, ಮೇಲೆ ಹೇಳಿದ ಅಭಿಪ್ರಾಯಗಳಲ್ಲಿ ಒಂದು ಪ್ರವೃತ್ತಿಯು ಸರ್ವೇಸಾಧಾರಣವಾಗಿ ಕಂಡುಬರುತ್ತದೆ: ತಮ್ಮ ವಿವೇಚನೆ, ವಿಮರ್ಶೆಗಳಿಗೆ ಭೌತಶಾಸ್ತ್ರದ ಅಥವಾ ಗಣಿತಶಾಸ್ತ್ರದ ಪ್ರಮೇಯಗಳ ಹಾಗೂ ಪರಿಭಾಷೆಯ (ಸಂಬಂಧವಿರಲಿ, ಇಲ್ಲದಿರಲಿ) ಬಣ್ಣವನ್ನು ಕೊಡುವುದರಿಂದ ವೈಜ್ಞಾನಿಕ ಘನತೆಯನ್ನು ತಮ್ಮ ಸಿದ್ಧಾಂತವು ಪಡೆಯುತ್ತದೆಂಬ ನಂಬುಗೆ. ಈ ಪಾರಿಭಾಷಿಕ ಆಟಾಟೋಪದಿಂದ ಮೂಲವಾದ ತತ್ತ್ವವೇ ಹಲವು ಬಾರಿ ಹೆದರಿ, ಅಡಗಿ ಕುಳಿತದ್ದು ಅಥವಾ ಮಾಯವಾದದ್ದು ಉಂಟು. ಈ ಪಾರಿಭಾಷಿಕತೆಯ ಮೋಹವು ಆಧುನಿಕರನ್ನೂ ಪೂರ್ತಿಯಾಗಿ ಬಿಟ್ಟಿಲ್ಲ. ಈ ಎಲ್ಲಾ ವಿವಿಧ ಮತಗಳಲ್ಲಿರುವ ತಪ್ಪುಕಲ್ಪನೆಗಳಲ್ಲಿರುವ ಮೂಲವನ್ನು, ಮೂಲ ಆಕರಗಳನ್ನು—ಎಂದರೆ ಭರತ, ಮತಂಗ, ಅಭಿನವಗುಪ್ತ, ನಾನ್ಯದೇವ, ಶಾರ್ಙ್ಗದೇವಾದಿಗಳ ಗ್ರಂಥಗಳನ್ನು—ಅಭ್ಯಾಸಮಾಡದಿರುವುದು ; ಸ್ವಂತವಾಗಿ ತಾವೇ ತತ್ತ್ವಗಳನ್ನೂ ಪ್ರಮೇಯಗಳನ್ನೂ ವಿವೇಚನೆ ಮಾಡಿ ಸುದೃಢವೂ ಸತ್ಯವೂ ಆಗಿರುವ ಸಂಗತಿಗಳನ್ನು ಕಂಡುಹಿಡಿದುಕೊಳ್ಳುವುದರ ಬದಲು ಇತರರು ಹೇಳಿದ ಅರ್ಧ ಬೆಂದಿರುವ ಅರ್ಧ ಸತ್ಯಗಳನ್ನೂ ಅಸತ್ಯಗಳನ್ನೂ ಚರ್ಚೆಯಿಲ್ಲದೆ ನಂಬುವುದು, ಅಥವಾ ತಮ್ಮದೆಂದೇ ಹೇಳಿಕೊಂಡುಬಿಡುವುದು ; ಸಂಬಂಧಪಟ್ಟ ಇತರ ಶಾಸ್ತ್ರಗಳಲ್ಲಿ ಪ್ರವೇಶವಿಲ್ಲದಿರುವುದು ; ಮೂಲಗ್ರಂಥಗಳಲ್ಲಿನ ಸೂತ್ರಗಳಿಂದ ತತ್ತ್ವಪ್ರಮೇಯಗಳನ್ನು ಪರಂಪರೆಯ ಚೌಕಟ್ಟಿನಲ್ಲಿ ವಿವರಿಸುವ ಕೌಶಲವಿಲ್ಲದಿರುವುದು ; ಪ್ರಾಚೀನ ವಿಷಯಗಳನ್ನು ಚಾರಿತ್ರಕ ಹಿನ್ನೆಲೆಯಲ್ಲಿ ವಿಮರ್ಶಿಸದಿರುವುದು ; ಆಧುನಿಕ ವಿಷಯ, ತತ್ತ್ವ, ಪ್ರಮೇಯ, ವಾದ ಮೊದಲಾದವುಗಳಿಗೆ ಪ್ರಾಚೀನವಾದುದರ ಅರ್ಥಸಂದರ್ಭಗಳನ್ನು ಹೊಂದಿಸುವುದು ಮತ್ತು ಪ್ರಾಚೀನವಾದವುಗಳಿಗೆ ಆಧುನಿಕ ಅರ್ಥ ವಿಸ್ತಾರಗಳನ್ನು ಅನ್ವಯಿಸುವುದು ; ಆಯಾ ತತ್ತ್ವ ಅಥವಾ ಪ್ರಮೇಯವು ಬೆಳೆದು ಬಂದ ರೀತಿಯನ್ನು ಗಮನಿಸದೆ ಆಯಾ ಸಂದರ್ಭದಿಂದ ಅದನ್ನು ಬೇರ್ಪಡಿಸಿ ಅರ್ಥವನ್ನು ಹೇಳುವುದು ; ಅನಾಂತರಿಕ ಮತ್ತು ವ್ಯಕ್ತಿಗತ ಅಂಶಗಳನ್ನು ಬೇರೆ ಬೇರೆಯಾಗಿ ಪ್ರತ್ಯೇಕಿಸದೆ ಸಮಷ್ಟಿಯಲ್ಲಿ ವಿವೇಚನೆಮಾಡುವುದು ; ಅನ್ಯಸಂಗೀತ ಪದ್ಧತಿಗಳ ತತ್ತ್ವ ಮುಂತಾದವುಗಳನ್ನು ವಿವೇಚನೆಯೇ ಇಲ್ಲದೆ ಅನ್ವಯಿಸುವುದು ಇತ್ಯಾದಿ ಹಲವು ಅಂಶಗಳಲ್ಲಿ ಗುರುತಿಸಬಹುದು.

## 2. ಶ್ರುತಿಸ್ಥಾನವೈವಿಧ್ಯದ ಸುಗ್ಗಿ

ಹೀಗೆ ಹೇರಳವಾಗಿ ಕಂಡುಬರುವ ಶ್ರುತಿವಿಷಯಕವಾದ ಮತಗಳಲ್ಲಿ ಪಂಚಮಃಭಾವದ ಚಾಕ್ರಿಕ ಚಲನೆಯಿಂದ ಶ್ರುತಿಪ್ರಮಾಣಗಳ ನಿರ್ಣಯಕ್ಕೆ ತೊಡಗಿದವುಗಳೇ ಹೆಚ್ಚು ಕಂಡುಬರುತ್ತವೆ ; ಶ್ರುತಿಯ ಸಮಾನತೆಯನ್ನು ಭೌತಿಕ ಸಮಾನತೆಯೆಂದೇ ತಿಳಿದು ತಂತಿಯನ್ನು ಸಮಪಾಲುಗಳನ್ನಾಗಿ ವಿಭಾಗಿಸಿ ಶ್ರುತಿಗಳನ್ನು ಅಳೆದ ಮಹನೀಯರೂ ಉಂಟು ; ಅನ್ವಿತ ಮೌಲ್ಯಗಳಿಂದ ತಮಗೆ ಅನುಕೂಲವಾದ ಶ್ರುತಿಪ್ರಮಾಣಗಳ ಅನುಮಿತಿಗಳನ್ನು ಪಡೆದವರೂ ಉಂಟು. ಷಡ್ಜಗ್ರಾಮಕ್ಕೆ ಆಧುನಿಕ ಮೇಳವೊಂದನ್ನು ಹೇಳಿ ಇದರಲ್ಲಿನ ಸ್ವರಪ್ರಮಾಣಗಳನ್ನು ಚತುಃಶ್ರುತಿಕಾದಿ ಪ್ರಮಾಣಗಳಿಗೆ ಅನ್ವಯಿಸಿ ಶ್ರುತಿ ಪ್ರಮಾಣಗಳನ್ನು ನಿರ್ಣಯಿಸಿದವರೇ ಹೆಚ್ಚು. ಇವರು ತಮ್ಮ ವಿವಿಧ ಪಕ್ಷಗಳನ್ನೆಲ್ಲಾ ಭರತಮುನಿಗೇ ಆರೋಪಿಸಿ, ಅರ್ಪಿಸಿಬಿಟ್ಟಿದ್ದಾರೆ.

ಷಡ್ಜಗ್ರಾಮವಾದರೂ ಒಬ್ಬರ ಕಿವಿಗೆ ಕೇಳಿಸಿದಂತೆ ಇನ್ನೊಬ್ಬರ ಕಿವಿಗೆ ಕೇಳಿಸಿದ್ದಿಲ್ಲ ; ಇತರ ಅನೇಕರು ಶ್ರೀ ಶಾರ್ಙ್ಗದೇವನನ್ನೇ ಅಧರಿಸಿಕೊಂಡು ಶ್ರುತಿಗಳ ಪ್ರಮಾಣಗಳನ್ನು ನಿರ್ಧರಿಸಿದ್ದಾರೆ ; ಇವರು ಶಾರ್ಙ್ಗದೇವನು ಹೇಳಿದ ಶ್ರುತಿನಿದರ್ಶನ ಪದ್ಧತಿಯನ್ನೂ ಅದರ ತಂತ್ರ, ವಿಧಾನ ಮುಂತಾದವುಗಳನ್ನೂ ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ. ಒಟ್ಟಿನಲ್ಲಿ ಎಲ್ಲರೂ ಪ್ರಾಚೀನಾಚಾರ್ಯರು ಹೇಳಿದ ಎಲ್ಲಾ ಲಕ್ಷಣಗಳನ್ನೂ ನಿರ್ಲಕ್ಷಿಸಿದ್ದಾರೆ. ಶ್ರೀ ಶಾರ್ಙ್ಗದೇವನನ್ನೇ ಅಧರಿಸಿದವೆನ್ನುವ ಅನೇಕರ ಸಿದ್ಧಾಂತಗಳನ್ನು ಪಥಕ (19-20)ಗಳಲ್ಲಿ ಕೊಟ್ಟಿದೆ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಶ್ರುತಿ ಸಂಖ್ಯೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
|---|---|---|---|---|---|---|---|---|---|---|---|---|---|---|
| 1 | 32.0 | 32.0 | 32.0 | 32.0 | 32.0 | 32.0 | 32.0 | 32.0 | 32.0 | 30.38 | 32.0 | 32.0 | 34.78 | 32.00 |
| 2 | 31.27 | 31.11 | 30.48 | 30.48 | 30.72 | 30.72 | 31.57 | 30.72 | 30.79 | 29.97 | 30.38 | 30.48 | 32.0 | 31.01 |
| 3 | 30.55 | 30.22 | 30.0 | 30.0 | 30.0 | 30.0 | 29.97 | 30.34 | 30.03 | 28.83 | 30.0 | 30.0 | 30.72 | 30.05 |
| 4 | 29.82 | 29.33 | 28.8 | 28.80 | 28.8 | 28.8 | 28.44 | 30.0 | 28.83 | 28.44 | 28.8 | 28.8 | 29.63 | 29.11 |
| 5 | 29.09 | 28.44 | 28.44 | 28.44 | 28.44 | 28.44 | 29.56 | 28.80 | 28.50 | 27.0 | 28.44 | 28.44 | 28.44 | 28.21 |
| 6 | 28.36 | 27.55 | 27.0 | 27.0 | 27.0 | 27.0 | 28.06 | 28.44 | 27.00 | 26.64 | 27.0 | 27.0 | 27.31 | 27.34 |
| 7 | 27.64 | 26.66 | 26.67 | 26.67 | 26.67 | 26.67 | 26.64 | 27.0 | 26.69 | 25.63 | 26.67 | 26.67 | 26.67 | 26.49 |
| 8 | 26.91 | 25.77 | 25.6 | 25.6 | 25.6 | 25.60 | 25.28 | 26.67 | 25.63 | 25.28 | 25.67 | 25.60 | 25.60 | 25.67 |
| 9 | 26.18 | 24.88 | 25.28 | 25.28 | 24.3 | 25.0 | 24.94 | 25.6 | 24.99 | 24.0 | 25.28 | 24.08 | 25.0 | 24.87 |
| 10 | 25.45 | 24.00 | 24.38 | 24.38 | 24.0 | 24.0 | 24.0 | 25.0 | 24.00 | 23.68 | 24.0 | 24.0 | 24.58 | 24.10 |
| 11 | 24.73 | 23.38 | 24.0 | 24.0 | 23.04 | 23.7 | 23.68 | 25.31 | 23.09 | 22.78 | 22.78 | 22.76 | 24.0 | 23.35 |
| 12 | 24.00 | 22.77 | 22.76 | 22.76 | 22.76 | 22.76 | 22.48 | 24.0 | 22.52 | 22.48 | 22.50 | 22.5 | 23.04 | 22.63 |
| 13 | 23.27 | 22.15 | 22.5 | 22.50 | 22.22 | 22.22 | 21.33 | 23.04 | 21.62 | 21.62 | 21.60 | 21.6 | 22.22 | 21.93 |
| 14 | 22.55 | 21.54 | 21.33 | 21.33 | 21.33 | 21.33 | 22.17 | 22.76 | 21.38 | 21.33 | 21.33 | 21.33 | 21.33 | 21.25 |
| 15 | 21.82 | 20.92 | 20.32 | 20.32 | 20.48 | 20.48 | 21.05 | 22.50 | 20.53 | 20.25 | 20.25 | 20.32 | 20.48 | 20.59 |
| 16 | 21.09 | 20.31 | 20.0 | 20.0 | 20.0 | 20.0 | 19.98 | 21.60 | 20.02 | 19.98 | 20.0 | 20.25 | 20.00 | 19.95 |
| 17 | 20.36 | 19.69 | 19.2 | 19.2 | 19.2 | 19.2 | 19.71 | 21.33 | 19.22 | 19.22 | 19.20 | 20.0 | 19.20 | 19.33 |
| 18 | 19.64 | 19.08 | 18.96 | 18.96 | 18.96 | 18.96 | 18.96 | 20.48 | 19.00 | 18.96 | 18.96 | 19.2 | 18.43 | 18.73 |
| 19 | 18.91 | 18.46 | 18.0 | 18.0 | 18.0 | 18.0 | 18.71 | 20.23 | 18.00 | 18.0 | 18.0 | 18.96 | 17.78 | 18.15 |
| 20 | 18.18 | 17.85 | 17.78 | 17.78 | 17.78 | 17.78 | 17.76 | 20.0 | 17.79 | 17.76 | 17.78 | 18.0 | 17.07 | 17.59 |
| 21 | 17.45 | 17.23 | 17.07 | 17.07 | 17.07 | 17.07 | 16.86 | 19.20 | 16.66 | 17.09 | 17.07 | 17.78 | 16.38 | 17.04 |
| 22 | 16.73 | 16.62 | 16.86 | 16.88 | 16.20 | 16.67 | 16.23 | 18.96 | 16.03 | 16.86 | 16.86 | 16.88 | 16.0 | 16.51 |
| 1 | 16.00 | 16.00 | 16.00 | 16.00 | 16.00 | 16.00 | 16.00 | 16.00 | 16.00 | 16.00 | 16.00 | 16.00 | | 16.00 |

ಪಥಕ (19)

ವೀಣೆಯ ತಂತಿಯಲ್ಲಿ ದ್ವಾವಿಂಶತಿ ಶ್ರುತಿಗಳ ಸ್ಥಾನಗಳು (ಆಧಾರ ಷಡ್ಜಕ್ಕೆ ಬೇಕಾದ ಉದ್ದ=32 ಅಂಗುಲಗಳು)

428 ಮತ್ತು 430 ನೇ ಪುಟಗಳಲ್ಲಿರುವ ಲೆಕ್ಕಗಳನ್ನು ಅಬ್ರಹಾಂ ಪಂಡಿತನ ಕರುಣಾಮೃತಸಾಗರದ ಪ್ರಥಮ ಭಾಗದಿಂದ ಸಂಗ್ರಹಿಸಿ ಉದ್ಧರಿಸಲಾಗಿದೆ; 32 ಅಂಗುಲದ ತಂತಿಯಲ್ಲಿ ವಿವಿಧ ಶ್ರುತಿಗಳನ್ನು ನುಡಿಯುವ ಉದ್ದಗಳನ್ನೂ, ಆಧಾರ ಷಡ್ಜವನ್ನು ಸೆಕಂಡಿಗೆ 540 ಕಂಪನಗಳೆಂದು ಇಟ್ಟುಕೊಂಡರೆ ಈ ದ್ವಾವಿಂಶತಿ ಶ್ರುತಿಗಳು ಪಡೆಯುವ ಕಂಪನ ಸಂಖ್ಯೆಗಳನ್ನೂ ಬೇರೆ ಪಥಕದಲ್ಲಿ ತೋರಿಸಿದೆ. ಇವುಗಳ ಚರ್ಚೆಯನ್ನಾಗಲೀ ಖಂಡನೆಯನ್ನಾಗಲೀ ಇಲ್ಲಿ ಪ್ರತ್ಯೇಕವಾಗಿ ಮಾಡುವುದು ಅನಾವಶ್ಯಕ; ಇದನ್ನು ಸಮಷ್ಟಿಯಲ್ಲಿ ಈಗಾಗಲೇ ಮಾಡಿದೆ; ವಿವರಗಳನ್ನು ಅಭ್ಯಾಸಿಗಳು ಕರುಣಾಮೃತಸಾಗರದಲ್ಲಿಯೇ ಅವಲೋಕಿಸಬೇಕು.

### ಜ. ದ್ವಾವಿಂಶತಿಶ್ರುತಿಪಕ್ಷದ ಉಲ್ಲಂಘನೆ

ಪಥಕ (19) ಮತ್ತು (20) ರಲ್ಲಿ ನಿರ್ವ್ಯೋಕ್ತ ವಿದ್ವಾಂಸರುಗಳ ಮತಗಳನ್ನು ಸಂಗ್ರಹಿಸಿದೆ; ಹಾಗೂ ಅವರ ಹೆಸರುಗಳನ್ನು ಮೊದಲನೆಯ ಪಙ್ಕ್ತಿಯಲ್ಲಿ ಈ ಸಂಖ್ಯೆಗಳಿಂದ ನಿರ್ದೇಶಿಸಿದೆ:

1. ಸಹಸ್ರಬುದ್ಧಿ[289] 2. ಶೌರೀಂದ್ರಮೋಹನ ಠಾಕೂರ್[290] 3. ದೇವಲ್[291] 4. ಕ್ಲೆಮೆಂಟ್ಸ್–A[292] 5. ಕ್ಲೆಮೆಂಟ್ಸ್–ಗ್ರಾಮಭೇದ ಪದ್ಧತಿ[293] 6. ನಾಗೋಜಿರಾವ್[294] 7. ಸುಬ್ರಹ್ಮಣ್ಯಶಾಸ್ತ್ರೀ[295] 8. ಅದೇ[296] 9. ಅದೇ[297] 10. ಅದೇ[298] 11. ಪ್ರತಾಪ ರಾಮಸ್ವಾಮಿಭಾಗವತ[299] 12. ಫಾಕ್ಸ್ ಸ್ಟ್ರ್ಯಾಂಗ್‌ವೇಸ್[300] 13. ಚಿನ್ನಸ್ವಾಮಿಮೊದಲಿಯಾರ್[301] 14. ಅಬ್ರಹಾಂ ಪಂಡಿತ[302].

ಕ್ಲೆಮೆಂಟ್ಸ್ ಕೊಡುವ ಶ್ರುತಿಸ್ಥಾನಗಳಲ್ಲಿ[292] 10 ಮತ್ತು 11ನೆಯ ಶ್ರುತಿಗಳ ಮಧ್ಯದಲ್ಲಿ 23·7 ಅಂಗುಲ ಉದ್ದಕ್ಕೆ 729 ಕಂಪನ ಸಂಖ್ಯೆಯನ್ನೂ, 17 ಮತ್ತು 18ನೆಯ ಶ್ರುತಿಗಳ ನಡುವೆ 18·29 ಅಂಗುಲ ಉದ್ದಕ್ಕೆ 945 ಕಂಪನ ಸಂಖ್ಯೆಯನ್ನೂ ಉಳ್ಳ ಎರಡು ಹೊಸ ಸ್ಥಾನಗಳಿವೆ. ಹೀಗೆ ಅವನು ಹೇಳುವುದು ಒಟ್ಟು 24 ಶ್ರುತಿ

---

289 Sahasrabuddhe, Hindu Music and the Gayana Samaj, pt. ii, p. 13 ff.

290 Sourindro Mohun Tagore, *cit.*, Deval, K.B., Hindu Musical Scale & 22 Srutis, p. 34

291 Deval, K. B., *op. cit.*

292 Clements, E., Introduction to Deval, K. B., *op. cit.*

293 *Idem*, *op. cit.*, *loc. cit.*

294 Nagoji Row, C., Talk delivered at the II Conference of the Tanjore Sangeetha Vidya Mahajana Sangha, August, 1912.

295 Subrahmanya Sastri, Talk delivered at the II Conference, *loc. cit.*, August, 1912,

296 *Idem*, Talk delivered at the III Conference, *loc. cit.* April, 1913.

297 *Idem*, Another Talk delivered, *loc. cit.*, in eonformity with Pythogorean Theory.

298 *Idem*, Talk deliverd at the V Conference, *loc. cit.*, April 1914.

299 Pratapa Ramaswamy Bhagavata, Talk delivered at the III Conference, *loc. cit.*, August 1912.

300 Fox Strangways, Music of Hindosthan, p. 115ff, *cit.*, Abraham Pandita, *op. cit.*, p. 389.

301 Chinnaswamy Mudaliar, Oriental Music in Staff Notation, p. 41ff., *cit.*, Abraham Pandita, *op. cit.*, p. 393.

302 Abraham Pandita, *op. cit.*, p. 406.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಶ್ರುತಿ ಸಂಖ್ಯೆ | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
|---|---|---|---|---|---|---|---|---|---|---|---|---|---|---|
| 1 | 540·0 | 540·0 | 540·0 | 540·0 | 540·0 | 540·0 | 540·0 | 540·0 | 540·0 | 569·0 | 540.0 | 540.0 | 496.8 | 540.0 |
| 2 | 552·6 | 555·4 | 567·0 | 567·0 | 562·5 | 562·5 | 547·0 | 562·5 | 561·0 | 599·3 | 568.9 | 540.0 | 540.0 | 557·3 |
| 3 | 565·7 | 571·8 | 576·0 | 576·0 | 576·0 | 576·0 | 577.0 | 569·5 | 575·5 | 576·6 | 576.0 | 576·0 | 562.5 | 575·1 |
| 4 | 579·5 | 589·1 | 600·0 | 600·0 | 600·0 | 600·0 | 608·0 | 576·0 | 599·3 | 607·5 | 600.0 | 600.0 | 583.2 | 593·5 |
| 5 | 594·0 | 607·5 | 607·5 | 607·5 | 607·5 | 607·5 | 585·0 | 600·0 | 606·0 | 640.0 | 607.5 | 607·5 | 607·5 | 612·5 |
| 6 | 609·2 | 627·1 | 640·0 | 640·0 | 640·0 | 640·0 | 616·0 | 607·5 | 640·0 | 674·3 | 640.0 | 640·0 | 632·8 | 632·1 |
| 7 | 625·3 | 648·0 | 648·0 | 648·0 | 648·0 | 648·0 | 649·0 | 640·0 | 647·0 | 648·7 | 648·0 | 648·0 | 648.0 | 652·4 |
| 8 | 642·2 | 670·3 | 675·0 | 675·0 | 675·0 | 675·0 | 683·4 | 648·0 | 674·3 | 683·0 | 675·0 | 675·0 | 675.0 | 673·3 |
| 9 | 660·0 | 694·3 | 683·4 | 683·4 | 711·1 | 691·20 | 693·0 | 675·0 | 691·3 | 720·0 | 683·4 | 720·0 | 691·2 | 694·8 |
| 10 | 678·9 | 720·0 | 708·86 | 708.8 | 720·0 | 720·0 | 720·0 | 691·2 | 720·0 | 758·5 | 720·0 | 759·4 | 703.1 | 717·0 |
| 11 | 698·8 | 738·9 | 720·0 | 720·0 | 750·0 | 729·0 | 730·0 | 682·7 | 748·0 | 799·0 | 758·5 | 768·0 | 720·0 | 740·0 |
| 12 | 720·0 | 758·9 | 759·4 | 759·4 | 759·4 | 759·4 | 769·0 | 720·0 | 767·0 | 729·8 | 768·0 | 800·0 | 750·0 | 763.7 |
| 13 | 742·5 | 780·0 | 768·0 | 768·0 | 777·6 | 777·6 | 810·0 | 750·0 | 799·0 | 769·0 | 800·0 | 810.0 | 777·6 | 788·1 |
| 14 | 765·5 | 802·3 | 810·0 | 810·0 | 810·0 | 810·0 | 779·3 | 759·4 | 808·3 | 810·0 | 810·0 | 850·5 | 810·0 | 813·3 |
| 15 | 792.0 | 825·9 | 850·5 | 850·5 | 843·8 | 848·3 | 821·0 | 768·0 | 841·5 | 853·3 | 853·3 | 853.3 | 843.8 | 839·4 |
| 16 | 819·3 | 850·9 | 864·0 | 864·0 | 864·0 | 864·0 | 865·0 | 800·0 | 863·0 | 899·0 | 864·0 | 864·0 | 864·0 | 866·2 |
| 17 | 848·6 | 877·5 | 900·0 | 900·0 | 900·0 | 900·0 | 877·0 | 810·0 | 899·0 | 865·0 | 900·0 | 900·0 | 900·0 | 894·0 |
| 18 | 880·0 | 905·8 | 911·3 | 911·3 | 911·3 | 911·25 | 911·0 | 843·8 | 909·5 | 911·3 | 911·3 | 911·3 | 937·5 | 922·6 |
| 19 | 913·8 | 936·0 | 960·3 | 960·3 | 960·0 | 960·0 | 924·0 | 854·3 | 960·0 | 960·0 | 960·0 | 960·0 | 972·0 | 952.1 |
| 20 | 950·4 | 968·3 | 972·0 | 972·0 | 972·0 | 972·0 | 973·0 | 864·0 | 971·0 | 1011·3 | 972·0 | 972·0 | 1012·5 | 982·6 |
| 21 | 990·0 | 1002·9 | 1012·5 | 1012·5 | 1012·5 | 1012·5 | 1025·0 | 900·0 | 1037· | 973·0 | 1012.5 | 1012.5 | 1054·7 | 1014·0 |
| 22 | 1033·0 | 1040·0 | 1025·2 | 1024·0 | 1066·7 | 1036·8 | 1039·0 | 911·3 | 1078·0 | 1025·0 | 1025.2 | 1024·0 | 1080.0 | 1046·5 |
| 1 | 1080 | 1080 | 1080 | 1080 | 1080 | 1080 | 1080 | | 1080.0 | 1080 | 1080 | 1080 | | 1080 |

ಪಟ್ಟಕ (20)

ದ್ವಾವಿಂಶತಿಶ್ರುತಿಗಳ ಕಂಪನ ಸಂಖ್ಯೆಗಳು (ಆಧಾರ ಷಡ್ಜದ ಕಂಪನ ಸಂಖ್ಯೆ=540)

ಸ್ಥಾನಗಳು. ಅವನೇ ಪುನಃ ಮೂರು ಗ್ರಾಮಗಳ ಪರಿವರ್ತನದಿಂದಾಗಿ [293] 7 ಮತ್ತು 8ನೆಯ ಶ್ರುತಿಗಳ ಮಧ್ಯದಲ್ಲಿ 25·92 ಅಂಗುಲದ ಉದ್ದಕ್ಕೆ 666·67 ಕಂಪನಸಂಖ್ಯೆಯನ್ನೂ, 13 ಮತ್ತು 14ನೆಯ ಶ್ರುತಿಸ್ಥಾನಗಳ ಮಧ್ಯದಲ್ಲಿ 21·60 ಅಂಗುಲಕ್ಕೆ 800 ಕಂಪನಸಂಖ್ಯೆಯನ್ನೂ, 20 ಮತ್ತು 21ನೆಯ ಶ್ರುತಿಸ್ಥಾನಗಳ ಮಧ್ಯದಲ್ಲಿ 17·28 ಅಂಗುಲಕ್ಕೆ 1000 ಕಂಪನ ಸಂಖ್ಯೆಯನ್ನೂ – ಹೀಗೆ ಮೂರು ಹೊಸ ಶ್ರುತಿಗಳನ್ನು ಸೇರಿಸುತ್ತಾನೆ. ಸುಬ್ರಹ್ಮಣ್ಯಶಾಸ್ತ್ರಿಯು [295] 8 ಮತ್ತು 9ನೆಯ ಶ್ರುತಿಗಳ ನಡುವೆ 26·278 ಅಂಗುಲದ 658 ಕಂಪನ ಸಂಖ್ಯೆಯನ್ನೂ, 12 ಮತ್ತು 13ನೆಯ ಶ್ರುತಿಗಳ ನಡುವೆ 23·350 ಅಂಗುಲದ 740 ಕಂಪನಸಂಖ್ಯೆಯನ್ನೂ, 20 ಮತ್ತು 21ನೆಯ ಶ್ರುತಿಗಳ ನಡುವೆ 17·519 ಅಂಗುಲದ 987 ಕಂಪನ ಸಂಖ್ಯೆಯನ್ನೂ ಉಳ್ಳ ಮೂರು ಶ್ರುತಿಸ್ಥಾನಗಳನ್ನು ಹೊಸದಾಗಿ ಸೇರಿಸುತ್ತಾನೆ. ಅವನೇ ಪುನಃ [296] 18·0, 17·78, 17·07, 16·67, 16·88 ಮತ್ತು 16·0 ಎಂಬ ಐದು ಹೊಸ ಉದ್ದಗಳನ್ನೂ ಇವುಗಳಿಗೆ ಪರಸ್ಪರವಾಗಿ 960, 972, 1012·5, 1036·8, 1024 ಮತ್ತು 1080 ಎಂಬ ಕಂಪನಸಂಖ್ಯೆಗಳನ್ನೂ ಉಳ್ಳ ಐದು ಶ್ರುತಿಗಳನ್ನು ಸೇರಿಸಿ ಇಪ್ಪತ್ತೇಳು ಶ್ರುತಿಗಳ ಸ್ವರಾಷ್ಟಕವನ್ನು ಹೇಳುತ್ತಾನೆ. ಅವನೇ ಪುನಃ ಗ್ರೀಕ್ ಗಣಿತಶಾಸ್ತ್ರಜ್ಞನಾದ ಪೈಥಾಗೊರಸ್ಸನ ಸಿದ್ಧಾಂತವನ್ನು ಅನ್ವಯಿಸಿ ಬೇರೆ 28 ಶ್ರುತಿಗಳನ್ನು ಹೇಳುತ್ತಾನೆ. [297] ಇವುಗಳಲ್ಲಿ 30·38, 25·34, 22·78, 20·25, 17·09, 16·89 ಎಂಬ ಉದ್ದಗಳಿಗೆ ಪರಸ್ಪರವಾದ 569, 682, 758·5, 853·33, 1011·33, 1023 ಎಂಬ ಕಂಪನಸಂಖ್ಯೆಗಳ ಆರು ಹೊಸ ಸ್ಥಾನಗಳನ್ನೂ ಅವನು ಸೇರಿಸಿದ್ದಾನೆ. ಅವನೇ ಮತ್ತೊಂದು ಸಿದ್ಧಾಂತದಲ್ಲಿ [298] ಆಧಾರ ಸ್ವರ ಮತ್ತು ಆವರ್ತಕಸ್ವರಗಳನ್ನು ಬಿಟ್ಟು ಮಧ್ಯದ ಅಂತರವನ್ನು 22 ಶ್ರುತಿಗಳಾಗಿ ವಿಭಾಗಿಸಿದ್ದಾನೆ. ಆಧಾರ ಷಡ್ಜಕ್ಕೆ 540, ಆವರ್ತಕ ಷಡ್ಜಕ್ಕೆ 1084 ಎಂದೇ ಕಂಪನ ಸಂಖ್ಯೆಗಳು; ಎಂದರೆ ತಾತ್ಪರ್ಯದಲ್ಲಿ ಒಟ್ಟು 24 ಶ್ರುತಿಗಳೆಂದು ಎಣಿಸಿದ್ದಾನೆ.

ಫಾಕ್ಸ್ ಸ್ಟ್ರ್ಯಾಂಗ್‌ವೇಸನನ್ನು ಉದ್ಧರಿಸುತ್ತಾ ಅಬ್ರಹಾಂ ಪಂಡಿತನು 31·6, 25·28, 23·70 ಮತ್ತು 16·86 ಎಂಬ ಉದ್ದಗಳನ್ನೂ ಇವುಗಳಿಗೆ ಪರಸ್ಪರವಾಗಿ 546·75, 683·4, 729·0, 1025·2 ಎಂಬ ಕಂಪನಗಳನ್ನುಳ್ಳ ನಾಲ್ಕು ಶ್ರುತಿಗಳನ್ನು ಅವನದೆಂದು ಸೇರಿಸಿದ್ದಾನೆ [300]. ಚಿನ್ನಸ್ವಾಮಿ ಮೊದಲಿಯಾರ್ ಕೇವಲ ಇಪ್ಪತ್ತೇ ಶ್ರುತಿಸ್ಥಾನಗಳನ್ನು ಕೊಡುತ್ತಾನೆ. ಷಡ್ಜದ ಹಿಂದಿನ 25/23 ಎಂಬ ಒಂದು 34·78 ಅಂಗುಲ ಉದ್ದದ 496.80 ಎಂಬ ಕಂಪನ ಸಂಖ್ಯೆಯನ್ನೂ ಸೇರಿಸಿಕೊಂಡರೆ 21 ಸ್ಥಾನಗಳು ದೊರೆಯುತ್ತವೆ, ಅಷ್ಟೆ.[301] ಅಬ್ರಹಾಂ ಪಂಡಿತನು ತನ್ನ ಸಿದ್ಧಾಂತದಲ್ಲಿ ಲೆಕ್ಕಗಳನ್ನು ದಶಮಾಂಶದ ಆರು ಅಂಕಗಳವರೆಗೆ ಕೊಡುತ್ತಾನೆ.[302] ಅದನ್ನಿಲ್ಲಿ ದಶಮಾಂಶದ ಎರಡನೆಯ ಅಂಕಕ್ಕೆ ಮಾತ್ರ ಸಂಗ್ರಹಿಸಿಕೊಟ್ಟಿದೆ. ಈ ಪಥಕಗಳಲ್ಲಿರುವ ಲೆಕ್ಕಗಳನ್ನು ನಾನು ತಾಳೆ ನೋಡಿಲ್ಲ. ಆಸಕ್ತರಾದ ಅಭ್ಯಾಸಿಗಳು ಆಯಾ ಆಕರದಲ್ಲಿಯೇ ಇವುಗಳನ್ನು ಓದಿ ವಿವೇಚಿಸಿಕೊಳ್ಳಬೇಕು. ಇಲ್ಲಿ ತಾತ್ಪರ್ಯದಲ್ಲಿ ಗಮನಿಸಬೇಕಾದ ಅಂಶವೇನೆಂದರೆ ವಿವಿಧ ಮತಗಳಲ್ಲಿ ಹೊಂದಾಣಿಕೆಯಿಲ್ಲದಿರುವುದು; ಅಬ್ರಹಾಂ ಪಂಡಿತನೇ ವಿವಿಧ ಮತಗಳಿಂದ 22 ಶ್ರುತಿಸ್ಥಾನಗಳಿಗೆ 158 ಸ್ಥಾನಗಳನ್ನು ಸಂಗ್ರಹಿಸಿಕೊಡುತ್ತಾನೆ.[303]

## 4. ಶ್ರುತಿಗಳಿಗೆ ಭೌತಿಕಪ್ರಮಾಣಗಳು

ಹಾಗಾದರೆ ಶ್ರುತಿಗಳಿಗೆ ಭೌತಿಕಪ್ರಮಾಣಗಳನ್ನು ನಿರ್ಣಯಿಸುವುದರಿಂದ ಪ್ರಯೋಜನವಿಲ್ಲವೇ, ಎಂಬ ಪ್ರಶ್ನೆ ಏಳುತ್ತದೆ. ಇಲ್ಲಿ ಗಮನಿಸಬೇಕಾದುದು ಮುಖ್ಯವಾಗಿ ಇದು: ಹೀಗೆ ನಿರ್ಣಯಿಸಲು ಸಾಧ್ಯ; ಇದನ್ನು ಶ್ರೀ ಶಾರ್ಙ್ಗದೇವನು ಅನಾಂತರಿಕ ವಿಧಾನದಿಂದ ಸಾಧಿಸಿಕೊಟ್ಟಿದ್ದಾನೆ. ಆದರೆ ಈ ಪ್ರಯೋಗದ ಅನಾಂತರಿಕ

303 *Ibid.*, pp. 418-423.

ಸತ್ಯವನ್ನು ಕಂಡುಕೊಳ್ಳಲು ಕೆಲವು ನಾದ ಶಾಸ್ತ್ರೀಯವಾದ ತೊಡಕುಗಳಿವೆ. ಅವುಗಳನ್ನು ಮುಂದೆ ಚರ್ಚಿಸಲಾಗುವುದು. ಹೀಗೆ ದ್ವಾವಿಂಶತಿಸ್ಥಾನಗಳನ್ನು ನಿರ್ಣಯಿಸಿದರೂ ಅವುಗಳಿಂದ ಶಾಸ್ತ್ರಕ್ಕೆ ಒಂದು ವೇಳೆ ಪ್ರಯೋಜನವಿದ್ದರೂ ಲಕ್ಷ್ಯಕ್ಕೆ ಇಲ್ಲವೆಂಬುದಂತೂ ಸ್ಪಷ್ಟವಾಗಿಯೇ ಇದೆ. ಏಕೆಂದರೆ ದ್ವಾವಿಂಶತಿ ಶ್ರುತಿಗಳಲ್ಲಿ ಹಲವು ಅಂತರಗತಶ್ರುತಿಗಳಿವೆ ; ಇವುಗಳಲ್ಲಿ ಸ್ವರಸ್ಥಾನವಿಲ್ಲದುದರಿಂದ ಇವು ಎಂದೂ ಲಕ್ಷ್ಯದಲ್ಲಿ ಪ್ರಯೋಗವನ್ನು ಪಡೆಯಲಾರವು. ಸ್ವರಾಷ್ಟಕದ ಹನ್ನೆರಡು ಸ್ವರಸ್ಥಾನಗಳಂತೂ ಲಕ್ಷ್ಯಪ್ರಸಿದ್ಧವಾಗಿ ಇದ್ದೇ ಇವೆ. ಇವುಗಳ ಮಧ್ಯದಲ್ಲಿರುವ ಸ್ಥಾನಗಳನ್ನು ನಿರ್ಣಯಿಸಿ ಹೇಳಿದುದರಿಂದ ರಾಗಕೋಶದ ಸಂಪತ್ತು, ಸೌಂದರ್ಯಗಳೇನೂ ಹೆಚ್ಚುವುದಿಲ್ಲ ; ಶಾಸ್ತ್ರದಲ್ಲಿಯೇ ಆಗಲಿ, ಶ್ರುತಿಯ ಲಕ್ಷಣ, ಸ್ವಭಾವ, ಕರ್ತವ್ಯಗಳಿಗಿರುವ ಪ್ರಾಮುಖ್ಯವು ಅದರ ಭೌತಿಕ ಪ್ರಮಾಣಕ್ಕೆ ಇಲ್ಲ. ಆದುದರಿಂದಲೇ ಭೌತಿಕಪ್ರಮಾಣವನ್ನು ತಂತಿಯ ಉದ್ದ ಮೊದಲಾದ ಸಂಖ್ಯಾಮೂಲವಾದ ಇಯತ್ತೆಯಿಂದ ನಮ್ಮ ಪೂರ್ವಾಚಾರ್ಯರು ಹೇಳಲಿಲ್ಲ.

ಅಷ್ಟೇ ಅಲ್ಲದೆ, ನಮ್ಮ ಸಂಗೀತದಲ್ಲಿ ಆಯಾ ನಿರ್ದಿಷ್ಟ ಶ್ರುತಿಸ್ಥಾನಗಳಲ್ಲಿಯೇ ಅಭಿವ್ಯಕ್ತವಾಗುವ ಸ್ವರಗಳಿಗೆ ಇರುವ ಮಹತ್ವವು ಬಹು ಕಡಿಮೆ ; ಅಂತಹ ಸ್ವರಗಳು (ಪ್ರಕೃತಿಸ್ವರಗಳನ್ನೂ ವಿಶೇಷ ಸಂದರ್ಭಗಳನ್ನೂ ಬಿಟ್ಟರೆ) ಇಲ್ಲವೆಂದರೂ ಸಲ್ಲುತ್ತದೆ. ಏಕೆಂದರೆ ಗಮಕವು ನಮ್ಮ ಸಂಗೀತಪದ್ಧತಿಯ ಜೀವಾಳವೂ ಸರ್ವಸ್ವವೂ ಆಗಿದೆ. ಗಮಕವೆಂದರೆ ಸ್ವರವು ಸ್ವಸ್ಥಾನದಿಂದ ಚ್ಯುತವಾಗಿ ಕಂಪಿಸಬೇಕು : 'ಸ್ವರಸ್ಯ ಕಂಪೋ ಗಮಕಃ ಶ್ರೋತೃಚಿತ್ತಸುಖಾವಹಃ' ; ಇದರಿಂದ ಕೇಳುವವರ ಮನಸ್ಸಿಗೆ ಹಿತವೂ ಆಗಬೇಕು. ಎಂದರೆ ನಮ್ಮ ಸಂಗೀತದಲ್ಲಿ ಸೌಂದರ್ಯಾಂಶವು—ಎಂದರೆ ರಂಜನೆಯು—ಸ್ವರಪುಷ್ಟಿ, ಸ್ವರಕಾಂತಿ ಸ್ವರಗುಣ, ಪ್ರಸನ್ನತೆ ಮುಂತಾದವುಗಳನ್ನು ಮಾತ್ರ ಅವಲಂಬಿಸದೆ ಗಮಕವನ್ನೂ ಪ್ರಧಾನವಾಗಿ ಅವಲಂಬಿಸುತ್ತದೆ, ಎಂದಾಯಿತು. ವಾದಿ ಸಂವಾದಿಯೇ ಮೊದಲಾದ ಸ್ವರಚಾತುರ್ವಿಧ್ಯ, ಗಮಕ—ಇವೆರಡೂ ಈ ಸಂಗೀತದಲ್ಲಿನ ಸೌಂದರ್ಯದ ಊರುಗಂಬಗಳು. ಆದುದರಿಂದ ಭೌತಿಕ ಪ್ರಮಾಣಗಳಿಂದ ನಿಕರವಾಗಿ ಶ್ರುತಿಗಳನ್ನು ನಿರ್ಧರಿಸಿ ಹೇಳುವುದರಿಂದ ಏನಾದರೂ ಪ್ರಯೋಜನವಿದ್ದರೆ ಅದು ಲಕ್ಷಣಕ್ಕೆ.

ಈ ಸಮಸ್ಯೆಗೆ ಎರಡು ಮುಖಗಳಿವೆ : ಪ್ರಾಚೀನ ಭಾರತೀಯ ಸಂಗೀತದಲ್ಲಿದ್ದ ದ್ವಾವಿಂಶತಿ ಶ್ರುತಿಗಳ ಸ್ಥಾನಗಳನ್ನು ನಿರಪೇಕ್ಷ ರೀತಿಯಿಂದ ಎಂದರೆ ಕಂಪನಸಂಖ್ಯೆ, ತಂತಿಯ ಉದ್ದ ಮೊದಲಾದವುಗಳಿಂದ ತಾರತಮ್ಯಜ್ಞಾನಕ್ಕಾಗಿ ಕಂಡುಹಿಡಿಯಲೆಳಸುವುದು ಒಂದು. ಶ್ರೀ ಶಾರ್ಙ್ಗದೇವನ ಪದ್ಧತಿಯನ್ನು ಬಿಟ್ಟರೆ ಇದು ಅನ್ಯತ್ರ ಅಸಾಧ್ಯವೆಂಬುದನ್ನು ಈಗಾಗಲೇ ಹೇಳಿದೆ. ಇವನಲ್ಲಿಯಾದರೂ ಶ್ರುತಿಯ ಕಲ್ಪನೆಯು ಬಹುವಾಗಿ ಮಾರ್ಪಾಡಾಗಿದ್ದುದರಿಂದ, ಎಷ್ಟೇ ವೈಜ್ಞಾನಿಕವೂ, ವಿಶ್ವಾಸಾರ್ಹವೂ ಆಗಿದ್ದರೂ ಭರತಾದಿಗಳ ಮತವನ್ನು ಸರಿಯಾಗಿ ಪ್ರತಿಬಿಂಬಿಸುತ್ತದೆಯೇ ಎಂಬುದು ಸಂದೇಹಾಸ್ಪದವಾಗಿದೆ. ಶಾರ್ಙ್ಗದೇವನ ಸಿದ್ಧಾಂತವನ್ನಾದರೂ ಪ್ರಯೋಗದಿಂದ ತಾಳೆ ನೋಡಿರುವ ಪ್ರಯತ್ನಗಳು ನನ್ನ ಗಮನಕ್ಕೆ ಬಂದಿಲ್ಲ. ಈ ಬಗೆಗೆ ಸಂಶೋಧನೆಯನ್ನು ಕೈಗೊಂಡಿದ್ದೇನೆ. ಇದರ ಫಲಿತಾಂಶಗಳು ತಿಳಿಯುವವರೆಗೆ ಈ ವಿಷಯದಲ್ಲಿ ಮತ್ತೇನನ್ನೂ ಹೇಳಲಾಗದು. ಎರಡನೆಯದಾಗಿ, ಶ್ರುತಿಯ ಪ್ರಾಚೀನ ಕಲ್ಪನೆಗಳನ್ನು ಆಧುನಿಕ ಸಂಗೀತಕ್ಕೆ ಬಳಸಿ ತನ್ಮೂಲಕ ಅದಕ್ಕೆ ತಾತ್ತ್ವಿಕ ಪುಷ್ಟಿಯನ್ನೂ ಪ್ರಾಚೀನ ಗೌರವವನ್ನೂ ಅನುಸ್ಯೂತವಾದ ಸಂಪ್ರದಾಯ, ಪರಂಪರೆಗಳನ್ನೂ ತಂದುಕೊಡುವುದು. ಇದನ್ನು ಮುಂದೆ ಸಂಕ್ಷೇಪವಾಗಿ ಪರಿಶೀಲಿಸಲಾಗುವುದು.

## 5. ಕೆಲವು ಆಧುನಿಕರಲ್ಲಿ ತಪ್ಪು ಕಲ್ಪನೆಗಳು

ಕೆಲವು ಆಧುನಿಕರು ದ್ವಾವಿಂಶತಿ ಶ್ರುತಿಗಳ ವಿಷಯದಲ್ಲಿ ಹೊಂದಿರುವ ತಪ್ಪುಕಲ್ಪನೆಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಬಹುದು :

a) ಶ್ರುತಿಗಳು ಸಮಾನವಾದ ಪ್ರಮಾಣವನ್ನು ಹೊಂದಿವೆ.

b) ಚತುಃಶ್ರುತಿ, ತ್ರಿಶ್ರುತಿ, ದ್ವಿಶ್ರುತಿ ಪ್ರಮಾಣಗಳಿಗೆ ಕ್ರಮವಾಗಿ 8/9, 10/9 ಮತ್ತು 16/15 ಎಂಬ ಪ್ರಮಾಣಗಳು ಸಮ.

c) ದ್ವಾವಿಂಶತಿ ಶ್ರುತಿಗಳನ್ನು ಪಂಚಮಭಾವದ ಊರ್ಧ್ವಮುಖವಾದ ಚಾಕ್ರಿಕ ಚಲನೆಯಿಂದ ಅಥವಾ ಮಧ್ಯಮದ ಅಧೋಮುಖ ಚಲನೆಯಿಂದ ಪಡೆಯಬಹುದು.

d) ಷಡ್ಜವು ಆಧಾರಸ್ವರವಾದುದರಿಂದ ಅದನ್ನು ಮೊದಲನೆಯ ಶ್ರುತಿಯಲ್ಲಿ ನೆಟ್ಟು ಉಳಿದ ಸ್ವರಗಳನ್ನು ಅಲ್ಲಿಂದ ಲೆಕ್ಕಿಸಬೇಕು.

e) ಒಂದೇ ಸ್ಥಾಯಿಯ ವಿಸ್ತಾರದಲ್ಲಿ 66 ಶ್ರುತಿಗಳಿವೆ.

f) ಒಂದು ಸ್ವರದ ಅವಾಂತರಭೇದವು ವಿವಿಧ ರಾಗಗಳಲ್ಲಿ ವಿವಿಧ ಶ್ರುತಿಗಳ ರೂಪದಲ್ಲಿ ಗೋಚರಿಸುತ್ತದೆ.

ಇವುಗಳಲ್ಲಿ ಮೊದಲನೆಯ ಮೂರನ್ನು ಈಗತಾನೇ ಪರಿಶೀಲಿಸಿ ನಿರಾಕರಿಸಲಾಗಿದೆ. ನಾಲ್ಕನೆಯದನ್ನು ಶ್ರುತಿನಿದರ್ಶನ ಸಂದರ್ಭದಲ್ಲಿ (ಪು. 268–270) ಪರಿಶೀಲಿಸಿ ಖಂಡಿಸಲಾಗಿದೆ.

## e) ಅರವತ್ತಾರು ಶ್ರುತಿಗಳ ಪಕ್ಷ

ಒಂದೇ ಸ್ಥಾಯಿಯ ವಿಸ್ತಾರದಲ್ಲಿ ಅರವತ್ತಾರು ಶ್ರುತಿಗಳಿವೆಯೆಂದು ಶಿವಶರಣನು (ಅಲೇನ್ ಡೇನಿಯಲೌ) ಹೇಳುತ್ತಾನೆ. ಪ್ರಾಚೀನಾಚಾರ್ಯರಲ್ಲಿ ಒಬ್ಬನೂ ಬಿಡದೆ ಎಲ್ಲರೂ ಸ್ಥಾಯಿ ಅಥವಾ ಸ್ವರಾಷ್ಟಕದಲ್ಲಿರುವುದು ಇಪ್ಪತ್ತೆರಡೇ ಶ್ರುತಿಗಳೆಂದು ಹೇಳಿದರೂ ಅದನ್ನು ಇವನು ಉಲ್ಲಂಘಿಸುತ್ತಾನೆ. ಶಾರ್ಙ್ಗದೇವನಂತೂ ಅರವತ್ತಾರು ಎಂಬ ಶಬ್ದವನ್ನು ಸಹ ಬಳಸಲಿಲ್ಲ; ಮಂದ್ರಸ್ಥಾನ ಪ್ರದೇಶವಾದ ಹೃದಯದಲ್ಲಿ ಇಪ್ಪತ್ತೆರಡು ಶ್ರುತಿಗಳನ್ನು ಹೇಳಿ 'ಏವಂ ತಥಾ ಕಂಠೇ ತಥಾ ಶೀರ್ಷೇ ಶ್ರುತಿದ್ವಾವಿಂಶತಿರ್ಮತಾ' ಎಂದಿದ್ದಾನೆ. ಮತಂಗನಂತೂ ಇಂತಹವರಲ್ಲಿ ಹುಟ್ಟಬಹುದಾದ ಸಂದೇಹವನ್ನೇ ನಿವಾರಿಸಲೆಂದೇ ಏನೋ, ಕೋಹಲನ 'ಷಟ್‌ಷಷ್ಟಿ ಭಿನ್ನಾಃ ಖಲು ಕೇಚಿತ್' ಎನ್ನುವ ಮಾತಿಗೆ 'ಏವಂ ದ್ವಾವಿಂಶತಿಭೇದಭಿನ್ನಾಃ ಶ್ರುತಯೋ ದರ್ಶಿತಾಃ । ಇದಾನೀಂ ಷಟ್‌ಷಷ್ಟಿಭೇದ-ಭಿನ್ನಾಃ ಶ್ರುತಯಃ ಕಥ್ಯಂತೇ । ಮಂದ (? ಮಂದ್ರ)ಮಧ್ಯಮತಾರೇಷು ಉರಃಕಂಠಶಿರಸ್ಸು ತ್ರಿಷು ಸ್ಥಾನೇಷು ಪ್ರತ್ಯೇಕಂ ದ್ವಾವಿಂಶತಿಪ್ರಕಾರತಯಾ ಭಿದ್ಯಮಾನೇಷು ಶ್ರುತಯೋ ಹಿ ಷಟ್‌ಷಷ್ಟಿಭೇದಭಿನ್ನಾ ಭವಂತೀತಿ ಕೇಚಿನ್ಮನ್ಯಂತೇ ।' ಎಂದು ನಿಸ್ಸಂಧಿಗ್ಧವಾದ ವ್ಯಾಖ್ಯಾನವನ್ನು ಬರೆಯುತ್ತಾನೆ.

ಅಷ್ಟೇ ಅಲ್ಲದೆ ಮಂದ್ರಸ್ಥಾಯಿಯಲ್ಲಿ ಎಂದರೆ ನೀಚತಮ ನಾದಪ್ರದೇಶದಲ್ಲಿ ಇಪ್ಪತ್ತೆರಡು ಶ್ರುತಿಗಳನ್ನು ನಮ್ಮ ಶಾಸ್ತ್ರವು ಹೇಳುತ್ತದೆ. ಅತ್ಯಂತ ಮಂದ್ರತಮ ಧ್ವನಿಯೆಂದು ಪಿಯಾನೋವಿನ 34.7 ಕಂಪನ ಸಂಖ್ಯೆಯನ್ನಿಟ್ಟು ಕೊಂಡರೂ ಇದರ ಆವರ್ತಕದ (ಎಂದರೆ ಸ್ಥಾಯಿಯ) ವಿಸ್ತಾರದಲ್ಲಿ, ಎಂದರೆ 34.7 ಕಂಪನಗಳ ವಿಸ್ತಾರದಲ್ಲಿ 66 ಸ್ಥಾನಗಳನ್ನು ಹುಡುಕಬೇಕಾಗುತ್ತದೆ; ಅಥವಾ ಅಲೆಕ್ಸಾಂಡರ್ ವುಡ್‌ನನ್ನು ಅನುಸರಿಸಿ (ಪು. 185) 66 ಕಂಪನಸಂಖ್ಯೆಯನ್ನಿಟ್ಟುಕೊಂಡರೂ ಒಂದೊಂದು ಕಂಪನಕ್ಕೆ ಒಂದೊಂದು ಶ್ರುತಿಯನ್ನಿಡಬೇಕಾಗುತ್ತದೆ. ಧ್ವನ್ಯಂತ-ರಾಶ್ರುತಿ, ಅಣುಶಃ ಸ್ವರೂಪದ ಉತ್ಕರ್ಷಾಪಕರ್ಷಗಳಿಂದ ಉಂಟಾದ ಧ್ವನಿವೈಲಕ್ಷಣ್ಯ ಎಂದು ಮುಂತಾಗಿ ಶ್ರುತಿಯ ಲಕ್ಷಣವನ್ನು ಹೇಳಿರುವುದರಲ್ಲಿ ಮತ್ತು ಶ್ರುತಿನಿದರ್ಶನ ಸಂದರ್ಭದಲ್ಲಿ, ಈ ಶ್ರುತಿಗಳ ಇಯತ್ತಾ ಪೂರ್ವಕ ಜ್ಞಾನ ವನ್ನು ಸಂಪಾದಿಸಲೆಳಸುವ ಸಾಧಕನಿಗೆ ಎಂತಹ ವಿಶೇಷ ಅರ್ಹತೆಗಳಿರಬೇಕು ಎಂಬುದನ್ನು ಸೂಚಿಸಿದೆ. ಇಪ್ಪತ್ತೆರಡು ಶ್ರುತಿಗಳಿಗೇ ಹೀಗಾದಮೇಲೆ ಇನ್ನು ಅರವತ್ತಾರರ ಗತಿಯೇನು ? ಅಲ್ಲದೆ ಸ್ವರವ್ಯವಸ್ಥೆಗೆಂದು ಹೇಳಿದ 'ಚತುಶ್ಚತುಶ್ಚತುಶ್ಚೈವ ಷಡ್ಜಮಧ್ಯಮಪಂಚಮಾಃ' ಎಂದು ಮುಂತಾದ ವಿನಿಯೋಗಕ್ಕಾಗಲೀ, ಸಂವಾದಿ,

ವಿವಾದಿ, ಅನುವಾದಿಗಳಿಗೆ ಶ್ರುತ್ಯಂತರಗಳ ಮೂಲಕ ಹೇಳಿದ ಲಕ್ಷಣಗಳಿಗಾಗಲೀ, ಸ್ವರಾಷ್ಟಕದಲ್ಲಿ ಶ್ರುತಿಪ್ರಮಾಣ ಪೂರ್ವಕವಾಗಿ ಹೇಳಿದ ವಿಕೃತಿಸ್ವರ ಲಕ್ಷಣಗಳಿಗಾಗಲೀ, ಅನ್ವಯವು ಹೇಗೆ? ಭರತ ಮತಂಗ ಶಾರ್ಙ್ಗದೇವರು ಹೇಳಿದ ಶ್ರುತಿನಿದರ್ಶನ ಪದ್ಧತಿಯಲ್ಲಿ ಅಡಕವಾಗಿರುವ ತತ್ತ್ವ, ತಂತ್ರ, ಪ್ರಮೇಯ ಮುಂತಾದವುಗಳಿಗೆ ಗತಿಯಾದರೂ ಎಲ್ಲಿ ಉಳಿಯುತ್ತದೆ? ಪ್ರಾಚೀನ ಸಂಗೀತಶಾಸ್ತ್ರ ಮರ್ಯಾದೆಯನ್ನೂ ಆಧುನಿಕ ಭಾರತೀಯ ಸಂಗೀತದ ಆವಶ್ಯಕತೆಗಳು, ಸ್ವಭಾವ ಮುಂತಾದವುಗಳನ್ನೂ ಅರಿಯದೆ ಸ್ವಕಪೋಲನಿರ್ಮಿತವಾದ ಈ ಸಿದ್ಧಾಂತವನ್ನು ಸ್ಥಾಪಿಸ ಲೆಳಸುವುದು ಸಾಹಸದ ಮಾತೇ ಸರಿ.

### ಶಿವಶರಣನ ಕಲ್ಪನೆಗಳು

ಶಿವಶರಣನಿಗೆ ಭಾರತೀಯ ಸಂಗೀತದ ಅಂತಃಸ್ವರೂಪದ ಪರಿಚಯವಿಲ್ಲವೆಂದು ಅವನ ಮಾತುಗಳಿಂದಲೇ ತಿಳಿಯುತ್ತದೆ :

1) ಉತ್ತರಾದಿಸಂಗೀತದ ಬಿಲಾವಲ್ (ಅಥವಾ ಕರ್ಣಾಟಕ ಸಂಗೀತದ ಶಂಕರಾಭರಣ) ರಾಗವನ್ನು ಶುದ್ಧ ಸ್ವರಸಪ್ತಕವೆಂದು ಎಣಿಸಿರುವುದು :

With C as tonic, the white keys of any keyed instrument, such as the piano or organ, give approximately the major mode or unaltered (shuddha) scale, the scale of Bilaval in modern Indian Music. Then the different modes can easily be visualised as modifications of this basic (shuddha) scale.[304]

2) 'ರಾಗಜನಕೋ ಧ್ವನಿಃ ಸ್ವರಃ' ಎಂಬ ಮತಂಗೋಕ್ತಿಯಲ್ಲಿನ ರಾಗ ಎಂಬ ಶಬ್ದಕ್ಕೆ ಉಕ್ತಿ, ಅಭಿವ್ಯಕ್ತಿ ಮುಂತಾದ ಅರ್ಥಗಳನ್ನು ಹೇಳುವುದು :

As Matanga says : "The sound that generates an expression is a svara, a note."[305]

3) ಶುದ್ಧ ಸ್ವರಾಷ್ಟಕದಲ್ಲಿರುವ ಸ್ವರಗಳನ್ನು ಅಪಕರ್ಷಿಸಿ, ಎಂದರೆ ಕಡಿಮೆಮಾಡಿ, ಇತರ ಮೂರ್ಛನಾದಿ ಗಳನ್ನು ಪಡೆಯಬಹುದೆನ್ನುವುದು :

Indian music recognizes seven main notes and two secondary notes or svaras. These notes represent definite intervals and as such, form the basic or "natural" (shuddha) scale. They can, however, be raised or lowered to form other scales. In that case they are considered "altered" vikrita). The notes that form the basic scale are called pure (shuddha) ; notes lowered by half a tone are said to be komala (soft = flat) ; notes raised by half a tone are called tivra (sharp).[305]

ಹೀಗೆ ಇಪ್ಪತ್ತನೆಯ ಶತಮಾನದಲ್ಲಿ ಔತ್ತರೇಯರು ಬಳಸಿದ ಪರಿಭಾಷೆಯನ್ನು ಕೋಹಲ ಮತಂಗಾದಿಗಳಿಗೇ ಶಿವಶರಣನು ಅನ್ವಯಿಸುತ್ತಾನೆ !

4) ಸ್ವರಗಳ ಅಭಿವ್ಯಕ್ತಿಯು ಅವುಗಳ ಉತ್ಪತ್ತಿಯಾದಮೇಲೆ ಕಾಲಾನಂತರದಲ್ಲಿ ಆಗುತ್ತದೆನ್ನುವುದು :

The expressive sound, attractive and pleasing, which resounds

---

304 Alain Danielou, *op. cit.*, p. 41. 305 *Ibid.*, p. 42.

immediately after the exact interval (the shruti) has manifested itself, is called svara, note (Sangita Darpanam, I, 57)[306]

ಶ್ರುತ್ಯನಂತರಭಾವೀ ಎಂದು ಶಾರ್ಙ್ಗದೇವಾದಿಗಳು[307] ಸ್ವರಕ್ಕೆ ಹೇಳಿದ ಅರ್ಥವನ್ನಿಲ್ಲಿ ಅವನು ಅನ್ಯಥಾ ತಿಳಿದಿದ್ದಾನೆ. ಹಾಗೆಯೇ ಈ ಅರ್ಥವು ಕಲ್ಲಿನಾಥನು ಇದಕ್ಕೆ 'ಶ್ರುತ್ಯನಂತರಭಾವೀ — ಶ್ರುತೇಶ್ಚತುರ್ಥ್ಯಾದೇಃ ಮ್ಮಾರುತಾದ್ಯಾಹತ್ಯುತ್ಪನ್ನಪ್ರಥಮಧ್ವನೇರನಂತರಂ ಭಾವ್ಯಾವಿರ್ಭವನಶೀಲಃ' ಎಂದು ಮಾಡುವ ವ್ಯಾಖ್ಯಾನಕ್ಕೂ[308] ಸಿಂಹಭೂಪಾಲನು 'ಪ್ರಥಮತಂತ್ರ್ಯ್ಯಮಾಹತಾಯಾಂ ಯೋ ಧ್ವನಿರನುರಣಶೂನ್ಯ ಉತ್ಪದ್ಯತೇ ಸ ಶ್ರುತಿಃ, ಯಸ್ತು ತತೋ ಅನಂತರಮನುರಣನರೂಪಃ ಶ್ರೂಯತೇ ಸ ಸ್ವರಃ' ಎಂದು ಇದಕ್ಕೆ ಅರ್ಥವಿಸ್ತಾರ ಮಾಡುವುದಕ್ಕೂ[309] ವಿರುದ್ಧವಾಗಿದೆ.

5) 'ಸ್ವರಾ ವ್ಯಜ್ಯಂತೇ ಶ್ರುತಿಭಿಃ' ಎಂಬ ಮತಂಗೋಕ್ತಿಗೆ ಶ್ರುತಿ ಎನ್ನುವಲ್ಲಿ ಗೇಯಸಂದರ್ಭದಲ್ಲಿ ಆಧಾರವಾಗಿ ಪಡೆದ ಧ್ವನಿ (ಆಧಾರ ಶ್ರುತಿ) ಎಂದು ಅಪಾರ್ಥವನ್ನು ಕಲ್ಪಿಸಿರುವುದು :

"Shadja and the other notes (svaras) are always manifested through the 'interval they form with the tonic,' their shrutis just as a pitcher in the dark is made manifest by a lamp." [305]

6) ಶ್ರುತಿಯೆಂಬುದಕ್ಕೆ ಕೇಳಿಸಿದ್ದು ಎಂದು ಮಾತ್ರ ಅರ್ಥಮಾಡುವುದು :[310] ಭಾರತೀಯ ಸಂಗೀತದಲ್ಲಿ ವಿವಿಧ ಸ್ವರಗಳನ್ನು ಬೇರೆ ಬೇರೆ ಸ್ಥಾನಗಳಲ್ಲಿಯೂ, ಷಡ್ಜಗ್ರಾಮವನ್ನು ಬೇರೆ ಬೇರೆ ರಾಗಗಳಿಗೂ, ಬೇರೆ ಬೇರೆ ಕಾಲಗಳಲ್ಲಿ ಸಮೀಕರಿಸಲಾಗಿತ್ತೆನ್ನುವುದು ; ಹಾಗೂ ಕಾಲವು ಕಳೆದಂತೆಲ್ಲ ಆಧಾರಸ್ವರವೂ ಬದಲಾಯಿಸಿತೆನ್ನುವುದು :

The names and classification of the intervals, the shrutis, as given in the ancient and medieval books, present many problems of interpretation. For this there are the following reasons : 1) at different periods, different notes were taken as the tonic ; 2) the more ancient treatises have envisaged a descending scale, more recent ones, an ascending scale ; 3) even the scale considered natural was different at different periods. These difficulties will not surprise us if we remember that not only hundreds but thousands of years may have elapsed between the composition of different treatises.[310]

7) ಶಾಸ್ತ್ರದಲ್ಲಿ ಅರವತ್ತಾರು ಶ್ರುತಿಗಳು ಒಂದು ಸ್ಥಾಯಿಯ ವ್ಯಾಪ್ತಿಯಲ್ಲಿ ಸಿದ್ಧವಾದರೂ ಪ್ರಯೋಗದಲ್ಲಿ ಇಪ್ಪತ್ತೆರಡು ಉಪಯೋಗವಾಗುತ್ತವೆ, ಎನ್ನುವುದು : ಈ ಅರವತ್ತಾರನ್ನು ಸಾಮಾನ್ಯನ ಕಿವಿಯು ಗ್ರಹಿಸುತ್ತದೆಂದು ಭಾರತೀಯ ಸಂಗೀತಶಾಸ್ತ್ರವು ಹೇಳುತ್ತದಂತೆ ! ಈ ಇಪ್ಪತ್ತೆರಡರಲ್ಲಿ ಸರಳವಾದ ಅನುಪಾತಗಳಿರುವುದರಿಂದ ಲಕ್ಷ್ಯಪ್ರಸಿದ್ಧಿಯುಂಟಾಗುತ್ತದಂತೆ ; ಸ್ಥಾಯಿಯಲ್ಲಿ ಅರವತ್ತಾರು ಧ್ವನಿಗಳು, ಇಪ್ಪತ್ತೆರಡು ಸ್ವರಗಳು, ಹೀಗೆ ನಿಕರವಾಗಿ ನಾವು ಗುರುತಿಸಬಹುದು, ಎಂದವನು ನಿರ್ಭಯವಾಗಿ ಹೇಳುತ್ತಾನೆ. ಕೋಹಲನು ಹೇಳುವ 22, 66 ಮತ್ತು ಅನಂತಶ್ರುತಿಗಳು ಇವನ ಪ್ರಕಾರ ಮೂರು ವಿಧದ ಶ್ರುತಿಗಳು !

---

306 *Ibid.*, p. 43.

307 ಶಾರ್ಙ್ಗದೇವ, ಉ. ಗ್ರಂ., I, 3, 24

308 ಕಲ್ಲಿನಾಥ, ಉ. ಗ್ರಂ., ಪು. 82.

309 ಸಿಂಹಭೂಪಾಲ, ಉ. ಗ್ರಂ., ಪು. 82.

310 ಡೇನಿಯಲೌ, ಉ. ಗ್ರಂ., ಪು. 45.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

The Indian theory of music considers that a normal ear can easily perceive sixty-six distinct intervals within the compass of an octave – intervals, that is, which, when played one after another, appear distinctly as separate steps (we shall see later what these intervals are). We find, however, that among these intervals, twentytwo are chiefly used in music. These twentytwo are those which represent the simpler ratios with the tonic and which convey to our mind the most distinct and pleasing expressions. In practice, therefore, the shrutis are said to number twentytwo, though, theoretically, sixtysix are possible. We may say, then, that within one octave we can accurately distinguish twentytwo distinct expressions and sixtysix distinct pitches ; beyond this we can naturally conceive of limitless relations of sounds, but we shall never be able to recognize them easily by ear, so they cannot be utilized in music [311]

Three classes of intervals were already mentioned by Kohala :

" Some experts in the knowledge of intervals say that they number twentytwo. Others speak of sixtysix and some consider them numberless." [312]

8) ಭರತಾದಿಗಳ ಪಂಚಮವನ್ನು ಆಧುನಿಕ ಪಂಚಶ್ರುತಿ ಧೈವತಕ್ಕೆ ಸಮೀಕರಿಸುವುದು : ಇದಕ್ಕಿಂತ ಅವಿಚಾರರಮಣೀಯವಾದ, ಅಶಾಸ್ತ್ರೀಯವಾದ ಮಾತು ಬೇರೊಂದು ಇಡೀ ಸಂಗೀತಶಾಸ್ತ್ರಸಾಹಿತ್ಯದಲ್ಲಿಯೇ ಬೇರೆಡೆ ಬಹುಶಃ ದೊರೆಯಲಾರದು. ಒಂದೇ ಶ್ರುತಿಪ್ರಮಾಣಕ್ಕೆ ಜಿಜ್ಞಾಸೆಯಿಂದ ಉಳಿದ ವಿದ್ವಾಂಸರು ಭಿನ್ನಮತಗಳಲ್ಲಿ ಭಿನ್ನಸ್ಥಾನಗಳನ್ನು ಹುಡುಕಿ ತೆಗೆದಿದ್ದೂ ಅಷ್ಟು ಅಸಹಜವಲ್ಲ ; ಆದರೆ ಪಂಚಮದಂತಹ, ಇಡೀ ಸ್ವರಾಷ್ಟಕದಲ್ಲಿ ಅತಿಮುಖ್ಯವಾದ, ಸ್ವಯಂಭೂ ಸ್ವರವಾದ ಪಂಚಮದ ಸ್ಥಾನವು ನಮ್ಮ ಪೂರ್ವಾಚಾರ್ಯರಲ್ಲಿ ಯಾರಿಗೂ ಗೊತ್ತಿರಲಿಲ್ಲವೆಂದು ಹೇಳುವುದು, ಅಥವಾ ನಾವು ಅದನ್ನು ಪಂಚಶ್ರುತಿ ಧೈವತವೆಂದು ಭ್ರಮಿಸಿದ್ದೇವೆಂದು ಹೇಳುವುದು ಕೇವಲ ಉದ್ಧಟತನ ; ಶ್ರುತಿನಿದರ್ಶನದಲ್ಲಿ ಷಡ್ಜಗ್ರಾಮದ ಪಂಚಮವನ್ನು ಮಧ್ಯಮಗ್ರಾಮದ ಪಂಚಮದವರೆಗೆ ಅಪಕರ್ಷಿಸುವುದರಿಂದ ಉಂಟಾದ ಶ್ರುತಿಗೆ ಪ್ರಮಾಣಶ್ರುತಿಯೆಂದೂ, ಎಂದರೆ ಇತರ ಶ್ರುತಿಗಳ ಪ್ರಮಾಣಗಳನ್ನು ಪಡೆಯಲು ಮತ್ತು ಹೋಲಿಸಲು ಆಧಾರಭೂತವಾದ ಶ್ರುತಿಯೆಂದೂ, ಅದರ ಪ್ರಮಾಣವು 81/80 ಎಂದೂ ಇವನ ಕಲ್ಪನೆ. ಇವೆಲ್ಲವನ್ನೂ ಭರತ, ಮತಂಗರೇ ಹೇಳಿದರಂತೆ !

According to the explanations given by Bharata in the Natya Shastra and by Matanga in his Brihaddeshi, the interval, or shruti, used as the basis of the division of the octave is the comma diesis 81/80, defined as the difference between Pa [modern Dha (A)] considered as the upper fourth (ratio 3/4) from Ri [modern Ga (E)] and Pa as the lower fourth (3/4) from Sa [modern Ri (D)]. This comma is called the " measuring " or " standard " interval. [313]

311 ಅದೇ ಗ್ರಂಥ, ಪು. 45-46. 312 ಅದೇ ಗ್ರಂಥ, ಪು. 46. 313 ಅದೇ ಗ್ರಂಥ, ಪು. 46-47.

ಹೀಗೆ ಆಧುನಿಕರ ಸ್ವರಗಳಲ್ಲಿ ಪ್ರತಿಯೊಂದೂ ಪ್ರಾಚೀನರ ಸ್ವರಗಳಿಗಿಂತ ಹೆಸರು ಮತ್ತು ಪ್ರಮಾಣಗಳಲ್ಲಿ ಭಿನ್ನವಾಗಿದೆಯೆಂದು ಅವನ ಅನುಮಿತಿ. ಅಲ್ಲದೆ 'ಏವಂ ಸ್ವಶ್ರುತ್ಯುತ್ಕರ್ಷಾದಪಕರ್ಷಾದ್ವಾ ಯದಂತರಂ ಮಾರ್ದವಾದಾಯತತ್ವಾದ್ ವಾ ತತ್ಪ್ರಮಾಣಂ ಶ್ರುತಿಃ' ಎಂಬ ಭರತೋಕ್ತಿಯನ್ನು ಅವನು ಅನುವಾದ ಮಾಡುವ ವೈಖರಿಯಾದರೂ ಹೇಗಿದೆ!

"The interval produced by the raising or lowering of Panchama (modern A, Dha), [which can also be envisaged as a] softening or [a difference in string] length called the "standard interval" (pramana shruti)" [Natyashastra, 28, 22; and Brihaddeshi, comm. on. I, 28.][313]

ದ್ವಾವಿಂಶತಿ ಶ್ರುತಿಗಳನ್ನು ಅವನು ಪಡೆಯುವುದು ಎಲ್ಲಾ ಶಾಸ್ತ್ರಕಾರರೂ ಹೇಳುವಂತೆ 9+4+9 ಎಂದಲ್ಲ; (9+3+9)+1 ಎಂದು. ಕಡೆಯ ಶ್ರುತಿಗೆ ಡೈಡಿಮಸ್ಸನ ಕಾಮಾ 81/80 ರಷ್ಟು ಪ್ರಮಾಣ; ಇದು ನಮ್ಮ ಸ್ವರಾಷ್ಟಕದ ನಿರ್ಮಿತಿಗೆ ಮೂಲಭೂತವಾದುದು; ಅನೇಕ ಸ್ವರಪ್ರಮಾಣಗಳ ಪರಸ್ಪರ ವ್ಯತ್ಯಾಸಗಳು ಇದರಿಂದಾಗಿವೆ, ಎಂದೂ ಅವನು ಹೇಳುತ್ತಾನೆ. ನಮ್ಮ ಸಂಗೀತಶಾಸ್ತ್ರದ ಎಲ್ಲಾ ಮುಖ್ಯ ಪ್ರಮೇಯಗಳಿಗೂ ವಿರುದ್ಧವಾಗಿರುವ ಇವನ ಮತದ ವಿವೇಚನೆಯನ್ನು ಮುಂದುವರಿಸುವುದರಿಂದ ವಿಶೇಷವಾದ ಪ್ರಯೋಜನವೇನೂ ಕಾಣದು. ಇದನ್ನು ಅಭ್ಯಾಸಿಗಳು ಸ್ವಂತವಾಗಿ ಓದಿಕೊಂಡು ಪ್ರಾಚೀನ ಸಂಗೀತಶಾಸ್ತ್ರ ಪ್ರಮೇಯಗಳೊಡನೆ ತುಲನಾತ್ಮಕ ಅಧ್ಯಯನವನ್ನು ಮಾಡುವುದರಿಂದ ವಿವೇಚನಾ ಶಕ್ತಿಯನ್ನೂ ಖಂಡನಾ ಸಾಮರ್ಥ್ಯವನ್ನೂ ಹೆಚ್ಚಿಸಿಕೊಳ್ಳಬಹುದು. ಇಲ್ಲಿ ಶಿವಶರಣನು ಹೇಳಿರುವ ಅರವತ್ತಾರುಶ್ರುತಿಗಳ ಸ್ವರಾಷ್ಟಕವನ್ನು ವರ್ಣಿಸಿ ಅದರ ಕೆಲವು ದೋಷಗಳನ್ನು ಮಾತ್ರ ತೋರಿಸಲಾಗುವುದು. ಶಿವಶರಣನ ಷಟ್‌ಷಷ್ಟಿಶ್ರುತಿಗಳನ್ನು ಈ ಪಥಕದಲ್ಲಿ ಸಂಗ್ರಹಿಸಬಹುದು:

| ಶ್ರುತಿ ಸಂಖ್ಯೆ | ಆಧಾರ ಸ್ವರದಿಂದ ಅಂತರ | ಸ್ವರದ ಹೆಸರು | ಶ್ರುತಿ ಸಂಖ್ಯೆ | ಆಧಾರ ಸ್ವರದಿಂದ ಅಂತರ | ಸ್ವರದ ಹೆಸರು | ಶ್ರುತಿ ಸಂಖ್ಯೆ | ಆಧಾರ ಸ್ವರದಿಂದ ಅಂತರ | ಸ್ವರದ ಹೆಸರು |
|---|---|---|---|---|---|---|---|---|
| 1 | 1/1 | ಸ * | 11 | 10/9 | ಪಂ.ರಿ.— | 21 | 100/81 | ಅಂ. ಗ – |
| 2 | 81/80 | ಸ+ | 12 | 9/8 | ಪಂ.ರಿ.* | 22 | 5/4 | ಅಂ. ಗ * |
| 3 | 128/125 | ಸ+ + | 13 | 256/225 | ಪಂ.ರಿ.+ | 23 | 81/64 | ಅಂ. ಗ + * |
| 4 | 31/30 | $\frac{1}{4}$° | 14 | 15/13 | ಪಂ.ರಿ.++ | 24 | 32/25 | ಅಂ.ಗ++ |
| 5 | 25/24 | ಶು. ರಿ – – | 15 | 93/80 | $\frac{1}{4}$° | 25 | 31/24 | $\frac{1}{4}$° |
| 6 | 256/243 | ಶು. ರಿ – * | 16 | 75/64 | ಸಾ.ಗ.—* | 26 | 125/96 | ಶು. ಮ – – |
| 7 | 16/15 | ಶು. ರಿ° | 17 | 32/27 | ಸಾ.ಗ* | 27 | 320/243 | ಶು. ಮ – |
| 8 | 27/25 | ಶು. ರಿ+ | 18 | 6/5 | ಸಾ.ಗ+* | 28 | 4/3 | ಶು. ಮ * |
| 9 | 135/124 | $\frac{3}{4}$° | 19 | 75/62 | $\frac{3}{4}$° | 29 | 27/20 | ಶು. ಮ + |
| 10 | 800/729 | ಪಂ. ರಿ – – | 20 | 243/200 | ಅಂ. ಗ – – | 30 | 512/375 | ಶು.ಮ++ |

| ಶ್ರುತಿ ಸಂಖ್ಯೆ | ಆಧಾರ ಸ್ವರದಿಂದ ಅಂತರ | ಸ್ವರದ ಹೆಸರು | ಶ್ರುತಿ ಸಂಖ್ಯೆ | ಆಧಾರ ಸ್ವರದಿಂದ ಅಂತರ | ಸ್ವರದ ಹೆಸರು | ಶ್ರುತಿ ಸಂಖ್ಯೆ | ಆಧಾರ ಸ್ವರದಿಂದ ಅಂತರ | ಸ್ವರದ ಹೆಸರು |
|---|---|---|---|---|---|---|---|---|
| 31 | 62/45 | ¼° | 43 | 25/16 | ಶು. ಧ – * | 55 | 16/9 | ಕೈ. ನಿ. * |
| 32 | 25/18 | ಪ್ರ. ಮ – – | 44 | 128/81 | ಶು. ಧ * | 56 | 9/5 | ಕೈ. ನಿ + * |
| 33 | 45/32 | ಪ್ರ. ಮ – * | 45 | 8/5 | ಶು. ಧ + * | 57 | 29/16 | ¾° |
| 34 | 64/45 | ಪ್ರ. ಮ * | 46 | 50/31 | ¾° | 58 | 11/6 | ಕಾ. ನಿ – – |
| 35 | 36/25 | ಪ್ರ. ಮ + | 47 | 81/50 | ಪಂ. ಧ – – | 59 | 50/27 | ಕಾ. ನಿ – |
| 36 | 90/62 | ¾° | 48 | 400/243 | ಪಂ. ಧ – | 60 | 15/8 | ಕಾ. ನಿ * |
| 37 | 375/256 | ಪ – – | 49 | 5/3 | ಪಂ. ಧ * | 61 | 243/128 | ಕಾ. ನಿ + * |
| 38 | 40/27 | ಪ – | 50 | 27/16 | ಪಂ. ಧ + * | 62 | 48/25 | ಕಾ. ನಿ + + |
| 39 | 3/2 | ಪ * | 51 | 128/75 | ಪ. ಧ + + | 63 | 60/31 | ¼° |
| 40 | 243/160 | ಪ + | 52 | 31/18 | ¼° | 64 | 125/64 | ಸ – – |
| 41 | 192/125 | ಪ + + | 53 | 125/72 | ಕೈ. ನಿ – – | 65 | 160/81 | ಸ – |
| 42 | 31/20 | ¼° | 54 | 225/120 | ಕೈ. ನಿ – * | 66 | 2/1 | ಸ¹* |

ಪಥಕ (21)

**ಷಟ್‌ಷಷ್ಟಿ ಶ್ರುತಿಗಳು : ಶಿವಶರಣ ಪದ್ಧತಿ**

ಸಂಜ್ಞೆಗಳು : ಸ = ಷಡ್ಜ, ಶು. ರಿ = ಶುದ್ಧ ರಿಷಭ, ಪಂ. ರಿ = ಪಂಚಶ್ರುತಿರಿಷಭ, ಸಾ. ಗ = ಸಾಧಾರಣ ಗಾಂಧಾರ, ಅಂ. ಗ = ಅಂತರ ಗಾಂಧಾರ, ಶು. ಮ = ಶುದ್ಧ ಮಧ್ಯಮ, ಪ್ರ.ಮ = ಪ್ರತಿಮಧ್ಯಮ, ಪ = ಪಂಚಮ, ಶು. ಧ = ಶುದ್ಧ ಧೈವತ, ಪಂ. ಧ = ಪಂಚಶ್ರುತಿ ಧೈವತ, ಕೈ. ನಿ = ಕೈಶಿಕಿ ನಿಷಾದ, ಕಾ. ನಿ = ಕಾಕಲೀ ನಿಷಾದ, ಸ¹ = ಪ್ರಥಮಾವರ್ತಕ (ಮೇಲು ಸ್ಥಾಯಿಯ) ಷಡ್ಜ. * = ಲಕ್ಷ್ಯದಲ್ಲಿ ಪ್ರಯೋಗಬಾಹುಳ್ಯವನ್ನು ಪಡೆದಿರುವ ಸ್ವರ; ¼° ಅಥವಾ ¾° = ವಿರಾಮ. +, + + = ಆಯಾ ಹೆಸರಿನ ಸ್ವರಕ್ಕೆ ಕ್ರಮವಾಗಿ ಒಂದು ಅಥವಾ ಎರಡು 'ಪ್ರಮಾಣ' ಶ್ರುತಿಯಷ್ಟನ್ನು (81/80) ಸೇರಿಸಿ ಆಯಾ ಶ್ರುತಿಯ ಪ್ರಮಾಣವನ್ನು ಪಡೆದಿದೆ. –, – – = ಆಯಾ ಹೆಸರಿನ ಸ್ವರದಿಂದ ಕ್ರಮವಾಗಿ ಒಂದು ಅಥವಾ ಎರಡು ಪ್ರಮಾಣ ಶ್ರುತಿಯಷ್ಟನ್ನು ಕಳೆದು ಆಯಾ ಶ್ರುತಿಯ ಪ್ರಮಾಣವನ್ನು ಪಡೆದಿದೆ.

ಒಂದು ಸ್ಥಾಯಿಯ ವಿಸ್ತಾರದಲ್ಲಿ ಲಕ್ಷ್ಯಪ್ರಸಿದ್ಧವಾಗಿರುವ ಹನ್ನೆರಡು ಸ್ವರಸ್ಥಾನಗಳಲ್ಲಿ ಪ್ರತಿಯೊಂದರಿಂದಲೂ ಆಯಾ ಸ್ಥಾನದಿಂದ ತಾನು ಪ್ರಮಾಣ ಶ್ರುತಿಯೆಂದು ಸ್ವೀಕರಿಸಿದುದರಲ್ಲಿ ಒಂದನ್ನು ಅಥವಾ ಎರಡನ್ನು ಕಳೆದು ಅಥವಾ ಸೇರಿಸಿ ಐವತ್ತುಮೂರು ಶ್ರುತಿಗಳನ್ನು ಪಡೆದಿರುವುದಾಗಿಯೂ, ನೆರೆಹೊರೆಯ ಸ್ವರಸ್ಥಾನಗಳಲ್ಲಿ ನಡುವೆ ಇರುವ ಪ್ರದೇಶದಲ್ಲಿ ಒಂದೊಂದು ಪರಿಚ್ಛಿನ್ನವಾದ ವಿರಾಮವನ್ನಿಟ್ಟು ಹನ್ನೆರಡು ಶ್ರುತಿಗಳನ್ನು ಪಡೆದಿರುವು

ದಾಗಿಯೂ, ಅಷ್ಟಮಸ್ವರದ ಸ್ಥಾನವನ್ನು ಪ್ರತ್ಯೇಕವಾಗಿ ಒಂದು ಶ್ರುತಿಯೆಂದು ಗಣಿಸಿರುವುದಾಗಿಯೂ ಶಿವಶರಣನು ಹೇಳಿ ಒಟ್ಟು ಅರವತ್ತಾರು ಶ್ರುತಿಗಳನ್ನು ಪಡೆದಿದ್ದಾನೆ:

The complete division of the octave is, however, attained by adding or subtracting either one or two commas from each of the twelve notes of the basic chromatic scale. This gives us a series of 53 intervals which cannot all be used in modal scales though they may come into use through modulations (change of tonic) or in certain forms of polyphony. If we further divide the disjunction which appears at each half tone of this scale so as to form quarter tones, we obtain the division of the octave (Sa to upper Sa) into 65 intervals—that is, counting the note that forms the octave itself, the scale of sixtysix intervals or shrutis spoken of by Kohala.[314]

### ನಿರಾಕರಿಸಲು ಕಾರಣಗಳು

ಪ್ರಾಚೀನಾಚಾರ್ಯರು ಒಂದು ಸ್ಥಾಯಿಯ ವಿಸ್ತಾರದಲ್ಲಿ ಅರವತ್ತಾರು ಶ್ರುತಿಗಳನ್ನು ಹೇಳಲಿಲ್ಲವೆಂಬುದಂತೂ ಮತಂಗ, ಅಭಿನವಗುಪ್ತ, ಶಾರ್ಙ್ಗದೇವರುಗಳ ಮಾತಿನಿಂದ ಸ್ಪಷ್ಟವಾಗಿಯೇ ಇದೆ. ಆದರೂ ಇದಕ್ಕೆ ಯಾವುದಾದರೂ ಒಂದು ರೀತಿಯಲ್ಲಿ ಸಾಮಂಜಸ್ಯವನ್ನು ತಂದುಕೊಡಲು ಸಾಧ್ಯವಾದೀತೇ ಎಂದು ಪ್ರಯತ್ನಿಸಿದರೂ ಈ ಮುಂದೆ ಹೇಳುವ ಕಾರಣಗಳು ಇದಕ್ಕೆ ಸ್ವಲ್ಪವೂ ಆಸ್ಪದವನ್ನು ಕೊಡುವುದಿಲ್ಲ.

i) ಇಡೀ ಸ್ಥಾಯಿಯ ವಿಸ್ತಾರವನ್ನು ಎರಡು ಶ್ರುತಿವಿಧಗಳಿಂದ ಮಾತ್ರ ಬೆಳೆಸಲಾಗಿದೆ; ಇವುಗಳಲ್ಲಿಯೂ ಸ್ವರಪ್ರಮಾಣಗಳ ನಿರ್ಮಿತಿಗೆ 81/80 ಎಂಬ ಪ್ರಮಾಣವೊಂದನ್ನು ಮಾತ್ರ ಬಳಸಲಾಗಿದೆ. ಒಂದೇ ಶ್ರುತಿ ಪ್ರಮಾಣದಿಂದ ಸ್ವರಾಷ್ಟಕವು ನಿರ್ಮಾಣವಾಗಿದೆಯೆಂದಾಗಲೀ, ಆಗಬೇಕೆಂದಾಗಲೀ ಯಾವ ಶಾಸ್ತ್ರಕಾರನೂ ಹೇಳಿಲ್ಲ. ಬಹು ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿರುವ ದೀಪ್ತಾದಿ ಶ್ರುತಿಜಾತಿ ಪಂಚಕವನ್ನು ಇದು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.

ii) ಸ್ಥಾಯಿಯಲ್ಲಿ ಒಂದೇ ವಿಧದ ಶ್ರುತಿಪ್ರಮಾಣವನ್ನು ತೆಗೆದುಕೊಂಡಿರುವುದರಿಂದ ಸಮಾನಸ್ಥಾನ–ಪಲ್ಲಟ ತತ್ತ್ವವನ್ನು ಅನ್ವಯಿಸಿದಂತಾಗುತ್ತದೆ. ಈ ತತ್ತ್ವವು ಭಾರತೀಯ ಸಂಗೀತ ಶಾಸ್ತ್ರಮರ್ಯಾದೆಯನ್ನು ಮೀರಿದುದು. ಇದರಿಂದ ದ್ವಿಶ್ರುತಿ, ತ್ರಿಶ್ರುತಿ, ಚತುಃಶ್ರುತಿ ಪ್ರಮಾಣಗಳ ಮೂಲಭೂತ ಕಲ್ಪನೆಗೆ ಭಾಧೆಯುಂಟಾಗುತ್ತದೆ.

iii) ದ್ವಾದಶ ಸ್ವರಸ್ಥಾನಗಳ ಮಧ್ಯದಲ್ಲಿ ವಿರಾಮದ (disjunction) ಪ್ರಮಾಣಗಳನ್ನು ಸ್ಥಾಪಿಸಿರುವುದು ಎಲ್ಲಾ ಸಂಗೀತ ಶಾಸ್ತ್ರಕ್ಕೂ ವಿರುದ್ಧವಾಗಿದೆ; ಭಾರತೀಯ ಸಂಗೀತ ಶಾಸ್ತ್ರಕಾರರು ಶ್ರುತಿಗೆ ಹೇಳಿದ ನೈರಂತರ್ಯವೆಂಬ ಲಕ್ಷಣವನ್ನು ಇದು ನೇರವಾಗಿ ನಿರ್ಲಕ್ಷಿಸುತ್ತದೆ.

iv) ಈ ಅರವತ್ತಾರರಲ್ಲಿ ಇಪ್ಪತ್ತೈದು ಲಕ್ಷ್ಯಪ್ರಸಿದ್ಧಿಯನ್ನು ಪಡೆದು ಪ್ರಯೋಗ ಬಾಹುಳ್ಯವನ್ನು ಪಡೆದಿವೆಯೆಂದು ಅವುಗಳಿಗೆ ಪ್ರತ್ಯೇಕ ಸ್ಥಾನಮಾನಗಳನ್ನು ಕಲ್ಪಿಸಿರುವುದು ತುಂಬಾ ಅಶಾಸ್ತ್ರೀಯವಾಗಿದೆ. ಇಪ್ಪತ್ತೆರಡೇ ಶ್ರುತಿಸ್ಥಾನಗಳೆಂದೂ ಇವುಗಳಲ್ಲಿ ಹನ್ನೆರಡು ಮಾತ್ರ ಸ್ವರಾಭಿವ್ಯಕ್ತಿ ಪ್ರಯೋಜಕಗಳೆಂದೂ ಸರ್ವತ್ರವಾಗಿ ಶಾಸ್ತ್ರಸಿದ್ಧವಾಗಿರುವಾಗ ಇಪ್ಪತ್ತೈದು ಸ್ವರಸ್ಥಾನಗಳನ್ನು ಹೇಳುವುದಂತೂ ಅತ್ಯಂತ ಅಸಾಂಪ್ರತವಾದುದು.

314 ಅದೇ ಗ್ರಂಥ, ಪು. 48.

ಇವುಗಳು ದ್ವಾದಶ ಸ್ವರಸ್ಥಾನಗಳು ಪಡೆಯುವ ಗಮಕಮೂಲ ಅಭಿವ್ಯಕ್ತಿಪ್ರಕಾರಗಳೆಂಬುದು ಸ್ಪಷ್ಟವಾಗಿದೆ. ಗಮಕಗಳನ್ನು ಶ್ರುತಿಗಳೆಂದು ತಿಳಿಯುವುದು ಹೇಗೆ ತಪ್ಪೆಂದು ಸಧ್ಯದಲ್ಲಿಯೇ ತೋರಿಸಲಾಗುವುದು.

v) ಮೇಲಿನ ಅರವತ್ತಾರರಲ್ಲಿ 66-1, 6-7, 16-17-18, 22-23, 33-34-35, 43-44-45, 49-50, 54-55-56, 60-61 ಈ ಸ್ಥಾನಗಳಲ್ಲಿ ನೆರೆಹೊರೆಯ ಶ್ರುತಿಗಳಲ್ಲಿ ಒಂದೇ ಸ್ವರವನ್ನು ಸ್ಥಾಪಿಸಿದೆಯಷ್ಟೆ. ಅಭಿನವಗುಪ್ತನು ಹೇಳುವ ಸ್ಥಾನಸಾಂಕರ್ಯ, ಸ್ವರಸಾಂಕರ್ಯಗಳನ್ನು ಉಂಟು ಮಾಡುವುದರಿಂದ ಇವುಗಳನ್ನು ಒಪ್ಪಲಾಗದು. ಈ ಸ್ಥಾನಸಾಂಕರ್ಯವನ್ನು ಶಾಸ್ತ್ರದಲ್ಲಿ ತಪ್ಪಿಸಲೋಸುಗ ಸ್ವರಸಾಧಾರಣವೆಂಬ ವಿಶೇಷವಾದ ತತ್ತ್ವವನ್ನೇ ನಮ್ಮ ಶಾಸ್ತ್ರಕಾರರು ನಿರ್ಮಿಸಬೇಕಾಯಿತು. ಅದರಲ್ಲಿಯಾದರೂ ಒಂದೇ ಸ್ವರವು ಎರಡು ವಿಕೃತಿಗಳನ್ನು ಪಡೆಯಲು ಈ ತತ್ತ್ವವನ್ನು ಹೇಳಿದೆ. ಇಲ್ಲಿಯಾದರೋ ಒಂದೇ ವಿಕೃತಿಗೆ ಹಲವು ಸ್ಥಾನಗಳನ್ನು ಹೇಳಿದೆ. ಇದರಿಂದ ಸ್ವರ ಪ್ರಮಾಣದ ಇಯತ್ತೆಯು ನಿರರ್ಥಕವಾಗುತ್ತದೆ.

vi) ಶಿವಶರಣನು ಹೇಳಿರುವುದು ನಿಜವಾಗಿಯೂ ಅರವತ್ತಾರು ಶ್ರುತಿಗಳನ್ನಲ್ಲ, ಅರವತ್ತೈದನ್ನೇ. ದ್ವಾದಶಸ್ವರಸ್ಥಾನಗಳಿಂದ ಐವತ್ತಮೂರು, ಇವುಗಳ ಸಂಧಿಗಳಿಂದ ಹನ್ನೆರಡು—ಹೀಗೆ ಒಟ್ಟಿನಲ್ಲಿ ಅರವತ್ತೈದು ಶ್ರುತಿಗಳು. ಹೇಗಾದರೂ ಮಾಡಿ ಅರವತ್ತಾರನ್ನು ಸಾಧಿಸಲು ಅವನು ಆವರ್ತಕ ಸ್ವರವನ್ನೂ ಸೇರಿಸಿಕೊಂಡಿದ್ದಾನೆ. ಅಷ್ಟಮಸ್ವರದ ಸ್ಥಾನವನ್ನೂ ಸೇರಿಸಿಕೊಂಡರೆ ಸ್ಥಾಯಿಯ ವ್ಯಾಪ್ತಿಯಾದರೂ ಹೇಗೆ ಸಿದ್ಧಿಸುತ್ತದೆ? ಇದು ಸ್ಥಾಯಿಗಿಂತ ಹೆಚ್ಚಿನ ವಿಸ್ತಾರವಾಗುತ್ತದೆಂಬುದು ಅವನಿಗೆ ತಿಳಿಯದಿದ್ದುದು ಆಶ್ಚರ್ಯ. ಭರತ, ಮತಂಗ, ಶಾರ್ಙ್ಗದೇವರುಗಳು ದ್ವಾವಿಂಶತಿ ಶ್ರುತಿಗಳನ್ನು ಹೇಳಿರುವುದು ಕೇವಲ ಏಳು ಸ್ವರಗಳನ್ನುಳ್ಳ ಸ್ಥಾಯಿಗೆ, ಅಷ್ಟಮ ಸ್ವರದ ವಿಸ್ತಾರಕ್ಕಲ್ಲ. ಶ್ರುತಿ ನಿದರ್ಶನ ಸಮಯದಲ್ಲಿ ಅಷ್ಟಮ ಸ್ವರವಾದ ನಿಷಾದವನ್ನು ಪಡೆದರೂ ಸಪ್ತಸ್ವರಾತ್ಮಕವಾದ ಸ್ಥಾಯಿಯು ಇಲ್ಲಿಗೆ ಮುಗಿಯಿತು, ಎಂದು ಆದ್ಯಂತಗಳ ಸೀಮೆಯನ್ನು ತೋರಿಸಲು ಶಾಸ್ತ್ರ ಸಮ್ಮತವಾಗಿ ಮಾಡಿದ್ದಾರೆ; ಇದರಲ್ಲಿ ಇಪ್ಪತ್ತೆರಡು ಶ್ರುತಿಗಳೇ ಇರುವುದು, ಅಷ್ಟಮ ಸ್ವರವನ್ನು ಸೇರಿಸಿಕೊಂಡು ಅಲ್ಲ. ಆದುದರಿಂದ ಇವನ ಲೆಕ್ಕದಲ್ಲಿಯೇ ಒಂದು ಶ್ರುತಿಯಷ್ಟು ಹೆಚ್ಚಿನ ತಪ್ಪಿದೆ.

vii) ದ್ವಾದಶ ಸ್ವರಸ್ಥಾನಗಳಿಂದ ಒಂದು ಅಥವಾ ಎರಡು ಶ್ರುತಿಗಳನ್ನು ಕಳೆಯುವುದರಲ್ಲಿಯೂ, ಒಂದು ಅಥವಾ ಎರಡು ಶ್ರುತಿಗಳನ್ನು ಸೇರಿಸುವುದರಲ್ಲಿಯೂ ಒಂದೇ ತತ್ತ್ವವನ್ನು ಎಲ್ಲಾ ಸ್ವರಗಳಿಗೂ ಸಮನಾಗಿ ಅನ್ವಯಿಸಿಲ್ಲ. ಹೀಗೆ ಶುದ್ಧ ಋಷಭಕ್ಕೆ ಎರಡು ಶ್ರುತಿಗಳನ್ನು ಸೇರಿಸಿರುವ ಪ್ರಮಾಣವು ಇವನಲ್ಲಿ ಉಪಲಬ್ಧವಿಲ್ಲ. ಹೀಗೆಯೇ ಸಾಧಾರಣ ಗಾಂಧಾರ, ಶುದ್ಧ ಧೈವತಗಳಲ್ಲಿ - - ಮತ್ತು + + ಎಂಬ ಪ್ರಭೇದಗಳೂ ಪ್ರತಿ ಮಧ್ಯಮ, ಕೈಶಿಕಿ ನಿಷಾದಗಳಲ್ಲಿ + + ಎಂಬ ಪ್ರಮಾಣಗಳೂ ಕಂಡು ಬರುವುದಿಲ್ಲ. ಆದುದರಿಂದ ಈ ಶ್ರುತಿ ನಿರ್ಣಯಕ್ಕೂ ಸ್ವರಸ್ಥಾನ ನಿರ್ಣಯಕ್ಕೂ ಅನುಕೂಲ ಸಿಂಧುವೇ ಆಧಾರವಾಗಿರುವಂತೆ ಕಾಣುತ್ತದೆ.

viii) ಈ ಪದ್ಧತಿಯಲ್ಲಿ ಈಗಿನ ಕಾಲದಲ್ಲಿ ಲಕ್ಷ್ಯಪ್ರಸಿದ್ಧವಾಗಿರುವ ಹನ್ನೆರಡು ಸ್ವರಸ್ಥಾನಗಳನ್ನು ಆಧಾರ ಮಾಡಿಕೊಂಡು ಇದರಿಂದ ಶ್ರುತಿಸ್ಥಾನಗಳನ್ನು ಪಡೆಯಲಾಗಿದೆ; ಎಂದರೆ ಸ್ವರಸ್ಥಾನಗಳ ಜ್ಞಾನದಿಂದ ಶ್ರುತಿ ಪ್ರಮಾಣಗಳನ್ನು ಇದು ಬೋಧಿಸುತ್ತದೆ; ಆದುದರಿಂದ ಪೂರ್ವಗ್ರಹ ಪೀಡಿತವೇ ಆಗಿದೆ. ಭರತ ಮತಂಗರು ಈ ಕ್ರಮವನ್ನು ಹಿಡಿದರೂ ವಿಶಿಷ್ಟ ಸ್ವರಪ್ರಮಾಣಗಳ ವಿವಕ್ಷೆಯು ಅವರಲ್ಲಿಲ್ಲ. ಶಿವಶರಣನ ಕ್ರಮದಲ್ಲಿ ಶ್ರುತಿಯ ಬಗೆಗೆ ನಿರಾಲಂಬವೂ ನಿರಪೇಕ್ಷವೂ ಆದ ಕಲ್ಪನೆಯು ಉಂಟಾಗುವುದಿಲ್ಲ. ಶಾರ್ಙ್ಗದೇವನ ಶ್ರುತಿ ಕಲ್ಪನೆಯೂ ಶ್ರುತಿ ಪ್ರಮಾಣ ನಿರ್ಣಯವೂ ಶ್ರುತಿ ಲಕ್ಷಣವೂ ಸ್ವರತ್ವ, ಅಥವಾ ಸ್ವರ ಪ್ರಮಾಣಗಳ ಜ್ಞಾನದಿಂದ ನಿರಪೇಕ್ಷವೂ ಅಬಾಧಿತವೂ ಆಗಿವೆ. ಆದುದರಿಂದ ಈ ಕ್ರಮವು ಶಾರ್ಙ್ಗದೇವನ ಪದ್ಧತಿಗೆ ವಿರುದ್ಧವಾಗಿಯೂ ಅವೈಜ್ಞಾನಿಕವಾಗಿಯೂ ಇದೆ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ix) ಈ ಪದ್ಧತಿಯಲ್ಲಿರುವ ಅತ್ಯಂತ ತೀವ್ರವಾದ ದೋಷವೆಂದರೆ ಪ್ರಯೋಗಮೂಲವಾಗಿರದೆ ಕೇವಲ ಲೆಕ್ಕವನ್ನು ಆಧರಿಸಿರುವುದು. ಇಡೀ ಗ್ರಂಥದಲ್ಲಿ ಈ ಅರವತ್ತಾರು ಶ್ರುತಿಗಳನ್ನು ಪ್ರಯೋಗದಿಂದ ತಾಳೆನೋಡಿ ಸಿದ್ಧಪಡಿಸಿರುವುದು ಕಂಡುಬಂದಿಲ್ಲ. ಲಕ್ಷ್ಯಪ್ರಸಿದ್ಧವೆಂದು ಹೇಳಿರುವ 25 ಸ್ಥಾನಗಳೂ ಸಹ ಎಲ್ಲಿ ಪ್ರಸಿದ್ಧಿಯನ್ನೂ ಪ್ರಾಚುರ್ಯವನ್ನೂ ಪಡೆದಿವೆಯೆಂದು ಅಲ್ಲಿ ಹೇಳಿಲ್ಲ. ಈ ಗ್ರಂಥವು ರಚನೆಯಾಗಿರುವುದು ಹಿಂದೂಸ್ತಾನೀ ಸಂಗೀತದ ಜ್ಞಾನವನ್ನು ಅವಲಂಬಿಸಿ ಎಂಬುದು ಸ್ಪಷ್ಟವಾಗಿದೆ. ಅಲ್ಲಿಯೂ ಪಂಚಶ್ರುತೀಋಷಭ, ಪ್ರತಿಮಧ್ಯಮ ಮುಂತಾದ ಸ್ಥಾನಗಳಲ್ಲಿ ಲಕ್ಷ್ಯಪ್ರಸಿದ್ಧವಾದ ಇತರ ಸ್ಥಾನಗಳಿಲ್ಲವೆಂದೂ ಉಳಿದ ಕೆಲವೆಡೆಗಳಲ್ಲಿ ಮಾತ್ರ ನೆರೆಹೊರೆಯ ಸ್ಥಾನಗಳಲ್ಲಿ ಕೇವಲ 20 ಸೆಂಟುಗಳ ಅಂತರದಲ್ಲಿ, ಎಂದರೆ ಅರ್ಧ ಸ್ವರದ ಸುಮಾರು ಆರರಲ್ಲೊಂದರಷ್ಟು ಸಮೀಪವಾಗಿ ಲಕ್ಷ್ಯಪ್ರಸಿದ್ಧ ಸ್ಥಾನಗಳು ದೊರೆಯುತ್ತವೆಂದು ಹೇಳುವುದೂ ಅನುಭವವಿರುದ್ಧವಾಗಿದೆ.

x) ಈ ಮತದಿಂದ ಶ್ರುತಿಯ ಸಂಖ್ಯಾಮೂಲವಾದ ಪ್ರಮಾಣಗಳನ್ನು ಮಾತ್ರ ಹೇಳಿದಂತಾಯಿತೇ ಹೊರತು, ಶ್ರುತಿಯ ಸ್ವಭಾವ, ಲಕ್ಷಣ ಮುಂತಾದವುಗಳನ್ನು ಕುರಿತ ಯಾವ ತತ್ತ್ವ, ಪ್ರಮೇಯಗಳೂ ಸಿದ್ಧವಾಗುವುದಿಲ್ಲ; ಅಷ್ಟೇ ಅಲ್ಲ, ಪ್ರಾಚೀನ ಸಂಗೀತಶಾಸ್ತ್ರವು ಸ್ವರತ್ವಕ್ಕೆ ಶ್ರುತಿಯು ಹೇಗೆ ಹೇತುವಾಗಿದೆಯೆಂಬುದನ್ನು ಸ್ಪಷ್ಟವೂ ನಿರ್ದಿಷ್ಟವೂ ಆಗಿರುವ ಪ್ರಮೇಯಗಳಿಂದ ಸಿದ್ಧಪಡಿಸುತ್ತದೆ; ಈ ಮತದಲ್ಲಿ ಈ ವಿಷಯದಲ್ಲಿ ಯಾವ ಸೂಚನೆಯೂ ಅನುಮಿತಿಯೂ ಹೊರಡುವುದಿಲ್ಲ. ಅಷ್ಟೇ ಅಲ್ಲದೆ, ಪ್ರಾಚೀನ ಶಾಸ್ತ್ರವು ಶ್ರುತಿಗೆಂದು ವಿಧಿಸಿದ ನೈರಂತರ್ಯ, ಧ್ವನ್ಯಂತರಾಶ್ರುತಿ, ಸಂಸ್ಕಾರಪ್ರದಾನ, ಸ್ವಗತಸ್ಥಾನದಿಂದ ಸ್ವರಕ್ಕೆ ಸ್ವಸಂವೇದ್ಯತೆ ಮುಂತಾದ ಲಕ್ಷಣಗಳನ್ನು ಒಳಗೊಂಡಿಲ್ಲವೆಂಬುದಷ್ಟೇ ಅಲ್ಲ, ಅವುಗಳಿಗೆ ನೇರವಾಗಿ ವಿರುದ್ಧವೇ ಆಗಿದೆ.

ಶಾರ್ಙ್ಗದೇವನು ಶ್ರುತಿನಿದರ್ಶನ ಸಂದರ್ಭದಲ್ಲಿ ಹೇಳಿದ ಮಂದ್ರತಮಧ್ವಾನದ ಕಲ್ಪನೆಯನ್ನು ಈ ಪಕ್ಷವು ಎಲ್ಲಿಯೂ ಒಳಗೊಂಡಿಲ್ಲ. ಮತ್ತು ವಾದಿ, ಸಂವಾದಿ, ಅನುವಾದಿ ಮತ್ತು ವಿವಾದಿಗಳನ್ನು ಶಾಸ್ತ್ರೀಯ ಪ್ರಮೇಯಗಳಿಂದ ಪಡೆಯುವ ಪ್ರಯತ್ನಕ್ಕೆ ಕುಠಾರಪ್ರಾಯವಾಗಿದೆ.

## ಚಿತ್ರವಿಚಿತ್ರಕಲ್ಪನೆ

ಕಡೆಯದಾಗಿ, ಶಿವಶರಣನು ಈ ಅರವತ್ತಾರು ಶ್ರುತಿಗಳಿಗೂ ಒಂದೊಂದು ಚಿತ್ತವೃತ್ತಿಯನ್ನು ರಸದಮೂಲಕ ಕಲ್ಪಿಸುತ್ತಾನೆ. ದೀಪ್ತಾದಿ ಶ್ರುತಿಜಾತಿಪಂಚಕಕ್ಕೆ ಅವನು ಕೊಡುವುದು ಇಷ್ಟೇ ಅರ್ಥ. ಇವುಗಳು ಕಾಲ, ಕಲಾ ಮತ್ತು ಪ್ರಮಾಣಗಳಲ್ಲಿ ಭಿನ್ನಗಳೆಂದು ನಾನ್ಯದೇವನು ಹೇಳಿದುದನ್ನು ಕಡೆಗಣಿಸಿ ಒಂದೇ ಪ್ರಮಾಣವನ್ನು ಇವೆಲ್ಲಕ್ಕೂ ಹೇಳಿದುದಲ್ಲದೆ, ಒಂದೇ ಪ್ರಮಾಣವುಳ್ಳ ಶ್ರುತಿಗಳಿಗೆ ಬೇರೆ ಬೇರೆ ಮಾನಸಿಕ ಕರ್ತವ್ಯಗಳನ್ನೋ ಗುಣಗಳನ್ನೋ ಅವನು ಹೇಳುವುದು ಅನುಪಪನ್ನವಾಗಿದೆ. ಇವುಗಳಲ್ಲಿ ಶ್ರೀ ಶಾರ್ಙ್ಗದೇವನ ತೀವ್ರಾದಿ ಇಪ್ಪತ್ತೆರಡು ಶ್ರುತಿಗಳಿಗೂ ಇಂತಹ ಕ್ರಿಯೆಗಳ ಮೂಲಕ ಅನ್ವಯವನ್ನೂ ಅರವತ್ತಾರು ಶ್ರುತಿಗಳೊಡನೆ ಸಂಗತಿಯನ್ನೂ ಉಂಟುಮಾಡಲೆಳಸಿರುವುದಂತೂ ತುಂಬಾ ಅಸಂಗತವಾದುದು. ಇವುಗಳಲ್ಲಿ ಕೆಲವಕ್ಕೆ ಹೆಸರಿನ ಅರ್ಥವೂ ಕೂಡಿ ಬರದಂತೆ ರಸವಿನಿಯೋಗ ಮಾಡಿದ್ದಾನೆ; ಛಂದೋವತಿಯೆಂದರೆ ಅಳಿಯುವುದು, ಕ್ಷಿತಿ ಎಂದರೆ ನಷ್ಟ, ಸಂದೀಪನಿ ಎಂದರೆ ಜ್ವಲಂತ, ಮದಂತೀ ಎಂದರೆ ಹುಚ್ಚುಹಿಡಿಸುವುದು, ಎಂದು ಮುಂತಾಗಿ ಅನುವಾದ ಮಾಡಿದ್ದಾನೆ. ಕೆಲವು ಶ್ರುತಿಗಳಿಗಂತೂ ಚಿತ್ರವಿಚಿತ್ರವಾದ ಸಂವೇದನೆಗಳನ್ನು ಹೇಳಿದ್ದಾನೆ.

ಹೀಗೆ, ಶುದ್ಧರಿಷಭ+ಎಂಬುದು ಉದ್ಯಮಶೀಲವಂತೆ (enterprising)! ಸಾಧಾರಣಗಾಂಧಾರ + ವು ಸುಲಭವಾಗಿ ಕೆರಳುವಂತಹುದಾಗಿದೆ (passionate); ಅಂತರಗಾಂಧಾರವು ಆಹ್ಲಾದಕರವಾದುದು, ಶಾಂತವಾದುದು (calm, pleasing); ಇದಕ್ಕೆ ಒಂದು ಶ್ರುತಿಯನ್ನು ಸೇರಿಸಿದರೆ ಜಾಗೃತವೂ ಲವಲವಿಕೆಯಿಂದಿರು

ವುದೂ ಆಗುತ್ತದೆ; ಇನ್ನೊಂದು ಶ್ರುತಿಯನ್ನು ಸೇರಿಸಿಬಿಟ್ಟರೆ ಕಠಿನವೂ, ಉದಾಸೀನವೂ ಆಗಿಬಿಡುತ್ತದೆ! ಶುದ್ಧಮಧ್ಯಮವಾದರೋ ಶಾಂತಿ, ಬೆಳುದಿಂಗಳು (peace, moonlight); ಅದೇ, ಎರಡು ಶ್ರುತಿಗಳಷ್ಟು ಮುಂದಿರುವ ಪ್ರತಿಮಧ್ಯಮ – – ವು ತೀವ್ರ ದುಃಖವನ್ನು ಸೂಚಿಸುತ್ತದೆ. ಮುಂದಿನಶ್ರುತಿ ಅನಿಶ್ಚಯತೆ, ಸಂದೇಹಗಳನ್ನು ಸೂಚಿಸುತ್ತದೆ. ಅದರಿಂದ ಎರಡನೆಯ ಶ್ರುತಿಯು ತೀಕ್ಷ್ಣವಾಗಿ (acute), ಪ್ರಶ್ನಾರ್ಥಕವಾಗಿ (interrogative) ಇರುತ್ತದೆ! ಶುದ್ಧಮಧ್ಯಮವು ಬೆಳುದಿಂಗಳಾದರೆ ಪಂಚಮವು ಬಿಸಿಲು, ಆನಂದಕರವಾದುದು. ಇದಕ್ಕೆ ಒಂದು ಶ್ರುತಿಯನ್ನು ಸೇರಿಸಿದರೆ, ಭ್ರಾಂತವೂ ತನ್ನನ್ನೇ ಅಲ್ಲಗಳೆದುಕೊಳ್ಳುವಂತಹದೂ ಆಗಿಬಿಡುತ್ತದೆ! ಕೈಶಿಕಿ ನಿಷಾದವು ಸೌಂದರ್ಯಸೂಚಕ, ಕಾಕಲೀ ನಿಷಾದ + + ವು ಸ್ವಾರ್ಥಿ! ಸ್ವರವು ಸ್ವಸಂವೇದ್ಯತೆಯನ್ನು ಪಡೆಯುವ ಅಂತಿಮ ಶ್ರುತಿಯಲ್ಲಿನ ಚಿತ್ತವೃತ್ತಿವಿಶೇಷಕ್ಕೂ ಹಿಂದಿನವುಗಳಿಗೂ ಅಜಗಜಾಂತರವಿದೆ; ನೆರೆಹೊರೆಯ ಶ್ರುತಿಗಳಲ್ಲಿಯೇ ಸಂಪೂರ್ಣವಾಗಿ ವಿರುದ್ಧವಾದ ಭಾವಗಳಿವೆ. ಶಿವಶರಣನೇ ಒಪ್ಪುವಂತೆ ಇಪ್ಪತ್ತೈದನ್ನು ಬಿಟ್ಟರೆ ಉಳಿದವುಗಳು ಲಕ್ಷ್ಯಪ್ರಸಿದ್ಧಿ ವಿಹೀನವಾಗಿಯೇ ಇವೆ. ಅಲ್ಲದೆ ಆಯಾ ಸ್ವರವನ್ನು ಹಾಡುವಾಗ ಹಿಂದಿನ ಶ್ರುತಿಗಳು ಯಾವುದೂ ಕೇಳಿಸುವುದಿಲ್ಲವಷ್ಟೆ. ಹನ್ನೆರಡು ಸ್ವರಸ್ಥಾನಗಳನ್ನುಳಿದ ಇತರ ಶ್ರುತಿಗಳಿಗೆ ಈ ಭಾವಗಳನ್ನು ಯಾವ ಆಧಾರದಮೇಲೆ ಅವನು ಹೇಳಿದ್ದಾನೆಯೋ ತಿಳಿಯದಾಗಿದೆ. ಜೀನು, ಲಗಾಮಿಲ್ಲದ ಕಲ್ಪನಾಕುದುರೆಯ ಬೆನ್ನೇರಿ ಲಕ್ಷ್ಯದಿಂದಲೂ ಲಕ್ಷಣದಿಂದಲೂ ದೂರದೂರವಾಗಿ ಈ ವಿದ್ವಾಂಸನು ವಿಹರಿಸಿದ್ದಾನೆ. ಕಾವ್ಯಸಂದರ್ಭಗಳಲ್ಲಿಯೋ ಸಂಗೀತವನ್ನು ಪಾಮರರಿಗೆ ವರ್ಣಿಸುವುದಕ್ಕಾಗಿಯೋ ಇಟ್ಟುಕೊಂಡರೂ ಸಹ ಆಕ್ಷೇಪಣೀಯವಾಗುವ ಸಾಮಗ್ರಿಯನ್ನು ಗಂಭೀರವಾದ ಶಾಸ್ತ್ರವಿವೇಚನೆಯ ಸಂದರ್ಭದಲ್ಲಿ ಸಿದ್ಧಾಂತದ ವೇಷಭೂಷಣಗಳೊಡನೆ ಮಂಡಿಸಿರುವುದು ಈ ಗ್ರಂಥದ ವೈಶಿಷ್ಟ್ಯ.

ಶಿವಶರಣನು ಸ್ಥಾಯಿಯ ವಿಸ್ತಾರವನ್ನು ದ್ವಾದಶಸ್ವರಸ್ಥಾನಗಳ ಮೂಲಕ ಐವತ್ತಮೂರು ಶ್ರುತಿಗಳಾಗಿ ವಿಂಗಡಿಸಿದ್ದಾನೆ. ಅರವತ್ತಾರು ಶ್ರುತಿಗಳನ್ನೂ ಅವನೇ ಹೇಳಿದ್ದಾನಷ್ಟೆ; ಎರಡರಲ್ಲಿ ಯಾವುದನ್ನು ಕೈಬಿಡಲೂ ಇಷ್ಟವಿಲ್ಲದೆ ಸಂಧಿಗ್ಧ ಪರಿಸ್ಥಿತಿಯ ಸಂಕಟಕ್ಕೆ ಆತನು ಸಿಕ್ಕಿರುವುದು ಕಂಡುಬರುತ್ತದೆ. ಐವತ್ತಮೂರು ಶ್ರುತಿಗಳನ್ನು ಸಮರ್ಥಿಸಿಕೊಳ್ಳಲು ಆತನು ಒಂದು ಕಾರಣವನ್ನು ಎತ್ತಿ ತೆಗೆದಿದ್ದಾನೆ: ಸಂಸ್ಕೃತ ವರ್ಣಮಾಲೆಯಲ್ಲಿರುವುದು ಐವತ್ತೆರಡು ವರ್ಣಗಳಷ್ಟೆ! ಐವತ್ತಮೂರೆಲ್ಲಾಯಿತು ಎಂದು ಕೇಳಿದರೆ ಅದಕ್ಕೆ ಆತನ ಉತ್ತರ, ಇದೆಲ್ಲಕ್ಕೂ ಮೇಲಿರುವ ಓಂಕಾರವನ್ನು ಸೇರಿಸಿಕೊಳ್ಳಿ! ಉಳಿದೆಲ್ಲ ಶ್ರುತಿಗಳಿಗೂ ಷಡ್ಜವು ಓಂಕಾರ ಸದೃಶವಾಗಿಯೇ ಇದೆಯಂತೆ! ಅರವತ್ತಾರನ್ನು ಪಡೆಯಲು 53 ಮೂಲಭೂತ ಶ್ರುತಿಗಳು + 12 ವಿರಾಮಗಳು + ಅಷ್ಟಮ ಸ್ವರವಾದ ಷಡ್ಜದ್ದು 1 ಎಂಬ ಸಮೀಕರಣವನ್ನಿಲ್ಲಿ ಪೂರ್ತಿ ಮರೆತುಬಿಟ್ಟು ಷಡ್ಜವನ್ನು ಇನ್ನೊಂದು ಬಾರಿ ಐವತ್ತಮೂರರಲ್ಲಿಯೂ ಎಣಿಸಿಕೊಂಡಿದ್ದಾನೆ. ಈ ಐವತ್ತಮೂರೆಂಬ ಸಂಖ್ಯಾ ಸಾದೃಶ್ಯದಿಂದ ಸಂಗೀತೋಪಯುಕ್ತ ನಾದ ವಿಶೇಷಗಳನ್ನು ಬೋಧಿಸುವ ಹಾಗೂ ಭಾಷಾ ಮೂಲ ದ್ರವ್ಯವಾದ ಶಬ್ದ ಸಂಪತ್ತಿಯನ್ನು ಬೋಧಿಸುವ ನಿಯಮಗಳು ಶುದ್ಧವಾಗಿ ಪರಸ್ಪರವಾಗಿವೆಯೆಂದೂ ಪರಸ್ಪರಾವಲಂಬಿಗಳೆಂದೂ ಅವನ ಸಿದ್ಧಾಂತ.

### ಶಾರ್ಙ್ಗದೇವನಲ್ಲಿ ಕನಿಕರ!

ಕಡೆಯದಾಗಿ, ಶಾರ್ಙ್ಗದೇವನನ್ನು ಕಂಡರೆ ಇವನಿಗೆ ಒಂದು ರೀತಿಯಲ್ಲಿ ತಿರಸ್ಕಾರಪೂರ್ವಕವಾದ ಕನಿಕರ. ಅವನು ಬೇಕಾದಷ್ಟು ತಪ್ಪುಮಾಡಿದ್ದಾನೆ; ಅದು ಆಶ್ಚರ್ಯಕರವೇನಲ್ಲ ಎಂದು ನಮಗೆ ಶಿವಶರಣನು ಎಚ್ಚರಿಕೆ ಕೊಡುತ್ತಾನೆ. ಶ್ರೀಮತ್ ಶಾರ್ಙ್ಗದೇವನು ಕೊಡುವ ಇಪ್ಪತ್ತೆರಡು ಶ್ರುತಿಗಳೊಡನೆ ತನ್ನ ಅರವತ್ತಾರು ಹೊಂದಿಕೊಳ್ಳಲಿಲ್ಲವಲ್ಲ, ಎಂಬ ಆತಂಕ ಇವನಿಗೆ ಬರಲಿಲ್ಲ; ತನ್ನ ಅರವತ್ತಾರು ಶ್ರುತಿಗಳೊಡನೆ ಶಾರ್ಙ್ಗದೇವನ ಇಪ್ಪತ್ತೆರಡು ಹೊಂದಿಕೊಳ್ಳಲಿಲ್ಲ; ಇದರಲ್ಲಿ ಆಶ್ಚರ್ಯವೇನಿಲ್ಲ, ಏಕೆಂದರೆ ಬೇರೆ ಬೇರೆ ಪದ್ಧತಿಗಳಿಂದ ಪಡೆದ ಹಲವು ಅಂಶಗಳನ್ನು

ವ್ಯವಸ್ಥೆಯಿಲ್ಲದೆ ಹೇಗೆ ಹೇಗೋ ಮಿಶ್ರಮಾಡಿಬಿಟ್ಟ ಕಲಸುಮೇಲೋಗರವೇ ಸಂಗೀತರತ್ನಾಕರ ; ಆದುದರಿಂದ ಅದು ಹೇಳುವ ಸಿದ್ಧಾಂತಗಳು ವಿಶ್ವಾಸಾರ್ಹವಲ್ಲ, ಎಂದು ಶಾಙ್ಗ್ರದೇವನನ್ನೂ ಸಂಗೀತರತ್ನಾಕರವನ್ನೂ ತನ್ನ ಮತಿಶ್ರೀಯಿಂದ ವಜಾ ಮಾಡಿಬಿಟ್ಟಿದ್ದಾನೆ !

The fact that the division of shrutis given by Sharngadeva does not exactly correspond with the one we have arrived at should not surprise us, for as we have seen, the Sangita Ratnakara presents a mixture of elements from different systems brought together rather haphazardly, and its conclusions are therefore not always reliable.[315]

ಈ ಉದ್ಘಟತನದ ವಿಸ್ತಾರವನ್ನು ಕಂಡು ಬೆದರಿದ ನನ್ನ ಲೇಖನಿ ತಡವರಿಸುತ್ತದೆ; ಆದುದರಿಂದ ಶ್ರೀ ಶಾಙ್ಗ್ರದೇವನ ಶ್ರುತಿವಿನಿಯೋಗವನ್ನೂ ಶಿವಶರಣನ ಶ್ರುತಿವಿನಿಯೋಗವನ್ನೂ ತುಲನೆಮಾಡಬಯಸುವ ಅಭ್ಯಾಸಿಗಳ ಸೌಕರ್ಯಕ್ಕಾಗಿ ಈ ಮುಂದಿನ ಪಥಕದಲ್ಲಿ ಸಂಗ್ರಹಿಸಿ, ಈ ವಿಷಯದಲ್ಲಿ ಮೌನವಾಗುತ್ತೇನೆ: ಶಿವಶರಣನ ಶ್ರುತಿವಿನಿಯೋಗದಲ್ಲಿ ವಿರಾಮಗಳ ಸಂಖ್ಯೆಯನ್ನು +1 ಮತ್ತು +2 ಎಂದು ಸೂಚಿಸಿದೆ; ಹೀಗೆ, ಉದಾಹರಣೆಗೆ ಧೈವತಕ್ಕೆ ತನ್ನದೇ ಒಂಬತ್ತು ಶ್ರುತಿಗಳು, ವಿರಾಮಗಳು ಎರಡು, ಒಟ್ಟು ಹನ್ನೊಂದು ಶ್ರುತಿಗಳು.

| ಸ್ವರ | ಸ | ರಿ | ಗ | ಮ | ಪ | ಧ | ನಿ |
|---|---|---|---|---|---|---|---|
| ಶಾಙ್ಗ್ರದೇವ | 4 | 3 | 2 | 4 | 4 | 3 | 2 |
| ಶಿವಶರಣ | 6+1 | 9+1 | 9+1 | 9+2 | 5+1 | 9+2 | 9+2 |

ಪಥಕ (22)

ಶ್ರುತಿವಿನಿಯೋಗ : ಶಿವಶರಣ ಪದ್ಧತಿ

### f) ಒಂದೇ ಸ್ವರಪ್ರಭೇದಕ್ಕೆ ವಿವಿಧಶ್ರುತಿಗಳಲ್ಲಿ ಅಭಿವ್ಯಕ್ತಿ.

ಬೇರೆ ಬೇರೆ ರಾಗಗಳಲ್ಲಿ ಒಂದೇ ಸ್ವರಸ್ಥಾನವು ಪಡೆಯುವ ಬೇರೆ ಬೇರೆಯ ಅಭಿವ್ಯಕ್ತಿ ರೀತಿಗಳನ್ನು ಬೇರೆ ಬೇರೆ ಶ್ರುತಿಗಳೆಂದು ಎಣಿಸಿ ಇದನ್ನು ಪೂರ್ವಾಚಾರ್ಯರದೆಂದೇ ಹೇಳುವ ಇನ್ನೊಂದು ಪಕ್ಷವು ಆಧುನಿಕ ವಿದ್ವಾಂಸರಲ್ಲಿ ಕಂಡುಬರುತ್ತದೆ. ಈ ಪಕ್ಷವು ದ್ವಾವಿಂಶತಿ ಶ್ರುತಿಗಳನ್ನೇ ಹೇಳಿದರೂ ಅದರ ಊಹಾಪ್ರತಿಜ್ಞೆಗಳು ಈ ರೀತಿ ಇವೆ:

1. ಇಪ್ಪತ್ತೆರಡು ಶ್ರುತಿಸ್ಥಾನಗಳೂ ಸ್ವರಸ್ಥಾನಗಳೇ ಆಗಿವೆ; ಪ್ರತಿಯೊಬ್ಬ ಪ್ರಾಚೀನ ಲಾಕ್ಷಣಿಕನೂ ದ್ವಾವಿಂಶತಿ ಶ್ರುತಿಗಳನ್ನು ಪುನಃ ಪುನಃ ಹೇಳುವುದರಿಂದ ಇದು ಸಿದ್ಧಪಡುತ್ತದೆ.

2. ಇವುಗಳಲ್ಲಿ ಷಡ್ಜವು ಆಧಾರಸ್ವರವಾದುದರಿಂದ ಅದು ಮೊದಲನೆಯ ಶ್ರುತಿಸ್ಥಾನದಲ್ಲಿ ಉಪಸ್ಥಿತವಾಗಬೇಕು.

3. ಷಡ್ಜವೂ ಪಂಚಮವೂ ಪ್ರಕೃತಿಸ್ವರಗಳಾದುದರಿಂದ ಅವುಗಳಿಗೆ ಒಂದೊಂದೇ ಶ್ರುತಿಯ ಪ್ರಮಾಣವಿರುತ್ತದೆ.

4. ಪ್ರತಿಯೊಂದು ಶ್ರುತಿಯೂ ಒಂದಲ್ಲ ಒಂದು ರಾಗದಲ್ಲಿ ಪ್ರಯುಕ್ತವಾಗಿಯೇ ಇರುತ್ತದೆ. ಹೀಗೆ ಪ್ರಯುಕ್ತವಾಗದ ಶ್ರುತಿಯಿದ್ದರೆ ಅದಕ್ಕೆ ಸ್ವರಾಷ್ಟಕದಲ್ಲಿ ಸ್ಥಾನವಿಲ್ಲ.

315 ಅದೇ ಗ್ರಂಥ, ಪು. 69.

ಈ ಪಕ್ಷವು ಹುಟ್ಟಿಕೊಂಡಿದ್ದು ಅಜ್ಞಾತ ಕರ್ತೃವೊಬ್ಬನ ಮೇಳಾಧಿಕಾರ ಲಕ್ಷಣವೆಂಬ [316] ಗ್ರಂಥದ ಆಧಾರದ ಮೇಲೆ ಎಂಬುದು ನಿಸ್ಸಂಶಯವಾಗಿ ಸಿದ್ಧವಾಗುತ್ತದೆ. ಇದನ್ನು ಚಾಚೂ ತಪ್ಪದೆ ಗೋವಿಂದನು ತನ್ನ ಸಂಗ್ರಹ ಚೂಡಾಮಣಿಯಲ್ಲಿ ಅನುಸರಿಸಿದ್ದಾನೆ. ಇದರ ವಿಮರ್ಶೆಯನ್ನು ಈಗಾಗಲೇ ಸಾಕಷ್ಟು ಮಾಡಿದೆ (ಪಥಕ 10, ಪು. 348-350). ಶ್ರುತಿಯ ವಿಷಯದಲ್ಲಿಯಾಗಲೀ ಸಂಗೀತಶಾಸ್ತ್ರದ ವಿಷಯದಲ್ಲಿಯಾಗಲೀ ಏನೂ ತಿಳಿದು ಕೊಳ್ಳದೆ ನಿರಪರಾಧಿಗಳಾದ ಇವುಗಳ ಮೇಲೆ ಈ ಗ್ರಂಥಕಾರನು ಧಾಳಿಯನ್ನೂ ಅತ್ಯಾಚಾರವನ್ನೂ ಎಸಗಿದ್ದಾನೆ, ಎಂದು ಮಾತ್ರ ಇಲ್ಲಿ ಪುನಃ ಸ್ಮರಿಸಿದರೆ ಸಾಕು. ಪ್ರತಿಯೊಬ್ಬ ಲಾಕ್ಷಣಿಕನೂ ಇಪ್ಪತ್ತೆರಡು ಶ್ರುತಿಗಳನ್ನು ಹೇಳಿದರೂ ಅವುಗಳಲ್ಲಿ ಹನ್ನೆರಡು ಅಥವಾ ಹದಿನಾಲ್ಕನ್ನು ಮೀರಿದ ಸ್ವರಸ್ಥಾನಗಳನ್ನು ಹೇಳಿಲ್ಲವೆಂಬುದನ್ನೂ ಆದುದರಿಂದ ಉಳಿದ ಇವುಗಳು ಸ್ವರಸ್ಥಾನಕ್ಕೆ ಅನರ್ಹಗಳೆಂದು ಅವರು ಪರಿಗಣಿಸಿದ್ದರೆಂಬುದನ್ನೂ ಈ ಪಕ್ಷವು ಗಮನಿಸಿದಂತೆ ತೋರುವುದಿಲ್ಲ. ಇಲ್ಲಿ ಒಂದು ಪ್ರಶ್ನೆಯು ಹುಟ್ಟಬಹುದು : ಹಾಗಾದರೆ ಅವರು ಹನ್ನೆರಡು ಅಥವಾ ಹದಿನಾಲ್ಕು ಶ್ರುತಿಗಳನ್ನೇ ಏಕೆ ಹೇಳಲಿಲ್ಲ ? ಏಕೆ ಹೇಳಲಿಲ್ಲವೆನ್ನುವುದಕ್ಕೆ ಈ ಹಿಂದೆಯೇ ಕಾರಣಗಳನ್ನು ಸೂಚಿಸಲಾಗಿದೆ : ಹದಿನಾಲ್ಕು ಅಥವಾ ಹನ್ನೆರಡು ಕಡಿದಾದ ಮೆಟ್ಟಿಲುಗಳಿಂದ ಕೂಡಿದ, ಪರಿಚ್ಛಿನ್ನವಾದ ನಾದಪ್ರಮಾಣವನ್ನು ಸ್ಥಾಯಿಯ ಅಥವಾ ಸ್ವರಾಷ್ಟಕದ ವಿಸ್ತಾರವೆಂದು ನಮ್ಮ ಪ್ರಾಚೀನ ಸಂಗೀತಶಾಸ್ತ್ರಪ್ರವರ್ತಕರು ತಿಳಿಯಲಿಲ್ಲ; ಹಾಗೆ ತಿಳಿಯುವುದು ತುಂಬಾ ಅವೈಜ್ಞಾನಿಕವಾಗುತ್ತದೆ. ಈ ವಿಸ್ತಾರವನ್ನು ಅಪರಿಚ್ಛಿನ್ನವಾದ, ಏಕಾಂಡವಾದ, ಒಂದೇ ದ್ರವ್ಯವೆಂದೂ, ಶ್ರವಣೇಂದ್ರಿಯ ಗ್ರಾಹ್ಯತೆಗೂ ಮನಸ್ಸಿನಲ್ಲಿ ಅವಬೋಧೆಗೂ ಅಪರಿಚ್ಛಿನ್ನತೆಯಿಲ್ಲದುದರಿಂದ ಅದನ್ನು ಧ್ವನ್ಯಂತರಾಶ್ರುತಿ, ನೈರಂತರ್ಯ, ಕಾಲ, ಕಲಾ, ಮೊದಲಾದ ಲಕ್ಷಣಗಳಿಂದ ಲಕ್ಷಿತವಾದ ಪ್ರಮಾಣ ಗಳಿಂದ, ಎಂದರೆ ಶ್ರುತಿಗಳಿಂದ ಆದುದೆಂದೂ ತಿಳಿಯುವುದು ನಮ್ಮ ಸಂಗೀತಶಾಸ್ತ್ರದ ಮೂಲಭೂತ ಪ್ರಮೇಯ ಗಳಲ್ಲೊಂದು. ಸ್ವರಲಕ್ಷಣ, ಸ್ವರಸ್ವಸಂವೇದ್ಯತೆ, ಸ್ವರಪ್ರಮಾಣ, ಸ್ವರಸಂಖ್ಯೆ ಮೊದಲಾದವುಗಳನ್ನು ತಾತ್ತ್ವಿಕ ವಾಗಿ ನಿರ್ಮಿಸಿಕೊಟ್ಟ ತತ್ತ್ವವೇ ಶ್ರುತಿ. ಸ್ವರಸ್ಥಾನಗಳನ್ನೇ ಶ್ರುತಿಗಳೆಂದು ತಿಳಿಯುವುದು ತಾತ್ತ್ವಿಕವಾಗಿಯೂ ತಾರ್ಕಿಕವಾಗಿಯೂ ಅನುಪಪನ್ನವಾಗುತ್ತದೆ.

## ಅಶಾಸ್ತ್ರೀಯವೆನ್ನಲು ಕಾರಣಗಳು.

ಈ ಪಕ್ಷವು ಹೇಳುವುದನ್ನು ಅವಧಾನದಿಂದ ಅಭ್ಯಾಸಮಾಡಿದರೆ ಒಂದು ವಿಷಯವು ಸ್ಪಷ್ಟವಾಗುತ್ತದೆ: ಯಾವುದಾದರೊಂದು ಸ್ವರವು ವಿವಿಧ ಸ್ವರಸಂದರ್ಭಗಳಲ್ಲಿ, ಎಂದರೆ ರಾಗಾಲಾಪನೆ, ಹಾಡು, ಮೊದಲಾದವುಗಳಲ್ಲಿ, ಪಡೆಯುವ ಗಮಕಮೂಲವಾದ ಅಭಿವ್ಯಕ್ತಿ ರೀತಿಗಳನ್ನು ಶ್ರುತಿಯೆಂದು ಇಲ್ಲಿ ಕರೆದಿದೆ. ಇದು ಅಶಾಸ್ತ್ರೀಯವೆಂದು ಈ ಕಾರಣಗಳಿಂದ ಸಿದ್ಧಪಡುತ್ತದೆ :

i) ಗಮಕನೆಂದರೆ ಶ್ರೋತೃಚಿತ್ತಕ್ಕೆ ಸುಖವನ್ನುಂಟುಮಾಡಬಲ್ಲ ಸ್ವರದ ಕಂಪನ ವಿಶೇಷ ; ಇದನ್ನು ಸ್ವರಕ್ಕೆ ಹೇಳಿದೆಯೇ ಹೊರತು ಶ್ರುತಿಗಲ್ಲ. ಇದನ್ನು ಗಮನಿಸಿಯೇ ಏನೋ ಪಾಲ್ಕುರಿಕಿ ಸೋಮನಾಥ,[317] ನಿಜಗುಣಶಿವಯೋಗಿ [318] ಮೊದಲಾದವರು ಶ್ರುತಿಗಳಿಗೂ ಇಪ್ಪತ್ತೆರಡು ಗಮಕಗಳನ್ನು ಹೇಳಿದ್ದಾರೆ; ಇದೂ ಅಶಾಸ್ತ್ರೀಯವೇ. ಹೀಗಿರುವಾಗ ಸ್ವರದ ಒಂದು ವಿಶೇಷ ರೂಪವೇ ಆಗಿರುವ ಗಮಕಗಳನ್ನು ಶ್ರುತಿಗಳೆಂದು ಕರೆ ಯುವುದು ತಪ್ಪು.

---

316 ಮೇಳಾಧಿಕಾರ ಲಕ್ಷಣಂ, ತಂಜಾವೂರು ಸರಸ್ವತೀ ಮಹಲ್ ಪುಸ್ತಕಭಂಡಾರದ ಹಸ್ತಪ್ರತಿ, ನಂ. 11064.

317 ಪಾಲ್ಕುರಿಕಿ ಸೋಮನಾಥ, ಪಂಡಿತಾರಾಧ್ಯ ಚರಿತ್ರವು, ಪರ್ವತಪ್ರಕರಣ, ಪು. 452.

318 ನಿಜಗುಣಶಿವಯೋಗಿ, ವಿವೇಕಚಿಂತಾಮಣಿ, ನಾಲ್ಕನೆಯ ಜಂಬೂದ್ವೀಪಕಥನಪ್ರಕರಣ, ಪು. 404.

ii) ಗಮಕಗಳನ್ನು ಏಳೆಂದು ಶಾಸ್ತ್ರವು ಸ್ಥೂಲವಾಗಿ ವಿಭಾಗಿಸಿದ್ದರೂ, ಅವು ಲೆಕ್ಕವಿಲ್ಲದಷ್ಟು ಸೂಕ್ಷ್ಮವಾದ ಅವಾಂತರ ಭೇದಗಳನ್ನು ಪಡೆದಿವೆಯೆಂದು ಶಾಸ್ತ್ರವೂ ಒಪ್ಪಿಕೊಳ್ಳುತ್ತದೆ, ಲಕ್ಷ್ಯದಲ್ಲಿಯೂ ಪ್ರಸಿದ್ಧವಾಗಿದೆ. ಗಮಕಗಳು ಇಪ್ಪತ್ತೆರಡು ಮಾತ್ರವೆಂದಾಗಲೀ, ಇಪ್ಪತ್ತೆರಡು ರೀತಿಯಲ್ಲಿ ಮಾತ್ರ ಪ್ರಯುಕ್ತವಾಗುತ್ತವೆಂದಾಗಲೀ ಶಾಸ್ತ್ರದಲ್ಲಿಯೂ ಲಕ್ಷ್ಯದಲ್ಲಿಯೂ ಕಂಡುಬರುವುದಿಲ್ಲ. ಪರಮಾಣುವಿನಷ್ಟು ವ್ಯತ್ಯಾಸವಿರುವ ಇವುಗಳನ್ನೆಲ್ಲಾ ಶ್ರುತಿಗಳೆಂದು ತಿಳಿದರೆ ಶ್ರುತಿಗಳು ಅನಂತವಾಗುತ್ತವೆ.

iii) ಆದರೆ ಒಂದೇ ಸ್ವರವು – ಅಥವಾ ಅದರ ಒಂದು ಅವಾಂತರ ಭೇದವು – ಬೇರೆ ಬೇರೆ ರಾಗಗಳಲ್ಲಿ ಬೇರೆ ಬೇರೆ ಛಾಯೆಗಳನ್ನು ಪಡೆಯುತ್ತದೆ ; ಹೀಗೆ ಶುದ್ಧರಿಷಭವೊಂದೇ ತೋಡಿ, ವರಾಳಿ, ಅಸಾವೇರಿ, ಮಾಯಾ-ಮಾಳವಗೌಳ, ಕಾಮವರ್ಧಿನಿ ಮೊದಲಾದ ರಾಗಗಳಲ್ಲಿ ಬೇರೆ ಬೇರೆ ಛಾಯೆಗಳಲ್ಲಿಯೇ ಪ್ರಯುಕ್ತವಾಗುವುದು ಸೂಕ್ಷ್ಮಶ್ರವಣವಿರುವವರಿಗೆಲ್ಲ ತಿಳಿದ ವಿಷಯವೇ ಆಗಿದೆ. ಅಷ್ಟೇ ಅಲ್ಲದೆ, ಒಂದೇ ಸ್ವರವು ಒಂದೇ ರಾಗದಲ್ಲಿ ಪ್ರಯುಕ್ತವಾಗುವಾಗ ಸಹ, ಆಯಾ ಸ್ವರಸಂದರ್ಭ, ಭಾವ, ಗಮಕ ಮುಂತಾದವುಗಳನ್ನು ಅವಲಂಬಿಸಿ ಬೇರೆ ಬೇರೆ ಛಾಯೆಗಳನ್ನು ಪಡೆಯುತ್ತದೆ. ಮತ್ತು ಈ ಗಮಕಗಳು ಸ್ವರದಿಂದ ಸ್ವರಕ್ಕೂ, ರಾಗದಿಂದ ರಾಗಕ್ಕೂ, ವ್ಯಕ್ತಿಯಿಂದ ವ್ಯಕ್ತಿಗೂ ಬದಲಾಯಿಸುತ್ತ ಇರುತ್ತವೆ. ಅಷ್ಟೇ ಅಲ್ಲದೆ ಆಯಾ ಕಲಾಯುಗದ ಅಭಿರುಚಿಯನ್ನೂ ಪ್ರಯೋಕ್ತೃವಿನ ಸಂಸ್ಕಾರ, ಸಾಮರ್ಥ್ಯ, ಅಭಿರುಚಿಗಳನ್ನೂ ಇವುಗಳ ಪ್ರಮಾಣ, ಸ್ವರೂಪ ಮತ್ತು ಸ್ವಭಾವಗಳು ಅವಲಂಬಿಸುತ್ತವೆ. ರಾಗಗಳು ಲಕ್ಷ್ಯದಿಂದ ಮಾಯವಾಗಿ ಬೇರೆಯವು ರೂಢಿಗೆ ಬಂದು ನಿಲ್ಲುವುದು ಈ ಸಂಗೀತದ ಸ್ವಭಾವವೂ ಆಗಿದೆ, ಎಲ್ಲರಿಗೂ ತಿಳಿದೂ ಇದೆ. ಇವು ಅದೃಶ್ಯವಾಗಿ ಹೊಸ ರಾಗಗಳು ಸೇರಿಕೊಂಡ ಹಾಗೆಲ್ಲ ಈ ಗಮಕಗಳು ವ್ಯತ್ಯಾಸವಾಗುತ್ತಾಬಂದರೆ ಅವುಗಳನ್ನೆಲ್ಲ ಎಣಿಸಿ, ಅಳೆದು ಶ್ರುತಿಗಳೆನ್ನಲಾದೀತೆ ? ಹೀಗೆ ಮಾಡಿದರೆ ಇಡೀ ಗಾನಶಾಸ್ತ್ರದಲ್ಲಿ ಇಯತ್ತೆಯಿಂದ ನಿರ್ದಿಷ್ಟವಾಗಿ ಹೇಳಬಹುದಾದ ಯಾವ ತತ್ತ್ವ, ಪ್ರಮೇಯಗಳೂ ಉಳಿಯುವುದಿಲ್ಲ.

iv) ಸ್ಥಾಯಿಯ ವಿಸ್ತಾರದಲ್ಲಿರುವ ಶ್ರುತಿಗಳಲ್ಲಿ ಪ್ರತಿಯೊಂದೂ ಕೆಳಗಿನ ಚಾತುಃಸ್ವರ್ಯದಲ್ಲಿರುವ ಒಂದು ಶ್ರುತಿಯ ಪಂಚಮಭಾವದ ಊರ್ಧ್ವಸ್ಪರ್ಶದಿಂದ ಆಗಿದೆಯೆಂಬುದನ್ನು ಸ್ಮರಿಸಬೇಕು. ಈ ಪಕ್ಷದಲ್ಲಿರುವಂತೆ ಗಮಕಯುಕ್ತ ಸ್ವರಗಳನ್ನೇ ಶ್ರುತಿಗಳೆಂದು ಎಣಿಸಿದರೆ ಸ್ವರಾಷ್ಟಕದಲ್ಲಿ ಸಂವಾದಭಾವಗಳೇ ಉಳಿಯುವುದಿಲ್ಲ. ಏಕೆಂದರೆ ಸಂವಾದಭಾವಗಳಲ್ಲಿ ಹುಟ್ಟಬಹುದಾದ ಎಲ್ಲಾ ಗಮಕಯುಕ್ತ ಧ್ವನಿವಿಶೇಷಗಳೂ ಲಕ್ಷ್ಯದಲ್ಲಿ ದೊರೆಯದಿರಬಹುದು ಅಥವಾ ರಕ್ತಿಧರ್ಮವನ್ನು ಪಡೆಯದಿರಬಹುದು ; ಉದಾಹರಣೆಗೆ ಶುದ್ಧರಿಷಭದಲ್ಲಿ ಹತ್ತು ಇಂತಹ ಛಾಯೆಗಳು ಲಕ್ಷ್ಯದಲ್ಲಿ ಉಪಲಬ್ಧವೆಂದು ಇಟ್ಟುಕೊಂಡರೆ ಇವುಗಳಿಗೆ ನಿಕರವಾಗಿ ಪಂಚಮಭಾವದಲ್ಲಿರುವ ಹತ್ತು ಧೈವತದ ಛಾಯೆಗಳು ವಿವಿಧ ರಾಗಗಳಲ್ಲಿ ದೊರೆಯಲೇಬೇಕೆಂದೇನೂ ನಿಯಮವಿಲ್ಲವಷ್ಟೆ. ಅಷ್ಟೇ ಅಲ್ಲದೆ ಲಕ್ಷ್ಯಪ್ರಸಿದ್ಧಿಯನ್ನು ಪಡೆದಿರುವ ಧೈವತದ ವಿವಿಧ ಛಾಯೆಗಳಿಗೂ ರಿಷಭದ ಛಾಯೆಗಳಿಗೂ ಪರಸ್ಪರತೆಯಾಗಲೀ ಸಂವಾದವಾಗಲೀ ಇರಬೇಕೆಂಬ ಅಥವಾ ಇರುತ್ತದೆಂಬ ನಿಯಮವೂ ಇಲ್ಲ. ಇದೇ ವಾದವನ್ನು ಇತರ ಸ್ವರಗಳಿಗೂ ಅನ್ವಯಿಸಬಹುದು.

v) ಶುದ್ಧರಿಷಭದ ಶ್ರುತಿಗಳನ್ನು ಈ ಪಕ್ಷವು ಏಕಶ್ರುತಿ, ದ್ವಿಶ್ರುತಿ, ತ್ರಿಶ್ರುತಿ ರಿಷಭಗಳೆಂದು ಎಣಿಸಿ ಇವುಗಳ ಪ್ರಯೋಗವನ್ನು ಕ್ರಮವಾಗಿ ಗೌಳ, ಸೌರಾಷ್ಟ್ರ, ಮಾಯಾಮಾಳವಗೌಳ, ಭೈರವಿ, ಶ್ರೀರಾಗ ಮುಂತಾದ ರಾಗಗಳಲ್ಲಿ ಕೊಡುತ್ತದೆ. ಇವುಗಳಲ್ಲಿ ಮೊದಲನೆಯ ಎರಡು ಒಂದೇ ಸ್ವರದ ಛಾಯೆಗಳೆಂಬುದು ಪ್ರಯೋಗವಿದರೆಲ್ಲರೂ ತಿಳಿದ ವಿಷಯ. ಅತ್ಯಂತ ಸಮೀಪದಲ್ಲಿರುವ ಈ ಸ್ಥಾನಗಳನ್ನು ಪ್ರತ್ಯೇಕವಾದ ಶ್ರುತಿಗಳೆಂದು ತಿಳಿದು ಷಡ್ಜದಿಂದ

ಗೌಳದಲ್ಲಿ ಪ್ರಯುಕ್ತವಾಗುವ ರಿಷಭದವರೆಗೆ ಇರುವ ವಿಸ್ತಾರದಲ್ಲಿ ಶ್ರುತಿಯೇ ಇಲ್ಲವೆಂದು ಹೇಳುವುದು ಹಾಸ್ಯಾಸ್ಪದವಾಗುತ್ತದೆ. ಈ ಬಗೆಯ ಅವ್ಯವಸ್ಥೆಯನ್ನು ಇಡೀ ಸ್ವರಾಷ್ಟಕದ ಇತರ ಶ್ರುತಿವಿನಿಯೋಗದಲ್ಲಿಯೂ ಕಾಣಬಹುದು.

vi) ಇಷ್ಟು ಸಮೀಪವಾಗಿರುವ ಸ್ಥಾನಗಳಲ್ಲಿ ಸ್ವರಗಳನ್ನು ಎಣಿಸುವುದರಿಂದ ಸ್ಥಾನಸಾಂಕರ್ಯವೂ ಸ್ವರಸಾಂಕರ್ಯವೂ ಆಗುತ್ತವೆ. ಅದರಲ್ಲಿಯೂ ವಿಶೇಷವೆಂದರೆ ಗೌಳ, ಸೌರಾಷ್ಟ್ರ ಮುಂತಾದ ರಾಗಗಳಲ್ಲಿರುವ ರಿಷಭಗಳಿಗೆ ಸ್ವತಂತ್ರವಾದ ಅಸ್ತಿತ್ವವೂ ಶಾಸ್ತ್ರೋಕ್ತವಾದ ಸ್ಥಾನವೂ ಇಲ್ಲ; ಇವುಗಳ ಪ್ರಮಾಣಗಳು ಆಯಾ ಸ್ವರಸಂದರ್ಭ, ಗಮಕಸಂದರ್ಭಗಳಿಂದಲೇ ನಿರ್ಣಯವಾಗಬೇಕು. ತಮ್ಮ ಸಹಜ ಸಂದರ್ಭಗಳಿಂದ ತೆಗೆದುಬಿಟ್ಟರೆ ಇವು ತಮ್ಮ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತವೆ; ಉದಾಹರಣೆಗೆ, ಸೌರಾಷ್ಟ್ರರಾಗದಲ್ಲಿ ಅಲ್ಲದೆ ಸೌರಾಷ್ಟ್ರ ರಿಷಭವೆಂಬುದು ಬೇರೊಂದಿಲ್ಲ; ಎಂದರೆ ರಿಷಭವೊಂದನ್ನೇ ಹಾಡಿ ಇದು ಸೌರಾಷ್ಟ್ರರಾಗದ ರಿಷಭ ಎಂದು ಮುಂತಾಗಿ ಹೇಳಲು ಬರುವಂತಿಲ್ಲ. ಆದರೆ ಶ್ರುತಿಗಳ ವಿಷಯವು ಹಾಗಲ್ಲ; ಅವು ನಿಯತವಾದ ಪ್ರಮಾಣ, ಸ್ವಭಾವ, ಸ್ಥಾನ ಮುಂತಾದವುಗಳನ್ನು ಪಡೆದುಕೊಂಡು ಸ್ಥಿರವಾಗಿರುತ್ತವೆ, ಸ್ವತಂತ್ರವಾದ ಅಸ್ತಿತ್ವವನ್ನು ಪಡೆದಿರುತ್ತವೆ. ಸಂಗೀತಶಾಸ್ತ್ರವು ಸ್ವರಗಳ ಮತ್ತು ಅವುಗಳ ಅವಾಂತರ ಭೇದಗಳ ನಿಶ್ಚಿತವಾದ, ಅನಾಂತರಿಕವಾದ ಸ್ಥಾನಗಳನ್ನು ನಿರ್ಣಯಿಸಿಕೊಡಬಲ್ಲುದೇ ಹೊರತು ಅವುಗಳು ಪಡೆಯಬಹುದಾದ ಛಾಯೆಗಳನ್ನಾಗಲೀ, ವ್ಯಕ್ತಿಗತ ವ್ಯತ್ಯಾಸಗಳನ್ನಾಗಲೀ ಅಲ್ಲ. ಏಕೆಂದರೆ ಇಂತಹ ಛಾಯೆಗಳೂ ವ್ಯತ್ಯಾಸಗಳೂ ಖಚಿತವಾಗಿ ಬರೆದಿಡಬಹುದಾದ, ಎಲ್ಲ ಕಾಲಕ್ಕೂ, ಎಲ್ಲರಿಗೂ ಅನ್ವಯಿಸುವಂತಹ ಕಲ್ಪನೆಗಳನ್ನಾಗಲೀ ಮೌಲ್ಯಗಳನ್ನಾಗಲೀ ಪಡೆದುಕೊಂಡಿರುವುದಿಲ್ಲ. ಅಲ್ಲದೆ ಇವು ಬಹುವಾಗಿ ಲಕ್ಷ್ಯಪ್ರಸಿದ್ಧಿ ಮಾತ್ರವನ್ನೂ ಬಹುಶಃ ಅನಿರ್ವಚನೀಯ ಸ್ವರೂಪವನ್ನೂ ಹೊಂದಿರುತ್ತವೆ.

vii) ಹೀಗೆ, ಈ ಪಕ್ಷವು ವೆಂಕಟಮಖಿಯು ಬಳಸಿದ ಗೌಳ ರಿಷಭ, ವರಾಳಿ ಮಧ್ಯಮ ಮುಂತಾದ ಹೆಸರುಗಳನ್ನು ಅಪಾರ್ಥದಲ್ಲಿಯೂ ಅನರ್ಥದಲ್ಲಿಯೂ ಉಪಯೋಗಿಸುತ್ತದೆ. ಏಕೆಂದರೆ ವೆಂಕಟಮಖಿಯು ಈ ಹೆಸರುಗಳನ್ನು ಬಳಸಿದುದು ಶಾಸ್ತ್ರದಲ್ಲಿ ವಿವಿಧ ಸ್ವರಸ್ಥಾನಗಳಿಗೆ ಕೊಟ್ಟ ಹೆಸರುಗಳು ಸುಲಭವಾಗಿ ಲಕ್ಷ್ಯಜ್ಞರಿಗೆ ತಿಳಿಯಲೆಂದು; ಅವನ ಗ್ರಂಥದ ಸ್ಥೂಲಪರಿಚಯವಿರುವವರಿಗೂ ಅವನು ಇಪ್ಪತ್ತೆರಡು ಶ್ರುತಿಗಳನ್ನು ಮಾತ್ರ ಒಪ್ಪಿರುವುದೂ, ಇವುಗಳಲ್ಲಿ ಪೂರ್ವಾಚಾರ್ಯರ ಮತವನ್ನು ಉಲ್ಲಂಘಿಸದಿರುವುದೂ, ಕನ್ನಡಿಗರಾದ ರಾಮಾಮಾತ್ಯ, ಪುಂಡರೀಕ ವಿಠಲ ಮೊದಲಾದವರು ನಿರ್ಮಿಸಿಕೊಟ್ಟ ಶಾಸ್ತ್ರಪಥದಲ್ಲಿಯೇ ಕನ್ನಡಿಗನಾದ ಅವನೂ ನಡೆದಿರುವುದೂ ಸ್ಪಷ್ಟವಾಗುತ್ತದೆ. ಅವನಲ್ಲಿಯೂ ಶುದ್ಧ ರಿಷಭವು ತ್ರಿಶ್ರುತಿಯೇ, ವರಾಲಿ ಮಧ್ಯಮವು (ಪ್ರತಿ ಮಧ್ಯಮವು) ತ್ರಿಶ್ರುತಿಯೇ. ಆದುದರಿಂದ ಆಧುನಿಕರು ಗೌಳ ರಿಷಭವೆಂದರೆ ರಿಷಭದ ಮೊದಲನೆಯ ಶ್ರುತಿ ಎಂದು ಮುಂತಾದ ಪ್ರತಿಜ್ಞೆಗಳನ್ನು ಅಥವಾ ಪ್ರಮೇಯಗಳನ್ನು (!) ಪೂರ್ವಾಚಾರ್ಯರ ಹೆಸರಿನ ಆಶ್ರಯದಲ್ಲಿ ಹೇಳಲಾಗದು.

viii) ಭಾರತೀಯ ಸಂಗೀತದಲ್ಲಿ ಪ್ರಯುಕ್ತವಾದ ಗಮಕಗಳು ಸಾಮಾನ್ಯವಾಗಿ ನಿಯತವಾದ, ಒಂದೇ ಕಂಪನ ಸಂಖ್ಯೆಯಿಂದ ಲಕ್ಷಿಸಬಹುದಾದ ಸ್ಥಾನಗಳಲ್ಲಿ ಇರುವುದಿಲ್ಲ. ಇವು ಹೆಚ್ಚಾಗಿ ಎರಡು ಸ್ವರಸ್ಥಾನಗಳ ನಡುವೆ ತೂಗುತ್ತಿರುತ್ತವೆ. ಈ ಆಂದೋಳನದ ಮಧ್ಯಭಾಗದಲ್ಲಿ ಹೆಚ್ಚುಕಾಲ ಸ್ವರವು ಪುಷ್ಟಿಯನ್ನು ಪಡೆದುಕೊಂಡರೂ ಈ ಸ್ಥಾನವನ್ನೂ ಅದರ ಪರಿಣಾಮವನ್ನೂ ಸರಾಸರಿಯ ಲೆಕ್ಕದಿಂದ ಅಳೆಯಲಾಗದು. ವಿವಿಧ ಗಮಕಗಳು ವಿವಿಧ ತಂತ್ರಗಳನ್ನು ಒಳಗೊಂಡಿರುತ್ತವೆ; ಜಾರುವುದು, ಕಂಪಿಸುವುದು, ತೂಗುವುದು, ಒತ್ತುವುದು, ಇತ್ಯಾದಿ ಕ್ರಿಯೆಗಳಲ್ಲಿ ಯಾವಾಗಲೂ ಎರಡು ಸ್ವರಸ್ಥಾನಗಳ ವಿವಕ್ಷೆಯಿದ್ದೇ ತೀರುತ್ತದೆ. ಕೆಲವು ವೇಳೆ ಗಮಕಿತವಾದ ಸ್ವರವು ಈ ಕ್ರಿಯೆಯ ಮಧ್ಯದಲ್ಲಿರುವುದೂ ಉಂಟು. ಹೀಗೆ, ಈ ಸ್ಥಾನಗಳಿಗೆ ಶ್ರುತಿತ್ವವನ್ನು ಹೇಳಲಾಗದು.

ix) ಅನೇಕ ಗಮಕಗಳು ಒಂದು ಶ್ರುತಿಯ ವಿಸ್ತಾರವನ್ನು ಮೀರುತ್ತವೆ; ಇನ್ನು ಕೆಲವು ಸಂದರ್ಭಗಳಲ್ಲಿ ಗಮಕವು ಅನ್ಯಸ್ವರವೊಂದರ ಸೂಚನೆಯನ್ನು ಮಾತ್ರ ಕೊಟ್ಟು ಮುಂದಿರುವ ಉದ್ದಿಷ್ಟಸ್ವರದ ಛಾಯೆಯನ್ನು

ಕೇವಲ ಆಭಾಸದಿಂದ (illusory) ತಂದುಕೊಡುತ್ತದೆ. ಮತ್ತೆ ಕೆಲವು ವೇಳೆ ಉದ್ದಿಷ್ಟವಾದ ಮಧ್ಯಸ್ವರವನ್ನು ವಾಸ್ತವಿಕವಾಗಿ ಮುಟ್ಟದೆಯೇ ಅದರ ಆಭಾಸವನ್ನು ಸೃಷ್ಟಿಸಿಕೊಡುತ್ತದೆ; ಎಂದರೆ, ಸಾಹಚರ್ಯದಿಂದಲೋ (association), ಇಂಗಿತದಿಂದಲೋ (implication), ಸೂಚ್ಯತೆಯಿಂದಲೋ (signification) ಪಡೆಯಬೇಕಾದ ಸ್ವರಾಭಿವ್ಯಕ್ತಿರೀತಿಗಳು ಇವು. ಇವುಗಳಲ್ಲಿ ಅನೇಕಸ್ಥಾನಗಳಿಗೆ ಸ್ವತಂತ್ರವೂ ವಾಸ್ತವವೂ ಆದ ಅಸ್ತಿತ್ವವಿಲ್ಲ. ಭಾವಶುದ್ಧಿಯ ಆದರ್ಶವನ್ನಿಟ್ಟುಕೊಂಡ ಕರ್ಣಾಟಕ ಸಂಗೀತದ ವೈಶಿಷ್ಟ್ಯವೇ ಇದು; ಈ ಸಂಗೀತದ ಸ್ವರಲಿಪಿ ನಿರ್ಮಿತಿಗೆ ಇರುವ ಅತ್ಯಂತ ದೊಡ್ಡ ಅಡಚಣೆಯೂ ಇದೇ. ಉದಾಹರಣೆಗೆ, ತೋಡಿಯಲ್ಲಿ ಗಾಂಧಾರವೊಂದೇ ವಿವಿಧ ಸಂದರ್ಭಗಳಲ್ಲಿ ವಿವಿಧವಾಗಿ ಪ್ರಯುಕ್ತವಾಗುತ್ತದೆ; ಇತರ ಸ್ವರಗಳೂ ಅಷ್ಟೆ; ವರಾಳಿಯಲ್ಲಿ ಗಾಂಧಾರ, ಬೇಗಡೆಯಲ್ಲಿ ಮಧ್ಯಮ, ನಾಯಕಿ ಮತ್ತು ದರ್ಬಾರ್‌ಗಳಲ್ಲಿ ಗಾಂಧಾರ, ಆರಭಿ-ದೇವಗಾಂಧಾರಿಗಳಲ್ಲಿ ಗಾಂಧಾರ ನಿಷಾದಗಳು, ಹೀಗೆ ಲೆಕ್ಕವಿಲ್ಲದಷ್ಟು ಉದಾಹರಣೆಗಳು ಈ ಶೀರ್ಷಿಕೆಯಲ್ಲಿ ದೊರೆಯುತ್ತವೆ. ಭೌತಿಕ ವಾಸ್ತವಿಕತೆಯೇ ಇಲ್ಲದ — ವಾಸ್ತವಿಕವಾಗಿ ಸ್ಪರ್ಶಿಸದೆಯೇ ಅನುಮಿತಿಯಿಂದ, ಸಂದರ್ಭದಿಂದ ಊಹಿಸಿಕೊಂಡ — ಸ್ವರವಿಶೇಷಗಳಿಗೆ ನಮ್ಮ ಇಡೀ ಸಂಗೀತ ಪದ್ಧತಿಯ ಬುನಾದಿಯಾಗಿರುವ ಶ್ರುತಿತ್ವವನ್ನು ಹೇಳವುದು ವಿಚಾರ ದಾರಿದ್ರ್ಯದ ಕುರುಹು; ಶ್ರುತಿ ಮತ್ತು ಗಮಕಗಳ ಕರ್ತವ್ಯ, ಸ್ವಭಾವಗಳನ್ನು ಅಭ್ಯಾಸಮಾಡದಿರುವ ಗುರುತು.

x) ದ್ವಾವಿಂಶತಿ ಶ್ರುತಿಗಳನ್ನು ಸ್ವರಸ್ಥಾನಗಳೆಂದೇ ವ್ಯವಹರಿಸುವುದರಿಂದ ವಿಶ್ವಾವಸುವೇ ಮೊದಲಾದವರು ಹೇಳಿದ ಅಂತರಗತಶ್ರುತಿ ತತ್ತ್ವವು ಇಲ್ಲಿ ಅನುಪಯುಕ್ತವಾಗುತ್ತದೆ; ಅಭಿನವಗುಪ್ತನು 'ಏಕಶ್ರುತ್ಯುತ್ಕರ್ಷಸ್ತು ನೋಕ್ತಃ ಸ್ಥಾನಸಾಂಕರ್ಯೇಣ ಸ್ವರಸಾಂಕರ್ಯಪ್ರಸಂಗಾದಿತಿ ಹ್ಯುಕ್ತಮ್'[185] ಎಂದು ಹೇಳಿದ ಮಾತು ನಿರರ್ಥಕವಾಗುತ್ತದೆ. ಅಲ್ಲದೆ ಅಂತರಗತಶ್ರುತಿಗಳು ಸ್ವರಸ್ವಸಂವೇದ್ಯತೆಗೆ ಅಪ್ರತ್ಯಕ್ಷ ಹೇತುಗಳೆಂದು ಶಾರ್ಙ್ಗದೇವನೇ ಹೇಳುತ್ತಾನೆ. ಅಂತರಶ್ರುತಿಗಳು ಸ್ವರಕ್ಕೆ ಪ್ರಮಾಣವನ್ನೂ, ಅಂತರಾಳ ಅಥವಾ ಗಾಂಭೀರ್ಯವನ್ನೂ ತಂದುಕೊಡುವಂತಹವುಗಳು; ಇವುಗಳಿಲ್ಲದಿದ್ದರೆ ಸ್ವರವು ಕೇವಲ ಧ್ವನಿಯಾಗುತ್ತಿತ್ತೇ ಹೊರತು ಸ್ವರತ್ವವನ್ನು ಎಂದಿಗೂ ಪಡೆಯುತ್ತಿರಲಿಲ್ಲ. ಇವುಗಳೇ ನಾದಕ್ಕೆ ಮತಂಗನು ಹೇಳಿದ ಅಖಂಡತೆ ಮತ್ತು ಅವಿಚ್ಛಿನ್ನತೆಗಳನ್ನು ಉಂಟುಮಾಡುವಂತಹವು; ಇವುಗಳಿಗೂ ಸ್ವರಸ್ಥಾನಗಳನ್ನೇ ಹೇಳಿದರೆ ಸ್ವರವೆಂಬುದಕ್ಕೆ ಧ್ವನಿಯೆಂಬ ಅರ್ಥವು ಮಾತ್ರ ಉಳಿಯುತ್ತದೆ; ಏಕೆಂದರೆ ನೆರೆಹೊರೆಯ ಶ್ರುತಿಗಳಲ್ಲಿ ಧ್ವನಿವೈಲಕ್ಷಣ್ಯವೂ ಪರಮಾಣುವಿನಷ್ಟು ಉತ್ಕರ್ಷಾಪಕರ್ಷಗಳೂ ಇರುತ್ತವೆ; ಇದು ಶ್ರುತಿಗೆ ಹೇಳಿದ ಲಕ್ಷಣವೇ ಹೊರತು ಸ್ವರಕ್ಕಲ್ಲ. ಅಂತರಗತ ಶ್ರುತಿಗಳಲ್ಲಿಯೂ ಸ್ವರತ್ವವನ್ನು ಹೇಳಿದ್ದರಿಂದ ಶ್ರುತಿಗೆ ಸಂಸ್ಕಾರಪ್ರದಾನವೆಂಬ ಲಕ್ಷಣವನ್ನು ನಿರಾಕರಿಸಬೇಕಾಗುತ್ತದೆ. ಇದರಿಂದ ಸ್ವರದ ವ್ಯಕ್ತಿತ್ವ, ವೈಶಿಷ್ಟ್ಯಗಳೂ ಸ್ವರಸ್ವಸಂವೇದ್ಯತೆಯೂ ನಾಶವಾಗಿ ಗಾನಶಾಸ್ತ್ರದ ಮೂಲಭೂತ ಪ್ರಮೇಯಗಳೆಲ್ಲವೂ ಕುಸಿಯುತ್ತವೆ. ವಿಶಾಖಿಲ ಪ್ರಭೃತಿಗಳೂ ಭಟ್ಟತೌತನೂ ಸ್ವರಸ್ವಸಂವೇದ್ಯತೆಯು ಸ್ವರದ ಕಡೆಯ ಶ್ರುತಿಯಲ್ಲಿ ಆಗುತ್ತದೆಂದು ಹೇಳಿದ 'ಸ್ವಸಂವೇದ್ಯೇ ಪರಮೇ ಶ್ರುತಿಧಾಮ್ನಿ'[182] 'ಸ್ವರಃ ಶ್ರುತಿಃ ಸ್ವಸಂವೇದ್ಯಾ'[132] ಎಂದು ಮುಂತಾದ ಮಾತುಗಳು ನಿಷ್ಪ್ರಯೋಜಕಗಳಾಗುತ್ತವೆ.

ಅಷ್ಟೇ ಅಲ್ಲದೆ ಪ್ರಾಚೀನ ಸಂಗೀತಲಕ್ಷಣದ ತಾಯಿಬೇರಿನಂತಿರುವ

ಚತುಶ್ಚತುಶ್ಚತುಶ್ಚೈವ ಷಡ್ಜಮಧ್ಯಮಪಂಚಮಾಃ ।
ದ್ವೇ ದ್ವೇ ನಿಷಾದಗಾಂಧಾರೌ ತ್ರಿಸ್ತ್ರಿಋಷಭಧೈವತೌ ।

ಎಂಬ ಸ್ವರ-ಶ್ರುತಿ ವಿನಿಯೋಗವೂ ನಶಿಸಿ ಹೋಗುತ್ತದೆ; ಏಕೆಂದರೆ ಎಲ್ಲಾ ಶ್ರುತಿಗಳಲ್ಲಿಯೂ ಸ್ವರತ್ವವು ಇದ್ದರೆ ಆಯಾ ಸ್ವರದ ಪ್ರಮಾಣವೆಂಬುದನ್ನು ಏಕಶ್ರುತಿಯೆಂದಲ್ಲದೆ ಬೇರೆ ಹೇಳಲು ಸಾಧ್ಯವಿಲ್ಲವಷ್ಟೆ. ಹೀಗೆ

ಈ ಪಕ್ಷವನ್ನಂಗೀಕರಿಸಿದರೆ ಶುದ್ಧ ವಿಕೃತಸ್ವರಗಳ ಲಕ್ಷಣಗಳು ಉಳಿಯುವುದೇ ಇಲ್ಲ. ಪ್ರತಿಯೊಂದು ಶ್ರುತಿಗೂ ಒಂದೊಂದು ಲಕ್ಷ್ಯಪ್ರಸಿದ್ಧವಾದ ಸ್ವರಸ್ಥಾನವನ್ನು ಆರೋಪಿಸಿದರೆ ಶ್ರುತಿಗೆ ಅಭಿನವಗುಪ್ತಾಚಾರ್ಯನು ಹೇಳುವ ಊರ್ಧ್ವಸ್ಪರ್ಶ ತತ್ತ್ವವು ಸಂಪೂರ್ಣವಾಗಿ ಲೋಪವಾಗಿ ಹೋಗುತ್ತದೆ. ಏಕೆಂದರೆ ಊರ್ಧ್ವಸ್ಪರ್ಶದ ಪರಿಣಾಮವಾಗಿ ಉಂಟಾಗಬೇಕಾದ ಸಾದೃಶ್ಯಸಾಮ್ಯಗಳು ಸ್ವರದಲ್ಲಿ ಉಳಿಯದೆ ಅನ್ಯಸ್ವರವೇ ಅಲ್ಲಿ ನೆಲಸಿರುತ್ತದೆ. ತ್ರಿವಿಧ ಊರ್ಧ್ವಸ್ಪರ್ಶಕ್ಕೂ ಇಲ್ಲಿ ಅವಕಾಶವಿಲ್ಲ; ಏಕೆಂದರೆ ಚತುಃಶ್ರುತಿಪ್ರಮಾಣಗಳಲ್ಲಿ, ಎಂದರೆ ಇಲ್ಲಿ ಹೇಳಿದ ರಿಷಭಾದಿ ಸ್ವರಗಳಲ್ಲಿ ಉತ್ತರೋತ್ತರ ನಿಷ್ಕಾಷದಿಂದಲೂ ಅವುಗಳ ಊರ್ಧ್ವಸ್ಪರ್ಶದಿಂದಲೂ ಸ್ವಸಂವೇದ್ಯತೆಯುಳ್ಳ ಇತರ ಸ್ವರಗಳು ಹುಟ್ಟುವುದಿಲ್ಲ.

ಕಡೆಯದಾಗಿ, ಷಡ್ಜಪಂಚಮಗಳಿಗೆ ಏಕಶ್ರುತಿ ಪ್ರಮಾಣಗಳನ್ನು ಹೇಳುವುದು ಶಾಸ್ತ್ರದೃಷ್ಟಿಯಿಂದ ಅತ್ಯಂತ ಅನುಪಪನ್ನವಾದ ಮಾತು. ಲಕ್ಷ್ಯಪ್ರಸಿದ್ಧಿಯಲ್ಲಿ ಹಾಗೂ ಆಧುನಿಕ ಶಾಸ್ತ್ರದಲ್ಲಿ ಇವುಗಳಿಗೆ ವಿಕೃತಿಯನ್ನು ಹೇಳಿಲ್ಲವಾದುದರಿಂದ ಅವುಗಳಿಗೆ ಒಂದೊಂದೇ ಸ್ವರಸ್ಥಾನವಿರುತ್ತದೆ, ಉಳಿದ ವಿಕೃತ ಸ್ವರಸ್ಥಾನಗಳಿಗೆ ಒಂದಕ್ಕಿಂತ ಹೆಚ್ಚು ಸ್ಥಾನಗಳಿರುತ್ತವೆ, ಆದುದರಿಂದ ಶಾಸ್ತ್ರದಲ್ಲಿ ಪ್ರಕೃತಿಸ್ವರಗಳಿಗೆ ಒಂದೊಂದೇ ಶ್ರುತಿಯೂ ವಿಕೃತಸ್ವರಗಳಿಗೆ ಅವು ಪಡೆಯುವ ವಿಕೃತಿಸ್ಥಾನಗಳಷ್ಟು ಶ್ರುತಿಗಳೂ ಇರುತ್ತವೆ ಎಂಬ ಅವಿಚಾರರಮಣೀಯವೂ ಮುಗ್ಧವೂ ಆಗಿರುವ ಭಾವನೆಯೇ ಇದಕ್ಕೆ ಕಾರಣ. ಶಾಸ್ತ್ರದಲ್ಲಿ ಶ್ರುತಿಯ ಕರ್ತವ್ಯ, ಕಲ್ಪನೆಗಳೇನೆಂಬುದನ್ನು ಅರಿಯದಿರುವುದು ಈ ಪಕ್ಷಕ್ಕೆ ಎಡೆಮಾಡಿಕೊಟ್ಟಿದೆ. ವಿಕೃತಸ್ವರವೆಂದರೆ ಶಾಸ್ತ್ರದಲ್ಲಿ ನಿಯತಗೊಳಿಸಲ್ಪಟ್ಟ ಪ್ರಮಾಣಕ್ಕಿಂತ ಹೆಚ್ಚು ಕಡಿಮೆಯಾಗುವುದು, ನಿಯತ ಶ್ರುತಿಸ್ಥಾನದಿಂದ ಕದಲಿ ಹಿಂದಿನ ಅಥವಾ ಮುಂದಿನ ಶ್ರುತಿಗಳಲ್ಲಿ ಉಪಸ್ಥಿತವಾಗುವುದು, ಎಂಬುದು ಪ್ರಾಚೀನ ಸಂಗೀತಶಾಸ್ತ್ರದಲ್ಲಿ ನಿಯಮ. ಆಧುನಿಕ ಶಾಸ್ತ್ರದಲ್ಲಿ ಕೇವಲ ಊರ್ಧ್ವಗತಿಯಿಂದ ಮಾತ್ರ ವಿಕೃತಿಯನ್ನು ಹೇಳಿದೆ. ಇಲ್ಲಿಯಾದರೂ ನಿಶ್ಚಿತವಾದ ಸ್ವರಪ್ರಮಾಣದಿಂದ ಹೆಚ್ಚಾಗಿ ಮುಂದಿನ ಶ್ರುತಿಯನ್ನು ಆಕ್ರಮಿಸಿಕೊಳ್ಳುವುದು ಎಂದು ಅರ್ಥ. ಈ ನಿಯಮಗಳನ್ನೆಲ್ಲಾ ಮರೆತು ಈ ಪಕ್ಷವು ಶ್ರುತಿವಿನಿಯೋಗವನ್ನು ಅತ್ಯಂತ ಅಸ್ತವ್ಯಸ್ತವನ್ನಾಗಿ ಮಾಡುತ್ತದೆ; ಪೂರ್ವಾಚಾರ್ಯರು ಹೇಳಿದ ಲಕ್ಷಣಗಳೆಲ್ಲವೂ ಮಣ್ಣುಪಾಲಾಗುತ್ತವೆ; ಷಡ್ಜ ಪಂಚಮಗಳಿಗೆ ಒಂದೊಂದೇ ಶ್ರುತಿಯನ್ನು ಕೊಟ್ಟಿದ್ದರಿಂದ ಹಿಂದಿನ ಅಥವಾ ಮುಂದಿನ ಸ್ವರಗಳೊಡನೆ ಸಂಕರವಾಗಿಹೋಗಿ ಸ್ಥಾಯಿಯ ಬೆನ್ನೆಲುಬಾಗಿರುವ ಅವುಗಳಿಗೆ ವಿಸ್ತಾರವೂ ಸ್ವಸ್ವರೂಪವೂ ನಾಶವಾಗುತ್ತವೆ.

ಈ ಮತ್ತು ಇತರ ಕಾರಣಗಳಿಂದ ಈ ಪಕ್ಷವು ಅಂಗೀಕಾರಕ್ಕೆ ಅನರ್ಹವಾದುದು.

## VIII ಲಕ್ಷ್ಯಲಕ್ಷಣಗಳಲ್ಲಿ ವಿರೋಧ

ಭರತ, ಮತಂಗ, ಅಭಿನವಗುಪ್ತ, ನಾನ್ಯದೇವ, ಶಾರ್ಙ್ಗದೇವ ಮೊದಲಾದ ಪೂರ್ವಾಚಾರ್ಯರು ಹೇಳಿರುವ ಶ್ರುತಿಪದ್ಧತಿಗೂ ಆಧುನಿಕವಾಗಿ ಲಕ್ಷ್ಯಪ್ರಸಿದ್ಧವಾದ ಶ್ರುತಿರೀತಿಗೂ ಇರುವ ಕೆಲವು ವ್ಯತ್ಯಾಸಗಳನ್ನಿಲ್ಲಿ ಗಮನಿಸಬಹುದು.

ಲಕ್ಷ್ಯಲಕ್ಷಣಗಳಲ್ಲಿ ವಿರೋಧವು ನಮ್ಮ ಸಂಗೀತದಲ್ಲಿ ಬಹುಶಃ ಎಲ್ಲಾ ಕಾಲದಲ್ಲಿಯೂ ಇದ್ದುದೇ. ಏಕೆಂದರೆ ಮಾರ್ಪಾಟು ಮತ್ತು ವ್ಯತ್ಯಾಸಗಳೇ ಜೀವಂತವಾದ ಲಲಿತಕಲೆಗಳೆಲ್ಲದರ ಧರ್ಮ. ಶಾಸ್ತ್ರವು ವಿಧಿರೂಪವಾದುದು ಮತ್ತು ವರ್ಣನಾತ್ಮಕವಾದುದು ಎಂದು ಎರಡು ಬಗೆ. ಹೀಗೆಯೇ ಇರಬೇಕು, ಇದನ್ನೇ ಮಾಡಬೇಕು, ಇದನ್ನು ಮಾಡಬಾರದು ಮುಂತಾಗಿ ವಿಧಿ, ನಿಷೇಧ, ಪರಿಸಂಖ್ಯೆ ಮುಂತಾದ ಲಕ್ಷಣಗಳಿಂದ ಕೂಡಿದುದು ವಿಧಿರೂಪದಶಾಸ್ತ್ರ. ಹೀಗೆ ಇತ್ತು, ಹೀಗೆ ಇದೆ ಎಂದು ಮುಂತಾದ ನಿರೂಪಣೆ, ವರ್ಣನೆ ಮೊದಲಾದ ಲಕ್ಷಣಗಳನ್ನು ಹೊಂದಿರುವುದು ವರ್ಣನಾತ್ಮಕ ಶಾಸ್ತ್ರ. ಮೊದಲನೆಯದರಲ್ಲಿ ಲಕ್ಷಣವು ಲಕ್ಷ್ಯವನ್ನು ನಿರ್ಧರಿಸುತ್ತದೆ; ಅದರಲ್ಲಿ

ವ್ಯತ್ಯಾಸ, ಮಾರ್ಪಾಟುಗಳಿಗೆ ಎಡೆಯಿಲ್ಲ. ಧರ್ಮಶಾಸ್ತ್ರ, ಗೃಹ್ಯಸೂತ್ರ, ಶ್ರೌತಸೂತ್ರ ಇತ್ಯಾದಿಯಾಗಿ ಇದಕ್ಕೆ ಉದಾಹರಣೆ; ಇದು ಏಕೆ, ಅದು ಹೇಗೆ, ಹೀಗೆಯೇ ಏಕಿರಬೇಕು, ಹಾಗೆ ಏಕಿರಬಾರದು ಎಂದು ಮುಂತಾದ ಜಿಜ್ಞಾಸೆಗೆ ಇಲ್ಲಿ ಅವಕಾಶವಿಲ್ಲ. ಅದರ ಸ್ವರೂಪವನ್ನು ತಿಳಿದುಕೊಳ್ಳಲು ಮಾತ್ರ ಇಲ್ಲಿ ವಿವೇಚನೆ ಮತ್ತು ಜಿಜ್ಞಾಸೆ; ಇದು ಮುಖ್ಯವಾಗಿ ಆಸ್ತಿಕ್ಯದ ವಿಷಯ; ಎಂದರೆ ನಂಬುಗೆಯ ವಿಷಯ. ಇದು ಹೇಳುವ ಪ್ರಯೋಜನ ಮತ್ತು ಫಲಗಳು ಅದೃಷ್ಟವಾಗಿರುತ್ತವೆ. ಆಯಾ ಸಂಸ್ಕೃತಿಯ ಚೌಕಟ್ಟಿನಲ್ಲಿ ಇದು ಶಾಶ್ವತವಾಗಿರುತ್ತದೆ. ಮಾನವನ ಅಂತಃಕರಣದಲ್ಲಿ ಸಹಜವಾಗಿ, ಸ್ವಾಭಾವಿಕವಾಗಿ, ಸ್ಫುರಿಸುವ ಸರಿ-ತಪ್ಪು, ನ್ಯಾಯ-ಅನ್ಯಾಯ, ಒಳ್ಳೆಯದು-ಕೆಟ್ಟದ್ದು, ನಿತ್ಯವಾದುದು-ಅನಿತ್ಯವಾದುದು, ಸುಖ-ದುಃಖ ಮುಂತಾದ ದ್ವಂದ್ವಗಳಲ್ಲಿ ಸರಿಯಾದುದು, ನ್ಯಾಯವಾದುದು, ಒಳ್ಳೆಯದು, ನಿತ್ಯವಾದುದು, ಸುಖವಾದುದು ಮುಂತಾದವುಗಳ ಸಾಧನೆಗೆ ಈ ಶಾಸ್ತ್ರವು ಆವಶ್ಯಕವಾದ ಸಾಧನವಾಗಿರುತ್ತದೆ. ಸಾಮಾಜಿಕ, ನೈತಿಕ, ಆಧ್ಯಾತ್ಮಿಕ ವಿಷಯಗಳಲ್ಲಿ ಏಕರೂಪತೆಯನ್ನೂ ಪ್ರಗತಿಯನ್ನೂ ತಂದುಕೊಡುವಂತಹದು ಇದು.

ವರ್ಣನಾತ್ಮಕ ಶಾಸ್ತ್ರವು ಹಾಗಲ್ಲ. ಲಕ್ಷ್ಯವು ಹೀಗಿತ್ತು; ಹೀಗೆ ಇದೆ ಎಂದು ಮಾತ್ರ ಅದು ವರ್ಣಿಸುತ್ತದೆ. ಇದರಲ್ಲಿ ಲಕ್ಷ್ಯವೇ ಲಕ್ಷಣವನ್ನು ನಿರ್ಧರಿಸುತ್ತದೆ. ಲಕ್ಷ್ಯವು ಬದಲಾಯಿಸಿದರೆ ಲಕ್ಷಣವೂ ಸೂಕ್ತವಾಗಿ ಬದಲಾಯಿಸಬೇಕಾಗುತ್ತದೆ; ಆದುದರಿಂದ ಇದರಲ್ಲಿ ಕಾಲಕಾಲಕ್ಕೆ ಮಾರ್ಪಾಟುಗಳುಂಟು; ಲಕ್ಷ್ಯದಲ್ಲಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಇರುವ ಅನಾಂತರಿಕ ಸತ್ಯಗಳನ್ನು ಎತ್ತಿ ತೆಗೆದು ವೈಜ್ಞಾನಿಕ ರೀತಿಯಲ್ಲಿ ನಿರೂಪಿಸುವ ಹೊಣೆಯನ್ನು ಅದು ಹೊಂದಿರುತ್ತದೆ; ಅದುದರಿಂದ ವಿವೇಚನೆಯೇ ಇಲ್ಲಿ ಬೋಧನ ವಿಧಾನ. ಇದರದು ಸದ್ಯಃಫಲಗಳು, ಪ್ರತ್ಯಕ್ಷ ಪ್ರಯೋಜನಗಳು; ಕೇವಲ ನಂಬುಗೆಯಿಂದ ಒಪ್ಪಿಕೊಳ್ಳಬೇಕಾದ ವಿಷಯಗಳನ್ನು ಅದು ಸ್ವೀಕರಿಸುವುದು ಸ್ವಲ್ಪವೇ. ಇಂದ್ರಿಯಗೋಚರವಲ್ಲದ, ಆದರೆ ಶಾಶ್ವತವಾದ, ಆಧ್ಯಾತ್ಮಿಕ ಸತ್ಯಗಳನ್ನು ಮೊದಲನೆಯ ಬಗೆ ಬೋಧಿಸಿದರೆ ಎರಡನೆಯದು ವ್ಯಾವಹಾರಿಕ ಪ್ರತ್ಯಕ್ಷ ಸತ್ಯವನ್ನು ಬೋಧಿಸುತ್ತದೆ. ತಾನು ವಿಷಯವಾಗಿಟ್ಟು ಕೊಂಡ ಲಕ್ಷ್ಯದಲ್ಲಿ ಕಾಲದೇಶಗಳ ಐಕ್ಯವನ್ನು ಇದು ತಂದುಕೊಡುತ್ತದೆ. ಭೌತಶಾಸ್ತ್ರ, ರಸಾಯನಶಾಸ್ತ್ರ ಮೊದಲಾದವುಗಳು ಈ ಗುಂಪಿಗೆ ಸೇರಿವೆ.

ಇವೆರಡು ವಿಧಗಳಲ್ಲಿಯೂ ಇರುವ ಲಕ್ಷಣಗಳು ಮತ್ತು ನಿಯಮಗಳು ಎರಡು ಬಗೆಯಾಗಿರುತ್ತವೆ: ಆಯಾ ಶಾಸ್ತ್ರದ ಬುನಾದಿಯಾಗಿರುವ ಆಧಾರಪ್ರತಿಜ್ಞೆಗಳು ಮೊದಲನೆಯ ಬಗೆ. ಇವು ಆಯಾ ಸಂಸ್ಕೃತಿಯ ಅಂತಃ-ಸ್ವರೂಪವನ್ನೂ ಅದು ಹೊಂದಿರುವ ಆದರ್ಶ, ಆಕಾಂಕ್ಷೆ, ಆಶೋತ್ತರ ಮತ್ತು ಸಾಧನೆ ಇವುಗಳನ್ನೂ ಅದಕ್ಕೆ ಪ್ರೇರಕವೂ ಚಾಲಕವೂ ಆಗಿರುವ ಚಿರಮೌಲ್ಯಗಳನ್ನೂ ಒಳಗೊಂಡಿರುತ್ತವೆ; ಇವನ್ನು ಯಾವ ರೀತಿಯಲ್ಲಿ ಮತ್ತು ಎಷ್ಟು ಸಮರ್ಥವಾಗಿ, ಎಷ್ಟರಮಟ್ಟಿಗೆ ಒಳಗೊಂಡಿರುತ್ತವೆ ಎಂಬುದು ಆಯಾ ಶಾಸ್ತ್ರದ ದಕ್ಷತೆಯನ್ನೂ ಸ್ವಭಾವವನ್ನೂ ಅವಲಂಬಿಸುತ್ತದೆ. ಇವುಗಳನ್ನು ಎಂದಿಗೂ ಬದಲಾವಣೆ ಮಾಡಲಾಗದು; ಏಕೆಂದರೆ ಆಯಾ ಸಂಸ್ಕೃತಿಯು ತನ್ನ ಆದರ್ಶಗಳನ್ನೂ ಮೌಲ್ಯಗಳನ್ನೂ ಉಳಿಸಿ ಬೆಳೆಸಿ ನೆಲೆಸಬೇಕಾದರೆ ತನ್ನ ಎಲ್ಲಾ ಅಭಿವ್ಯಕ್ತಿ ಮಾರ್ಗಗಳಲ್ಲಿಯೂ ಎಲ್ಲರೂ ಸುಲಭವಾಗಿಯೂ ನಿರಂತರವಾಗಿಯೂ ಬಳಸುತ್ತಿರುವಂತೆ ಅವುಗಳನ್ನು ಅಡಗಿಸಿಡುತ್ತದೆ; ಆದುದರಿಂದ ಅವು ಆಯಾ ರಾಷ್ಟ್ರದ ಚರಿತ್ರೆ ಮತ್ತು ಭೂಗೋಳಗಳ ಸ್ವಭಾವಗಳನ್ನು ಅನುಸರಿಸಿ ವಿಶಿಷ್ಟವಾದ ಮೂರ್ತಸ್ವರೂಪಗಳನ್ನು ತಳೆದು ತಮಗೆ ಮಾತೃಕಾಸ್ವರೂಪವಾದ ಸಂಸ್ಕೃತಿಗೆ ವೈಶಿಷ್ಟ್ಯವನ್ನೂ ಕಾಲದೇಶಗಳಲ್ಲಿ ಅವಿಚ್ಛಿನ್ನತೆಯನ್ನೂ ಐಕ್ಯವನ್ನೂ ತಂದುಕೊಡುತ್ತವೆ. ಇವುಗಳಿಗೆ ಊರ್ಧ್ವಗಮನವೇ ಸ್ವಭಾವ, ಪ್ರವೃತ್ತಿ. ಇವು ನಿಂತಲ್ಲಿ ನಿಂತು ತಟಸ್ಥವಾಗಿಬಿಟ್ಟರೆ ಹಳ್ಳದಲ್ಲಿ ನಿಂತುಬಿಟ್ಟ ನೀರಿನಂತೆ ಸಂಸ್ಕೃತಿಯು ತನ್ನ ನವ್ಯತೆಯನ್ನೂ ಶುದ್ಧತೆಯನ್ನೂ ನೈರ್ಮಲ್ಯವನ್ನೂ ಕಳೆದುಕೊಳ್ಳುತ್ತದೆ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇದನ್ನು ಎರಡನೆಯ ಬಗೆಯ ಲಕ್ಷಣಶ್ರೇಣಿಯು ತಪ್ಪಿಸುತ್ತದೆ. ಇದು ಆಯಾ ಲಕ್ಷ್ಯದ ಮೇಲುಮೈಯಲ್ಲಿ ಆಗಿಂದಾಗ ನಡೆಯುವ ವ್ಯತ್ಯಾಸಗಳನ್ನು ಗುರುತಿಸಿ ಹೇಳಿ ಅವುಗಳನ್ನು ಶಾಸ್ತ್ರದ ಪರಿಮಿತಿಯೊಳಗೆ ತಂದುಕೊಡುವು ದಲ್ಲದೆ ಖಚಿತವಾದ ನಿರೂಪಣೆಯನ್ನೂ ನಿಕರವಾದ ಸ್ಥಾನಮಾನಗಳನ್ನೂ ನಿರ್ಮಿಸಿಕೊಡುತ್ತದೆ. ಇಂತಹ ಅನೇಕ ವ್ಯತ್ಯಾಸಗಳನ್ನು ಕಾಲಕಾಲಕ್ಕೆ ಒಂದೇ ಸೂತ್ರದಿಂದ ಸಂಬಂಧಿಸಿ ವ್ಯತ್ಯಾಸವೇ ಧರ್ಮವಾಗಿರುವ ಲಕ್ಷ್ಯಕ್ಕೆ ಅವಿಚ್ಛಿನ್ನತೆಯನ್ನೂ ಪರಂಪರೆಯನ್ನೂ ಇದು ನಿರ್ಮಿಸಿಕೊಡುತ್ತದೆ. ಮೊದಲನೆಯ ಬಗೆಯು ಲಕ್ಷ್ಯಕ್ಕೆ ಊರ್ಧ್ವ ಗಮನವನ್ನು ತಂದುಕೊಟ್ಟರೆ ಇದು ತಿರ್ಯಗ್ಗಮನವನ್ನು ಉಂಟುಮಾಡಿ ಲಕ್ಷ್ಯವು ಹರಡಿ, ಬೇರೂರಿ, ದೃಢವಾಗಿ ನಿಲ್ಲಲು ಅವಕಾಶ ಮಾಡಿಕೊಡುತ್ತದೆ. ಮೊದಲನೆಯದು ಸಂಸ್ಕೃತಿಯನ್ನು ನಿರ್ಣಯಿಸಿದರೆ ಎರಡನೆಯದು ಸಂಸ್ಕೃತಿಯ ತಿರ್ಯಗಭಿವ್ಯಕ್ತಿ ಪ್ರತೀಕವಾದ ನಾಗರಿಕತೆಯನ್ನು ನಿರ್ಣಯಿಸುತ್ತದೆ. ಒಂದು ತತ್ತ್ವವನ್ನು ನಿರ್ಣಯಿ ಸಿದರೆ ಇನ್ನೊಂದು ಅದರ ಅನುಷ್ಠಾನವನ್ನು ನಿರ್ಣಯಿಸುತ್ತದೆ. ಒಂದು ಬೇರು, ಇನ್ನೊಂದು ಹೂ.

## 1. ಸಂಗೀತದಲ್ಲಿ ಲಕ್ಷ್ಯಲಕ್ಷಣ ವಿರೋಧ

ಸಂಗೀತಶಾಸ್ತ್ರವು ಎರಡನೆಯ ವಿಧಕ್ಕೆ ಸೇರಿದ್ದು ; ಅದರಲ್ಲಿರುವಷ್ಟು ಲಕ್ಷ್ಯಲಕ್ಷಣ ವಿರೋಧವು ಬಹುಶಃ ಬೇರೆ ಯಾವ ಶಾಸ್ತ್ರದಲ್ಲಿಯೂ ಇರಲಾರದು ; ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ: ಮಾನವಕುಲದಲ್ಲಿ ಅತ್ಯಂತ ಜನಪ್ರಿಯವಾದ, ಅತ್ಯಂತ ಪ್ರಚಲಿತವಾದ ಅನುಭವಕೋಶವಿದು ; ಆದುದರಿಂದಲೇ ಶ್ರೀ ಶಾರ್ಙ್ಗ-ದೇವನು ಇದನ್ನು 'ತಮುದ್ಧರೆ ಜಗದ್ಗೀತಂ' ಎಂದು ಗ್ರಂಥಾರಂಭದಲ್ಲಿ ವರ್ಣಿಸಿದ್ದಾನೆ; ಈ ಕಾರಣದಿಂದಲೇ ಇದಕ್ಕೆ ದೊರೆತ ಪ್ರಯೋಗವ್ಯಾಪ್ತಿಯು ಬೇರೆ ಕಲೆಗಳಿಗೆ ಬರಲಿಲ್ಲ ; ಎಂದೇ ಇದರಲ್ಲಿ ಲಕ್ಷ್ಯವು ಬಹು ವೇಗವಾಗಿ ವ್ಯತ್ಯಾಸವಾಗುತ್ತದೆ ; ಇದಕ್ಕೆ ಸೀಮಾರಹಿತ ಸೃಷ್ಟಿಯ ಅವಕಾಶವಿರುವುದೂ ಇನ್ನೊಂದು ಕಾರಣ. ಇದರ ಸಾಮಗ್ರಿಸಲಕರಣೆಗಳಾದರೂ ಬಹು ಸುಲಭವೂ ಸಾಧ್ಯವೂ ಆಗಿವೆ. ಎರಡನೆಯದಾಗಿ, ಈ ಶಾಸ್ತ್ರದಲ್ಲಿ ನಿಯಮ ಗಳು ಬಹು ಸ್ಪಷ್ಟವಾಗಿಯೂ ನಿಕರವಾಗಿಯೂ ಹೇಳಲ್ಪಟ್ಟಿವೆ. ಸಾವಿರಾರು ವರ್ಷಗಳ ಅಂತರದಲ್ಲಿ ಅನೇಕ ಮಹಿಮಾನ್ವಿತರಾದ ಮತಿಶ್ರೀಮಂತರು, ನಾದಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಂಡ ಮಹರ್ಷಿಗಳು, ಈ ಶಾಸ್ತ್ರ ಪ್ರಮೇಯಗಳನ್ನೂ ತತ್ತ್ವಗಳನ್ನೂ ವಿವೇಚಿಸಿ ನಿಸ್ಸಂದಿಗ್ಧವಾಗಿಯೂ ವ್ಯಾಪಕವಾಗಿಯೂ ಸತ್ಯವಾಗಿಯೂ ಹೇಳಿದ್ದಾರೆ. ಆದುದರಿಂದ ಈ ಬಗೆಯ ಲಕ್ಷ್ಯಲಕ್ಷಣ ವಿರೋಧವು ಸಮುಚಿತವಾಗಿಯೇ ಇದೆ. ಹೀಗೆ ಆದಾಗಲೆಲ್ಲ ಎರಡನೆಯ ಬಗೆಯ ಲಕ್ಷಣಶ್ರೇಣಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡುವುದು ಆವಶ್ಯಕವೂ ಹೌದು, ಸರಿಯೂ ಹೌದು ; ಅಷ್ಟೇ ಅಲ್ಲ, ಈ ಕಲೆಯು ಜೀವಂತವಾಗಿರುವುದಕ್ಕೆ, ಬೆಳೆಯುತ್ತಿರುವುದಕ್ಕೆ, ಇಂತಹ ಬದಲಾವಣೆಯು ಸೂಚಕವಾಗಿರುತ್ತದೆ.

ಲಕ್ಷ್ಯಲಕ್ಷಣಗಳಲ್ಲಿ ವಿರೋಧವು ಉಂಟಾಗಬೇಕಾದರೆ ಇಲ್ಲವೇ ಶಾಸ್ತ್ರಪ್ರಮೇಯ ಸಾಮಗ್ರಿಯಲ್ಲಿ ಬದಲಾ ವಣೆಯಾಗಬೇಕು, ಇಲ್ಲದಿದ್ದರೆ ಲಕ್ಷ್ಯದಲ್ಲಿ ಬದಲಾವಣೆಯಾಗಬೇಕು. ಶ್ರುತಿಯ ವಿಷಯದಲ್ಲಿ ಇಂತಹ ಕೆಲವು ಪ್ರಾಥಮಿಕ ವಿರೋಧಗಳನ್ನು ಕಾಣಬಹುದು. ಅತ್ಯಾಧುನಿಕರ ಅಪಲಾಪಗಳನ್ನು ಬಿಟ್ಟರೆ ಶ್ರುತಿಗೆ ಸಂಬಂಧಿಸಿದ ಶಾಸ್ತ್ರಪ್ರಮೇಯ ಅಥವಾ ತತ್ತ್ವಗಳಲ್ಲಿ ಯಾವ ಬದಲಾವಣೆಯೂ ಸಾವಿರಾರು ವರ್ಷಗಳ ಅಂತರದಲ್ಲಿ ನಡೆದಿಲ್ಲ ವೆಂಬುದು ಈ ವೇಳೆಗಾಗಲೇ ಸ್ಪಷ್ಟವಾಗಿರಬಹುದು. ಬದಲಾವಣೆಯಾಗಿದೆ ಎನ್ನುವುದಾದರೆ ಇದು ಬೆಳವಣಿಗೆ ಯಿಂದ, ಸಂಕಲನದಿಂದ ಆದುದು ಎನ್ನುವಷ್ಟರಮಟ್ಟಿಗೆ ಮಾತ್ರ ನಿಜ. ಆದರೆ ಕಾಲಕಾಲಕ್ಕೆ ಸೇರಿಕೊಂಡ ಉಪನದಿ ಗಳಂತಹ ಈ ಕಲ್ಪನೆಗಳಿಂದ ಶ್ರುತಿಯ ಮೂಲಭೂತ ಕಲ್ಪನೆಯ ಪ್ರವಾಹದ ಪಾತ್ರವು ಅಥವಾ ಗಮ್ಯಸ್ಥಾನವು ಬದಲಾಯಿಸಲಿಲ್ಲ ; ಹಾಗಾದರೆ ಲಕ್ಷ್ಯದಲ್ಲಿಯೇ ಈ ಬದಲಾವಣೆಗಳಾಗಿರಬೇಕು ಎಂಬ ಅನುಮಿತಿಯು ಇಲ್ಲಿ

ಹುಟ್ಟುತ್ತದೆ. ಆದರೆ ಸ್ವರಾಷ್ಟಕದಲ್ಲಿರುವ ಎಲ್ಲಾ ಪ್ರಮುಖ ಸ್ವರಗಳೂ ನೈಸರ್ಗಿಕವಾಗಿ ಸಿದ್ಧವಾಗುವುದರಿಂದ ಅವುಗಳ ಅಭಿವ್ಯಕ್ತಿಸ್ಥಾನಗಳಾದ ಸ್ವರಗಳ (ಅಂತ್ಯ) ಶ್ರುತಿಗಳೂ ಪ್ರಕೃತಿಸಿದ್ಧಗಳೇ ಆಗುತ್ತವೆ. ಉಳಿದವು ಅಂತರಗತಗಳಾದುದರಿಂದಲೂ, ಸ್ವರದ ಸ್ವಸಂವೇದ್ಯತೆಗೆ ಪರೋಕ್ಷಹೇತುಗಳಾದುದರಿಂದಲೂ ಅವು ಸಾಮಾನ್ಯ ವಾಗಿ ಗಾನವ್ಯವಹಾರದಲ್ಲಿ ಅಶ್ರುತಗಳೇ ಆಗಿರುತ್ತವೆ. ಹೀಗಿರುವಲ್ಲಿ ಇವುಗಳಲ್ಲಿ ಲಕ್ಷ್ಯಲಕ್ಷಣವಿರೋಧವು ಉಂಟಾಗಲು ಸಾಧ್ಯವಾದರೂ ಹೇಗೆ?

ಆದರೂ ಪೂರ್ವಾಚಾರ್ಯರು ಹೇಳಿದ ಶ್ರುತಿವ್ಯವಸ್ಥೆಗೂ ಆಧುನಿಕ ಶ್ರುತಿವ್ಯವಸ್ಥೆಗೂ ಬಹಳ ಸ್ಥೂಲವಾದ ವ್ಯತ್ಯಾಸಗಳೇ ಇವೆಯೆಂಬುದನ್ನು ಸದ್ಯದಲ್ಲಿಯೇ ಹೇಳಲಾಗುವುದು. ಇಂತಹ ವಿರೋಧವಿದ್ದಲ್ಲಿ ಸೂಕ್ತವಾಗಿ ಶಾಸ್ತ್ರವನ್ನೇ ಬದಲಾಯಿಸಬೇಕು ಎಂಬ ಆಕಾಂಕ್ಷೆಯು ಇಲ್ಲಿ ಮೂಡುತ್ತದೆ. ಏಕೆಂದರೆ ಶಾರ್ಙ್ಗದೇವನೇ ಲಕ್ಷಣಕ್ಕಿಂತ ಲಕ್ಷ್ಯವೇ ಪ್ರಧಾನ; ಅದನ್ನು ಅನುಸರಿಸಿ ಶಾಸ್ತ್ರವನ್ನು ತಿದ್ದಬೇಕು ಎಂದು ಹೇಳಿದ್ದಾನಷ್ಟೆ:

ಯದ್ವಾ ಲಕ್ಷ್ಯಪ್ರಧಾನಾನಿ ಶಾಸ್ತ್ರಾಣ್ಯೇತಾನಿ ಮನ್ವತೇ ।
ತಸ್ಮಾಲ್ಲಕ್ಷ್ಯವಿರುದ್ಧಂ ಯತ್ ತಚ್ಛಾಸ್ತ್ರಂ ನೇಯಮನ್ಯಥಾ ॥ 319

ಈ ಮಾತನ್ನು ಶಾರ್ಙ್ಗದೇವನು ಯಾವಾಗ ಏಕೆ ಹೇಳಿದ್ದಾನೆಂಬುದನ್ನು ತಿಳಿಯದ ಪಂಡಿತಂಮನ್ಯರು ಕೆಲವರು ಅದನ್ನು ಕೊಡಲಿಯನ್ನಾಗಿ ಮಾಡಿಕೊಂಡು ಸಂಗೀತಶಾಸ್ತ್ರದ ಬುಡವನ್ನೇ ತೆಗೆದುಹಾಕಿಬಿಡುವ ಸಾಹಸ ಮಾಡುತ್ತಾರೆ. ಸಂಗೀತವು ಲಕ್ಷ್ಯಪ್ರಧಾನವಾದುದು; ಕೇಳಿ ಆನಂದಿಸಬೇಕಾದುದು, ಅದರಲ್ಲಿ ವಿವೇಚನೆಗೆ, ವಿಜ್ಞಾನಕ್ಕೆ ಆಸ್ಪದವೆಲ್ಲಿದೆ? ಆದುದರಿಂದ ಶಾಸ್ತ್ರವು ನಿಷ್ಪ್ರಯೋಜಕವಾದುದು ಎಂಬುದು ಇವರ ವಾದ. ಆದರೆ ಶಾರ್ಙ್ಗದೇವನು ಈ ಮಾತುಗಳನ್ನು ಆಡಿರುವುದು ಇಡೀ ಸಂಗೀತಶಾಸ್ತ್ರವನ್ನು ಅಲ್ಲಗಳೆದು ನಿರ್ಮೂಲಮಾಡಿಬಿಡ ಲೆಂದಲ್ಲ; ಹಾಗಿದ್ದರೆ ಅವನು ಸುಮಾರು ಐದುಸಾವಿರ ಶ್ಲೋಕಗಳಷ್ಟು ವಿಸ್ತಾರವಾದ ಶಾಸ್ತ್ರಗ್ರಂಥವನ್ನು ಬರೆಯು ತ್ತಿರಲಿಲ್ಲ. ಅವನು ಈ ಮಾತುಗಳನ್ನು ಬರೆದಿದ್ದು ದೇಶೀರಾಗಗಳಲ್ಲಿ ಗ್ರಹಾಂಶನ್ಯಾಸಾದಿ ಸ್ವರಗಳು ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ ಲಕ್ಷ್ಯದಲ್ಲಿ ಕಂಡುಬರದಿದ್ದಾಗ ಶಾಸ್ತ್ರವನ್ನು ಸೂಕ್ತವಾದಷ್ಟು ಬದಲಾಯಿಸಬೇಕು, ಎಂದು ಹೇಳುವುದಕ್ಕಾಗಿ. ಇದು ಎಲ್ಲರೂ ಒಪ್ಪಬೇಕಾದ ಮಾತೇ. ಇಂತಹ ಸಂದರ್ಭಗಳಲ್ಲಿಯೂ ಶಾಸ್ತ್ರೋಕ್ತಿಯನ್ನು ಪೂರ್ಣವಾಗಿ ಕಿತ್ತುಹಾಕಿಬಿಡಬೇಕೆಂದೇನೂ ಅವನು ಹೇಳುವುದಿಲ್ಲ. ಅದರಲ್ಲಿ ಹೇಳಿರುವುದನ್ನು ಉಪಲಕ್ಷಣವೆಂದು ಇಟ್ಟುಕೊಂಡು ಲಕ್ಷ್ಯಪ್ರಸಿದ್ಧಿಗೆ ಬೇಕಾದಷ್ಟು ಅರ್ಥವಿಸ್ತಾರವನ್ನು ಪಡೆಯಲು ಯತ್ನಿಸಬೇಕು. ಇದು ಆಗದೆಯೇ ಇದ್ದರೆ ಆವಶ್ಯಕವಾದಷ್ಟು ಮಾತ್ರ ಶಾಸ್ತ್ರೋಕ್ತಿಯನ್ನು ಸಿದ್ಧಪಡಿಸಿಕೊಳ್ಳಬೇಕು. ಹೀಗೆ ಶಾಸ್ತ್ರವಿಧಾನದ ಮೇಲೆ ಸುಂದರವಾದ, ಗಹನವಾದ ವ್ಯಾಖ್ಯೆಯನ್ನೇ ಬರೆದು ಲಕ್ಷಣದ ಪ್ರಾಮುಖ್ಯವನ್ನು ಪರೋಕ್ಷವಾಗಿಯಾದರೂ ಹೇಳಿಯೇ ಇದ್ದಾನೆ. ಏಕೆಂದರೆ ಹೀಗೆ ಎರಡನೆಯ ಬಗೆಯ ಲಕ್ಷಣೋಕ್ತಿಯೂ ಸಹ ಸಿದ್ಧವಾಗದೆ ಹೋದರೆ ಕಲೆಯಲ್ಲಿ ಕೊಳೆ ತುಂಬುತ್ತಾಬರುತ್ತದೆ; ಕಡೆಗೆ ಈ ಮಲಗಳ ದೆಸೆಯಿಂದ ರೋಗರುಜಿನಗಳಿಗೆ ತುತ್ತಾಗಿ ಸಂಸ್ಕೃತಿಯ ಅವನತಿಯಾಗುತ್ತದೆ.

ಆದರೆ ಶ್ರುತಿಯ ವಿಷಯದಲ್ಲಿ ಈ ಸ್ವಾತಂತ್ರ್ಯವನ್ನು ವಹಿಸುವಂತಿಲ್ಲ. ಏಕೆಂದರೆ ಶ್ರುತಿಪ್ರಮೇಯವೂ ತತ್ತ್ವವೂ ಈ ಕಲೆಯ ಆಧಾರಭೂತ ಲಕ್ಷಣಗಳಲ್ಲಿ ಒಂದು. ಈ ಸಂಗೀತದ, ಆದುದರಿಂದ ಈ ಸಂಸ್ಕೃತಿಯ, ಅಂತಃಸ್ವರೂಪವನ್ನು ನಿರ್ಣಯಿಸುವ, ಹಾಗೂ ಅಭಿವ್ಯಕ್ತಗೊಳಿಸುವ ಸಾಧನಸಾಮಗ್ರಿಯಲ್ಲಿ ಇದೂ ಒಂದು. ಹಾಗೆ ಬದಲಾಯಿಸಬೇಕೆಂದಿದ್ದರೆ ಅದರ ಅರ್ಥ, ಪ್ರಯೋಜನ, ಕರ್ತವ್ಯ ಮೊದಲಾದವುಗಳಲ್ಲಿ ಅವಿಚ್ಛಿನ್ನತೆಯನ್ನು

319 ಶಾರ್ಙ್ಗದೇವ, ಉ.ಗ್ರಂ., VI, 335, ಪು. 298.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಕಾಯ್ದುಕೊಳ್ಳುವುದು ಮೊದಲನೆಯ ಕೆಲಸವಾಗಬೇಕು. ಅಂತಹ ಆವಶ್ಯಕತೆಯೂ ಪ್ರಯತ್ನವೂ ಆಧುನಿಕ ಸಂಗೀತದಲ್ಲಿ ಕಂಡುಬರುತ್ತಿಲ್ಲ. ಅದರ ಬದಲು ಈ ಸಂಗೀತದ ಅಂತಃಸ್ವರೂಪ, ಸ್ವಭಾವ, ಕರ್ತವ್ಯ, ಆವಶ್ಯಕತೆ ಮೊದಲಾದವುಗಳನ್ನು ಆಳವಾಗಿ ಆಲೋಚಿಸಿದೆಯೇ ಸ್ವಕಪೋಲಕಲ್ಪಿತವಾದ, ಅರ್ಥಶೂನ್ಯವಾದ, ವೈಯಕ್ತಿಕ ಪೂರ್ವಗ್ರಹಗಳಿಗೆ ವೈಚಾರಿಕ ವೇಷವನ್ನು ತೊಡಿಸಿ ಶಾಸ್ತ್ರೀಯತೆಯ ಘನತೆಯನ್ನು ಉಂಟುಮಾಡುವ ಪ್ರಯತ್ನಗಳು ಅಲ್ಲಲ್ಲಿ ನಡೆಯುತ್ತಿವೆ.

## 2. ಅಸಮಂಜಸ

ಇದು ಏನೇ ಇರಲಿ, ಇಲ್ಲಿ ಪ್ರಕೃತವಾಗಿರುವ ಶಾಸ್ತ್ರೋಕ್ತ ಶ್ರುತಿಸ್ಥಾನಗಳಿಗೂ ಲಕ್ಷ್ಯದಲ್ಲಿ ಅವುಗಳ ಅನುಷ್ಠಾನಕ್ಕೂ ಅಸಮಂಜಸವಾಗಿ ಇರುವ ಕೆಲವು ಅಂಶಗಳನ್ನು ಗಮನಿಸಬಹುದು :

1) ಇಂದು ಬಳಕೆಯಲ್ಲಿರುವ ಯಾವ ಮೇಳಕರ್ತದಲ್ಲಿಯೂ ರಾಗತ್ವವನ್ನುಳ್ಳ ಏಳೂ ಮೂರ್ಛನೆಗಳು **ದೊರೆಯುವುದಿಲ್ಲ**. ಕೆಲವು ಮೇಳಕರ್ತಗಳಲ್ಲಿ ಮಾತ್ರ ಆರು ದೊರೆಯುತ್ತವೆ.

2) ಕ್ರಿ. ಶ. ಹದಿನೈದನೆಯ, ಹದಿನಾರನೆಯ ಶತಮಾನದಲ್ಲಿ ವಿಕೃತಸ್ವರಸ್ಥಾನಗಳಲ್ಲಿ ಕೆಲವು ವ್ಯತ್ಯಾಸಗಳಾದುದನ್ನು ಕಲ್ಲಿನಾಥ, ರಾಮಾಮಾತ್ಯ, ಪುಂಡರೀಕ ವಿಠಲರು ಹೇಳುತ್ತಾರೆ. ಹೀಗೆ ಭರತಾದಿಗಳು ಹೇಳಿದ ಸ್ಥಾನಗಳಿಗಿಂತ ಅಂತರಗಾಂಧಾರ, ಕಾಕಲೀ ನಿಷಾದಗಳು ಒಂದೊಂದು ಶ್ರುತಿಯಷ್ಟು ಏರಿದವು ; ವಿಕೃತ ಪಂಚಮವು ಒಂದು ಶ್ರುತಿಯಷ್ಟು ಇಳಿದು ಪ್ರತಿಮಧ್ಯಮವಾಯಿತು. ಇದನ್ನು ವಿಕೃತಸ್ವರ ವಿವೇಚನೆಯ ಸಂದರ್ಭದಲ್ಲಿ ವಿವರಿಸಲಾಗುವುದು.

3) ಈಗ ನಾವು ಬಳಸುತ್ತಿರುವ ಸ್ವರಾಷ್ಟಕವು ಸಮಾನ ಸ್ವರಸ್ಥಾನಪಲ್ಲಟ ಪ್ರಕ್ರಿಯೆ(equal temperament) ಗೆ ಒಳಪಟ್ಟಿದೆಯೆಂಬುದು ಸ್ಪಷ್ಟವಾಗಿದೆ. ವೀಣೆಯಲ್ಲಿ ಪ್ರತಿಯೊಂದು ಸ್ವರವೂ ಅದರ ಹಿಂದಿನ ಸ್ವರಕ್ಕೆ ಸರಿಯಾಗಿ ಷಡ್ಜ-ಶುದ್ಧರಿಷಭ ಭಾವದಲ್ಲಿರುವುದು ಕಂಡುಬರುತ್ತದೆ. ಇದೇ ಸ್ವರಸ್ಥಾನಗಳನ್ನು ಲಕ್ಷ್ಯದಲ್ಲಿ ಸರ್ವತ್ರ ಬಳಸಲಾಗುತ್ತಿದೆಯಾದುದರಿಂಲೂ ಎಲ್ಲಾ ಸ್ಥಾಯಿಗಳಲ್ಲಿಯೂ ಇದೇ ಭಾವವು ಉಳಿದುಬಂದಿರುವುದರಿಂದಲೂ ಆಧುನಿಕ ಸ್ವರಾಷ್ಟಕವು ಚಾಕ್ರಿಕವಾದುದೆಂದೂ, ಭೌತಿಕಪ್ರಮಾಣದಲ್ಲಿ 16/15 ಎಂಬ ಅನುಪಾತದಿಂದ ವಿವಕ್ಷಿತವಾದಷ್ಟು ಅಂತರಗಳಿರುವ ಹನ್ನೆರಡು ಸ್ವರಸ್ಥಾನಗಳ ಚಕ್ರದಿಂದಾಗಿದೆಯೆಂದೂ ಸಿದ್ಧವಾಗುತ್ತದೆ.

4) ಈ ಶುದ್ಧರಿಷಭ ಭಾವವು ಪ್ರಾಚೀನಾಚಾರ್ಯರು ಹೇಳಿದ ತ್ರಿಶ್ರುತಿಪ್ರಮಾಣದ್ದೆಂದು ಇಟ್ಟುಕೊಂಡರೆ, ವೀಣೆಯ ನೆರೆಹೊರೆಯ ಮೆಟ್ಟುಗಳಲ್ಲಿ, ಎಂದರೆ ಈ ಭಾವದಲ್ಲಿ (ತ್ರಿಶ್ರುತಿಪ್ರಮಾಣದಲ್ಲಿ) ಈ ಸ್ವರಸ್ಥಾನಯುಗ್ಮಗಳು ಲಭಿಸುತ್ತವೆ :

ಅ) ಶುದ್ಧಗಾಂಧಾರ-ಸಾಧಾರಣಗಾಂಧಾರ, ಸಾಧಾರಣಗಾಂಧಾರ-ಅಂತರಗಾಂಧಾರ, ಶುದ್ಧನಿಷಾದ-ಕೈಶಿಕ ನಿಷಾದ, ಕೈಶಿಕ ನಿಷಾದ-ಕಾಕಲೀ ನಿಷಾದ ; ಆದರೆ ಇವುಗಳಿಗೆಲ್ಲ ತ್ರಿಶ್ರುತಿಪ್ರಮಾಣವಿಲ್ಲ ; ಶಾಸ್ತ್ರದಲ್ಲಿ ಇವು ನೆರೆಹೊರೆಯ ಶ್ರುತಿಗಳು, ಎಂದರೆ ಏಕಶ್ರುತಿಪ್ರಮಾಣವುಳ್ಳವುಗಳು !

ಆ) ಕಾಕಲೀ ನಿಷಾದ-ಷಡ್ಜ, ಶುದ್ಧರಿಷಭ-ಶುದ್ಧಗಾಂಧಾರ, ಅಂತರಗಾಂಧಾರ-ಶುದ್ಧಮಧ್ಯಮ, ಶುದ್ಧಧೈವತ-ಶುದ್ಧನಿಷಾದ, ಈ ಸ್ವರಸ್ಥಾನಗಳ ನಡುವೆ ಇರುವ ಅಂತರಗಳು ಭರತಮತಂಗಶಾರ್ಙ್ಗದೇವ ಪ್ರಭೃತಿಗಳ ಮಾತಿನಂತೆ ದ್ವಿಶ್ರುತಿಕ ಪ್ರಮಾಣವಿರುವಂತಹವು. ಆದರೆ ಲಕ್ಷ್ಯದಲ್ಲಿ ಇವು ತ್ರಿಶ್ರುತಿಕಗಳಾಗುತ್ತವೆ.

ಇ) ಕೈಶಿಕ ನಿಷಾದ-ಷಡ್ಜ, ಶುದ್ಧರಿಷಭ-ಸಾಧಾರಣಗಾಂಧಾರ, ಸಾಧಾರಣಗಾಂಧಾರ-ಶುದ್ಧಮಧ್ಯಮ, ಶುದ್ಧಮಧ್ಯಮ-ವಿಕೃತಪಂಚಮ, (ಪ್ರತಿಮಧ್ಯಮ), ಶುದ್ಧಧೈವತ-ಕೈಶಿಕ ನಿಷಾದ, ಈ ಸ್ವರಸ್ಥಾನಗಳ ನಡುವೆ ಇರುವ

ಅಂತರಗಳು ಪ್ರಾಚೀನಾಚಾರ್ಯರು ವಿಧಿಸುವ ಪ್ರಕಾರ ತ್ರಿಶ್ರುತಿಕಗಳು ; ಆದರೆ ಇವು ಶುದ್ಧರಿಷಭದ ಭಾವದಲ್ಲಿ ಇಲ್ಲವೆಂಬುದೂ ಅಂತಹ ಎರಡು ಶುದ್ಧರಿಷಭಗಳಷ್ಟು, ಎಂದರೆ ಆರು ಶ್ರುತಿಗಳಷ್ಟು ಅಂತರದಲ್ಲಿವೆಯೆಂಬುದೂ ಸ್ಪಷ್ಟವಾಗಿಯೇ ಇದೆ.

ಈ) ಶುದ್ಧರಿಷಭ-ಅಂತರಗಾಂಧಾರ, ಶುದ್ಧಧೈವತ-ಕಾಕಲೀ ನಿಷಾದ, ಪ್ರತಿಮಧ್ಯಮ-ಶುದ್ಧಧೈವತ, ಈ ಅಂತರಗಳು ಪೂರ್ವಾಚಾರ್ಯರ ಮತದಲ್ಲಿ ಚತುಃಶ್ರುತಿಕಗಳು. ಆದರೆ ಇಂದಿನ ಲಕ್ಷ್ಯದಲ್ಲಿ ಇವುಗಳ ನಡುವೆ ಶುದ್ಧ ರಿಷಭ ಭಾವದ ಮೂರು ಪ್ರಮಾಣಗಳು ಮೊದಲನೆಯ ಎರಡರಲ್ಲಿಯೂ ಎರಡು ಪ್ರಮಾಣಗಳು ಕೊನೆಯದರಲ್ಲಿಯೂ ಇವೆ. ಆದುದರಿಂದ ಈ ಅಂತರಗಳು ಒಂಬತ್ತು ಮತ್ತು ಆರು ಶ್ರುತಿಗಳಷ್ಟಾಗುತ್ತವೆ.

5) ಕಲ್ಲಿನಾಥ, ರಾಮಾಮಾತ್ಯ, ಪುಂಡರೀಕವಿಠಲರು ಹೇಳಿದ ಸ್ವರಪ್ರಮಾಣಗಳನ್ನಿಟ್ಟುಕೊಂಡರೂ ಆಧುನಿಕ ವೀಣಾ ಮೇಳದೊಡನೆ ಹೋಲಿಸಿದಾಗ ಈ ಅಸಮಂಜಸತೆಗಳು ಕಂಡುಬರುತ್ತವೆ :

ಅ) ಕಾಕಲೀ ನಿಷಾದ-ಷಡ್ಜ, ಶುದ್ಧಗಾಂಧಾರ-ಸಾಧಾರಣಗಾಂಧಾರ, ಅಂತರಗಾಂಧಾರ-ಶುದ್ಧಮಧ್ಯಮ, ಶುದ್ಧನಿಷಾದ-ಕೈಶಿಕ ನಿಷಾದ ಇವುಗಳು ಏಕಶ್ರುತಿ ಪ್ರಮಾಣಕಗಳಾಗುತ್ತವೆ ; ಆದರೆ ವೀಣಾಮೇಳದಲ್ಲಿ ಇವೆಲ್ಲವೂ ಷಡ್ಜ-ಶುದ್ಧರಿಷಭ ಭಾವವನ್ನೇ ಪಡೆದಿವೆ.

ಆ) ಕೈಶಿಕ ನಿಷಾದ-ಕಾಕಲೀನಿಷಾದ, ಸಾಧಾರಣಗಾಂಧಾರ-ಅಂತರಗಾಂಧಾರ, ಪ್ರತಿಮಧ್ಯಮ-ಪಂಚಮ, ಇವು ದ್ವಿಶ್ರುತಿಕಗಳಾಗುತ್ತವೆ. ಆದರೆ ವೀಣಾಮೇಳದಲ್ಲಿ ಇವೂ ಶುದ್ಧರಿಷಭ ಭಾವವನ್ನೇ ಪಡೆದಿರುವುದರಿಂದ ತ್ರಿಶ್ರುತಿಕಗಳೇ ಆಗಬೇಕು.

ಇ) ಕೈಶಿಕ ನಿಷಾದ-ಷಡ್ಜ, ಸಾಧಾರಣಗಾಂಧಾರ-ಶುದ್ಧ ಮಧ್ಯಮ, ಶುದ್ಧಗಾಂಧಾರ-ಅಂತರಗಾಂಧಾರ, ಶುದ್ಧನಿಷಾದ-ಕಾಕಲೀ ನಿಷಾದ, ಅಂತರಗಾಂಧಾರ-ಪ್ರತಿಮಧ್ಯಮ, ಇವುಗಳು ತ್ರಿಶ್ರುತಿಕಗಳು. ಆದರೆ ಇವುಗಳ ನಡುವೆ ಕೆಲವದರಲ್ಲಿ ಎರಡು, ಮತ್ತೆ ಕೆಲವದರಲ್ಲಿ ಮೂರು, ಶುದ್ಧ ರಿಷಭ ಪ್ರಮಾಣಗಳಿರುವುದರಿಂದ ಒಟ್ಟು ಆರು ಅಥವಾ ಒಂಬತ್ತು ಶ್ರುತಿಗಳ ಅಂತರವು ಪ್ರಾಪ್ತವಾಗುತ್ತದೆ !

6) (4) ಮತ್ತು (5)ರಲ್ಲಿ ಹೇಳಿದ ವಿರೋಧಗಳು ಷಡ್ಜ-ಶುದ್ಧ ರಿಷಭ ಪ್ರಮಾಣವನ್ನು ತ್ರಿಶ್ರುತಿಯೆಂದು ಇಟ್ಟುಕೊಂಡಿದ್ದರಿಂದ ಹುಟ್ಟಿಕೊಂಡವು. ಈ ಅಂತರಕ್ಕೆ ತ್ರಿಶ್ರುತಿಪ್ರಮಾಣವನ್ನಲ್ಲದೆ ಬೇರೆ ಯಾವುದನ್ನೂ ಯಾವ ಶಾಸ್ತ್ರಕಾರನೂ ಇಲ್ಲಿಯವರೆಗೂ ಹೇಳಿಲ್ಲ ; ಆಧುನಿಕರೂ ಸಹ ಇದಕ್ಕೆ ಬೇರೆ ಪ್ರಮಾಣವನ್ನು ತತ್ತ್ವಶಃ ಹೇಳುವುದಿಲ್ಲ. ಆದರೂ ಬೇರೆ ಪ್ರಮಾಣಗಳನ್ನು ಈ ಅಂತರಕ್ಕೆ ಅಭ್ಯುಪಗಮಕ್ಕೆಂದು ಇಟ್ಟುಕೊಂಡು ಈ ವಿರೋಧಗಳ ಆಭಾಸವಾದೀತೇ, ಎಂದು ಪ್ರಯತ್ನಿಸಬಹುದು.

ಅ) ಭರತಾದಿಗಳ ವಿಕೃತಿ ಪಂಚಮ-ಪಂಚಮ = ಪ್ರತಿ ಮಧ್ಯಮ-ಪಂಚಮ = ಷಡ್ಜ-ಶುದ್ಧ ರಿಷಭ = ರಾಮಾಮಾತ್ಯನ ಅಂತರಗಾಂಧಾರ-ಶುದ್ಧಮಧ್ಯಮ ಇತ್ಯಾದಿ ಎಂಬ ಸಮೀಕರಣವನ್ನಿಟ್ಟುಕೊಂಡರೆ ಇದು ಏಕ ಶ್ರುತಿ ಪ್ರಮಾಣವಾಗುತ್ತದೆ. ಇದು ಅತ್ಯಂತ ಅನುಪಪನ್ನವಾದುದು ; ಏಕೆಂದರೆ ಸ್ವರಾಷ್ಟಕದಲ್ಲಿ ಹನ್ನೆರಡೇ ಶ್ರುತಿಗಳಾಗುತ್ತವೆ.

ಆ) ಕಲ್ಲಿನಾಥನು ಹೇಳಿದ ಅಪಕೃಷ್ಟ ಪಂಚಮ-ಪಂಚಮ = ಪ್ರತಿಮಧ್ಯಮ-ಪಂಚಮ = ಭರತಾದಿಗಳ ಅಂತರಗಾಂಧಾರ-ಶುದ್ಧಮಧ್ಯಮ ಇತ್ಯಾದಿ = ಷಡ್ಜ-ಶುದ್ಧ ರಿಷಭ ಎಂಬ ಸಮೀಕರಣವನ್ನಿಟ್ಟುಕೊಂಡರೆ ಈ ಅಂತರವು ದ್ವಿಶ್ರುತಿಕವಾಗುತ್ತದೆ. ಆಗ ಸ್ವರಾಷ್ಟಕಕ್ಕೆ ಇಪ್ಪತ್ತನಾಲ್ಕು ಶ್ರುತಿಗಳಾಗುತ್ತವೆ ; ಆಗ ಪ್ರತಿಯೊಂದು ಅರ್ಧ ಸ್ವರಕ್ಕೂ ಎರಡೆರಡು ಶ್ರುತಿಗಳು ; ಇದನ್ನೇ ಮೇಳಾಧಿಕಾರಲಕ್ಷಣಕಾರನೂ, ಸಂಗ್ರಹಚೂಡಾಮಣಿಕಾರನೂ ಹೇಳಿರುವುದು. ಇದು ಹೇಗೆ ಅಸಾಂಪ್ರತವೆಂದು ಈಗಾಗಲೇ (ಪು. 347–352) ಚರ್ಚಿಸಿದೆ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇ) ಶುದ್ಧ ರಿಷಭ ಭಾವಕ್ಕೆ ತ್ರಿಶ್ರುತಿಯೆಂದಿಟ್ಟುಕೊಂಡು ಈಗಾಗಲೇ (4), (5) ರಲ್ಲಿ ಚರ್ಚಿಸಲಾಗಿದೆ ; ಇದರ ಪ್ರಕಾರ ಸ್ವರಾಷ್ಟಕಕ್ಕೆ ಮೂವತ್ತಾರು ಶ್ರುತಿಗಳು !

ಈ) ಶುದ್ಧ ರಿಷಭ ಭಾವಕ್ಕೆ ಚತುಃಶ್ರುತಿಕ ಪ್ರಮಾಣವನ್ನಿಟ್ಟುಕೊಳ್ಳಲು ಲಕ್ಷ್ಯದಲ್ಲಿಯಾಗಲೀ ಶಾಸ್ತ್ರದಲ್ಲಿ ಯಾಗಲೀ ಆಸ್ಪದವಿಲ್ಲ ಷಡ್ಜ ಮಧ್ಯಮ ಪಂಚಮಗಳು ನೈಸರ್ಗಿಕವಾಗಿ ಸಿದ್ಧವಾದ ಸ್ವಯಂಭೂ ಸ್ವರಗಳಷ್ಟೆ. ಈ ಅಂತರಗಳಿಗೆ ಶುದ್ಧ ರಿಷಭದ ಭಾವವು ಲಕ್ಷ್ಯದಲ್ಲಿ ಎಂದಿಗೂ ಸಮವಾಗುವುದಿಲ್ಲ.

7) ನೆರೆಹೊರೆಯ ಶ್ರುತಿಗಳಲ್ಲಿಯೇ ಅಂತರಗಾಂಧಾರ-ಶುದ್ಧ ಮಧ್ಯಮ ಅಥವಾ ಸಾಧಾರಣ ಗಾಂಧಾರ (ಷಟ್‌ಶ್ರುತಿರಿಷಭ)- ಅಂತರಗಾಂಧಾರ ಮೊದಲಾದ ಸ್ವರಗಳು ಒಂದೇ ರಾಗದಲ್ಲಿ ಅನುಕ್ರಮದಲ್ಲಿ ಇಂದು ಬಳಕೆ ಯಾಗುತ್ತಿವೆಯಷ್ಟೆ. ಇದರಿಂದ ಅಭಿನವ ಗುಪ್ತಾಚಾರ್ಯನು ಹೇಳಿದ ಸ್ಥಾನ ಸಾಂಕರ್ಯ, ಸ್ವರಸಾಂಕರ್ಯಗಳ ತತ್ತ್ವವು ನಿಷ್ಪ್ರಯೋಜಕವಾಗುತ್ತದೆ. 109, 110, 120, 185 ಹಾಗೂ ಅವನು ಹೇಳಿದ ' ತತಃ ಸ್ವರೇ ತತ್ಕೃತಶ್ಚ ಸಂಖ್ಯಾನಿಯಮಃ । ಅತ ಏವ ನಿರಂತರಧ್ವನ್ಯಂಶಶ್ರವಣೇ ವಿರೂಪಸ್ವರಶ್ರವಣಮ್ ' 131 ಎಂಬ ಮಾತು ನಿರರ್ಥಕವಾಗುತ್ತದೆ.

8) ಚತುಃಶ್ರುತಿಕಗಳಾಗಿರುವ ಷಡ್ಜ ಮಧ್ಯಮ ಪಂಚಮಗಳು ಪ್ರಕೃತಿಸಿದ್ಧವಾದ ಸ್ವರಗಳಷ್ಟೆ. ಮೇಲೆ ಹೇಳಿದ ಯಾವ ಸಮೀಕರಣದಿಂದಲೂ ಮೂರು, ಆರು ಅಥವಾ ಒಂಬತ್ತು ಶ್ರುತಿಗಳು ಮಾತ್ರ ಸಿದ್ಧಿಸುತ್ತವೆಯೇ ವಿನಹ ನಾಲ್ಕು ಶ್ರುತಿಗಳ ಪ್ರಮಾಣವು ಯಾವಾಗಲೂ ಲಭಿಸದು.

9) ಷಡ್ಜ, ಮಧ್ಯಮಗಳ ಸಮಾನತೆಗೂ ಪಂಚಮವು ಅಸಮಾನವಾಗಿರುವುದಕ್ಕೂ ಈ ಯಾವ ಸಮೀಕರಣ ದಿಂದಲೂ ಪ್ರಯೋಜನವಾಗುವುದಿಲ್ಲ.

10) ಆಧುನಿಕ ಸ್ವರಾಷ್ಟಕದಲ್ಲಿ ಹನ್ನೆರಡು ಸ್ವರಸ್ಥಾನಗಳೂ ಉತ್ತರೋತ್ತರವಾಗಿ ಶುದ್ಧರಿಷಭ ಭಾವ ದಲ್ಲಿವೆ ; ಲಕ್ಷ್ಯದಲ್ಲಿ ಈ ಭಾವವನ್ನೇ ವಿವಾದಿತ್ವಕ್ಕೆ ಕಾರಣವಾದ ಪ್ರಮಾಣವೆಂದು ಇಟ್ಟುಕೊಂಡಿದೆಯಷ್ಟೆ. ಪೂರ್ವಾಚಾರ್ಯರ ಮತದಲ್ಲಿ ಈ ಭಾವವು ಎಂದಿಗೂ ವಿವಾದಿತ್ವವನ್ನು ಹೊಂದಿರಲಿಲ್ಲ. ಇದನ್ನು ತ್ರಿಶ್ರುತಿಪ್ರಮಾಣ ವೆಂದೂ ಇದೇ ವಿವಾದಿತ್ವ ಹೇತುವೆಂದೂ ಇಟ್ಟುಕೊಂಡರೆ ಶಾಸ್ತ್ರೋಕ್ತಿಗೆ ವಿರುದ್ಧವಾಗುತ್ತದೆ. ಅಥವಾ ಇದನ್ನೇ ಶಾಸ್ತ್ರೋಕ್ತವಾದ ದ್ವಿಶ್ರುತಿ ಪ್ರಮಾಣವೆಂದಿಟ್ಟುಕೊಂಡರೆ ಸ್ವರಾಷ್ಟಕದ ಇತರ ಭಾವಗಳೆಲ್ಲವೂ ನಾಶವಾಗಿ ಬಿಡುತ್ತವೆ. ಶುದ್ಧಗಾಂಧಾರ-ಸಾಧಾರಣಗಾಂಧಾರ ಮುಂತಾದ ನೆರೆಹೊರೆಯ ಶ್ರುತಿಗಳಲ್ಲಿರುವ ಸ್ವರಗಳನ್ನೂ, ಶುದ್ಧಮಧ್ಯಮ-ಪ್ರತಿಮಧ್ಯಮ-ಪಂಚಮ ಹೀಗೆ ದ್ವಿಶ್ರುತಿ ಪ್ರಮಾಣದ ಅಂತರವಿರುವ ಸ್ವರಸ್ಥಾನಗಳನ್ನೂ ಷಡ್ಜ-ಶುದ್ಧರಿಷಭ ಮುಂತಾದ ತ್ರಿಶ್ರುತಿ ಪ್ರಮಾಣಗಳನ್ನೂ ಪರಸ್ಪರ ಸಮಾನವೆಂದು ಕಂಡು ಎಲ್ಲವನ್ನೂ ಪರಸ್ಪರ ವಿವಾದಿಗಳೆಂದು ಹೇಳುವುದರಲ್ಲಿ ಶಾಸ್ತ್ರವಿವೇಚನೆಯ ಅಡಿಗಲ್ಲಾದ ಇಯತ್ತಾಪೂರ್ವಕ ಸಿದ್ಧಾಂತವೇ ಮಾಯವಾಗಿಬಿಡುತ್ತದೆ.

ಇದೇ ರೀತಿಯಲ್ಲಿ ಸಂವಾದ ಭಾವಗಳಲ್ಲಿಯೂ ಅಸಮಂಜಸತೆಯು ಕಂಡುಬರುತ್ತದೆ. ಶುದ್ಧರಿಷಭಭಾವಕ್ಕೆ ಪೂರ್ಣಾಂಕದಲ್ಲಿರುವ ಯಾವ ಶ್ರುತಿಪ್ರಮಾಣವನ್ನಿಟ್ಟುಕೊಂಡರೂ ಶಾಸ್ತ್ರದಲ್ಲಿ ಹೇಳಿದ ಮಧ್ಯಮಭಾವ, ಪಂಚಮ ಭಾವಗಳು ಸ್ಫುರಿಸುವುದಿಲ್ಲ. ಪೂರ್ಣಾಂಕವನ್ನೇ ಏಕೆ ಇಟ್ಟುಕೊಳ್ಳಬೇಕೆಂದರೆ, ಶ್ರುತಿಯು ಪರಮಾಣುಸ್ವರೂಪದ ಪ್ರಮಾಣದ ಅಂತರ. ಶ್ರಾವ್ಯತೆಯ ಕನಿಷ್ಠಾಂತರವುಳ್ಳ ಮಿತಿ ಅದು. ಹೀಗಿರುವಾಗ ಒಂದಕ್ಕಿಂತ ಕಡಿಮೆ ಶ್ರುತಿಯಿರುವ ಎಂದರೆ ಭಿನ್ನರಾಶಿಗಳಿಂದ ಕೂಡಿದ ಸಂಖ್ಯೆಯ ಪ್ರಮಾಣವು ಲಕ್ಷ್ಯದಲ್ಲಿಯೂ ಲಕ್ಷಣದಲ್ಲಿಯೂ ನಿರರ್ಥಕವಾದುದು. ಶಾಸ್ತ್ರನಿಷಿದ್ಧವಾದ ಶುದ್ಧಮಧ್ಯಮ-ಶುದ್ಧನಿಷಾದಗಳ ಸಂವಾದವನ್ನು ಲಕ್ಷ್ಯವು ಅಂಗೀಕರಿಸಿದೆ.

## IX ಸಮೀಚೀನ ನವ್ಯದೃಷ್ಟಿಯ ಆವಶ್ಯಕತೆ

ಭಾರತೀಯ ಸಂಗೀತದಲ್ಲಿ ಶ್ರುತಿಯು ವಹಿಸಿರುವ ಪಾತ್ರವನ್ನು ಅಭ್ಯಾಸಮಾಡಿದರೆ, ಹಾಗೂ ಅದರ ವಿಷಯದಲ್ಲಿ ಆಧುನಿಕರು ತಳೆದಿರುವ ಹಲವು ತಪ್ಪು ಕಲ್ಪನೆಗಳನ್ನೂ ಅಭಿಪ್ರಾಯಗಳನ್ನೂ ಮನಗಂಡರೆ ಒಂದು ವಿಷಯವು ಸ್ಪಷ್ಟವಾಗುತ್ತದೆ: ಪ್ರಾಚೀನ ಭಾರತೀಯ ಸಂಗೀತ ಶಾಸ್ತ್ರಜ್ಞರಲ್ಲಿಯೂ ಈ ವಿಷಯವಾಗಿ ಭಿನ್ನಾಭಿಪ್ರಾಯಗಳಿದ್ದವು, ಈಗಲೂ ಇವೆ. ಆದರೆ ಇವುಗಳಲ್ಲಿರುವ ವ್ಯತ್ಯಾಸವೆಂದರೆ ಪ್ರಾಚೀನ ಭಾರತೀಯ ಸಂಗೀತದಲ್ಲಿ ಪೂರ್ವಾಚಾರ್ಯರು ತಳೆದಿದ್ದ ವೈಚಾರಿಕಭೇದದಿಂದ ಶ್ರುತಿಯು ಪುಷ್ಟವಾಗಿ ಬೆಳೆದು ತನ್ನ ಉದ್ದೇಶ, ಕರ್ತವ್ಯ, ಕಲ್ಪನೆಗಳನ್ನು ಉಪಬೃಂಹಿಸಿಕೊಂಡಿತು. ಆಧುನಿಕರ ವಿಚಾರವಿಪ್ಲವದಿಂದ ಲೆಕ್ಕದ, ಮಾತಿನ ಕೆರೆಯು ಕೋಡಿ ಬಿತ್ತು ; ಆದರೆ ಸಂಗೀತಕಲೆ, ಶಾಸ್ತ್ರ, ನಮ್ಮ ಸಂಸ್ಕೃತಿ ಇವುಗಳ ನೆಲದ ಸಾರ ಹೆಚ್ಚಲಿಲ್ಲ ; ಹಸಿರ ಸಿರಿ ಈ ಭೂಮಿಯಲ್ಲಿ ಹೆಚ್ಚಲಿಲ್ಲ.

ಇದಕ್ಕೆ ಏನು ಕಾರಣ ?

### 1. ವೈಚಾರಿಕ ವೈಫಲ್ಯಕ್ಕೆ ಕಾರಣಗಳು

ಮುಖ್ಯವಾದ ಕಾರಣವೆಂದರೆ ನಮ್ಮ ಪೂರ್ವಾಚಾರ್ಯರಾದ ಮಹರ್ಷಿಗಳು ಇದರ ಬಗೆಗೆ ಪಡೆದಿದ್ದ ಸಮಗ್ರವಾದ ಸಮೀಚೀನ ದೃಷ್ಟಿಯು ನಮ್ಮಲ್ಲಿ ಇಲ್ಲದಿರುವುದು. ಕುರುಡರು ಆನೆಯ ಬೇರೆ ಬೇರೆ ಅಂಗಗಳನ್ನು ತಡವಿ ಅದೇ ಆನೆಯ ಆಕಾರವೆಂದು ಬಣ್ಣಿಸಿದ ಅಂಶದೃಷ್ಟಿಯ ದೋಷವೇ ನಮ್ಮನ್ನೂ ಬಾಧಿಸುತ್ತಿದೆ. ಗಣಿತಶಾಸ್ತ್ರದಿಂದ ಎಲ್ಲಿ ಪ್ರಯೋಜನವಿಲ್ಲವೋ ಅಲ್ಲಿಯೇ ಅದರ ಆರ್ಭಟೆ, ಆಟಾಟೋಪ; ವಿಜ್ಞಾನವೆಂದರೆ ಕರಾರುವಾಕ್ಕಾಗಿ ಅಳೆದು, ನಿರ್ಧರಿಸಿ ಹೇಳುವ ವಿಧಾನ ; ಆದುದರಿಂದ ಶ್ರುತಿಗಳಲ್ಲಿಯೂ ಹಾಗೆಯೇ ಮಾಡಬೇಕು ಎಂಬ ಪೂರ್ವಗ್ರಹ, ಹೀಗೆ ನಮ್ಮ ಅಭ್ಯಾಸವು ಬಾಧಿತವಾಗಿದೆ. ಪ್ರಾಚೀನಾಚಾರ್ಯರು ಇದೆಲ್ಲದರ ಪ್ರಯಾಸವಿಲ್ಲದೆಯೇ ಶ್ರುತಿಯ ಬಗೆಗೆ ಪರಸ್ಪರ ಪ್ರೇರಕಗಳೂ ಪೂರಕಗಳೂ ಆದ ವಿವಿಧ ಮತಗಳನ್ನು ಮಂಡಿಸಿದರು. ಇವೆಲ್ಲವನ್ನೂ ಸಂಗ್ರಹಿಸಿ, ವ್ಯವಸ್ಥೆಗೊಳಿಸಿ, ಮತಂಗನು ಬಹು ಹಿಂದೆಯೇ ಸಮ್ಯಕ್‌ದೃಷ್ಟಿಯನ್ನೂ, ಜಿಜ್ಞಾಸೆಯಲ್ಲಿ ಬೃಹತ್ತಾದ ಪ್ರತಿಭೆಯನ್ನೂ, ಸಂಯೋಜನಾ ಚಾತುರ್ಯವನ್ನೂ, ಅರ್ಥವಿಸ್ತಾರದ ಕೌಶಲವನ್ನೂ ಮೆರೆದಿದ್ದಾನೆ. ಮಹಾನುಭಾವನಾದ ಮತಂಗ ಮುನಿಯು ಕನ್ನಡನಾಡಿನಲ್ಲಿ ಪುನರವತಾರ ಮಾಡುವ ಆವಶ್ಯಕತೆ ಎಂದಿಗಿಂತ ತೀವ್ರವಾಗಿದೆ.

ಎರಡನೆಯ ಕಾರಣವು, ಶ್ರುತಿಗಳನ್ನು ಪ್ರತ್ಯೇಕವಾಗಿ, ಸ್ವತಂತ್ರವಾಗಿ ಅಭ್ಯಾಸಮಾಡುವ ಪ್ರವೃತ್ತಿ. ಕೇವಲ ಶ್ರುತಿಗಳ ಜ್ಞಾನದಿಂದ ಆಗುವ ಪ್ರಯೋಜನವು ತೀರ ಅಲ್ಪವೇ : ವಾಸ್ತುಶಿಲ್ಪವನ್ನು ಅಧ್ಯಯನ ಮಾಡಲು ತೊಡಗಿದ ಅಭ್ಯಾಸಿಯು ಮಹಾಸೌಧವೊಂದರಲ್ಲಿರುವ ಇಟ್ಟಿಗೆಗಳನ್ನು ಮಾತ್ರ ಅಳೆದು, ಲೆಕ್ಕಹಾಗಿ ತೃಪ್ತನಾದಂತೆ, ಅಥವಾ ತೊಳಲಿದಂತೆ ಆಗುತ್ತದೆ. ಶ್ರುತಿಗೂ ಸ್ವರಕ್ಕೂ ಇರುವ ಸಂಬಂಧ, ರಾಗ, ಮೇಳ, ಗಮಕ, ಮುಂತಾದವುಗಳ ಚೌಕಟ್ಟಿನಲ್ಲಿ ಶ್ರುತಿಯ ಕಲ್ಪನೆಯನ್ನು ಅರ್ಥಮಾಡಿಕೊಂಡರೆ ಮಾತ್ರ ಅಭ್ಯಾಸವು ಸಾರ್ಥಕವಾದೀತು.

ಮೂರನೆಯದಾಗಿ, ಶ್ರುತಿಯ ಬಗೆಗೆ ಒಂದು ತಪ್ಪುಗ್ರಹಿಕೆ ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ. ನಮ್ಮ ಸಂಗೀತದಲ್ಲಿ ಲಕ್ಷ್ಯವು ಬಹುವಾಗಿ ಬದಲಾಯಿಸಿದೆ; ಅದಕ್ಕೆ ತಕ್ಕಂತೆ ಶ್ರುತಿಯ ಕಲ್ಪನೆಯೂ ಬದಲಾಗಬೇಕು ಎಂದು ಅನೇಕ ವಿದ್ವಾಂಸರು ಬಗೆದಿದ್ದಾರೆ, ಅದರ ಕರ್ತವ್ಯದ ವಿಷಯದಲ್ಲಿ ಅಸ್ಪಷ್ಟಜ್ಞಾನವನ್ನು ತಳೆದಿದ್ದಾರೆ. ಶ್ರುತಿಯು ನಮ್ಮ ಗಾನಪ್ರಪಂಚದ ಮೂಲದ್ರವ್ಯ. ಅದು ಲಕ್ಷ್ಯಪ್ರಸಿದ್ಧವಾದ ವಿಷಯಗಳನ್ನು ವಿವರಿಸುವುದರಲ್ಲಿ

ತತ್ಪರವಾಗಬೇಕು. ಹೀಗೆ ಅದು ಸ್ವರದ ಸ್ವರತ್ವ, ಸ್ವಸಂವೇದ್ಯತೆ, ರಕ್ತಿ, ವಿಕೃತಿ, ಪ್ರಮಾಣ, ಗುಣ ಮೊದಲಾದ ಅಂಶಗಳನ್ನು ವಿವರಿಸಬೇಕು. ಸ್ವರದ ಶಾಸ್ತ್ರೀಯ ವ್ಯವಸ್ಥೆಯಾದ ಸ್ವರಾಷ್ಟಕದ ವಿಸ್ತಾರ, ಸ್ವಭಾವ, ರಚನೆ ಮೊದಲಾದವುಗಳನ್ನು ಸ್ವರದ ಮೂಲಕ ವಿವರಿಸಬೇಕು; ಸ್ವರದ ಪರಸ್ಪರ ಹಿತಾಹಿತ ಸಂಬಂಧಗಳನ್ನು ಅದು ವಿವರಿಸುವುದರ ಮೂಲಕ ಸ್ವರವು ಶಬಳಿತ ಸ್ವರೂಪದಲ್ಲಿ ಪಡೆಯುವ ರಸಪ್ರವಾಹವನ್ನು ಗುರುತಿಸಿ, ಹಿಂಬಾಲಿಸಿ, ಅದರ ಜಿಜ್ಞಾಸೆಯನ್ನು ಮಾಡಿಕೊಡಬೇಕು. ಸ್ವರಾಷ್ಟಕದ ಮೂಲಕ ಲಕ್ಷ್ಯಪ್ರಸಿದ್ಧವಸ್ತುಕೋಶದಲ್ಲಿರುವ ರಾಗ, ಪ್ರಬಂಧಾದಿಗಳ ಭೌತಿಕ ವಿಶ್ಲೇಷಣೆಯನ್ನೂ ಸೌಂದರ್ಯ ಮೀಮಾಂಸೆಯನ್ನು ಮಾಡಿಕೊಡಬೇಕು. ಸ್ವರ ಮತ್ತು ಸ್ವರಾಷ್ಟಕಗಳ ತತ್ತ್ವಗಳನ್ನು ಶ್ರುತಿಯು ಹೇಗೆ ವಿವರಿಸುತ್ತದೆಂಬುದನ್ನು ಪೂರ್ವಾಚಾರ್ಯರು ಸೂತ್ರರೂಪದಲ್ಲಿ ಹೇಳಿದುದನ್ನು ಈಗಾಗಲೇ ವಿಸ್ತರಿಸಿ ಹೇಳಲಾಗಿದೆ. ಶ್ರುತಿಯು ಸ್ವರದ ಹಿತಾಹಿತ ಸಂಬಂಧಗಳನ್ನೂ, ರಸಪ್ರವಾಹ ಜಿಜ್ಞಾಸೆಯನ್ನೂ ವಾದಿ ಸಂವಾದಿ ಮುಂತಾದ ಸ್ವರಚಾತುರ್ವಿಧ್ಯದ ಮೂಲಕ ಹೇಗೆ ಮಾಡುವುದೆಂಬುದನ್ನೂ, ಉಳಿದುದನ್ನು ಗ್ರಾಮ, ಜಾತಿ, ರಾಗ, ಗೀತಿ, ಪ್ರಬಂಧ ಮೊದಲಾದವುಗಳ ಮೂಲಕ ಹೇಗೆ ನಿರ್ಮಿಸುವುದೆಂಬುದನ್ನೂ ಮುಂದೆ ತೋರಿಸಲು ಯತ್ನಿಸಲಾಗುವುದು.

ಹೀಗಿರುವಲ್ಲಿ, ಲಕ್ಷ್ಯವು ಎಷ್ಟೇ ವ್ಯತ್ಯಾಸವಾಗಿದ್ದರೂ ಶ್ರುತಿಯ ಕಲ್ಪನೆಗೆ, ಕರ್ತವ್ಯಕ್ಕೆ ಬಾಧೆಯಿಲ್ಲ. ಏಕೆಂದರೆ ಅದನ್ನು ನಮ್ಮ ಪೂರ್ವಜರು ಕಟ್ಟಿ ವಿಸ್ತರಿಸಿದ್ದು ಬಹು ವ್ಯಾಪಕವಾದ, ಸರ್ವಗ್ರಾಹಕವಾದ ಹಂದರದ ಮೇಲೆ. ಈಗ ಆಗುತ್ತಿರುವ, ಮುಂದೆ ಆಗಬಹುದಾದ ಲಕ್ಷ್ಯವ್ಯತ್ಯಾಸಗಳನ್ನು ಅದು ಒಳಗೊಳ್ಳುವಷ್ಟು ಸಮರ್ಥವಾಗಿಯೂ ವಿಶಾಲವಾಗಿಯೂ, ಹಿಗ್ಗುವಂತೆಯೂ ಇದೆ, ಅದರ ಅಡಿಪಾಯ. ಅದು ಶುದ್ಧವಾಗಿ ಶಾಸ್ತ್ರೀಯ ಕಲ್ಪನೆಯೆಂಬುದನ್ನು ಮನಗಾಣದೆ ಅನೇಕ ವಿಧದ ಕೇವಲ ಲಕ್ಷ್ಯಪ್ರಯೋಜಕ ತಂತ್ರಗಳನ್ನೂ ಪ್ರಕ್ರಿಯೆಗಳನ್ನೂ ಅದಕ್ಕೆ ಆರೋಪಿಸಿ ಪಡೆಯಲೆಳಸುವುದು ನಮ್ಮ ನಾಲ್ಕನೆಯ ದೋಷ. ಶಾಸ್ತ್ರದಲ್ಲಿ ಅದು ಹಿಂದೆ ಏನನ್ನು ಸಾಧಿಸುತ್ತಿತ್ತೋ, ಇಂದೂ ಅದನ್ನೇ ಅಷ್ಟೇ ಸಮರ್ಥವಾಗಿ ಸಾಧಿಸುತ್ತಿದೆ.

## 2. ಶ್ರುತಿಗಳ ಸಂಖ್ಯಾಮೂಲ ಪ್ರಮಾಣಗಳನ್ನು ಪ್ರಾಚೀನಾಚಾರ್ಯರು ಏಕೆ ಹೇಳಲಿಲ್ಲ?

ಆದುದರಿಂದ ಶ್ರುತಿಯ ಪ್ರಮಾಣಗಳನ್ನು ನಿಕರವಾಗಿ ಲೆಕ್ಕಿಸಿ ಹೇಳುವುದರಿಂದ ಆಗುವ ಪ್ರಯೋಜನವು ಅತ್ಯಲ್ಪವೇ ಎನ್ನಬಹುದು. ಹೀಗೆ ಹೇಳಲು ಎರಡು ಕಾರಣಗಳಿವೆ: ಮೊದಲನೆಯದಾಗಿ ಇವುಗಳಿಂದ ಲಕ್ಷ್ಯಪ್ರಸಿದ್ಧ ಸ್ವರಗಳ ಪ್ರಮಾಣಗಳನ್ನು ತಿಳಿಯುವ ಆವಶ್ಯಕತೆ ಉಂಟಾಗುವುದಿಲ್ಲ; ಇವುಗಳ ಪ್ರಮಾಣಗಳು ಪ್ರಯೋಗಸಿದ್ಧ ವಾಗಿ ಸಂಗೀತ ವಾದ್ಯಗಳಲ್ಲಿ ದೊರೆಯುತ್ತವೆ. ಸ್ವರಪ್ರಮಾಣಗಳನ್ನು ನಿರ್ಣಯಿಸುವುದು ಶ್ರುತಿಯ ಕರ್ತವ್ಯಗಳಲ್ಲಿ ಒಂದು ಅಲ್ಲವೇ ಎಂದರೆ, ಹೌದು; ಆದರೆ ಸಂಖ್ಯಾಮೂಲವಾದ ಪ್ರಮಾಣವನ್ನು ಹೇಳುವುದರಿಂದ ಲಕ್ಷಣಕ್ಕೆ ಪ್ರಯೋಜನವೇ ಹೊರತು ಲಕ್ಷ್ಯಕ್ಕೆ ಅಲ್ಲ. ಲಕ್ಷಣದ ಈ ಆವಶ್ಯಕತೆಯನ್ನು ಶ್ರುತಿನಿದರ್ಶನ ಪ್ರಯೋಗವು ಸಮರ್ಥ ರೀತಿಯಲ್ಲಿ ಪೂರೈಸುತ್ತದೆಂದು ಮೇಲೆ ವಿವರಿಸಲಾಗಿದೆ. ಸಂಖ್ಯಾಮೂಲವಾದ ಪ್ರಮಾಣದ ನಿರೂಪಣೆಗಿಂತಲೂ ಲಕ್ಷಣಕ್ಕೆ ಬೇಕಾದುದು ಶ್ರುತಿಸಂಖ್ಯೆಯ ಇಯತ್ತೆ. ಇದರಿಂದಲೇ ಸ್ವರದ ತ್ರಿವಿಧ ಊರ್ಧ್ವಸ್ಪರ್ಶ, ಸ್ವಸಂವೇದ್ಯತೆ, ಪ್ರಮಾಣಗಳ ತಾರತಮ್ಯ ಮುಂತಾದವುಗಳು ತಿಳಿಯುತ್ತವೆ. ಇವುಗಳ ತಾತ್ತ್ವಿಕ ವಿವೇಚನೆಯ ಸಲುವಾಗಿಯೇ ದೀಪ್ತಾದಿ ಶ್ರುತಿಜಾತಿಪಂಚಕವನ್ನು ಶಾಸ್ತ್ರವು ಸೃಷ್ಟಿಸಿಕೊಂಡಿದೆ. ಲಕ್ಷ್ಯಪ್ರಸಿದ್ಧವಾದ ಎಲ್ಲಾ ಸ್ವರಸ್ಥಾನಗಳನ್ನೂ ವೀಣೆಯ ತಂತಿ ಮೊದಲಾದ ಸಾಧನಗಳಿಂದ ಪ್ರತ್ಯಕ್ಷವಾಗಿ ಅಳೆದು ತಿಳಿದುಕೊಳ್ಳಬಹುದಷ್ಟೆ; ಇದರಲ್ಲಿ ತಾತ್ತ್ವಿಕ ವಿವೇಚನೆಗಾಗಲೀ, ಶಾಸ್ತ್ರೀಯ ಪ್ರಮೇಯಕ್ಕಾಗಲೀ ಎಡೆಯಲ್ಲಿದೆ? ಹೀಗೆ ಅಳೆದು ತಿಳಿದುದರಿಂದಾಗಲೀ ಸ್ವರದ ಗುಣ, ಸ್ವಸಂವೇದ್ಯತೆ, ರಕ್ತಿ ಮುಂತಾದ ಲಕ್ಷಣಗಳ ವಿವೇಚನೆಯಾಗಲೀ ಎಲ್ಲಿ ಹುಟ್ಟುತ್ತದೆ?

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಆದುದರಿಂದಲೇ ಶ್ರುತಿಗೆ ಮೂಲಭೂತವಾದ ಕೆಲವು ಲಕ್ಷಣಗಳನ್ನು ಹೇಳಿ ಅವುಗಳಿಂದ ಈ ಎಲ್ಲಾ ಪ್ರಮೇಯ, ತತ್ತ್ವಗಳನ್ನೂ ಪಡೆಯುವ ಪ್ರಯತ್ನವನ್ನು ನಮ್ಮ ಹಿರಿಯರು ಮಾಡಿದರು. ಈ ಪ್ರಮೇಯ ಸಾಮಗ್ರಿಯ ವಿವೇಚನೆಯನ್ನು ಕೈಗೊಳ್ಳದಿದ್ದರೆ ಶಾಸ್ತ್ರಕ್ಕೆ ಅಸ್ತಿತ್ವವೇ ಇಲ್ಲದೆ ಹೋಗುತ್ತದೆ. ಶಾಸ್ತ್ರಕ್ಕೇ ಅಸ್ತಿತ್ವವಿಲ್ಲದಿದ್ದರೆ ಕಲೆಯು ಕಡಿವಾಣವಿಲ್ಲದ ಕುದುರೆಯಂತೆ, ಕೈಹಿಡಿದು ನಡೆಸುವವನಿಲ್ಲದ ಕುರುಡನಂತೆ, ದಾರಿ ತಪ್ಪುತ್ತದೆ; ಎಡವಿ, ಮುಗ್ಗರಿಸಿ, ಆಘಾತದಿಂದ ನರಳುತ್ತದೆ; ಕಳೆಯೇ ಹೊರಸಾಗಿ, ಹುಲುಸಾಗಿ ಬೆಳೆದು ಪೈರನ್ನು ಒಣಗಿಸಿದಂತೆ ಆಗುತ್ತದೆ. ಅಲ್ಲದೆ ಶ್ರುತಿಯ ಭೌತಿಕ ಪ್ರಮಾಣದ ಇಯತ್ತೆಯಿಂದ ವಿಶೇಷ ಪ್ರಯೋಜನವಿಲ್ಲವೆಂಬುದನ್ನು ಇನ್ನೂ ಒಂದು ರೀತಿಯಿಂದ ತಿಳಿಯಬಹುದು. ಉದಾಹರಣೆಗೆ ಋಷಭವನ್ನು ತೆಗೆದುಕೊಂಡರೆ, ಅದರ ಮೊದಲನೆಯ ಮತ್ತು ಎರಡನೆಯ ಶ್ರುತಿಗಳಿಗೆ ಕಂಪನ ಸಂಖ್ಯೆಗಳನ್ನೋ, ಅವು ನುಡಿಯುವ ತಂತಿಯ ಉದ್ದವನ್ನೋ ಕಂಡುಹಿಡಿಯಲಾಯಿತೆಂದರೂ, ಲಕ್ಷ್ಯದಲ್ಲಿ ಅವುಗಳ ಪ್ರಯುಕ್ತಿ ಎಂದಿಗೂ ಇಲ್ಲವೇ ಇಲ್ಲವಷ್ಟೆ. ಈ ಶ್ರುತಿಗಳು ಯಾವಾಗಲೂ ಗಾನವ್ಯವಹಾರದಲ್ಲಿ ಕೇಳಿಸುವುದಿಲ್ಲ. ಋಷಭದ ಪ್ರಮಾಣವನ್ನು ಪೂರೈಸುವುದರಲ್ಲಿ ಇವು ಪ್ರಯೋಜಕಗಳೇ ಹೊರತು, ಋಷಭದ ಋಷಭತ್ವಕ್ಕೆ ಪೂರ್ವಾಭಿಕಾಂಕ್ಷೆಯಿಂದ ಅಪ್ರತ್ಯಕ್ಷ ಹೇತುಗಳೇ ಹೊರತು, ರಿಷಭವು ಪ್ರಕಟವಾದಾಗ ಇವು ಅನುಕ್ರಮದಲ್ಲಿಯಾಗಲೀ ಯೌಗಪದ್ಯದಲ್ಲಿಯಾಗಲೀ (ಏಕಕಾಲಿಕವಾಗಿಯಾಗಲೀ) ಗೋಚರಿಸುವುದಿಲ್ಲ. ಋಷಭಕ್ಕೆ ಸ್ವರತ್ವವೂ ರಿಷಭತ್ವವೂ ಗಾನವ್ಯಪದೇಶವೂ ದೊರೆಯುವುದು ಅದರ ಮೂರನೆಯ ಶ್ರುತಿಯಿಂದಲೇ. ಮೊದಲನೆಯ ಎರಡು ಶ್ರುತಿಗಳು ತಾತ್ತ್ವಿಕವಾದ, ಅಪ್ರತ್ಯಕ್ಷವಾದ, ಶಾಸ್ತ್ರೀಯ ಮಾತ್ರವಾದ, ಕರ್ತವ್ಯಗಳನ್ನು ನಿರ್ವಹಿಸುತ್ತವೆ. ಗಾನವ್ಯಪದೇಶವೇ ಇಲ್ಲದ, ಪ್ರತ್ಯಕ್ಷವಾದ ಅಸ್ತಿತ್ವವೇ ಇಲ್ಲದ ಇವುಗಳನ್ನು ಅಳೆದು ಹೇಳಿದುದರಿಂದ ಆದ ಪ್ರಯೋಜನವೇನು?

ದ್ವಾವಿಂಶತಿ ಶ್ರುತಿಗಳ ನಿಕರವಾದ ಭೌತಿಕಪ್ರಮಾಣಗಳನ್ನು ನಮ್ಮ ಪೂರ್ವಾಚಾರ್ಯರು ಹೇಳದಿರುವುದಕ್ಕೆ ಇನ್ನೂ ಒಂದು ಮುಖ್ಯವಾದ ಕಾರಣವಿದೆ. ಶ್ರುತಿಪ್ರಮಾಣಗಳನ್ನೇ ಏಕೆ, ಲಕ್ಷ್ಯಪ್ರಸಿದ್ಧವಾದ ಸಪ್ತಸ್ವರಗಳನ್ನೂ ಅವುಗಳ ಅವಾಂತರಭೇದಗಳನ್ನೂ ಸಹ ಇಯತ್ತೆಯಿಂದ ಲೆಕ್ಕಿಸಿ ಅವರು ಹೇಳಲಿಲ್ಲ. ಇದಕ್ಕೆ ಅವರು ಅಸಮರ್ಥರಾಗಿದ್ದರೆಂದು ತಿಳಿಯುವುದು ಆತ್ಮವಂಚನೆ ಮಾಡಿಕೊಂಡಂತೆ ಆಗುತ್ತದೆ. ಏಕೆಂದು ಈಗಾಗಲೇ ಶ್ರುತಿಗಳನ್ನು ಲೆಕ್ಕಿಸುವ ವಿಧಾನಗಳಲ್ಲಿ ಸಾರಣಾಕ್ರಮವನ್ನು ವಿವೇಚಿಸುವ ಸಂದರ್ಭದಲ್ಲಿ (ಪು. 405-406) ಸೂಚಿಸಲಾಗಿದೆ. ನಮ್ಮ ಸಂಗೀತದಲ್ಲಿ ನಿಷ್ಕೃಷ್ಟವಾದ ಸ್ವರಸ್ಥಾನದ ಜ್ಞಾನದಿಂದ ಲಕ್ಷ್ಯಕ್ಕೆ ಆಗುವ ಪ್ರಯೋಜನವು ಬಹಳ ಕಡಿಮೆ. ಅಲ್ಲದೆ ಸ್ವರಜ್ಞಾನವೂ ಶ್ರುತಿಜ್ಞಾನವೂ ಸಂಸ್ಕಾರ, ವಾಸನೆ, ಅಭ್ಯಾಸಾದಿಗಳಿಂದ ಉಂಟಾಗಬೇಕಾದವುಗಳು; ಸ್ವರಗಳನ್ನು ಅಭ್ಯಾಸಮಾಡಬೇಕಾದರೆ ಜಗತ್ತಿನಲ್ಲಿ ಯಾವ ದೇಶದಲ್ಲಿಯೂ ಅವುಗಳ ಕಂಪನ ಸಂಖ್ಯೆಗಳನ್ನು ತಿಳಿದು, ಅವು ನುಡಿಯುವ ತಂತಿಯ ಉದ್ದ ಮೊದಲಾದವುಗಳನ್ನು ಮೊದಲು ತಿಳಿದುಕೊಂಡು ಯಾರೂ ಆಮೇಲೆ ಸಂಗೀತಾಭ್ಯಾಸದಲ್ಲಿ ತೊಡಗುವುದಿಲ್ಲ; ಸಂಗೀತಪ್ರಪಂಚದಲ್ಲಿ ಅತಿ ವಿಖ್ಯಾತರಾದ ವಿಭೂತಿಪುರುಷರಲ್ಲಿ ಹಲವರು ನಿರಕ್ಷರಕುಕ್ಷಿಗಳೆಂಬುದು ದುರ್ದೈವದ, ಆದರೆ ಸತ್ಯ, ಸಂಗತಿ. ಗಾನವಾದನಗಳಲ್ಲಿ ಕಲ್ಪನೆಯ ಮುಗಿಲು ಮೀರಿದ ಬಾನಿನಲ್ಲಿ ವಿಹರಿಸಿ ತಮ್ಮ ವಿಶೇಷ ಪ್ರಯೋಗಗಳಿಂದ ಶಾಸ್ತ್ರವನ್ನೇ ಬದಲಾಯಿಸಿದ, ಸೃಷ್ಟಿಸಿದ ಮಹಿಮಾನ್ವಿತರನೇಕರಿಗೆ,—ಗೋಪಾಲನಾಯಕ, ತಾನ್‌ಸೇನ್, ತ್ಯಾಗರಾಜ, ಮುದ್ದುಸ್ವಾಮಿದೀಕ್ಷಿತ, ಶ್ಯಾಮಾಶಾಸ್ತ್ರಿ, ವೀಣಾ ಶೇಷಣ್ಣ, ವೀಣಾ ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ, ಪಲ್ಲವಿ ರಾಮಲಿಂಗಯ್ಯ, ಮೈಸೂರು ಸದಾಶಿವರಾವ್, ಮೈಸೂರು ವಾಸುದೇವಾಚಾರ್ಯ ಮೊದಲಾದವರಿಗೆ,—ಶ್ರುತಿಗಳ ಹಾಗೂ ಸ್ವರಗಳ ನಿಕರವಾದ ಪ್ರಮಾಣಗಳ ಸಂಖ್ಯಾಮೂಲವಾದ ಜ್ಞಾನವೇನೂ ಇರಲಿಲ್ಲ. ಅದರಿಂದ ಸಂಗೀತಲಕ್ಷ್ಯಕ್ಕೆ ನಷ್ಟವೇನೂ ಆಗಲಿಲ್ಲ. ಆದುದರಿಂದ ಇಂತಹ ಜ್ಞಾನವು ಕೇವಲ ಲಕ್ಷಣಪ್ರಯೋಜಕವಾದುದು.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಅಷ್ಟೇ ಅಲ್ಲದೆ, ಕಂಪನಸಂಖ್ಯೆ, ತಂತಿಯ ಉದ್ದ ಮೊದಲಾದವುಗಳಿಂದ ಉಂಟಾಗುವ ಇಯತ್ತಾಜ್ಞಾನದಿಂದ ಲಕ್ಷ್ಯಕ್ಕೆ ವಿಶೇಷ ಪ್ರಯೋಜನವೇನೂ ಇಲ್ಲವೆಂದು ಹೇಳಲು ಇನ್ನೂ ಒಂದು ಪ್ರಬಲವಾದ ಕಾರಣವಿದೆ: ಭಾರತೀಯ ಸಂಗೀತದಲ್ಲಿ, ಅದರಲ್ಲಿಯೂ ವಿಶೇಷವಾಗಿ ಕರ್ಣಾಟಕಸಂಗೀತದಲ್ಲಿ, ಷಡ್ಜಪಂಚಮಗಳನ್ನು ಬಿಟ್ಟರೆ ಉಳಿದ ಯಾವ ಸ್ವರಸ್ಥಾನವೂ ಶಾಸ್ತ್ರದಿಂದ ವಿಧಿಸಲ್ಪಟ್ಟಿರುವ ಕಂಪನಸಂಖ್ಯೆಯಲ್ಲಿ ಅಥವಾ ಪ್ರಮಾಣದಲ್ಲಿ ಪ್ರಯುಕ್ತವಾಗುವುದಿಲ್ಲ. ಇದು ಎಲ್ಲಾ ಸಂಗೀತವಿದ್ವಾಂಸರಿಗೂ ತಿಳಿದಿರುವ ವಿಷಯ. ಹೀಗಾಗಲು ಕಾರಣವೇನೆಂದರೆ ಸ್ವರವು ನಮ್ಮಲ್ಲಿ ನಾದಬಿಂದುವೆಂಬ, ಧ್ವನಿಯೆಂಬ ವ್ಯಪದೇಶವನ್ನು ಪಡೆಯದೆ, ಒಂದು ವಿಸ್ತಾರವೆಂಬ ಅರ್ಥವನ್ನು ಪಡೆದಿರುವುದು. ಈ ವಿಸ್ತಾರದಲ್ಲಿ ಅದು ನಾನಾ ಅಭಿವ್ಯಕ್ತಿರೀತಿಗಳನ್ನು ವಿವಿಧ ಛಾಯೆಗಳಿಂದ ಪಡೆದು ನಾದಸೌಂದರ್ಯಾರ್ಥದ ವಿನ್ಯಾಸ, ವಿಸ್ತಾರ, ವಿಶ್ಲೇಷಣೆಗಳನ್ನು ನಡೆಸುತ್ತದೆ; ಹೀಗೆ ಮಾಡಲು ಅದು ಗಮಕವೆಂಬ ತಂತ್ರವನ್ನು ಬಳಸುತ್ತದೆ. ಒಂದೇ ಸ್ವರವು ವಿವಿಧ ಸ್ವರಸಂದರ್ಭಗಳಲ್ಲಿ, ವಿವಿಧ ಗೇಯಾರ್ಥಸನ್ನಿವೇಶಗಳಲ್ಲಿ, ವಿವಿಧ ರೀತಿಯಾಗಿ ಪ್ರಕಟವಾಗುತ್ತದೆ; ಇದರಿಂದಲೇ ಅರ್ಥಸ್ಪಷ್ಟತೆಯೂ ಅರ್ಥವೈಶಿಷ್ಟ್ಯವೂ ಗಾನದಲ್ಲಿ ಉಂಟಾಗುವುದು. ಇವನ್ನೆಲ್ಲಾ ಎಣಿಸಿ, ಲೆಕ್ಕಿಸಿ, ಹಿಡಿದಿಟ್ಟು ಶಾಸ್ತ್ರದಲ್ಲಿ ಹೇಳುವುದೆಂದರೆ ನೆರಳನ್ನು ನಿರ್ಬಂಧಿಸಿ ಅಳೆದು ಹೇಳಲು ತೊಡಗಿದಂತೆ; ನಾಟ್ಯದೇವನ ಸುಂದರವಾದ ಮಾತಿನಲ್ಲಿ, ನೀರಿನಲ್ಲಿ ಮೀನಿನ ಮಾರ್ಗವನ್ನು ಹಿಡಿದಿಟ್ಟು ಅಳೆದಂತೆ, ಬಾನಿನಲ್ಲಿ ಹಕ್ಕಿಯ ಹಾರಾಟವನ್ನು ನಕ್ಷೆಯೆಳೆದು ಚಿತ್ರಿಸಿ, ಲೆಕ್ಕಿಸಿ, ಇಟ್ಟಂತೆ. ಆದುದರಿಂದ ಈ ವಿಧದ ಭೌತಿಕಪ್ರಮಾಣಗಳು ಸ್ವರಗಳಿಗೇ ಪ್ರಯೋಜಕಗಳಲ್ಲದಮೇಲೆ, ಸೂಕ್ಷ್ಮಾತಿಸೂಕ್ಷ್ಮವಾದ, ಅನೇಕವೇಳೆ ಶ್ರವಣವ್ಯಪದೇಶವೇ ಇಲ್ಲದೆ ಇರುವ ಶ್ರುತಿಗಳಿಗೆ ಲಕ್ಷ್ಯಪ್ರಯೋಜಕಗಳಾಗುವುದಾದರೂ ಹೇಗೆ? ಎಂದೇ ನಮ್ಮ ಪೂರ್ವಾಚಾರ್ಯರು ಇವನ್ನು ಹೇಳುವ ವ್ಯರ್ಥ ಶ್ರಮವನ್ನು ವಹಿಸಲಿಲ್ಲ.

### 3. ಪಾಶ್ಚಾತ್ಯ ಸಂಗೀತದಲ್ಲಿ ಕಂಪನಸಂಖ್ಯೆಯ ಇಯತ್ತೆಯು ಅವಶ್ಯಕ.

ಶ್ರುತಿಗಳಿಗೆ ನಿಕರವಾದ ಭೌತಿಕಪ್ರಮಾಣಗಳನ್ನು ಕಂಪನಸಂಖ್ಯೆ ಮೊದಲಾದವುಗಳ ಮೂಲಕ ಹೇಳಲು ಪ್ರಯತ್ನಿಸುವವರು ಕೆಲವರು ಸಾಮಾನ್ಯವಾಗಿ ಪಾಶ್ಚಾತ್ಯ ಸಂಗೀತಶಾಸ್ತ್ರದ ವಿಷಯದಲ್ಲಿ ತಾವು ಪಡೆದಿರುವ ಅರೆಬೆಂದ ಅಭಿಪ್ರಾಯಗಳಿಂದ ಪ್ರಭಾವಿತರಾಗಿರುತ್ತಾರೆ. ಪಾಶ್ಚಾತ್ಯ ಸಂಗೀತದಲ್ಲಿ ಸ್ವರಾಷ್ಟಕದಲ್ಲಿ ಪ್ರಯುಕ್ತವಾದ ಸಕಲ ಸ್ವರಸ್ಥಾನಗಳಿಗೂ ಕಂಪನಸಂಖ್ಯೆಗಳ ಮೂಲಕ ಇಯತ್ತೆಯನ್ನು ಸ್ಥಾಪಿಸುತ್ತಾರೆ. ಇದು ಆ ಸಂಗೀತಕ್ಕೆ ಸಹಜವಾಗಿಯೂ ಅವಶ್ಯಕವಾಗಿಯೂ ಇದೆ. ಏಕೆಂದರೆ ಅವರು ಬೃಂದ ಸಂಗೀತಪದ್ಧತಿಯನ್ನು (orchestral music) ವಿಶೇಷವಾಗಿ ಪರಿಷ್ಕರಿಸಿಕೊಂಡು ಪ್ರೌಢವಾದ ರೀತಿಯಲ್ಲಿ ಬೆಳೆಸಿಕೊಂಡಿದ್ದಾರೆ. ಪಥಕ (1) ರಲ್ಲಿ ತೋರಿಸಿರುವಂತೆ ಅವರು ಬಳಸುವ ನಾದವಿಸ್ತಾರವು ನಮ್ಮ ಸಂಗೀತದಲ್ಲಿರುವುದಕ್ಕಿಂತ ಬಹಳ ಹೆಚ್ಚಾಗಿದೆ. ಆಯಾಯಾ ನಾದ ವಿಸ್ತಾರದಲ್ಲಿ ವಿಧಿಸಲ್ಪಟ್ಟ ವಾದ್ಯದಿಂದ ಉತ್ಪನ್ನವಾದ ಸ್ವರಗುಂಫವು ವಿಶಿಷ್ಟ ಪರಿಣಾಮವನ್ನು ಹೊಂದಿರುತ್ತದೆ; ಇದು ಬೃಂದಸಂಗೀತಕ್ಕೆ ಬುನಾದಿಯಾದ ತತ್ತ್ವ. ಆದುದರಿಂದ ಆಯಾ ವಿಶಿಷ್ಟಕಂಪನ ಸಂಖ್ಯೆಯ ಸ್ವರವನ್ನು ವಾಗ್ಗೇಯಕಾರನು ವಿವಕ್ಷಿಸಿ ಲಕ್ಷ್ಯಕಾರನು ನಿಷ್ಕೃಷ್ಟವಾಗಿ ಅದನ್ನು ವಾಗ್ಗೇಯಕಾರನು ಉದ್ದೇಶಪಟ್ಟ ರೀತಿಯಲ್ಲಿಯೇ ಉತ್ಪಾದಿಸುವುದು ಆ ಸಂಗೀತದ ವೈಶಿಷ್ಟ್ಯಗಳಲ್ಲಿ ಒಂದು. ಈ ಕಾರಣದಿಂದ ಎಲ್ಲರೂ ಪ್ರಮಾಣಭೂತವಾಗಿ ಬಳಸಬಹುದಾದ ಆಧಾರಸ್ವರವೊಂದನ್ನು ಸರ್ವಸಮ್ಮತಿಯಿಂದ ಲಕ್ಷಿಸುವುದು ಅನಿವಾರ್ಯವಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಸ್ವರಾಷ್ಟಕದ ಆರನೆಯ, ಎಂದರೆ A (ನಮ್ಮ ಪಂಚಶ್ರುತಿಧೈವತ) ಸ್ವರವನ್ನು ಸೆಕೆಂಡಿಗೆ 440 ಕಂಪನ ಸಂಖ್ಯೆಯದನ್ನಾಗಿ ಅವರು ಸ್ವೀಕರಿಸಿದ್ದಾರೆ.

ಅಷ್ಟೇ ಅಲ್ಲದೆ ವಾಗ್ಗೇಯಕಾರನು ಕೆಲವುವೇಳೆ ಸಾಧಾರಣವಾಗಿ ಎಲ್ಲರೂ ಬಳಸುವ ಸ್ವರಸ್ಥಾನವೊಂದನ್ನು ಬಿಟ್ಟು ಸ್ವಲ್ಪ ನೀಚವಾದುದನ್ನೋ ಉಚ್ಚವಾದುದನ್ನೋ ವಿಶೇಷ ಪರಿಣಾಮಕ್ಕಾಗಿ ಬಳಸುತ್ತಾನೆ. ಇದನ್ನು

ನಿಷ್ಕೃಷ್ಟವಾಗಿ ಸ್ವರಲಿಪಿಯಲ್ಲಿ ತಿಳಿಸುವುದು ಅನಿವಾರ್ಯವಾಗುತ್ತದೆ. ಈ ಎಲ್ಲಾ ಕಾರಣಗಳಿಂದಲೂ ಗಾನವ್ಯವಹಾರದಲ್ಲಿ ಪ್ರಸಿದ್ಧವಾದ, ಎಲ್ಲಾ ನಾದವಿಸ್ತಾರದಲ್ಲಿರುವ ಎಲ್ಲಾ ಸ್ವರಗಳನ್ನೂ ಅವರು ಕಂಪನಸಂಖ್ಯೆಯ ಮೂಲಕ ಲೆಕ್ಕಿಸಿ ಹೇಳಲೇಬೇಕಾಗುತ್ತದೆ. ಅವರ ಸ್ವರಾಷ್ಟಕದಲ್ಲಿರುವ ಸ್ವರಗಳು ನಿಸರ್ಗಸಿದ್ಧವಲ್ಲವೆಂಬುದು ಇನ್ನೊಂದು ಪ್ರಬಲವಾದ ಕಾರಣ. ಏಕಕಾಲಿಕವಾದ ಬಹುಸ್ವರಶ್ರೇಣಿಯು ಎಂದರೆ ಒಂದೇ ಕ್ಷಣದಲ್ಲಿ ಅನೇಕ ಸ್ವರಗಳ ಉಚ್ಚಾರವು ಮುಖ್ಯ ತಂತ್ರವಾಗಿರುವ ಪಾಶ್ಚಾತ್ಯ ಸಂಗೀತಪದ್ಧತಿಯಲ್ಲಿ ಉಚ್ಚಸ್ಥಾಯಿಗಳಲ್ಲಿ ಅಹಿತವೂ ಕರ್ಕಶವೂ ಆದ ವಿವಾದಿಭಾವಗಳನ್ನು ನಿವಾರಿಸಲೋಸುಗ ಸ್ಥಾಯಿಯ ವ್ಯಾಪ್ತಿಯನ್ನು ಹನ್ನೆರಡು ಸಮಪಾಲುಗಳನ್ನಾಗಿ ಮಾಡಿ, ಎಂದರೆ ನಿಸರ್ಗಸಿದ್ಧವಾದ ಸ್ಥಾನಗಳನ್ನು ಮೇಲೆ ಅಥವಾ ಕೆಳಗೆ ಪಲ್ಲಟಮಾಡಿ ಚಾಕ್ರಿಕಗತಿಯಲ್ಲಿ ಪಡೆಯುತ್ತಾರೆ. ಆದುದರಿಂದ ಹೀಗೆ ಪ್ರಾಕೃತಿಕ ಸ್ಥಾನದಿಂದ ಸ್ವರವು ಎಷ್ಟು ಪಲ್ಲಟವಾಗಿದೆಯೆಂದು ಹೇಳಬೇಕಾದರೆ ಕಂಪನಸಂಖ್ಯೆಯ ಇಯತ್ತೆ ಅನಿವಾರ್ಯವಾಗುತ್ತದೆ.

### 4. ಭಾರತೀಯ ಸಂಗೀತಕ್ಕೆ ಅದು ಅನಾವಶ್ಯಕ.

ಭಾರತೀಯ ಸಂಗೀತದಲ್ಲಿ ಹೀಗಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ಕಂಠಪರಂಪರೆಯ ಶಿಕ್ಷಣಕ್ರಮವೂ ವಾಗ್ಗೇಯಕಾರನ ಹಾಗೆಯೇ ಗಾಯಕವಾದಕರೂ ಸ್ವಂತ ಮನೋಧರ್ಮದಿಂದ ಸಂಗೀತವನ್ನು ಸೃಷ್ಟಿಸುವ ಅವಕಾಶವೂ ವೈಶಿಷ್ಟ್ಯಗಳಾಗಿರುವ ಈ ಸಂಗೀತದಲ್ಲಿ ಏಕಸ್ವರಶ್ರೇಣಿ ಪದ್ಧತಿಯು ಮಾತ್ರ ಇರುವುದರಿಂದ ನೈಸರ್ಗಿಕವಾದ ಸ್ವರಸ್ಥಾನಗಳನ್ನೇ ಬಳಸಲಾಗುತ್ತದೆ. ಆಯಾ ರಾಗಕ್ಕೆ, ಆಯಾ ಗಾಯಕವಾದಕರ ಮನೋಧರ್ಮಕ್ಕೆ, ಆಯಾ ಸ್ವರಸಂದರ್ಭಕ್ಕೆ, ಆಯಾ ರಸಸಂದರ್ಭಕ್ಕೆ, ಅನುಗುಣವಾಗಿ ಸ್ವರವು ವಿವಿಧ ಛಾಯೆಗಳನ್ನು ಪಡೆಯುವುದು ಅನಿವಾರ್ಯವಾಗುತ್ತದೆ. ಒಬ್ಬೊಬ್ಬ ಕಲಾವಿದನೂ ತನ್ನ ಸೌಕರ್ಯವನ್ನು ಅವಲಂಬಿಸಿ ಆಧಾರಶ್ರುತಿಯನ್ನಿಟ್ಟುಕೊಳ್ಳುವುದರಿಂದರಿಂದಲೂ ಇಲ್ಲಿ ಕೇವಲ ಮೂರು ಸ್ಥಾಯಿಗಳ ವ್ಯಾಪ್ತಿ ಸಾಮಾನ್ಯವಾಗಿ ಸಾಕಾಗುವುದರಿಂದಲೂ, ಬೃಂದಸಂಗೀತವೂ ಸ್ವರಪಲ್ಲಟವೂ ಇಲ್ಲದಿರುವುದರಿಂದಲೂ ವಿಶಿಷ್ಟ ನಾದವಿಸ್ತಾರದಲ್ಲಿ ವಿಶಿಷ್ಟ ವಾದ್ಯದಿಂದ ಉತ್ಪನ್ನವಾದ ಸ್ವರದ ವಿಶೇಷ ಪರಿಣಾಮವು ಪ್ರಾಥಮಿಕ ಪ್ರಾಮುಖ್ಯವನ್ನು ಪಡೆಯದಿರುವುದರಿಂದಲೂ, ಎಲ್ಲರೂ ಸ್ವೀಕರಿಸುವಂತಹ ಪ್ರಮಾಣಭೂತ ಆಧಾರಸ್ವರವಾಗಲೀ ಸ್ವರಾಷ್ಟಕದಲ್ಲಿರುವ ಎಲ್ಲಾ ಸ್ವರಸ್ಥಾನಗಳ ಕಂಪನಸಂಖ್ಯೆಗಳ ಇಯತ್ತೆಯಾಗಲೀ ಅನಿವಾರ್ಯವೂ ಅಲ್ಲ, ಆವಶ್ಯಕವೂ ಅಲ್ಲ, ಪ್ರಸಕ್ತವೂ ಅಲ್ಲ. ಅಂತಹುದರಲ್ಲಿ ಶ್ರುತಿಗಳ ಇಯತ್ತೆಯ ಅಳತೆ ಹೇಗೆ ಆವಶ್ಯಕವಾದೀತು?

### 5. ಶ್ರುತಿಯೇ ಏಕಮಾತ್ರಸೂತ್ರ

ಇಲ್ಲಿ ಗಮನಿಸಬೇಕಾದುದೆಂದರೆ ಪಾಶ್ಚಾತ್ಯಸಂಗೀತದಲ್ಲಿಯೂ ವಿವಿಧ ಸ್ವರಸ್ಥಾನಗಳಿಗೆ ಕಂಪನಸಂಖ್ಯೆಗಳ ಇಯತ್ತೆ ಇದೆಯೇ ಹೊರತು ಈ ಸ್ವರಗಳನ್ನುಂಟುಮಾಡುವ ಸ್ವರಾಂಶಗಳಿಗಿಲ್ಲ. ಮೈಕ್ರೋಟೋನ್ ಎಂದು ಅವರು ಕರೆಯುವ ಸ್ವರಾಂಶಕ್ಕೆ ಶ್ರುತಿ ಎಂಬ ತಪ್ಪು ಅನುವಾದವು ಬಹುವಾಗಿ ಪ್ರಚಾರದಲ್ಲಿದೆ. ಇದು ಬಹಳ ಅಸಂಗತವಾದುದು. ಶ್ರುತಿಯ ಕಲ್ಪನೆ, ಕರ್ತವ್ಯಗಳಿಗೂ ಮೈಕ್ರೋಟೋನ್‌ಗಳ ಸ್ಥಾನಮಾನಗಳಿಗೂ ಅಜ-ಗಜದಷ್ಟು ಅಂತರವಿದೆ. ಪಾಶ್ಚಾತ್ಯ ಸಂಗೀತದಲ್ಲಿ ಶ್ರುತಿಕಲ್ಪನೆಯಿಲ್ಲವೆಂಬುದನ್ನು ಮನಗಾಣಬೇಕು. ಸ್ವರಪ್ರಮಾಣ, ಸ್ವರತ್ವ, ಸ್ವರಸ್ವಸಂವೇದ್ಯತೆ, ರಕ್ತಿ, ಸಂವಾದ್ಯಾದಿ ಸ್ವರಚಾತುರ್ವಿಧ್ಯ ಮುಂತಾದವುಗಳನ್ನು ಅವರು ಹಲವು ಸಲ ಕೇವಲ ಪ್ರತ್ಯಕ್ಷಪ್ರಮಾಣದಿಂದಲೇ, ಪ್ರಯೋಗವಿಧಾನದಿಂದಲೇ ವಿವರಿಸಲೆಳಸುತ್ತಾರೆ; ಕೆಲವಕ್ಕೆ ಪ್ರತ್ಯೇಕವಾದ ಪ್ರಮೇಯಗಳನ್ನೇ ಪಡೆಯುತ್ತಾರೆ. ಈ ಎಲ್ಲಾ ಉಪಾಧಿಗಳನ್ನೂ ಒಂದೇ ತತ್ತ್ವದಿಂದ ಸೂತ್ರಿಸುವ ವಿಧಾನವನ್ನು ಅವರ ನಾದವಿಜ್ಞಾನವಾಗಲೀ, ಸಂಗೀತಶಾಸ್ತ್ರವಾಗಲೀ, ಇಷ್ಟೊಂದು ಪ್ರೌಢವಾಗಿ ಬೆಳೆದಿದ್ದರೂ, ಇನ್ನೂ ಕಂಡುಹಿಡಿದಿಲ್ಲ.

ಕೇವಲ ಪ್ರಾಯೋಗಿಕವಲ್ಲದೆ ವಿವೇಚನಾಪದ್ಧತಿಯನ್ನೂ ಬಳಸಿಕೊಂಡು, ಶ್ರುತಿಯೆಂಬ ಒಂದೇ ಮೂಲದ್ರವ್ಯವನ್ನು ಕುರಿತ ಕೆಲವೇ ಸೂತ್ರಗಳ ಆಧಾರದಿಂದ ಇವೆಲ್ಲವನ್ನೂ ಯಶಸ್ವಿಯಾಗಿ ವಿವರಿಸುವ ಅದ್ಭುತವೂ ಜಗದ್ವಂದ್ಯವೂ ಆದ ಪ್ರತಿಭೆಯನ್ನು ಸಾವಿರಾರು ವರ್ಷಗಳ ಹಿಂದೆ ಭಾರತೀಯ ಸಂಗೀತದ ರಸ ಋಷಿಗಳು ಕಂಡುಹಿಡಿದು ನಿಕರವಾಗಿ ಹೇಳಿದರೆಂಬುದು ನಿಜಕ್ಕೂ ಹೆಮ್ಮೆಯ ಮಾತೇ ಸರಿ.

## 6. ಲಕ್ಷ್ಯಲಕ್ಷಣಸಮನ್ವಯ

ಲಕ್ಷ್ಯಲಕ್ಷಣಗಳಲ್ಲಿ ಶ್ರುತಿಯು ಪಡೆದಿರುವ ವಿರೋಧವನ್ನು ಕುರಿತು ಈಗಾಗಲೇ ಸ್ವಲ್ಪ ಹೇಳಲಾಗಿದೆ. ಈ ವಿರೋಧವನ್ನು ಸಮನ್ವಯ ಮಾಡುವುದರ ಆವಶ್ಯಕತೆ ಇಂದು ಕಂಡುಬರುತ್ತಿದೆ. ಇದಕ್ಕೆ ಕಾರಣವಾದ ಲಕ್ಷ್ಯವ್ಯಪದೇಶವು ಸುಭದ್ರವಾಗಿ ಬೇರೂರಿರುವುದರಿಂದ ಅದನ್ನು ವ್ಯತ್ಯಾಸಮಾಡುವಂತಿಲ್ಲ. ಶ್ರುತಿಯು ಭಾರತೀಯ ಸಂಗೀತದ ಬುನಾದಿಯಂತಹ ಕಲ್ಪನೆಯಾಗಿರುವುದರಿಂದ ಅದನ್ನೂ ಬದಲಾಯಿಸುವಂತಿಲ್ಲ. ಆದುದರಿಂದ ಉಳಿದುದು ಒಂದೇ ಮಾರ್ಗ: ಶಾಸ್ತ್ರವು ಹೇಳಿದುದನ್ನು ಉಪಲಕ್ಷಣವೆಂದಿಟ್ಟುಕೊಂಡು ಅದರ ಅರ್ಥವಿಸ್ತಾರದಿಂದ ಲಕ್ಷ್ಯವನ್ನು ವಿವರಿಸುವುದು. ಎಲ್ಲಾ ಕಾಲದ ಶಾಸ್ತ್ರಗಳಲ್ಲಿಯೂ ಈ ಸಮಸ್ಯೆಯು ಇರುವಂತಹುದೇ. ಆದರೆ ಅರ್ಥವಿಸ್ತಾರವನ್ನು ಮಾಡುವಾಗ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಇವುಗಳಲ್ಲಿ ಅತ್ಯಂತ ಮುಖ್ಯವಾದುದು ಅವಿಚ್ಛಿನ್ನತೆ; ಕಾಲದೇಶಗಳಲ್ಲಿ ಐಕ್ಯ. ಆದುದರಿಂದ ಶ್ರುತಿಯ ವಿಷಯದಲ್ಲಿ ಸಮೀಚೀನವಾದ ನವ್ಯದೃಷ್ಟಿಯಿಂದ ವಿವೇಚನೆಮಾಡಲುದ್ಯುಗಿಸುವವರು ಅದರ ಚರಿತ್ರೆಯ ಬಗೆಗೆ ವಿಶೇಷವಾದ ಗಮನವನ್ನಿಡಬೇಕು. ಶ್ರುತಿಯು ಧ್ವನ್ಯಂತರಾಶ್ರುತಿ, ನೈರಂತರ್ಯ, ಅಂತರಗತತ್ವ, ಸ್ವರಗತತ್ವ, ಸ್ಥಾನಾಂತರದಲ್ಲಿ ವೈವಿಧ್ಯ, ಊರ್ಧ್ವಸ್ಪರ್ಶ, ಸ್ವರತ್ವಹೇತುತ್ವ, ಸ್ವರಸ್ವಸಂವೇದ್ಯತಾಹೇತುತ್ವ, ಕಾಲ, ಕಲಾ, ಪ್ರಮಾಣ, ಇವೇ ಮೊದಲಾದ ಲಕ್ಷಣಗಳಿಂದ ಕೂಡಿದ್ದು ತನ್ನ ಕರ್ತವ್ಯಗಳನ್ನು ನಿರ್ವಹಿಸಬೇಕು. ಏಕೆಂದರೆ ಅವಿಚ್ಛಿನ್ನತೆಯೇ ಯಾವುದೇ ಲಕ್ಷ್ಯದ ಜೀವಾಳ. ಇದರಿಂದಲೇ ನಾಗರಿಕತೆ, ಸಂಸ್ಕೃತಿಗಳಿಗೆ ಚಲನೆಯೂ ಚೈತನ್ಯವೂ, ಏಕಕಾಲದಲ್ಲಿ ನವ್ಯತೆ-ಪ್ರಾಚೀನತೆಗಳೂ ಉಂಟಾಗುವುದು. ಇಂತಹ ಸಮೀಚೀನ ದೃಷ್ಟಿಕೋನವು ಸಮಗ್ರವಾಗಿಯೂ ಇರಬೇಕು; ವಿವಿಧ ದೃಷ್ಟಿಗಳ, ಅಂಗಗಳ ಸಂಯೋಜನೆಯನ್ನು ಲಕ್ಷ್ಯಲಕ್ಷಣಗಳ ಸಂಪೂರ್ಣತೆಯ ಹಿನ್ನೆಲೆಯಲ್ಲಿ ಮಾಡುವಂತಹುದಾಗಿರಬೇಕು.

ಈ ದಿಕ್ಕಿನಲ್ಲಿ ನಮ್ಮಪ್ರಯತ್ನವೊಂದನ್ನು ಕೈಗೊಂಡಿದ್ದೇನೆ; ಅದು ಯಶಸ್ವಿಯಾದಾಗ, ಸಂಪೂರ್ಣವಾದಾಗ ಈ ವಿಷಯದಲ್ಲಿ ಪುನಃ ಬರೆಯುತ್ತೇನೆ.

## 7. ಆಧುನಿಕ ಸಮನ್ವಯಪ್ರಯತ್ನಗಳು : ಸಾಂಬಮೂರ್ತಿ

ಆಧುನಿಕ ಸಂಗೀತಶಾಸ್ತ್ರದಲ್ಲಿ ಕೆಲವರು ಈ ಪ್ರಯತ್ನವನ್ನು ಮಾಡಿರುವುದುಂಟು. ಇಂತಹ ಅನೇಕ ಪ್ರಯತ್ನಗಳನ್ನು ಅಬ್ರಹಾಂ ಪಂಡಿತನಿಂದ ಮೇಲೆ ಉದ್ಧರಿಸಿದೆ (ಪು. 426-431; ಪಥಕಗಳು 19, 20). ಶಿವಶರಣನ ಪ್ರಯತ್ನವನ್ನೂ ಈಗಾಗಲೇ ವಿವೇಚಿಸಿ ವಿಮರ್ಶಿಸಲಾಗಿದೆ (ಪು. 433-441; ಪಥಕಗಳು 21, 22). ಇವೆಲ್ಲವೂ ಪ್ರಾಚೀನ ಮತದಲ್ಲಿ ಹೇಳಿದ ಶ್ರುತಿಸ್ಥಾನಗಳನ್ನು ಕಂಪನಸಂಖ್ಯೆಯೇ ಮೊದಲಾದ ಇಯತ್ತೆಯಿಂದ ನಿರ್ಧರಿಸಲು ಪ್ರಯತ್ನಿಸಿವೆ. ಆದರೆ, ಪ್ರಾಚೀನ ಶ್ರುತಿಲಕ್ಷಣ, ಶಾಸ್ತ್ರವಿಧಿ, ಮುಂತಾದವುಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಹೊಸ ಶ್ರುತಿಪಕ್ಷವೊಂದನ್ನು ಮಂಡಿಸುವ ಧೈರ್ಯವನ್ನು ಸಾಂಬಮೂರ್ತಿಯು ಮಾಡಿದ್ದಾನೆ.[320] ಇದರ ವಿಮರ್ಶೆಯನ್ನು ಅಂಶತಃ 'ಒಂದೇ ಸ್ವರಪ್ರಭೇದಕ್ಕೆ ವಿವಿಧ ಶ್ರುತಿಗಳಲ್ಲಿ ಅಭಿವ್ಯಕ್ತಿ' ಎಂಬ ಶೀರ್ಷಿಕೆಯಲ್ಲಿ

320 Sambamoorthy, P., South Indian Music, Book IV, (3rd edn.) Ch. V, pp. 100-132.

(ಪು. 443-448) ಮಾಡಲಾಗಿದೆ. ಈ ಗ್ರಂಥವು ಬಹು ಪ್ರಚಾರವನ್ನು ಪಡೆದಿರುವುದರಿಂದ ಇದರ ವಾದವನ್ನು ಇಲ್ಲಿ ವಿಮರ್ಶಿಸುವುದು ಅಪ್ರಸಕ್ತವಾಗಲಾರದು.

ಸಾಂಬಮೂರ್ತಿಯು ಅಲ್ಲಲ್ಲಿ ಪ್ರಾಚೀನರ ಹೆಸರುಗಳನ್ನು ತನ್ನ ಗ್ರಂಥಗೌರವವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೂ ಉಪಚಾರಕ್ಕಾಗಿಯೂ ಬಳಸಿದ್ದಾನೆ ಅಷ್ಟೆ ; ಇಲ್ಲಿ ಅವನು ಹೇಳಿರುವುದೆಲ್ಲ ಸಂಪೂರ್ಣವಾಗಿ ಅವನದೇ ಎಂಬುದರಲ್ಲಿ ಸಂಶಯವಿಲ್ಲ. ಏಕೆಂದರೆ ಅವನು ದ್ವಾವಿಂಶತಿ ಶ್ರುತಿಗಳ ಪಕ್ಷವನ್ನು ಹೇಳುವಾಗ ಬಳಸುವ ತಂತ್ರ, ಯುಕ್ತಿ, ಸಾಧನಗಳು ಪ್ರಾಚೀನಗ್ರಂಥಗಳು ಹಾಗಿರಲಿ, ಅರ್ವಾಚೀನವೂ ಆಧುನಿಕವೂ ಆದ ಯಾವ ಗ್ರಂಥದಲ್ಲಿಯೂ ಸಹ ಕಂಡುಬರುವುದಿಲ್ಲ. ಅವನು ಆಡಿರುವ ಪ್ರತಿಯೊಂದು ಸೂಕ್ತಿ ಮುಕ್ತಾಫಲವೂ ಭರತ ಮತಂಗ ಶಾರ್ಙ್ಗದೇವಾದಿ ಸಕಲ ಪೂರ್ವಾಚಾರ್ಯರ ಮಾತುಗಳಿಗೆಲ್ಲ ಕುಠಾರಪ್ರಾಯವಾಗಿದೆ ; ಒಂದಕ್ಕೂ ಶಾಸ್ತ್ರಾಧಾರವಾಗಲೀ ವ್ಯಪದೇಶವಾಗಲೀ ಪ್ರಯೋಗಸಿದ್ಧಿಯಾಗಲೀ ಇಲ್ಲ. ಆದುದರಿಂದ ಅವನ ಎಲ್ಲಾ ಮಾತುಗಳನ್ನೂ ವಿಮರ್ಶಿಸಿ ಖಂಡಿಸುವ ಶ್ರಮಕ್ಕೆ ಕೈಹಚ್ಚದೆ ಕೆಲವು ಮುಖ್ಯವಾದ ಮಾತುಗಳನ್ನು ಇಲ್ಲಿ ಉದಾಹರಿಸಬಹುದು ; ಇವುಗಳಿಗೆ ಯಾವ ಆಧಾರವೂ ಎಲ್ಲಿಯೂ ಇಲ್ಲವೆಂದು ಹೇಳಿದರೆ ಮಾತ್ರ ಇಲ್ಲಿ ಸಾಕು :

The 22 srutis are the foundation of the original scale and they were derived primarily for fixing the values of the suddha svaras *i.e.*, the notes of the Sama gana. Excepting for the notes *sa, ma* and *pa*, the term *suddha* svara in ancient music and modern music denotes notes of entirely different pitch. . . . . The srutis are derived upon the principle of *samvaditva* or consonance. The 22 srutis were evolved through the Cycles of Fifths and Fourths *i.e.*, by *sa-pa* and *sa-ma* methods (*samvadadvaya*).[321]

ಹೀಗೆ ಸಾಮವೇದದಲ್ಲಿಯೇ ದ್ವಾವಿಂಶತಿ ಶ್ರುತಿಗಳ ಹುಟ್ಟನ್ನು ಈತನು ಕಾಣುತ್ತಾನೆ. ಸಾಮವೇದದ ಶುದ್ಧ ಸ್ವರಗಳನ್ನು (!) ಪಡೆಯಲೆಂದೇ ಇದನ್ನು ಹೇಳಲಾಯಿತಂತೆ ! ಸಾಮವೇದದಲ್ಲಿಯೂ, ತ್ರೈಸ್ವರ್ಯ, ಸಾಮವೇದ-ಪರಿಭಾಷಾ ಮುಂತಾದ ಗ್ರಂಥಗಳಲ್ಲಿಯೂ, ಇವುಗಳಿಗೆ ಬಹು ಅರ್ವಾಚೀನವಾದ ನಾರದೀಯ ಶಿಕ್ಷೆಯಲ್ಲಿಯೂ ಸಹ ಶುದ್ಧಸ್ವರವೆಂಬ ಹೆಸರೂ ಸಹ ಇಲ್ಲ ; ನಾರದೀಯ ಶಿಕ್ಷೆಯ ಹೊರತು ಉಳಿದ ಸಾಮವೇದ ಗ್ರಂಥಗಳಲ್ಲಿ ಶ್ರುತಿಯೆಂಬ ಪದವೂ ಬಳಕೆಯಾಗಿಲ್ಲ. ನಾರದೀಯ ಶಿಕ್ಷೆಯಲ್ಲಿಯಾದರೂ ದ್ವಾವಿಂಶತಿ ಶ್ರುತಿಗಳ ಸೊಲ್ಲೇ ಇಲ್ಲ. ಇದಕ್ಕೆ ಸಾಂಬಮೂರ್ತಿಗೆ ಆಧಾರ ಹದಿನೆಂಟನೆಯ ಶತಮಾನದಲ್ಲಿ ಪೂರ್ವ ಪರಿಭಾಷೆಯ ಜ್ಞಾನವಿಲ್ಲದೆ ಅಹೋಬಲನು ಬರೆದ ಸಂಗೀತಪಾರಿಜಾತ ! ಚಾಕ್ರಿಕ ಪಂಚಮ ಮಧ್ಯಮಗಳ ಭಾವದಿಂದ ದ್ವಾವಿಂಶತಿ ಶ್ರುತಿಗಳು ಹುಟ್ಟಿತೆಂಬ ಇವರಿಬ್ಬರ ವಾದವನ್ನೂ ಈಗಾಗಲೇ ಸಾಕಷ್ಟು ವಿವೇಚಿಸಿ ನಿರಾಕರಿಸಲಾಗಿದೆ.

All the 22 srutis become svaras in some raga or other. Srutis actually used in a raga attain the status of svaras in that raga and other notes remain merely as srutis.[322]

ಆಚಾರ್ಯ ವಿಶ್ವಾವಸು, ವಿಶಾಖಿಲಾಚಾರ್ಯ, ಭಟ್ಟತೌತ, ಅಭಿನವಗುಪ್ತರು ಹೇಳಿದ ಅಂತರಗತ ಶ್ರುತಿಗಳನ್ನು ಸಾಂಬಮೂರ್ತಿಯು ಒಂದೇ ಏಟಿನಲ್ಲಿ ಇಲ್ಲವಾಗಿಸಿಬಿಟ್ಟಿದ್ದಾನೆ ! ಇಲ್ಲಿಯೇ ಶ್ರುತಿವಿಷಯಕವಾದ ಹೊಸ ಕಲ್ಪನೆ

321 ಅದೇ ಗ್ರಂಥ, ಪು. 104-105. 322 ಅದೇ ಗ್ರಂಥ, ಪು. 105.

ಯೊಂದಿರುವುದು. ರಾಗವೊಂದರಲ್ಲಿ ಪ್ರಯೋಗವಾದರೆ ಮಾತ್ರ ಶ್ರುತಿಗೆ ಅಸ್ತಿತ್ವವಿರುವುದು ; ಇಲ್ಲದಿದ್ದರೆ ಅದು ಮಾಯವಾಗಿಯೇ ಬಿಡುತ್ತದೆ ; ಅಷ್ಟೇ ಅಲ್ಲ, ಶ್ರುತಿಗಳಲ್ಲಿ ಹೆಚ್ಚು ಸುಲಭವಾಗಿರುವ (easier), ಹೆಚ್ಚು ಕಷ್ಟತರವಾಗಿರುವ (more difficult) ಶ್ರುತಿಗಳೂ ಉಂಟು.[322] ಒಂದು ರಾಗದಲ್ಲಿ ಪ್ರಯೋಗವಾಗುವ ಶ್ರುತಿಗಳಿಗೆ ಸ್ವರಗಳೆಂದು ಹೆಸರು ; ಉಳಿದವುಗಳಿಗೆ ಶ್ರುತಿಗಳೆಂದು ಹೆಸರು !

ಮತ್ತಿನಂತಹ ಈ ಮಾತನ್ನೂ ಗಮನಿಸಬೇಕು :

A few of these srutis figure in rare ragas and they live only through these ragas.[323]

ಹೀಗೆ ದ್ವಾವಿಂಶತಿ ಶ್ರುತಿಗಳಲ್ಲಿ ಕೆಲವು ಅಪರೂಪವಾದ ರಾಗಗಳಲ್ಲಿ ಮಾತ್ರ ಬದುಕಿ, ಉಳಿದುಬಂದಿವೆಯಂತೆ. ಈಗಾಗಲೇ ಅಪರೂಪವಾಗಿರುವ ಇವು (ಇವುಗಳ ಹೆಸರನ್ನು ಕೊಟ್ಟಿಲ್ಲ !) ಇನ್ನು ಹತ್ತಾರು ವರ್ಷಗಳಲ್ಲಿಯೇ ಲುಪ್ತವಾಗಿಬಿಟ್ಟರೆ-ಇದು ರಾಗಗಳ ಸ್ವಭಾವವೆಂದು ನಮ್ಮ ಸಂಗೀತ ಚರಿತ್ರೆಯು ಪುನಃ ಪುನಃ ತೋರಿಸಿಕೊಟ್ಟಿದೆ–ಈ ಶ್ರುತಿಗಳೂ ನಾಶವಾದಂತೆಯೇ ! ಇನ್ನು ದ್ವಾವಿಂಶತಿ ಶ್ರುತಿಗಳ, ಸ್ವರಾಷ್ಟಕದ, ವಾದಿ ಸಂವಾದಿ, ಮುಂತಾದವುಗಳ ಗತಿಯೇನು, ಎಂಬ ಚಿಂತೆ, ಭೀತಿ ಉಂಟಾಗುತ್ತದೆ. ಅಪರೂಪವೆಂದು ಅವನು ಕರೆದಿರುವ ರಾಗಗಳಲ್ಲಿ ಕೆಲವು ಸ್ವರಗಳು ಉಪಯೋಗಿಸುವ ವಿಶೇಷ ಸಂಚಾರಗಳಲ್ಲಿನ ಗಮಕ ಸ್ವರೂಪಗಳನ್ನು ಇಲ್ಲಿ ಶ್ರುತಿಯೆಂದು ಅವನು ತಿಳಿದಿರುವ ಹಾಗೆ ಕಾಣುತ್ತದೆ. ಹೀಗೆ ಹೊಸ ರಾಗಗಳು ಬಂದು, ಹಳೆಯದು ಹೋಗುತ್ತಾ ಬಂದ ಹಾಗೆಲ್ಲ ಸಂಕಲನ, ವ್ಯವಕಲನ ಕ್ರಿಯೆಗಳು ನಡೆಯುತ್ತಲೇ ಇರಬೇಕು ; ಆದುದರಿಂದ ಸ್ವರಾಷ್ಟಕಕ್ಕೆ ನಿಕರವಾದ ಸ್ವರೂಪವೇನೂ ಇಲ್ಲ ! ಅಷ್ಟೇ ಅಲ್ಲವಂತೆ, ಎರಡು ಅಥವಾ ಹೆಚ್ಚು ಜನಕರಾಗಗಳಲ್ಲಿ ವರ್ಗೀಕರಣವಾಗಬಹುದಾದ ಒಂದೇ ಜನ್ಯ ರಾಗವು ಈ ಅಥವಾ ಆ ಮೇಳಕರ್ತದಲ್ಲಿ ಹುಟ್ಟಿತೆನ್ನುವುದಕ್ಕೂ ಬಡಪಾಯಿಯಾದ ಶ್ರುತಿಯೇ ಗುರಿ !

The subject of 22 srutis is one of the most difficult branches of the science of Indian music. It can be understood only by persons with many years of musical training. In fact those janya ragas, which can possibly claim more than one janaka mela are put under particular melakartas on the basis of their sruti values only.[324]

ಸಂದಿಗ್ಧ ಜನಕಗಳಾದ ಜನಕರಾಗಗಳನ್ನು ಅವು ಬಳಸುವ ಅನುಸ್ವರಗಳ ಆಧಾರದಿಂದ ಈ ಅಥವಾ ಆ ಜನಕ ರಾಗದಲ್ಲಿ ಸೇರಿಸುವುದು ವಿದ್ವಾಂಸರೂ ಸೂಕ್ಷ್ಮಶ್ರವಣವಿರುವ ರಸಿಕರೆಲ್ಲರೂ ತಿಳಿದ ವಿಷಯವೇ ಆಗಿದೆ ; ಇದಕ್ಕೆ ಶ್ರುತಿಗಳನ್ನು ಗುರಿಮಾಡುವ ಅಗತ್ಯವಿಲ್ಲ. ಏಕೆಂದರೆ ಆಯಾ ಕಲಾಯುಗದ ಅಥವಾ ಕಲೆಗಾರನ ಅಭಿರುಚಿಯು ಬದಲಾಯಿಸಿದಂತೆಲ್ಲ ಜನ್ಯರಾಗವೊಂದು ತನ್ನ ಮೇಳವನ್ನು ಬದಲಾಯಿಸುತ್ತಾ ಬಂದರೆ – ಇದು ಅತ್ಯಂತ ಸಹಜವೂ ನಿತ್ಯಸಿದ್ಧವೂ ಆಗಿರುವ ವಿಷಯ – ಆಗ ಶ್ರುತಿ ಮೌಲ್ಯಗಳನ್ನೂ ಸ್ವರಾಷ್ಟಕದಲ್ಲಿ ಬದಲಾಯಿಸಲಾದೀತೇ ? ಸಾಂಬಮೂರ್ತಿಯು ಮುಂದುವರೆದು ಹೀಗೆ ಹೇಳುತ್ತಾನೆ : ಇಪ್ಪತ್ತೆರಡಕ್ಕಿಂತ ಹೆಚ್ಚಿನ ಕೆಲವು ಶ್ರುತಿಗಳನ್ನು ಆಧುನಿಕ ಸಂಗೀತದಲ್ಲಿ ನಾವು ಬಳಸುತ್ತೇವೆ ; ಆದರೂ 22 ಸಂಖ್ಯೆಯ ಶ್ರುತಿಗಳೇ ಪ್ರಾಚೀನಕಾಲದಿಂದಲೂ ಅತ್ಯಂತ ಕನಿಷ್ಠ ಸಂಖ್ಯೆಯಲ್ಲಿ ವಾಸ್ತವವಾಗಿ ಪ್ರಯುಕ್ತವಾಗುತ್ತಿವೆ ; ಚೆನ್ನಾಗಿ ತರಪೇತಾದ ಕಿವಿಯು ಸ್ಥಾಯಿಯಲ್ಲಿ ಕಡೆಯಪಕ್ಷ 50 ಸ್ವರಗಳನ್ನಾದರೂ ಗುರುತಿಸಬಲ್ಲದು. ಸಂಗೀತದಲ್ಲಾದರೋ ರಾಗಗಳಲ್ಲಿ ವಾಸ್ತವವಾಗಿ

323 ಅದೇ ಗ್ರಂಥ, ಪು. 100. 324 ಅದೇ ಗ್ರಂಥ, ಪು. 101.

ಕಂಡುಬಂದು ಸಂವಾದಭಾವಗಳನ್ನು ಪಡೆದಿರುವವುಗಳು ಮಾತ್ರ ಪ್ರಸಕ್ತವಾದವು ; ಉಳಿದವುಗಳನ್ನು ಅನುಪಯುಕ್ತ ಶ್ರುತಿಗಳೆಂದು ತಿರಸ್ಕರಿಸಿಬಿಡುತ್ತೇವೆ. ಶಾಸ್ತ್ರದಲ್ಲಿ ವಿವಿಧ ವಿದ್ವಾಂಸರು 22, 24, 27, 32, 48, 53 ಮತ್ತು 96 ಶ್ರುತಿಗಳನ್ನು ಲೆಕ್ಕಿಸಿದ್ದಾರೆ :

With the progress of the art, a few more srutis have come into use. Theoretically, the number of srutis figuring in Indian music has been estimated by various scholars as 22, 24, 27, 32, 48, 53 and 96. . . . . Though in modern music, we use a few srutis in addition to the 22, the number 22 represents the barest minimum of srutis that has been actually used in Indian music from the ancient times. . . . . A well trained ear can perceive and identify at least 50 notes in an octave. In music, however, we are concerned only with those srutis which actually occur in ragas and which bear a concordant relationship with one another. The rest are discarded as unserviceable srutis.[323]

ಇದರಲ್ಲಿ ಕೋಹಲ, ಮತಂಗ, ವಿಶಾಖಿಲ, ವಿಶ್ವಾವಸು, ಅಭಿನವಗುಪ್ತ, ಶಾರ್ಙ್ಗದೇವ ಮುಂತಾದ ಪೂರ್ವಾಚಾರ್ಯರು ಸ್ವರಕ್ಕೆ ಹೇಳಿದ ಲಕ್ಷಣಗಳನ್ನು ಸಂಪೂರ್ಣವಾಗಿ ಕಡೆಗಣಿಸಿ, 'ಶ್ರೋತ್ರೇಂದ್ರಿಯ ಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್' ಎಂಬ ವಿಶ್ವಾವಸುವಿನ ಮಾತನ್ನು 'ಶ್ರೋತ್ರೇಂದ್ರಿಯ ಗ್ರಾಹ್ಯತ್ವಾದ್ ಧ್ವನಿರೇವ ಸ್ವರೋ ಭವೇತ್' ಎಂದು ತಿದ್ದಿಕೊಂಡಿರುವ ಹಾಗಿದೆ. ಶ್ರುತಿಯ ವಿಷಯದಲ್ಲಿಯೂ ಇಂತಹುದೇ ತಪ್ಪುಕಲ್ಪನೆಯನ್ನು ಇದು ಒಳಗೊಂಡಿದೆ. ನಾಟ್ಯಶಾಸ್ತ್ರದಲ್ಲಿಯೇ ಭರತನು ಇಪ್ಪತ್ತೆರಡು ಶ್ರುತಿಗಳ ಹೆಸರುಗಳನ್ನು ಹೇಳಿದ್ದಾನೆಂದೂ ಇವುಗಳನ್ನೇ ಸಂಗೀತ ರತ್ನಾಕರ, ಸಂಗೀತ ಪಾರಿಜಾತ, ಸಂಗೀತ ದರ್ಪಣಗಳು ಅನುಸರಿಸಿವೆಯೆಂದೂ ಅವನು ಹೇಳುತ್ತಾನೆ ; ಇದು ಸಂಪೂರ್ಣವಾಗಿ ಸುಳ್ಳು. ಭರತ, ಮತಂಗ, ಅಭಿನವಗುಪ್ತರಾದಿಯಾಗಿ ಯಾರೂ ಶ್ರುತಿಗಳಿಗೆ ಹೆಸರುಗಳನ್ನೇ ಕೊಟ್ಟಿಲ್ಲ ; ಉಪಲಬ್ಧಗ್ರಂಥಗಳಲ್ಲಿ ನಾನ್ಯದೇವನ ಭರತಭಾಷ್ಯವೇ ಮೊದಲ ಬಾರಿಗೆ ತೀವ್ರಾ ಕುಮುದ್ವತೀ ಮುಂತಾದ ಶ್ರುತಿನಾಮಗಳನ್ನು ಒಳಗೊಂಡಿದೆಯೆಂದು ಈಗಾಗಲೇ (ಪು. 363) ಹೇಳಿದೆ. ಇದು ಉದ್ಧೃತಿಯಾಗಿದ್ದರೆ, ಇದಕ್ಕೆ ಆಕರವೇನೆಂದು ತಿಳಿಯುವಂತಿಲ್ಲ. ಹೀಗಿರುವಾಗ ಭರತನಿಗೆ ಇವುಗಳನ್ನು ಆರೋಪಿಸುವುದು ಆಶ್ಚರ್ಯಕರವಾಗಿದೆ :

Names for the 22 srutis are found in Bharata's *Natya sastra* and these names are repeated in the *Sangita ratnakara, Sangita parijata* and *Sangita darpana.*[325]

ವೀಣೆಯಲ್ಲಿ ಹನ್ನೆರಡು ಮೆಟ್ಟುಗಳಿರುವುದರಿಂದ ಸ್ಥಾಯಿಯಲ್ಲಿ ಹನ್ನೆರಡೇ ಸ್ವರಗಳಿರಬೇಕೆಂಬ ನಿಯಮವೇನೂ ಇಲ್ಲವೆಂದು ಆತನ ನಂಬಿಕೆ :

The distribution of 22 srutis over the 12 svarasthanas is an easy and workable arrangement. The 12 frets for an octave on the vina do not warrant the assumption that only 12 notes are used in the octave.[326]

ಹಿಂದಿನಕಾಲದಲ್ಲಾದರೆ ದ್ವಾವಿಂಶತಿ ಶ್ರುತಿಗಳನ್ನು ಸಪ್ತಸ್ವರಗಳಲ್ಲಿಯೂ ವಿನಿಯೋಗಿಸಲಾಗುತ್ತಿತ್ತು. ಆಮೇಲೆ, ಷಡ್ಜಪಂಚಮಗಳು ಅವಿಕೃತಗಳಾದವು ; ಅವು ಒಂದೊಂದೂ ಒಂದೇ ಶ್ರುತಿಯನ್ನು ವಹಿಸಿಕೊಂಡವು ;

325 ಅದೇ ಗ್ರಂಥ, ಪು. 116. 326 ಅದೇ ಗ್ರಂಥ, ಪು. 104.

ಉಳಿದ ಇಪ್ಪತ್ತು ಶ್ರುತಿಗಳು ಉಳಿದ ರಿಗಮಧನಿ ಎಂಬ ಐದು ಸ್ವರಗಳಲ್ಲಿ ವಿನಿಯೋಗವಾದವು — ಒಂದೊಂದಕ್ಕೆ ನಾಲ್ಕರಂತೆ ; ಆದುದರಿಂದ ಸ್ವರಗಳು ಏಳು, ಸ್ವರಸ್ಥಾನಗಳು ಹನ್ನೆರಡು, ಶ್ರುತಿಗಳು ಇಪ್ಪತ್ತೆರಡು ಎಂಬ ಅರ್ಥ ಗರ್ಭಿತವಾದ ಮಾತು, ಎಂದೂ ಸಾಂಬಮೂರ್ತಿಯು ಹೇಳುತ್ತಾನೆ :

In ancient music, the 22 srutis were distributed over all the sapta svaras. But later on, when *sa* and *pa* came to be regarded as *avikruta* svaras (*i.e.*, changeless and not admitting of varieties). *Sa* and *pa* took one sruti each and the remaining 20 srutis were distributed amongst the five notes, *ri ga ma dha ni* at the rate of 4 for each note. Thus $4 \times 5 = 20 + 1 + 1 = 22$ srutis. Hence the significance of the statement: *svaras are 7, svarasthanas are 12 and srutis are 22.*[326]

ದ್ವಾವಿಂಶತಿ ಶ್ರುತಿಗಳಿಗೆ ಅವನೂ ವೇದೋಪವಸತಿಯನ್ನು ನಿರ್ಮಿಸಲು ಯತ್ನಿಸಿದ್ದಾನೆ ; ಋಗ್ವೇದದ ಸೂಕ್ತಗಳನ್ನೂ ಗಾಥೆಗಳನ್ನೂ ಹಾಡುವಾಗ ಷಡ್ಜ, ಮಧ್ಯಮ ಮತ್ತು ಪಂಚಮಗಳನ್ನು ಆಧಾರಸ್ವರವನ್ನಾಗಿ ಮಾಡಿಕೊಂಡು ಹಾಡುತ್ತಿದ್ದರಂತೆ ; ಅದರಿಂದ ದ್ವಾವಿಂಶತಿ ಶ್ರುತಿಗಳು ಜನಿಸಿದುವಂತೆ :

The 22 srutis of ancient music were not mere theoretical postulates. They were solid musical facts and were ascertained when Rig Vedic hymns and melodies were sung with *sa*, *ma* and *pa* as the tonic note or adhara shadja.[326]

ಇದಕ್ಕಿಂತ ನಿರಾಧಾರವಾದ ಹೇಳಿಕೆಯು ದೊರೆಯುವುದು ಕಷ್ಟ. ತನ್ನ ಹೇಳಿಕೆಗಳನ್ನು ಸಮರ್ಥಿಸಿಕೊಳ್ಳಲು ಅವನು ಯಾವ ಆಕರವನ್ನೂ ಉದ್ಧರಿಸದೆ ಇರುವುದು ಅವನ ಲೇಖನದ ವೈಶಿಷ್ಟ್ಯಗಳಲ್ಲೊಂದು. ಇದು ಏಕೆಂದರೆ ಆತನ ಮಾತುಗಳೆಲ್ಲವು ಹೆಚ್ಚಾಗಿ ಸ್ವಕಪೋಲಕಲ್ಪಿತವಾದವುಗಳೇ ಆಗಿರುತ್ತವೆ. ಆದುದರಿಂದ ಆತನ ಶ್ರುತಿವಿಷಯಕ ವಾದ ವಾದವನ್ನು ಪೂರ್ತಿಯಾಗಿ ವಿಮರ್ಶಿಸದೆ ಇನ್ನೊಂದು ಉದಾಹರಣೆಯನ್ನು ಕೊಟ್ಟು ತೃಪ್ತನಾಗಬೇಕಾಗಿದೆ : ಇಂದಿನ ಲಕ್ಷ್ಯದಲ್ಲಿ ಚತುಃಶ್ರುತಿ ರಿಷಭ, ಚತುಃಶ್ರುತಿ ಧೈವತ ಎಂಬ ತಪ್ಪು ಹೆಸರುಗಳು ನಿಂತಿದ್ದು ಆತನಿಗೆ ಸಾಕಾಗಲಿಲ್ಲವೇನೋ, ಗಾಂಧಾರ, ಮಧ್ಯಮ, ನಿಷಾದಗಳಿಗೂ ಸಹ ಏಕಶ್ರುತಿ, ದ್ವಿಶ್ರುತಿ, ತ್ರಿಶ್ರುತಿ ಮತ್ತು ಚತುಃಶ್ರುತಿ ಎಂದು ನಾಮಕರಣ ಮಾಡಿದ್ದಾನೆ :

The four srutis of *ga, ma* and *ni* may also be referred to as ekasruti, dvisruti, trisruti and chatussruti gandhara, madhyama and nishada respectively after the manner of rishabha and dhaivata.[327]

ಇನ್ನು, ಈ ಪಕ್ಷದಲ್ಲಿ ಶ್ರುತಿಗಳನ್ನು ಲೆಕ್ಕಿಸಿರುವ ವಿಧಾನವನ್ನು ಪರಿಶೀಲಿಸಬಹುದು. ಮೇಲಿನ ಉದ್ಧೃತಿಯಿಂದಲೂ,[326] ಗ್ರಂಥಾಂತರ್ಗತವಾದ ಇತರ ಸಾಕ್ಷ್ಯಗಳಿಂದಲೂ ಸಾಂಬಮೂರ್ತಿಯು ಮೇಳಾಧಿಕಾರ ಲಕ್ಷಣವನ್ನೂ ಸಂಗ್ರಹಚೂಡಾಮಣಿಯನ್ನೂ ಮಾತೃಕೆಯನ್ನಾಗಿ ಸ್ವೀಕರಿಸಿರುವುದು ನಿಸ್ಸಂಶಯವಾಗಿ ಸಿದ್ಧಪಡುತ್ತದೆ. ಈ ಎರಡು ಗ್ರಂಥಗಳನ್ನೂ ಕುರಿತು ಈಗಾಗಲೇ ಸಾಕಷ್ಟು ವಿವೇಚಿಸಿ ಖಂಡಿಸಲಾಗಿದೆ (ಪು. 348-352). ಇವು ಇಲ್ಲಿಯವರೆಗೆ ವಿವೇಚಿಸಿರುವ ಎಲ್ಲಾ ಶ್ರುತಿತತ್ತ್ವ, ಶ್ರುತಿಪ್ರಮೇಯಗಳನ್ನೂ ಉಲ್ಲಂಘಿಸುತ್ತವೆಂದು ಹೇಳಿದರೆ ಇಲ್ಲಿ

327 ಅದೇ ಗ್ರಂಥ, ಪು. 114.

ಸಾಕು. ಈ ಶ್ರುತಿಪದ್ಧತಿಯಲ್ಲಿ ಆತನು ಪೂರ್ಣ ಶ್ರುತಿ, ನ್ಯೂನ ಶ್ರುತಿ ಎಂಬ ಎರಡನ್ನು ಸೃಷ್ಟಿಸಿಕೊಂಡಿದ್ದಾನೆ. ಏಕಶ್ರುತಿಯೊಂದಕ್ಕೇ ಇಲ್ಲಿ ಮೂರು ಪ್ರಮಾಣಗಳು. ಇದರಲ್ಲಿ ಅತಿ ವಿಸ್ತಾರವಾದುದು ಪೂರ್ಣಶ್ರುತಿ. ಇದಕ್ಕಿಂತ ಕಡಿಮೆಯಾದುದು ನ್ಯೂನಶ್ರುತಿ; ಕನಿಷ್ಠಪ್ರಮಾಣದ್ದು ಪ್ರಮಾಣಶ್ರುತಿ. ಇವುಗಳಲ್ಲಿ ಇಂತಹುದು ಇಂತಹ ಸಂದರ್ಭದಲ್ಲಿಯೇ ಪ್ರಯೋಗವಾಗಬೇಕೆಂಬ ನಿಯಮವನ್ನು ಆತನು ಹೇಳಿಯೂ ಇಲ್ಲ, ತೋರಿಸಿಯೂ ಇಲ್ಲ. ದ್ವಾವಿಂಶತಿ ಶ್ರುತಿಗಳಲ್ಲಿ ಪ್ರತಿಯೊಂದೂ ಬೇರೆ ಬೇರೆ ಪ್ರಮಾಣದ್ದೆಂದು ಇವನೂ ಪ್ರತಿಜ್ಞೆಮಾಡುತ್ತಾನೆ, ಹಾಗೂ ಈ ಕೆಳಗಿನ ಶ್ರುತಿಪ್ರಮಾಣಗಳನ್ನು ಹೇಳುತ್ತಾನೆ:

1. ಏಕಶ್ರುತಿ:
   - (a) ಪ್ರಮಾಣಶ್ರುತಿ $= 81/80 =$ ಡೈಡಿಮಸ್ಸನ ಕಾಮ $= 22$ ಸೆಂಟುಗಳು.
   - (b) ನ್ಯೂನಶ್ರುತಿ $= 25/24 = 70$ ಸೆಂಟುಗಳು.
   - (c) ಪೂರ್ಣಶ್ರುತಿ $= 253/246 =$ ಪೈಥಾಗೊರಸ್ಸನ ಲಿಮ್ಮಾ $= 90$ ಸೆಂಟುಗಳು.
2. ದ್ವಿಶ್ರುತಿ:
   - (a) ಪೂರ್ಣ ದ್ವಿಶ್ರುತಿ $= 16/15 = 112$ ಸೆಂಟುಗಳು.
   - (b) ನ್ಯೂನ ದ್ವಿಶ್ರುತಿ $= 135/128 = 92$ ಸೆಂಟುಗಳು.
3. ತ್ರಿಶ್ರುತಿ $= 10/9 = 182$ ಸೆಂಟುಗಳು.
4. ಚತುಃಶ್ರುತಿ $= 9/8 = 2$ ಪ್ರಮಾಣಶ್ರುತಿ $+ 1$ ನ್ಯೂನ ಶ್ರುತಿ $+ 1$ ಪೂರ್ಣಶ್ರುತಿ $= 204$ ಸೆಂಟುಗಳು. (ಅಥವಾ 1 ಪೂರ್ಣ ದ್ವಿಶ್ರುತಿ $+ 1$ ನ್ಯೂನ ದ್ವಿಶ್ರುತಿ).
5. ಪಂಚಶ್ರುತಿ $= 32/27 = 294$ ಸೆಂಟುಗಳು (ಚತುಃಶ್ರುತಿ ರಿಷಭದಿಂದ ಶುದ್ಧಮಧ್ಯಮದವರೆಗಿನ ಅಂತರ).
6. ಷಟ್‌ಶ್ರುತಿ $= 6/5 = 316$ ಸೆಂಟುಗಳು. (ಅಂತರಗಾಂಧಾರದಿಂದ ಪಂಚಮದವರೆಗಿನ ಅಂತರ).
7. ಷಟ್‌ಶ್ರುತಿ — ಪಂಚಶ್ರುತಿ $= (6) - (5) = 81/80 =$ ಪ್ರಮಾಣಶ್ರುತಿ.
8. ಪಂಚಶ್ರುತಿ — ಚತುಃಶ್ರುತಿ $= (5) - (4) = 256/243 =$ ಪೂರ್ಣಶ್ರುತಿ.
9. ಚತುಃಶ್ರುತಿ — ತ್ರಿಶ್ರುತಿ $= (4) - (3) = 81/80 =$ ಪ್ರಮಾಣಶ್ರುತಿ.
10. ತ್ರಿಶ್ರುತಿ — ದ್ವಿಶ್ರುತಿ $= (3) - (2) = 25/24 =$ ನ್ಯೂನಶ್ರುತಿ.
11. ದ್ವಿಶ್ರುತಿ — ಏಕಶ್ರುತಿ $= (2) - (1) = 81/80 =$ ಪ್ರಮಾಣಶ್ರುತಿ.

ಈ ಗಣಿತಜಾಲವು ಮುಗ್ಧರಿಗೆ ಅದ್ಭುತವಾಗಿಯೋ ಭಯಂಕರವಾಗಿಯೋ ಕಾಣಬಹುದಷ್ಟೆ. ತಾನೇ ಮೊದಲು ಸ್ವೀಕರಿಸಿದ ಪ್ರಮಾಣಗಳಿಂದ 7–11 ರ ಲೆಕ್ಕಗಳನ್ನು ಪ್ರಶ್ನಾಯಾಚನೆಯಿಂದ ಇಲ್ಲಿ ಪಡೆಯಲಾಗಿರುವುದರಿಂದ ಇದರಲ್ಲಿ ತಿಳಿಯತಕ್ಕುದೇನೂ ಇಲ್ಲ; ಒಪ್ಪತಕ್ಕುದೂ ವಿವೇಚಿಸುವಂತಹುದೂ ಏನೂ ಇಲ್ಲ. ಇವನು ಹೇಳುವ ಶ್ರುತಿಪಥಕವನ್ನು ಇಲ್ಲಿ ಪುನಃ ಉದ್ಧರಿಸಲಾಗಿದೆ:

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

| ಕ್ರಮ ಸಂಖ್ಯೆ | ಶ್ರುತಿನಾಮ | ಸಂಕೇತ | ಅನುಪಾತ | ಕಂಪನ ಸಂಖ್ಯೆ ಸ = 240 | ಸಂಟುಗಳು | ಯಾವ ರಾಗದಲ್ಲಿ ಪ್ರಯೋಗವಾಗುತ್ತದೆ |
|---|---|---|---|---|---|---|
| 1 | ಷಡ್ಜ | ಸ | 1 | 240 | 0 | ಎಲ್ಲಾ ರಾಗಗಳು |
| 2 | ಏಕಶ್ರುತಿ ರಿಷಭ | ರ $r_1$ | 256/243 | 252·8 | 90 | ಗೌಳ, ಸೌರಾಷ್ಟ್ರ |
| 3 | ದ್ವಿಶ್ರುತಿ ರಿಷಭ | ರಿ $r_2$ | 16/15 | 256 | 112 | ಮಾಯಾಮಾಳವಗೌಳ |
| 4 | ತ್ರಿಶ್ರುತಿ ರಿಷಭ | ರು $r_3$ | 10/9 | 266·6 | 182 | ಭೈರವಿ, ಶ್ರೀರಾಗ |
| 5 | ಚತುಃಶ್ರುತಿ ರಿಷಭ | ರೆ $r_4$ | 9/8 | 270 | 204 | ಶಂಕರಾಭರಣ, ಕಲ್ಯಾಣಿ |
| 6 | ಶುದ್ಧಗಾಂಧಾರ (ಕೋಮಲ ಸಾಧಾರಣ ಗಾಂಧಾರ) | ಗ $g_1$ | 32/27 | 284.4 | 294 | ಭೈರವಿ, ಶ್ರೀರಾಗ |
| 7 | ಸಾಧಾರಣ ಗಾಂಧಾರ | ಗಿ $g_2$ | 6/5 | 288 | 316 | ಖರಹರಪ್ರಿಯ |
| 8 | ಅಂತರ ಗಾಂಧಾರ | ಗು $g_3$ | 5/4 | 300 | 386 | ಶಂಕರಾಭರಣ |
| 9 | ಚ್ಯುತಮಧ್ಯಮಗಾಂಧಾರ | ಗೆ $g_4$ | 81/64 | 303.75 | 408 | ದೇವಗಾಂಧಾರಿ, ಸೌರಾಷ್ಟ್ರ |
| 10 | ಶುದ್ಧಮಧ್ಯಮ | ಮ $m_1$ | 4/3 | 320 | 498 | ಕುಂತಲವರಾಳಿ |
| 11 | ತೀವ್ರಶುದ್ಧಮಧ್ಯಮ | ಮಿ $m_2$ | 27/20 | 324 | 520 | ಬೇಗಡೆ, ಗೌಳಿಪಂತು |
| 12 | ಪ್ರತಿಮಧ್ಯಮ | ಮು $m_3$ | 45/32 | 337·5 | 590 | ಕಲ್ಯಾಣಿ |
| 13 | ಚ್ಯುತಪಂಚಮ ಮಧ್ಯಮ | ಮೆ $m_4$ | 729/512, 64/45 | 341·7, 341·3 | 610 | ವರಾಳಿ |
| 14 | ಪಂಚಮ | ಪ | 3/2 | 360 | 702 | ಪಂಚಮಸಹಿತವಾದ ಎಲ್ಲಾ ರಾಗಗಳು |
| 15 | ಏಕಶ್ರುತಿ ಧೈವತ | ಧ $d_1$ | 128/81 | 379 | 792 | ಸಾವೇರಿ |
| 16 | ದ್ವಿಶ್ರುತಿ ಧೈವತ | ಧಿ $d_2$ | 8/5 | 384 | 814 | ಮಾಯಾಮಾಳವಗೌಳ |
| 17 | ತ್ರಿಶ್ರುತಿ ಧೈವತ | ಧು $d_3$ | 5/3 | 400 | 884 | ಕಾಂಭೋಜಿ |
| 18 | ಚತುಃಶ್ರುತಿ ಧೈವತ | ಧೆ $d_4$ | 27/16 | 405 | 906 | ಕಲ್ಯಾಣಿ |
| 19 | ಶುದ್ಧನಿಷಾದ (ಕೋಮಲ ಕೈಶಿಕ ನಿಷಾದ) | ನ $n_1$ | 16/9 | 426.6 | 996 | ಭೈರವಿ |
| 20 | ಕೈಶಿಕ ನಿಷಾದ | ನಿ $n_2$ | 9/5 | 432 | 1018 | ಖರಹರಪ್ರಿಯ |
| 21 | ಕಾಕಲೀ ನಿಷಾದ | ನು $n_3$ | 15/8 | 450 | 1088 | ಶಂಕರಾಭರಣ |
| 22 | ಚ್ಯುತಷಡ್ಜನಿಷಾದ (ತೀವ್ರಕಾಕಲೀ ನಿಷಾದ) | ನೆ $n_4$ | 243/128 | 455·6 | 1110 | ಕುರಂಜಿ, ದೇವಗಾಂಧಾರಿ, ಸೌರಾಷ್ಟ್ರ, ನೀಲಾಂಬರಿ |
| | ತಾರಷಡ್ಜ | ಸ | 2 | 480 | 1200 | ನಿಷಾದಾಂತ್ಯ, ಧೈವತಾಂತ್ಯ, ಪಂಚಮಾಂತ್ಯವಲ್ಲದ ಎಲ್ಲಾ ರಾಗಗಳು |

**ಪಥಕ (23)**

**ದ್ವಾವಿಂಶತಿ ಶ್ರುತಿಗಳು: ಸಾಂಬಮೂರ್ತಿ ಪದ್ಧತಿ**

## ದೋಷಗಳು

ಈ ಪಥಕದಲ್ಲಿ 22 ಸೆಂಟುಗಳ ಅಂತರವಿರುವಿಡೆಯಲ್ಲೆಲ್ಲಾ ಸುಮಾರು 3.2 ರಿಂದ 5.6 ರವರೆಗೆ ಕಂಪನ ಸಂಖ್ಯೆಯ ಅಂತರವು ಮಾತ್ರ ಸಿಗುತ್ತದೆ. ಇದು ಸ್ವರದ ಆಯತತ್ವ (tonal width)ದ ಪರಿಮಿತಿಯಲ್ಲಿ ಸೇರಿರುವುದರಿಂದ ಶ್ರಾವ್ಯತೆಯ ಮಿತಿಯಲ್ಲಿ ಬರುವುದಿಲ್ಲವೆಂದೂ, 240 ಕಂಪನಸಂಖ್ಯೆಗಿಂತ ಉಚ್ಚವಾದ ಆಧಾರ ಸ್ವರವನ್ನು ತೆಗೆದುಕೊಂಡರೆ ಇದು ಇನ್ನೂ ಅಸಂಭವವಾಗುತ್ತದೆಂದೂ ಮುಂದೆ ಪ್ರಯೋಗ ಫಲಿತಾಂಶಗಳಿಂದ ಸಿದ್ಧಪಡಿಸಲಾಗುವುದು. ಅಲ್ಲದೆ ಪೂರ್ವಾಚಾರ್ಯರು-ರಾಮಾಮಾತ್ಯ, ವೆಂಕಟಮುಖಿ, ತುಳಜ ಮುಂತಾದ ಅರ್ವಾಚೀನರೂ ಸಹ ಸೇರಿ-ಹೇಳಿದ ಯಾವ ಸ್ವರಸ್ಥಾನಗಳನ್ನೂ ಇಲ್ಲಿ ಒಪ್ಪಿಲ್ಲ. ಹೀಗೆ ಪಂಚಶ್ರುತಿ ಋಷಭ, ಪಂಚಶ್ರುತಿ ಧೈವತಗಳು ಶಾಸ್ತ್ರೋಕ್ತಸ್ಥಾನಗಳನ್ನೂ ಕರ್ತವ್ಯಗಳನ್ನೂ ಪಡೆದಿಲ್ಲ. ಅದರ ಬದಲು ಅನ್ವರ್ಥನಾಮಗಳಾದ ಚತುಃಶ್ರುತಿ ಋಷಭ, ಚತುಃಶ್ರುತಿ ಧೈವತಗಳು ಹೊಸದಾಗಿ ಸೇರಿಸಲ್ಪಟ್ಟಿವೆ; ವಿಶೇಷವೆಂದರೆ ಈ ಸ್ಥಾನಗಳಿಗೆ ಶುದ್ಧಗಾಂಧಾರ, ಶುದ್ಧನಿಷಾದಗಳು ಪರಸ್ಪರವಾಗಿಲ್ಲದಿರುವುದು. ಇದು ಕೇವಲ 22 ಸೆಂಟುಗಳ ಡೈಡಿಮುಸ್ಸನ ಕಾಮಾದಷ್ಟು ಹ್ರಸ್ವವಾದ ಅಂತರವಲ್ಲವೆಂಬುದನ್ನೂ 90 ಸೆಂಟುಗಳ ವಿಸ್ತಾರದ್ದೆಂದೂ ಗಮನಿಸಬೇಕು. ಹೀಗಾಗಿ ಲಕ್ಷ್ಯವಿರೋಧ ಬಾಹುಳ್ಯದಿಂದ ಈ ಪಕ್ಷವು ಬಾಧಿತವಾಗಿದೆ. ಚತುಃಶ್ರುತಿ ಋಷಭವೆಂದು ಹೇಳಲಾಗುವ ಶಂಕರಾಭರಣ, ಕಲ್ಯಾಣಿಗಳಲ್ಲಿ ಪ್ರಯುಕ್ತವಾಗುವ ರಿಷಭಕ್ಕೂ ಶುದ್ಧಗಾಂಧಾರವೆಂದು ಪ್ರಯುಕ್ತವಾಗುವ ಸ್ವರಕ್ಕೂ ಲಕ್ಷ್ಯದಲ್ಲಿ ಯಾವ ವ್ಯತ್ಯಾಸವೂ ಇಲ್ಲ; ಈ ಮಾತು ಚತುಃಶ್ರುತಿ ಧೈವತ-ಶುದ್ಧನಿಷಾದಗಳಿಗೂ ಸಲ್ಲುತ್ತದೆ. ವೀಣೆಯಲ್ಲಿಯಾಗಲೀ, ಇತರ ವಾದ್ಯಗಳಲ್ಲಿಯಾಗಲೀ, ಲಕ್ಷ್ಯಕೋವಿದರ ಪರಿಭಾಷೆ, ಪ್ರಯೋಗಗಳಲ್ಲಿಯಾಗಲೀ ಈ ಸ್ವರಯುಗ್ಮಗಳಲ್ಲಿ ಸ್ಥಾನಭೇದವು ಇಲ್ಲವೆಂದು ಸರ್ವಥಾ ಸಿದ್ಧವಾಗುತ್ತದೆ.

ಅದೂ ಅಲ್ಲದೆ, ಈ ಸ್ವರಯುಗ್ಮಗಳನ್ನು ಒಂದೇ ಸ್ವರಸ್ಥಾನದಲ್ಲಿ ಅಭಿವ್ಯಕ್ತವಾಗುವ ಪರ್ಯಾಯಸ್ವರಗಳೆಂದು ತಿಳಿಯಲು ಇಲ್ಲಿ ಅವಕಾಶವಿಲ್ಲದುದರಿಂದ ವೆಂಕಟಮುಖಿಯ ಮೇಳಪ್ರಸ್ತಾರಕ್ರಮಕ್ಕೆ ಆಧಾರಭೂತವಾದ ಎಲ್ಲಾ ಪ್ರಮೇಯಗಳೂ ಕುಸಿದುಬೀಳುತ್ತವೆ. ಇದು ಆಧುನಿಕ ಕರ್ಣಾಟಕಸಂಗೀತಪ್ರಪಂಚಸರ್ವಸ್ವವಾಗಿದೆ. ಆದುದರಿಂದ ಈ ಬಗೆಯ ಸ್ವರ-ಶ್ರುತಿ ವಿನಿಯೋಗವನ್ನಾಗಲೀ ಆಯಾ ರಾಗಗಳಲ್ಲಿ ಹೇಳಿರುವ ವಿವಿಧ ಶ್ರುತಿಗಳನ್ನಾಗಲೀ ಯಾವ ವಿಧದಿಂದಲೂ ಒಪ್ಪಲಾಗದು. ಈ ಪಥಕದಲ್ಲಿ ತೋರಿಸಿರುವ ಕಂಪನಸಂಖ್ಯೆಗಳನ್ನು ಯಾವ ಪ್ರಯೋಗಕ್ರಮದಿಂದ ಪಡೆಯಲಾಯಿತೆಂದೂ ಸೂಚಿಸಿಲ್ಲ. ಯಾವ ಪ್ರಯೋಗಕ್ರಮವೇ ಆಗಲಿ, ಫಲಿತಾಂಶಗಳು ತುಂಬಾ ಪ್ರಶ್ನಾರ್ಹವಾಗಿವೆ. ಏಕೆಂದರೆ ಇಲ್ಲಿ ಹೇಳುವ ಹೆಸರುಗಳಲ್ಲಿ ಯಾಗೂ ಈ ಪರಿಭಾಷೆಯಿಂದಾಗಲೀ ಅರ್ಥದಲ್ಲಿ ಯಾಗಲೀ ಈ ಶ್ರುತಿಗಳನ್ನು ಹಿಂದೆ ಪ್ರಯೋಗಿಸಿಯೂ ಇರಲಿಲ್ಲ, ಈಗ ಪ್ರಯೋಗಿಸುತ್ತಲೂ ಇಲ್ಲ, ಮುಂದೆ ಪ್ರಯೋಗಿಸುವ ಸೂಚನೆಗಳು ಕಂಡುಬರುತ್ತಲೂ ಇಲ್ಲ.

ಇಲ್ಲಿ ಹೇಳಿರುವ ಭೌತಿಕ ಪ್ರಮಾಣಗಳು ಕೇವಲ ಗಣಿತದಿಂದ, ಅದೂ ಮಧ್ಯಮ ಪಂಚಮ ಭಾವಗಳಿಂದ, ಪ್ರಯಾಸಪೂರ್ವಕವಾಗಿ ಸ್ಥಾಪಿತವಾದವುಗಳೇ ಹೊರತು ಆಯಾ ರಾಗಗಳಲ್ಲಿ ಪ್ರಯೋಗಪೂರ್ವಕವಾಗಿ ಸರ್ವ ವಿದ್ವತ್ಸಮ್ಮತವಾಗಿ ಪಡೆದವುಗಳಲ್ಲ. ಎಂದರೆ ಈ ಭೌತಿಕಪ್ರಮಾಣಗಳಲ್ಲಿ ಆಯಾ ಶ್ರುತಿಗಳನ್ನು ಆಯಾ ರಾಗಗಳಲ್ಲಿ ಉಪಯೋಗಿಸಲಾಗುತ್ತಿದೆಯೆಂಬುದು ಪ್ರಯೋಕ್ತೃಗಳಾದ ಯಾವ ಸಂಗೀತ ವಿದ್ವಾಂಸರಿಂದಲೂ ಸ್ವೀಕೃತವೂ ಆಗಿಲ್ಲ, ಅವರ ಅನುಭವದಲ್ಲಿ ಇಲ್ಲವೂ ಇಲ್ಲ; ವಿದ್ವಾಂಸರು ಇದನ್ನು ಒಪ್ಪದಿರುವುದಕ್ಕೆ ಬಹು ಸರಿಯಾದ ಕಾರಣವೊಂದಿದೆ: ಯಾವ ರಾಗದಲ್ಲಿಯೇ ಆಗಲಿ, ಅದರ ಜೀವಸ್ವರವನ್ನೂ, ಉಳಿದ ರಕ್ತಿಸಾಧಕಗಳಾದ, ರಾಗ ವ್ಯಕ್ತಿತ್ವ ಹೇತುಗಳಾದ ಇತರ ಸ್ವರಗಳನ್ನೂ ಕೇವಲ ಭೌತಿಕಪ್ರಮಾಣದಿಂದ, ನಿರ್ದಿಷ್ಟ ಕಂಪನಸಂಖ್ಯೆಯುಳ್ಳ ಧ್ವನಿಯನ್ನಾಗಿ ತೋರಿಸಲು ಎಂದಿಗೂ ಸಾಧ್ಯವಿಲ್ಲ. ಉದಾಹರಣೆಗೆ, ಇಲ್ಲಿ ಹೇಳಿದ 32/27 ಪ್ರಮಾಣದ

ಸ್ವರವನ್ನು ಹಿಡಿಯುವುದರಿಂದ ಅದು ಭೈರವಿ, ಶ್ರೀರಾಗಗಳಲ್ಲಿ ಪ್ರಯುಕ್ತವಾಗುವ ಶುದ್ಧ (!!) ಗಾಂಧಾರವೆಂದೂ 6/5 ಪ್ರಮಾಣದ ಸ್ವರವನ್ನು ಗ್ರಹಿಸುವುದರಿಂದ ಅದು ಖರಹರಪ್ರಿಯದ ಗಾಂಧಾರವೆಂದೂ ಯಾರಿಗೂ ಸ್ಫುರಿಸುವುದಿರುವುದು ಅಷ್ಟೇ ಅಲ್ಲ, ಯಾರೂ ಈ ಸ್ವರಗಳನ್ನು ನಿರ್ದಿಷ್ಟರಾಗಗಳಿಗೆ ಅನ್ವಯಮಾಡಲಾರರು. ಹೀಗೆ ಮಾಡಬೇಕಾದರೆ ಆಯಾ ರಾಗದ ವ್ಯಕ್ತಿತ್ವವನ್ನು ಸ್ಫುರಿಸುವ ವಿಶೇಷ ಸಂಚಾರಗಳಲ್ಲಿ, ವಿಶಿಷ್ಟಗಮಕದೊಡನೆ ಆಯಾ ಸ್ವರವು ಪ್ರಯುಕ್ತವಾಗಬೇಕು, ಎಂಬುದನ್ನು ಎಲ್ಲಾ ಸಂಗೀತವಿದ್ವಾಂಸರೂ ಬಲ್ಲರು. ಹೀಗೆ ಗಮಕ ಸಂದರ್ಭದಲ್ಲಿರುವಾಗ ಯಾವುದೇ ಸ್ವರವನ್ನು ನಿರ್ದಿಷ್ಟವಾದ, ಏಕೈಕವಾದ ಕಂಪನಸಂಖ್ಯೆಯಿಂದ ಲಕ್ಷಿಸಲಾಗುವುದಿಲ್ಲ; ಆಗ ಸ್ವರವು ಸಂಕೀರ್ಣಸ್ವರೂಪವನ್ನು ಪಡೆದಿರುತ್ತದೆ; ಆಗ ಅದು ಧ್ವನಿಯಾಗಿರುವುದಿಲ್ಲ, ನಾದಬಿಂದುವಾಗಿರುವುದಿಲ್ಲ, ಆದರೆ ವಿಶಿಷ್ಟ ವಿಸ್ತಾರವುಳ್ಳ ಸ್ವರವಾಗಿರುತ್ತದೆ. ಆಯಾ ಗಮಕಸಂದರ್ಭದಲ್ಲಿರುವಾಗ ಅದರಲ್ಲಿ ಉಂಟಾಗುವ ಆದಿಮಧ್ಯಾಂತಸ್ವರೂಪಗಳೆಲ್ಲವನ್ನೂ ಪರಿಗಣನೆಗೆ ತೆಗೆದುಕೊಳ್ಳುವುದರಿಂದ ಮಾತ್ರ ಅದನ್ನು ಲಕ್ಷಿಸಬಹುದು. ಅಷ್ಟೇ ಅಲ್ಲದೆ ಖರಹರಪ್ರಿಯದಲ್ಲಿ ಬಳಕೆಯಾಗುವ ಗಾಂಧಾರಕ್ಕೂ ಶ್ರೀರಾಗದಲ್ಲಿ ಬಳಕೆಯಾಗುವ ಗಾಂಧಾರಕ್ಕೂ ಇಷ್ಟು ವಿಸ್ತಾರವಾದ ಅಂತರವಿದೆಯೆಂಬುದು ಯಾವ ಪ್ರಯೋಗಜ್ಞನೂ ಒಪ್ಪುವ ಮಾತಲ್ಲ; ಇದು ಸಂಪೂರ್ಣವಾಗಿ ಅನುಭವವಿರುದ್ಧವಾದುದು. ಹೀಗೆ ಲಕ್ಷ್ಯವಿರುದ್ಧವಾದ ಅನೇಕ ಇತರ ಪ್ರಮಾಣಗಳನ್ನೂ ಈ ಪಥಕದಲ್ಲಿ ತೋರಿಸಬಹುದು.

ಹೀಗೆ ಈ ಲಕ್ಷ್ಯಪ್ರಯುಕ್ತವಾದ ಪ್ರಮಾಣಗಳಿಂದ ಭಿನ್ನತೆಯನ್ನು ಇಲ್ಲಿ ತೋರಿಸಲಾಗುತ್ತಿದೆಯೇ ಹೊರತು, ಎಂದರೆ ಈ ಪಕ್ಷವು ಕೊಡುವ ಪ್ರಮಾಣಗಳು–ಇವುಗಳಿಗೆ ಏನೇ ಹೆಸರನ್ನು ಕೊಟ್ಟಿರಲಿ–ಯಾರ ಅನುಭವದಲ್ಲಿಯೂ ಇಲ್ಲವೆಂದು ತೋರಿಸಿಕೊಡಲು ಈ ಉದಾಹರಣೆಗಳನ್ನು ತೆಗೆದುಕೊಂಡಿದೆಯೇ ಹೊರತು, ಇವುಗಳನ್ನು ಶ್ರುತಿಗಳೆಂದು ಒಪ್ಪಿ, ಈ ಖಂಡನೆಯನ್ನು ಕೈಗೊಳ್ಳಲಾಗಿದೆಯೆಂದು ಭಾವಿಸಲಾಗದು. ಈ ಇಪ್ಪತ್ತೆರಡನ್ನು ಶ್ರುತಿಗಳೆಂದು ಎಂದಿಗೂ ಹೇಳಲಾಗದು. ಏಕೆಂದರೆ ಧ್ವನ್ಯಂತರಾಶ್ರುತಿ, ನೈರಂತರ್ಯ, ಅಂತರಗತತ್ವ, ಕಾಲ, ಕಲಾ, ಪ್ರಮಾಣ ಮುಂತಾದ ಶ್ರುತಿಲಕ್ಷಣಗಳಲ್ಲಿಯೂ, ಶಾಸ್ತ್ರದಲ್ಲಿ ಹೇಳಿದ ಸ್ವರಲಕ್ಷಣಕ್ಕೂ ಊರ್ಧ್ವಸ್ಪರ್ಶಾದಿ ತತ್ತ್ವಗಳಿಗೂ ಸ್ವರಸಂವೇದ್ಯತಾ ಪ್ರಮೇಯಕ್ಕೂ ಸ್ವರಸಾಂಕರ್ಯ ಸ್ಥಾನಸಾಂಕರ್ಯ ತತ್ತ್ವಗಳಿಗೂ ಇದು ನೇರವಾಗಿ ವಿರುದ್ಧವಾಗಿದೆ. ಭರತನ ಕಾಲದಿಂದಲೂ ಸಂದಿಗ್ಧವೂ ಅವ್ಯಾವಹಾರಿಕವೂ, ಕ್ಲಿಷ್ಟವೂ, ಕ್ಲುಪ್ತವೂ ಆದ ಪ್ರಯೋಗವಿದ್ದ, ಕ್ರಿ. ಶ. ಹದಿನೈದು, ಹದಿನಾರನೆಯ ಶತಮಾನಗಳಿಂದ ಲಕ್ಷ್ಯಲಕ್ಷಣಗಳಿಂದ ಸಂಪೂರ್ಣವಾಗಿ ಮಾಯವಾಗಿಹೋದ ಅಂತರಗಾಂಧಾರ, ಕಾಕಲೀ ನಿಷಾದಗಳಿಗೆ ಪುನಃ ಜೀವತುಂಬಿ ನಮ್ಮ ಸಂಗೀತವಿದ್ವಾಂಸರ ಗಂಟಲೊಳಕ್ಕೆ ತುರುಕಲು ಯತ್ನಿಸಿರುವುದೂ ಈ ಪಕ್ಷದ ಇನ್ನೊಂದು ವೈಶಿಷ್ಟ್ಯ. ಮತ್ತೂ ಒಂದು ಬಹಳ ಅವ್ಯಾವಹಾರಿಕವಾದ ಸಂಗತಿಯೆಂದರೆ ಸಾಧಾರಣಗಾಂಧಾರವೆಂದು ಲೋಕಪ್ರಸಿದ್ಧಿಯಿದ್ದು ಪ್ರತಿ ಸಂಗೀತಾಭ್ಯಾಸಿಗೂ ಚೆನ್ನಾಗಿ ತಿಳಿದಿರುವ ಶ್ರೀರಾಗ, ಭೈರವಿಗಳಲ್ಲಿ ಪ್ರಯುಕ್ತವಾಗುವ ಗಾಂಧಾರವನ್ನು ಶುದ್ಧಗಾಂಧಾರವೆಂದೂ, ಪಂಚಶ್ರುತಿಯೆಂದು ಲೋಕವಿಶ್ರುತವಾದ ಇವುಗಳ ರಿಷಭಗಳನ್ನು ತ್ರಿಶ್ರುತಿಕಗಳೆಂದೂ, ಶುದ್ಧರಿಷಭವೆಂಬ ತ್ರಿಶ್ರುತಿಪ್ರಮಾಣವು ಮಾಯಾಮಾಳವಗೌಳದಲ್ಲಿ ಪ್ರಸಿದ್ಧವಾಗಿರುವುದನ್ನು ದ್ವಿಶ್ರುತಿಯೆಂದೂ, ಕುಂತಲವರಾಳಿಗೆ ಮಾತ್ರ ಶುದ್ಧ ಮಧ್ಯಮವನ್ನು ಹೇಳಿ ಶಂಕರಾಭರಣ, ಖರಹರಪ್ರಿಯ ಮುಂತಾದವುಗಳಿಗೆ ಬಿಟ್ಟಿರುವುದೂ, ಕಲ್ಯಾಣಿಗೆ ಬರುವ ಮಧ್ಯಮಕ್ಕಿಂತ ವರಾಳಿಮಧ್ಯಮವು ತೀವ್ರವಾಗಿರುವುದೆಂದೂ, ಜನಕರಾಗವಾದ ಶಂಕರಾಭರಣಕ್ಕೆ ಕಾಕಲೀ ನಿಷಾದವೂ ಅದರ ಜನ್ಯಗಳಾದ ಕುರಂಜಿ, ದೇವಗಾಂಧಾರಿ, ನೀಲಾಂಬರಿಗಳಿಗೆ ಅದಕ್ಕಿಂತ ತೀವ್ರವಾದ ಚ್ಯುತಷಡ್ಜನಿಷಾದವು ಪ್ರಯೋಗವಾಗಿರುವುದೆಂದೂ ಮೊದಲಾಗಿ ಹೇಳುವುದು.

ಈ ಮತ್ತು ಇತರ ಹಲವು ಕಾರಣಗಳಿಂದ ಈ ಪಕ್ಷವು ಅಗ್ರಾಹ್ಯವಾಗಿದೆ.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## X ನಾದವಿಜ್ಞಾನದ ಹಿನ್ನೆಲೆ

ಮೇಲೆ ವಿವರಿಸಿರುವ ಸಮೀಚೀನ ದೃಷ್ಟಿಯನ್ನು ಶ್ರುತಿಗಳವಿಷಯದಲ್ಲಿ ಪಡೆಯಬೇಕಾದರೆ ಇನ್ನೂ ಎರಡು ಶಾಸ್ತ್ರಗಳ ಅಭ್ಯಾಸವು ಆವಶ್ಯಕವಾಗುತ್ತದೆ: ನಾದವಿಜ್ಞಾನ (musical acoustics) ಮತ್ತು ಮನೋವಿಜ್ಞಾನ (psychology of music). ಸಂಗೀತವು ಪ್ರಯೋಗಪ್ರಧಾನವಾದ ಕಲೆ ಮತ್ತು ಅದರ ಕ್ರಿಯಾವಿಧಾನವು ಮುಖ್ಯವಾಗಿ ಮಾನಸಿಕವಾದುದು. ಆದುದರಿಂದ ನಮ್ಮ ಸಂಗೀತಪದ್ಧತಿಯಲ್ಲಿ ಸಕಲ ಗಾನಪ್ರಪಂಚಕ್ಕೂ ಆಧಾರಭೂತವಾಗಿರುವ ಶ್ರುತಿಯ ಕಲ್ಪನೆಯನ್ನು ಈ ವೈಜ್ಞಾನಿಕದೃಷ್ಟಿಯಿಂದ, ಅವುಗಳ ಅಭ್ಯಾಸಕ್ರಮ, ತಂತ್ರಗಳ ಮೂಲಕ ಪರೀಕ್ಷಿಸುವುದು ಆಧುನಿಕ ಸಂಗೀತಶಾಸ್ತ್ರದಲ್ಲಿ ಅತಿಮುಖ್ಯವಾಗಿದೆ.

### 1. "ಶ್ರೂಯತೇ": ಶ್ರವಣೇಂದ್ರಿಯ ನಿಷ್ಠತೆ

ನಮ್ಮ ಪ್ರಾಚೀನಾಚಾರ್ಯರು ಈ ಎರಡು ಶಾಸ್ತ್ರಗಳನ್ನೂ ಶ್ರುತಿಯ ಲಕ್ಷಣವನ್ನು ಬೋಧಿಸುವ ಸೂತ್ರಗಳಲ್ಲಿ ವಿವಕ್ಷಿಸಿದ್ದಾರೆ. 'ಶ್ರೂಯತ ಇತಿ ಶ್ರುತಿಃ' ಎಂಬಲ್ಲಿ ಈ ವ್ಯಾಪಾರವನ್ನು ಕೇವಲ ಭೌತಿಕವಸ್ತುವಿಗೆ ಅಥವಾ ಘಟನೆಗೆ ಮಾತ್ರ ಸಂಬಂಧಿಸದಿರುವುದು ಸ್ಪಷ್ಟವಾಗಿಯೇ ಇದೆ. ಎಂದರೆ ಶ್ರುತಿಯ ಲಕ್ಷಣವು ಬಾಹ್ಯಪ್ರಪಂಚದಲ್ಲಿ ಭೌತಿಕ ಉಪಾಧಿಗಳಲ್ಲಿ ನಿಷ್ಠವಾದ ವ್ಯಾಪಾರದಿಂದ ತಿಳಿಯುವಂತಹುದಲ್ಲ; ಎಂದರೆ ವಸ್ತುಸಂಘಾತ, ರಣನ, ಅನುರಣನ ಮುಂತಾದ ಕೇವಲ ವಸ್ತುನಿಷ್ಠಕ್ರಿಯೆಯು ಅಥವಾ ಅದರ ಜ್ಞಾನವು ಮಾತ್ರ ಶ್ರುತಿಯ ಲಕ್ಷಣದ ಸಮ್ಯಗ್-ದರ್ಶನವನ್ನು ಮಾಡಿಸುವುದಿಲ್ಲ. 'ಶ್ರೂಯತೇ' ಎಂದಿರುವುದರಿಂದ ಭೌತಿಕವ್ಯಾಪಾರವು ಇಲ್ಲಿ ವಿವಕ್ಷಿತವಾಗಿದೆಯೆಂಬುದರಲ್ಲಿ ಸಂಶಯವಿಲ್ಲ; ಆದರೆ ಇದೇ ಪ್ರಧಾನವಲ್ಲ. ಇದೇ ರೀತಿ ಅದನ್ನು ಗ್ರಹಿಸುವ ಮನಸ್ಸಿನಲ್ಲಿ ಆಗುವ ಪರಿಣಾಮವನ್ನೂ ಇಲ್ಲಿ ಹೇಳಿಲ್ಲ. ಇಂತಹ ಪರಿಣಾಮವನ್ನು ಸ್ವರಕ್ಕೆ ರಕ್ತಿಧರ್ಮದ ಮೂಲಕ ಪೂರ್ವಾಚಾರ್ಯರು ಹೇಳಿದ್ದಾರೆಯೇ ಹೊರತು ಸ್ವರಕ್ಕೆ ಹೇತುವಾದ ಶ್ರುತಿಗೆ ಹೇಳಿಲ್ಲವೆಂಬುದು ಬಹು ಚಿಂತ್ಯವಾಗಿದೆ. ಶ್ರುತಿಯು ಸಮುಚ್ಚಯಸ್ವರೂಪದಲ್ಲಿ ಮಾತ್ರ, ಅಂತ್ಯಶ್ರುತಿಯಲ್ಲಿ ಸ್ವರದ ಸ್ವಸಂವೇದ್ಯತೆಯನ್ನೂ ಸ್ವರತ್ವವನ್ನೂ ಉಂಟು ಮಾಡಬಲ್ಲುದೇ ಹೊರತು ಏಕಾಂಗಿಯಾಗಿ, ಪೂರ್ವಾಭಿಕಾಂಕ್ಷೆಯಿಲ್ಲದೆ, ಉತ್ತರೋತ್ತರ ಸಂಸ್ಕಾರಪ್ರದಾನವಿಲ್ಲದೆ, ಯಾವ ಮಾನಸಿಕ ವ್ಯಾಪಾರವನ್ನೂ ಒಳಗೊಂಡಿಲ್ಲ ಎಂಬ ಲಕ್ಷಣವನ್ನು ವಿಶ್ವಾವಸು, ವಿಶಾಖಿಲ ಮುಂತಾದ ಆಚಾರ್ಯರು ಪ್ರತ್ಯಕ್ಷವಾಗಿಯೂ ಉಳಿದವರು ಇಂಗಿತದಿಂದಲೂ ಹೇಳಿದ್ದಾರೆ. ಹೀಗೆ ಈ ವ್ಯಾಪಾರದ ಎಂದರೆ ಶ್ರವಣಾನುಭವದ ಎರಡು ಅಂಚುಗಳಾದ ವಸ್ತು ಮತ್ತು ಮನಸ್ಸು ಇವೆರಡನ್ನೂ ಕೇವಲ ಇಂಗಿತದಿಂದ ವಿವಕ್ಷಿಸಿ ಇದಕ್ಕೆ ಮಧ್ಯವರ್ತಿಯಾದ ಇಂದ್ರಿಯವನ್ನು, ಎಂದರೆ ಕಿವಿಯನ್ನು, 'ಶ್ರೂಯತೇ' ಎಂಬ ಶಬ್ದದಿಂದ ಸೂತ್ರದ ಪ್ರಧಾನಾರ್ಥವಾಗಿ ಪೂರ್ವಾಚಾರ್ಯರು ಸ್ವೀಕರಿಸಿದ್ದಾರೆ.

ಇದು ಅತ್ಯಂತ ಸಮುಚಿತವೂ ವಿಸ್ಮಯಕರವಾಗಿ ವೈಜ್ಞಾನಿಕವೂ ಆಗಿದೆ. ಏಕೆಂದರೆ ಕೇವಲ ಭೌತಿಕ ವ್ಯಾಪಾರನಿಷ್ಠವಾದ, ಶಬ್ದಹೇತುವಾದ ಕ್ರಿಯೆಯಲ್ಲಿ ಸ್ವರಗುಣದ ಅಥವಾ ಶ್ರುತಿಯ ಉಪಾಧಿಗಳು ಯಾವುದೂ ಸೇರಿರುವುದಿಲ್ಲ. ವಸ್ತುಸಂಘಾತ ಮತ್ತು ಅದರಿಂದ ಹುಟ್ಟಿದ ಸ್ಪಂದನ ವಿಶೇಷಗಳು–ಇಷ್ಟೇ ನೈಜವಾದ ಭೌತಿಕ ಉಪಾಧಿಗಳು. ಸ್ವರವು ಉತ್ಪಾದಿಸಿಕೊಂಡ ಅನುಸ್ಪಂದಕ ಆವರ್ತಕಗಳು, ಇವುಗಳ ಸಂಖ್ಯೆ, ವಿತರಣ, ಇವುಗಳಲ್ಲಿ ಪ್ರತಿಯೊಂದೂ ಪಡೆದಿರುವ ಶಕ್ತಿ, ತೀವ್ರತೆಗಳ ತಾರತಮ್ಯ, ಇವು ಆಧಾರ ಕಂಪನದೊಡನೆ ಪಡೆದಿರುವ ಅನುಪಾತಗಳು ಮತ್ತು ಅನುಕ್ರಮ, ಶಬ್ದದ ಗಾತ್ರ, ಒತ್ತಡ, ಬಿಗುವು–ಇವೇ ಮುಖ್ಯವಾದ ಸ್ವರದ ಭೌತಿಕವ್ಯಾಪಾರಗಳು (ಪು. 192).

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

As explained elsewhere, the physical characteristics of an air-vibration are frequency, intensity and overtone structure.[328]

ಇವುಗಳನ್ನು ಮಾನವನ ಮನಸ್ಸು ಸಂಕೇತ ಪರಿಣಾಮದಿಂದ ಪರಿವರ್ತಿಸಿಕೊಂಡು ಹೇಗೆ ಗೇಯಾರ್ಥ ಅಥವಾ ಶಬ್ದಾರ್ಥವನ್ನು ಪಡೆಯುತ್ತದೆಂದು ಈಗಾಗಲೇ ಹೇಳಿದೆ (ಪು. 192). ಇದು ಕಿವಿಯಿಂದ ಆಗತಕ್ಕ ಕೆಲಸವೆಂದು ಅಲ್ಲಿಯೇ ಹೇಳಿದೆ. ಇದನ್ನು ಆಧುನಿಕ ನಾದವಿಜ್ಞಾನಿಗಳೂ ಒಪ್ಪುತ್ತಾರೆ :

A musical vibration in air, in itself, has no pitch, no loudness, and no quality, for pitch, loudness and tone quality are not physical characteristics of the vibration, but *attributes* of it ; they are attributed to it by our hearing faculty. . . . That pitch, loudness and tone quality, though related indirectly as we shall find to these characteristics, have no existence outside our hearing faculty is the essential theme of this article, just as the essential theme of SOUND is that a sound-wave in air is a compression wave, producing variations of pressure in air as it passes on its way.[328]

ಪ್ರಸಿದ್ಧ ಶರೀರ ಶಾಸ್ತ್ರಜ್ಞನಾದ ಟ್ರೊಲ್ಯಾಂಡನೂ ಇದೇ ಮಾತನ್ನು ಹೇಳುತ್ತಾನೆ :

Classical psychophysiology seems to be correct in its view that auditory . . . . experience is correlated directly only with the neural activities occurring in that portion of the brain which is known as the cerebral cortex. The domain of the acoustical stimulus, on the other hand, may be regarded as terminating at the ear drums where it first acts on the physiological mechanisms. From the tympanum to the cortex however is rather a far cry.[329]

ಈ ಅಭಿಪ್ರಾಯವನ್ನೇ ಸೀಷೋರನು ಚೆನ್ನಾಗಿ ವಿಶದೀಕರಿಸುತ್ತಾನೆ :

Pitch is that qualitative attribute of auditory sensation which denotes highness or lowness in the musical scale and is conditioned primarily on the frequency of sound waves.[330]

ಒಮ್ಮೆ ಧ್ವನಿ (pitch) ಯನ್ನು ಕಂಪನಸಂಖ್ಯೆಯ ಮಾನಸಿಕ ಹಾಗೂ ಗೇಯ ಸಂಬಂಧಿಯೆಂದೇನೋ ಅವನು ಎನ್ನುವುದೂ ಉಂಟು :

That it (pitch) is the mental and musical correlate of the frequency of the vibrations which constitute the physical tone.[330]

---

328 Lloyd, LL.S., ACOUSTICS, Grove's Dictionary of Music and Musicians (Ed. Eric Blom), V edn. Vol. I, p. 32.

329 Troland, Leonard T., J. Acoust. Soc. Amer. (1930), I, 301, *extr.*, Lloyd, *op. cit.*, *loc. cit.*

330 Seashore, Carl. E., *op. cit.*, p. 53.

ಆದರೆ ಅನತಿದೂರದಲ್ಲಿಯೇ ಇದರಲ್ಲಿ ಕಿವಿಯ ಪಾತ್ರವೇನೆಂಬುದನ್ನು ಅವನು ನಿಸ್ಸಂಶಯವಾಗಿ ಬಣ್ಣಿಸುತ್ತಾನೆ :

The ear is a most wonderful mechanism with its membranes, levers and liquid conductors carrying the vibration to the harp structure, its means of analysis of all pitches in that structure and its means of transmission of each pitch over its particular line to the brain. We cannot here undertake to discuss the structure of the ear, its physiology and the numerous technical problems or theories of hearing. The reader who is interested in this phase of the subject must turn to books on the anatomy and physiology of the ear.[331] But for psychological purposes, it is necessary to make certain assumptions, of which the essential one is that there is a pitch-differentiating mechanism in the ear capable of serving as a physical basis for the sensory phenomena with which we deal in the psychology of hearing ; namely, pitch, loudness, timbre, volume, fusion and consonance, and their derivatives or variants. For pitch, the harp theory furnishes at least a good anology.[332]

ತನ್ನಲ್ಲಿರುವ ಬೇಸಿಲಾರ್ ಮೆಂಬ್ರೇನ್ ಎಂಬ ಮಾಂಸಪದರದ ಸಹಸ್ಪಂದನ ಧರ್ಮದಿಂದ ಕೇಳಿಸಿದುದನ್ನು ಕಿವಿಯು ಆಯಾ ಶಬ್ದದ ಅಂಗಗಳನ್ನಾಗಿ ವಿಶ್ಲೇಷಿಸುತ್ತದೆ; ಹಾಗೂ ಇವುಗಳಿಗೆ ಪರಸ್ಪರವಾಗಿ ಸ್ಪಂದಿಸುತ್ತದೆ. ಇದರ ಪರಿಣಾಮವಾಗಿ ಹುಟ್ಟಿದ ವಿದ್ಯುತ್‌ಸಂವೇದನೆಗಳು ಶ್ರವಣೇಂದ್ರಿಯದ ನರಗಳಮೂಲಕ ಮಿದುಳಿನಲ್ಲಿರುವ ಸೆರೆಬ್ರಲ್ ಕಾರ್ಟೆಕ್ಸ್ ಎಂಬ ಶ್ರವಣಕೇಂದ್ರವನ್ನು ತಲುಪುತ್ತವೆ. ಇದು ಮಿದುಳಿನ ಬಲಭಾಗದಲ್ಲಿರುವ ಕಪೋಲಪಾಲಿ (temporal lobe)ಯಲ್ಲಿ ಸಂವೇದನಾಕ್ಷೇತ್ರ (sensory area) ದ ಕೆಳಗಡೆ ಇದೆ. ಇದರಲ್ಲಿ ಸಿಲ್ವಿಯಸ್ ಬಿರುಕು ಎಂದು ಪ್ರಸಿದ್ಧವಾದ (*Fissure of Sylvius*) ಕಣಿವೆಯ ಒಳ ಅಂಚಿನಿಂದ ಸುಮಾರು ಕಾಲುಭಾಗದಷ್ಟು ದೂರದಲ್ಲಿ ಶ್ರವಣಕ್ರೇಂದ್ರವಿದೆ. ಇದು ತಾನು ಸ್ವೀಕರಿಸುವ ವಿದ್ಯುತ್‌ಸಂವೇದನೆಗಳ ಸಂಖ್ಯೆ, ವಿತರಣ, ತೀವ್ರತೆ ಮುಂತಾದವುಗಳ ಸಂಕೀರ್ಣಮಾದರಿಯಿಂದ ಶಬ್ದ ಅಥವಾ ನಾದದ ವಿಶಿಷ್ಟವಾದ ಅನುಭವವನ್ನು ಉಂಟುಮಾಡುತ್ತದೆ. ಆದರೆ ಇದು ನೇರವಾಗಿ ಕಿವಿಯ ಕ್ರಿಯೆಯನ್ನು ಅವಲಂಬಿಸಿರುತ್ತದೆ. ಅಷ್ಟೇ ಅಲ್ಲದೆ, ಭೌತಿಕವಾಗಿ ಕಿವಿಯನ್ನು ತಲುಪಿದ ಶಬ್ದದ ಅಲೆಗಳಲ್ಲಿ ಕೆಲವುವೇಳೆ ಲೋಪವಾಗಿ ಹೋಗಿರುವ ಮೂಲ ಕಂಪನವನ್ನೋ, ಆವರ್ತಕಗಳನ್ನೋ ತಾನೇ ಕಲ್ಪಿಸಿಕೊಂಡು ಆಯಾ ಅನುಭವವನ್ನು ಪೂರೈಸಿಕೊಳ್ಳುತ್ತದೆ. ಹೀಗೆ ತಾನೇ ಪೂರೈಸಿಕೊಂಡ ಸ್ಪಂದನ ವಿಶೇಷಗಳಿಗೆ ಶ್ರವಣಮಾತ್ರ ಆವರ್ತಕಗಳು (aural harmonics) ಎಂದು ಹೆಸರು. ಸ್ವರಗುಣದ ವಿವೇಚನೆಯಲ್ಲಿ ಇವುಗಳನ್ನು ಪುನಃ ಪ್ರಸ್ತಾಪಿಸಲಾಗುವುದು. ಹೀಗೆ ಕಿವಿಯು ಎಲ್ಲ ಗಾನವ್ಯಾಪಾರದ ಮಾನಸಿಕ ಕ್ರಿಯೆಗಳಿಗೂ ಮೂಲವಾದುದರಿಂದ ಗಾನವ್ಯಾಪಾರದ ಮೂಲದ್ರವ್ಯವಾದ ಶ್ರುತಿಯನ್ನು ಕಿವಿಗೆ ಸಂಬಂಧಿಸಿ 'ಶ್ರೂಯತ ಇತಿ ಶ್ರುತಿಃ' ಎಂದು ನಮ್ಮ ಪೂರ್ವಾಚಾರ್ಯರು ಲಕ್ಷಿಸಿರುವುದು ನ್ಯಾಯವಾಗಿಯೂ ವೈಜ್ಞಾನಿಕವಾಗಿಯೂ ಇದೆ. ಹೀಗೆ ಶ್ರುತಿಗೆ ಇಂದ್ರಿಯ ನಿಷ್ಠತೆ ; ಸ್ವರಕ್ಕೆ ರಕ್ತಿಯಿಂದ ಮನೋನಿಷ್ಠತೆ, ಇದು ಚಿಂತ್ಯವಾಗಿದೆ.

---

331 ಸೀಷೋರನ ಜೊತೆಗೆ ನಾನೂ ಇಲ್ಲಿ ದನಿಗೂಡಿಸಬೇಕಾಗಿದೆ ; ಈ ವಿಷಯದಲ್ಲಿ ಆಸಕ್ತಿಯುಳ್ಳವರು ಈ ಆಕರಗಳನ್ನು ಅವಲೋಕಿಸಬೇಕು : Llyod, LL.S., : The Ear and Hearing in Acoustics, pp. 32-34 ; Fletcher, Harvey-,: Speech and Hearing; Asimov, Isaac-,: The Human Brain, etc.

332 ಸೀಷೋರ್, ಉ. ಗ್ರಂ., ಪು. 53-54.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## 2. ಶ್ರುತಿ ಉಪಾಧಿಗಳ ವೈಜ್ಞಾನಿಕತೆ

ಶ್ರುತಿ ಎಂದರೆ ಕೇಳಿಸಿದುದು ಎಂದು ಅರ್ಥವಷ್ಟೆ. ಅದರ ಸ್ವರೂಪ, ಸ್ವಭಾವಗಳನ್ನು ನಿರೂಪಿಸುವ ಸಲುವಾಗಿ ನಮ್ಮ ಪ್ರಾಚೀನಾಚಾರ್ಯರು ದೀಪ್ತಾ, ಆಯತಾ ಮುಂತಾದ ಐದು ಶ್ರುತಿಜಾತಿಗಳನ್ನು ಹೇಳಿದರು. ಇವುಗಳನ್ನು ವರ್ಣಿಸುವಾಗ ಕಾಲ, ಕಲಾ, ಪ್ರಮಾಣ ಎಂಬ ಮೂರು ಲಕ್ಷಣಗಳನ್ನು ನಾನ್ಯದೇವನು ಹೇಳಿರುವುದನ್ನು ಈಗಾಗಲೇ ಹೇಳಿದೆ (ಪು. 375).[268] ಇವುಗಳಿಗೆ ಸಂಪೂರ್ಣವಾದ ವೈಜ್ಞಾನಿಕ ಹಿನ್ನೆಲೆಯಿರುವುದನ್ನು ಮೇಲೆ ಸೂಚಿಸಿದೆ (ಪು. 359–361). ಶ್ರೂಯಮಾಣವಾದ ಯಾವ ಮೂಲದ್ರವ್ಯಕ್ಕೇ ಆಗಲಿ, ಕೆಲವು ಉಪಾಧಿಗಳು ಅಂಟಿಕೊಂಡೇ ಇರುತ್ತವೆ ; ಅಲ್ಲದೆ ಇವು ಒಂದು ಕನಿಷ್ಠ ಮಿತಿಯಲ್ಲಿಯೋ ಅಥವಾ ಅದಕ್ಕಿಂತ ಹೆಚ್ಚಾಗಿಯೋ ಇದ್ದರೆ ಮಾತ್ರ ಶ್ರುತವಾಗುತ್ತವೆ, ಈ ಉಪಾಧಿಗಳು ಸಂಪೂರ್ಣವಾಗಿದ್ದರೆ ಶ್ರುತಿಯಾಗುತ್ತವೆ ; ಇಲ್ಲದಿದ್ದರೆ ಶ್ರವಣ ಗೋಚರದ ಹೊಸ್ತಿಲನ್ನೇ ದಾಟುವುದಿಲ್ಲ. ಇಂತಹ ಉಪಾಧಿಗಳಲ್ಲಿ ಶಕ್ತಿಯ ಆವೇಗವೂ (intensity) ಒಂದು. ಕಲ್ವರನು ಶಬ್ದವೊಂದು ಕಿವಿಗೆ ಕೇಳಿಸಬೇಕಾದರೆ ಕನಿಷ್ಠವೂ ನಿರ್ದಿಷ್ಟವೂ ಆದ ಮಿತಿಯಲ್ಲಿ ಶಕ್ತಿಯನ್ನು ಪಡೆದಿರಬೇಕು ; ಈ ಕನಿಷ್ಠ ಮಿತಿಯು ಕಂಪನಸಂಖ್ಯೆಯನ್ನು ಅವಲಂಬಿಸುತ್ತದೆ ; ಸಮಾರು 2500 ಕಂಪನಸಂಖ್ಯೆಯ ನಾದಪ್ರದೇಶದಲ್ಲಿ ಈ ಕನಿಷ್ಠ ಮಿತಿಯು ಕಿವಿಗೆ ಅತ್ಯಂತ ಸೂಕ್ಷ್ಮಗ್ರಹಣ ಸಾಮರ್ಥ್ಯವನ್ನು ತಂದುಕೊಡುತ್ತದೆ ; ಇದಕ್ಕಿಂತ ಕಡಿಮೆಯ ಅಥವಾ ಹೆಚ್ಚಿನ ಕಂಪನಸಂಖ್ಯೆಯ ಪ್ರದೇಶದಲ್ಲಿ ಈ ಸೂಕ್ಷ್ಮಗ್ರಹಣ ಸಾಮರ್ಥ್ಯವು ಬೇಗ ಕಡಿಮೆಯಾಗುತ್ತದೆ, ಎಂದು ಸ್ವಂತ ಸಂಶೋಧನೆಗಳ ಪ್ರಯೋಗ ಫಲಿತಾಂಶಗಳಿಂದ ತಿಳಿಸುತ್ತಾನೆ :

However, in order to be audible, the sound must represent a certain minimum amount of power ; that is, the sound must have a certain intensity and this minimum depends upon the frequency. The ear is most sensitive in the region of 2500 cycles per second ; for both lower and higher frequencies, the sensitivity falls off rapidly.[333]

ಶಕ್ತಿಯ ಆವೇಗವು (intensity) ಶಬ್ದದ ಗಟ್ಟಿಯಾಗಿ ಕೇಳುವಿಕೆ (loudness) ಯ ಮಟ್ಟವನ್ನು ಸ್ಥೂಲವಾಗಿ ಪ್ರತಿನಿಧಿಸುತ್ತದೆಂದು ತಿಳಿಯಬಹುದು ; ಆದುದರಿಂದ ಶಬ್ದವು ಅಥವಾ ನಾದವು ಶ್ರುತವಾಗಬೇಕಾದರೆ, ಧ್ವನ್ಯಂತರಾಶ್ರುತಿ ಮುಂತಾದ ಲಕ್ಷಣಗಳಿಂದ ಕೂಡಿ ಶ್ರುತಿಯಾಗಬೇಕಾದರೆ, ಅದು ಒಂದು ಕನಿಷ್ಠಪ್ರಮಾಣದಷ್ಟಾದರೂ ಗಟ್ಟಿಯಾಗಿ ಕೇಳಿಸಬೇಕು ; ಅದಕ್ಕಿಂತ ಮೃದುವಾಗಿಬಿಟ್ಟರೆ ಅದು ಕೇಳಿಸುವುದಿಲ್ಲ ಎಂದು ಈ ಮಾತಿನ ತಾತ್ಪರ್ಯ.

## 3. ಶ್ರುತಿಯ "ಕಾಲ"

ಶ್ರುತಿಗೆ ನಾನ್ಯದೇವನು ಹೇಳಿದ ಕಾಲವೆಂಬ ಲಕ್ಷಣಕ್ಕೂ ಆಧುನಿಕ ನಾದವಿಜ್ಞಾನದಲ್ಲಿ ಪರಸ್ಪರತೆ ದೊರೆಯುತ್ತದೆ. ಕೇಳಿಸಲು ಯೋಗ್ಯವಾದ ಯಾವುದೇ ಶಬ್ದವಾಗಲೀ, ನಾದವಾಗಲೀ, ಕನಿಷ್ಠವಾದ ಕಾಲಾವಕಾಶದಲ್ಲಿ ಅಸ್ತಿತ್ವವನ್ನು ಪಡೆದಿದ್ದರೆ ಮಾತ್ರ ಗೋಚರವಾಗಬಲ್ಲದು ; ಇದಕ್ಕಿಂತ ಕಡಿಮೆ ಕಾಲದಲ್ಲಿದ್ದರೆ ಕಿವಿಯಾಗಲೀ, ಬುದ್ಧಿಯಾಗಲೀ ಗ್ರಹಿಸಲಾರದು ಎಂದು ನಾದವಿಜ್ಞಾನದ ಪ್ರಯೋಗ ಫಲಿತಾಂಶಗಳಿಂದ ಸಿದ್ಧವಾಗಿದೆ. ಇದು ಸಹಜವೇ ಆಗಿದೆ. ಏಕೆಂದರೆ ಇಂದ್ರಿಯಮೂಲವಾದ ಯಾವ ಅನುಭವವೇ ಆಗಲಿ, ಆಯಾ ಅನುಭವದ ಭೌತಿಕ ಉಪಾಧಿಗಳು ಆಯಾ ಇಂದ್ರಿಯದ ಮೇಲೆ ಮಾಡಿದ ಸಂವೇದನೆಗಳ ಮೊತ್ತವನ್ನು ಅವಲಂಬಿಸುತ್ತದೆ ; ಹಾಗೂ ಇವು ಆಯಾ ಇಂದ್ರಿಯದ ವೈಶಿಷ್ಟ್ಯವನ್ನು ಅನುಸರಿಸಿ ಮಿದುಳಿನಲ್ಲಿ ಉಂಟುಮಾಡುವ ವಿದ್ಯುತ್ ಸಂವೇದನೆ

333 ಕಲ್ವರ್, ಉ. ಗ್ರಂ., ಪು. 33.

(electrical impulses) ಗಳ ಸಂಕೀರ್ಣಸ್ವಭಾವ, ಮೊತ್ತಗಳ ರೂಪದಲ್ಲಿ ಪರ್ಯವಸಾನ ಹೊಂದಿ ಅಭಿವ್ಯಕ್ತಿಯನ್ನು ಪಡೆಯುತ್ತದೆ. ಇದರ ಮೊತ್ತವು ಮಿದುಳಿನ ಆಯಾ ಕೇಂದ್ರಕ್ಕೆ ತಲುಪಿದಾಗ ಅದು ಸಂಕೇತ ಪರಿಣಾಮದಿಂದಾಗಿ ಆಯಾ ಅನುಭವವಾಗಿ ಮಾರ್ಪಡುತ್ತದೆ. ಈ ಮೊತ್ತವು ಒಂದು ಕನಿಷ್ಠಪ್ರಮಾಣದ್ದಾದರೂ ಆಗಿದ್ದರೆ ಮಿದುಳಿಗೆ ಅದನ್ನು ಅನುಭವವನ್ನಾಗಿ ಮಾರ್ಪಡಿಸುವ ಶಕ್ತಿ ಉಳಿದಿರುತ್ತದೆ; ಇದಕ್ಕೂ ಕಡಿಮೆಯಾದರೆ, ಅದಕ್ಕೆ ಭೌತಿಕ ವಾಸ್ತವತೆಯಿದ್ದರೂ ಗ್ರಾಹ್ಯವಾಗುವುದಿಲ್ಲ. ಈ ಕನಿಷ್ಠಪ್ರಮಾಣವು ಉಂಟಾಗಬೇಕಾದರೆ ಸಂವೇದನೆಯು ಮೊತ್ತದಲ್ಲಿ ಹೇಗೆ ಕನಿಷ್ಠಪ್ರಮಾಣವನ್ನು ಪಡೆದಿರಬೇಕೋ, ಕಾಲದಲ್ಲಿಯೂ ಕನಿಷ್ಠವಾದ ಅವಕಾಶವನ್ನು ಪಡೆದಿರಬೇಕು. ಇದಕ್ಕೆ ಕಾರಣವೇನೆಂದರೆ ಮಾನವಪ್ರಜ್ಞೆಯು ಪ್ರವಾಹರೂಪದಲ್ಲಿದ್ದು ತನ್ನದೇ ಆದ ವೇಗವನ್ನು ಪಡೆದಿರುತ್ತದೆ. ಈ ವೇಗದ ಪ್ರಮಾಣವು ಶಾರೀರಿಕ ಕಾಲವನ್ನೂ (inner time), ಬಾಹ್ಯಜಗತ್ತಿನ ಕಾಲವನ್ನೂ (environmental time) ಅವಲಂಬಿಸುತ್ತದೆ.[334] ಈ ವೇಗಕ್ಕಿಂತ ಎಷ್ಟೆಷ್ಟು ಕಡಿಮೆಯಾಗಿ ಅಥವಾ ಹೆಚ್ಚಾಗಿ ಬಾಹ್ಯಪ್ರಮಾಣದಲ್ಲಿ ಭೌತಿಕಘಟನೆಯು ನಡೆದರೆ ಬುದ್ಧಿಯು ಅದನ್ನು ಗ್ರಹಿಸುವುದು ಅಷ್ಟಷ್ಟು ಕಷ್ಟವಾಗುತ್ತದೆ. ಪ್ರಜ್ಞೆಯ ವೇಗದಲ್ಲೇ ಘಟನೆಯೂ ನಡೆದು, ಸಾಕಷ್ಟು ಕಾಲವು ನಡೆಯುತ್ತಿದ್ದರೆ ಮಾತ್ರ ಬುದ್ಧಿಯು ಅದನ್ನು ಗ್ರಹಿಸುತ್ತದೆ. ಆದುದರಿಂದ ಶಬ್ದದ ಭೌತಿಕ ಉಪಾಧಿಗಳಾದ ಕಾಲವೂ ಕಲೆಯೂ ನಿರ್ದಿಷ್ಟವಾದ ಕನಿಷ್ಠಪ್ರಮಾಣವನ್ನಾದರೂ ಪಡೆದಿರಲೇಬೇಕು :

Another aspect of pitch perception which is coming to have increased significance concerns the minimum time required for the ear to recognize a definite pitch. The data bearing on this point are, as yet, not very concordant, but it would appear that the "**pitch perception time**" is more or less independent of the frequency, being of the order of one twentieth of a second.

Not only can the ear catalogue a note as to pitch in a remarkably short time interval, but it can also recognize a sound as such when only two vibrations are made. This means that in the region of $C_3$ we can become conscious of the existence of a sound if it persists for two or three hundredths of a second. However, to recognize the complete characteristics of a note anywhere from 2 to 20 oscillations are necessary.[233]

ಕಲ್ವರನ ಈ ಅಭಿಪ್ರಾಯದಲ್ಲಿ ಸೀಷೋರನು ಸ್ವಲ್ಪ ಭಿನ್ನತೆಯನ್ನು ತಳೆದಿದ್ದಾನೆ; ಶ್ರೋತ್ರೇಂದ್ರಿಯ ಗ್ರಹಣಕ್ಕೆ ಅಗತ್ಯವಾದ ಕನಿಷ್ಠ ಕಾಲಪ್ರಮಾಣವು ಕಂಪನಸಂಖ್ಯೆಯನ್ನು ಸ್ಪಷ್ಟವಾಗಿಯೇ ಅವಲಂಬಿಸುತ್ತದೆಂದು ಅವನು ಹೇಳುತ್ತಾನೆ; ಶಬ್ದವು ಗಟ್ಟಿಯಾಗಿದೆಯೇ ಜೋರಾಗಿದೆಯೇ ಮೃದುವಾಗಿದೆಯೇ ಎಂಬುದನ್ನೂ ಇದು ಅವಲಂಬಿಸುತ್ತದೆ. ಶ್ರೋತ್ರೇಂದ್ರಿಯಗ್ರಹಣದಲ್ಲಿ ಮೂರು ಸಂದರ್ಭಗಳನ್ನು ಅವನು ವಿಶ್ಲೇಷಿಸುತ್ತಾನೆ: (1) ತಾರತಮ್ಯಕ್ಕಾಗಿ ಉತ್ಪಾದಿಸಿದ ಎರಡು ಶಬ್ದಗಳು ಸಂಪೂರ್ಣವಾಗಿ ಪರಿಚ್ಛಿನ್ನವಾಗಿದ್ದು, ಪ್ರತಿಯೊಂದೂ ಒಂದು ಸೆಕೆಂಡಿನ ಕಾಲ ಅಸ್ತಿತ್ವವನ್ನು ಪಡೆದಿದ್ದು, ಆದರೆ ಇವೆರಡರ ಮಧ್ಯದಲ್ಲಿ ಅತ್ಯಲ್ಪಪ್ರಮಾಣದ ಕಾಲವಿರುವುದು; ಇದನ್ನೇ ಶ್ರುತಿಯ ಕಾಲವೆಂದು ನಾನು ಹೆಸರಿಸಿರುವುದು. (2) ಎರಡೂ ಶಬ್ದಗಳನ್ನು ಅಪರಿಚ್ಛಿನ್ನವಾಗಿ,

334 ಈ ವಿಷಯದಲ್ಲಿನ ಶಾರ್ಙ್ಗದೇವ, ಉ. ಗ್ರಂ., I, 2, 158 ಕ್ಕೆ ಬರೆದಿರುವ ನನ್ನ ವ್ಯಾಖ್ಯಾನವನ್ನೂ (ಪು. 161), ಅಲೆಕ್ಸಿಸ್ ಕ್ಯಾರೆಲ್, ಉ. ಗ್ರಂ., ಪು. 103, 154-182 ನ್ನೂ ಓದಿಕೊಳ್ಳಬಹುದು.

ಎಂದರೆ ಮಧ್ಯದಲ್ಲಿ ಎಡೆಯಿಲ್ಲದೆ ಒಂದಾದಮೇಲೊಂದರಂತೆ ನಿರಂತರವಾಗಿ ಕಂಪನವೆಂಬ ಗಮಕರೀತಿಯಲ್ಲಿ ಉತ್ಪಾದಿಸುವುದು ; ಇವುಗಳಲ್ಲಿ ವ್ಯತ್ಯಾಸವನ್ನು ಗ್ರಹಿಸಲು ಬೇಕಾಗುವ ಕಾಲವನ್ನು ಅಳೆಯುವುದು. (3) ಮಧ್ಯದಲ್ಲಿ ನಿಲ್ಲದೆ ಒಂದರಿಂದ ಒಂದಕ್ಕೆ ತಕ್ಷಣವೇ ಶಬ್ದವನ್ನು ಬದಲಾಯಿಸುವುದು. ಮೊದಲನೆಯ ವಿಧದಲ್ಲಿ ಬೇಕಾಗುವ ಶ್ರುತಿಗ್ರಹಣ ಕಾಲವು ಮೂರನೆಯದರ ಎರಡರಷ್ಟು, ಎರಡನೆಯದರಲ್ಲಿ ಈ ಎರಡು ಪ್ರಮಾಣಗಳ ನಡುವೆಯೂ ಇರುತ್ತದೆ.

**Duration**. There are three types of musical situations which may be recognized in the measurement of pitch discrimination : 1) going from one note to another with a complete break between them, as in the standard test where we should sound notes, each of which is one second in duration but differing in pitch and separated by a very short interval of time ; 2) legato rise or fall in pitch or pitch vibrato ; and 3) sudden shift in a single note with out break in tone as in erratic intonation.

The discrimination is different for each of these three, the necessary increment being about twice as large for the first type as the third and the second falling between these two. These differences are related to the differences in total duration of each tone.

The minimum duration necessary in order to identify the pitch of a tone clearly varies with the frequency and to some extent with the loudness. It has been found that in order to be heard clearly as of definite pitch, a tone at 128 c.p.s. must have a duration of 0.09 second ; for 256 c.p.s., about 0.07 second ; for 384 c.p.s., about 0.04 second ; and for 512 c.p.s., about the same.[232]

ಶ್ರುತಿಯ ಕಾಲ ಮತ್ತು ಕಲಾ ಎಂದು ಇಲ್ಲಿ ವರ್ಣಿಸಿರುವುದನ್ನು ರೆವೆಜ್ ಇನ್ನೂ ಹೆಚ್ಚು ವಿಮರ್ಶಾತ್ಮಕವಾಗಿ ವಿವೇಚಿಸಿದ್ದಾನೆ. ಶ್ರೋತ್ರೇಂದ್ರಿಯ ಗ್ರಾಹ್ಯತೆಯಲ್ಲಿ ಉಂಟಾಗುವ ವ್ಯತ್ಯಾಸಗಳು ಆಯಾ ಶ್ರೋತ್ರೇಂದ್ರಿಯ ವೈಶಿಷ್ಟ್ಯದಿಂದಲೂ, ಶ್ರೋತ್ರೇಂದ್ರಿಯಗ್ರಹಣದ ಅಂಗವಾದ ಗಮನ ಅಥವಾ ಪ್ರಜ್ಞೆ (attention) ಯಲ್ಲಿ ಉಂಟಾಗುವ ಅಸ್ಥಿರವಾದ ಉಯ್ಯಾಲಾಟದಿಂದಲೂ ಆಗುತ್ತವೆ. ಸೀಷೋರನಂತೆಯೇ ಇವನೂ 2 ರಿಂದ 20 ರವರೆಗೆ ಕಂಪನಗಳನ್ನು ಶ್ರುತಿಯ ಕಲೆಯೆನ್ನುತ್ತಾನೆ ; ಆದರೆ ಇದಕ್ಕೂ, ನಾದಗುಣಕ್ಕೂ ಕಂಪನ ಸಂಖ್ಯೆಗೂ ಸಂಬಂಧವಿದೆಯೆನ್ನುತ್ತಾನೆ. ಶ್ರುತಿಯ ಕಾಲವು ಸ್ಪಂದವನ್ನುಂಟುಮಾಡುವ ಪ್ರಚೋದಕದ ಪ್ರಗತಿಯನ್ನೂ ಅವಲಂಬಿತ್ತದೆ ಎಂದು ಅವನು ಪ್ರಯೋಗಫಲಿತಾಂಶಗಳಿಂದ ಹೇಳುತ್ತಾನೆ :

A sound must not only have a definite *intensity* to be perceived, but also a definite *duration*. The duration necessary for sound perception varies between 2 and 20 complete vibrations, according to the pitch and quality of the note. The duration necessary for perception also depends on the progress of the stimulus. Here we have three possibilities: the sound can be constant in intensity from beginning to end ; it can be

loud at the beginning and die away rapidly; or it can begin very softly and only gradually attain its full intensity.[335]

ಗ್ಲೆನ್ ಹೇಡನ್ನನೂ ಶ್ರುತಿಕಾಲವನ್ನು ಅಂಗೀಕರಿಸುತ್ತಾನೆ :

In addition to frequency, intensity and form or overtone structure, the fourth physical characteristic of music sound is *duration*. Every tone has a finite duration as one of its fundamental characteristics. Duration is, thus, one of the four intrinsic orders of tones; it is of particular significance in relation to the rhythmic structure of music.[336]

ಹೀಗೆ, ಆಧುನಿಕ ನಾದಶಾಸ್ತ್ರ ವಿಜ್ಞಾನಿಗಳು ಈಚೆಗೆ ಶ್ರವಣೇಂದ್ರಿಯಗ್ರಾಹ್ಯತೆಯ ವಿಷಯವಾಗಿ ಕಂಡುಹಿಡಿದಿರುವುದನ್ನು ಪ್ರಾಚೀನಭಾರತದ ನಾದವಿಜ್ಞಾನಿಗಳೂ ಆಗಿದ್ದ ಸಂಗೀತಶಾಸ್ತ್ರ ಪ್ರವರ್ತಕರು ಸಾವಿರ ವರ್ಷಗಳಷ್ಟು ಹಿಂದೆಯೇ ನಿಸ್ಸಂಶಯವಾಗಿ ಹೇಳಿದ್ದರು. ನಾನ್ಯದೇವನು ಶ್ರುತಿಜಾತಿಪಂಚಕದ ವಿಷಯದಲ್ಲಿ

ಪಂಚೈತಾಃ ಕಲಾಕಾಲಪ್ರಮಾಣೇನ ವಿಭೇದಿತಾ ದ್ವಾವಿಂಶತಿರಿತಿ ವ್ಯಾಖ್ಯಾತಾಃ । [268]

ಎಂದು ಹೇಳಿದ್ದಾನೆ. ಇದು ಅವನದೇ ಸ್ವಂತ ಅಭಿಪ್ರಾಯವಿರಲಾರದು. ಏಕೆಂದರೆ ಇದಕ್ಕಿಂತಲೂ ಹಿಂದೆಯೇ ಅಭಿನವಗುಪ್ತನು ಶ್ರುತಿಯ ಪ್ರಮಾಣವನ್ನು ಇವುಗಳೊಡನೆ ಸಮೀಕರಿಸಲು ಒಪ್ಪದಿದ್ದರೂ ಕಾಲಕಲಾದಿಗಳನ್ನು ಶ್ರುತಿಲಕ್ಷಣಗಳೆಂದೇ ವಿವಕ್ಷಿಸಿ ಅವುಗಳನ್ನು ಶ್ರುತಿಪ್ರಮಾಣದಿಂದ ಪ್ರತ್ಯೇಕಿಸಿದ್ದಾನೆ :

ಶ್ರುತಿಶ್ಚ ನಾಮ ಶ್ರೋತ್ರಗಮ್ಯಂ ವೈಲಕ್ಷಣ್ಯಂ ಯಾವತಾ ಶಬ್ದೇನೋತ್ಪದ್ಯತೇ । ನನು ಕಾಲಾಂಶಃ ಶ್ರುತಿಃ....[96]
**ಪ್ರಮಾಣೇತಿ** ವದನ್ ನ ಕಾಲ ಕಲಾ ಶ್ರುತಿರ್ನಾಪಿ ನಾದಾಂಶೋ ನ ಛಾಯುರ್ನಸ್ಥಾನಂ [120]

ಶ್ರುತಿ ಪ್ರಮಾಣವೆಂದರೆ ಕಾಲ, ಕಲಾ, ಆಯುಸ್ಸು, ನಾದಬಿಂದುತ್ವ ಮುಂತಾದವುಗಳಲ್ಲವೆಂಬುದು ಭರತನ ಅಭಿಮತವೆಂದು ಅವನು ಹೇಳಿದ್ದರೂ ಭರತನು ಈ ಅರ್ಥಗಳನ್ನೆಲ್ಲಾ ವಿವಕ್ಷಿಸಿದ್ದಾನೆಯೋ ಇಲ್ಲವೋ ಎಂದು ಹೇಳುವಂತಿಲ್ಲ. ಇದನ್ನು ಅಭಿನವಗುಪ್ತನು ಒಪ್ಪದಿರುವುದಕ್ಕೆ ವಿಶ್ವಾವಸುವೇ ಮೊದಲಾದವರು ಹೇಳಿದ ಶ್ರುತಿಯ ಅಂತರಗತತ್ವವೆಂಬ ಲಕ್ಷಣವು ಅಡ್ಡಿಯಾಗಿದೆ. ಕುಂಭಕರ್ಣನೂ ಶ್ರುತಿಗೋಚರಕ್ಕೆ ಬೇಕಾದ ಕಾಲವನ್ನು ಮಾನವೆಂದು ವ್ಯವಹರಿಸಿ ಶ್ರುತಿಪ್ರಮಾಣದಿಂದ ಬೇರ್ಪಡಿಸಿದ್ದಾನೆ (ಪು. 358). ಇದು ಅಂಗೀಕಾರಾರ್ಹವಾಗಿದೆ.

ಆದರೆ ಈ ಮತಗಳನ್ನೆಲ್ಲಾ ಪರಸ್ಪರ ವಿರೋಧಗಳೆಂದು ತಿಳಿಯುವುದಕ್ಕಿಂತ ಪರಸ್ಪರ ಪೂರಕಗಳಾಗಿರುವ ವಿವಿಧ ದೃಷ್ಟಿಕೋನಗಳೆಂದು ತಿಳಿಯುವುದೇ ಲೇಸಾದ ಕ್ರಮ. ಹಾಗೆ ಮಾಡಿದರೆ ಶ್ರುತಿಯ ವಿಷಯವಾಗಿ ಪುಷ್ಟವೂ ಸಮಗ್ರವೂ ಆಗಿರುವ ಕಲ್ಪನೆಯು ಮೂಡುತ್ತದೆ.

## 4. ಶ್ರುತಿಯ "ಪ್ರಮಾಣ": ನೈರಂತರ್ಯ

'ಶ್ರವಣೇಂದ್ರಿಯಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್' ಎಂದು ವಿಶ್ವಾವಸುವು ಹೇಳಿದ ಶ್ರುತಿಲಕ್ಷಣದಲ್ಲಿ ಗ್ರಾಹ್ಯತ್ವ ಎಂಬುದರಲ್ಲಿ ಕಾಲ ಮತ್ತು ಕಲಾ ಎಂಬ ಎರಡನ್ನೂ ವಿವಕ್ಷಿಸಿ ಇಲ್ಲಿಯವರೆಗೆ ವಿವೇಚಿಸಲಾಯಿತು. ಇನ್ನು ಗ್ರಾಹ್ಯತ್ವ ಎಂಬುದಕ್ಕೆ ಪ್ರಮಾಣ ಎಂಬ ಅರ್ಥವನ್ನು ಈ ಹಿನ್ನೆಲೆಯಲ್ಲಿ ಪರೀಕ್ಷಿಸಬಹುದು. ಶ್ರೋತ್ರೇಂದ್ರಿಯ ಗ್ರಾಹ್ಯತೆಯಲ್ಲಿ ಸಾಮರ್ಥ್ಯಪರವಾದ ಅರ್ಥವನ್ನು ಸ್ವೀಕರಿಸಿದ ನಮ್ಮ ಪ್ರಾಚೀನ ಲಾಕ್ಷಣಿಕರು ಈ ಶ್ರುತಿಯ ಪ್ರಮಾಣವನ್ನು ಪರಮಾಣುತಃ ಪ್ರಮಾಣ, ಧ್ವನಿವೈಲಕ್ಷಣ್ಯಮಾತ್ರದ ಅವಬೋಧವು ಉಂಟಾಗಲು ಬೇಕಾಗುವ

335 ರೆವೆಜ್, ಉ. ಗ್ರಂ., ಪು. 7.   336 ಗ್ಲೆನ್ ಹೇಡನ್, ಉ. ಗ್ರಂ., ಪು. 40.

ಉತ್ಕರ್ಷಾಪಕರ್ಷ, ನೈರಂತರ್ಯ, ಧ್ವನ್ಯಂತರಾಶ್ರುತಿ, ಮುಂತಾದವುಗಳ ಮೂಲಕ ಹೇಳಿರುವುದನ್ನೂ, ಶಾರ್ಙ್ಗದೇವನು ಇವುಗಳನ್ನು ಮಂದ್ರತಮ ಧ್ವಾನದ ಚೌಕಟ್ಟಿನಲ್ಲಿ ಹೇಳಿರುವುದನ್ನೂ ಇಲ್ಲಿ ಸ್ಮರಿಸಬೇಕು.

ಇವುಗಳಲ್ಲಿ ನೈರಂತರ್ಯ ಎಂಬ ಲಕ್ಷಣವನ್ನು ಕೆಲವೇ ಮಾತುಗಳಲ್ಲಿ ಪ್ರಸ್ತಾಪಿಸಿ ಮುಗಿಸಬಹುದು. ಏಕೆಂದರೆ ಈ ಲಕ್ಷಣವನ್ನು ಪಾಶ್ಚಾತ್ಯ ನಾದವಿಜ್ಞಾನವು ವಿವೇಚಿಸಿರುವುದು ಎಲ್ಲಿಯೂ ನನ್ನ ಗಮನಕ್ಕೆ ಬಂದಿಲ್ಲ. ಮನೋ-ವಿಜ್ಞಾನಶಾಸ್ತ್ರದಲ್ಲಿಯೂ ಇದರ ವಿಷಯದಲ್ಲಿ ಅಸ್ಪಷ್ಟವಾದ ಜ್ಞಾನವೇ ಹೆಚ್ಚಾಗಿದೆ. ಮತಂಗಮುನಿಯು ಏಕಶ್ರುತಿವಾದದಲ್ಲಿ ಹೇಳಿದ ನಾದದ ಅಪರಿಚ್ಛಿನ್ನತೆಯನ್ನು ಶಾರ್ಙ್ಗದೇವಸೂರಿಯು 'ನಿರಂತರತಾ' ಎಂದು ಶ್ರುತಿಲಕ್ಷಣ ವಾಗಿ ಹೇಳಿದ್ದಾನೆ; ಆದರೆ ಇದು ಕೇವಲ ತಾತ್ತ್ವಿಕ ವಿವೇಚನೆಯ ಫಲಿತಾಂಶವೇ ಹೊರತು ಪ್ರಯೋಗಫಲಿತಾಂಶ ವಲ್ಲ. ಏಕೆಂದರೆ, ನಾದದ ಮಾತು ಒತ್ತಟ್ಟಿಗಿರಲಿ, ಮಾನವನ ಯಾವ ಜ್ಞಾನಕೋಶದಲ್ಲಿಯೇ ಆಗಲಿ, ಅನುಭವ ಕೋಶದಲ್ಲಿಯೇ ಆಗಲಿ ನೈರಂತರ್ಯವನ್ನು ಪ್ರಾಯೋಗಿಕವಾಗಿ ಸಿದ್ಧಮಾಡಿಕೊಡಲು ಆಗದು. ಈ ಪರಿಚ್ಛಿನ್ನತೆಯು ವಸ್ತುನಿಷ್ಠವಾದುದು ಹೌದೋ ಅಲ್ಲವೋ ತಿಳಿಯುವಂತಿಲ್ಲ; ಏಕೆಂದರೆ ಜ್ಞೇಯವು ಜ್ಞಾನದ ಸ್ವಭಾವದಿಂದಲೂ ಜ್ಞಾತೃವಿನ ಸ್ವಭಾವದಿಂದಲೂ ಪರಿಮಿತವಾಗಿದೆ. ಇವೆರಡನ್ನು ಬಿಟ್ಟು ಜ್ಞಾನವು ಇರಲಾರದು. ಆದರೆ ಜ್ಞಾತೃವಾದ ಮಾನವನ ಪ್ರಜ್ಞೆ, ಅಹಂಕಾರ, ಚಿತ್ತ, ಬುದ್ಧಿ ಮೊದಲಾದ ಉಪಕರಣಗಳೆಲ್ಲವೂ ಪರಿಚ್ಛಿನ್ನತೆಯಿಂದ ಬಾಧಿತ ವಾದವುಗಳು; ಎಂದರೆ ಯೋಗಿಯಲ್ಲಿ ಅಲ್ಲದೆ ಎಡೆಬಿಡದೆ ಏಕಾಗ್ರವಾಗಿ ಎಂದಿಗೂ ಇವು ನಿಲುಗಡೆಯಿಲ್ಲದೆ ಕೆಲಸಮಾಡಲಾರವು. ಪ್ರಜ್ಞೆಯು ಪ್ರವಾಹವೆಂದು ಮೇಲೆ ಹೇಳಿದುದನ್ನು ಸ್ಥೂಲಾರ್ಥದಲ್ಲಿ ಗ್ರಹಿಸಬೇಕು. ಕ್ಷಣಕ್ಷಣಕ್ಕೂ ಪ್ರಜ್ಞೆಯು ಸ್ಫೋಟವಾಗಿ, ಇಂತಹ ಸ್ಫೋಟಗಳ ಸರಣಿಯಿಂದ ಅನುಭವವಾಗಲೀ ಜ್ಞಾನವಾಗಲೀ ಸಿದ್ಧಿಸುತ್ತದೆ. ನಡುವೆ ಇರುವ ಅಂತರವು ಬುದ್ಧಿಯು ಗ್ರಹಿಸಲಾರದಷ್ಟು ಸಮೀಪವಾಗಿದ್ದರೆ ಅದನ್ನು ನೈರಂತರ್ಯ ವೆಂದೂ ಅವಿಚ್ಛಿನ್ನತೆಯೆಂದೂ ತಿಳಿಯಬೇಕು. ದ್ರವ್ಯವೂ ಶಕ್ತಿಯೂ ಭೌತಿಕ ಜಗತ್ತಿನಲ್ಲಿ ಪರಿಚ್ಛಿನ್ನಗಳೇ (discrete, discontinuous) ಎಂದು ಆಧುನಿಕ ಭೌತಶಾಸ್ತ್ರವು ಸಿದ್ಧಪಡಿಸಿದೆ. ಜ್ಞಾತೃವೂ ಇದೇ ಸ್ವಭಾವದುದು; ಈ ಪ್ರಾಯೋಗಿಕ, ವ್ಯಾವಹಾರಿಕ ಸತ್ಯವನ್ನು ಎಂದರೆ ಪರಿಚ್ಛಿನ್ನತೆಯನ್ನು ಪರಮಾರ್ಥದಲ್ಲಿ, ತಾತ್ತ್ವಿಕ ಜಿಜ್ಞಾಸೆಯಲ್ಲಿ ಮಾತ್ರ ಒಪ್ಪಲಾಗುವುದಿಲ್ಲ. ಅಲ್ಲಿ ಅಖಂಡವೂ, ಅಪರಿಚ್ಛಿನ್ನವೂ, ಅನಂತವೂ ಆಗಿರುವಂತಹದು ಉಪಾಧಿಯಿಂದ ಉಪಹತವಾಗಿ, ಶಬಳಿತವಾಗಿ ಪರಿಚ್ಛಿನ್ನತಾಸ್ವರೂಪವನ್ನು ಪಡೆಯುತ್ತದೆ; ಅಂತರ್ಭೂತಪೂರಣ ಗುಣದಿಂದ ಪ್ರತ್ಯೇಕತೆಯು ಪ್ರತ್ಯಯಾರ್ಥವನ್ನು ಪಡೆದುಕೊಳ್ಳುತ್ತದೆ.

ಆದುದರಿಂದ ನೈರಂತರ್ಯವನ್ನು ನಾದವಿಜ್ಞಾನವು ಒಪ್ಪುವುದಿಲ್ಲ. ಅಲ್ಲಿ ಧ್ವನ್ಯಂತರಾಶ್ರುತಿಯಿಂದ, ಧ್ವನಿ ವೈಲಕ್ಷಣ್ಯದಿಂದ ಉಂಟಾದ ಧ್ವನಿಗಳ ಸರಣಿಯನ್ನೇ ಶ್ರುತಿಗಳೆಂದು ವ್ಯವಹರಿಸಿದೆ. ಶ್ರೋತ್ರೇಂದ್ರಿಯಗ್ರಾಹ್ಯತ್ವದಲ್ಲಿ ಸಾಮರ್ಥ್ಯಪರವಾದ ಅರ್ಥವನ್ನು ಬಹು ಅಲ್ಪಾಂತರವುಳ್ಳ ಧ್ವನಿಗಳ ಪೃಥಕ್ಕರಣ ಮತ್ತು ಪ್ರತ್ಯೇಕ ಗ್ರಹಣಶಕ್ತಿ ಎಂದು ಅಭಿಸಂಧಿಯನ್ನು ಇಲ್ಲಿ ಹೊರಡಿಸಬೇಕು. ಸಂಗೀತ ಮನೋವಿಜ್ಞಾನವು ಮಾತ್ರ ನಾದಪ್ರದೇಶವನ್ನು ಅಪರಿಚ್ಛಿನ್ನವೂ ಅಖಂಡವೂ ಆದ ದ್ರವ್ಯ, ಸಂತತ ಪ್ರವಾಹಧಾರೆ, ಎಂದು ಹೇಳುತ್ತದೆ:

That it (pitch) denotes higness or lowness in the tonal continuum along which we locate the musical scale [337]

ಆದರೆ ಪ್ರಾಯೋಗಿಕದೃಷ್ಟಿಯಿಂದ ನೈರಂತರ್ಯವೆಂದರೆ ಶ್ರವಣಗೋಚರವಾದ ಸಂಗೀತೋಪಯೋಗಿಯಾದ ಬೇರೆ ಅಂತರವು ಇಲ್ಲದಿರುವುದು ಎಂಬ ಅರ್ಥವೇ ಹೆಚ್ಚು ಪುಷ್ಟವಾಗಿದೆ. ಏಕೆಂದರೆ ತಾತ್ತ್ವಿಕವಾಗಿ ಸರಳರೇಖೆಯ ಅವಿಚ್ಛಿನ್ನತೆ, ಅಖಂಡತೆಗಳು ಅಸಂಖ್ಯಾತವಾದ ಬಿಂದುಗಳ ಅತ್ಯಂತ ಸಮೀಪವಾದ ಅನುಕ್ರಮದಿಂದ ಆಗಿರು

337 ಸೀಷೋರ್, ಉ. ಗ್ರಂ., ಪು. 53.

ವಂತೆಯೇ ನಾದವೂ ಇಂತಹ ಶ್ರುತಿಗಳ ಅನುಕ್ರಮದಿಂದ ನಾದವು ಅವಿಚ್ಛಿನ್ನತೆಯನ್ನೂ ಅಖಂಡತೆಯನ್ನೂ ಪಡೆಯುತ್ತದೆಂದು ಇಟ್ಟುಕೊಂಡರೂ ಬಿಂದುಗಳು ಭೌತಿಕ ವಾಸ್ತವತೆಯನ್ನು ಪಡೆದಿವೆಯಷ್ಟೆ. ಎಂದೇ ಶ್ರುತಿಗಳಿಗೆ ನೈರಂತರ್ಯವೆಂದರೆ ಅತ್ಯಂತ ಸಮೀಪವರ್ತಿಯಾದ ನೆರೆಹೊರೆತನದಲ್ಲಿ ಉಂಟಾಗುವ ಅಂತರ ಎಂದು ತಿಳಿಯಬೇಕು.

### 5. ಮಂದ್ರತಮಧ್ವಾನ

ಆದುದರಿಂದ, 'ಶ್ರವಣೇಂದ್ರಿಯ ಗ್ರಾಹ್ಯತ್ವಾತ್' ಎನ್ನುವ ಪ್ರಾಚೀನ ಲಕ್ಷಣೋಕ್ತಿಯಲ್ಲಿ ಗ್ರಾಹ್ಯತ್ವಕ್ಕೆ ಸಾಮರ್ಥ್ಯಪರವಾದ ಅರ್ಥವನ್ನಿಟ್ಟುಕೊಂಡರೆ ನೈರಂತರ್ಯವೆಂಬ ಶ್ರುತಿಲಕ್ಷಣವು ಧ್ವನ್ಯಂತರಾಶ್ರುತಿ ಎಂಬುದಕ್ಕೆ ಅರ್ಥಪೂರಣವನ್ನೇ ಉಂಟುಮಾಡುತ್ತದೆ. ಧ್ವನ್ಯಂತರಾಶ್ರುತಿ ಎಂಬಲ್ಲಿ ಮೂರು ಸಂಗತಿಗಳನ್ನು ವಿವೇಚಿಸಬೇಕು : 1) ಧ್ವನ್ಯಂತರಾಶ್ರುತಿ ಎಂಬ ಲಕ್ಷಣಕ್ಕೆ ನಾದವಿಸ್ತಾರದಲ್ಲಿ ಮೇಲೆ ಮತ್ತು ಕೆಳಗೆ ಮಿತಿಗಳು ಇವೆಯೇ ? 2) ಇದ್ದರೆ ಈ ವಿಸ್ತಾರದಲ್ಲಿ ಶ್ರೋತ್ರೇಂದ್ರಿಯಕ್ಕೆ ಎಷ್ಟರಮಟ್ಟಿನ ಸಾಮರ್ಥ್ಯವಿದೆ ? 3) ಈ ಸಾಮರ್ಥ್ಯವು ಯಾವ ಅಂಶಗಳನ್ನು ಅವಲಂಬಿಸಿದೆ ? 4) ಈ ವಿಸ್ತಾರದಲ್ಲಿ ಎಷ್ಟು 'ಶ್ರುತಿ'ಗಳು ಲಭಿಸುತ್ತವೆ ?

ಶ್ರವಣಗೋಚರವಾದ ಇಡೀ ನಾದವಿಸ್ತಾರದಲ್ಲಿಯೇ ಈ ಲಕ್ಷಣವನ್ನು ಅಳೆಯಬಹುದಾದರೂ-ನಾದ ವಿಜ್ಞಾನವು ಇದನ್ನು ಮಾಡಿ ತೋರಿಸಿದೆಯೆಂದು ಮುಂದೆ ಹೇಳಲಾಗುವುದು-ಸಂಗೀತಪ್ರಯೋಜಕವಾದ ವಿಸ್ತಾರವು ಮಾತ್ರ ಇಲ್ಲಿ ಪ್ರಸಕ್ತವಾದುದು. ಎಂದೇ ಶ್ರೀ ಶಾರ್ಙ್ಗದೇವನು ಈ ವಿಸ್ತಾರದ ಕೆಳಗಿನ ಮಿತಿಯನ್ನು ಮಂದ್ರತಮಧ್ವಾನಾ ಎಂಬ ಮಾತಿನಿಂದಲೂ ಮೇಲಿನ ಮಿತಿಯನ್ನು ತ್ರಿಸ್ಥಾಯಿ ವಿಸ್ತಾರದ ವಿವಕ್ಷೆಯಿಂದಲೂ ಹೇಳಿದ್ದಾನೆ. ಈ ಮಾತಿಗೆ ಹಾಡಲು ಅಥವಾ ನುಡಿಸಲು ಯೋಗ್ಯವಾದ ವಿಸ್ತಾರ ಎಂಬ ಅರ್ಥವನ್ನು ಇಟ್ಟುಕೊಂಡರೆ 66 ಅಥವಾ 145 ಕಂಪನ ಸಂಖ್ಯೆಯಿಂದ ಮೊದಲಾಗುವ ಮೂರು ಸ್ಥಾಯಿಗಳು ಎನ್ನಬೇಕಾಗುತ್ತದೆ (ಪು. 185). ಅಥವಾ ಎಲ್ಲಾ ಮಾನವ ಶಾರೀರಗಳಿಗೂ ಸಾಧಾರಣವಾದ 116.5 ರಿಂದ 932·3 ಕಂಪನ ಸಂಖ್ಯೆಯವರೆಗೆ ಇರುವ ತ್ರಿಸ್ಥಾಯಿ ವಿಸ್ತಾರ ಎನ್ನಬೇಕಾಗುತ್ತದೆ (ಪು. 267). ಅದಲ್ಲದೆ ಮಂದ್ರತಮ ಎನ್ನುವುದಕ್ಕೆ ಶಾರೀರ ಪರವಾದ ಅರ್ಥವನ್ನಲ್ಲದೆ ಶ್ರಾವ್ಯತಾಪರವಾದ ಅರ್ಥವನ್ನು ಕಲ್ಲಿನಾಥನ ಪ್ರಕಾರ ವಿವಕ್ಷಿಸಿದರೆ 32.7ರ ಕಂಪನ ಸಂಖ್ಯೆಯಿಂದ ಪ್ರಾರಂಭವಾಗಿ 261.6ರಲ್ಲಿ ಮುಗಿಯುವ ತ್ರಿಸ್ಥಾಯಿ ವ್ಯಾಪ್ತಿಯಲ್ಲಿ ಧ್ವನ್ಯಂತರಾಶ್ರುತಿ ಎಂಬ ಲಕ್ಷಣವು ಕಾರ್ಯಶೀಲವಾಗುತ್ತದೆ. ಆದರೆ ಈ ಅರ್ಥವು ಅಷ್ಟು ಸಮಂಜಸವಲ್ಲವೆಂದು ತೋರುತ್ತದೆ. ಏಕೆಂದರೆ ಈ ವಿಸ್ತಾರದಲ್ಲಿ ಸುಮಾರು ಪ್ರಥಮಾರ್ಧದಷ್ಟು ಅನೇಕರಿಗೆ ಶ್ರವಣಗೋಚರವೇ ಆಗಿರುವುದಿಲ್ಲ ; ಈ ವಿಸ್ತಾರದಲ್ಲಿ ಉತ್ಪನ್ನವಾಗುವ ಸ್ವರಗಳಿಗೆ ಗಾನೋಪಯೋಗಿತ್ವವು ಅಷ್ಟಾಗಿ ಇರುವುದೂ ಇಲ್ಲ. ಅಲ್ಲದೆ ಮಾನವನು ಸ್ವಕಂಠದಲ್ಲಿ ಸಾಕ್ಷಾತ್ಕರಿಸಿಕೊಳ್ಳಲಾಗದ ಹಾಗೂ ಕೇವಲ ಕೇಳಲು ಸಾಧ್ಯವಾದ, ನಾದಪ್ರದೇಶದಲ್ಲಿ ಇಂತಹ ಶ್ರುತಿಗಳನ್ನು ಸಂಗೀತದ ಮೂಲಭೂತದ್ರವ್ಯವನ್ನಾಗಿ ಪಡೆದಿರುತ್ತಾನೆಂಬುದು ಅಸಂಭವವಾಗಿ ತೋರುತ್ತದೆ. ಇದು ಏನೇ ಇರಲಿ, ನಾದವಿಜ್ಞಾನದಲ್ಲಿಯೂ ಮಂದ್ರತಮಧ್ವಾನದಿಂದಲೇ ಪ್ರಾರಂಭಿಸಿ ಇಂತಹ ಶ್ರುತಿಗಳನ್ನು ಪಡೆಯುವ ಕ್ರಮವಿದೆಯೆಂಬುದು ಇಲ್ಲಿ ಚಿಂತ್ಯವಾದುದು ; ಮಂದ್ರತಮ ಎಂಬುದನ್ನು ಇಲ್ಲಿ ಶ್ರವಣಸಾಮರ್ಥ್ಯಪರವಾದ ಅರ್ಥದಲ್ಲಿ ಇಟ್ಟುಕೊಳ್ಳಲಾಗಿದೆ.

### 6. ಧ್ವನಿನೈಲಕ್ಷಣ್ಯವಿವೇಚನಾಶಕ್ತಿ

How many differences in pitch can the average person hear ? This is determined by starting with the lowest audible pitch and proceeding step by step in terms of just noticeable differences ( j.n.d.)[338]

338 ಅದೇ ಗ್ರಂಥ, ಪು. 60.

ಈ ಪದ್ಧತಿಯನ್ನೇ ಪವರ್ ಮತ್ತು ಬಿಡ್ಡಲ್ಫ್, ಲೂಇಸ್, ಕ್ನೂಡ್ಸೆನ್, ಮೊದಲಾದ ನಾದವಿಜ್ಞಾನಿಗಳು ಬಳಸಿದ್ದಾರೆ.

ಎರಡನೆಯದಾಗಿ, ಮೇಲೆ ಹೇಳಿದ ನಾದಪ್ರದೇಶಗಳಲ್ಲಿ ಶ್ರೋತ್ರೇಂದ್ರಿಯವು ಎಷ್ಟರಮಟ್ಟಿನ ಸಾಮರ್ಥ್ಯವನ್ನು ಪಡೆದಿದೆ? ಈ ಸಾಮರ್ಥ್ಯವನ್ನು ಧ್ವನಿವೈಲಕ್ಷಣ್ಯವಿವೇಚನಾಶಕ್ತಿ (pitch discrimination) ಎಂದು ಕರೆಯಬಹುದು. ಇದನ್ನು ಅಭಿನವಗುಪ್ತನು 'ಶ್ರುತಿಶ್ಚನಾಮ ಶ್ರೋತ್ರಗಮ್ಯಂ ವೈಲಕ್ಷಣ್ಯಂ ಯಾವತಾ ಶಬ್ದೇನೋತ್ಪದ್ಯತೇ'[96] (ಪು. 358) ಎಂಬ ನಿಸ್ಸಂದಿಗ್ಧವಾದ ಮಾತುಗಳಲ್ಲಿ ಸಾವಿರವರ್ಷಗಳ ಹಿಂದೆಯೇ ಹೇಳಿದ್ದಾನೆ. ಸಂಗೀತದ ವಿಷಯದಲ್ಲಿ ಹೇಳುವುದಾದರೆ ಸಾಧಕನು (ಎಂದರೆ ಈ ಪ್ರಯೋಗವನ್ನು ಕೈಗೊಳ್ಳುವವನು) ಈ ವಿಧದ ಕನಿಷ್ಠನಾದಾಂತರಗಳನ್ನು ಕೇಳಬಲ್ಲ ಹಾಗೂ ಉತ್ಪಾದಿಸಬಲ್ಲ ಸಾಮರ್ಥ್ಯವನ್ನು ಪಡೆದಿರಬೇಕು.

ಧ್ವನಿವೈಲಕ್ಷಣ್ಯ ವಿವೇಚನಾ ಶಕ್ತಿಯು ಹಲವು ಸಂಗತಿಗಳಿಗೆ ಸಂಬಂಧಿತವಾಗಿದೆ. ಉದಾಹರಣೆಗೆ, ವಯೋಧರ್ಮವು ಈ ಶಕ್ತಿಯ ಮೇಲೆ ಹೆಚ್ಚು ಪ್ರಭಾವ ಬೀರುವುದಿಲ್ಲವೆಂದು ಗೊತ್ತಾಗಿದೆ. ಚಿಕ್ಕ ಮಕ್ಕಳಿಂದ ಹಿಡಿದು ಮುದುಕರವರೆಗೆ—ಅವರ ಶ್ರೋತ್ರೇಂದ್ರಿಯವು ಆರೋಗ್ಯವಾಗಿದ್ದರೆ ಈ ಶಕ್ತಿಯು ಹೆಚ್ಚುಕಡಿಮೆ ಒಂದೇ ಆಗಿರುತ್ತದೆ. ಕಿವಿಯ ರೋಗರುಜಿನಗಳಿಂದಲೂ ಅದಕ್ಕೆ ಒದಗಬಹುದಾದ ಅಪಘಾತಗಳಿಂದಲೂ ಈ ಶಕ್ತಿಯು ಕುಂದಬಹುದು, ಅಷ್ಟೆ. ಹಾಗೆಯೇ ತರಪೇತು ಈ ವಿಷಯದಲ್ಲಿ ಹೆಚ್ಚು ಪ್ರಭಾವಬೀರುವುದಿಲ್ಲ. ಎಂದರೆ ಸಂಗೀತ ವಿದ್ವಾಂಸರು ಎಷ್ಟರಮಟ್ಟಿನ ಶಕ್ತಿಯನ್ನು ಪಡೆದಿರಬಹುದೋ, ಸಾಮಾನ್ಯ ಮನುಷ್ಯರೂ ಅಷ್ಟೇ ಪಡೆದಿರಬಹುದೆಂದು ಪ್ರಯೋಗಸಿದ್ಧವಾಗಿದೆ. ತರಪೇತಿನಿಂದ ನಾದ ಮತ್ತು ಸ್ವರಗಳ ಜ್ಞಾನವನ್ನು ವೃದ್ಧಿಮಾಡಿಕೊಂಡು ಧ್ವನಿವೈಲಕ್ಷಣ್ಯವನ್ನು ಅರಿತುಕೊಳ್ಳಲು ಸಹಾಯವಾಗಬಹುದು. ಆನುವಂಶಿಕ ಪರಂಪರೆಯಿಂದಲೂ ಈ ಶಕ್ತಿಯು ಇಳಿದುಬರಬಹುದು. ಎಂದರೆ, ಪೂರ್ವಿಕರಲ್ಲಿ ಈ ಗುಣವಿದ್ದರೆ ಆಯಾ ವ್ಯಕ್ತಿಯಲ್ಲಿಯೂ ಇದು ಇರುವ ಸಾಧ್ಯತೆಯು ಹೆಚ್ಚಾಗಿರುತ್ತದೆ. ಬುದ್ಧಿಶಕ್ತಿಗೂ ಈ ಶಕ್ತಿಗೂ ಸಂಬಂಧವಿಲ್ಲವೆಂದು ಪ್ರಯೋಗಸಿದ್ಧವಾಗಿದೆ.

ಆದರೆ ಧ್ವನಿವೈಲಕ್ಷಣ್ಯವಿವೇಚನಾ ಶಕ್ತಿಯು ಧ್ವನಿಯ ಮಟ್ಟ (ಕಂಪನಸಂಖ್ಯೆ), ಧ್ವನಿಯ ಆವೇಗ (intensity) ಸಂಕೀರ್ಣತೆ ಮತ್ತು ಆವರ್ತಕ ಸಮೃದ್ಧಿಗಳನ್ನು ಅವಲಂಬಿಸುತ್ತದೆಂದು ತಿಳಿದುಬರುತ್ತದೆ. ಮೊದಲನೆಯದಾಗಿ, ಧ್ವನಿಯು ಗೋಚರಕ್ಕೆ ಬರಬೇಕಾದರೆ ಅದಕ್ಕೆ ಕನಿಷ್ಠವೂ ನಿರ್ದಿಷ್ಟವೂ ಆದ ಪ್ರಮಾಣದ ಶಕ್ತಿಯಿರಬೇಕು, ಎಂದರೆ ಅದು ಸಾಕಷ್ಟು ಗಟ್ಟಿಯಾಗಿರಬೇಕು. ಉದಾಹರಣೆಗೆ 200 ಕಂಪನಸಂಖ್ಯೆಯ ಧ್ವನಿಯೊಂದು ಶ್ರವಣಗೋಚರವಾಗಲು ಕಡೆಯಪಕ್ಷ 23 ಡೆಸಿಬೆಲ್‌ಗಳಷ್ಟಾದರೂ ಗಟ್ಟಿಯಾಗಿರಬೇಕು; ಇದಕ್ಕಿಂತ ಕಡಿಮೆ ಆವೇಗವಾದರೆ ಅದು ಕೇಳಿಸುವುದೇ ಇಲ್ಲ. ಆದರೆ 400 ಕಂಪನಸಂಖ್ಯೆಯ ಧ್ವನಿಯು ಹತ್ತೇ ಡೆಸಿಬೆಲ್‌ಗಳ ಆವೇಗದಲ್ಲಿ ಕೇಳಿಸಬಲ್ಲದು. ಹೀಗೆ ಆವಶ್ಯಕವಾದ ಆವೇಗದ ಪ್ರಮಾಣವು ಕಂಪನಸಂಖ್ಯೆಯನ್ನು ಅವಲಂಬಿಸುತ್ತದೆ. ಕಿವಿಯ ಧ್ವನಿವೈಲಕ್ಷಣ್ಯವಿವೇಚನಾ ಶಕ್ತಿಯು 2500 ಕಂಪನಸಂಖ್ಯೆಯ ನಾದಪ್ರದೇಶದಲ್ಲಿ ತೀವ್ರವಾಗಿರುತ್ತದೆ. ಇದರ ಕೆಳಗೆ ಮತ್ತು ಮೇಲೆ ಈ ಶಕ್ತಿಯು ಕಡಿಮೆಯಾಗುತ್ತದೆ.

It is also to be noticed that the 200-cycle sound must have at least 23 db intensity before it will be audible, while a note whose frequency is, say, 400 would become audible if the intensity were only 10 db. These peculiar response phenomena are due to the inherent nature of the hearing process.[339]

339 ಕಲ್ವರ್, ಉ. ಗ್ರಂ., ಪು. 32.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

The average normal ear can hear sounds between the frequency limits of about 20 and 20,000 cycles per second. However, in order to be audible, the sound must represent a minimum amount of power; that is, the sound must have a certain intensity and this minimum depends on the frequency. The ear is most sensitive in the region of 2,500 cycles per second; for both lower and higher frequencies, the sensitivity falls off rapidly.[340]

ಇದನ್ನು ಇಲ್ಲಿ ಏಕೆ ಪ್ರಸ್ತಾಪಿಸಿದೆಯೆಂದರೆ ಧ್ವನಿಯ ಆವೇಗವು ಬದಲಾಯಿಸಿದಂತೆಲ್ಲಾ ಅದರ ವೈಲಕ್ಷಣ್ಯ ವಿವೇಚನಾಶಕ್ತಿಯೂ ಬದಲಾಯಿಸುತ್ತದೆ. ಸಾಮಾನ್ಯವಾಗಿ, ಆವೇಗವು ಹೆಚ್ಚಾದರೆ, ಎಂದರೆ ಧ್ವನಿಯು ಗಟ್ಟಿಯಾಗಿ ಕೇಳಿಸಿದರೆ ಅದರ ಕಂಪನಸಂಖ್ಯೆಯು ಅದರ ಭೌತಿಕ ವಾಸ್ತವಿಕತೆಗಿಂತ ಕಡಿಮೆಯಾಗಿರುವಂತೆ ಕಿವಿಗೆ ಕೇಳಿಸುತ್ತದೆ. ಉಚ್ಚ ಧ್ವನಿಮಟ್ಟದಲ್ಲಿ ಆವೇಗವು ಹೆಚ್ಚಾದರೆ ಧ್ವನಿಯೂ ಅದು ನಿಜವಾಗಿರುವುದಕ್ಕಿಂತ ಉಚ್ಚ ತರವಾಗಿರುವಂತೆ ಭಾಸವಾಗುತ್ತದೆ :

We judge the pitch of a pure tone, for example, to be different than might be expected from the known frequency **as the loudness level increases**. Fletcher has found that the greatest change in apparent pitch occurs in the region below middle C. He found that **in the case of a pure tone emitted by a sonorous body whose frequency was 261, the pitch dropped 1·3 semitones when the loudness was increased from 40 db to 80 db**. It is also true that the pitch of tones whose frequency is above 3500 **rises** as the loudness of the sound increases.[341]

ಗ್ಲೆನ್ ಹೇಡನ್ನನು ಈ ವಿಷಯದಲ್ಲಿ ಮತ್ತೂ ಒಂದು ಮುಖ್ಯ ಪ್ರಮೇಯವನ್ನು ಹೇಳುತ್ತಾನೆ. ನಿಯತವಾಗಿರುವ ಆವೇಗವುಳ್ಳ ಧ್ವನಿಯೊಂದರ ಕಂಪನಸಂಖ್ಯೆಯನ್ನು ಅಲ್ಪವಾದ ಪ್ರಮಾಣದಲ್ಲಿ ಏರಿಸಿ, ಇಳಿಸಿ ಬದಲಾಯಿಸಿದರೂ ಈ ವ್ಯತ್ಯಾಸವು ಶ್ರವಣಗೋಚರವಾಗುವುದಿಲ್ಲ; ಈ ಪ್ರಮಾಣಕ್ಕೆ ಧ್ವನಿಯ ಅಗಲವೆಂದು ಹೆಸರು. ಇದರಿಂದ ಆಚೆಗೆ ಧ್ವನಿವೈಲಕ್ಷಣ್ಯವು ಸ್ಫುಟವಾಗಿಯೂ ಅಧಿಕವಾಗಿಯೂ ಗೋಚರಿಸುತ್ತದೆ :

The intensity of the tones is also a factor. The most important practical consideration is that tones have a certain *breadth*. That is, the frequency of a given tone may vary within certain limits without a perceptible change in pitch. Beyond the frequency limits mentioned, the percentage of change in frequency increases to a marked degree.[342]

ರಿವೆಜ್‌ನು ಧ್ವನಿಯ ಆವೇಗಕ್ಕೂ ಧ್ವನಿವೈಲಕ್ಷಣ್ಯವಿವೇಚನಾಶಕ್ತಿಗೂ ಇರುವ ಸಂಬಂಧವನ್ನು ಪ್ರಸಿದ್ಧವಾದ ನಿಯಮವೊಂದರಲ್ಲಿ ಹೇಳುತ್ತಾನೆ; ಇದರ ಪ್ರಕಾರ ಧ್ವನಿಯು ಆವೇಗದ ಹೊಸ್ತಿಲು ಪಡೆದಿರುವ ಉಚ್ಚತೆಗೂ ಧ್ವನಿವೈಲಕ್ಷಣ್ಯವಿವೇಚನಾಶಕ್ತಿಗೂ ವಿಲೋಮಸಂಬಂಧವಿದೆ. ಎಂದರೆ ನೀಚವಾದ ಪ್ರದೇಶದಲ್ಲಿ ಈ ಶಕ್ತಿಯು ವಿಶೇಷವಾಗಿಯೂ ಉಚ್ಚನಾದಪ್ರದೇಶದಲ್ಲಿ ಅಲ್ಪವಾಗಿಯೂ ಇರುತ್ತದೆ :

340 ಅದೇ ಗ್ರಂಥ ಪು. 32-33. 341 ಅದೇ ಗ್ರಂಥ, ಪು. 48. 342 ಗ್ಲೇನ್ ಹೇಡನ್, ಉ. ಗ್ರಂ., ಪು. 71.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

The threshold of intensity is used to test the acuity of hearing. The acuity of hearing is defined by the absolute threshold of audibility. By absolute threshold we understand the minimum effective sound that is capable of evoking a just discernible auditory sensation. If the threshold of intensity is low, then the acuity of hearing is great and vice versa. Consequently we have the law : *The acuity of hearing is inversely proportional to the height of the threshold of intensity.*[343]

ಆವೇಗದ ಹೊಸ್ತಿಲನ್ನು ಹೀಗೆ ಕಂಡುಹಿಡಿಯಬಹುದು : ಒಂದೇ ಕಂಪನಸಂಖ್ಯೆಯುಳ್ಳ ಎರಡು ಧ್ವನಿಗಳು ಒಂದೇ ಆವೇಗದಲ್ಲಿರುವಂತೆ ಮೊದಲು ಉತ್ಪಾದಿಸಬೇಕು. ಇವುಗಳಲ್ಲಿ ಸಮಾನತೆಯು ಕಿವಿಗೆ ಅಭ್ಯಾಸವಾದನಂತರ, ಈ ಧ್ವನಿಗಳಲ್ಲಿ ಒಂದರ ಆವೇಗವನ್ನು ಸ್ವಲ್ಪಸ್ವಲ್ಪವಾಗಿ ಹೆಚ್ಚಿಸುತ್ತಾ ಬರಬೇಕು. ಇನ್ನೊಂದು ಧ್ವನಿಯು ಮೊದಲನೆಯದಕ್ಕಿಂತ ಹೆಚ್ಚಾಗಿದೆ ಎಂದು ತಿಳಿಯುವವರೆಗೆ ಮಾತ್ರ ಈ ಪ್ರಮಾಣವನ್ನು ಹೆಚ್ಚಿಸುತ್ತಾ ಬರಬೇಕು. ಯಾವ ಅತ್ಯಲ್ಪ ಪ್ರಮಾಣದಿಂದ ಈ ಆವೇಗದ ಆಧಿಕ್ಯವು ಗೋಚರವಾಗುವುದೋ ಅದೇ ಆವೇಗದ ಹೊಸ್ತಿಲು. ಈ ನಿಯಮದಿಂದ ಈ ಸಂಗತಿಯು ಹೀಗೆ ಸಿದ್ಧಪಡುತ್ತದೆ : ಯಾವ ವ್ಯಕ್ತಿಗೆ ಧ್ವನಿಯ ಆವೇಗದಲ್ಲಿ ಅಧಿಕ್ಯವು ಗೋಚರವಾಗಬೇಕಾದರೆ ಅಲ್ಪಪ್ರಮಾಣವು ಬೇಕಾಗುತ್ತದೆಯೋ ಅವನ ಧ್ವನಿವೈಲಕ್ಷಣ್ಯವಿವೇಚನಾಶಕ್ತಿಯು ಅಧಿಕವಾಗಿರುತ್ತದೆ; ಯಾವ ವ್ಯಕ್ತಿಗೆ ಧ್ವನಿಯ ಆವೇಗದ ಆಧಿಕ್ಯವು ಗೋಚರವಾಗಬೇಕಾದರೆ ಅಧಿಕಪ್ರಮಾಣವು ಬೇಕಾಗುತ್ತದೆಯೋ ಅವನ ಧ್ವನಿವೈಲಕ್ಷಣ್ಯವಿವೇಚನಾಶಕ್ತಿಯು ಅಲ್ಪವಾಗಿರುತ್ತದೆ. ಧ್ವನಿಯ ಶ್ರೋತ್ರೇಂದ್ರಿಯ ಗ್ರಾಹ್ಯತೆಯು ಅದರ ಆವೇಗದಿಂದ ಪ್ರಭಾವಿತವಾಗುತ್ತದೆಂದು ಈಗಾಗಲೇ ಹೇಳಿದೆಯಷ್ಟೆ. ಆದುದರಿಂದ ಯಾವ ಧ್ವನಿಯ ಆವೇಗದ ಹೆಚ್ಚಳದಲ್ಲಿ ಒಂದು ಧ್ವನಿಯ ಎಂದರೆ ಕಂಪನಸಂಖ್ಯೆಯ ಅಥವಾ ಆಯಾ ನಾದಪ್ರದೇಶದ ಗೋಚರವಾಗುತ್ತದೆಯೋ ಅಲ್ಲಿ ಧ್ವನಿವೈಲಕ್ಷಣ್ಯದ ವಿವೇಚನಾಶಕ್ತಿಯು ಕಡಿಮೆಯಾಗಿರುತ್ತದೆ. ಅಲ್ಪವಾದ ಆವೇಗದಲ್ಲಿಯೇ ಕಂಪನಸಂಖ್ಯೆಯು ಗೋಚರವಾದರೆ ಆ ಪ್ರದೇಶದಲ್ಲಿ ಬಹುವಾಗಿ ಧ್ವನಿವೈಲಕ್ಷಣ್ಯಗಳನ್ನು ಗುರುತಿಸಬಹುದು.

ಸೀಷೋರನು ಈ ಸಂಬಂಧದಲ್ಲಿ ಇನ್ನೂ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತಾನೆ. ಧ್ವನಿವೈಲಕ್ಷಣ್ಯ ವಿವೇಚನಾಶಕ್ತಿಯು ಕಂಪನಸಂಖ್ಯೆಯೊಡನೆಯೂ ಆವೇಗದೊಡನೆಯೂ ಸುವ್ಯವಸ್ಥಿತ ರೀತಿಯಲ್ಲಿ ಬದಲಾಯಿಸುತ್ತದೆಂಬುದನ್ನು ಬಿಡ್ಡಲ್ಫ್ ಮತ್ತು ಷವರ್‌ರವರ ಪ್ರಯೋಗಗಳಿಂದ ಉದಾಹರಿಸಿ ಹೇಳುತ್ತಾನೆ.[344] ಇದನ್ನು ಪ್ರಕೃತ ಸಂದರ್ಭಕ್ಕೆ ಅಳವಡಿಸಿಕೊಂಡು ಕೆಳಗೆ ನಕ್ಷೆ (3)ರಲ್ಲಿ ಕೊಟ್ಟಿದೆ. ಇದರ ಪ್ರಕಾರ ಧ್ವನಿವೈಲಕ್ಷಣ್ಯವಿವೇಚನಾಶಕ್ತಿಯು ಅಲ್ಪಕಂಪನಸಂಖ್ಯೆಯ ಧ್ವನಿಗಳಲ್ಲಿ ಅಲ್ಪವಾಗಿಯೂ 1000 ಕಂಪನಸಂಖ್ಯೆಗಿಂತ ಹೆಚ್ಚಾದ ನಾದ ಪ್ರದೇಶದಲ್ಲಿ ಅಧಿಕವಾಗಿಯೂ ಇರುತ್ತದೆ; ಈ ಸಂಬಂಧವು ವ್ಯವಹಾರ ಪ್ರಯೋಜಕವಾದ ಎಲ್ಲಾ ಧ್ವನಿ ಆವೇಗ ಪ್ರಮಾಣಗಳಿಗೂ ಅನ್ವಯಿಸುತ್ತದೆ; ಆದರೆ ಆವೇಗವು ಹೆಚ್ಚಾದಷ್ಟೂ ಈ ಶಕ್ತಿಯೂ ಹೆಚ್ಚಾಗಿ ಇರುತ್ತದೆ; ಎಂದರೆ ಧ್ವನಿಯು ಜೋರಾಗಿ ಕೇಳಿಸಿದಷ್ಟೂ ಅದರಲ್ಲಿ ವೈಲಕ್ಷಣ್ಯಗಳನ್ನು ಗುರುತಿಸುವುದು ಸುಲಭವಾಗುತ್ತದೆ.

343 ರೆವೆಜ್, ಉ. ಗ್ರಂ., ಪು. 7.

344 Shower, E. G., and Biddulph, R., Differential pitch sensitivity of the ear, Journal of the Acoustic Society of America, II, 1931, pp. 330-371, *extr.*, Seashore, *op.cit.* pp. 59-60.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಅಷ್ಟೇ ಅಲ್ಲದೆ ಆವರ್ತಕ ಸಮೃದ್ಧಿಯು ಹೆಚ್ಚಾದಷ್ಟೂ ಧ್ವನಿವೈಲಕ್ಷಣ್ಯ ವಿವೇಚನಾಶಕ್ತಿಯೂ ಹೆಚ್ಚುತ್ತದೆ. ಈ ಸಂಬಂಧವು ಸಮೃದ್ಧಿಯ ಸ್ವಭಾವ ಮತ್ತು ಪ್ರಮಾಣಗಳನ್ನು ಅವಲಂಬಿಸುತ್ತದೆ.

## 7. ಕಂಪನ ಸಂಖ್ಯೆ ಮತ್ತು ಧ್ವನಿವೈಲಕ್ಷಣ್ಯವಿವೇಚನಾ ಶಕ್ತಿ

ಇನ್ನು ಕಂಪನಸಂಖ್ಯೆಗೂ ಧ್ವನಿವೈಲಕ್ಷಣ್ಯ ವಿವೇಚನಾಶಕ್ತಿಗೂ ಇರುವ ಸಂಬಂಧವನ್ನು ಪರೀಕ್ಷಿಸಬಹುದು; ಎಂದರೆ ಕಿವಿಯು ಎಷ್ಟು ಅಲ್ಪಾಂತರಗಳಲ್ಲಿ, ಎಂದರೆ ಧ್ವನ್ಯಂತರಾಶ್ರುತಿಯಲ್ಲಿ ಧ್ವನಿವೈಲಕ್ಷಣ್ಯವನ್ನು ಗುರುತಿಸ ಬಲ್ಲದು, ಎಂದರೆ ಇಂತಹ ಎಷ್ಟು ಶ್ರುತಿಗಳು ಕೇಳಿಸುತ್ತವೆ, ಎಂದು ವಿವೇಚಿಸಬಹುದು.




ನಕ್ಷೆ (3)

### ಧ್ವನಿಯ ಆವೇಗಕ್ಕೂ ಧ್ವನಿವೈಲಕ್ಷಣ್ಯಗ್ರಹಣಶಕ್ತಿಗೂ ಇರುವ ಸಂಬಂಧ

ನಕ್ಷೆ (3) ರಲ್ಲಿ ಧ್ವನಿಯ ಆವೇಗವು ವ್ಯತ್ಯಾಸವಾದಂತೆಲ್ಲಾ ಧ್ವನಿವೈಲಕ್ಷಣ್ಯಗ್ರಹಣಶಕ್ತಿಯೂ ಯಾವ ಪ್ರಮಾಣದಲ್ಲಿ ವ್ಯತ್ಯಾಸವಾಗುವುದೆಂಬುದನ್ನು ಪ್ರಯೋಗ ಫಲಿತಾಂಶಗಳಿಂದ ತೋರಿಸಿದೆ. ಒಂದೇ ಕಂಪನ ಸಂಖ್ಯೆ ಯನ್ನು ಆಧಾರವಾಗಿ ಪಡೆದು ಅದನ್ನು ವಿವಿಧ ಆವೇಗಗಳಲ್ಲಿ (ಮೆಲ್ಲಗೆ, ಗಟ್ಟಿಯಾಗಿ, ಇತ್ಯಾದಿಯಾಗಿ) ಉತ್ಪಾದಿಸಿ ಆಯಾ ಆವೇಗದಲ್ಲಿರುವಾಗ ಧ್ವನಿವೈಲಕ್ಷಣ್ಯವನ್ನು ಗ್ರಹಿಸಬೇಕಾದರೆ ಆಯಾ ಕಂಪನಸಂಖ್ಯೆಯನ್ನು ಕನಿಷ್ಠಪಕ್ಷ ಪೂರ್ಣಸ್ವರವೊಂದರ ಎಷ್ಟು ಶತಾಂಶಗಳಷ್ಟು ಹೆಚ್ಚಿಸಬೇಕು ಎಂಬುದನ್ನು ಈ ನಕ್ಷೆಯು ತೋರಿಸುತ್ತದೆ. ಒಂದೇ ಆವೇಗಕ್ಕೆ ವಿವಿಧ ಕಂಪನ ಸಂಖ್ಯೆಗಳಲ್ಲಿ ಪ್ರಯೋಗವನ್ನು ನಡೆಸಿ ಫಲಿತಾಂಶಗಳನ್ನು ಇಲ್ಲಿ ಸಂಗ್ರಹಿಸಿದೆ. ಹೀಗೆ ಒಂದೇ ಕಂಪನ ಸಂಖ್ಯೆಯನ್ನು ವಿವಿಧ ಆವೇಗಗಳಲ್ಲಿ ಬೇರೆ ಧ್ವನಿಯೆಂದು ಗುರುತಿಸಬೇಕಾದರೆ ಎಷ್ಟು ಹೆಚ್ಚಿಸ

ಬೇಕು ಎಂದು ಹೋಲಿಸಿ ತಿಳಿದುಕೊಳ್ಳಲು ಇದು ಸಹಕಾರಿಯಾಗಿದೆ. A,B,C,D ಮತ್ತು E ರೇಖೆಗಳನ್ನು ಕ್ರಮವಾಗಿ 5, 10, 20, 40 ಮತ್ತು 60 ಡೆಸಿಬೆಲ್ಲುಗಳ ಆವೇಗಕ್ಕೆ ಲೆಕ್ಕಿಸಿ ಎಳೆದಿದೆ. ಹೀಗೆ, ಉದಾಹರಣೆಗೆ 62 ಕಂಪನಸಂಖ್ಯೆಯನ್ನು ಷಡ್ಜವೆಂದಿಟ್ಟುಕೊಂಡರೆ, ಪಂಚಶ್ರುತಿರಿಷಭದವರೆಗೆ ಇರುವ ಅಂತರದಲ್ಲಿ ಧ್ವನಿವೈಲಕ್ಷಣ್ಯವನ್ನು ಗುರುತಿಸಬೇಕಾದರೆ 5 ಡೆಸಿಬೆಲ್ ಆವೇಗದಲ್ಲಿ ಈ ಪ್ರಮಾಣದ ಶೇಕಡ ಆರರಷ್ಟು ಹೆಚ್ಚಿಸಬೇಕಾಗುತ್ತದೆ. ಇದೇ ರೀತಿಯಲ್ಲಿ 250 ಕಂಪನಸಂಖ್ಯೆಯನ್ನು ಷಡ್ಜವೆಂದಿಟ್ಟುಕೊಂಡರೆ ಧ್ವನಿವೈಲಕ್ಷಣ್ಯವನ್ನು ಗುರುತಿಸಲು 5 ಡೆಸಿಬೆಲ್ (db) ಆವೇಗದಲ್ಲಿ ಪೂರ್ಣ ಸ್ವರದ 0.28 ರಷ್ಟೂ (ಸುಮಾರು ಕಾಲುಭಾಗದಷ್ಟು)10 db ಆವೇಗದಲ್ಲಿ 0.18 ರಷ್ಟೂ (ಸುಮಾರು ಐದರಲ್ಲಿ ಒಂದರಷ್ಟು), 20 db, 40 db ಮತ್ತು 60 db ಆವೇಗಗಳಲ್ಲಿ ಪೂರ್ಣಸ್ವರದ 25 ರಲ್ಲಿ 2 ಭಾಗಗಳಿಂದ 17 ರಲ್ಲಿ 2 ಭಾಗಗಳ ಮಧ್ಯದಲ್ಲಿಯೂ ಹೆಚ್ಚಿಸಬೇಕಾಗುತ್ತದೆ.

ಇದು ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಾಗುವಂತಹುದು ಎಂದು ಆಧುನಿಕ ನಾದವಿಜ್ಞಾನ ಪ್ರಯೋಗ ಫಲಿತಾಂಶಗಳಿಂದ ತಿಳಿದುಬರುತ್ತದೆ. ಸಾಮಾನ್ಯವಾದ, ಆಯ್ಕೆಮಾಡದ, ವಯಸ್ಕರ ಗುಂಪಿನಲ್ಲಿ 435 ಕಂಪನಸಂಖ್ಯೆಯು ನಾದಪ್ರದೇಶದಲ್ಲಿ ಸರಾಸರಿಯಲ್ಲಿ ಪೂರ್ಣಸ್ವರವೊಂದರ (ಉದಾಹರಣೆಗೆ ಪಂಚಮ-ಪಂಚಶ್ರುತಿ ಧೈವತದ ಅಂತರದ) $\frac{1}{17}$ ರಷ್ಟು ಧ್ವನಿವೈಲಕ್ಷಣ್ಯವನ್ನು ಗುರುತಿಸಬಹುದೆಂದೂ, ಸೂಕ್ಷ್ಮಶ್ರವಣವಿರುವ ಸಾಮಾನ್ಯರೂ ಸಹ ಅದರ $\frac{1}{100}$ ರಷ್ಟು ಗುರುತಿಸಬಹುದೆಂದೂ ಸೀಷೋರ್ ತಿಳಿಸುತ್ತಾನೆ.[345] ಕೆಲವರು ಅರ್ಧಸ್ವರದಷ್ಟು ವಿಸ್ತಾರವನ್ನೇ ಗುರುತಿಸದೆ ಹೋಗಬಹುದೆಂದೂ ತಿಳಿದುಬರುತ್ತದೆ. ಇದು ನಮ್ಮ ಅನುಭವದಲ್ಲಿ ಇರುವಂತಹುದೇ. ರಸಿಕರಾದ, ಸೂಕ್ಷ್ಮಶ್ರವಣಶಕ್ತಿಯಿರುವ, ಆದರೆ ಸಂಗೀತಭ್ಯಾಸವೇ ಮಾಡದಿರುವ ಕೆಲವರು ಗಮಕಮೂಲವಾದ ಸ್ವರಛಾಯೆಗಳನ್ನು ಗುರುತಿಸುವುದೂ, ಪ್ರತಿಭಾವಂತರಲ್ಲದ ಬಾಲಸಂಗೀತಾಭ್ಯಾಸಿಗಳು ಶುದ್ಧರಿಷಭ, ಶುದ್ಧ ಧೈವತದ ಪ್ರಮಾಣಗಳನ್ನು ಹಾಡಲು ಶ್ರಮಿಸುವುದೂ ತಿಳಿದ ವಿಷಯವೇ ಆಗಿದೆ. ಸ್ಟುಕರನು ವಿಯನ್ನಾ ನಗರದ ರಾಯಲ್ ಅಪೆರಾ ಎಂಬ ಜಗದ್ವಿಖ್ಯಾತ ಸಂಗೀತಸಂಸ್ಥೆಯಲ್ಲಿ ಉದ್ಯೋಗಮಾಡುವ ಸಂಗೀತ ವಿದ್ವಾಂಸರ ಪೈಕಿ ಹದಿನಾರು ಮಂದಿಯಲ್ಲಿ ಈ ವಿಷಯದಲ್ಲಿ ನಡೆಸಿದ ಪ್ರಯೋಗಗಳನ್ನೂ ಸಿಷೋರನು ಉದ್ಧರಿಸುತ್ತಾನೆ. 54 ಕಂಪನಸಂಖ್ಯೆಯು ಪ್ರಮಾಣವಿರುವ ಸ್ವರವೊಂದನ್ನು ಆಧಾರ ಮಾಡಿಕೊಂಡಾಗ ಈ ವಿದ್ವಾಂಸರು ಈ ಸಂಖ್ಯೆಯಷ್ಟು ಕಂಪನಗಳ ವ್ಯತ್ಯಾಸಗಳನ್ನು ಗುರುತಿಸಲು ಶಕ್ಯರಾದರು : 1) 0.2, 2) 0.2, 3) 0.2, 4) 0.2, 5) 0.3, 6) 0.3, 7) 0.4, 8) 0.5, 9) 0.5, 10) 0.6, 11) 0.8, 12) 0.8, 13) 0.9 14) 0.9, 15) 1.1 ಮತ್ತು 16) 1.1; ಎಂದರೆ ಮೊದಲನೆಯವನು ಪೂರ್ಣಸ್ವರದ 1/540 ರಷ್ಟು, ಮುಂದಿನ ಮೂರು ಜನರು 1/270 ರಷ್ಟು ಐದು, ಆರನೆಯವರು ಅದರ 1/180ರಷ್ಟು, ಏಳನೆಯವನು 1/135ರಷ್ಟು, ಎಂಟು, ಒಂಭತ್ತನೆಯವರು 1/108 ರಷ್ಟು, ಹತ್ತನೆಯವನು 1/90 ರಷ್ಟು, ಹನ್ನೊಂದು, ಹನ್ನೆರಡನೆಯವರು 2/135 ರಷ್ಟು, ಹದಿಮೂರು, ಹದಿನಾಲ್ಕನೆಯವರು 1/60 ರಷ್ಟು ಮತ್ತು ಕಡೆಯ ಇಬ್ಬರು 1/49 ರಷ್ಟು ಧ್ವನಿವೈಲಕ್ಷಣ್ಯಗಳನ್ನು ಗುರುತಿಸಲು ಸಾಧ್ಯವಾಯಿತು.[346]

ಕಲ್ಪರನು ಸೂಕ್ಷ್ಮಶ್ರವಣಶಕ್ತಿಯಿರುವ ಪಿಯಾನೋ ವಾದ್ಯವನ್ನು ಶ್ರುತಿ ಮಾಡುವವನೂ ಸಹ, ಎಂದರೆ ಸಂಗೀತದಲ್ಲಿ ತರಪೇತಿಲ್ಲದೆ, ಕೇವಲ ಈ ನಾದಾಂತರಗಳಲ್ಲಿ ಮಾತ್ರ ಪರಿಶ್ರಮವಿರುವವನೂ ಸಹ, ಸ್ವರವೊಂದರ 1/50 ರಷ್ಟು ವ್ಯತ್ಯಾಸವನ್ನು ಎಂದರೆ ಸ್ಥಾಯಿಯ ವಿಸ್ತಾರದಲ್ಲಿ 600 ರಷ್ಟು ಇಂತಹ ಧ್ವನಿವೈಲಕ್ಷಣ್ಯಗಳನ್ನು ಗುರುತಿಸಬಲ್ಲನೆಂದು ತಿಳಿಸುತ್ತಾನೆ; ಅಷ್ಟೇ ಅಲ್ಲ, ಪ್ರಯೋಗ ಸಂದರ್ಭಗಳು ಅನುಕೂಲವಾಗಿದ್ದರೆ ಸ್ಥಾಯಿಯ

345 ಸೀಷೋರ್, ಉ.ಗ್ರಂ., ಪು. 56. 346 ಅದೇ ಗ್ರಂಥ, ಪು. 57.

ವಿಸ್ತಾರದಲ್ಲಿ ಇಂತಹ 2,400 ಧ್ವನ್ಯಂತರಗಳನ್ನು ಗುರುತಿಸಬಹುದೆಂದೂ ತಿಳಿದುಬರುತ್ತದೆ;[347] ತರಪೇತಿಗೂ ಇದಕ್ಕೂ ಸಂಬಂಧವಿಲ್ಲವೆಂದು ಸೀಷೋರನು ಅಭಿಪ್ರಾಯಪಟ್ಟರೆ, ಅನುಭವವೂ ತರಪೇತೂ ಇದ್ದರೆ ಈ ಶಕ್ತಿಯು ಹೆಚ್ಚುತ್ತದೆಂದೂ, ತರಪೇತಿಲ್ಲದ ಕಿವಿಗೂ ಕೆಲವು ವೇಳೆ ಈ ಶಕ್ತಿಯು ಅಸಾಧಾರಣವಾಗಿ ಅಧಿಕವಾಗಿರುತ್ತದೆಂದೂ ಕಲ್ವರನು ಹೇಳುತ್ತಾನೆ :

While such marked acuteness is to a great extent a matter of training and experience, it is surprising to note how small a pitch differential can be recognized even by the untrained ear.[347]

ರೆವೆಜ್ ಶ್ರಾವ್ಯತಾಗೋಚರದ ಮೇಲಿನ ಮತ್ತು ಕೆಳಗಿನ ಹೊಸ್ತಿಲಲ್ಲಿ ಧ್ವನಿವೈಲಕ್ಷಣ್ಯ ವಿವೇಚನಾಶಕ್ತಿಯು ಮಂದವಾಗಿರುತ್ತದೆಂದೂ ಸಂಗೀತೋಪಯೋಗಿಯಾದ ನಾದವಿಸ್ತಾರದ ಮಧ್ಯಪ್ರದೇಶದಲ್ಲಿ ಇದು ಅಧಿಕವಾಗಿರುವುದೆಂದೂ ತಿಳಿಸುತ್ತಾನೆ :

Within the auditory sensation area we can distinguish a very large number of notes one from another, but the ability to discriminate the difference in pitch between two notes depends greatly on the pitch of the notes chosen for the test. In the region of the lower or upper threshold of audibility, differential pitch hearing is conspicuously slight. In these extreme limits of the audible tone series we can discriminate relatively few notes. On the other hand, pitch discriminability within the middle range is very great. For instance, with notes between 130 vibrations (c) and 1046 vibrations per second ($c^3$) a difference of about 0·5 vibration is still perceptible, while with notes above 3,000 vibrations the differential threshold amounts to 10 vibrations. Yet notes in the upper limits of the musical range cannot be discriminated even though the frequencies differ by thousands. Notes with frequencies 128 and 129 vibrations can easily be discriminated, whereas those with frequencies of 15,000 and 16,000 vibrations per second are no longer discriminable.[348]

ಮಾನವನ ಶ್ರಾವ್ಯಗೋಚರದ ಪರಿಮಿತಿಯಲ್ಲಿ ಎಷ್ಟು ಧ್ವನ್ಯಂತರಗಳು ಅಥವಾ ಧ್ವನಿವೈಲಕ್ಷಣ್ಯಗಳು ಕೇಳಿಸುತ್ತವೆ ಎಂಬುದನ್ನು ಲೂಇಸ್ ಮತ್ತು ಕ್ನೂಡ್‌ಸೆನ್‌ರವರ ಪ್ರಯೋಗಫಲಿತಾಂಶಗಳಿಂದ ತಿಳಿಯಬಹುದು. ಪ್ರಯೋಗಶಾಲೆಯ ಸಂದರ್ಭಗಳು ಆದರ್ಶವಾದವುಗಳೆಂದೂ ಆದುದರಿಂದ ಪ್ರಯೋಗಶಾಲೆಯ ಹೊರಗೆ ಈ ಫಲಿತಾಂಶಗಳು ಸ್ವಲ್ಪ ವ್ಯತ್ಯಾಸವಾಗಬಹುದೆಂಬುದನ್ನೂ ಗಮನಿಸಬೇಕು. ಈ ಧ್ವನಿವೈಲಕ್ಷಣ್ಯಗಳ ಸಂಖ್ಯೆಯು ನಾಲ್ಕು ಸಂಗತಿಗಳನ್ನು ಅವಲಂಬಿಸುತ್ತದೆ : (1) ವ್ಯಕ್ತಿಗತ ವ್ಯತ್ಯಾಸಗಳು (2) ಧ್ವನಿಯ ಆವೇಗ (3) ಧ್ವನಿಯ ಕಾಲ ಅಥವಾ ಆಯಸ್ಸು (4) ಆವರ್ತಕಸಂಪತ್ತಿ. ಉಳಿದೆಲ್ಲ ವಿಷಯಗಳು ಸಮನಾಗಿರುವಾಗ ಮಧ್ಯಮವಾಗಿರುವ ಆವೇಗದಲ್ಲಿ ಸುಮಾರು 1400 ಧ್ವನಿವೈಲಕ್ಷಣ್ಯಗಳನ್ನು ಗುರುತಿಸಬಹುದೆಂದು ಲೂಯಿಸ್ ಮತ್ತು ಕ್ನೂಡ್‌ಸೆನ್

347 ಕಲ್ವರ್, ಉ.ಗ್ರಂ., ಪು. 47 348 ರೆವೆಜ್, ಉ.ಗ್ರಂ., ಪು. 9-10.

ರವರ ಪ್ರಯೋಗಗಳಿಂದ ತಿಳಿದುಬರುತ್ತದೆ. ಈ ಪ್ರಯೋಗಗಳ ಫಲಿತಾಂಶಗಳನ್ನು ನಕ್ಷೆ (4) ಮತ್ತು ನಕ್ಷೆ (5) ರಲ್ಲಿ ಪ್ರಕೃತಸಂದರ್ಭಕ್ಕೆ ಅಳವಡಿಸಿಕೊಂಡು ಇಲ್ಲಿ ಕೊಟ್ಟಿದೆ.




ನಕ್ಷೆ (4)

ಲಾಸ್‌ಏಂಜಲೀಸ್‌ನ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಡಾ|| ಕ್ನೂಡ್‌ಸೆನ್‌ನ್ನನ ಪ್ರಯೋಗದಂತೆ ಅಲ್ಪ ಕಂಪನಸಂಖ್ಯೆಯ ನಾದಪ್ರದೇಶದಲ್ಲಿ ಧ್ವನಿವೈಲಕ್ಷಣ್ಯ ವಿವೇಚನಾಶಕ್ತಿಯೂ ಅಲ್ಪವಾಗಿಯೇ ಇರುತ್ತದೆ. ಈ ಶಕ್ತಿಯು ಅತ್ಯಧಿಕವಾಗಿರುವುದು 500 ರಿಂದ 4000 ರವರೆಗಿನ ಕಂಪನ ಸಂಖ್ಯೆಯ ನಾದಪ್ರದೇಶ ದಲ್ಲಿ. ಈ ಪ್ರದೇಶದಲ್ಲಿ ಕಿವಿಯು ಸ್ಥಾಯಿಯಲ್ಲಿ ಸುಮಾರು 192 ಧ್ವನ್ಯಂತರಗಳನ್ನು ಗುರುತಿಸಬಲ್ಲದು.

## 8. ಅಧುನಿಕ ಸಂಶೋಧನೆಯ ಅಗತ್ಯ

ಶಾರ್ಙ್ಗದೇವನು ವಿಧಿಸುವ ಮಂದ್ರತಮಧ್ಯಾನಕ್ಕೂ ವೀಣಾತಂತಿಯು ಧ್ವನಿವರ್ಧನವಿಲ್ಲದೆ ಉತ್ಪಾದಿಸಬಲ್ಲ ಆವೇಗಕ್ಕೂ ಪರಸ್ಪರವಾಗಿ ಸುಮಾರು ಇಪ್ಪತ್ತೆರಡು ಧ್ವನಿವೈಲಕ್ಷಣ್ಯಗಳೇ ಈ ಪ್ರಯೋಗಗಳಿಂದಲೂ ಸಿದ್ಧಿಸುತ್ತ ವೆಂಬುದು ಆಶ್ಚರ್ಯಕರವೂ ಅಭಿಮಾನಾಸ್ಪದವೂ ಆಗಿದೆ. ಈ ಪ್ರದೇಶದಲ್ಲಿ ಧ್ವನಿವೈಲಕ್ಷಣ್ಯವಿವೇಚನಾಶಕ್ತಿಯು ಕಡಿಮೆಯಾಗಿದ್ದರೂ ಸುಮಾರು 0.5 ರಷ್ಟು ಕಂಪನಸಂಖ್ಯೆಯ ಅಂತರವನ್ನು ಗುರುತಿಸಬಹುದು ; ಉಚ್ಚತರವಾದ ನಾದಪ್ರದೇಶಗಳಲ್ಲಿ ಈ ಸಂಖ್ಯೆಯು ಅಧಿಕವಾಗಿ ದೊರೆತರೂ ಇವುಗಳಲ್ಲಿ ಸ್ವರತ್ವಕ್ಕೆ ಬೇಕಾದ ಅಭಿವ್ಯಂಜಕತ್ವ, ರಕ್ತಿ ಮುಂತಾದ ಧರ್ಮಗಳು ಮಿತವೇ ಆಗಿರುವುದರಿಂದ ಇಲ್ಲಿ ದೊರೆಯುವ ಸಂಖ್ಯೆಗಳನ್ನೆಲ್ಲಾ ಶಾರ್ಙ್ಗದೇವ ಪ್ರಭೃತಿಗಳು ಹೇಳಿದ ಶ್ರುತಿಗಳೆಂದು ವರ್ಣಿಸಲಾಗದು. ನಮ್ಮ ಪ್ರಾಚೀನಾಚಾರ್ಯರು ಶ್ರುತಿನಿದರ್ಶನ ಪ್ರಯೋಗ ವನ್ನೂ ಶ್ರುತಿಯ ಸಂಖ್ಯೆ, ಕರ್ತವ್ಯ, ಸ್ವಭಾವ ಮೊದಲಾದವುಗಳ ಲಕ್ಷಣಗಳನ್ನೂ ಗಾನವ್ಯವಹಾರಯೋಗ್ಯವಾದ ಮಂದ್ರಮಧ್ಯತಾರಗಳೆಂಬ ಮೂರು ಸ್ಥಾಯಿಗಳಿಗೆ ಸೀಮಿತಗೊಳಿಸಿರುವುದರ ಔಚಿತ್ಯವನ್ನು ಮೇಲೆ ಹೇಳಿದ ಪ್ರಯೋಗ ಫಲಿತಾಂಶಗಳಿಂದ ಮನಗಾಣಬಹುದು. ಫ್ಲೆಚರ್ ಆವೇಗದ ವ್ಯತ್ಯಾಸಗಳಿಂದ ಹುಟ್ಟುವ ಧ್ವನಿ ವೈಲಕ್ಷಣ್ಯಗಳನ್ನೂ ಲೆಕ್ಕಿಸಿ ಅವು ಅನೇಕ ಲಕ್ಷಗಳಷ್ಟಾಗುತ್ತವೆಂದೂ ಇವುಗಳಲ್ಲಿ ಉದ್ಭವಿಸುವ ಸಂಕೀರ್ಣಸ್ವರಗಳ

ಸಂಖ್ಯೆಯು ಇನ್ನೂ ಹೆಚ್ಚಾಗಿರುವುದೆಂದೂ ತಿಳಿಸುತ್ತಾನೆ.[349] ಇದು ನಮ್ಮ ಹಿರಿಯರು ಹೇಳಿದ ಶ್ರುತಿಯ ಆನಂತ್ಯಕ್ಕೆ ಪರಸ್ಪರವಾಗುತ್ತದೆ.




ನಕ್ಷೆ (5)

ಶ್ರುತಿಯ ವಿಷಯದಲ್ಲಿ ಭಾರತೀಯ ಸಂಗೀತದಲ್ಲಿ ಆದ ವಿಮರ್ಶೆ, ವಿವೇಚನೆಗಳೆಲ್ಲವೂ–ಪ್ರಕೃತ ಲೇಖನವನ್ನೂ ಒಳಗೊಂಡು – ಕೇವಲ ಊಹಾತ್ಮಕವೂ ತಾತ್ತ್ವಿಕವೂ ಆಗಿರುವುದು ಶೋಚನೀಯ ವಾಗಿದೆ. ವೈಜ್ಞಾನಿಕವಾದ ಪ್ರಯೋಗ ಹಾಗೂ ಫಲಿತಾಂಶವಿವೇಚನೆ, ಮೌಲ್ಯ ನಿರ್ಣಯಗಳು ಈ ಕ್ಷೇತ್ರದಲ್ಲಿ ಕೂಡಲೇ ಆಗಬೇಕಾಗಿದೆ. ವೈಜ್ಞಾನಿಕ ತರಪೇತು, ಉಪಕರಣಗಳು, ಪ್ರೋತ್ಸಾಹ ಮೊದಲಾದವುಗಳ ಅಭಾವದಿಂದಲೂ ಪ್ರಾಚೀನಾಚಾರ್ಯರು ಬಿಟ್ಟುಹೋಗಿರುವ ಈ ಅಮೂಲ್ಯವಾದ ಸಂಪತ್ತಿನ ಬಗ್ಗೆ ಅಜ್ಞಾನ, ಔದಾಸೀನ್ಯಗಳೇ ತಾಂಡವವಾಡುತ್ತಿರುವುದೂ ಈ ಅಭ್ಯಾಸದ ಅಭಾವಕ್ಕೆ ಕಾರಣಗಳಾಗಿವೆ. ಸಂಗೀತಶಾಸ್ತ್ರಾಭ್ಯಾಸಿಗಳು ವೈಜ್ಞಾನಿಕ ತರಪೇತನ್ನು ಪಡೆಯುವುದರಿಂದಲೂ, ವಿಜ್ಞಾನಿಗಳು ಸಂಗೀತಸಂಬಂಧಿಯಾದ ನಾದ ವಿಜ್ಞಾನದಲ್ಲಿ ಆಸಕ್ತಿ ತಳೆಯುವುದರಿಂದಲೂ ಈ ಕೊರತೆಯನ್ನು ನೀಗಿಸಬೇಕಾಗಿದೆ. ಸರಸ್ವತೀಶಕ್ತಿ ಪೀಠಗಳಾದ, ಸಂಸ್ಕೃತಿಕೇಂದ್ರಗಳಾದ ವಿಶ್ವವಿದ್ಯಾನಿಲಯಗಳಲ್ಲಿ ಈ ಸಂಶೋಧನೆಯು ಮೊದಲಾಗಬೇಕು.

## 9. ಶ್ರುತಿತತ್ತ್ವ ಮತ್ತು ವಾದೀತ್ವಭಗ್ನತಾಪರಿಣಾಮ

ಕಡೆಯದಾಗಿ ಮೇಲೆ ಪ್ರಸ್ತಾಪಿಸಿರುವ (ಪು. 196) ವಾದೀತ್ವ ಭಗ್ನತಾ ಪರಿಣಾಮವು ಶ್ರುತಿ ತತ್ತ್ವದ ಮೇಲೆ ಬೀರುವ ಪರಿಣಾಮವನ್ನು ಕುರಿತು ಸಂಕ್ಷೇಪವಾಗಿ ಪ್ರಸ್ತಾಪಿಸಿ, ಶ್ರುತಿ ವಿಷಯಕವಾಗಿ ದೀರ್ಘವಾಗಿ ಬೆಳೆದ ಈ ವಿವೇಚನೆಯ ಹಾಗೂ ಶ್ರುತಿಯ ನಾದ ವೈಜ್ಞಾನಿಕ ಹಿನ್ನೆಲೆಯ ಉಪಸಂಹಾರವನ್ನು ಮಾಡಬಹುದು.

349 ಫ್ಲೆಚರ್, ಉ.ಗ್ರಂ., ಪು. 159 ಮತ್ತು ಮುಂದಕ್ಕೆ.

ಸ್ವರವು ಊರ್ಧ್ವಗತಿಯಲ್ಲಿ ಚಲಿಸುವಾಗ 'ದ್ವಿಗುಣಶ್ಚೋತ್ತರೋತ್ತರಃ' ಎಂದು ಶಾರ್ಙ್ಗದೇವನು ಹೇಳಿದ ನಿಯಮದಂತೆ ಆವರ್ತಕತ್ವವನ್ನು ದ್ವೈಗುಣ್ಯದಿಂದ ಪಡೆಯುತ್ತಿದ್ದರೂ ಉಚ್ಚತಮವಾದ ನಾದ ಪ್ರದೇಶದಲ್ಲಿ ಅದು ಆಧಾರಸ್ವರದೊಡನೆ ಸಂಪೂರ್ಣವಾಗಿ ಬೆಸೆತುಹೋಗುವ ಶಕ್ತಿಯನ್ನು ಪಡೆದಿರುವುದಿಲ್ಲ; ಸ್ವಲ್ಪ ವೈದೃಶ್ಯವನ್ನು ಪಡೆದಿರುತ್ತದೆ. ಈ ಕಾರಣದಿಂದ ಕಂಪನ ಸಂಖ್ಯೆಯಲ್ಲಿ ಅಥವಾ, ನಮ್ಮ ಪ್ರಾಚೀನಾಚಾರ್ಯರ ಮಾತಿನಲ್ಲಿ ಹೇಳುವುದಾದರೆ ಉಚ್ಚಾರಣ ಪ್ರಸಕ್ತಿಯಲ್ಲಿ, ದ್ವೈಗುಣ್ಯವಿದ್ದರೂ ವಾದೀತ್ವವು ಭಗ್ನವಾಗಿ, ಉಚ್ಚತಮ ನಾದಪ್ರದೇಶದಲ್ಲಿ ಸ್ವಲ್ಪಮಟ್ಟಿನ ವಿವಾದಿತ್ವವನ್ನೇ ಸ್ವರವು ಪಡೆದಿರುತ್ತದೆಯಷ್ಟೆ. ಇದರಿಂದಲೇ ನಮ್ಮ ಸಂಗೀತಶಾಸ್ತ್ರಪ್ರವರ್ತಕರು ಮೂರು ಸ್ಥಾಯಿಗಳ ವಿಸ್ತಾರವನ್ನು ಮಾತ್ರ ಹೇಳಿದರು. ಆದುದರಿಂದ ಸ್ವರಾಷ್ಟಕದಲ್ಲಿ ಅಥವಾ ಸ್ಥಾಯಿಯ ವಿಸ್ತಾರದಲ್ಲಿ ಸ್ವರಸ್ಥಾನಗಳನ್ನು ನಿರ್ಣಯಿಸುವಾಗ, ಹಾಗೂ ಇವುಗಳನ್ನು ದ್ವಾವಿಂಶತಿಶ್ರುತಿಗಳ ವ್ಯವಸ್ಥೆಯ ಮೂಲಕ ಹೇಳುವಾಗ, ಈ ವಾದೀತ್ವಭಗ್ನತಾಪರಿಣಾಮವನ್ನು ಲೆಕ್ಕಕ್ಕೆ ತೆಗೆದುಕೊಳ್ಳುವ ಅವಶ್ಯಕತೆಯು ಕಂಡುಬರಲಿಲ್ಲ. ಆದರೆ ಏಕಕಾಲಿಕವಾಗಿ ಅನೇಕ ಸ್ವರಶ್ರೇಣಿಗಳನ್ನು ಬಳಸಬೇಕಾದ ಕಾರಣದಿಂದಲೋ, ಬೇರೆ ಲಕ್ಷ್ಯಪ್ರಯುಕ್ತಿಯ ಅವಶ್ಯಕತೆಯಿಂದಲೋ ಸ್ವರಸ್ಥಾನಗಳನ್ನು ಪಲ್ಲಟಗೊಳಿಸಬೇಕಾದರೆ ಈ ಪರಿಣಾಮವನ್ನು ಲೆಕ್ಕಿಸಿ, ಸೂಕ್ತವಾದ ಪರಿಹಾರವನ್ನು ಕಲ್ಪಿಸುವುದು ಅನಿವಾರ್ಯವಾಗುತ್ತದೆ.

ಕ್ರಿ.ಶ. ಸುಮಾರು ಹದಿನಾರನೆಯ ಶತಮಾನದ ವೇಳೆಗೆ ಉತ್ತರಭಾರತದಲ್ಲಿ ವಿಶೇಷವಾಗಿಯೂ ದಕ್ಷಿಣ ಭಾರತದಲ್ಲಿ ಅಲ್ಪವಾಗಿಯೂ ಪರಕೀಯ ಸಂಗೀತಪದ್ಧತಿಗಳ ಪ್ರಭಾವವು ಉಂಟಾದುದರ ಪರಿಣಾಮವಾಗಿ ಸ್ವರಸ್ಥಾನ ನಿರ್ಣಯಕ್ಕೆ ಶ್ರುತಿನಿದರ್ಶನಪದ್ಧತಿ ಮೊದಲಾದವುಗಳ ಬದಲು ಪಂಚಮದ ಚಾಕ್ರಿಕ ಊರ್ಧ್ವಗತಿಯ ಪದ್ಧತಿಯು ಅಲ್ಲಲ್ಲಿ ತಲೆದೋರಿತು. ಇದೇ ಅಲ್ಲದೆ ಕೆಲವು ವಿಕೃತ ಸ್ವರಸ್ಥಾನಗಳು–ಉದಾಹರಣೆಗೆ ಅಂತರಗಾಂಧಾರ, ಕಾಕಲೀ ನಿಷಾದಗಳು–ಸ್ವಲ್ಪಮಟ್ಟಿಗೆ ಸ್ವಸ್ಥಾನಚ್ಯುತವಾಗಿ ಊರ್ಧ್ವಗಮನಪ್ರವೃತ್ತಿಯನ್ನು ಪಡೆದವು. ಇದನ್ನು ವಿಕೃತಸ್ವರ ವಿವೇಚನೆಯಲ್ಲಿ ಪುನಃ ಪ್ರಸ್ತಾಪಿಸಲಾಗುವುದು. ಈ ಕಾರಣಗಳಿಂದ ವಾದೀತ್ವಭಗ್ನತಾಪರಿಣಾಮವನ್ನು ಲೆಕ್ಕಕ್ಕೆ ತೆಗೆದುಕೊಂಡು ವೀಣೆಯ ಮೆಟ್ಟುಗಳ ಮೂಲಕ ಸ್ವರಸ್ಥಾನನಿರ್ಣಯವನ್ನು ಮಾಡಬೇಕಾಯಿತು.

## 10. ವಾದೀತ್ವಭಗ್ನತಾಪರಿಣಾಮ: ಲಕ್ಷ್ಯದಲ್ಲಿ ಪರಿಣಾಮ

ವಾದೀತ್ವಭಗ್ನತಾ ಪರಿಣಾಮದ ಒಂದು ಮುಖವನ್ನು ಶ್ರುತಿಗಳನ್ನು ಲೆಕ್ಕಿಸುವ ವಿಧಾನಗಳು ಎಂಬ ಶೀರ್ಷಿಕೆಯಲ್ಲಿ ಗಣಿತಶಾಸ್ತ್ರವಿಧಾನದಲ್ಲಿ ಬೊಸಾಂಕ್ವೆಯು ಮಾಡಿದ ಪ್ರಯತ್ನದಲ್ಲಿ ನೋಡಲಾಯಿತು (ಪು. 414–416, 424). ಚಾಕ್ರಿಕ ಪಂಚಮಗತಿಯಿಂದ ಪಡೆದ ಸ್ವರಾಷ್ಟಕದಲ್ಲಿ ವಾದೀತ್ವಭಗ್ನತಾಪರಿಣಾಮವು ಕಡೆಯಪಕ್ಷ ಆರು ವಿಧಗಳಲ್ಲಿ ಕಾಣಿಸಿಕೊಳ್ಳುತ್ತದೆ: ಇವುಗಳ ಶ್ರುತಿಲೆಕ್ಕಗಳನ್ನು ಪಥಕ (13)ರಲ್ಲಿ ತೋರಿಸಿದೆ. ಅದನ್ನಿಲ್ಲಿ ಓದಿಕೊಳ್ಳಬೇಕು.

1) ಡಯಾಸ್ಕಿಸ್ಮಾ: ಮೂರು ಅಷ್ಟಮ ಭಾವಗಳು ನಾಲ್ಕು ಪಂಚಮಗಳು ಮತ್ತು ಎರಡು ಅಂತರಗಾಂಧಾರಗಳ ಮೊತ್ತಕ್ಕಿಂತ ಎಷ್ಟು ಹೆಚ್ಚೆಂಬುದನ್ನು ತೋರಿಸುತ್ತದೆ; ಇದರ ಪ್ರಮಾಣವು 2048/2025.

2) ಡಯೆಸಿಸ್: ಮೂರು ನೈಸರ್ಗಿಕ ಅಂತರಗಾಂಧಾರಭಾವಗಳಿಗಿಂತ ಒಂದು ಅಷ್ಟಮವು ಎಷ್ಟು ಹೆಚ್ಚೆಂಬುದನ್ನು ತೋರಿಸುತ್ತದೆ; ಇದಕ್ಕೆ ಎನ್‌ಹಾರ್ಮಾನಿಕ್ ಡಯೆಸಿಸ್ ಎಂದು ಹೆಸರು. ಆಧಾರಸ್ವರದಿಂದ ನಾಲ್ಕನೆಯ ಆವರ್ತಕ ಸ್ವರ ಮತ್ತು ಐದನೆಯ ಆವರ್ತಕಸ್ವರಗಳ ನಡುವೆ ಇರುವ ಅಂತರವಿದು. ಅಂತರಗಾಂಧಾರವು 5/4 ಎಂಬ ಪ್ರಮಾಣವುಳ್ಳದುದು; ಅಷ್ಟಮವು 2/1 ಎಂಬ ಪ್ರಮಾಣವುಳ್ಳದುದು; ಮೂರು ಅಂತರ ಗಾಂಧಾರಗಳೆಂದರೆ $(5/4)^3$. ಆದುದರಿಂದ ಅಷ್ಟಮ– 3 ಅಂತರಗಾಂಧಾರಭಾವಗಳು $= 2/1 \div (5/4)^3 =$

$2/1 \div 125/64 = 2/1 \times 64/125 = 128/125$. ಆದುದರಿಂದ ಮೂರನೆಯ ಅಂತರಗಾಂಧಾರ ಭಾವವು ಅಷ್ಟಮಕ್ಕಿಂತ ಸ್ವಲ್ಪ ನೀಚವಾಗಿರುತ್ತದೆ. ಆದುದರಿಂದಲೇ ಆಧಾರಸ್ವರವನ್ನು 240 ಕಂಪನ ಸಂಖ್ಯೆಯದೆಂದು ಇಟ್ಟುಕೊಂಡರೆ ನೈಸರ್ಗಿಕವಾಗಿ ಅಂತರಗಾಂಧಾರವು 303·75 ಕಂಪನಸಂಖ್ಯೆಯದಾಗುವುದನ್ನು ಬಿಟ್ಟು 300 ಕಂಪನಸಂಖ್ಯೆಯುದು ಎಂದು ಸ್ಥಾನಪಲ್ಲಟವಾಗಿರುವುದು ನಮ್ಮ ವೀಣೆಯ ಮೇಳದಲ್ಲಿ ಕಂಡುಬರುತ್ತದೆ.

3) ಪೈಥಾಗೊರಸ್ಸನ ಕಾಮ : ಹನ್ನೆರಡು ಪಂಚಮಗಳು ಏಳು ಅಷ್ಟಮಗಳಿಗಿಂತ ಎಷ್ಟು ಹೆಚ್ಚೆಂಬುದನ್ನು ತೋರಿಸುತ್ತದೆ ; ಎಂದರೆ $(3/2)^{12} \div (2/1)^{7} = 3^{12}/2^{12} \times 1/2^{7} = 3^{12}/2^{19} = 531441/524288$.

4) ಕಾಮ : ಇದಕ್ಕೆ ಸಿನ್‌ಟೋನಿಕ್ ಕಾಮ ಅಥವಾ ಡೈಡಿಮಸ್ಸನ ಕಾಮ ಎಂದೂ ಹೆಸರು. ನಾಲ್ಕು ಪಂಚಮಗಳು ಒಂದು ಅಷ್ಟಮ ಮತ್ತು ಅಂತರಗಾಂಧಾರ ಈ ಭಾವಗಳ ಮೊತ್ತಕ್ಕಿಂತ ಎಷ್ಟು ಹೆಚ್ಚೆಂದು ತೋರಿಸುತ್ತದೆ: ಎಂದರೆ ಅಂತರ ಗಾಂಧಾರವನ್ನು ನಾಲ್ಕು ಪಂಚಮಭಾವಗಳಿಂದಲೂ, ನಾಲ್ಕನೆಯ ಆವರ್ತಕ ಮತ್ತು ಐದನೆಯ ಆವರ್ತಕಗಳ ನಡುವೆ ಇರುವ ಪ್ರಮಾಣದಿಂದಲೂ ಪಡೆದರೆ, ಮೊದಲನೆಯದು (ಪೈಥಾಗೊರಸ್ಸಿನ ಅಂತರಗಾಂಧಾರ) ಎರಡನೆಯ (ಪರಿಶುದ್ಧ ಅಂತರಗಾಂಧಾರ)ದಕ್ಕಿಂತ 81/80 ರಷ್ಟು ಹೆಚ್ಚಾಗಿರುತ್ತದೆ. ಪೈಥಾಗೊರಸ್ಸನ ಅಂತರ ಗಾಂಧಾರ $= (3/2)^{4} \div 4/1 = 81/64$ : ಶುದ್ಧವಾದ ಅಂತರಗಾಂಧಾರ $= 5/4$ ; $\therefore 81/64 \div 5/4 = 81/64 \times 4/5 = 81/80$.

5) ಸ್ಕಿಸ್ಮಾ : ಐದು ಅಷ್ಟಮಗಳಿಗಿಂತ ಎಂಟು ಪಂಚಮಗಳ ಮತ್ತು ಒಂದು ಪರಿಶುದ್ಧ ಅಂತರಗಾಂಧಾರದ ಮೊತ್ತವು ಎಷ್ಟು ಹೆಚ್ಚೆಂಬುದನ್ನು ತೋರಿಸುತ್ತದೆ ; ಇದರ ಪ್ರಮಾಣವು 32805/32768.

6) ಪೈಥಾಗೊರಸ್ಸನ ಅಂತರಗಾಂಧಾರ : ನಾಲ್ಕು ಪಂಚಮಗಳು ಎರಡು ಅಷ್ಟಮಗಳಿಂತ ಎಷ್ಟು ಹೆಚ್ಚೆಂಬುದನ್ನು ತೋರಿಸುತ್ತದೆ. ಇದರ ಪ್ರಮಾಣವು $(3/2)^{4} \div 1/4 = 81/16 \times 1/4 = 81/64$.

ಪಂಚಮಭಾವ ಮತ್ತು ಅಂತರಗಾಂಧಾರ ಭಾವಗಳಿಂದ ಸ್ವರಸ್ಥಾನ ನಿರ್ಣಯವನ್ನು ಕ್ರಿ.ಶ. ಹದಿನಾರು, ಹದಿನೇಳನೆಯ ಶತಮಾನದ ನಮ್ಮ ಸಂಗೀತಶಾಸ್ತ್ರಕಾರರು ಮಾಡಲು ತೊಡಗಿದುದು ಈಗ ಸ್ಥಿರವಾಗಿ ಕರ್ಣಾಟಕ ಸಂಗೀತದಲ್ಲಿ ನಿಂತಿದೆ. ಆದರೆ ಇದರ ತತ್ತ್ವವನ್ನು ಅರ್ಥಮಾಡಿಕೊಳ್ಳದೆ ಅಹೋಬಲನು ದ್ವಾವಿಂಶತಿ ಶ್ರುತಿಗಳನ್ನೇ ಪಂಚಮಭಾವದಿಂದ ಪಡೆಯಬಹುದೆಂದು ಅವಿಚಾರರಮಣೀಯವಾಗಿ ಹೇಳಿಹೋದುದು ಆಧುನಿಕರಲ್ಲಿ ಇಲ್ಲದ ಸಲ್ಲದ ತಪ್ಪು ಭಾವನೆಗಳನ್ನು ಮೂಡಿಸಲು ಸಹಕಾರಿಯಾಯಿತು.

ಹೀಗೆ ಸ್ವರಸ್ಥಾನಗಳನ್ನು ನಿರ್ಣಯಮಾಡುವಾಗ ಮಂದ್ರತಾರಸ್ಥಾಯಿಗಳಲ್ಲಿ ಒಂದು ಶ್ರುತಿಯಷ್ಟು ಹೆಚ್ಚು ಕಡಿಮೆಯಾದರೆ ಅದರಿಂದ ದೋಷವಿಲ್ಲವೆಂದೂ ರಾಗದ ವ್ಯಕ್ತಿತ್ವಕ್ಕೆ ಅದರಿಂದ ಕುಂದಿಲ್ಲವೆಂದೂ ಮಧ್ಯಸ್ಥಾನದಲ್ಲಿ ಅವು ನೈಜವಾಗಿ ಲಭಿಸುತ್ತವೆಂದೂ ಕನ್ನಡಿಗ ಪುಂಡರೀಕವಿಠಲನು ಮೊದಲನೆಯಬಾರಿಗೆ ಕ್ರಿ. ಶ. ಹದಿನಾರನೆಯ ಶತಮಾನದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ; ಇಲ್ಲಿ ಗತಿಯೆಂದರೆ ಶ್ರುತಿಯೆಂಬ ಸಮಾಕರಣವನ್ನು ಅವನು ಇಟ್ಟುಕೊಂಡಿದ್ದಾನೆ.

ನ್ಯೂನಾಧಿಕ್ಯೈಕಗತಿಕಾ ಮಂದ್ರತಾರಸ್ವರಾ ಯದಿ ।
ನ ರಾಗಹಾನಿಕಾಃ ಸರ್ವೇ ಸ್ಪಷ್ಟತಾ ಮಧ್ಯಸಪ್ತಕೇ ॥ 350

350 ಪುಂಡರೀಕ ವಿಠಲ, ರಾಗಮಾಲಾ, 17.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸುಮಾರು ಐವತ್ತು ವರ್ಷಗಳ ನಂತರ ಸೋಮನಾಥನೂ ತನ್ನ ರಾಗವಿಬೋಧದಲ್ಲಿ ಈ ಮಾತನ್ನೇ ಪುನಃ ಹೇಳಿದ್ದಾನೆ :

ಪೂರ್ವವದಪರಾಚ್ಚ ರವಾತ್ ಪಗಸ್ವೈಸ್ತ್ರಿಶ್ರೋಚಿತ್ವೈಃ ಸಮಾತ್ ಕ್ರಮತಃ ।
ಶ್ರುತ್ಯೈಕಯಾಧಿಕತ್ವಂ ನ್ಯೂನತ್ವಂ ವಾ ನ ದೋಷಾಯ ॥ [351]

ಏಕಸ್ವರಶ್ರೇಣಿಯಿರುವ ಭಾರತೀಯ ಸಂಗೀತದಲ್ಲಿ ಹೀಗೆ ವಾದೀತ್ವಭಗ್ನತಾಪರಿಣಾಮದಿಂದ ತ್ರಿಸ್ಥಾಯಿ ವಿಸ್ತಾರದಲ್ಲಿ ವಿಶೇಷವಾದ ತೊಂದರೆಯೇನೂ ಆಗುವುದಿಲ್ಲವೆಂದೂ, ಒಂದು ಶ್ರುತಿಯಷ್ಟು ಅಧಿಕವಾಗಿ ಅಥವಾ ಊನವಾಗಿ ಈ ಪರಿಣಾಮವು ಕಾಣಿಸಿಕೊಳ್ಳುವುದೆಂದೂ ಆದರೂ ಇದರಿಂದ ರಾಗಾಭಿವ್ಯಕ್ತಿಗೆ ಇದರಿಂದ ಬಾಧೆಯಿಲ್ಲವೆಂದೂ ಮೂನ್ನೂರಐವತ್ತು ವರ್ಷಗಳಿಗಿಂತ ಮುಂಚೆಯೇ ನಮ್ಮ ಶಾಸ್ತ್ರಕಾರರು ಸ್ಪಷ್ಟವಾದ ಸಿದ್ಧಾಂತವನ್ನು ಹೇಳಿದ್ದರು.

**ಶ್ರುತಿಭ್ಯಃ ಸ್ಯುಃ ಸ್ವರಾಃ ಷಡ್ಜರ್ಷಭಗಾಂಧಾರಮಧ್ಯಮಾಃ ।**
**ಪಂಚಮೋ ಧೈವತಶ್ಚಾಥ ನಿಷಾದ ಇತಿ ಸಪ್ತ ತೇ ॥ 23 ॥** 239

ಶ್ರುತಿಗಳಿಂದ ಸ್ವರಗಳಾಗುತ್ತವೆ ; ಅವು ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಮತ್ತು ಧೈವತ, ಆಮೇಲೆ ನಿಷಾದ ಎಂಬ ಏಳು [ಇವೆ].

## I ಶ್ರುತಿ-ಸ್ವರಗಳ ಅನುಕ್ರಮ

ಶ್ರುತಿಗಳನ್ನು ನಿರೂಪಿಸಿದ ನಂತರ ಶ್ರೀ ಶಾರ್ಙ್ಗದೇವನು ತನ್ನ ಪ್ರತಿಜ್ಞೆಗೆ ಅನುಸಾರವಾಗಿ ಉದ್ದೇಶಕ್ರಮದಲ್ಲಿರುವ ಸ್ವರಗಳನ್ನು ಬೋಧಿಸಲು ತೊಡಗಿದ್ದಾನೆ. ಇಲ್ಲಿ ಅವನು ಅನುಸರಿಸಿರುವ ಉದ್ದೇಶದ (ನಿರೂಪಿಸಲಿರುವ ವಿಷಯಗಳ ಪರಿವಿಡಿಯ) ಅನುಕ್ರಮವನ್ನು ಕುರಿತು ಹೇಳಬೇಕಾದುದು ಇದೆ.

### 1. ಭರತಮುನಿಯ ಉದ್ದೇಶಕ್ರಮ

ಭರತಮುನಿಯು ನಾಟ್ಯಶಾಸ್ತ್ರದಲ್ಲಿ ನಾಟ್ಯಪ್ರಯೋಜಕವಾದ ಗೀತವನ್ನೂ ಅದಕ್ಕೆ ಉಪಕಾರಕಗಳಾದ ಆತೋದ್ಯ, ತಾಲ ಮುಂತಾದವುಗಳನ್ನೂ ಗ್ರಂಥಾಂತ್ಯದಲ್ಲಿಯೇ ವರ್ಣನೆಗೆ ತೆಗೆದುಕೊಂಡಿದ್ದಾನೆ.

ಜಗ್ರಾಹಪಾಠ್ಯಂ ಋಗ್ವೇದಾತ್ ಸಾಮಭ್ಯೋ ಗೀತಮೇವ ಚ ।
ಯಜುರ್ವೇದಾದಭಿನಯಾನ್ ರಸಾನ್ ಅಥರ್ವಣಾದಪಿ ॥ [352]

ಎಂಬ ಅವನ ಮಾತಿನಲ್ಲಿರುವ ಅನುಕ್ರಮವನ್ನೇನೂ ಅವನು ಗ್ರಂಥದ ಲಕ್ಷಣಾವಸರದಲ್ಲಿ ಇಟ್ಟುಕೊಂಡಿಲ್ಲ. ಮುನಿಗಳು ಭರತನನ್ನು ಕೇಳಿದ ಐದು ಪ್ರಶ್ನೆಗಳಿಗೆ-ಇವು ಪಂಚಪ್ರಶ್ನೆಗಳೆಂದು ಪ್ರಸಿದ್ಧವಾಗಿವೆ-ಅಲ್ಪಸ್ವಲ್ಪ ವ್ಯತ್ಯಸ್ತವಾದ ಅನುಕ್ರಮದಲ್ಲಿ ಉತ್ತರಗಳನ್ನು ನಾಟ್ಯಶಾಸ್ತ್ರದಲ್ಲಿ ಅವನು ಅಡಗಿಸಿದ್ದಾನೆ :

ನಾಟ್ಯವೇದಃ ಕಥಂ ಬ್ರಹ್ಮನ್ನುತ್ಪನ್ನಃ ಕಸ್ಯ ವಾ ಕೃತೇ ।
ಕತ್ಯಂಗಃ ಕಿಂ ಪ್ರಮಾಣಾಶ್ಚ ಪ್ರಯೋಗಾಶ್ಚಾಸ್ಯ ಕೀದೃಶಃ ।
ಸರ್ವಮೇತದ್ ಯಥಾ ತತ್ತ್ವಂ ಭಗವನ್ ವಕ್ತುಮರ್ಹಸಿ । [353]

---

351 ಸೋಮನಾಥ, ರಾಗವಿಬೋಧ, II, 34, ಪು. 68.
352 ಭರತಮುನಿ, ಉ.ಗ್ರಂ., I, 17, ಪು. 14.
353 ಅದೇ ಗ್ರಂಥ, I, 4-5, ಪು. 6.

ಗಾಂಧರ್ವವನ್ನು ಅವನು ಇಪ್ಪತ್ತೆಂಟನೆಯ ಅಧ್ಯಾಯದಿಂದ ಮುಂದಕ್ಕೆ ನಿರೂಪಿಸಿದ್ದಾನೆ. ಗಾಂಧರ್ವವು ಸ್ವರ, ಪದ, ತಾಲ, ಎಂದು ಮೂರು ವಿಧ. ಇದರಲ್ಲಿ ಸ್ವರಸಂಬಂಧಿಯಾದ ಗಾಂಧರ್ವದ ಉದ್ದೇಶವನ್ನು ಹೀಗೆ ಕೊಡುತ್ತಾನೆ :

ಗಾಂಧರ್ವಂ ತ್ರಿವಿಧಂ ವಿದ್ಯಾತ್ ಸ್ವರತಾಲಪದಾತ್ಮಕಮ್ ।
ತ್ರಿವಿಧಸ್ಯಾಪಿ ವಕ್ಷ್ಯಾಮಿ ಲಕ್ಷಣಂ ಕರ್ಮ ಚ ।
ದ್ವ್ಯಧಿಷ್ಠಾನಾಃ ಸ್ವರಾ ವೈಣಾಃ ಶಾರೀರಾಶ್ಚ ಪ್ರಕೀರ್ತಿತಾಃ ।
ಏತೇಷಾಂ ಸಂಪ್ರವಕ್ಷ್ಯಾಮಿ ವಿಧಾನಂ ಲಕ್ಷಣಾನ್ವಿತಮ್ ।
ಸ್ವರಾ ಗ್ರಾಮೌ ಮೂರ್ಛನಾಶ್ಚ ತಾನಾಃ ಸ್ಥಾನಾನಿ ವೃತ್ತಯಃ ।
ಶುಷ್ಕಂ ಸಾಧಾರಣೇ ವರ್ಣಾ ಹ್ಯಲಂಕಾರಾಶ್ಚ ಧಾತವಃ ।
ಶ್ರುತಯೋ ಯತಯಶ್ಚೈವ ನಿತ್ಯಂ ಸ್ವರಗತಾತ್ಮಕಾಃ ।[354]

## 2. ಅಭಿನವಗುಪ್ತನಿಂದ ಅದರ ಸಮರ್ಥನೆ

ಇಲ್ಲಿ ಕೊಟ್ಟಿರುವ ಅನುಕ್ರಮವನ್ನೂ ಸಹ ಭರತನು ಅನುಸರಿಸಿಲ್ಲ. ಏಕೆಂದರೆ ಶ್ರುತಿಗಳನ್ನು ಇಲ್ಲಿ ಕಡೆಯಲ್ಲಿ ಕೊಟ್ಟಿದ್ದರೆ ಲಕ್ಷಣಾವಸರದಲ್ಲಿ ಗ್ರಾಮನಿರೂಪಣೆಯ ನಂತರ, ಮೂರ್ಛನೆಗಳಿಗೆ ಮುಂಚೆ, ನಿರೂಪಿಸಿದ್ದಾನೆ. ಉದ್ದೇಶಕ್ರಮದಲ್ಲಿರುವ ಅನುಕ್ರಮದಂತೆಯೇ ಲಕ್ಷಣಾವಸರದಲ್ಲಿಯೂ ಅದೇ ಅನುಕ್ರಮವನ್ನು ಅನುಸರಿಸುವ ವಿವಕ್ಷೆಯನ್ನು ಭರತನು ಇಟ್ಟುಕೊಂಡಿರಲಿಲ್ಲವೆಂದು ಅಭಿನವಗುಪ್ತನು ಭರತನ 'ಗಾಂಧರ್ವಸಂಗ್ರಹೋ ಹ್ಯೇಷ ವಿಸ್ತರಂ ತು ನಿಬೋಧತ'[355] ಎಂಬ ಮಾತಿನ 'ನಿಬೋಧತ' ಎಂಬುದಕ್ಕೆ ವ್ಯಾಖ್ಯಾನಮಾಡುವಾಗ ತಿಳಿಸುತ್ತಾನೆ :

**ನಿಬೋಧತೇತ್ಯನೇನೋಹಾಪೋಹಕೌಶಲಶಾಲಿನೀ ಬುದ್ಧಿರತ್ರ** ಭವತಾಮುಪಯುಜ್ಯತ ಇತಿ ದರ್ಶಯನ್ ಉದ್ದೇಶಕ್ರಮೋ ಲಕ್ಷಣಾದೌ ಮಯಾನಾದೃತ ಇತಿ । ತಥಾಹಿ — ಗ್ರಾಮಾನಂತರಂ ಶ್ರುತಿಃ, ಸ್ಥಾನಾನಂತರಂ ಸಾಧಾರಣೇ ಜಾತಿಂ ಚ ಲಕ್ಷಯಿಷ್ಯತಿ ನ ಚೈಷ ಉದ್ದೇಶಸ್ತವೋದ್ದೇಶೋ ನಾಮಾಪಿ ನಾನುಸೃತಃ । ಉದ್ದೇಶೇ ತು ಪ್ರಯೋಜನಂ ನ ಲಕ್ಷಣಾವಕಾಶವಿತರಣಮ್ ।[356]

ಇದೇ ರೀತಿಯಲ್ಲಿ ಉದ್ದೇಶಪ್ರಪಂಚದ ಅನುಕ್ರಮವನ್ನು ಸಮರ್ಥಿಸಿಕೊಳ್ಳಲು ಅವನು ತುಂಬಾ ಪರಿಶ್ರಮವನ್ನು ವಹಿಸುತ್ತಾನೆ. ಆದರೆ ಇಲ್ಲಿ 'ಸ್ಥಾನಾನಂತರಂ' ಎನ್ನುವುದು ಲಿಪಿಕಾರನ ದೋಷವಿರಬೇಕು; 'ತಾನಾನಂತರಂ' ಎಂಬುದು ಸಮೀಚೀನವಾದ ಪಾಠ. ಏಕೆಂದರೆ ಮೂರ್ಛನೆಯಾದ ಮೇಲೆ ತಾನ, ತಾನವಾದ ಮೇಲೆ ಜಾತಿ—ಇದು ಭರತನು ಬಳಸುವ ಲಕ್ಷಣಾವಸರ. ಅಭಿನವಗುಪ್ತನ ಈ ಯತ್ನವು ಮೆಚ್ಚತಕ್ಕುದೇ ಆದರೂ ಅದರಿಂದ ಶಾಸ್ತ್ರಕ್ಕೆ ಪ್ರಯೋಜನವೇನೂ ಇಲ್ಲವೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಭರತನ ಮೇಲಿನ ಶ್ಲೋಕಗಳು ಭಿನ್ನಮಾತೃಕೆಗಳಲ್ಲಿ ಪಾಠಾಂತರಗಳನ್ನು ಒಳಗೊಂಡಿವೆ. ಹೀಗೆ ಲೊಲ್ಲಟ, ಉದ್ಭಟರು ಬಳಸಿದ ನಾಟ್ಯಶಾಸ್ತ್ರದ ದೀರ್ಘತಮ ಮಾತೃಕೆಯಲ್ಲಿ (ಡ) 'ಸ್ವರಾಶ್ಚ ಶ್ರುತಯೋ ಗ್ರಾಮಾ ಮೂರ್ಛನಾಃ ಸ್ಥಾನ (? ನಾಸ್ತಾನ) ಸಂಯುತಾಃ' ಎಂದಿದೆ; ಇದೇ ಕ್ರಮವೇ ಲಕ್ಷಣಾವಸರದಲ್ಲಿಯೂ ಕಂಡುಬರುತ್ತದೆ.

ಇಲ್ಲಿ ಪ್ರಸಕ್ತವಾದುದು ಏನೆಂದರೆ, ಸ್ವರಗಳನ್ನು ಹೇಳಿದ ಮೇಲೆ ಶ್ರುತಿಗಳನ್ನು ನಿರೂಪಿಸಿದ ಭರತನ ಕ್ರಮವು

---

354 ಅದೇ ಗ್ರಂಥ, XXVIII, 11-14, ಪು. 7-8.　　356 ಅಭಿನವಗುಪ್ತ, ಉ.ಗ್ರಂ., ಪು. 10.
355 ಅದೇ ಗ್ರಂಥ, XXVIII, 20, ಪು. 10.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸರಿಯೇ, ಶ್ರುತಿಗಳ ನಂತರ ಸ್ವರಗಳನ್ನು ಹೇಳಿದ ಶಾರ್ಙ್ಗದೇವನ ಕ್ರಮವು ಸರಿಯೇ ಎಂಬ ಪ್ರಶ್ನೆ. ಭರತನ ಕ್ರಮವನ್ನೇ ಅಭಿನವಗುಪ್ತನು ಬಹುವಾಗಿ ಸಮರ್ಥಿಸಲೆಳಸುತ್ತಾನೆ. ಅವನು ಕೊಡುವ ಕಾರಣವು ಹೀಗಿದೆ :

" ಇಲ್ಲಿ (ಸ್ವರಗಳನ್ನು ಹೇಳುವ ಸಂದರ್ಭದಲ್ಲಿ) ಕೆಲವರು ಆಕ್ಷೇಪವನ್ನು ಹೇಳುತ್ತಾರೆ: ಶ್ರುತಿಗಳ ನಿಯತವಾದ ಕ್ರಮದಿಂದ ಸ್ವರಗಳು ಅಭಿವ್ಯಂಗಗಳಾಗುತ್ತವಷ್ಟೆ; ಆದುದರಿಂದ ಶ್ರುತಿಗಳನ್ನೇ ಮೊದಲು ಹೇಳಬೇಕು. ಹೀಗೆಯೇ ಇರಬೇಕು (ಈ ಕ್ರಮವೇ ಸರಿಯಾದುದು) ; ಏಕೆಂದರೆ ಶ್ರುತಿಗಳು ಧ್ವನಿ, ನಾದ ಎಂದು ಸಂಜ್ಞೆಯುಳ್ಳವುಗಳಷ್ಟೆ; (ಎಂದರೆ ಅವೇ ನಾದ, ಧ್ವನಿಗಳೇ ಹೊರತು ಸ್ವರಗಳಿಗೆ ಅವುಗಳನ್ನು ಬಿಟ್ಟು ಬೇರೆ ಧ್ವನಿತ್ವ, ನಾದತ್ವಗಳಿಲ್ಲ ;) (ಲೋಕಪ್ರಸಿದ್ಧವಾದ ಉಚ್ಚನೀಚ ಧ್ವನಿಗಳಲ್ಲಿ) ಶ್ರುತಿಗಳೇ ಸ್ವರಗಳನ್ನು ಆಶ್ರಯಿಸಿ ಕೊಂಡು ಉಚ್ಚನೀಚಭಾವಗಳನ್ನು ಪಡೆದಿವೆಯೆಂದು ಕಂಡುಬರುವುದಿಲ್ಲ ; ಸ್ವರಗಳೇ ನಿಯತ ಸಂಖ್ಯೆಯ ಶ್ರುತಿಗಳಲ್ಲಿ ಗ್ರಹಿಸಲ್ಪಡುತ್ತವೆ. ಪೂರ್ವ ಭಾರತೀಯ ವ್ಯಾಖ್ಯಾನಕಾರನಾದ ಮಾತೃಗುಪ್ತನದೂ ಇದೇ ಅಭಿಪ್ರಾಯ : 'ಎಲ್ಲಾ ಶ್ರುತಿವಿಸ್ತರವೂ ಸಹಜವಾಗಿಯೇ, ಎಂದರೆ ತನ್ನಿಂದಲೇ (ಸ್ವರಗಳನ್ನು ಅವಲಂಬಿಸದೆ) ಹುಟ್ಟುತ್ತದೆ. ಅದು ಶ್ರೋತ್ರಪೀಯೂಷಸಾರತೆಯನ್ನು, ಎಂದರೆ ರಕ್ತಿಧರ್ಮವನ್ನು, ಸ್ವರದ ಅಧಿಷ್ಠಾನದಿಂದಲೇ ಪಡೆಯುತ್ತದೆ ;' (ಆದುದರಿಂದ ಶ್ರುತಿಯೇ ಪ್ರಕೃತಿಪ್ರಧಾನವಾದುದು. ಆದರೂ ಲೋಕದಲ್ಲಿ ಸ್ವರದ ಪೀಯೂಷ ಸಾರತೆಯು ಪ್ರಸಿದ್ಧವಾದುದರಿಂದ, ಸಂಗೀತದ ಪ್ರಯೋಜನವೂ ಅದೇ ಆದುದರಿಂದ, ಅದನ್ನೇ ಮೊದಲು ಹೇಳಿದೆ).

" ಅಷ್ಟೇ ಅಲ್ಲದೆ, ಶ್ರುತಿಯಿಂದಲೇ ಸ್ವರವೆನ್ನುವ ಪಕ್ಷದಲ್ಲಿ ಈ ಆಕ್ಷೇಪವನ್ನೂ ಎದುರಿಸಬೇಕಾಗುತ್ತದೆ : ಪಂಚಮ ಸ್ವರವು ಷಡ್ಜಗ್ರಾಮದಲ್ಲಿ ನಾಲ್ಕನೆಯ ಶ್ರುತಿಯಲ್ಲಿಯೂ ಮಧ್ಯಮಗ್ರಾಮದಲ್ಲಿ ಮೂರನೆಯ ಶ್ರುತಿ ಯಲ್ಲಿಯೂ ಇರುತ್ತದಷ್ಟೆ ; ಒಂದು ಸ್ವರವು ಆಯಾ ಶ್ರುತಿಯಿಂದಲೇ ಅಭಿವ್ಯಂಗ್ಯವಾಗಬೇಕೆಂಬ ನಿಯಮವು ಇಲ್ಲಿ ಏನಾಯಿತು ? ಮೂರನೆಯ ಮತ್ತು ನಾಲ್ಕನೆಯ ಶ್ರುತಿಗಳು ಒಂದೇ ಅಲ್ಲವಷ್ಟೆ ! ಇದೇ ವಾದವನ್ನು ಧೈವತವು ಷಡ್ಜಗ್ರಾಮದಲ್ಲಿ ತ್ರಿಶ್ರುತಿಕವಾಗಿರುವುದಕ್ಕೂ ಮಧ್ಯಮಗ್ರಾಮದಲ್ಲಿ ಚತುಃಶ್ರುತಿಕವಾಗಿರುವುದಕ್ಕೂ, ಗಾಂಧಾರ ನಿಷಾದಗಳ ಅಂತರಕಾಕಲೀತ್ವಗಳಿಗೂ ಅನ್ವಯಿಸಿಕೊಳ್ಳಬೇಕು.

" ಇಲ್ಲಿ ಮತ್ತೂ ಒಂದು ಆಕ್ಷೇಪವು ಏಳುತ್ತದೆ : ವಸಂತಕಾಲದಲ್ಲಿ ಕೋಕಿಲೆಯು ಪಂಚಮವನ್ನು ಹೇಳುತ್ತದೆ ಎಂದು ಮುಂತಾಗಿ ನಾರದನ ಮಾತಿದೆ. ಕೋಕಿಲೆಯ ನಾಸಾಕಂಠಾದಿಗಳಲ್ಲಿ ನಿಯತವಾದ ಶ್ರುತಿರೂಪಗಳಲ್ಲಿ ಸ್ವರಗಳು ಹುಟ್ಟುವುದನ್ನು ಯಾರೂ ಕಾಣರು; ಪಂಚಮಕ್ಕೆ ಹೇಳಿದ ಮಾತನ್ನೇ ಇತರ ಸ್ವರಗಳಿಗೂ ಇತರ ಪ್ರಾಣಿಗಳಿಗೂ ಅನ್ವಯಿಸಬೇಕು ; ಶ್ರುತಿಗಳಿಂದ ಸ್ವರಗಳು ಎಂದಾದರೆ ಸ್ವರಗಳಿಗೆ ನಿಯತಶ್ರುತಿಗ್ರಹಣವು ಕೋಕಿಲಾದಿಗಳಲ್ಲಿಯೂ ಕಂಡುಬರಬೇಕಾಗಿತ್ತು.

" ಸ್ವರಗಳು ತಮ್ಮ ಸ್ವರೂಪವನ್ನು ಪಡೆಯಬೇಕಾದರೆ (ನಿಯತ) ಶ್ರುತಿಕ್ರಮವನ್ನು ಅಪೇಕ್ಷಿಸುತ್ತವೆ ; (ಶ್ರುತಿಗಳು ಸ್ವರಾಶ್ರಯದಿಂದಲೇ ಉಚ್ಚನೀಚಭಾವಗಳಲ್ಲಿ ವ್ಯಕ್ತವಾಗುತ್ತವೆ.) ಹೀಗೆ ಶ್ರುತಿಗಳೂ ಸ್ವರಗಳೂ ಅನ್ಯೋನ್ಯಾಶ್ರಯಗಳು ; ಒಂದು ಇನ್ನೊಂದನ್ನು ಎಡೆಬಿಡದೆ ಇರುತ್ತದೆ. ಎಂದಮೇಲೆ ಮೊದಲು (ಪ್ರಾಕ್) (ಮತ್ತು ಆಮೇಲೆ) ಎಂಬ ಕ್ರಮವು (ಶ್ರುತಿಸ್ವರಗಳಲ್ಲಿ) ಅಸಿದ್ಧವೇ ಆಗುತ್ತದೆ. (ಆದರೆ ಬೋಧನಕ್ರಮದಲ್ಲಿ ಎರಡನ್ನೂ ಒಮ್ಮೆಗೇ ಹೇಳಲಾಗುವುದಿಲ್ಲವಷ್ಟೆ ; ಯಾವುದನ್ನಾದರೂ ಮೊದಲು ಹೇಳಬೇಕು. ಆದುದರಿಂದ ಲೋಕಪ್ರಸಿದ್ಧವಾದ ಸ್ವರಗಳನ್ನು ಮೊದಲು ಹೇಳಿ ಶ್ರುತಿಗಳನ್ನು ಆಮೇಲೆ ಹೇಳಿದೆ.) ಆದುದರಿಂದ ಷಡ್ಜಗ್ರಾಮ, ಮಧ್ಯಮಗ್ರಾಮ ಎಂದು ವಿಭಾಗಿಸುವುದಕ್ಕಾಗಿಯೇ, ಗ್ರಾಮದಲ್ಲಿರುವ ಸಂವಾದಿಯೇ ಮೊದಲಾದ ಸ್ವರಗಳ ವಿವೇಚನೆಗಾಗಿಯೇ ಶ್ರುತಿಗಳನ್ನು ಹೇಳಿದೆ. ಗ್ರಾಮಗಳಲ್ಲಿ ವಿಂಗಡಿತವಾದ ರಾಗಗಳಲ್ಲಿರುವ ಸ್ವರಗಳು ನಿಯತವಾದ

ಉಚ್ಚತೆ, ನೀಚತೆಗಳನ್ನು ಪಡೆದಿವೆಯಷ್ಟೆ. ಇವುಗಳಿಗೆ ಶರೀರಸಾಮ್ಯವು, ಎಂದರೆ ಶರೀರದಲ್ಲಿ ಹುಟ್ಟುವ ಸ್ವರಗಳಿಗೆ ನಾಸಾಕಂಠಾದಿಗಳಲ್ಲಿ ನಿಯತಶ್ರುತಿಸ್ಥಾನಗಳು ಇಲ್ಲವೆಂಬುದು ತಿಳಿದೇ ಇದೆ. ಶಾರೀರದಲ್ಲಿ ಹುಟ್ಟುವ ಸ್ವರಗಳಿಗೂ (-ಇವುಗಳಿಗೆ ಮೇಲೆ ಹೇಳಿದ ನಿಯತವಾದ ಉಚ್ಚತೆ ನೀಚತೆಗಳನ್ನು ಹೇಳುವುದು ಶಾಸ್ತ್ರದ ಕರ್ತವ್ಯ-) ಇಯತ್ತಾ ಪೂರ್ವಕವಾದ ಪ್ರಮಾಣಗಳನ್ನು ಹೇಳುವುದು ಆವಶ್ಯಕ. ಆದುದರಿಂದಲೇ ಲೋಕಪ್ರಸಿದ್ಧವಾದ ಸ್ವರಗಳನ್ನು ಮೊದಲು ಹೇಳಿ ನಂತರ ಇವುಗಳ ಇಯತ್ತಾಸಾಧಕಗಳಾದ ಶ್ರುತಿಗಳನ್ನು ನಂತರ ಹೇಳಿದೆ. ಎಂದೇ ವಿಶಾಖಿಲಾಚಾರ್ಯನು ಗ್ರಾಮದ ನಂತರ ಶ್ರುತಿಯನ್ನು ಹೇಳಿದ್ದಾನೆ. ಗ್ರಾಮವಿಭಾಗವು ಸಾಮವೇದದಲ್ಲಿ ಇಲ್ಲದಿರುವುದರಿಂದ ಅದಕ್ಕೆ ಉಪಯೋಗಿಯಾದ ನಾರದೀಯ ಶಿಕ್ಷೆಯಲ್ಲಿ ಸ್ವರವನ್ನು ಮೊದಲು ಹೇಳಿ ಆಮೇಲೆ ಸ್ವರಗಳ ವಿಶೇಷಪ್ರಯೋಗಗಳಿಂದ ಸಾಧಿಸಲ್ಪಡಬೇಕಾದ ದೀಪ್ತಾ ಮೊದಲಾದ ಐದು ಶ್ರುತಿಗಳನ್ನು ಹೇಳಿದೆ" [357]

## 3. ಇದು ವೃಥಾಶ್ರಮ

ಶ್ರೀಮದಭಿನವಗುಪ್ತಾಚಾರ್ಯನು ಇಲ್ಲಿ ವೃಥಾಶ್ರಮವನ್ನು ವಹಿಸಿ, ಮೂಲಗ್ರಂಥಕಾರನಲ್ಲಿ ಬಹುಶಃ ಇಲ್ಲದ ವಿವಕ್ಷೆಯನ್ನು ಆರೋಪಿಸುತ್ತಿದ್ದಾನೆಂದು ನನಗೆ ತೋರುತ್ತದೆ. ಉದ್ದೇಶಾನುಕ್ರಮವು ಲಕ್ಷಣಾವಸರದಲ್ಲಿ ಇಲ್ಲವೆಂಬ ಮಾತನ್ನು ಹೇಳಿದ ಅವನು ಈ ಮಾತನ್ನು ಅಲ್ಲಿಗೇ ಮುಗಿಸಿದ್ದರೆ ಸಾಕಾಗಿತ್ತು. ಇತರ ವ್ಯಾಖ್ಯಾನಕಾರರು ಈ ಗ್ರಂಥಭಾಗದಲ್ಲಿ ಪಾಠಾಂತರಗಳನ್ನು ಪಡೆದಿದ್ದುದು ಅವನ ಗಮನಕ್ಕೆ ಬರಲಿಲ್ಲವೇ ಎಂಬ ಸಂಶಯವು ಇಲ್ಲಿ ಉಂಟಾಗುತ್ತದೆ. ಇದು ಏನೇ ಇರಲಿ, ಭರತನು ಈ ಭಾಗದಲ್ಲಿ ತೋರಿಸುವ ಲಕ್ಷಣಾವಸರಕ್ಕೆ ಸಮರ್ಥನೆಯನ್ನು ಕೊಡಲೆಳಸುವುದು ಅಷ್ಟು ಮುಖ್ಯವೂ, ಅವಶ್ಯಕವೂ, ಸಾಧ್ಯವೂ ಅಲ್ಲ. ಏಕೆಂದರೆ ಭರತನಿಗೆ ಪಂಚಪ್ರಶ್ನೆಗಳ ಉತ್ತರಗಳ ಅನುಕ್ರಮವೇ ಮುಖ್ಯವಾದುದು; ಉಳಿದ ಅನುಕ್ರಮಗಳು ಗೌಣ. ಈ ದೃಷ್ಟಿಯಿಂದ ಅವನ ತತ್ತ್ವಜಿಜ್ಞಾಸೆಯ ಕ್ರಮವು ದೂಷಿತವೇ ಆಗಿದೆ. ತಾನು ಹೇಳಲಿರುವ ಯಾವ ತತ್ತ್ವ, ಪ್ರಮೇಯ, ಪರಿಭಾಷೆ ಇತ್ಯಾದಿಗಳಿಗೂ ಅವನು ಲಕ್ಷಣವನ್ನೇ ಕೊಡುವುದಿಲ್ಲ. ಹೀಗೆ, ಸ್ವರ, ವಾದಿ-ವಿವಾದಿ ಇತ್ಯಾದಿ ಸ್ವರ ಚಾತುರ್ವಿಧ್ಯ, ಗ್ರಾಮ, ಶ್ರುತಿ, ಮೂರ್ಛನೆ, ತಾನ, ಜಾತಿ - ಇವುಗಳಲ್ಲಿ ಯಾವುದಕ್ಕೂ ಲಕ್ಷಣವೇ ನಾಟ್ಯಶಾಸ್ತ್ರದಲ್ಲಿ ದೊರೆಯುವುದಿಲ್ಲ. ಈ ಮಾತು ನಾಟ್ಯಶಾಸ್ತ್ರದ ಇತರ ಭಾಗಗಳಿಗೂ ಅನ್ವಯಿಸುತ್ತದೆ. ಸೂತ್ರರೂಪದಲ್ಲಿ ಅವನು ಗ್ರಂಥರಚನೆ ಮಾಡಿರುವುದು ಇದಕ್ಕೆ ಕಾರಣವಿರಬೇಕು. ಅವನಲ್ಲಿರುವ ಇನ್ನೊಂದು ದೋಷವೆಂದರೆ ಮುಂದೆ ಹೇಳಲಿರುವ ಪ್ರಮೇಯಗಳನ್ನು ವಿವರಣೆಯೇ ಇಲ್ಲದೆ ಮೊದಲು ಹೇಳುವ ಪ್ರಮೇಯ ಸಂದರ್ಭದಲ್ಲಿ ಬಳಸಿಕೊಂಡುಬಿಡುವುದು: ಹೀಗೆ ವಾದಿ ಸಂವಾದಿ ಮೊದಲಾದವುಗಳ ಪ್ರಮಾಣಗಳನ್ನು ಹೇಳುವಾಗ ಗ್ರಾಮ, ಶ್ರುತಿ ಎರಡರ ಕಲ್ಪನೆಗಳನ್ನೂ ಬಳಸಿಕೊಂಡುಬಿಟ್ಟಿದ್ದಾನೆ.

## 4. ಶ್ರೀ ಶಾರ್ಙ್ಗದೇವನದೇ ಹೆಚ್ಚು ವೈಜ್ಞಾನಿಕಕ್ರಮ

ಶ್ರೀ ಶಾರ್ಙ್ಗದೇವನು ತತ್ತ್ವಜಿಜ್ಞಾಸೆಯನ್ನು ಇದಕ್ಕಿಂತ ಉತ್ತಮವಾದ ವೈಜ್ಞಾನಿಕಕ್ರಮದಲ್ಲಿ ಮಾಡಿದ್ದಾನೆ; ಮೊದಲನೆಯ ಉದ್ದೇಶಸಂಗ್ರಹ ಪ್ರಕರಣದಲ್ಲಿ ಹೇಳಿದ ಅನುಕ್ರಮವನ್ನು ಚಾಚೂ ತಪ್ಪದೆ ಲಕ್ಷಣಾವಸರದಲ್ಲಿಯೂ ಅನುಸರಿಸಿದ್ದಾನೆ. ಇಲ್ಲಿ ಕಾಣುವ ಒಂದು ಸಣ್ಣ ಅಪವಾದವನ್ನು ಮೇಲೆ (ಪು. 398-401) ಶ್ರುತಿಜಾತಿ

357 ಅದೇ ಗ್ರಂಥ, ಪು. 11-12. ಇದು ಅಕ್ಷರಶಃ ಅನುವಾದವಲ್ಲ. ಈ ಭಾಗದಲ್ಲಿ ಅಭಿನವಗುಪ್ತನ ವಾದವು ಪ್ರೌಢವಾಗಿಯೂ ಕ್ಲಿಷ್ಟವಾಗಿಯೂ ಇರುವುದರಿಂದ ಅದರ ಮುಖ್ಯಭಾವವು ಸುಲಭವಾಗಿ ತಿಳಿಯುವಂತೆ ಹೀಗೆ ನನ್ನ ಮಾತುಗಳಲ್ಲಿ ಸಂಗ್ರಹಿಸಿದ್ದೇನೆ.

ವಿವೇಚನೆಯ ಸಂದರ್ಭದಲ್ಲಿ ಪ್ರಸ್ತಾಪಿಸಲಾಗಿದೆ. ಇದನ್ನು ಬಿಟ್ಟರೆ ಅವನು ಈ ಪ್ರಕರಣಕ್ಕೆ ಇಟ್ಟಿರುವ 'ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ' ವೆಂಬ ಹೆಸರನ್ನು ಅನುಕ್ರಮದ ದೃಷ್ಟಿಯಿಂದ ಸಂಪೂರ್ಣವಾಗಿ ಅನ್ವರ್ಥಗೊಳಿಸಿದ್ದಾನೆ. ಇದನ್ನು ಪುನಃ "ಶ್ರುತಿಭ್ಯಃ ಸ್ಯುಃ ಸ್ವರಾಃ" ಎಂಬ ಈಗ ವ್ಯಾಖ್ಯಾತವಾಗುತ್ತಿರುವ ಶ್ಲೋಕದಲ್ಲಿ ಅನುಕ್ರಮದಿಂದ, ಪಂಚಮೀವಿಭಕ್ತಿಯ ಮೂಲಕ, ವಿವಕ್ಷಿಸಿದ್ದಾನೆ. ಅವನಿಗೆ ಲೋಕಪ್ರಸಿದ್ಧವಾದ ವಿಷಯಗಳನ್ನು ಮೊದಲು ಹೇಳಿ ಇವುಗಳಿಂದ ಶಾಸ್ತ್ರಪ್ರಮೇಯಗಳನ್ನು ಪಡೆಯುವ ಕ್ರಮದ ಆವಶ್ಯಕತೆಯೇನೂ ಇಲ್ಲ. ಅವನು ಇಲ್ಲಿ ಮಾಡುತ್ತಿರುವುದು ಅಗಾಧಬೋಧವೆಂಬ ಕಡೆಗೋಲಿನಿಂದ ಪೂರ್ವಾಚಾರ್ಯಮತಪಯೋನಿಧಿಯನ್ನು ನಿರ್ಮಥಿಸಿ, ಸಾರತರವಾದ ಶಾಸ್ತ್ರವನ್ನು ವಿವೇಚಿಸುವ ಕೆಲಸ. ಇದಕ್ಕೆ ವಾಸ್ತವಿಕತೆಯೇ ಅವನ ಆದರ್ಶ. ಯಾವುದು ವಾಸ್ತವವಾಗಿ ಮೊದಲೋ ಮೊದಲು ಅದರ ವಿವೇಚನೆ; ನಂತರ ಅದರಿಂದ ಹುಟ್ಟಿದುದರ ನಿರೂಪಣೆ. ಆದುದರಿಂದ ಭರತ, ವಿಶಾಖಿಲ, ಮಾತೃಗುಪ್ತ, ಅಭಿನವಗುಪ್ತ ಮುಂತಾದವರು ತುಳಿದ ಹಾದಿಯನ್ನು ಬಿಟ್ಟು ಇತರ ಪೂರ್ವಾಚಾರ್ಯರಾದ ದತ್ತಿಲ, ಮತಂಗ, ನಾನ್ಯದೇವ, ಜಗದೇಕಮಲ್ಲ, ಮೊದಲಾದವರು ಅನುಸರಿಸಿದ ಜಿಜ್ಞಾಸಾಕ್ರಮವನ್ನು ಅವನು ಗ್ರಹಿಸಿದ್ದಾನೆ.

ಶಾರ್ಙ್ಗದೇವನೂ ಈ ಮೂರನೆಯ ಪ್ರಕರಣದ ವಿಕೃತಸ್ವರನಿರೂಪಣೆಯ ಸಂದರ್ಭದಲ್ಲಿ ಮುಂದೆ ನಾಲ್ಕನೆಯ ಪ್ರಕರಣದಲ್ಲಿ ಹೇಳಲಿರುವ ಗ್ರಾಮದ ಕಲ್ಪನೆಯನ್ನು ಬಳಸಿಕೊಂಡು ಪೌರ್ವಾಪರ್ಯ ವಿಪರ್ಯಾಸವೆಂಬ ದೋಷಕ್ಕೆ ಗುರಿಯಾಗಲಿಲ್ಲವೇ ಎಂಬ ಪ್ರಶ್ನೆಯು ಇಲ್ಲಿ ಏಳುತ್ತದೆ. ಇದಕ್ಕೆ ಇಲ್ಲವೆಂದೇ ಉತ್ತರ. ಏಕೆಂದರೆ ಭರತನ ಕ್ರಮಕ್ಕೂ ಶಾರ್ಙ್ಗದೇವನ ಕ್ರಮಕ್ಕೂ ವ್ಯತ್ಯಾಸವಿದೆ. ಭರತನಲ್ಲಿ ಮುಂದೆ ಹೇಳಬೇಕಾದ ಪ್ರಮೇಯದ ವಿವರಣೆಯಿದ್ದ ಹೊರತು ಹಿಂದಿನ ಪ್ರಮೇಯವು ಅರ್ಥವೇ ಆಗದು. ಶಾರ್ಙ್ಗದೇವನಲ್ಲಿ ಹಾಗಲ್ಲ. ಮುಂದಿನ ಪ್ರಮೇಯವನ್ನು ಹೆಸರಿನಲ್ಲಿ ಮಾತ್ರ ಅವನು ಹಿಂದೆ ಬಳಸುತ್ತಾನೆ. ಈ ಹೆಸರಿಲ್ಲದಿದ್ದರೂ, ಅದರ ಅರ್ಥದ ಜ್ಞಾನವು ಇಲ್ಲದಿದ್ದರೂ, ವಿಕೃತಸ್ವರ ವಿವೇಚನೆಯ ತಿಳುವಳಿಕೆಗೆ ವಿಶೇಷವಾದ ಬಾಧೆಯೇನೂ ತಟ್ಟುವುದಿಲ್ಲ. ಒಂದು ವಿಷಯವನ್ನು ನಿರೂಪಿಸುತ್ತಿರುವಾಗ ಅದಕ್ಕೆ ಸಂಬಂಧಪಟ್ಟ ಇತರ ವಿಶೇಷ ಸಂಗತಿಗಳನ್ನು ಹೇಳಬೇಕಾದಲ್ಲಿ ಅವನ್ನೆಲ್ಲಾ ಒಂದೇ ಎಡೆಯಲ್ಲಿ ಸಂಗ್ರಹಿಸಬೇಕೆಂಬುದು ಶಾಸ್ತ್ರಮರ್ಯಾದೆ. ಇದು ಎಲ್ಲಾ ಶಾಸ್ತ್ರಗಳಲ್ಲಿಯೂ ಕಂಡುಬರುತ್ತದೆ. ಗ್ರಾಮದ ಕಲ್ಪನೆಯಿಲ್ಲದಿದ್ದರೂ, ಸಾಧಾರಣ ಪ್ರಕ್ರಿಯೆಯ ಕಲ್ಪನೆಯಿಲ್ಲದಿದ್ದರೂ ವಿಕೃತಸ್ವರಗಳ ಸಂಖ್ಯೆಯನ್ನು ಇಲ್ಲಿ ತಿಳಿದಿದ್ದರೆ ಸಾಕು; ಇವುಗಳ ಪೂರ್ಣಜ್ಞಾನವನ್ನು ಆಯಾ ಪ್ರಕರಣದಲ್ಲಿ ಪಡೆಯಬಹುದು. ಅಲ್ಲದೆ ಇಡೀ ಗ್ರಂಥದಲ್ಲಿ ಶ್ರೀ ಶಾರ್ಙ್ಗದೇವನು ಮುಂದೆ ಬಳಸಲಿರುವ ಪ್ರಮೇಯವೊಂದರ ಸೂಚನೆಯನ್ನು - ಜಾತಿಪ್ರಕರಣದಲ್ಲಿ ಅಮುಖ್ಯವಾದ ಒಂದು ಉದಾಹರಣೆಯನ್ನು ಬಿಟ್ಟರೆ - ಹಿಂದೆ ಬಳಸಿರುವುದು ಮತ್ತೆಲ್ಲಿಯೂ ಕಂಡುಬರುವುದಿಲ್ಲ. ಹೀಗೆ ಮಾಡಿರುವ ಸಂದರ್ಭಗಳಲ್ಲಿಯೂ ಮುಂದೆ ಹೇಳಬೇಕಾದ ಪ್ರಮೇಯವನ್ನು ಅಥವಾ ಪ್ರಕ್ರಿಯೆಯನ್ನು ಪ್ರಕಾರಾಂತರದಲ್ಲಿ ಹೇಳಿ ಜಿಜ್ಞಾಸೆ, ಲಕ್ಷಣವಿನ್ಯಾಸ ಮುಂತಾದವುಗಳನ್ನು ಅವನು ಸಾಧಿಸುತ್ತಾನೆ. ಪ್ರಸಕ್ತ ವಿಷಯಕ್ಕೆ ಸಂಬಂಧಪಟ್ಟ ಸಂಗತಿಗಳೆಲ್ಲವೂ ಸಂಗ್ರಹರೂಪದಲ್ಲಿ, ಸುಲಭವಾಗಿ, ಒಂದೇ ಸ್ಥಳದಲ್ಲಿ ದೊರೆಯಬೇಕೆಂದು ಮಾತ್ರ ಶ್ರೀಮತ್ ಶಾರ್ಙ್ಗದೇವನು ಹೀಗೆ ಮಾಡುತ್ತಾನೆ.

ಆದರೆ ಭರತಮುನಿಯ ಕ್ರಮವು ಇದಕ್ಕೆ ವಿರುದ್ಧವಾದುದು. ಒಂದೇ ವಿಷಯಕ್ಕೆ ಸಂಬಂಧಿಸಿದ್ದರೂ ಅದರ ವಿವಿಧ ಸಂಗತಿಗಳನ್ನು ಆಯಾಯಾ ಸಂದರ್ಭಗಳಲ್ಲಿಯೇ ಹೇಳುವುದು ಅವನ ಮಾರ್ಗ. ದೀಪ್ತಾದಿ ಶ್ರುತಿಜಾತಿಗಳನ್ನು ಶ್ರುತಿನಿದರ್ಶನ ಸಂದರ್ಭ ಮುಂತಾದಲ್ಲಿ ಹೇಳದೆ ವರ್ಣಾಲಂಕಾರ ಲಕ್ಷಣಗಳ ನಡುವೆಯೂ, ಅಷ್ಟಾದಶ ಜಾತಿಗಳಿಗೆ ರಸವಿನಿಯೋಗವನ್ನು ದೂರದ ಬೇರೆ ಅಧ್ಯಾಯದಲ್ಲಿಯೂ, ಸ್ಥಾಯಿಗಳನ್ನು ಬಹು ಹಿಂದೆಯೂ ಅವನು ಹೇಳಿಬಿಟ್ಟಿರುವುದು ಇದಕ್ಕೆ ಉದಾಹರಣೆಗಳು. ಸಂಗೀತೋಪಯೋಗಿಗಳೇ ಆದರೂ ಸ್ವರ, ಶ್ರುತಿ,

ಗ್ರಾಮ, ಮೂರ್ಛನೆ, ಜಾತಿಗಳನ್ನು ಇಪ್ಪತ್ತೆಂಟನೆಯ ಅಧ್ಯಾಯದಲ್ಲಿಯೂ, ವರ್ಣಾಲಂಕಾರಗಳನ್ನೂ ಗೀತಿಗಳನ್ನೂ ಇಪ್ಪತ್ತೊಂಬತ್ತನೆಯ ಅಧ್ಯಾಯದಲ್ಲಿಯೂ ಹೇಳಿರುವುದೂ, ಹಾಗೆಯೇ ಅಲ್ಲಿಯೇ ಅಸಂಬದ್ಧಗಳಾದ ಧಾತು, ವೃತ್ತಿ, ಮುಂತಾದವುಗಳನ್ನು ಸೇರಿಸಿರುವುದೂ, ಶಬ್ದದ ಗುಣದೋಷಗಳು, ವಾದಕಗಾಯಕರ ಗುಣದೋಷಗಳು ಮುಂತಾದವುಗಳನ್ನು ಧ್ರುವಾ ಮತ್ತು ಅವನದ್ಧ ವಾದ್ಯಗಳ ಮಧ್ಯದಲ್ಲಿ ಸೇರಿಸಿರುವುದೂ ಇತರ ಉದಾಹರಣೆಗಳು. ಇದನ್ನೆಲ್ಲಾ ಸುವ್ಯವಸ್ಥೆಗೊಳಿಸಿ ಸಂಬಂಧಿತ ವಿಷಯಗಳನ್ನು ಸರಣಿಯಲ್ಲಿ ಅನುಕ್ರಮವಾಗಿ ವಿವೇಚಿಸುವುದು ಶಾರ್ಙ್ಗದೇವನೇ. ಅವನ ಈ ಸುಷ್ಠುಕ್ರಮವನ್ನು ಕುರಿತು ಈಗಾಗಲೇ ಹೇಳಿದೆ (ಪು. 38, 174, 175, 178, 179, ಇತ್ಯಾದಿ.)

ಆದುದರಿಂದ ಶ್ರೀ ಶಾರ್ಙ್ಗದೇವ ಸೂರಿಯ ಜಿಜ್ಞಾಸಾಕ್ರಮವೇ ಹೆಚ್ಚು ಗ್ರಾಹ್ಯವಾದುದು.

## II ಶ್ರುತಿ-ಸ್ವರಗಳ ಸಂಬಂಧಗಳು

ಶ್ರೀ ಶಾರ್ಙ್ಗದೇವನು 'ಶ್ರುತಿಭ್ಯಃ ಸ್ಯುಃ ಸ್ವರಾಃ' ಎಂಬ ಸೂತ್ರರೂಪದ ಮಾತಿನಲ್ಲಿ ವಿಶಾಲವಾದ ಬೇರೆ ಅರ್ಥವನ್ನೂ ವಿವಕ್ಷಿಸಿದ್ದಾನೆ. 'ಶ್ರುತಿಭ್ಯಃ' ಎಂಬ ಪಂಚಮೀ ವಿಭಕ್ತಿಯಿಂದ ಶ್ರುತಿಯು ಸ್ವರಕ್ಕೆ ಹೇತು, ಎಂದರೆ ಕಾರಣ ಎಂಬ ಅರ್ಥವನ್ನಿಲ್ಲಿ ಹೇಳುತ್ತಿದ್ದಾನೆ; ಇನ್ನು ಕೇವಲ ಮೂರು ಶ್ಲೋಕಗಳಷ್ಟು ಮುಂದೆ ಶ್ರುತಿಯು ಸ್ವರಕ್ಕೆ ಹೇತುವೆಂಬುದನ್ನು ಪುನಃ ಹೇಳಲಿದ್ದಾನೆ:

> ನನು ಶ್ರುತಿಶ್ಚತುರ್ಥ್ಯಾದಿರಸ್ತ್ವೇವಂ ಸ್ವರಕಾರಣಮ್ ।
> ತ್ರ್ಯಾದೀನಾಂ ತತ್ರ ಪೂರ್ವಾಸಾಂ ಶ್ರುತೀನಾಂ ಹೇತುತಾ ಕಥಮ್ ? 136

ಈ ಶ್ಲೋಕದಲ್ಲಿ, 'ಸ್ವರಕಾರಣಮ್' ಎಂಬ ಮಾತಿನಿಂದ ಶ್ರುತಿಯು ಸ್ವರಕ್ಕೆ ಕಾರಣವೆಂಬುದನ್ನು ಅತ್ಯಂತ ಸ್ಪಷ್ಟವಾಗಿಯೇ ಹೇಳಿದ್ದಾನಷ್ಟೆ. ಹೀಗೆ ಸ್ವರ-ಶ್ರುತಿಗಳಲ್ಲಿ ಕಾರ್ಯಕಾರಣ ಸಂಬಂಧವನ್ನು ಅವನು ಸ್ವೀಕರಿಸುತ್ತಾನೆ. ಅವನ ವ್ಯಾಖ್ಯಾನಕಾರರಲ್ಲಿ ಸಿಂಹಭೂಪಾಲನು ಬಿಚ್ಚುಮಾತಿನಲ್ಲಿಯೇ ಈ ಅಭಿಸಂಧಿಯನ್ನು ಹೊರಡಿಸಿದ್ದಾನೆ:

'ಶ್ರುತಿಭ್ಯಃ ಸ್ಯುಃ ಸ್ವರಾಃ' ಇತ್ಯುಕ್ತಮ್; ತತ್ರ ಶ್ರುತಿಭ್ಯ ಇತಿ ಪಂಚಮ್ಯಾ 'ಜನಿಕರ್ತುಃ ಪ್ರಕೃತಿಃ' ಇತ್ಯನೇನ ನ್ಯಾಯೇನ ಶ್ರುತೀನಾಂ ಸ್ವರಾನ್ ಪ್ರತಿ ಕಾರಣತ್ವಂ ಪ್ರತೀಯತೇ ।[358]

ಮೇಲಿನ ಮಾತುಗಳಿಗೆ ವ್ಯಾಖ್ಯಾನ ಬರೆಯುವಾಗಲೇ ಕಲ್ಲಿನಾಥನೂ ಪರೋಕ್ಷವಾಗಿ ಈ ಸಂಗೀತವನ್ನು ಶಾರ್ಙ್ಗದೇವನಲ್ಲಿ ಹೊರಡಿಸಿದ್ದಾನೆ. ಇದರಲ್ಲಿ ಅಭಿಸಂಧಿಯೇನೆಂದರೆ ಪೂರ್ವಾಚಾರರು ಶ್ರುತಿಸ್ವರಗಳ ಸಂಬಂಧಗಳ ವಿಷಯದಲ್ಲಿ ಹೇಳಿದ ಅನೇಕ ಮತಗಳನ್ನು ವಿವೇಚಿಸಿ, ತನ್ನದೇ ಸ್ವಂತ ನಿರ್ಧಾರಕ್ಕೆ ಬಂದು ಈ ಮಾತನ್ನು ಆಡಿದ್ದಾನೆ. ಹೀಗೆ ಗ್ರಂಥಾರಂಭದಲ್ಲಿ ಆಡಿದ

> ಅನ್ಯೇ ಚ ಬಹವಃ ಪೂರ್ವೇ ಯೇ ಸಂಗೀತಶಾಸ್ತ್ರವಿಶಾರದಾಃ ।
> ಅಗಾಧಬೋಧಮಂಥೇನ ತೇಷಾಂ ಮತಪಯೋನಿಧಿಮ್ ।
> ನಿರ್ಮಥ್ಯ ಶ್ರೀ ಶಾರ್ಙ್ಗದೇವಃ ಸಾರೋದ್ಧಾರಮಿಮಂ ವ್ಯಧಾತ್ ।[359]

ಎಂಬ ಮಾತನ್ನು ಅವನು ಪುನಃ ಪುನಃ ನಡೆಸಿಕೊಟ್ಟಿದ್ದಾನೆ. ಪೂರ್ವಾಚಾರ್ಯರು ಈ ವಿಷಯದಲ್ಲಿ ಸುಮಾರು ಒಂಬತ್ತು ವಿವಿಧ ಪಕ್ಷಗಳನ್ನು ಮಂಡಿಸಿದ್ದಾರೆ. ಇವುಗಳ ಹಿನ್ನೆಲೆಯಲ್ಲಿ ಶಾರ್ಙ್ಗದೇವನ ಮತವನ್ನು ವಿಮರ್ಶಿಸಿದಲ್ಲದೆ ಈ ಅಭ್ಯಾಸವು ಪೂರ್ತಿಯಾಗದು. ಆದುದರಿಂದ ಇವುಗಳನ್ನು ಇಲ್ಲಿ ಸಂಕ್ಷೇಪವಾಗಿ ಸಂಗ್ರಹಿಸಲಾಗುವುದು.

358 ಸಿಂಹಭೂಪಾಲ, ಉ.ಗ್ರಂ., ಪು. 86. 359 ಶಾರ್ಙ್ಗದೇವ, ಉ.ಗ್ರಂ., I, 1, 20-21.

ಈ ಪಕ್ಷಗಳಲ್ಲಿ ಆರನ್ನು ಎಂದಿನಂತೆ ಮತಂಗನೇ ಮೊದಲ ಬಾರಿಗೆ ಹೇಳಿದ್ದಾನೆ. ಇದನ್ನು ಸಿಂಹಭೂಪಾಲನು ಅಕ್ಷರಶಃ,[360] ಮತ್ತು ಕಲ್ಲಿನಾಥನು ಮತಂಗನ ಮಾತುಗಳನ್ನೇ ತನ್ನ ಮಾತುಗಳೊಡನೆ ಬೆರೆಸುತ್ತಾ[361] ಉದ್ಧರಿಸಿದ್ದಾರೆ. ಕುಂಭಕರ್ಣನು ಈ ಪಕ್ಷಗಳನ್ನು ಸಂಕ್ಷೇಪವಾಗಿ ಉಲ್ಲೇಖಿಸುತ್ತಾನೆ; [362] ಹಾಗೂ ತನ್ನ ಕಾಲದಲ್ಲಿ ಬಹುಶಃ ಪ್ರಚಲಿತವಾಗಿದ್ದ ಇತರ ಕೆಲವು ಮತಗಳನ್ನೂ ಸಂಗ್ರಹಿಸುತ್ತಾನೆ. ತುಳಜನು ಈ ಮತಗಳನ್ನು ತನ್ನದೇ ಮಾತುಗಳಲ್ಲಿ ಸಂಗ್ರಹಿಸುತ್ತಾನೆ.[363] ಮತಂಗನು ಶ್ರುತಿಸ್ವರಗಳ ಸಂಬಂಧದಲ್ಲಿ (1) ತಾದಾತ್ಮ್ಯ (2) ಕಾರಣಕಾರ್ಯ (3) ವಿವರ್ತ್ಯ-ವಿವರ್ತಕ (4) ಪರಿಣಾಮ (5) ಅಭಿವ್ಯಂಜಕ-ಅಭಿವ್ಯಂಗ್ಯ (6) ಅವಯವ-ಅವಯವೀ ಎಂಬ ಆರು ಪಕ್ಷಗಳನ್ನು ಇತರರಿಂದ (ಅವರ ಹೆಸರುಗಳನ್ನು ಹೇಳದೆ) ಸಂಗ್ರಹಿಸಿ, ಇವುಗಳಲ್ಲಿ ಪರಿಣಾಮವಾದ ಮತ್ತು ಅಭಿವ್ಯಕ್ತಿ ವಾದವನ್ನು ಒಪ್ಪಿ ಇತರ ಪಕ್ಷಗಳನ್ನು ಸಕಾರಣವಾಗಿ ಖಂಡಿಸುತ್ತಾನೆ. ಭರತ, ದತ್ತಿಲ, ಕೋಹಲ, ನಾರದ, ಅಭಿನವಗುಪ್ತ, ಸೋಮೇಶ್ವರ, ಜಗದೇಕಮಲ್ಲ ಮೊದಲಾದ ಇತರ ಪೂರ್ವಾಚಾರ್ಯರು ಯಾರೂ ಈ ವಿವಿಧ ಪಕ್ಷಗಳನ್ನು ಪ್ರಸ್ತಾಪಿಸಿಲ್ಲ.

## 1. ತಾದಾತ್ಮ್ಯಸಂಬಂಧ

ಎರಡು ವಸ್ತುಗಳಲ್ಲಿ ಅಭಿನ್ನತೆಯು ಇರುವುದಾದರೆ ಆಗ ತಾದಾತ್ಮ್ಯವು ಸಿದ್ಧಿಸುತ್ತದೆ. ಇದಕ್ಕೆ ಕಾಲದೇಶಗಳೆರಡರಲ್ಲಿಯೂ ಒಮ್ಮೆಗೇ ಅಭೇದವು ಇರಬೇಕು. ಅನ್ಯರಿಂದ ತಾದಾತ್ಮ್ಯವಾದವನ್ನು ಮತಂಗನು ಹೀಗೆ ಮಂಡಿಸುತ್ತಾನೆ:

ಇದಾನೀಂ ಶ್ರುತೀನಾಂ ತಾದಾತ್ಮ್ಯಾದಿ ವಿಕಲ್ಪಃ ಕಥ್ಯತೇ —

ತಾದಾತ್ಮ್ಯಂ ಚ ವಿವರ್ತತ್ವಂ ಕಾರ್ಯತ್ವಂ ಪರಿಣಾಮಿತಾ ।
ಅಭಿವ್ಯಂಜಕತಾ ಚಾಪಿ ಶ್ರುತೀನಾಂ ಪರಿಕಥ್ಯತೇ ।

ಇದಾನೀಂ ಏತದೇವ ವಿವೃಣೋತಿ —

ವಿಶೇಷಸ್ಪರ್ಶಶೂನ್ಯತ್ವಾಚ್ಛ್ರವಣೇಂದ್ರಿಯಗ್ರಾಹ್ಯತಾ ।
ಸ್ವರಶ್ರುತ್ಯೋಸ್ತು ತಾದಾತ್ಮ್ಯಂ ಜಾತಿವ್ಯಕ್ತ್ಯೋರಿವಾನಯೋಃ ॥ [364]

ಸಿಂಹಭೂಪಾಲನು ಈ ಶ್ಲೋಕದಲ್ಲಿ 'ಶ್ರವಣೇಂದ್ರಿಯಗಮ್ಯಯೋಃ' ಎಂದು ಸ್ವರಶ್ರುತಿಗಳಿಗೆ ವಿಶೇಷಣರೂಪವಾದ ಪಾಠಾಂತರವನ್ನು ಕೊಡುತ್ತಾನೆ.[358] ಕಲ್ಲಿನಾಥನು ಇದನ್ನು ತನ್ನ ಮಾತುಗಳಲ್ಲಿಯೇ ಹೇಳುತ್ತಾ ಮೂಲದಲ್ಲಿರುವ ವಿಶೇಷಸ್ಪರ್ಶಶೂನ್ಯತ್ವವನ್ನು ಹೇತುಗರ್ಭವನ್ನಾಗಿ ಮಾಡಿ ಶ್ರವಣೇಂದ್ರಿಯಗ್ರಾಹ್ಯತೆಯನ್ನು ಸ್ವರಶ್ರುತಿಗಳಿಗೆ ವಿಶೇಷಣವನ್ನಾಗಿ ಮಾಡುತ್ತಾನೆ: 'ಶ್ರವಣೈಕೇಂದ್ರಿಯಗ್ರಾಹ್ಯತ್ವಾದ್ವಿಶೇಷಸ್ಪರ್ಶಶೂನ್ಯಯೋಃ ಸ್ವರಶ್ರುತ್ಯೋರ್ಜಾತಿವ್ಯಕ್ತ್ಯೋರಿವ ತಾದಾತ್ಮ್ಯಮಿತಿ ಪ್ರಥಮಪಕ್ಷಃ ।' [361]

ಸ್ವರಶ್ರುತಿಗಳಲ್ಲಿ ತಾದಾತ್ಮ್ಯವನ್ನು ಹೇಳಲು ಈ ಪಕ್ಷವು ವಿಶೇಷ ಸ್ಪರ್ಶವಿಲ್ಲದಿರುವುದು, ಶ್ರವಣೇಂದ್ರಿಯವೆಂಬ ಒಂದೇ ಇಂದ್ರಿಯದಿಂದ ಗ್ರಹಿಸಲ್ಪಡುವುದು ಎಂಬ ಎರಡು ಹೇತುಗಳನ್ನೂ ಜಾತಿವ್ಯಕ್ತಿಗಳಂತೆ ಎಂಬ

360 ಸಿಂಹಭೂಪಾಲ, ಉ.ಗ್ರಂ., ಪು. 83-84.
361 ಕಲ್ಲಿನಾಥ, ಉ.ಗ್ರಂ., ಪು. 79.
362 ಕುಂಭಕರ್ಣ, ಉ.ಗ್ರಂ., II, 3, 134-178, ಪು. 83-86.
363 ತುಳಜ, ಉ.ಗ್ರಂ., II, ಪು. 10,
364 ಮತಂಗ, ಉ.ಗ್ರಂ., 31-32, ಪು. 7.

ಉದಾಹರಣೆಯನ್ನೂ ಕೊಡುತ್ತದೆ. ಸ್ಪರ್ಶ ಎಂಬುದಕ್ಕೆ ಇಲ್ಲಿ ಎರಡು ಅರ್ಥಗಳನ್ನು ಹೇಳಬಹುದು : ಸ್ಪರ್ಶವೆಂದರೆ ವ್ಯಾಕರಣದಲ್ಲಿ ಕಕಾರಾದಿಯಾಗಿ ಮಕಾರಾಂತವಾದ ಇಪ್ಪತ್ತೈದು ವ್ಯಂಜನಗಳು. ಶ್ರುತಿಸ್ವರಗಳೆರಡೂ ಶಬ್ದ ಸ್ವರೂಪಿಗಳೇ ಆಗಿದ್ದು ಎರಡೂ ಅಭಿವ್ಯಕ್ತಿಗಾಗಿ ವ್ಯಂಜನಾದಿಗಳನ್ನು ಬಳಸದೆ ಅಕಾರವೇ ಮೊದಲಾದ ಸ್ವರಗಳಲ್ಲಿ ಅಭಿವ್ಯಕ್ತವಾಗುತ್ತವಷ್ಟೆ. ಇಡೀ ಶಬ್ದಕೋಶದಲ್ಲಿ ಶ್ರುತಿಸ್ವರಗಳೆರಡಕ್ಕೆ ಮಾತ್ರ ಈ ಧರ್ಮವಿರುವುದು. ಈ ಸಾಧರ್ಮ್ಯ, ಸಾಜಾತ್ಯಗಳು ತಾದಾತ್ಮ್ಯಕ್ಕೆ ಕಾರಣವಾಗಿವೆ, ಎಂದು ಒಂದು ಅರ್ಥ. ಸಪ್ತಸ್ವರಗಳ ಹೆಸರುಗಳಲ್ಲಿಯೂ ಅವುಗಳ ಸಂಕೇತಗಳಲ್ಲಿಯೂ ವ್ಯಂಜನಗಳಿಲ್ಲವೇ ಎಂದರೆ, ಅವು ಹೆಸರಿಗಾಗಿ ಉಪಯುಕ್ತವಾದವುಗಳು. ಇವುಗಳಿಲ್ಲದಿದ್ದರೂ ಸಪ್ತಸ್ವರಗಳ ಮತ್ತು ಅವುಗಳ ಅವಾಂತರಭೇದಗಳ ಅಸ್ತಿತ್ವ, ಪ್ರಮಾಣ, ಇಯತ್ತೆ, ಕರ್ತವ್ಯ ಮುಂತಾದವುಗಳಿಗೆ ಬಾಧೆಯಿಲ್ಲ.

ಆದರೆ ಇದಕ್ಕಿಂತ ಹೆಚ್ಚು ಸಮಂಜಸವಾದ ಎರಡನೆಯ ಅರ್ಥವನ್ನು ಇಲ್ಲಿ ಹೊಂದಿಸಬಹುದು. ಮೀಮಾಂಸಕರೂ ತಾರ್ಕಿಕರೂ ವಿಶೇಷ ಸ್ಪರ್ಶವಿರುವುದನ್ನು ದ್ರವ್ಯವೆಂದು ಎಣಿಸುತ್ತಾರೆ. ಹೀಗೆ ದ್ರವ್ಯಕ್ಕೂ ಸ್ಪರ್ಶಕ್ಕೂ ಅವಿನಾಭಾವವೂ ವ್ಯಾಪ್ತಿಯೂ ಉಂಟು. ಎಲ್ಲೆಲ್ಲಿ ಸ್ಪರ್ಶವಿದೆಯೋ ಅಲ್ಲೆಲ್ಲಾ ದ್ರವ್ಯವಿದೆ. ಸ್ಪರ್ಶವಿಲ್ಲದೆಡೆಯಲ್ಲಿ ದ್ರವ್ಯವಿಲ್ಲ. ದ್ರವ್ಯವು ಉತ್ಪನ್ನವಾದ ಕ್ಷಣದಲ್ಲಿ ಗುಣರಹಿತವಾಗಿರುವುದೆಂದೂ ಮರುಕ್ಷಣದಲ್ಲಿಯೇ ಗುಣಗಳು ಕೂಡಿಕೊಂಡು ಇಂದ್ರಿಯ ಸಂಯೋಗದ ಕಾರಣದಿಂದ ಅದರ ಸ್ವರೂಪ, ಸ್ವಭಾವಾದಿಗಳು ಗೋಚರಿಸುವುವೆಂದೂ ತಾರ್ಕಿಕರ ಪರಿಭಾಷೆ. ಮೀಮಾಂಸಕರು ಶಬ್ದವನ್ನೂ ದ್ರವ್ಯವೆಂದೇ ಎಣಿಸುತ್ತಾರೆ. ಹೀಗೆ ಶ್ರುತಿಯನ್ನು ದ್ರವ್ಯವೆಂದಿಟ್ಟುಕೊಂಡು ಸ್ವರವನ್ನು ಅದರ ಗುಣವೆಂದರೆ ಎರಡರಲ್ಲಿಯೂ ದ್ರವ್ಯ–ಗುಣ ಇವುಗಳ ಸಂಬಂಧದಲ್ಲಿ ವಿವಕ್ಷಿತವಾದ ವೈಧರ್ಮ್ಯವುಂಟಾಗಿ ತಾದಾತ್ಮ್ಯವು ಸಿದ್ಧಿಸದೆ ಹೋಗುತ್ತದೆ. ಆದರೆ ಶಬ್ದಕ್ಕೆ ವಿಶೇಷಸ್ಪರ್ಶವೇ ಇಲ್ಲದುದರಿಂದ ಅದಕ್ಕೆ ದ್ರವ್ಯತ್ವವು ಇಲ್ಲವಾಗಿ ಗುಣವೇ ಸಿದ್ಧಿಸುವುದು ಸ್ಪಷ್ಟವಾಗಿದೆ. ಶಬ್ದವನ್ನು ಆಕಾಶದ ಗುಣವನ್ನಾಗಿ ಇಟ್ಟುಕೊಂಡಿರುವುದರಿಂದ ಅದು ಶ್ರುತಿ, ಸ್ವರ ಎಂಬ ರೂಪಗಳಲ್ಲಿ ಗೋಚರಿಸುತ್ತದೆ. ಆಗ ಸ್ವರಶ್ರುತಿಗಳೆರಡೂ ಗುಣಗಳೇ ಆಗಿ ಸಾಧರ್ಮ್ಯವು ಸಿದ್ಧಿಸುತ್ತದೆ. ಹೀಗೆ ಒಂದೇ ಧರ್ಮವಿರುವ ಇವೆರಡಕ್ಕೂ ಸಮಾನ ಜನಕತ್ವವೆಂಬ ಮತ್ತೊಂದು ಬಲವೂ ಇದೆ : ಎಂದರೆ ಎರಡೂ ಶ್ರೋತ್ರೇಂದ್ರಿಯವೆಂಬ ಒಂದೇ ಯೋನಿಯಲ್ಲಿ ಹುಟ್ಟಿದಂತಹವು. ಅಲ್ಲದೆ ಇವುಗಳಲ್ಲಿ ಅವಿನಾಭಾವವೂ ಸ್ವಭಾವ ಸಿದ್ಧವಾಗಿಯೇ ಇದೆ. ಏಕೆಂದರೆ ಸ್ವರವು ಶ್ರುತಿಯಿಲ್ಲದೆ ಅಭಿವ್ಯಕ್ತವಾಗಲಾರದಷ್ಟೆ. ಆದುದರಿಂದ ತಾದಾತ್ಮ್ಯವು ಸುಲಭವಾಗಿಯೇ ಸಿದ್ಧಿಸುತ್ತದೆ.

ಇದನ್ನು ಸಮರ್ಥಿಸಿಕೊಳ್ಳಲು ಈ ಪಕ್ಷವು ಜಾತಿವ್ಯಕ್ತಿಗಳ ಉಪಮೆಯನ್ನು ಕೊಡುತ್ತದೆ. ಇದನ್ನು ತರ್ಕಪರಿಭಾಷೆಯಿಂದ ಇಲ್ಲಿ ತೆಗೆದುಕೊಂಡಿದೆ. ತಾರ್ಕಿಕರು ಜಾತಿ ಅಥವಾ ಸಾಮಾನ್ಯ ಎಂಬ ನಾಲ್ಕನೆಯ ಪದಾರ್ಥವನ್ನೂ ಒಪ್ಪುತ್ತಾರೆ. ಒಂದೇ ವಿಧಕ್ಕೆ ಸೇರಿದ ವಸ್ತುಗಳಲ್ಲಿ ಇರುವ ಸಾಮಾನ್ಯಧರ್ಮವೇ ಜಾತಿ. ಘಟವೆಂಬುದು ವ್ಯಕ್ತಿಯಾದರೆ ಘಟತ್ವವು ಅದರ ಜಾತಿ. ಜಾತಿಯು ವ್ಯಕ್ತಿಯನ್ನೇ ಆಶ್ರಯಿಸಿಕೊಂಡು ಇದ್ದು ಇತರೇತರಾಶ್ರಯ ಸಂಬಂಧವನ್ನು ಹೊಂದಿರುವಂತಹುದು. ವ್ಯಕ್ತಿಯು ಅನಿತ್ಯವಾದರೂ ಜಾತಿಯು ವ್ಯಾಪಕವಾದುದು, ನಿತ್ಯವಾದುದು. ತಾರ್ಕಿಕರು ಇದನ್ನು 'ಜಾತಿವ್ಯಕ್ತ್ಯೋಃ ಗುಣಗುಣಿನೋಃ ಸಮವಾಯಃ' ಎನ್ನುತ್ತಾರೆ. ಸಮವಾಯ ಎಂದರೆ ಎಡೆಬಿಡದ ಸಂಬಂಧ, ನಿತ್ಯಸಂಬಂಧ, ತಾದಾತ್ಮ್ಯ. ಹೀಗೆ ಸ್ವರವು ವ್ಯಕ್ತಿ ; ಶ್ರುತಿಯು ಜಾತಿ ; ವ್ಯಕ್ತಿಯಲ್ಲಿರುವ ಜಾತಿಗೂ ವ್ಯಕ್ತಿಗೂ ಅನೇಕ ವಿಧದ ಸಂಬಂಧಗಳನ್ನು ಹೇಳಬಹುದಾದರೂ ಸಂಯೋಗಾದಿ ಆಗುಂತಕ ಸಂಬಂಧಗಳನ್ನು ದ್ರವ್ಯಗಳಲ್ಲಿ ಮಾತ್ರ ಹೇಳಬೇಕು. ಸ್ವರ ಶ್ರುತಿಗಳು ಗುಣಗಳಾದುದರಿಂದ ಅಲ್ಲಿ ಸಮವಾಯ ಸಂಬಂಧವನ್ನು, ಎಂದರೆ ತಾದಾತ್ಮ್ಯವನ್ನೇ ಹೇಳಬೇಕು.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## ತಾದಾತ್ಮ್ಯವಾದದ ನಿರಾಕರಣೆ

ಈ ವಾದವನ್ನು ಮತಂಗಮುನಿಯು ತಾರ್ಕಿಕರ ಮಾತಿನಲ್ಲಿಯೇ ನಿರಾಕರಿಸುತ್ತಾನೆ :

ಇದಾನೀಂ ಸಂಪ್ರವಕ್ಷ್ಯಾಮಿ ವಿಕಲ್ಪಸ್ಯ ಚ ದೂಷಣಮ್ ।
ಭೇದಃ ಸ್ವಲಕ್ಷಣಾನಾಂ (ಸ್ವರಕ್ಷಣಾನಾಂ) ಸಾಮಾನ್ಯೇನಾನ್ಯವಸ್ತುವತ್ ಸಿದ್ಧಃ ।
ತದ್ಧಿ ವಿಶೇಷೈಃ ಶೂನ್ಯಂ ಭವತಿ ನಭಃ ಪುಷ್ಪಸಂಕಾಶಮ್ ॥
ನಾನಾಬುದ್ಧಿಪ್ರಸಾಧ್ಯತ್ವಾತ್ ಸ್ವರಶ್ರುತ್ಯೋಸ್ತು ಭಿನ್ನತಾ ।
ಆಶ್ರಯಾಶ್ರಯಿಭಾಭೇದಾಚ್ಚ ತಾದಾತ್ಮ್ಯಂ ನೈವ ಸಿದ್ಧ್ಯತಿ ॥ [365]

ಸಿಂಹಭೂಪಾಲನು 'ಸ್ವಲಕ್ಷಣಾನಾಂ' 'ನಾನಾಬುದ್ಧಿಗೃಹೀತತ್ವಾತ್' 'ತಾದಾತ್ಮ್ಯಂ ಕೇನ ಸಿದ್ಧ್ಯತಿ' ಎಂಬ ಪಾಠಾಂತರಗಳನ್ನು ಕೊಡುತ್ತಾನೆ.[360] ಇಲ್ಲಿ 'ಸ್ವಲಕ್ಷಣಾನಾಂ' ಅಥವಾ 'ಸ್ವರಕ್ಷಣಾನಾಂ' ಎಂಬ ಪಾಠವನ್ನಿಟ್ಟುಕೊಳ್ಳುವುದರಿಂದ ತಾದಾತ್ಮ್ಯನಿರಾಕರಣವನ್ನು ಬೇರೆ ಬೇರೆ ರೀತಿಯಲ್ಲಿ ಸಾಧಿಸಬಹುದು. ಸಾಮಾನ್ಯವನ್ನೇ, ಎಂದರೆ ದ್ರವ್ಯ, ಗುಣ, ಕರ್ಮಗಳ ಸ್ವರೂಪವನ್ನೇ, ಸ್ಥೂಲವಾಗಿ ಜಾತಿಯೆಂದು ತಿಳಿಯಬಹುದು. ಸಾಮಾನ್ಯದಿಂದಲೇ ವಿವಿಧ ವಸ್ತುಗಳ ಭೇದವು ಸಿದ್ಧವಾಗುವುದಷ್ಟೆ. ಆದುದರಿಂದ 'ಸ್ವಲಕ್ಷಣಾನಾಂ ಭೇದಃ ಸಾಮಾನ್ಯೇನ ಅನ್ಯ-ವಸ್ತುವತ್ ಸಿದ್ಧಃ' ಎಂಬ ಮೇಲಿನ ಮಾತಿಗೆ ಸ್ವರಶ್ರುತಿಗಳ ಸ್ವಲಕ್ಷಣಗಳಲ್ಲಿ. ಎಂದರೆ ಸ್ವರದ ಲಕ್ಷಣದಲ್ಲಿ, ಮತ್ತು ಶ್ರುತಿಯ ಲಕ್ಷಣದಲ್ಲಿ ಪರಸ್ಪರ ಭೇದವು ಅವುಗಳಲ್ಲಿರುವ ಸಾಮಾನ್ಯದಿಂದಲೇ ಸಿದ್ಧವಾಗುತ್ತದೆ. ಸ್ವರಕ್ಷಣಾನಾಂ ಎಂದಿಟ್ಟುಕೊಂಡರೆ ಕ್ಷಣಶಬ್ದಕ್ಕೆ ಸೌಗತಾದಿಗಳ ಮತದಂತೆ ವಸ್ತುವೆಂದೇ ಅರ್ಥಮಾಡಬೇಕು. ಆಗ ಸ್ವರವೆಂಬ ಪದಾರ್ಥಗಳಲ್ಲಿ ಪರಸ್ಪರ ಭೇದವು ಸಾಮಾನ್ಯದಿಂದಲೇ ಸಿದ್ಧವಾಗುತ್ತದೆ. ಇವುಗಳಲ್ಲೇ ಭೇಧವಿರಲು ಇನ್ನು ಶ್ರುತಿಯೊಡನೆ ಭೇದವನ್ನು ಬೇರೆ ಸಾಧಿಸಲೇಬೇಕಾಗಿಲ್ಲ.

ಇವೆರಡು ಅರ್ಥಗಳಲ್ಲಿಯೂ, ಈ ತಾದಾತ್ಮ್ಯವು (ತತ್) ಗಗನ ಪುಷ್ಪದಂತೆ ಹೆಸರಿನಲ್ಲಿ ಮಾತ್ರ ಉಳಿಯುತ್ತದೆಯೇ ಹೊರತು ವಾಸ್ತವಿಕತೆಯಲ್ಲಲ್ಲ ; ಏಕೆಂದರೆ ವಿಶೇಷವೆಂಬ ಪದಾರ್ಥವು ಸ್ವರದಲ್ಲಿಯೂ ಶ್ರುತಿಯಲ್ಲಿಯೂ ಪೃಥಕ್ತ್ವವನ್ನು ತನಗೆ ತಾನೇ ಉಂಟುಮಾಡಿಕೊಡುತ್ತದೆ. ಭಿನ್ನತೆಯೂ ಭೇಧವು ಸಿದ್ಧವಾದರೆ, ಏಕೇಂದ್ರಿಯ ಗ್ರಾಹ್ಯತೆಯಿದ್ದರೂ ತಾದಾತ್ಮ್ಯವನ್ನು ಹೇಳಲಾಗದು. ಹೀಗೆ ವಿಶೇಷಸ್ಪರ್ಶಶೂನ್ಯತೆ, ಏಕೇಂದ್ರಿಯ ಗ್ರಾಹ್ಯತೆಗಳೆರಡೂ ತಾದಾತ್ಮ್ಯಸಿದ್ಧಿಗೆ ಅಪ್ರಯೋಜಕ ಹೇತುಗಳೇ ಆಗುತ್ತವೆ. ಅಷ್ಟೇ ಅಲ್ಲದೆ, ಇವುಗಳಲ್ಲಿ ಅಭೇದವನ್ನು ಕೇವಲ ಒಬ್ಬರ ಅಥವಾ ಇನ್ನೊಬ್ಬರ ದೃಷ್ಟಿಕೋನದ ಮಾತೆನ್ನಲಾಗದು. ಏಕೆಂದರೆ ನಾನಾಬುದ್ಧಿಗಳಿಗೂ (ಎಂದರೆ ಬೇರೆ ಬೇರೆ ಪರೀಕ್ಷಕರಿಗೂ) ಇವು ಬೇರೆ ಬೇರೆಯೆಂದೇ ಗೋಚರಿಸುತ್ತವೆ. ಆದುದರಿಂದ ಇವುಗಳಲ್ಲಿನ ಭೇದವು ವಾಸ್ತವಿಕವೇ ಆಗಿರಬೇಕು. ಮತ್ತೂ ಏನೆಂದರೆ ಸ್ವರ-ಶ್ರುತಿಗಳಲ್ಲಿ ಆಶ್ರಯ-ಆಶ್ರಯಿಭಾವವೂ ಇದೆ ; ಆಶ್ರಯ ಮತ್ತು ಆಶ್ರಯಿಗಳು ಭಿನ್ನಗಳೆಂದೇ ವ್ಯವಹಾರವಿದೆ. ಕಡೆಯದಾಗಿ, ಜಾತಿ-ವ್ಯಕ್ತಿಗಳ ಸಮವಾಯಸಂಬಂಧವೂ ಇಲ್ಲಿ ಸಲ್ಲುವುದಿಲ್ಲ. ಜಾತಿವ್ಯಕ್ತಿಗಳಲ್ಲಿನ ಸಂಬಂಧವು ಭೇದಾಭೇದದ್ದು. ಅಲ್ಲಿ ಅಭೇದವು ಸಿದ್ಧವಾಗದೆ ಕೇವಲ ಭೇದವು ಮಾತ್ರ ಸಿದ್ಧವಾಗಿದೆ. ಅಲ್ಲದೆ ಜಾತಿವ್ಯಕ್ತಿಗಳಲ್ಲಿ 'ನಿರ್ವಿಶೇಷಂ ನ ಸಾಮಾನ್ಯಂ' ಎಂಬ ನ್ಯಾಯದಂತೆಯೂ ಜಾತಿವ್ಯಕ್ತಿಗಳಲ್ಲಿ ಸಂವಿತ್‌ಸಂವೇದ್ಯತ್ವಗಳು ಸಮಾನವಾಗಿರುತ್ತವೆಂದು ಎಲ್ಲಾ ಶಾಸ್ತ್ರಗಳಲ್ಲಿಯೂ ಸಿದ್ಧವಾಗಿರುವುದರಿಂದಲೂ, ಪ್ರಕೃತವಾದ ಸ್ವರ-ಶ್ರುತಿಗಳಲ್ಲಿ ಇವೆರಡೂ ಅನ್ವಯವಾಗದಿರುವುದರಿಂದಲೂ ದೃಷ್ಟಾಂತ ವೈಷಮ್ಯವೇ ಉಂಟಾಯಿತು. ಆದುದರಿಂದ ತಾದಾತ್ಮ್ಯವಾದವನ್ನು ಒಪ್ಪಲಾಗದು.

365 ಅದೇ ಗ್ರಂಥ, 37-39, ಪು. 8.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇಲ್ಲಿ ಮತಂಗನು ಭಾಟ್ಟ (ಕೌಮಾರಿಲ) ಸಂಪ್ರದಾಯದ ಅರ್ಥವನ್ನು ನಿರಾಕರಿಸುತ್ತಿರುವುದು ಸ್ಪಷ್ಟವಾಗಿದೆ. ಏಕೆಂದರೆ ಪೂರ್ವಮೀಮಾಂಸಕರೇ ದ್ರವ್ಯ, ಜಾತಿ, ಗುಣ, ಕ್ರಿಯೆ, ಅಭಾವ ಎಂಬ ಐದು ಪದಾರ್ಥಗಳನ್ನೂ ದ್ರವ್ಯಗಳಲ್ಲಿ ಪೃಥಿವೀ ಮೊದಲಾದ ಐದು ಭೂತಗಳು, ತಮಸ್ಸು, ಕಾಲ, ದಿಕ್ಕು, ಆತ್ಮ, ಮನಸ್ಸು ಮತ್ತು ಶಬ್ದ ಎಂಬ ಹನ್ನೊಂದನ್ನೂ ಎಣಿಸುವುದು. ಮತ್ತು ಅವಯವ-ಅವಯವೀ, ಗುಣ-ಗುಣೀ, ಜಾತಿ-ವ್ಯಕ್ತಿ ಮುಂತಾದವುಗಳಲ್ಲಿ ತಾದಾತ್ಮ್ಯವಿದೆಯೆಂದು ಅವರು ಹೇಳಿದ್ದಾರೆ. ಈ ಸಂಬಂಧಗಳಲ್ಲಿ ತಾದಾತ್ಮ್ಯವನ್ನು ಮತಂಗನು ಒಪ್ಪುವುದಿಲ್ಲ.

## 2. ವಿವರ್ತ್ಯ-ವಿವರ್ತಕ ಸಂಬಂಧ

ಎರಡನೆಯದಾಗಿ, ಶ್ರುತಿ-ಸ್ವರಗಳಲ್ಲಿ ವಿವರ್ತಕ-ವಿವರ್ತ್ಯ ಸಂಬಂಧವನ್ನು ಹೇಳುವ ಪಕ್ಷವೊಂದನ್ನು ಮತಂಗನು ಉದ್ಧರಿಸುತ್ತಾನೆ :

ನರಾಣಾಂ ಚ ಮುಖಂ ಯದ್ವತ್ ದರ್ಪಣೇ ತು ವಿವರ್ತಿತಮ್ ।
ಪ್ರತಿಭಾತಿ ಸ್ವರಸ್ತದ್ವಚ್ಛ್ರುತಿಷ್ವೇವ ವಿವರ್ತಿತಃ ॥ [366]

ಇದನ್ನು ಸಿಂಹಭೂಪಾಲನು ಹೀಗೆ ಪಠಿಸಿಕೊಂಡಿದ್ದಾನೆ :

ನರಾಣಾಂ ತು ಮುಖಂ ಯದ್ವದ್ದರ್ಪಣೇಷು ವಿವರ್ತತೇ ।
ಪ್ರತಿಭಾಂತಿ ಸ್ವರಾಸ್ತದ್ವಚ್ಛ್ರುತಿಷ್ವೇವ ವಿವರ್ತಿನಃ । [360]

ಈ ಪಾಠವೇ ಹೆಚ್ಚು ಸಮೀಚೀನವಿರಬಹುದು. ಏಕೆಂದರೆ ಇದರ ನಿರಾಕರಣಸಮಯದಲ್ಲಿಯೂ ಸ್ವರಶಬ್ದಕ್ಕೆ ಬಹುವಚನವನ್ನು ಹೇಳಿದೆ; ಕಲ್ಲಿನಾಥನೂ ಇದರ ತಾತ್ಪರ್ಯಸಂಗ್ರಹದಲ್ಲಿ 'ಸ್ವರಾ ವಿವರ್ತಂತೇ,' 'ಸ್ವರಾಣಾಂ,' 'ತೇಷಾಂ,' ಎಂದು ಬಹುವಚನವನ್ನು ಬಳಸಿದ್ದಾನೆ. ವಿವರ್ತವಾದವು ವೇದಾಂತಿಗಳು ಹೇಳಿದ್ದು. ಇದರಲ್ಲಿ ಪರಬ್ರಹ್ಮವಸ್ತುವಿಗೆ ಪಾರಮಾರ್ಥಿಕ, ಜಗತ್ತಿಗೆ ವ್ಯಾವಹಾರಿಕ, ಶುಕ್ತಿರಜತಾದಿಗಳಲ್ಲಿ ಪ್ರಾತಿಭಾಸಿಕ ಎಂಬ ಮೂರು ವಿಧದ ಸತ್ತಾಗಳಿರುತ್ತವೆ; ಬ್ರಹ್ಮದ ಪಾರಮಾರ್ಥಿಕ ಸತ್ಯವು ವ್ಯಾವಹಾರಿಕ ಅಥವಾ ಮತ್ತು ಪ್ರಾತಿಭಾಸಿಕ ಸತ್ಯವಾಗಿ ಪ್ರಕಟವಾದಾಗ ಅದು ವಿವರ್ತಿತವಾಯಿತು, ಎನ್ನುತ್ತಾರೆ. ಆಗ ಅದು ತನ್ನ ನಿಜಸ್ವರೂಪಕ್ಕೆ ವಿರುದ್ಧವಾದ ಸ್ವರೂಪದಲ್ಲಿ ಪ್ರಕಟವಾಗುತ್ತದೆ ; ಈ ಅಭಿವ್ಯಕ್ತಿರೂಪವು ಕೇವಲ ಭ್ರಾಂತಿಮೂಲವಾಗಿರುತ್ತದೆ ; ಆದರೆ ವ್ಯವಹಾರವಿರುವವರೆಗೂ ಸತ್ಯವೇ ಆಗಿರುತ್ತದೆ ; ವ್ಯವಹಾರದಲ್ಲಿರುವವರೆಗೆ ಅದಕ್ಕೆ ಕಾರ್ಯಕಾರಿತ್ವವೂ ಇರುತ್ತದೆ ; ಪ್ರಾತಿಭಾಸಿಕ ಸತ್ಯಕ್ಕೆ ವ್ಯಾವಹಾರಿಕ ಕಾಲದಲ್ಲಿ ಅದೂ ಇರುವುದಿಲ್ಲ.

ಈ ಸಂಬಂಧವನ್ನು ಶ್ರುತಿಸ್ವರಗಳಿಗೆ ಅನ್ವಯಿಸಿ ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಿದೆ: ಮನುಷ್ಯರ ಮುಖವು ಕನ್ನಡಿಯಲ್ಲಿ ಹೇಗೆ ವಿವರ್ತವಾಗುತ್ತದೆಯೋ, ಹಾಗೆಯೇ ಸ್ವರಗಳು ಶ್ರುತಿಗಳಲ್ಲಿ ವಿವರ್ತವಾಗುತ್ತವೆ. ಮುಖವು ಕನ್ನಡಿಯಲ್ಲಿ ಪ್ರತಿಬಿಂಬಿತವಾದಾಗ ಆಗುವ ಕೆಲವು ಸಂಗತಿಗಳನ್ನು ಸ್ಮರಿಸಿಕೊಳ್ಳಬೇಕು : ಮುಖವಾದ ಬಿಂಬವು ನಿತ್ಯ ; ಅದರ ಅಸ್ತಿತ್ವಕ್ಕೆ ವಿವರ್ತರೂಪದಲ್ಲಿ ಗೋಚರವಾಗುವ ಅಥವಾ ಗೋಚರವಾಗದ ಪ್ರತಿಬಿಂಬದಿಂದ ಬಾಧೆಯೇನಿಲ್ಲ. ಪ್ರತಿಬಿಂಬವಾದರೋ ಅನಿತ್ಯವಾದುದು. ಬಿಂಬವೂ ಪ್ರತಿಬಿಂಬವೂ ಪರಸ್ಪರ ವಿರುದ್ಧಗಳಾಗಿರುತ್ತವೆ, ಎಂದರೆ ಎದುರುಬದರಾಗಿ ಇರುತ್ತವೆ. ಮುಖವು ಪೂರ್ವದಿಕ್ಕಿಗೆ ತಿರುಗಿದ್ದರೆ ಪ್ರತಿಬಿಂಬವು ಪಶ್ಚಿಮಕ್ಕೆ ತಿರುಗಿರುತ್ತದೆ. ಮುಖದ ಎಡಭಾಗವು ವಿವರ್ತವಾದ ಪ್ರತಿಬಿಂಬಕ್ಕೆ ಬಲಭಾಗವೂ, ಅದರ ಬಲಭಾಗವು

366 ಅದೇ ಗ್ರಂಥ, 33, ಪು. 7.

ಪ್ರತಿಬಿಂಬದ ಎಡಭಾಗವೂ ಆಗಿರುತ್ತವೆ. ಹೀಗೆ ಎರಡೂ ಪರಸ್ಪರ ವಿರುದ್ಧಗಳಾಗಿರುತ್ತವೆ. ಆದರೆ ಇದು ಮುಖವೇ ಎಂಬ ಸಾದೃಶ್ಯ ಜ್ಞಾನವನ್ನೂ, ಮಿಥ್ಯಾ ಜ್ಞಾನವನ್ನೂ ಬಿಂಬವು ಉಂಟುಮಾಡುತ್ತದೆ. ಬಿಂಬವಿರುವವರೆಗೆ ಮತ್ತು ದರ್ಪಣವಿರುವವರೆಗೆ ಮಾತ್ರ ಪ್ರತಿಬಿಂಬವೂ ಇರುತ್ತದೆ. ಬಿಂಬವು ವಿವರ್ತವಾಗಬೇಕಾದರೆ ದರ್ಪಣದಂತಹ ಒಂದು ಬಾಹ್ಯಸಾಧನವೊಂದರ ಆವಶ್ಯಕತೆಯಿರುತ್ತದೆ. ಹೀಗೆಯೇ ಸ್ವರಗಳು ಶ್ರುತಿಗಳೆಂಬ ಕನ್ನಡಿಯಲ್ಲಿ ವಿವರ್ತಿತವಾಗಿವೆ.

ಆದುದರಿಂದ ಸ್ವರವು ಭ್ರಾಂತಿಜ್ಞಾನಮೂಲವಾಗಬೇಕು ; ಶ್ರುತಿಗೆ ವಿರೋಧಭಾವವನ್ನು ತಳೆದಿರಬೇಕು ; ಅನಿತ್ಯವಾಗಿರಬೇಕು ; ಶ್ರುತಿಯೊಂದಿಗೆ ಸಾದೃಶ್ಯವನ್ನು ಪಡೆದಿರಬೇಕು ; ಅದರ ಜ್ಞಾನವು ಮಿಥ್ಯಾಸ್ವರೂಪದ್ದಾಗಿರಬೇಕು. ಇದನ್ನೆಲ್ಲಾ ಮತಂಗನು ಒಂದೇ ಮಾತಿನಲ್ಲಿ ನಿರಾಕರಿಸುತ್ತಾನೆ :

ಯದಭಾಣಿ ವಿವರ್ತತ್ವಂ ಶ್ರುತೀನಾಂ ತದಸಂಗತಮ್ |
ವಿವರ್ತತ್ವೇ ಸ್ವರಾಣಾಂ ಹಿ ಭ್ರಾಂತಿಜ್ಞಾನಂ ಪ್ರಸಜ್ಯತೇ || [367]

ಇಲ್ಲಿ ಸಿಂಹಭೂಪಾಲನ 'ಸ್ವರಾಣಾಂ ತದಸಂಗತಮ್' ಎಂಬ ಪಾಠವೇ [360] ಹೆಚ್ಚು ಪ್ರಶಸ್ತವಾಗಿದೆ. ಸ್ವರವು ವಿವರ್ತ ಸ್ವರೂಪದ್ದೆಂದು ಹೇಳುವುದು ಅಸಂಗತವಾದುದು ; ಏಕೆಂದರೆ ವಿವರ್ತವಾಗಿದ್ದಿದ್ದರೆ ಅದು ಕೇವಲ ಭ್ರಾಂತಿಯಿಂದ ಉಂಟಾದುದು ಆಗಿರಬೇಕು; ಅನಿತ್ಯವಾಗಿರಬೇಕು. ಸ್ವರವು ವ್ಯವಹಾರದಲ್ಲಿ ಇದಕ್ಕೆ ವಿರುದ್ಧವಾಗಿಯೇ ಕಾಣುತ್ತದೆ ; ಅದು ಅಬಾಧಿತಪ್ರಯೋಗವನ್ನು ಪಡೆದಿದೆ. ಅಂತರಗತ ಶ್ರುತಿಗಾದರೂ ಅಸ್ತಿತ್ವವನ್ನು ಅನುಮಿತಿಯಿಂದಲೋ ಅರ್ಥಾಪತ್ತಿಯಿಂದಲೋ ಪಡೆಯಬೇಕು. ಸ್ವರವಾದರೋ ಪ್ರತ್ಯಕ್ಷವಾಗಿಯೇ ಇದೆ.

ಮತಂಗನಾಗಲೀ, ಸಿಂಹಭೂಪಾಲ, ಕಲ್ಲಿನಾಥರಾಗಲೀ ಹೇಳದಿದ್ದ ಇನ್ನೂ ಒಂದು ಆಕ್ಷೇಪಣೆಯು ಈ ಪಕ್ಷದಲ್ಲಿ ಸಲ್ಲುತ್ತದೆ : ಕನ್ನಡಿಯಲ್ಲಿ ಪ್ರತಿಬಿಂಬವು ವಿವರ್ತಸ್ವರೂಪದಲ್ಲಿರಲು, ಎಂದರೆ ಕೇವಲ ವ್ಯಾವಹಾರಿಕ ಸತ್ಯತ್ವವನ್ನು ಪಡೆದಿರಲು, ಪಾರಮಾರ್ಥಿಕ ಸತ್ಯವಾದ ಮುಖವು ಆವಶ್ಯಕವಾಗುತ್ತದೆ. ಆದರೆ ಇಲ್ಲಿ ಶ್ರುತಿಯನ್ನು ಕನ್ನಡಿಯೆಂದು ಹೇಳಿ ಸ್ವರವನ್ನು ವಿವರ್ತ ಸ್ವರೂಪವೆಂದು ಹೇಳಿದರೆ, ಈ ಪ್ರತಿಬಿಂಬವನ್ನು ಉಂಟುಮಾಡುವ, ಪಾರಮಾರ್ಥಿಕ ಸತ್ಯತ್ವವುಳ್ಳ, ಬಿಂಬಸ್ವರೂಪದ ಮತ್ತೇನನ್ನೋ ಹೇಳಬೇಕಾಗುತ್ತದೆ ; ಅಂತಹ ಬೇರೆ ವಸ್ತುವು ಸಂಗೀತ ಶಾಸ್ತ್ರದಲ್ಲಿಯಾಗಲೀ ಲಕ್ಷ್ಯದಲ್ಲಿಯಾಗಲೀ ದೊರೆಯುವುದಿಲ್ಲ. ಅಷ್ಟೇ ಅಲ್ಲದೆ, ವಿವರ್ತಸ್ವರೂಪವು ಸ್ವರವೆಂದರೆ ಇದು ಪಾರಮಾರ್ಥಿಕ ಸತ್ಯವೂ ನಿತ್ಯವೂ ಆಗಿರುವ ಈ ಇನ್ನೇನೋ ಎಂಬುದರ ವಿರುದ್ಧಸ್ವರೂಪವನ್ನು ತಿಳಿಸಿಕೊಡುತ್ತದೆ, ಎಂದಾಗುತ್ತದೆ. ಎಂದರೆ ಇಡೀ ಗಾನಪ್ರಪಂಚಸರ್ವಸ್ವವು ಅನಿತ್ಯವೂ, ಮೂಲವಿರುದ್ಧವೂ ಆಗಿರುವ ಯಾವುದನ್ನೋ ಆಧರಿಸಿಕೊಂಡಿದೆಯೆಂಬ ಅನುಮಿತಿಯು ಹುಟ್ಟುತ್ತದೆ. ಇದರಿಂದ ಸಂಗೀತಕಲೆಗೂ ಶಾಸ್ತ್ರಕ್ಕೂ ವೇದೋಪಪನಸತಿ ಲೋಪವಾಗಿಬಿಡುತ್ತದೆ. ನಾದಬ್ರಹ್ಮವು ಪಾರಮಾರ್ಥಿಕ ಸತ್ಯವೆಂದೂ ಸ್ವರಮೂಲವಾದ ಗಾನಪ್ರಪಂಚವು ವ್ಯಾವಹಾರಿಕ ಸತ್ಯವೆಂದೂ ನಾದಬ್ರಹ್ಮವು ಶ್ರುತಿಯೆಂಬ ಅಂತಃಕರಣದಲ್ಲಿ ವಿವರ್ತಿತವಾಗಿ ಸ್ವರವಾಗಿದೆಯೆಂದೂ ಏಕೆ ಹೇಳಬಾರದೆಂಬ ಪ್ರಶ್ನೆಯನ್ನು ಇಲ್ಲಿ ಕೇಳಬಹುದು. ಮೊದಲನೆಯದಾಗಿ, ಈ ಕಲ್ಪನೆಗೆ ಶಾಸ್ತ್ರಸಮ್ಮತಿಯಿಲ್ಲ; ಎರಡನೆಯದಾಗಿ ಶ್ರುತಿಯು ಅಂತಃಕರಣ ಸ್ವರೂಪದ್ದೆಂಬುದಕ್ಕೆ ಯಾವ ಸಮರ್ಥನೆಯೂ, ಪ್ರಮೇಯವೂ ದೊರೆಯುವುದಿಲ್ಲ. ಅಂತಃಕರಣವು ಅಗೋಚರವಾದುದು ; ಶ್ರುತಿಯಾದರೋ 'ಶ್ರವಣೇಂದ್ರಿಯ-ಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್' 'ಶ್ರೂಯತ ಇತಿ ಶ್ರುತಿಃ' ಎಂದು ಮುಂತಾದ ಲಕ್ಷಣಗಳಿಂದ ಪ್ರತ್ಯಕ್ಷವೇ ಆಗಿದೆ. ಅಲ್ಲದೆ ವ್ಯಾವಹಾರಿಕ ಸತ್ಯತ್ವವುಳ್ಳ ಈ ವಿವರ್ತವಾದ ಜಗತ್ತಿಗೆ ಬ್ರಹ್ಮವನ್ನು ಬಿಟ್ಟು ಬೇರೆ

367 ಅದೇ ಗ್ರಂಥ, 40, ಪು. 8.

### 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಸ್ವತಂತ್ರವಾದ ಅಸ್ತಿತ್ವವಿಲ್ಲ; ಆದರೆ ಸ್ವರಕ್ಕೆ 'ಸ್ವತೋ ರಂಜಯತಿ' ಎಂಬ ಲಕ್ಷಣದಿಂದ ನಿರಾಲಂಬವಾದ ಅಸ್ತಿತ್ವವೇ ಇದೆ.

ಹೀಗಲ್ಲದಿದ್ದರೆ ಬೇಡ, ಶ್ರುತಿಯೆಂಬ ಕನ್ನಡಿಯಲ್ಲಿ ಪಾರಮಾರ್ಥಿಕ ಸತ್ಯತ್ವವುಳ್ಳ ಸ್ವರವು ವಿವರ್ತಿತವಾಗಿ ಭ್ರಾಂತಿಮೂಲವಾದ ಇನ್ನೇನನ್ನೋ ಪ್ರತಿಬಿಂಬಿಸುತ್ತಿದೆ ಎಂದೇಕೆ ಇಟ್ಟುಕೊಳ್ಳಬಾರದು, ಎಂದೂ ಪೂರ್ವಪಕ್ಷವನ್ನಿಲ್ಲಿ ಹೇಳಬಹುದು. ಹೀಗೆ ಮಾಡಿದರೆ ಪ್ರಸಿದ್ಧವಾಗಿರುವ ಈ ಗಾನವ್ಯವಹಾರವು ಕೇವಲ ಭ್ರಾಂತಿಯೆಂದೂ, ಅನಿತ್ಯವಾಗಿ, ಮಿಥ್ಯಾಸ್ವರೂಪದ್ದೆಂದೂ ಹೇಳಬೇಕಾಗುತ್ತದೆ. ಹೀಗೆ ಪ್ರತಿಬಿಂಬಿತವಾದುದು ಸ್ವರದ ಲಕ್ಷಣಕ್ಕೆ ವಿರುದ್ಧವಾಗಿರಬೇಕಷ್ಟೆ; ಎಂದರೆ ಸ್ವರದ ಅನುರಣನ, ರಕ್ತಿ, ಮುಂತಾದ ಧರ್ಮಗಳಿಗೆ ವಿರುದ್ಧವಾಗಿರಬೇಕು. ಆದರೆ ಇವು ಯಾರಿಗೂ ಗೋಚರವಾಗುತ್ತಿಲ್ಲ; ಎಲ್ಲರ ಅನುಭವಕ್ಕೂ ವಿರುದ್ಧವಾಗಿದೆ. ಇವುಗಳಿಗೂ ಸ್ವರಲಕ್ಷಣಕ್ಕೂ ವಿರುದ್ಧಧರ್ಮವಿಲ್ಲವೆಂದು ನಾನಾಬುದ್ಧಿಪ್ರಸಾಧ್ಯವಾಗಿಯೇ ಇದೆ. ಆದುದರಿಂದ ಸ್ವರ-ಶ್ರುತಿಗಳಿಗೆ ವಿವರ್ತಸಂಬಂಧವನ್ನು ಹೇಳಲಾಗದು.

### ೩ ಕಾರ್ಯ-ಕಾರಣಸಂಬಂಧ

ಮೂರನೆಯದಾಗಿ, ಕೆಲವರು ಸ್ವರ-ಶ್ರುತಿಗಳಿಗೆ ಕಾರ್ಯ-ಕಾರಣಸಂಬಂಧವನ್ನು ಹೇಳುತ್ತಾರೆ. ಇಲ್ಲಿ ಸ್ವರವು ಕಾರ್ಯವೆಂದೂ ಶ್ರುತಿಯು ಕಾರಣವೆಂದೂ ಅರ್ಥ. ಇದು ಬಹಳ ಪ್ರಬಲವಾದ ವಾದವೇ. ಎಂದೇ ಶ್ರೀ ಶಾರ್ಙ್ಗದೇವನೂ ಇದನ್ನೇ ಸ್ವೀಕರಿಸಿದ್ದಾನೆ. ಈ ಮತದ ಮಂಡನವು ಹೀಗಿದೆ:

ಶ್ರುತೀನಾಂ (? ಸ್ವರಾಣಾಂ) ಶ್ರುತಿಕಾರ್ಯತ್ವಮಿತಿ ಕೇಚಿದ್ ವದಂತಿ ಹಿ ।
ಮೃತ್ಪಿಂಡದಂಡಕಾರ್ಯತ್ವಂ ಘಟಸ್ಯೇಹ ಯಥಾ ಭವೇತ್ । 368

ಮೂಲಗ್ರಂಥದಲ್ಲಿರುವ 'ಶ್ರುತೀನಾಂ ಶ್ರುತಿಕಾರ್ಯತ್ವಮಿತಿ' ಎಂಬ ಭ್ರಷ್ಟವೂ ನಿರರ್ಥಕವೂ ಆಗಿರುವ ಪಾಠವನ್ನು ಸಿಂಹಭೂಪಾಲನ ಪಾಠದಿಂದಲೂ[360] ('ಸ್ವರಾಣಾಂ' ಎಂಬ ಒಂದು ಶಬ್ದದ ಹೊರತು ಈ ಶ್ಲೋಕವು ಅವನಿಂದ ಹೀಗೆಯೇ ಪಠಿತವಾಗಿದೆ), ಕಲ್ಲಿನಾಥನ 'ಯಥಾ ಘಟಸ್ಯ ಮೃತ್ಪಿಂಡದಂಡಾದಿ ಕಾರ್ಯತ್ವಂ ತಥಾ ಸ್ವರಾಣಾಂ ಶ್ರುತಿಕಾರ್ಯತ್ವಮಿತಿ' ಎಂಬ ಮಾತಿನಿಂದಲೂ,[361] ಮೇಲಿನಂತೆ ತಿದ್ದಿದೆ. ಕುಂಭಕರ್ಣ ತುಳಜರೂ ಈ ಪಾಠಶೋಧನವನ್ನು ಸಮರ್ಥಿಸುತ್ತಾರೆ.

### ಪರಿಭಾಷೆ

ಭಾರತೀಯ ನ್ಯಾಯಶಾಸ್ತ್ರದಲ್ಲಿ ಕಾರ್ಯಕಾರಣಸಂಬಂಧಕ್ಕಿಂತ ಹೆಚ್ಚು ವಿವೇಚನೆ, ವಿಮರ್ಶೆ, ವಿಸ್ತಾರಗಳಿಗೆ ಒಳಪಟ್ಟ ಅಭ್ಯಾಸವು ಬೇರೊಂದಿಲ್ಲ. ಪಾಶ್ಚಾತ್ಯ ತತ್ತ್ವಶಾಸ್ತ್ರವು ತ್ರಿಕಾಲಗಳಲ್ಲಿ ಸಾಧಿಸಬಹುದಾದುದನ್ನೆಲ್ಲಾ ಸಾವಿರಾರು ವರ್ಷಗಳ ಹಿಂದೆಯೇ ಭಾರತೀಯ ದಾರ್ಶನಿಕರು ಸಾಧಿಸಿಬಿಟ್ಟಿದ್ದಾರೆ. ಉತ್ಪನ್ನವಾದ ಒಂದು ವಸ್ತುವು (ಕಾರ್ಯವು) ಯಾವುದರಿಂದ ಇದು ಹುಟ್ಟಿತು ಎಂದು ಪರೀಕ್ಷಿಸಿದಾಗ, ಯಾವ ಪದಾರ್ಥಗಳಿಂದ ಕಾರ್ಯವು ಹುಟ್ಟಿದೆಯೋ ಅವುಗಳಿಗೆ ಕಾರಣಗಳೆಂದು ಹೆಸರು. ಹೀಗೆ ಕಾರಣವು ಜನಕವೂ ಕಾರ್ಯವು ಜನ್ಯವೂ ಆಗಿರುತ್ತದೆ. ಕಾರಣಗಳು ಸಾಧಾರಣ, ನಿಮಿತ್ತ, ಅಸಮವಾಯಿ, ಸಮವಾಯಿ (ಉಪಾದಾನ) ಎಂದು ನಾಲ್ಕು ಬಗೆ. ಭಾರತೀಯ ತರ್ಕಶಾಸ್ತ್ರದಲ್ಲಿ ಘಟ (ಮಡಕೆ)ದ ಉದಾಹರಣೆಯಿಂದ ಈ ಪರಿಭಾಷೆಯನ್ನು ಸರ್ವತ್ರ ವರ್ಣಿಸಿರುವುದರಿಂದ, ಅಭ್ಯಾಸಿಗಳಿಗೆ ಸೌಕರ್ಯವಾಗಲೆಂದು ಅದೇ ಉದಾಹರಣೆಯ ಮೂಲಕವೇ ಇಲ್ಲಿಯೂ ವಿವರಿಸಲಾಗುವುದು. ಘಟವು ಕಾರ್ಯವೆಂದಿಟ್ಟುಕೊಂಡರೆ ಅದಕ್ಕೆ ಮೃತ್ಪಿಂಡ (ಮಣ್ಣಿನ ಮುದ್ದೆ), ಚಕ್ರ, ದಂಡ (ಕೋಲು), ಕುಂಬಾರ

368 ಅದೇ ಗ್ರಂಥ, 34, ಪು. 7.

ಮೊದಲಾದ ಪದಾರ್ಥಗಳು ಕಾರಣಗಳು. ಆಕಾಶ, ಕಾಲ ಮುಂತಾದವುಗಳು ಎಲ್ಲಾ ಕಾರ್ಯಗಳಲ್ಲಿಯೂ ಸಾಧಾರಣ ವಾಗಿ ಇದ್ದೇ ಇರುವುದರಿಂದ ಅವುಗಳಿಗೆ ಸಾಧಾರಣ ಕಾರಣಗಳೆಂದು ಹೆಸರು. ಇವಲ್ಲದೆ ಆಯಾ ಕಾರ್ಯಕ್ಕೆ ವಿಶೇಷವಾಗಿ ಬೇಕಾಗುವಂತಹ ಕಾರಣಗಳಿಗೆ ಅಸಾಧಾರಣ ಕಾರಣಗಳೆಂದು ಹೆಸರು ; ಕೋಲು, ಚಕ್ರ ಮುಂತಾದವು ಎಲ್ಲಾ ಕಾರ್ಯಗಳಿಗೂ ಕಾರಣವಾಗುವುದಿಲ್ಲ. ಘಟಾದಿಕಾರ್ಯಗಳಲ್ಲಿ ಮಾತ್ರ ಇರುತ್ತವೆ. ಅವು ಘಟಕಾರ್ಯಕ್ಕೆ ಅಸಾಧಾರಣ ಕಾರಣಗಳು.

ಅಸಾಧಾರಣ ಕಾರಣಗಳಲ್ಲಿ ಕಾರ್ಯಾರಂಭದಿಂದ ಕಾರ್ಯತ್ವದವರೆಗೂ ಇದ್ದೇ ಇರುವಂತಹುದು ಉಪಾದಾನ ಕಾರಣ ; ಇದಕ್ಕೆ ಸಮವಾಯಕಾರಣವೆಂದೂ ಹೆಸರು. ಇದು ಕಾರ್ಯದಲ್ಲಿಯೂ ಪ್ರತ್ಯಕ್ಷವಾಗಿ ಗೋಚರಿಸಬೇಕು. ಘಟಕಾರ್ಯದಲ್ಲಿ ಮೃತ್ಪಿಂಡವು ಉಪಾದಾನಕಾರಣ. ಅನೇಕ ದ್ರವ್ಯಗಳ ಸಂಯೋಗದಿಂದ ಕಾರ್ಯವಾಗುವುದಕ್ಕೆ ಅಸಮ ವಾಯಕಾರಣವೆಂದು ಹೆಸರು. ಘಟಕಾರ್ಯವಾಗಲು ಕುಂಬಾರನು ಎರಡು ಕಪಾಲಗಳನ್ನು ಮಾಡಿ ಸೇರಿಸುತ್ತಾನಷ್ಟೆ; ಈ ಸಂಯೋಗವು ಇಲ್ಲಿ ಅಸಮವಾಯಕಾರಣ. ಆಯಾ ಕಾರ್ಯಕ್ಕೆ ವಿಶಿಷ್ಟವಾಗಿದ್ದುಕೊಂಡು, ಕಾರ್ಯವು ನಡೆಯು ತ್ತಿರುವವರೆಗೂ ಮಾತ್ರ ಇದ್ದು ಆಮೇಲೆ ಗೋಚರಿಸದೆ ಹೋಗುವಂತಹವುಗಳಿಗೆ ನಿಮಿತ್ತಕಾರಣಗಳೆಂದು ಹೆಸರು. ಪ್ರಸಕ್ತ ಉದಾಹರಣೆಯಲ್ಲಿ ಚಕ್ರ, ಕೋಲು, ಕುಂಬಾರ ಮುಂತಾದವು ನಿಮಿತ್ತಕಾರಣಗಳು. ಉಪಾದಾನ ಕಾರಣವು ಕಾರ್ಯದಲ್ಲಿ ಪ್ರಧಾನವಾಗಿದ್ದರೆ ನಿಮಿತ್ತಕಾರಣಗಳು ಸಹಾಯಕಗಳಾಗಿರುತ್ತವೆ. ಉಪಾದಾನಕಾರಣವೇ ಕಾರ್ಯರೂಪವನ್ನು ಹೊಂದುವುದು. ಕಾರ್ಯವು ಇರುವ ಕಾಲದಲ್ಲಿ ಯಾವಾಗಲೂ ಉಪದಾನ ಕಾರಣವು ಇದ್ದೇ ಇರುತ್ತದೆ ; ಅದರಿಂದ ಭಿನ್ನವಾಗಿರುವುದಿಲ್ಲ. ನಿಮಿತ್ತಕಾರಣವು ಕಾರ್ಯವು ನಡೆಯುತ್ತಿರುವಾಗ ಮಾತ್ರ ಇದ್ದು, ಕಾರ್ಯದಿಂದ ಭಿನ್ನವಾಗಿರುತ್ತದೆ ಮತ್ತು ಕಾರ್ಯವು ಸಂಪೂರ್ಣವಾದ ಮೇಲೆ ಕಂಡುಬರುವುದಿಲ್ಲ. ಅಸಾಧಾರಣ ಕಾರಣಗಳಾದ ಕೋಲು, ಚಕ್ರ, ಕುಂಬಾರ, ಮೃತ್ಪಿಂಡ ಮೊದಲಾದವುಗಳು ನಿರ್ವ್ಯಾಪಾರವಾಗಿ ಬಿದ್ದಿದ್ದರೆ ಕಾರ್ಯವು ಹುಟ್ಟುವುದಿಲ್ಲವಷ್ಟೆ. ಅವು ಆಯಾ ವ್ಯಾಪಾರಸಹಿತಗಳಾದರೆ ಮಾತ್ರ ಕಾರ್ಯೋತ್ಪತ್ತಿಯಾಗುವುದು. ವ್ಯಾಪಾರವುಳ್ಳ ಅಸಾಧಾರಣ ಕಾರಣಗಳಿಗೆ ಕರಣಗಳೆಂದು ಹೆಸರು. ಹೀಗೆ ಮೃತ್ಪಿಂಡ, ದಂಡ, ಚಕ್ರ, ಕುಂಬಾರ ಮೊದಲಾದವುಗಳು ಘಟವನ್ನು ಮಾಡುವುದು ಎಂಬ ವ್ಯಾಪಾರದಲ್ಲಿ ಪ್ರಸಕ್ತವಾಗಿ ಕರಣಗಳಾದರೆ ಘಟವೆಂಬ ಕಾರ್ಯವು ಸಿದ್ಧಿಸುತ್ತದೆ. ಕಾರಣ-ಕಾರ್ಯಗಳಲ್ಲಿ ಜನಕ-ಜನ್ಯಸಂಬಂಧವೂ, ಪೌರ್ವಾಪರ್ಯ (ಮೊದಲು ಮತ್ತು ಆಮೇಲೆ ಎಂಬ) ಸಂಬಂಧವೂ ಇರುತ್ತವೆ. ಕಾರ್ಯದಲ್ಲಿ ಉಪಾದಾನಕಾರಣವು ಅಭಿನ್ನವಾಗಿಯೇ ಗೋಚರಿಸಿದರೂ ಈ ಸಂಬಂಧವು ವಿವಕ್ಷಿತವಲ್ಲದಿದ್ದಾಗ ಕಾರ್ಯವೂ ಕಾರಣಗಳೂ ಪ್ರತ್ಯೇಕವೂ ಸ್ವತಂತ್ರವೂ ಆದ ಅಸ್ತಿತ್ವವನ್ನು ಹೊಂದಿರುತ್ತವೆ.

## ವಾದಭೂಮಿ

ಇದರ ಹಿನ್ನೆಲೆಯಲ್ಲಿ ಈಗ ಸ್ವರಶ್ರುತಿಗಳ ಸಂಬಂಧವನ್ನು ಪರೀಕ್ಷಿಸಬಹುದು. ಸ್ವರವು ಶ್ರುತಿಯ ಕಾರ್ಯತ್ವದಿಂದ ಆಗಿದೆ ಎಂಬುದು ಈ ಪಕ್ಷದ ಸಾರಾಂಶ. ಒಂದು ಸ್ವರವು ಸ್ವಸಂವೇದ್ಯತೆಯನ್ನು ಪಡೆಯಲು ಅದರ ಅಂತಿಮ ಶ್ರುತಿಯೂ, ಉತ್ತರೋತ್ತರ ಸಂಸ್ಕಾರಪ್ರದಾನವೆಂಬ ಹೇತುವಿನಿಂದ, ಪೂರ್ವಾಭಿಕಾಂಕ್ಷೆಯಿಂದ, ಅಂತರಗತ ಗಳಾಗಿದ್ದುಕೊಂಡು ಉಳಿದ ಶ್ರುತಿಗಳೂ ಕಾರಣಗಳಾಗಿರುವುದನ್ನು ವಿಶಾಖಿಲಾಚಾರ್ಯನೂ, ಆಚಾರ್ಯ ವಿಶ್ವಾ ವಸುವೂ, ಭಟ್ಟತೌತನೂ ಹೇಳಿದುದನ್ನು ಮತ್ತು ಅಭಿನವಗುಪ್ತಪಾದನು ಅದನ್ನು ಸಮ್ಮತಿಸಿರುವುದನ್ನು ಈಗಾಗಲೇ ಹೇಳಿದೆ (ಪು. 261). ಇದನ್ನೇ ದೃಷ್ಟಿಯಲ್ಲಿಟ್ಟುಕೊಂಡು ಶ್ರೀ ಶಾರ್ಙ್ಗದೇವನು ಸ್ವರಶ್ರುತಿಗಳಲ್ಲಿ ಕಾರ್ಯಕಾರಣ ಭಾವವನ್ನು ಒಪ್ಪಿದ್ದಾನೆಂದು ಇಲ್ಲಿ ತಿಳಿಯಬೇಕಾಗುತ್ತದೆ. ಶ್ರುತಿಗಳನ್ನು ಉಪಾದಾನ ಕಾರಣವೆಂದಿ ಟ್ಟುಕೊಂಡು, ಸಾಧಕ, ಶಾರೀರ, ವಾದ್ಯ, ಉಚ್ಚಾರಣ ಪ್ರಸಕ್ತಿ, ಮುಂತಾದವುಗಳನ್ನು ನಿಮಿತ್ತಕಾರಣಗಳೆಂದಿಟ್ಟು

ಕೊಂಡು ಇದನ್ನು ಸಾಧಿಸಬೇಕಾಗುತ್ತದೆ. ಕಾಲ, ಆಕಾಶಗಳು ಸಾಧಾರಣ ಕಾರಣಗಳಾಗಿರುವಂತೆಯೇ ನಾದವನ್ನು ಸಂಗೀತಸಂದರ್ಭದಲ್ಲಿ ಸಾಧಾರಣ ಕಾರಣವೆಂದೋ, ಉಪಾದಾನ ಕಾರಣವೆಂದೋ ತಿಳಿಯಬಹುದು. ಈ ಉದಾಹರಣೆಯಲ್ಲಿ ಶ್ರುತಿಯು ಉಪಾದಾನ ಕಾರಣವಾದರೆ ಅದು ಕಾರ್ಯವಾದ ಸ್ವರದಲ್ಲಿ ಯಾವಾಗಲೂ ಗೋಚರಿಸುತ್ತಿರಬೇಕು; ಸ್ವರದ ಆರಂಭದಿಂದ ಅಂತ್ಯದವರೆಗೂ, ಆಮೇಲೂ ಇದ್ದು ಸ್ವರದಿಂದ ಅಭಿನ್ನವಾಗಿಯೇ ಇರಬೇಕು. ಈ ಅಸಾಧಾರಣ ಕಾರಣಕ್ಕೆ ಸಂಸ್ಕಾರಪ್ರದಾನ, ಅನುರಣನ, ರಕ್ತಿ, ಊರ್ಧ್ವಸ್ಪರ್ಶ ಎಂಬವುಗಳನ್ನು ವ್ಯಾಪಾರಗಳೆಂದು ತಿಳಿದು, ಇವುಗಳನ್ನು ಕೂಡಿದಾಗ ಶ್ರುತಿಯು ಕರಣವೆಂದು ಹೇಳಬಹುದು.

### ಖಂಡನೆ

ಆದರೆ ಈ ವಾದವು ಅಷ್ಟೇನೂ ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ ವಿಶ್ವಾವಸುವೇ ಹೇಳಿದ ಅಂತರಗತಶ್ರುತಿಗಳನ್ನೂ ಉಪಾದಾನಕಾರಣವೆಂದೇ ಇಟ್ಟುಕೊಳ್ಳಬೇಕಾಗುತ್ತದೆ. ಇವು ಕಾರ್ಯವಾದ ಸ್ವರದಲ್ಲಿ ಗೋಚರಗಳಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ಇವು ಕೇವಲ ಸಂಸ್ಕಾರದ ಶೇಷರೂಪವಾಗಿ ಅಂತಿಮ ಶ್ರುತಿಯಲ್ಲಿ ಸ್ವರಸ್ವಸಂವೇದ್ಯತೆಗೆ ಸಹಾಯಮಾಡಿ ನಿಮಿತ್ತಕಾರಣಗಳೆನ್ನಿಸಿಕೊಳ್ಳಬಹುದೇ ಹೊರತು ಮಡಕೆಯಲ್ಲಿ ಮೃತ್ಪಿಂಡವು ಪ್ರತ್ಯಕ್ಷವಾಗಿ ಕಾಣುವಂತೆ ಕಾಣುವುದಿಲ್ಲ; ಒಂದೇ ಕಾರ್ಯದಲ್ಲಿ ಒಂದೇ ಕಾರಣವು ಏಕಕಾಲದಲ್ಲಿ ಉಪಾದಾನವೂ ನಿಮಿತ್ತವೂ ಆಗಿರಲಾರದೆಂಬುದು ಶಾಸ್ತ್ರಸಿದ್ಧವೂ ಅನುಭವಸಿದ್ಧವೂ ಆಗಿದೆ. ಅಷ್ಟೇ ಅಲ್ಲದೆ, ಕಾರ್ಯವಾದ ಸ್ವರವು ಇರುವಾಗಲೆಲ್ಲಾ ಉಪಾದಾನ ಕಾರಣವಾದ ಶ್ರುತಿಯೂ ಅದರಲ್ಲಿ ಗೋಚರಿಸುತ್ತಿರಬೇಕು ಎಂಬ ಮಾತಿನಲ್ಲಿ ಸ್ಥೂಲಾರ್ಥದಿಂದ ಕಾರ್ಯಕಾರಣಭಾವವನ್ನು ಹೇಳಬೇಕು, ಅಷ್ಟೆ. ಏಕೆಂದರೆ ಪ್ರತ್ಯಕ್ಷವಾಗಿ ಸ್ವರವು ಕೇಳಿಸುತ್ತದೆಯೇ ಹೊರತು, ಅದರಲ್ಲಿ ಶ್ರುತಿಯು ಸ್ವರದ ರೂಪವನ್ನು ಪಡೆದಿದೆ ಎಂಬುದಕ್ಕೆ ಮೃತ್ಪಿಂಡವು ಮಡಕೆಯಾಗಿದೆ ಎಂದು ಪ್ರತ್ಯಕ್ಷವಾಗಿ ಹೇಳಲು ಸಾಧಕವಾಗುವಂತೆ ಶ್ರುತಿಯ ಸದ್ಭಾವವು, ಎಂದರೆ ಪ್ರತ್ಯಕ್ಷ, ಪೃಥಗಸ್ತಿತ್ವವು ಯಾವ ಪ್ರಮಾಣದಿಂದಲೂ ಸಿದ್ಧಿಸುವುದಿಲ್ಲವಷ್ಟೆ. ಪ್ರಮಾಣಗಳು ಪ್ರತ್ಯಕ್ಷ, ಅನುಮಾನ, ಉಪಮಿತಿ ಮತ್ತು ಶಬ್ದ ಅಥವಾ ಆಗಮ ಎಂದು ಸರ್ವತ್ರ ಶಾಸ್ತ್ರಸಿದ್ಧವಾಗಿದೆ. ಶ್ರುತಿಯ ಸದ್ಭಾವವನ್ನೂ ತನ್ಮೂಲಕ ಸ್ವರ ಶ್ರುತಿಗಳಲ್ಲಿ ಕಾರ್ಯಕಾರಣಭಾವವನ್ನೂ ಸಾಧಿಸಲು ಈ ಯಾವ ಪ್ರಮಾಣಗಳೂ ಪ್ರಯೋಜಕಗಳಾಗಲಾರವು. ಆದುದರಿಂದಲೇ ಮತಂಗಮುನಿಯು ಇದನ್ನೆಲ್ಲಾ ಸಂಗ್ರಹಿಸಿ ಒಂದೇ ಶ್ಲೋಕದಲ್ಲಿ ಹೀಗೆ ಖಂಡಿಸುತ್ತಾನೆ :

ಕಾರ್ಯಕಾರಣಭಾವಸ್ತು ಸ್ವರಶ್ರುತ್ಯೋರ್ನ ಸಂಭವೇತ್ ।
ಶ್ರುತೀನಾಮಿಹ ಸದ್ಭಾವೇ ಪ್ರಮಾಣಂ ನೈವ ವಿದ್ಯತೇ ॥ [369]

### ಕಾರ್ಯ-ಕಾರಣ ಪ್ರಭೇದಗಳು : ಅನುಮಾನ ಮತ್ತು ಅರ್ಥಾಪತ್ತಿ

ಆದರೆ ಪೂರ್ವಪಕ್ಷಿಯು ನ್ಯಾಯಾಂತರಗಳಿಂದ ಕಾರ್ಯಕಾರಣ ಸಂಬಂಧವನ್ನು ಸ್ವರಶ್ರುತಿಗಳಲ್ಲಿ ಸಾಧಿಸಲೆಳಸುತ್ತಾನೆ : ಕಾರ್ಯಕಾರಣಸಂಬಂಧವು ಪ್ರತ್ಯಕ್ಷದಿಂದ ಮಾತ್ರವೇ ಸಿದ್ಧವಾಗಬೇಕೆಂದೇನೂ ಇಲ್ಲ. ಇದನ್ನು ಅನುಮಾನ ಅಥವಾ ಅರ್ಥಾಪತ್ತಿಯಿಂದಲಾದರೂ ಸಾಧಿಸಬಹುದಷ್ಟೆ; ಎನ್ನುತ್ತಾನೆ. ಆದುದರಿಂದ ಅನುಮಾನ, ಅರ್ಥಾಪತ್ತಿಗಳನ್ನು ಭಾರತೀಯ ನ್ಯಾಯಶಾಸ್ತ್ರವು ಬಳಸುವ ಪ್ರೌಢಪ್ರಾಚೀನ ಪರಿಭಾಷೆ ಮತ್ತು ಉದಾಹರಣೆಗಳ ಮೂಲಕ ಇಲ್ಲಿ ಸಂಕ್ಷೇಪವಾಗಿ ಸಂಗ್ರಹಿಸಿದರೆ ಅಭ್ಯಾಸವು ಸುಲಭವಾಗಬಹುದು. ಧೂಮ (ಹೊಗೆ)ವು ಇರುಪೆಡೆ ಅಗ್ನಿ (ಬೆಂಕಿ)ಯು ಇರುವುದು ಪ್ರತ್ಯಕ್ಷವಾಗಿಯೇ ಸಿದ್ಧವಾಗುತ್ತದಷ್ಟೆ; ಇಲ್ಲಿ ಬೆಂಕಿಯಿಲ್ಲದೆ ಧೂಮವಿರಲಾರದೆಂದು ಅನೇಕ ಪ್ರತ್ಯಕ್ಷಾನುಭವಗಳಿಂದ ಜ್ಞಾನವು ಪೂರ್ವಸಂಚಿತವಾಗಿರುತ್ತದೆ. ಎಲ್ಲೆಲ್ಲಿ ಈ ಸಂಬಂಧವು ಕಂಡುಬರುತ್ತದೆಯೋ

369 ಅದೇ ಗ್ರಂಥ, 41, ಪು. 8.

ಅದನ್ನು ದೃಷ್ಟಾಂತವೆಂದೂ ಸಪಕ್ಷವೆಂದೂ ಕರೆಯಬಹುದು. ಹೀಗೆ, ಅಡಿಗೆಮನೆ, ಕಾಡುಕಿಚ್ಚು, ದಹನಕ್ರಿಯೆ ಯಿರುವ ರುದ್ರಭೂಮಿ ಮುಂತಾದವುಗಳು ದೃಷ್ಟಾಂತಗಳು. ಧೂಮಕ್ಕೂ ವಹ್ನಿಗೂ ಇರುವ ಈ ಎಡೆಬಿಡದ ನಿಯತ ಸಂಬಂಧ (ಅವಿನಾಭಾವ, ಇತರೇತರಾಶ್ರಯ)ಕ್ಕೆ ವ್ಯಾಪ್ತಿಯೆಂದು ಹೆಸರು. ಇದು ಎರಡು ವಿಧವಾಗಿರುತ್ತದೆ: ಧೂಮವಿರುವ ಕಡೆ ವಹ್ನಿ ಇರುತ್ತದೆ ಎಂಬುದು ಅನ್ವಯವ್ಯಾಪ್ತಿ. ವಹ್ನಿಯಿಲ್ಲದ ಕಡೆ ಧೂಮವಿರುವುದಿಲ್ಲ ಎಂಬುದು ವ್ಯತಿರೇಕವ್ಯಾಪ್ತಿ. ವಹ್ನಿಯು ಪ್ರತ್ಯಕ್ಷವಾಗಿ ಗೋಚರವಾಗದಿರುವಾಗ, ಧೂಮವು ಮಾತ್ರ ಗೋಚರವಾದರೆ ವ್ಯಾಪ್ತಿ ಗ್ರಹಣದಿಂದ ವಹ್ನಿಯಿದೆ ಎಂದು ಊಹಿಸುವುದು ಅನುಮಾನ. ಇಲ್ಲಿ ವಹ್ನಿಯೇ ನ್ಯಾಯದಿಂದ ಸಾಧಿಸಬೇಕಾದ, ಎಂದರೆ ಸಾಧ್ಯವಾದ, ವಸ್ತು.

ಇದನ್ನು ಸಾಧಿಸಬೇಕಾದರೆ ಇಲ್ಲಿ ಧೂಮವಿದೆ ಎಂಬ ಜ್ಞಾನವು ಅವಶ್ಯಕ. ವಹ್ನಿಯು ಅನುಮಾನದಿಂದ ಸಾಧ್ಯವಾದಾಗ ಧೂಮಜ್ಞಾನಕ್ಕೆ ಹೇತುವೆಂದೂ, ಸಾಧನವೆಂದೂ, ಲಿಂಗವೆಂದೂ, ಹೆಸರು. ಎಂದರೆ ಅನುಮಾನವು ಪ್ರತ್ಯಕ್ಷಲಿಂಗದಿಂದಲೂ ಅಪ್ರತ್ಯಕ್ಷಸಾಧ್ಯದಿಂದಲೂ ಉಂಟಾಗುತ್ತದೆ. ಅನ್ವಯವ್ಯಾಪ್ತಿಯು ಇರುವ ಹೇತುವಿಗೂ ಇರುವ ಸಾಧ್ಯಕ್ಕೂ ಇರುವ ಸಂಬಂಧವನ್ನು ತಿಳಿಸಿದರೆ ವ್ಯತಿರೇಕವ್ಯಾಪ್ತಿಯು ಸಾಧ್ಯದ ಅಭಾವಕ್ಕೂ ಹೇತುವಿನ ಅಭಾವಕ್ಕೂ ಇರುವ ಸಂಬಂಧವನ್ನು ಸೂಚಿಸುತ್ತದೆ. ಧೂಮವು ವಹ್ನಿಯು ಇರುವೆಡೆ ಮಾತ್ರ ಇರುತ್ತದೆ, ವಹ್ನಿ ಇಲ್ಲದಿದ್ದರೆ ತಾನೂ ಇರುವುದಿಲ್ಲ; ಧೂಮಕ್ಕೆ ವ್ಯಾಪ್ಯವೆಂಬ ಸಂಜ್ಞೆಯಿದೆ; ಈ ಸಂಬಂಧದಿಂದ ವಹ್ನಿಯು ನಿರ್ಬಂಧಿತವಲ್ಲ; ಅದಕ್ಕೆ ವ್ಯಾಪಕವೆಂದು ಹೆಸರು. ವ್ಯಾಪ್ಯ-ವ್ಯಾಪಕಗಳ ಅನುಮಾನಸಂಬಂಧದಲ್ಲಿ ಉಪಾಧಿಯೇ ಮುಂತಾದ ಹಲವು ದೋಷಗಳಿವೆ; ಗ್ರಂಥವಿಸ್ತರಭೀತಿಯಿಂದ ಅವುಗಳನ್ನಿಲ್ಲಿ ವಿವರಿಸುವುದಿಲ್ಲ.

## ಶ್ರುತಿ-ಸ್ವರಗಳಲ್ಲಿ ಅನ್ವಯ

ಪರ್ವತವೊಂದರಲ್ಲಿ ಧೂಮವನ್ನು ಕಂಡರೆ, ಧೂಮಕ್ಕೂ ವಹ್ನಿಗೂ ಇರುವ ವ್ಯಾಪ್ತಿಗ್ರಹಣದಿಂದ, ಪ್ರತ್ಯಕ್ಷ ಲಿಂಗವಾದ ಧೂಮದಿಂದ, ಅಪ್ರತ್ಯಕ್ಷಸಾಧ್ಯವಾದ ವಹ್ನಿಯನ್ನು ಊಹಿಸಿ 'ಅಯಂ ಪರ್ವತೋ ವಹ್ನಿಮಾನ್' (ಪರ್ವತದಲ್ಲಿ ಬೆಂಕಿಯಿದೆ) ಎಂಬ ಅನುಮಾನವನ್ನು ಪಡೆಯುತ್ತೇವೆ. ಇದೇ ರೀತಿಯಲ್ಲಿ ಸ್ವರಕ್ಕೂ ಶ್ರುತಿಗೂ ಅನುಮಾನದಿಂದ ಕಾರ್ಯಕಾರಣಸಂಬಂಧವನ್ನು ಹೇಳಬಹುದೆಂದು ಪೂರ್ವಪಕ್ಷವು ವಾದಿಸುತ್ತದೆ. ಇಲ್ಲಿ ಸಾಧ್ಯವಾದುದು ಶ್ರುತಿ; ಧೂಮಕ್ಕೆ ವಹ್ನಿಯು ಕಾರಣವಾದಂತೆ ಸ್ವರಕ್ಕೆ ಶ್ರುತಿಯು ಕಾರಣ; ಸ್ವರವೇ ಇಲ್ಲಿ ಹೇತು, ಅಥವಾ ಲಿಂಗ. ವ್ಯಾಪ್ತಿಗ್ರಹಣಪೂರ್ವಕವಾದ ಬಲದಿಂದ ಈ ಸಂಬಂಧವು ಸಿದ್ಧಿಸುತ್ತದೆಂಬುದು ಇಲ್ಲಿನ ವಾದ. ಎಂದರೆ, ಸ್ವರವಿರುವಾಗಲೆಲ್ಲಾ ಶ್ರುತಿಯೂ ಇರುತ್ತದೆಂಬ ಅನ್ವಯವ್ಯಾಪ್ತಿಯನ್ನೂ ಶ್ರುತಿಯಿಲ್ಲದಾಗ ಸ್ವರವೂ ಇರುವುದಿಲ್ಲ ವೆಂಬ ವ್ಯತಿರೇಕವ್ಯಾಪ್ತಿಯನ್ನೂ ಇಲ್ಲಿ ಗ್ರಹಿಸಿ, ಅಪ್ರತ್ಯಕ್ಷಸಾಧ್ಯವಾದ ಶ್ರುತಿಯನ್ನು ಅನುಮಿತಿಯಿಂದ ಇದು ಪಡೆಯಲೆಳಸುತ್ತದೆ. ಇದಕ್ಕೆ ಈ ಪಕ್ಷವು ಉಪಯೋಗಿಸುವ ಕ್ರಮವೆಂದರೆ, ಕಾರಣ-ಕಾರ್ಯಗಳಿಗಿರುವ ಪೌರ್ವಾಪರ್ಯ ಸಂಬಂಧ, ಜನಕ-ಜನ್ಯ ಸಂಬಂಧ. ಶ್ರುತಿಸ್ವರಗಳೆರಡೂ ಶಬ್ದರೂಪಿಗಳೇ; ಶಬ್ದವು ಆಕಾಶದ ಗುಣ; ಆದುದರಿಂದ ಇವೆರಡರಲ್ಲಿಯೂ ಸಾಧರ್ಮ್ಯವೂ ಸಾಜಾತ್ಯವೂ ಸಿದ್ಧಿಸುತ್ತವೆ; ರಣನವಾದುದನ್ನು ಶ್ರುತಿಯೆಂದೂ ಅದರಿಂದ ಹುಟ್ಟಿ ಅನುರಣನವಾದುದನ್ನು ಸ್ವರವೆಂದೂ ತಿಳಿಯುವುದರಿಂದ ಪೌರ್ವಾಪರ್ಯವೂ, ಜನಕಜನ್ಯತ್ವವೂ ಸಿದ್ಧಿಸುತ್ತವೆ. ಆದುದರಿಂದ ಶ್ರುತಿಸ್ವರಗಳಲ್ಲಿ ಕಾರಣಕಾರ್ಯಸಂಬಂಧವನ್ನು ಹೇಳಬೇಕು. ಇವುಗಳಲ್ಲಿ ಸ್ವರವು ಪ್ರತ್ಯಕ್ಷವೂ, ಅಪರವೂ (ಅನಂತರವೂ), ಜನ್ಯವೂ, ಕಾರ್ಯವೂ ಆಗಿದೆ; ಶ್ರುತಿಯು ಅಪ್ರತ್ಯಕ್ಷವೂ, ಜನಕವೂ, ಪೂರ್ವವೂ ಆಗಿದೆ; ಆದುದರಿಂದ ಅನುಮಿತಿ ಎಂಬ ಸಂಬಂಧದಲ್ಲಿ ಕಾರ್ಯಕಾರಣಸಂಬಂಧವನ್ನು ಸ್ವರಶ್ರುತಿಗಳಲ್ಲಿ ಹೇಳಬೇಕು. ಈ ಪೂರ್ವಪಕ್ಷವನ್ನು ಅನ್ಯರಿಂದ ಮತಂಗನು ಹೀಗೆ ಸಂಗ್ರಹಿಸುತ್ತಾನೆ :

ಅರ್ಥಾಪತ್ತ್ಯಾ ಯದಿ ವಾ ವ್ಯಾಪ್ತಿಗ್ರಹಣಪೂರ್ವಕಪ್ರಮಾಣಬಲಾತ್ | [370]

ಈ ಮಾತಿಗೆ ಅರ್ಥವು ಸುಲಭವಾಗಿ ಸ್ಫುರಿಸುವುದಿಲ್ಲ. ಎಂದೇ ಬೃಹದ್ದೇಶಿಯ ಸಂಪಾದಕನು . . . ಬಲಾತ್(?) ಎಂದು ಪಾಠಶುದ್ಧಿಯ ಅಥವಾ ಅರ್ಥದ ವಿಷಯದಲ್ಲಿ ತನಗಿರುವ ಸಂದೇಹವನ್ನು ಸೂಚಿಸುತ್ತಾನೆ. ಈ ಅರ್ಥವು ಸ್ಫುಟವಾಗಲು ಗ್ರಂಥಸಂದರ್ಭವನ್ನು ಹೀಗೆ ಇಟ್ಟುಕೊಳ್ಳಬೇಕು :

ಪೂರ್ವಪಕ್ಷ: ''ಮೃತ್ಪಿಂಡದಂಡಕಾರ್ಯತ್ವಂ ಘಟಸ್ಯೇಹ ಯಥಾ ಭವೇತ್, ತಥಾ ಸ್ವರಾಣಾಂ ಶ್ರುತಿಕಾರ್ಯತ್ವಮ್ |''

ಉತ್ತರಪಕ್ಷ (ನಿರಾಕರಣ) : "ಶ್ರುತೀನಾಮಿಹ ಸದ್ಭಾವೇ ಪ್ರಮಾಣಂ ನೈವ ವಿದ್ಯತೇ; (ತಸ್ಮಾತ್) ಸ್ವರಶ್ರುತ್ಯೋಃ ಕಾರ್ಯಕಾರಣಭಾವಸ್ತು ನ ಸಂಭವೇತ್ ;"

ಪೂರ್ವಪಕ್ಷ: "ಶ್ರುತೀನಾಂ ಸದ್ಭಾವೇ ಪ್ರಮಾಣಂ ನೈವ ವಿದ್ಯತೇ ; ಸತ್ಯಮ್ | ತಥಾಪಿ ಅರ್ಥಾಪತ್ತ್ಯಾ ಯದಿ ವಾ ವ್ಯಾಪ್ತಿಗ್ರಹಣಪೂರ್ವಕಪ್ರಮಾಣಬಲಾತ್ (=ಅನುಮಾನಾತ್) ಸ್ವರಶ್ರುತ್ಯೋಃ ಕಾರ್ಯಕಾರಣಭಾವಸ್ತು ವಿದ್ಯತೇ, (ಲೋಕ)ಸಿದ್ಧಸ್ವರಜನಕಾನಾಂ ಗಗನಗುಣಾನಾಂ (ಶ್ರುತೀನಾಂ) ಸ್ವರೋ ಭೇದ ಇತಿ ಸ್ವರಶ್ರುತ್ಯೋಃ ಪೌರ್ವಾಪರ್ಯಜನಕಜನ್ಯಭೇದಸಿದ್ಧೇಶ್ಚ |"

ಕಲ್ಲಿನಾಥನು ಈ ಸಂದರ್ಭದಲ್ಲಿ ಲಲಿತವೂ ಹೃದಯಂಗಮವೂ ಆಗಿರುವ ವ್ಯಾಖ್ಯಾನವನ್ನು ಬರೆಯುತ್ತಾನೆ. ಸ್ವರವು (ಧೂಮದಂತೆ) ಪ್ರತ್ಯಕ್ಷ ಲಿಂಗ; ಶ್ರುತಿಯು (ವಹ್ನಿಯಂತೆ) ಸಾಧ್ಯ, ಕಾರಣ. ಧೂಮ ವಿಲ್ಲದಿದ್ದರೂ, ಇದ್ದರೂ, ವಹ್ನಿಯು ಇರುತ್ತದಷ್ಟೆ; ವಹ್ನಿಯಿಲ್ಲದಿದ್ದಲ್ಲಿ ಧೂಮವಿಲ್ಲವೆಂಬ ವ್ಯತಿರೇಕಾನ್ವಯವನ್ನು ಸ್ಥಾಪಿಸಬೇಕಾದರೆ ವಹ್ನಿಗೆ ಸ್ವತಂತ್ರವಾದ ಅಸ್ತಿತ್ವವು ಇರಬೇಕಷ್ಟೆ; ಹೀಗೆಯೇ ಸ್ವರವಿಲ್ಲದೆ ಶ್ರುತಿಯ ಅಸ್ತಿತ್ವಕ್ಕೆ ಪ್ರಮಾಣವಿಲ್ಲವೆಂದು ಹೇಳಲಾಗದು; ಏಕೆಂದರೆ ಶ್ರುತಿಯೆಂಬ ಕಾರಣವು ಅನುಮಾನದಿಂದಾಗಲೀ ಅರ್ಥಾಪತ್ತಿಯಿಂದಾಗಲೀ ಸಿದ್ಧವಾಗುತ್ತದೆ :

ಸ್ವರವ್ಯತಿರೇಕೇಣ ಶ್ರುತಿಸದ್ಭಾವೇ ಪ್ರಮಾಣಾಭಾವ ಇತಿ ವಕ್ತುಂ ಹಿ ನ ಯುಕ್ತಮ್,—'ಸ್ವರಸ್ಯ ಹಿ ಶ್ರೂಯಮಾಣಮನುರಣನಾತ್ಮಕತ್ವಂ ರಣನಮಂತರೇಣ ನೋಪಪದ್ಯತೇ' ಇತಿ ಅರ್ಥಾಪತ್ತ್ಯಾ ವಾ, 'ಅಯಂ ಸ್ವರೋ ರಣನಪೂರ್ವಕೋಽನುರಣನಾತ್ಮಕತ್ವಾದ್ ದಂಡಾಹತಜಯಘಂಟಾಽನುರಣನಶಬ್ದವತ್' ಇತ್ಯನುಮಾನೇನ ವಾ ತತ್ಸಿದ್ಧೇಃ | [361]

ಕೋಲಿನಿಂದ ಹೊಡೆದ ಜಾಗಟೆಯಲ್ಲಿ ಅನುರಣನವುಳ್ಳ ಶಬ್ದವಾಗಿ ಸ್ವರವು ಹುಟ್ಟುತ್ತದೆ. ದಂಡಾಹತಿಯಿಂದ ಹುಟ್ಟಿದ ರಣನಕ್ಕೂ ಇದರಿಂದ ಹುಟ್ಟಿದ ಅನುರಣನಾತ್ಮಕವಾದ ಸ್ವರಕ್ಕೂ ವ್ಯಾಪ್ತಿಯು ಅನುಭವದಲ್ಲಿ ಸಿದ್ಧವಾಗಿಯೇ ಇದೆ. ಅನುರಣನವಿರುವೆಡೆ ರಣನವಿರುವುದೆಂಬ ಅನ್ವಯವ್ಯಾಪ್ತಿಯೂ ರಣನವಿಲ್ಲದೆಡೆ ಅನುರಣನ ವಿರುವುದಿಲ್ಲವೆಂಬ ವ್ಯತಿರೇಕವ್ಯಾಪ್ತಿಯೂ ಪ್ರಸಿದ್ಧವೇ ಆಗಿದೆ. ಈ ವ್ಯಾಪ್ತಿಗ್ರಹಣದಲ್ಲಿ ಉಪಾಧಿ ಮುಂತಾದ ದೋಷಗಳಿಲ್ಲ. ಆದುದರಿಂದ ಸಾಧ್ಯವಾದ ರಣನವನ್ನು ಪ್ರತ್ಯಕ್ಷ ಲಿಂಗವಾದ ಅನುರಣನದಿಂದ, ಜಯಘಂಟಾ ಇತ್ಯಾದಿ ದೃಷ್ಟಾಂತಗಳ ಮೂಲಕ ವ್ಯಾಪ್ತಿಗ್ರಹಣದಿಂದ ಊಹಿಸಬಹುದು. ಹೀಗೆ ಅನುಮಾನದಿಂದ ಕಾರ್ಯಕಾರಣ ಸಂಬಂಧವು ಸಿದ್ಧವಾಗುತ್ತದೆ, ಎಂಬುದು ಪೂರ್ವಪಕ್ಷ.

---

370 ಅದೇ ಗ್ರಂಥ, 42, ಪು. 8.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## ಅರ್ಥಾಪತ್ತಿ : ಪರಿಭಾಷೆ

ಇನ್ನು ಅರ್ಥಾಪತ್ತಿಯೆಂಬ ಕಾರ್ಯಕಾರಣ ಸಂಬಂಧವನ್ನು ಪರೀಕ್ಷಿಸಬಹುದು. ಕೆಲವು ದರ್ಶನಪದ್ಧತಿಗಳಲ್ಲಿ ಅರ್ಥಾಪತ್ತಿಯನ್ನು ಪ್ರತ್ಯೇಕವಾದ ಪ್ರಮಾಣವೆಂದು ಎಣಿಸದೆ ಅನುಮಾನದಲ್ಲಿಯೇ ಸೇರಿಸುತ್ತಾರೆ. ಆದರೆ ಅದಕ್ಕೆ ಕೆಲವು ಕಾರಣಗಳಿಂದ ಪ್ರಮಾಣವೆಂಬ ಪ್ರತ್ಯೇಕ ಸ್ಥಾನಮಾನಗಳನ್ನು ಕೊಡುವುದೇ ಸಾಧುವೆಂದು ಸರ್ವೇಸಾಮಾನ್ಯವಾದ ಸಿದ್ಧಾಂತವಾಗಿದೆ. ದೃಷ್ಟವಾದ ಒಂದು ಅರ್ಥವು ಅದೃಷ್ಟವಾದ ಮತ್ತೊಂದು ಅರ್ಥವನ್ನು ಕಲ್ಪಿಸಿಕೊಂಡ ಹೊರತು ಮೊದಲನೆಯದು ಅನುಪಪನ್ನವಾದರೆ, ಹೀಗೆ ಕಲ್ಪಿಸಿಕೊಂಡ ಅರ್ಥಕ್ಕೆ ಅರ್ಥಾಪತ್ತಿಯೆಂದು ಹೆಸರು; ಎಂದರೆ ನೋಡಿದ ಅಥವಾ ಕೇಳಿದ ಒಂದು ಸಂಗತಿಯನ್ನು ಪ್ರತ್ಯಕ್ಷವಾದ ಯಾವ ಕಾರಣದಿಂದಲೂ ವಿವರಿಸಲು ಸಾಧ್ಯವಾಗದಿದ್ದಾಗ, ಬೇರೆ ಒಂದು ಕಾರಣವನ್ನು – ವಿವರಣೆಯನ್ನು – ಊಹಿಸಬೇಕಾಗುತ್ತದೆ. ಇಲ್ಲಿ ಕೇಳಿದ ಅಥವಾ ನೋಡಿದ (ವಿವರಿಸಬೇಕಾದ) ಸಂಗತಿಯೇ ವಸ್ತು; ಇದರ ಜ್ಞಾನವೇ ಕರಣ; ವಿವರಣೆಯ ಜ್ಞಾನವೇ ಫಲ. ಅನುಮಾನಕ್ಕೂ ಅರ್ಥಾಪತ್ತಿಗೂ ವ್ಯತ್ಯಾಸವೇನೆಂದರೆ ಅನುಮಾನದಲ್ಲಿ ಲಿಂಗವು ನಿಶ್ಚಿತವಾಗುತ್ತದೆ; ಅದು ಸಾಧ್ಯದ ಜ್ಞಾನವನ್ನು ಉಂಟುಮಾಡುವುದೇ ಹೊರತು ಬೇರೆ ಏನನ್ನೂ ಅನುಪಪನ್ನಗೊಳಿಸುವುದಿಲ್ಲ; ಆದರೆ ಅರ್ಥಾಪತ್ತಿಯಲ್ಲಿ ಲಿಂಗವು ಸಂದಿಗ್ಧವಾಗಿರುತ್ತದೆ; ಇದು ಮತ್ತೊಂದು ಪದಾರ್ಥವನ್ನು, ಸಾಧ್ಯವನ್ನು ಅನುಪಪನ್ನವಾಗಿ ಮಾಡುತ್ತದೆ. ಹೀಗೆ ಸಂದಿಗ್ಧಲಿಂಗದಿಂದ ಹೊರಡುವ ಪಕ್ಷಾಂತರಗಳಲ್ಲಿ ಸಾಧ್ಯವಾದುದನ್ನು ಮಾತ್ರ ವಿವರಿಸಿ ಉಳಿದವುಗಳನ್ನು ನಿರಾಕರಿಸಲೆಂದೇ ಮತ್ತೊಂದು ಅರ್ಥದ ಕಲ್ಪನೆಯನ್ನು ಮಾಡಬೇಕು. ಇದರ ಕಲ್ಪನೆಯಿಲ್ಲದಿದ್ದರೆ ಅರ್ಥಕ್ಕೆ ಆಪತ್ತಿಯೇ ಸಂಭವಿಸುವುದರಿಂದ ಈ ಕಾರ್ಯಕಾರಣಸಂಬಂಧಕ್ಕೆ ಅರ್ಥಾಪತ್ತಿಯೆಂಬ ಹೆಸರು ಬಂದಿದೆ. ಅಷ್ಟೇ ಅಲ್ಲದೆ, ಅನುಮಾನದಲ್ಲಿ ಮೊದಲು ಲಿಂಗಜ್ಞಾನ, ಆಮೇಲೆ ಲಿಂಗಿಜ್ಞಾನ ಎಂಬ ಪೌರ್ವಾಪರ್ಯ ಸಂಬಂಧವು ಅನುಭವಸಿದ್ಧವಾಗಿದೆ; ಆದರೆ ಅರ್ಥಾಪತ್ತಿಯಲ್ಲಿ ಲಿಂಗವು ತಿಳಿಯುವ ಸಮಯದಲ್ಲಿಯೇ ಲಿಂಗಿಜ್ಞಾನವೂ ಆವಶ್ಯಕವಾಗಿರುತ್ತದೆ. ಅರ್ಥಾಪತ್ತಿಯು ದೃಷ್ಟಾರ್ಥಾಪತ್ತಿ, ಶ್ರುತಾರ್ಥಾಪತ್ತಿ ಎಂದು ಎರಡು ವಿಧ.

ಇದಕ್ಕೆ ಎರಡು ಉದಾಹರಣೆಗಳು ಪ್ರೌಢಪ್ರಾಚೀನವಾಗಿವೆ. ದೇವದತ್ತನು ಮನೆಯಲ್ಲಿಲ್ಲ ಎಂದಾಗ ಅವನು ಹೊರಗೆ ಇದ್ದಾನೆ ಎಂಬ ಅರ್ಥವನ್ನು ಕಲ್ಪಿಸಿದರೆ ಅರ್ಥಾಪತ್ತಿಯಾಗುತ್ತದೆ. ದೇವದತ್ತನಿದ್ದಾನೆ ಎಂಬ ವಸ್ತುಜ್ಞಾನವು ಲಿಂಗವಾಗಲಾರದು. ಏಕೆಂದರೆ ಅವನಿರುವುದರಿಂದಲೇ ಹೊರಗೆ ಇದ್ದಾನೆಂದು ಸಿದ್ಧವಾಗುವುದಿಲ್ಲ: ಏಕೆಂದರೆ ಅವನು ಮನೆಯಲ್ಲೂ ಇಲ್ಲದೆ ಹೊರಗೂ ಇಲ್ಲದೆ ಇರಬಹುದು – ಅವನು ಸತ್ತಿದ್ದರೆ. ದೇವದತ್ತನು ಬದುಕಿದ್ದಾನೆ ಮತ್ತು ಮನೆಯಲ್ಲಿಲ್ಲ ಎಂದು ಸಮುಚ್ಚಯದಲ್ಲಿ ಏಕೆ ಲಿಂಗವೆಂದು ತಿಳಿಯಬಾರದು? ಈ ಶಂಕೆಯು ಇಲ್ಲಿ ಅಪ್ರಸಕ್ತ; ಏಕೆಂದರೆ ಮನೆಯಲ್ಲಿ ಇಲ್ಲದುದರಿಂದ ಮಾತ್ರ ಅವನು ಬದುಕಿರುವನೆಂದಾಗುವುದಿಲ್ಲ; ಮನೆಯಲ್ಲಿ ಇಲ್ಲದಿದ್ದಾಗ ದೇವದತ್ತನು ಬದುಕಿದ್ದಾನೆಯೇ ಇಲ್ಲವೇ ಎಂಬ ಸಂದೇಹವು ಹುಟ್ಟುತ್ತದೆ. ಈ ಸಂದೇಹವನ್ನು ನಿವಾರಿಸಬೇಕಾದರೆ, ಬದುಕಿದ್ದಾನೆ, ಹೊರಗಿದ್ದಾನೆ ಎಂದು ಕಲ್ಪಿಸಬೇಕಾಗುತ್ತದೆ. ದೇವದತ್ತನು ಮನೆಯಲ್ಲಿ ಇಲ್ಲ ಎಂಬುದೂ ಇಲ್ಲಿ ಲಿಂಗವಾಗಲಾರದು; ಏಕೆಂದರೆ ಬದುಕಿರುವವನು ಮನೆಯ ಒಳಗೂ ಇರಬಹುದು, ಹೊರಗೂ ಇರಬಹುದು. ಅವನು ಹೊರಗಿದ್ದಾನೆ ಎಂಬ ಕಲ್ಪನೆಯಿಂದ ಮಾತ್ರ ಈ ಸಂದೇಹ ನಿವೃತ್ತಿಯಾಗುತ್ತದೆ.

ಇದೇ ರೀತಿಯಲ್ಲಿ 'ದಿವಾಭುಂಜನಸ್ಯ ದೇವದತ್ತಸ್ಯ ಯೋಗಾದ್ಯಜನ್ಯಪೀನತ್ವಂ ರಾತ್ರಿಭೋಜನಂ ವಿನಾ ಅನುಪಪನ್ನಮ್' ಎಂಬುದೂ ಅರ್ಥಾಪತ್ತಿಗೆ ಉದಾಹರಣೆ. ದೇವದತ್ತನು ಪೀನನಾಗಿ ಎಂದರೆ ದಪ್ಪವಾಗಿ, ಪುಷ್ಟಿಯಾಗಿ ಇದ್ದಾನೆ. ಈ ಪೀನತ್ವವು ಯೋಗ, ರೋಗ ಮುಂತಾದವುಗಳಿಂದ ಆದುದಲ್ಲ; ಹಗಲು ಹೊತ್ತು

ದೇವದತ್ತನು ಭೋಜನಮಾಡುವುದಿಲ್ಲ, ಎಂದಾದರೆ, ಕಾರ್ಯವಾದ ಪೀನತ್ವವು ಅನ್ಯಥಾ ಅನುಪಪನ್ನವಾಗುತ್ತದೆ; ಇಲ್ಲಿ ಕಾರಣವು ಅಪ್ರತ್ಯಕ್ಷವಾಗಿದೆ. ದೇವದತ್ತನು ರಾತ್ರಿ ಭೋಜನವನ್ನು ಮಾಡುತ್ತಾನೆ ಎಂದ ಹೊರತು ಅವನ ಪೀನತ್ವವು ಅನುಪಪನ್ನವಾಗುತ್ತದೆ; ಆದುದರಿಂದ ಅಪ್ರತ್ಯಕ್ಷವಾದ ಈ ಕಾರಣವು ಊಹ್ಯವಾಗಿ ದೇವದತ್ತನ ಪೀನತ್ವಕ್ಕೂ ರಾತ್ರಿ ಭೋಜನಕ್ಕೂ ಕಾರ್ಯಕಾರಣಸಂಬಂಧವನ್ನು ಉಂಟುಮಾಡುತ್ತದೆ.

### ಅರ್ಥಾಪತ್ತಿ : ಸಾಧನೆ

ಪ್ರತ್ಯಕ್ಷದಿಂದಲೂ ಅನುಮಾನದಿಂದಲೂ ಸ್ವರಶ್ರುತಿಗಳಲ್ಲಿ ಕಾರ್ಯಕಾರಣಸಂಬಂಧವು ಸಿದ್ಧಿಸದೆ ಹೋದುದರಿಂದ ಪೂರ್ವಪಕ್ಷವು ಅರ್ಥಾಪತ್ತಿಯ ಮೂಲಕ ಅದನ್ನು ಸಾಧಿಸಲೆಳಸುತ್ತದೆ. ಸ್ವರವೆಂಬ ಕಾರ್ಯವು ಪ್ರಸಿದ್ಧವಾಗಿದೆ; ಪ್ರತಿಯೊಂದು ಕಾರ್ಯಕ್ಕೂ ಕಾರಣವು ಇದ್ದೇ ಇರಬೇಕೆಂಬುದು ಶಾಸ್ತ್ರಸಿದ್ಧವೂ ಅನುಭವಪ್ರಸಿದ್ಧವೂ ಆಗಿದೆ. ಬೇರೆ ಯಾವ ಕಾರಣಗಳನ್ನು ಹೇಳಿದರೂ ಸ್ವರವು ಅನುಪಪನ್ನವಾಗುವುದಾದರೆ, ಶ್ರುತಿಯ ಸದ್ಭಾವಕ್ಕೆ ಪ್ರಮಾಣವಿಲ್ಲವೆಂದೂ ಹೇಳಿ ಅದನ್ನು ಅಪ್ರತ್ಯಕ್ಷವೆನ್ನುವುದಾದರೆ, ಈ ಅಪ್ರತ್ಯಕ್ಷವಾದ ಶ್ರುತಿಯನ್ನು ಕಲ್ಪಿಸುವುದರಿಂದಲೇ ಸ್ವರದ ಅನುಪಪತ್ತಿಯನ್ನು ಹೋಗಲಾಡಿಸಬೇಕು. ಸ್ವರವು ತಿಳಿಯುವ ಕಾಲದಲ್ಲಿಯೇ ಶ್ರುತಿಯೂ ತಿಳಿಯುತ್ತದೆ; ಆದುದರಿಂದ ಸ್ವರಶ್ರುತಿಗಳಿಗೆ ಕಾರ್ಯಕಾರಣಸಂಬಂಧವನ್ನು ಹೇಳಬೇಕು, ಎಂಬುದು ಪೂರ್ವಪಕ್ಷ. ಸ್ವರವು ಅನುರಣನಾತ್ಮಕವೆಂಬುದು ಪ್ರತ್ಯಕ್ಷವಾಗಿಯೇ ಇದೆ. ಸ್ವರದ ಈ ಅನುರಣನಾತ್ಮಕತ್ವವು ರಣನವೆಂಬ ಶ್ರುತಿಯನ್ನು ಹೇಳದಲ್ಲದೆ ಅನುಪಪನ್ನವಾಗುತ್ತದೆ, ಎಂದು ಕಲ್ಲಿನಾಥನು ಪೂರ್ವಪಕ್ಷವನ್ನು ಹೀಗೆ ಸಂಗ್ರಹಿಸುತ್ತಾನೆ:

'ಸ್ವರಸ್ಯ ಹಿ ಶ್ರೂಯಮಾಣಮನುರಣನಾತ್ಮಕತ್ವಂ ರಣನಮಂತರೇಣ ನೋಪಪದ್ಯತೇ |' [361]

### ನಿರಾಕರಣ

ಶ್ರೀ ಶಾರ್ಙ್ಗದೇವನು ಪ್ರತ್ಯಕ್ಷ, ಅನುಮಾನ, ಅರ್ಥಾಪತ್ತಿಗಳಲ್ಲಿ ಯಾವುದನ್ನು ಗ್ರಹಿಸಿ ಸ್ವರಶ್ರುತಿಗಳಿಗೆ ಕಾರ್ಯಕಾರಣಸಂಬಂಧವನ್ನು ಹೇಳಿದ್ದಾನೆಂಬುದು ಸ್ಪಷ್ಟವಾಗಿ ತಿಳಿಯುವಂತಿಲ್ಲ. ಶ್ರುತಿಯನ್ನು 'ಸ್ವರಕಾರಣಮ್' ಎಂದಿರುವುದರಿಂದ ಅವನು ಈ ಸಂಬಂಧವನ್ನು ಹೇಳಿರುವುದು ನಿಸ್ಸಂಶಯ; ಹೇತು ಎಂಬ ಶಬ್ದವನ್ನು ಶ್ರುತಿಯಲ್ಲಿ ಹೇಳಿರುವುದರಿಂದ ಅನುಮಾನವನ್ನು ಗ್ರಹಿಸಿರಬಹುದೆಂದು ತೋರುತ್ತದೆ.

ಇದು ಏನೇ ಇರಲಿ, ಮತಂಗಮುನಿಯು ಈ ಪಕ್ಷವನ್ನೂ ಒಪ್ಪುವುದಿಲ್ಲ. ಬಹು ಸೂಕ್ಷ್ಮದರ್ಶಿಯಾದ, ಮಹಿಮಾನ್ವಿತ ಮತಿಶ್ರೀಮಂತನಾದ ಅವನು ಅದ್ವೈತವು ಬಳಸುವ ಅನುಪಲಬ್ಧಿಯೆಂಬ ನ್ಯಾಯಶಾಸ್ತ್ರಪ್ರಮೇಯವೊಂದರಿಂದ ಕಾರ್ಯಕಾರಣಸಂಬಂಧವನ್ನು ಸ್ವರಶ್ರುತಿಗಳಲ್ಲಿ ನಿರಾಕರಿಸುತ್ತಾನೆ. ಪೂರ್ವಪಕ್ಷಿಗೆ ಅವನು ಕೊಡುವ ಉತ್ತರವನ್ನು ಹೀಗೆ ಸಂಗ್ರಹಿಸಬಹುದು: "ಶ್ರುತಿ-ಸ್ವರಗಳಲ್ಲಿ ಜನಕ-ಜನ್ಯ, ಪೌರ್ವಾಪರ್ಯ ಮೊದಲಾದವುಗಳಿಂದ ಭೇದವು ಸ್ಫುಟವಾಗಿಯೇ ಇದೆ; ಈ ಸಂಬಂಧಗಳಲ್ಲಿ ಕಾರ್ಯಕಾರಣವು ಸ್ಫುಟವೇ, ನಿಜ; ಆದರೆ ಈ ಭೇದದಿಂದ ಶ್ರುತಿಗೆ ಕಾರಣತ್ವವೇ ಸಿದ್ಧಿಸುವುದಿಲ್ಲವಲ್ಲ! ಏಕೆಂದರೆ ಕಾರ್ಯದಲ್ಲಿ ಕಾರಣವು-ಅದರಲ್ಲಿಯೂ ಉಪಾದಾನ ಕಾರಣವು-ಗೋಚರಿಸಬೇಕೆಂಬುದು ಶಾಸ್ತ್ರಸಿದ್ಧವಾಗಿದೆ. ಇಲ್ಲಿ ಅದು ಸಿದ್ಧವಲ್ಲ. ಮೃತ್ಪಿಂಡವೆಂಬ ಉಪಾದಾನ ಕಾರಣವು ಘಟವೆಂಬ ಕಾರ್ಯದಲ್ಲಿ ಗೋಚರಿಸುವುದು ಎಂಬ ದೃಷ್ಟಾಂತದ ಬಲದಿಂದ ಸ್ವರಶ್ರುತಿಗಳಿಗೆ ಕಾರ್ಯಕಾರಣಸಂಬಂಧವನ್ನು ಈ ಪಕ್ಷವು ಹೇಳುತ್ತದೆ. ಆದರೆ ಇಲ್ಲಿ ದೃಷ್ಟಾಂತವೈಷಮ್ಯವೇ ಉಂಟಾಗುತ್ತದೆ; ಏಕೆಂದರೆ ಮೃತ್ಪಿಂಡವು ಇಲ್ಲಿ ಕಾರಣವೂ ಘಟವು ಕಾರ್ಯವೂ ಅಲ್ಲವೇ ಅಲ್ಲ. ಏಕೆಂದರೆ ಮೃತ್ಪಿಂಡವು ಮೃತ್ಪಿಂಡವಾಗಿಯೇ ಘಟದಲ್ಲಿ ಗೋಚರಿಸುವುದಿಲ್ಲ; ಘಟವೆಂಬ ಪರಿಣಾಮವಾಗಿ ಗೋಚರಿಸುತ್ತದೆ. ಹೀಗೆ ಮೃತ್ಪಿಂಡವು

ಅವಸ್ಥಾಂತರ, ರೂಪಾಂತರಗಳನ್ನು ಹೊಂದಿ ಪರಿಣಾಮದಲ್ಲಿ ಘಟವಾಗುತ್ತದೆ ; ಇದು ಕಾರ್ಯಕಾರಣಸಂಬಂಧದಲ್ಲಿ ವಿವಕ್ಷಿತವಲ್ಲ."

ಕಾರ್ಯಕಾರಣಭೇದೋ ಽಸ್ತಿ ಯದ್ಯಪಿ ಸ್ಫುಟಮೇವ ಹಿ ।
ತಥಾಪಿ ಕಾರಣತ್ವಂ ಚ ಶ್ರುತೀನಾಂ ನೈವ ಸಂಭವೇತ್ ॥
ಕಾರ್ಯೇಷು ವಿದ್ಯಮಾನೇಷು ಕಾರಣಸ್ಯೋಪಲಂಭನಾತ್ ।
ಘಟಾದೌ ವಿದ್ಯಮಾನೇ ತು ಮೃತ್ಪಿಂಡೋ ನೋಪಲಭ್ಯತೇ ॥ [371]

ಸಿಂಹಭೂಪಾಲನು ಇದರಲ್ಲಿ ಮೊದಲನೆಯ ಶ್ಲೋಕಾರ್ಧವನ್ನು ಉದ್ಧರಿಸುವುದಿಲ್ಲ. ಎರಡನೆಯ ಶ್ಲೋಕಾರ್ಧದಲ್ಲಿ 'ತಥಾ ಚ' ಎಂದೂ, ಕಡೆಯದರಲ್ಲಿ 'ವಿದ್ಯಮಾನೋ ಹಿ' ಎಂದೂ ಪಾಠಾಂತರಗಳನ್ನು ಕೊಡುತ್ತಾನೆ.[360]

ಕಲ್ಲಿನಾಥನು ಮತಂಗೋಕ್ತಿಯನ್ನು ಪುನಃ ಬಹು ಸ್ವಾರಸ್ಯವಾಗಿಯೂ ಸುಂದರವಾಗಿಯೂ ಅರ್ಥವನ್ನು ವಿಸ್ತರಿಸಿಯೂ ವ್ಯಾಖ್ಯಾನಮಾಡಿದ್ದಾನೆ ; ಇದಕ್ಕೆ ಅನುಪಲಬ್ಧಿಯೆಂಬ ಒಂದು ನ್ಯಾಯಶಾಸ್ತ್ರಪ್ರಮಾಣವನ್ನು ಅವನು ಬಳಸುವುದರಿಂದ ಅದನ್ನಿಲ್ಲಿ ಸಂಗ್ರಹಿಸಬೇಕಾಗಿದೆ ; ಈ ವಿವರಣೆಯಿಲ್ಲದಿದ್ದರೆ ಅವನ ಮಾತು ಅರ್ಥವಾಗುವುದು ಪ್ರಯಾಸ ಸಾಧ್ಯವಾಗುತ್ತದೆ.

### ಅನುಪಲಬ್ಧಿ : ಲಕ್ಷಣ

ಇದೆ ಎಂಬುದನ್ನು ಸಿದ್ಧಪಡಿಸಲು ಪ್ರತ್ಯಕ್ಷ, ಅನುಮಾನ, ಅರ್ಥಾಪತ್ತಿ, ಉಪಮಾನ, ಆಗಮ ಎಂಬ ಪ್ರಮಾಣಗಳನ್ನು ನ್ಯಾಯಶಾಸ್ತ್ರದಲ್ಲಿ ಬಳಸುವುದು ಸರಿಯಷ್ಟೆ; ಇಲ್ಲ ಎಂಬುದನ್ನು ಸಿದ್ಧಪಡಿಸಲು ಅದ್ವೈತ ಸಿದ್ಧಾಂತವು ಅನುಪಲಬ್ಧಿ ಎಂಬ ಆರನೆಯ ಪ್ರಮಾಣವೊಂದನ್ನು ಸ್ವೀಕರಿಸುತ್ತದೆ. ಘಟವು ಇಲ್ಲದಿರುವಾಗ ಭೂತಲದ ಮೇಲೆ ಬೆಳಕುಬಿದ್ದರೆ ಘಟವಿಲ್ಲದಿರುವ ಅನುಭವವೂ ಘಟವಿಲ್ಲದಿರುವ ನಿಶ್ಚಿತ ಜ್ಞಾನವೂ ಉಂಟಾಗುವುದಷ್ಟೆ. ಇದು ಹೇಗೆ ಸಾಧ್ಯ? ಇದೆಯೆಂಬುದಕ್ಕೆ ಪ್ರತ್ಯಕ್ಷವು ಅದುಷ್ಟೇಂದ್ರಿಯ ಸನ್ನಿಕರ್ಷದಿಂದಾಗಿ ಪ್ರಮಾಣವಾಗುತ್ತದೆ. ಅಭಾವದ ಜೊತೆಯಲ್ಲಿ, ಇಲ್ಲದಿರುವಿಕೆಯಲ್ಲಿ ಇಂದ್ರಿಯ ಸನ್ನಿಕರ್ಷವು ಇಲ್ಲವಷ್ಟೆ; ಆದುದರಿಂದ ಅಭಾವದ ಜ್ಞಾನವು ಇಂದ್ರಿಯದಿಂದ ಹುಟ್ಟುವುದಿಲ್ಲ ; ಆದರೂ ಘಟವಿಲ್ಲವೆಂಬ ನಿಶ್ಚಿತ ಜ್ಞಾನವು ಇಲ್ಲಿ ಉಂಟಾಗಿದೆ ; ಹೇಗೆಂದರೆ ಇಂದ್ರಿಯವು ಭೂತಲದೊಡನೆ ಸನ್ನಿಕರ್ಷವನ್ನು ಪಡೆದಿದೆ. ಇದು ಅಂತಃಕರಣವೃತ್ತಿಯನ್ನು ಹುಟ್ಟಿಸುತ್ತದೆ. ಇದರಿಂದ ಭೂತಲದಲ್ಲಿರುವ ವಿಷಯ ಚೈತನ್ಯಕ್ಕೂ ಅಂತಃಕರಣದಲ್ಲಿರುವ ಪ್ರಮಾತೃ ಚೈತನ್ಯಕ್ಕೂ ಅಭೇದವಾಗುವುದು. ಇದರಿಂದ ಭೂತಲದಲ್ಲಿ ಘಟಾಭಾವದ ಚೈತನ್ಯವು ಪ್ರಮಾತೃವಿನಲ್ಲಿರುವ ಚೈತನ್ಯದಿಂದ ಭಿನ್ನವಲ್ಲನೆಂದು ತಿಳಿಯುತ್ತದೆ ; ಆದುದರಿಂದ ಭೂತಲವು ಹೇಗೆ ಪ್ರತ್ಯಕ್ಷವೋ, ಘಟಾಭಾವವೂ ಪ್ರತ್ಯಕ್ಷವೇ ಎನ್ನಿಸುವುದು ; ಆದರೆ ಇಂದ್ರಿಯಕ್ಕೂ ಅಭಾವಕ್ಕೂ ಸನ್ನಿಕರ್ಷವಿಲ್ಲವಾದುದರಿಂದ ಅಭಾವದ ವೃತ್ತಿಯು ಇಂದ್ರಿಯಜನ್ಯವಲ್ಲ ; ಆದುದರಿಂದ ಘಟಾಭಾವವೆಂಬ ಅನುಪಲಬ್ಧಿಯು ಪ್ರತ್ಯಕ್ಷದಿಂದ ಭಿನ್ನವಾದ, ಸ್ವತಂತ್ರ ಅಸ್ತಿತ್ವವುಳ್ಳ ಬೇರೊಂದು ಪ್ರಮಾಣವೆನ್ನಿಸುತ್ತದೆ.

### ಸ್ವರ – ಶ್ರುತಿಗಳಲ್ಲಿ ಅರ್ಥಾಪತ್ತಿ

ಅನುಪಲಬ್ಧಿಗೆ ಆಧಾರವಾದ ಅಭಾವವು ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವವೆಂದು ನಾಲ್ಕು ವಿಧ. ಅನ್ಯೋನ್ಯಾಭಾವಕ್ಕೆ ಭೇದವೆಂದೂ ಮತ್ತೊಂದು ಹೆಸರಿದೆ. 'ಘಟವು

371 ಅದೇ ಗ್ರಂಥ, 43-44, ಪು. 8.

ಪಟವಲ್ಲ' ಎಂಬಲ್ಲಿ ಘಟದಲ್ಲಿ ಪಟದ, ಪಟದಲ್ಲಿ ಘಟದ ಅಭಾವವು ಅನ್ಯೋನ್ಯವಾಗಿರುವುದರಿಂದಲೇ ಇವುಗಳಲ್ಲಿ ಭೇದವು ಸಿದ್ಧಿಸುವುದು ; ಆದುದರಿಂದಲೇ ಇದಕ್ಕೆ ಅನ್ಯೋನ್ಯಾಭಾವವೆಂದು ಹೆಸರು. ಹೀಗೆ ಪರಸ್ಪರ ಭೇದವುಳ್ಳ ಎರಡು ವಸ್ತುಗಳಲ್ಲಿ ಅನ್ಯೋನ್ಯಾಭಾವವನ್ನು , ಎಂದರೆ ಅನುಪಲಬ್ಧಿಯನ್ನು ಹೇಳಬೇಕು.

ಸ್ವರ-ಶ್ರುತಿಗಳಲ್ಲಿ ಭೇದವನ್ನು ಪೂರ್ವಪಕ್ಷವೇ ಸಿದ್ಧಮಾಡಿಕೊಟ್ಟಿದೆಯಷ್ಟೆ. ಸ್ವರ-ಶ್ರುತಿಗಳಲ್ಲಿ ಭೇದವಿದೆ ಎಂದರೆ ಸ್ವರದಲ್ಲಿ ಶ್ರುತಿಯಿಲ್ಲ, ಶ್ರುತಿಯಲ್ಲಿ ಸ್ವರವಿಲ್ಲ ಎಂಬ ಅನ್ಯೋನ್ಯಾಭಾವವು ಸಿದ್ಧವಾಗುತ್ತದೆ. ಸ್ವರಕ್ಕೆ ನಾಶವಿಲ್ಲದುದರಿಂದ ಈ ದೃಷ್ಟಾಂತದಲ್ಲಿ ಪ್ರಧ್ವಂಸಾಭಾವವು ಅಪ್ರಸಕ್ತ. ಹಾಗೆಯೇ ತ್ರಿಕಾಲದಲ್ಲಿಯೂ ಸ್ವರದಲ್ಲಿ ಶ್ರುತಿಯ ಅಭಾವವಿರುತ್ತದೆ, ಅಥವಾ ಶ್ರುತಿಯಲ್ಲಿ ಸ್ವರದ ಅಭಾವವಿರುತ್ತದೆ ಎನ್ನಲಾಗದು ; ಏಕೆಂದರೆ ಸ್ವರದಲ್ಲಿ ಸ್ವಸಂವೇದ್ಯತಾ ಕಾಲದಲ್ಲಿ ಅಂತಿಮ ಸ್ವರಗತ ಶ್ರುತಿಯೂ ಉಳಿದ ಕಾಲದಲ್ಲಿ ಇತರ ಅಂತರಗತ ಪೂರ್ವಶ್ರುತಿಗಳೂ ಇರುತ್ತವೆಂಬುದು ಶಾಸ್ತ್ರಸಿದ್ಧವಾಗಿದೆ. ಇದನ್ನು ಶಾರ್ಙ್ಗದೇವನೂ ಒಪ್ಪಿದ್ದಾನಾದುದರಿಂದ ಈ ವಿಮರ್ಶೆಯು ಇಲ್ಲಿ ಪ್ರಸಕ್ತ. ಕೆಲವು ಕಾಲದಲ್ಲಿ ಇರುವುದು, ಕೆಲವು ಕಾಲದಲ್ಲಿ ಇಲ್ಲದಿರುವುದು, ಈ ಸಂಬಂಧವು ಸ್ವರಶ್ರುತಿಗಳಲ್ಲಿ ಇರುವುದರಿಂದ ಅತ್ಯಂತಾಭಾವವೂ ಇಲ್ಲಿ ಅಪ್ರಸಕ್ತವೇ. ಸ್ವರವೆಂಬ ಕಾರ್ಯಕ್ಕೆ ಕಾರಣವಾದ ಶ್ರುತಿಯಲ್ಲಿ ಸ್ವರೋತ್ಪತ್ತಿಗಿಂತಲೂ ಮುಂಚೆ ಸ್ವರವಿರುವುದಿಲ್ಲವೆಂಬುದು ಪ್ರಾಗಭಾವವಾದರೂ ಈ ಜ್ಞಾನದಿಂದ ಪ್ರಕೃತ ವಿವೇಚನೆಗೆ ಪ್ರಯೋಜನವೇನೂ ಇಲ್ಲ. ಏಕೆಂದರೆ ಕಾರ್ಯಕಾರಣ ಸಂಬಂಧದಲ್ಲಿ ಕಾರ್ಯಕ್ಕಿಂತ ಮುಂಚೆ ಕಾರಣದ ಸ್ವಭಾವ, ಸ್ಥಿತಿ, ಅವಸ್ಥೆ ಮುಂತಾದವುಗಳು ಏನಿದ್ದವೆಂಬುದನ್ನು ಪರೀಕ್ಷಿಸುವುದು ಅನಾವಶ್ಯಕ, ಅಪ್ರಕೃತ, ಅಪ್ರಸಕ್ತ. ಈ ಸಂಬಂಧದಲ್ಲಿ ಕಾರ್ಯವು ಪ್ರಾರಂಭವಾದಾಗಿನಿಂದ ಮುಗಿಯುವವರೆಗೆ ಕಾರಣವು ಅನುಸ್ಯೂತವಾಗಿ ಬಂದಿದೆಯೇ, ಕಾರ್ಯವಿರುವೆಡೆಯಲ್ಲೆಲ್ಲಾ ಉಪಾದಾನ ಕಾರಣವೂ ಇದೆಯೇ ಎಂದು ಪರೀಕ್ಷಿಸಿದರೆ ಸಾಕು. ಆದುದರಿಂದ ಭೇದವೆಂಬ ಅನ್ಯೋನ್ಯಾಭಾವವೊಂದೇ ಸ್ವರಶ್ರುತಿಗಳಲ್ಲಿ ಪ್ರಸಕ್ತವಾದುದು. ಮೃತ್ಪಿಂಡ-ಘಟ ಈ ಸಂಬಂಧವನ್ನು ಕಾರಣ-ಕಾರ್ಯವೆಂದೇ ತಿಳಿಯಬೇಕು. ಏಕೆಂದರೆ ಇಲ್ಲಿ ಅನುಪಲಬ್ಧಿಯಿಲ್ಲ ; ಎಂದರೆ ಮೃತ್ಪಿಂಡವು ಘಟವಲ್ಲ, ಘಟವು ಮೃತ್ಪಿಂಡವಲ್ಲ ಎಂಬ ಅನ್ಯೋನ್ಯಾಭಾವವು ಇಲ್ಲಿ ಸಿದ್ಧಿಸದು. ಅದಕ್ಕೆ ವಿರುದ್ಧವಾಗಿ, ಕಾರ್ಯವಾದ ಘಟವಿರುವೆಡೆಯಲ್ಲೆಲ್ಲ ಇವೆರಡರಲ್ಲಿಯೂ ಅಭೇದವೇ ಸಿದ್ಧಿಸುತ್ತದೆ. ಆದರೆ ಸ್ವರ-ಶ್ರುತಿಗಳ ಸಂಬಂಧದಲ್ಲಿ ಹಾಗಲ್ಲ. ಇವುಗಳಲ್ಲಿ ಪೌರ್ವಾಪರ್ಯದ, ಜನಕಜನ್ಯದ ಭೇದವು ಈಗಾಗಲೇ ಸಿದ್ಧವಾಗಿದೆ. ಅಲ್ಲದೆ ಶ್ರುತಿಯಿರುವೆಡೆಯಲ್ಲೆಲ್ಲ ಸ್ವರವಿದೆ ಎಂದೇನೂ ಸಿದ್ಧವಾಗುವುದಿಲ್ಲವೆಂದು ಆಚಾರ್ಯ ವಿಶ್ವಾವಸು, ವಿಶಾಖಿಲರ ಸ್ವರಗತ, ಅಂತರಗತ ಶ್ರುತಿಗಳಿಂದ ಸಿದ್ಧವಾಗುತ್ತದೆ. ಆದುದರಿಂದ ಇಲ್ಲಿ ದೃಷ್ಟಾಂತವೈಷಮ್ಯವು ಪ್ರಾಪ್ತವಾಗಿದೆ. ಮೃತ್ಪಿಂಡ-ಘಟ ಈ ಸಂಬಂಧದಲ್ಲಿ ಅನ್ಯೋನ್ಯಾಭಾವದಿಂದ ಅನುಪಲಬ್ಧಿಯು ದೊರೆಯುವುದಿಲ್ಲ ; ಈ ಸಂಬಂಧವು ಕಾರ್ಯಕಾರಣವೆನ್ನಿಸುವುದು ಸರಿಯಾಗಿಯೇ ಇದೆ. ಆದರೆ ಸ್ವರ ಶ್ರುತಿಗಳ ಸಂಬಂಧದಲ್ಲಿ ಭೇದದಿಂದ ಅನುಪಲಬ್ಧಿಯು ದೊರೆಯುತ್ತದೆ. ಆದುದರಿಂದಲೇ ಶ್ರುತಿಗೆ ಇಲ್ಲಿ ಕಾರಣತ್ವವನ್ನು ಹೇಳಲಾಗದು. ಆದುದರಿಂದ ಸ್ವರ-ಶ್ರುತಿಗಳಲ್ಲಿ ಕಾರ್ಯಕಾರಣ ಸಂಬಂಧವಿಲ್ಲ :

ಯದ್ಯಪಿ ಸ್ಫುಟಪೌರ್ವಾಪರ್ಯೇಣ ಕಾರ್ಯಕಾರಣಭಾವಪ್ರತೀತಿರಸ್ತಿ, ತಥಾಽಪ್ಯುಪಾದಾನಸ್ಯ ಮೃತ್ಪಿಂಡಾದೇರ್ಯಥಾ ಘಟಾದಿಕಾರ್ಯನಿಷ್ಪತ್ತೌ ಭೇದೇನಾನುಪಲಬ್ಧಿರ್ನ, ತಥೇಹ ಸ್ವರನಿಷ್ಪತ್ತೌ ಶ್ರುತೀನಾಮನುಪಲಂಭ ಇತಿ ತಾಸಾಮಕಾರಣತ್ವಾತ್ [361]

ಕಲ್ಲಿನಾಥನು ಅನುಮಾನ, ಅರ್ಥಾಪತ್ತಿಗಳ ಮಂಡನಕ್ಕೂ ನಿರಾಕರಣಕ್ಕೂ ಶ್ರುತಿಸ್ವರಗಳಲ್ಲಿ ರಣನ-ಅನುರಣನಗಳ ಸಂಬಂಧವನ್ನು ಮಾತ್ರ ವಿವಕ್ಷಿಸಿ ವ್ಯಾಖ್ಯಾನ ಮಾಡುವುದೂ ಇವುಗಳ ಲಕ್ಷಣಗಳಲ್ಲಿರುವ ಇತರ ಪರಸ್ಪರ ಸಂಬಂಧಗಳನ್ನು ಲೆಕ್ಕಿಸದೆ ಇರುವುದೂ ಒಂದು ದೋಷವೇ. ಆದರೆ ರಣನಾನುರಣನವನ್ನು ಪ್ರಧಾನಲಕ್ಷಣವೆಂದು

ತಿಳಿದರೆ (ಏಕೆಂದರೆ ಅನುರಣನವನ್ನು ಸ್ವರದ ಪ್ರಧಾನಲಕ್ಷಣವಾಗಿ ಶಾರ್ಙ್ಗದೇವನು ಹೇಳಿದ್ದಾನೆ,) ಮತ್ತು ಇದನ್ನು ಉಪಲಕ್ಷಣವೆಂದಿಟ್ಟುಕೊಂಡರೆ ಈ ದೋಷವು ಪರಿಹಾರವಾಗುತ್ತದೆ. ಕಲ್ಲಿನಾಥನ ಈ ಮಾತಿಗೆ ತಾರ್ಕಿಕ ಮತದ ಪರವಾಗಿ ಬೇರೆಯ ಅರ್ಥವನ್ನೂ ಸ್ವರಶ್ರುತಿಗಳ ಕಾರ್ಯಕಾರಣ ನಿರಾಕರಣ ಸಂದರ್ಭದಲ್ಲಿ ಹೊಂದಿಸಬಹುದು : ಪೌರ್ವಾಪರ್ಯವು ಶ್ರುತಿಸ್ವರಗಳಲ್ಲಿ ಸ್ಫುಟವಾಗಿದೆಯೆಂದು ಬೇಕಾದರೆ ಕಾರ್ಯಕಾರಣ ಭಾವದ ಪ್ರತೀತಿಯನ್ನು ಹೇಳಬಹುದು. ಆದರೆ ತರ್ಕಶಾಸ್ತ್ರದಲ್ಲಿ ಕಾರ್ಯನಿಷ್ಪತ್ತಿಯಲ್ಲಿ ಉಪಾದಾನ ಕಾರಣವು ಅನುಸ್ಯೂತವಾಗಿ ಗೋಚರಿಸ ಬೇಕೆಂಬುದೇ ಅಲ್ಲದೆ ಕಾರ್ಯಕಾರಣಗಳೆರಡೂ ಭಿನ್ನಗಳೆಂದೂ ಸಿದ್ಧವಾಗಿದೆ. ವೇದಾಂತಿಗಳು ಪಾರಮಾರ್ಥಿಕ ಸತ್ಯವಾದ ಬ್ರಹ್ಮದ ಜಿಜ್ಞಾಸೆಯಲ್ಲಿ ಕಾರಣಕಾರ್ಯಗಳಲ್ಲಿ ಅಭೇದವನ್ನು ಹೇಳಿದರೂ ವ್ಯಾವಹಾರಿಕ ಸತ್ಯಗಳ ಜಿಜ್ಞಾಸೆಗೆ ಅದು ಅಪ್ರಸಕ್ತವಾಗಿದೆ. ಹೀಗೆ ಉಪಾದಾನ ಕಾರಣ ಮತ್ತು ಕಾರ್ಯಗಳಲ್ಲಿ ಭೇದದಿಂದ ಅನುಲಬ್ಧಿಯಿಲ್ಲ ಎಂದರೆ ಎರಡೂ ಭೇದವೆಂಬ ಉಪಲಬ್ಧಿಯನ್ನೇ, ಪ್ರತ್ಯಕ್ಷ ಗೋಚರವನ್ನೇ ಪಡೆದಿವೆ. ಆದುದರಿಂದ ಅವುಗಳಲ್ಲಿ ಕಾರ್ಯಕಾರಣ ಸಂಬಂಧವನ್ನು ಹೇಳಬಹುದು. ಆದರೆ ಸ್ವರವೆಂಬ ಕಾರ್ಯನಿಷ್ಪತ್ತಿಯಲ್ಲಿ, ಎಂದರೆ ಸ್ವರೋತ್ಪತ್ತಿ ಕಾಲದಲ್ಲಿ ಶ್ರುತಿಯು ಉಪಲಬ್ಧವಲ್ಲವಷ್ಟೆ. ಷಡ್ಜಾದಿ ಸ್ವರಗಳು ಕಂಠದಲ್ಲಿಯಾಗಲೀ ವಾದ್ಯಗಳಲ್ಲಿಯಾಗಲೀ ಉತ್ಪತ್ತಿಯಾಗುವಾಗ ಶ್ರುತಿಗಳು ಗೋಚರಿಸುವುದಿಲ್ಲ. ಆದುದರಿಂದ ಅದು ಕಾರಣವೇ ಆಗಲಾರದು ; ಆದುದರಿಂದ ಸ್ವರಶ್ರುತಿಗಳಲ್ಲಿ ಕಾರ್ಯಕಾರಣ ಸಂಬಂಧವನ್ನು ಹೇಳಲಾಗದು.

## 4. ಪರಿಣಾಮವಾದ

ನಾಲ್ಕನೆಯದಾಗಿ ಮತಂಗನು ಅನ್ಯರಿಂದ ಸ್ವರಶ್ರುತಿಗಳಲ್ಲಿ ಪರಿಣಾಮಸಂಬಂಧವನ್ನು ಸಂಗ್ರಹಿಸುತ್ತಾನೆ. ಪರಿಣಾಮವಾದವು ಮುಖ್ಯವಾಗಿ ಸಾಂಖ್ಯರಿಂದ ಮಂಡಿತವಾದುದು ಈ ವಾದದ ಪ್ರಕಾರ ಕಾರ್ಯಕಾರಣಗಳಿಗೆ ಅಭೇದವೇ ಇರುತ್ತದೆ. ಮತ್ತು ಸತ್ಕಾರ್ಯಸಂಬಂಧವಿರುತ್ತದೆ. ಸತ್ಕಾರ್ಯವೆಂದರೆ ಕಾರ್ಯವು ಅದನ್ನು ಅಭಿವ್ಯಕ್ತಿ ಪಡಿಸುವ ಕಾರಣಕ್ಕಿಂತಲೂ ಪೂರ್ವದಲ್ಲಿ ಅಸ್ತಿತ್ವವನ್ನು ಪಡೆದಿರುತ್ತದೆ. ಈ ಸಂಬಂಧವನ್ನು ಉಳ್ಳ ಕಾರಣಕ್ಕೆ ಉಪಾದಾನ ಕಾರಣವೆಂದು ಹೆಸರು. ಉದಾಹರಣೆಗೆ, ಬೀಜದಿಂದ ಮೊಳಕೆಯೆಂಬ ಕಾರ್ಯವಾಗಬೇಕಾದರೆ ಮೊಳಕೆಯ ಉತ್ಪತ್ತಿಯ ಕಾಲಕ್ಕಿಂತ ಮುಂಚೆ ಮೊಳಕೆಯು ಬೀಜದಲ್ಲಿರಬೇಕು. ಮೃತ್ಪಿಂಡವೆಂಬ ಕಾರಣದಿಂದ ಘಟವೆಂಬ ಕಾರ್ಯವಾಗಬೇಕಾದರೆ ಘಟೋತ್ಪತ್ತಿಗಿಂತ ಮುಂಚೆ ಘಟವು ಮೃತ್ಪಿಂಡದಲ್ಲಿರಬೇಕು. ಎಳ್ಳಿನಿಂದ ಎಣ್ಣೆಯು ಹುಟ್ಟಬೇಕಾದರೆ ಎಣ್ಣೆಯು ಉತ್ಪತ್ತಿಗಿಂತ ಮುಂಚೆ ಎಳ್ಳಿನಲ್ಲಿ ಇದ್ದರೆ ಮಾತ್ರ ಇದು ಸಾಧ್ಯ. ಹೀಗೆ ಬೀಜಾದಿಗಳು ಉಪಾದಾನ ಕಾರಣಗಳೂ ಅಂಕುರಾದಿಗಳು ಕಾರ್ಯಗಳೂ ಆಗುತ್ತವೆ. ಕಾರಣವು ಕಾರ್ಯವನ್ನು ಉಂಟುಮಾಡುವ ಸಾಮರ್ಥ್ಯವನ್ನು ಪಡೆದಿರುವುದರಿಂದಲೇ ಉಪಾದಾನ ಕಾರಣವೆನ್ನಿಸಿಕೊಳ್ಳುವುದು.

ಸತ್ಕಾರ್ಯಸಂಬಂಧವಿಲ್ಲದಿದ್ದರೆ ಕಾರ್ಯಕಾರಣಸಂಬಂಧವು ಏರ್ಪಡಲಾರದು. ಎಳ್ಳಿನಲ್ಲಿ ಎಣ್ಣೆಯಿರುವುದರಿಂದಲೇ ಅದು ಉಪಾದಾನಕಾರಣವಾಗಿ ಎಣ್ಣೆಯೆಂಬ ಕಾರ್ಯವನ್ನು ಉಂಟುಮಾಡುವುದು. ಇಲ್ಲದಿದ್ದರೆ, ಮರಳು, ಗಾಜು, ಗಾರೆ ಮುಂತಾದವುಗಳಿಂದಲೂ ಎಣ್ಣೆಯನ್ನು ಉತ್ಪತ್ತಿ ಮಾಡಬಹುದಾಗಿತ್ತು. ಆದರೆ ಇದು ಅನುಭವದಲ್ಲಿಲ್ಲ. ಆದುದ ರಿಂದ ಕಾರಣವೇ ಕಾರ್ಯರೂಪವಾಗಿ ಪರಿಣಮಿಸುತ್ತದೆಂದು ತಿಳಿಯಬೇಕು. ಆದುದರಿಂದಲೇ ಕಾರ್ಯಕಾರಣಗಳಿಗೆ ಅಭೇಧವು ಸಿದ್ಧಿಸುವುದು; ಕಾರ್ಯವು ಕಾರಣದ ಒಂದು ರೂಪ, ಅಷ್ಟೆ. ಕಾರ್ಯವೂ ಕಾರಣವೂ ಬೇರೆ ಬೇರೆ ಯಾಗಿಯೇ ಅಸ್ತಿತ್ವವನ್ನು ಪಡೆದಿರಬಹುದು. ಕಾರಣಕ್ಕೆ ಸರಿಯಾದ ಸಂದರ್ಭಗಳು ದೊರೆತಾಗ ಅದೇ ಕಾರ್ಯದ ರೂಪವನ್ನು ಪಡೆದು, ಎಂದರೆ ರೂಪಾಂತರವನ್ನು ಅಥವಾ ಅವಸ್ಥಾಂತರವನ್ನು ಪಡೆದು ಕಾರ್ಯವೆನ್ನಿಸಿಕೊಳ್ಳುತ್ತದೆ. ಇಲ್ಲಿ ಒಂದು ಪ್ರಶ್ನೆಯು ಏಳಬಹುದು: ಮನೆಯಲ್ಲಿ ಭತ್ತವನ್ನು ಇಟ್ಟುಕೊಂಡಿರುವಾಗ ಅದನ್ನು ಭತ್ತದ

ಮೊಳಕೆ ಅಥವಾ ಸಸಿಗೆ ಕಾರಣವೆನ್ನಲಾದೀತೇ? ಭತ್ತವು ಮೊಳಕೆಯಾಗಿ ರೂಪಾಂತರವನ್ನು ಪಡೆದಿಲ್ಲವಲ್ಲ! ಇದರಿಂದ ಕಾರ್ಯಕಾರಣಗಳಿಗೆ ಭೇದವೇ ಸಿದ್ಧಿಸಲಿಲ್ಲವೇ? ಇಲ್ಲ; ಏಕೆಂದರೆ ಭತ್ತವು ಮೊಳೆಯದಿದ್ದಾಗ ಮೊಳಕೆ ಎಂಬ ಕಾರ್ಯವು ಅಭಿವ್ಯಕ್ತವಾಗಲಿಲ್ಲವಷ್ಟೇ ಹೊರತು ಅದು ಭತ್ತದಲ್ಲಿ ಇಲ್ಲವೆಂದಾಗಲಿಲ್ಲ. ಹೀಗೆ ಮೊಳೆತಾಗ ಕಾರ್ಯವು ಅಭಿವ್ಯಕ್ತವಾಗುತ್ತದೆ; ಮೊಳೆಯದಿದ್ದಾಗ ಕಾರ್ಯವು ತಿರೋಧಾನವಾಗಿರುತ್ತದೆ-ಆಮೆಯು ಅಂಗವು ಅದರ ಶರೀರದಿಂದ ಹೊರಬಂದಾಗ ಅಭಿವ್ಯಕ್ತವಾಗಿ, ಪುನಃ ಶರೀರದಲ್ಲಿಯೇ ತಿರೋಧಾನವನ್ನು ಪಡೆದಂತೆ. ಆದುದರಿಂದ ಕಾರ್ಯೋತ್ಪತ್ತಿಯನ್ನು ಕಾರಣದಲ್ಲಿ ಅಡಗಿರುವ ಕಾರ್ಯದ ಅಭಿವ್ಯಕ್ತಿಯೆಂದೂ ನಾಶವನ್ನು ತಿರೋಧಾನವೆಂದೂ ತಿಳಿಯಬೇಕು; ಎಂದರೆ ವಾಸ್ತವವಾಗಿ ಕಾರ್ಯವು ಉತ್ಪತ್ತಿಯನ್ನೂ ನಾಶವನ್ನೂ ಹೊಂದು ವುದಿಲ್ಲ; ಕಾರ್ಯವು ಯಾವಾಗಲೂ ಇದ್ದು ಅಭಿವ್ಯಕ್ತಿ ಮತ್ತು ತಿರೋಧಾನಗಳೆಂಬ ಅವಸ್ಥೆಗಳನ್ನು ಪಡೆಯುವುದರ ಮೂಲಕ ಉತ್ಪತ್ತಿ ನಾಶಗಳೆಂಬ ವ್ಯಪದೇಶವನ್ನು ಪಡೆಯುತ್ತದೆ, ಅಷ್ಟೆ. ಮೊದಲಿನಲ್ಲಿಯೇ ಇದ್ದ ಕಾರ್ಯವನ್ನು ಅಭಿವ್ಯಕ್ತಿಗೊಳಿಸುವುದಕ್ಕೆ ಕಾರಣದ ವ್ಯಾಪಾರವೆಂದು ಹೆಸರು.

ಆದುದರಿಂದ ನೈಯಾಯಿಕರು ಕಾರ್ಯಕಾರಣಗಳಲ್ಲಿ ಭೇದವನ್ನೂ ಕಾರ್ಯಕ್ಕೆ ಅಭಾವಜನ್ಯತ್ವವನ್ನೂ ಹೇಳು ವುದನ್ನು ಪರಿಣಾಮವಾದವು ನಿರಾಕರಿಸುತ್ತದೆ. ನೈಯಾಯಿಕರ ಮತದಲ್ಲಿ ಮೃತ್ಪಿಂಡವು ನಾಶವಾಗಿ ಘಟವನ್ನು ಉತ್ಪತ್ತಿಮಾಡುತ್ತದೆ. ಆದುದರಿಂದ ಮೃತ್ಪಿಂಡದ ಪ್ರಧ್ವಂಸಾಭಾವವೇ ಘಟವೆಂಬ ಕಾರ್ಯಕ್ಕೆ ಕಾರಣವೆಂದಾಗುತ್ತದೆ. ಇದು ಅಸಂಗತವಾದುದು. ಏಕೆಂದರೆ ಅಭಾವದಿಂದ ಭಾವಪದಾರ್ಥವು ಹುಟ್ಟುತ್ತದೆಂಬ ವಿವಕ್ಷೆ ಇಲ್ಲಿದೆ. ಇದು ಅಯುಕ್ತವಾದುದು. ಏಕೆಂದರೆ ಅಭಾವಕ್ಕೆ ಕಾರ್ಯೋತ್ಪತ್ತಿ ಸಾಮರ್ಥ್ಯವಿದ್ದಿದ್ದರೆ ಅಭಾವ ಎಂಬುದೇ ಇರುತ್ತಿರಲಿಲ್ಲ; ಎಲ್ಲೆಲ್ಲಿಯೂ ಎಲ್ಲಾ ಕಾರ್ಯಗಳೂ ಹುಟ್ಟುತ್ತಿದ್ದವು; ಏಕೆಂದರೆ ಯಾವುದಾದರೊಂದು ಕಾಲದೇಶಗಳಲ್ಲಿ ಒಂದು ಮಾತ್ರ ದ್ರವ್ಯವಿದ್ದು ಉಳಿದುದೆಲ್ಲಾ ಅಭಾವವಷ್ಟೆ; ಈ ಅಭಾವ ಗಳಿಂದ ಆಯಾ ಕಾರ್ಯಗಳು ಹುಟ್ಟಬೇಕಾಗಿತ್ತು. ದ್ರವ್ಯವಿಲ್ಲದೆಡೆಯಲ್ಲಿ ದ್ರವ್ಯವೂ ಕಾರ್ಯವಿಲ್ಲದೆಡೆಯಲ್ಲಿ ಕಾರ್ಯವೂ, ಕಾರಣವಿಲ್ಲದೆಡೆಯಲ್ಲಿ ಕಾರಣವೂ, ಹುಟ್ಟಬೇಕಾಗಿತ್ತು. ಹೀಗಿಲ್ಲವೆಂಬುದು ಅನುಭವಪ್ರಸಿದ್ಧವೇ ಆಗಿದೆ. ಅಸದ್ರೂಪವಾದ ಅಭಾವದಿಂದ ಸದ್ರೂಪವಾದ ಕಾರ್ಯವನ್ನು ಹೇಳುವುದು ಸರ್ವಥಾ ಅನುಪಪನ್ನವಾದುದು.

## ಸ್ವರಶ್ರುತಿಗಳಲ್ಲಿ

ಮತಂಗಮುನಿಯು ಸ್ವರಶ್ರುತಿಗಳಲ್ಲಿ ಪರಿಣಾಮವಾದವನ್ನು ಹೀಗೆ ಹೇಳುತ್ತಾನೆ:

ಶ್ರುತಯಃ ಸ್ವರರೂಪೇಣ ಪರಿಣಮಂತಿ ನ ಸಂಶಯಃ ।
ಪರೀಣಮೇದ್ ಯಥಾ ಕ್ಷೀರಂ ದಧಿರೂಪೇಣ ಸರ್ವಥಾ ॥ [372]

ಸಿಂಹಭೂಪಾಲನು 'ಪರಿಣಾಮಂ ವ್ರಜಂತಿ ಹಿ' ಎಂಬ ಪಾಠಾಂತರವನ್ನು ಕೊಡುತ್ತಾನೆ.[360] ಕಲ್ಲಿನಾಥನು 'ಕ್ಷೀರಂ ದಧಿರೂಪೇಣೇವ ಶ್ರುತಯಃ ಸ್ವರರೂಪೇಣ ವಿಪರಿಣಮಂತೇ' ಎಂದು ಈ ಮತವನ್ನು ಸಂಗಹಿಸು ತ್ತಾನೆ.[361] ತುಳಜನು 'ಕಿಂ ತು ಕ್ಷೀರಂ ದಧಿರೂಪೇಣೇವ ಶ್ರುತಯಃ ಸ್ವರರೂಪೇಣೈವ ಪರಿಣಮಂತಿ'[363] ಎಂದು ಈ ಮತವನ್ನು ಹೇಳುತ್ತಾನೆ. ಈ ಮತದ ಪ್ರಕಾರ ಶ್ರುತಿಗಳು ಉಪಾದಾನ ಕಾರಣ; ಇವೇ ಸತ್ಕಾರ್ಯದ ದೆಸೆಯಿಂದ, ಎಂದರೆ ತಮ್ಮಲ್ಲಿರುವ ಸ್ವರವನ್ನು ಅಭಿವ್ಯಕ್ತಿಪಡಿಸಿ, ಸ್ವರರೂಪಗಳಾಗುತ್ತವೆ. ಆದುದರಿಂದ ಶ್ರುತಿಗೂ ಸ್ವರಕ್ಕೂ ಅಭೇದವೇ ಸಿದ್ಧಿಸುತ್ತದೆ. ಸ್ವರವಿಲ್ಲದಿದ್ದಾಗ ಅದನ್ನು ಕಾರ್ಯದ ತಿರೋಧಾನವೆಂದು ಅಥವಾ ಶ್ರುತಿಯು ವ್ಯಾಪಾರರಹಿತವೆಂದು ತಿಳಿಯಬೇಕು. ಅಂತರಗತ ಶ್ರುತಿಗಳಲ್ಲಿ ಸ್ವರದ ತಿರೋಧಾನವೂ

372 ಅದೇ ಗ್ರಂಥ, 35, ಪು. 7.

ಅವ್ಯಕ್ತತೆಯೂ ಸ್ವರಗತಶ್ರುತಿಗಳಲ್ಲಿ ಸ್ವರದ ಅಭಿವ್ಯಕ್ತಿಯೂ ಇರುತ್ತವೆ. ಕಾರಣವು ಕರಣವಾದರೆ ಮಾತ್ರ ಕಾರ್ಯವಾಗಬಲ್ಲುದಷ್ಟೆ; ಎಂದರೆ ಕಾರಣವು ಸವ್ಯಾಪಾರವಾಗಿ ಕಾರ್ಯವನ್ನು ಹುಟ್ಟಿಸುತ್ತದೆ. ಇಲ್ಲಿ ಶ್ರುತಿಯು ಊರ್ಧ್ವಸ್ಪರ್ಶ, ಉತ್ತರೋತ್ತರ ಸಂಸ್ಕಾರಪ್ರದಾನ ಎಂಬ ವ್ಯಾಪಾರಗಳನ್ನು ಪಡೆದು ಸ್ವರವನ್ನು ಉತ್ಪತ್ತಿ ಮಾಡುತ್ತದೆ. ಕಾರ್ಯದ ಸಂಬಂಧವಿರುವುದರಿಂದಲೇ ಕಾರಣವು ಕಾರ್ಯವನ್ನು ಉತ್ಪಾದಿಸುತ್ತದಷ್ಟೆ. ಅಂತೆಯೇ ಶ್ರುತಿಯೂ ಸ್ವರಗತಶ್ರುತಿಗಳಲ್ಲಿ ಅನುರಣನ, ರಕ್ತಿ ಮುಂತಾದ ಸ್ವರಧರ್ಮಗಳನ್ನೂ ಅಂತರಗತ ಶ್ರುತಿಗಳಲ್ಲಿ ರಣನ, ವಿರಕ್ತಿ ಮುಂತಾದ ವಿಸ್ವರಧರ್ಮಗಳನ್ನೂ ಪಡೆದಿರುತ್ತದೆ.

ಈ ವಾದವನ್ನು ಒಂದು ದೃಷ್ಟಾಂತದಿಂದ ಸಮರ್ಥಿಸಲಾಗಿದೆ: ಹಾಲಿನಿಂದ ಮೊಸರು ಆದ ಹಾಗೆ ಶ್ರುತಿಗಳಿಂದ ಸ್ವರಗಳಾಗುತ್ತವೆ. ಹಾಲಿನಲ್ಲಿ ಮೊಸರು ಎಂಬುದು ಯಾವಾಗಲೂ ಇದ್ದೇ ಇದೆ. ಆದರೆ ಮೊಸರು ಎಂಬ ಕಾರ್ಯವು ಅಭಿವ್ಯಕ್ತವಾಗಬೇಕಾದರೆ ಈ ಉಪಾದಾನ ಕಾರಣವು ಹೆಪ್ಪುಹಾಕುವುದು ಎಂಬ ವ್ಯಾಪಾರಸಹಿತವಾಗ ಬೇಕು; ಅದಾಗದಿದ್ದರೆ ಹಾಲಿನಲ್ಲಿ ಮೊಸರು ಅವ್ಯಕ್ತವಾಗಿಯೇ ಇರುತ್ತದೆ. ಈ ವ್ಯಾಪಾರವು ದೊರೆತ ಒಡನೆಯೇ ಹಾಲು ರೂಪಾಂತರ, ಅವಸ್ಥಾಂತರಗಳನ್ನು ಪಡೆದು ಮೊಸರಾಗುತ್ತದೆ. ಆದುದರಿಂದ ಇಲ್ಲಿ ಹೊಸ ದ್ರವ್ಯದ ಸೃಷ್ಟಿಯೇನೂ ಆಗಿಲ್ಲ; ದ್ರವ್ಯದ ಅಥವಾ ಕಾರಣದ ರೂಪಾಂತರವು ಮಾತ್ರ ಆಗಿದೆ. ನೈಯಾಯಿಕರಾದರೆ ಹಾಲಿಗೆ ಪ್ರಧ್ವಂಸಾಭಾವವು ಉಂಟಾಗಿ ಮೊಸರನ್ನು ಹುಟ್ಟಿಸಿತು ಎನ್ನುತ್ತಾರೆ; ಅದೇ ರೀತಿಯಲ್ಲಿ ಶ್ರುತಿಯ ಪ್ರಧ್ವಂಸಾಭಾವವಾಗಿ ಸ್ವರದ ಉತ್ಪತ್ತಿಯಾಯಿತೆಂದೂ ಹೇಳಬೇಕು; ಎರಡೂ ಅಸಾಂಪ್ರತಗಳೇ. ಇಲ್ಲಿ ಶ್ರುತಿಯೇ ಸ್ವರವಾಗಿ ಪರಿಣಮಿಸಿದೆ; ಸ್ವರಾಭಿವ್ಯಕ್ತಿಯು ಇರುವವರೆಗೂ ಶ್ರುತಿಯು ವ್ಯಾಪಾರಸಹಿತವಾಗಿದೆಯೆಂದೂ ಸ್ವರಾಭಿವ್ಯಕ್ತಿಯು ಇಲ್ಲದಿದ್ದಾಗ ಅದು ವ್ಯಾಪಾರರಹಿತವೆಂದೂ ಇಲ್ಲಿ ಅರ್ಥ. ಎಂದರೆ ಶ್ರುತಿಯು ಸ್ವರವನ್ನು ಯಾವಾಗಲೂ ಒಳಗೊಂಡಿರುತ್ತದೆ; ಶ್ರುತಿಸ್ವರಗಳಿಗೆ ವಾಸ್ತವವಾಗಿ ಭಿನ್ನತೆಯೇನಿಲ್ಲ. ಕಾರ್ಯದಿಂದ ಕಾರಣವನ್ನು ವಾಪಸು ಪಡೆಯಲಾಗದಷ್ಟೆ; ಏಕೆಂದರೆ ಇವುಗಳಿಗೆ ಯಾವಾಗಲೂ ಪೌರ್ವಾಪರ್ಯಸಂಬಂಧವಿರುತ್ತದೆ. ಮೊಸರಿನಿಂದ ಹಾಲನ್ನು ಹಿಂದಕ್ಕೆ ಪಡೆಯಲು ಆಗದಿರುವಂತೆಯೇ ಸ್ವರದಿಂದ ಶ್ರುತಿಯನ್ನು ಹಿಂದಕ್ಕೆ ಪಡೆಯಲಾಗದು. ಆದುದರಿಂದ ಸ್ವರಸ್ವಸಂವೇದ್ಯತೆಗೆ ಕಾರಣವಾದುದು ಸ್ವರಗತಶ್ರುತಿ ಎಂದು ಹೇಳುವಲ್ಲಿ ವಿಶ್ವಾವಸುವೇ ಮೊದಲಾದವರು ಸ್ವರೋತ್ಪತ್ತಿಯ ಕಾಲದಲ್ಲಿಯೂ ಶ್ರುತಿಗೆ ಪ್ರತ್ಯೇಕವಾದ ಅಸ್ತಿತ್ವವನ್ನು ಹೇಳುತ್ತಾರೆ; ಸ್ವರಶ್ರುತಿಗಳಲ್ಲಿ ಹೀಗೆ ಅವರು ಭೇದವನ್ನೇ ತಿಳಿಯುತ್ತಾರೆ. ಪರಿಣಾಮವಾದವು ಸ್ವರೋತ್ಪತ್ತಿಯ ಕಾಲದಲ್ಲಿ ಶ್ರುತಿಗೆ ಭಿನ್ನವಾದ ಅಸ್ತಿತ್ವವನ್ನು ಹೇಳುವುದಿಲ್ಲ. ಕಾರಣವು ಕಾರ್ಯದಲ್ಲಿ ಅನುಸ್ಯೂತವಾಗಿ ಕಾಣಬೇಕೆಂದು ತಾರ್ಕಿಕರು ಹೇಳುವ ಮಾತಿಗೆ ವಿಶ್ವಾವಸುವಿನ ಸ್ವರಗತಶ್ರುತಿಯಲ್ಲಿ ಸಮರ್ಥನೆಯು ದೊರೆಯುತ್ತದೆ. ಆದರೆ ಪರಿಣಾಮವಾದದಲ್ಲಿ ಹಾಗಲ್ಲ; ಮೊಸರಿನಲ್ಲಿ ಹಾಲು ಕಾಣದಿರುವಂತೆ ಸ್ವರದಲ್ಲಿ ಶ್ರುತಿಯು ಕಾಣದು. ಇದು ಅನುಭವಸಿದ್ಧವೂ ಹೌದು. ಆದುದರಿಂದಲೇ ಮತಂಗನು ಈ ಪಕ್ಷವು ವಿಚಾರವಂತರಿಗೆ ಸಮ್ಮತವೆಂದು ಹೇಳುತ್ತಾನೆ:

ಪರಿಣಾಮೋಽಭಿವ್ಯಕ್ತಿಸ್ತು ನ್ಯಾಯ್ಯಃ ಪಕ್ಷಃ ಸತಾಂ ಮತಃ।
ಇತಿ ತಾವನ್ಮಯಾ ಪ್ರೋಕ್ತಂ ತಾದಾತ್ಮ್ಯಾದಿ ವಿಕಲ್ಪನಮ್ ॥ 373
ಕಾರ್ಯಕಾರಣಭೇದೋಽಸ್ತಿ ಯದ್ಯಪಿ ಸ್ಫುಟಮೇವ ಹಿ।
ತಥಾಪಿ ಕಾರಣತ್ವಂ ಚ ಶ್ರುತೀನಾಂ ನೈವ ಸಂಭವೇತ್ ॥

---

373 ಅದೇ ಗ್ರಂಥ, 45, ಪು. 8.

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಕಾರ್ಯೇಷು ವಿದ್ಯಮಾನೇಷು ಕಾರಣಸ್ಯೋಪಲಂಭನಾತ್ ।
ಘಟಾದೌ ವಿದ್ಯಮಾನೇ ತು ಮೃತ್ಪಿಂಡೋ ನೋಪಲಭ್ಯತೇ ॥ 371

ಹೀಗೆ ಮೃತ್ಪಿಂಡ–ಘಟಗಳ ಸಂಬಂಧವು ತಾರ್ಕಿಕರು ಹೇಳುವ ಕಾರ್ಯಕಾರಣ ಸಂಬಂಧ ಮಾತ್ರವನ್ನಾಗಿ ಅವನು ತಿಳಿಯುವುದಿಲ್ಲ. ಈ ಸಂಬಂಧವು ಇದ್ದಿದ್ದರೆ ಘಟದಲ್ಲಿ ಮೃತ್ಪಿಂಡವು ಮೃತ್ಪಿಂಡವಾಗಿಯೇ ಕಾಣಬೇಕಾಗಿತ್ತು. ಆದರೆ ಅದು ಘಟವೆಂಬ ಕಾರ್ಯದಲ್ಲಿ ರೂಪಾಂತರ ಹೊಂದಿ ಪರಿಣಮಿಸಿದೆ. ಆದುದರಿಂದ ಇದು ಪರಿಣಾಮವಾದಕ್ಕೆ ದೃಷ್ಟಾಂತವೇ ಹೊರತು ಕಾರ್ಯಕಾರಣಸಂಬಂಧಕ್ಕೆ ಅಲ್ಲ. ಕಲ್ಲಿನಾಥನೂ ಸ್ವರೋತ್ಪತ್ತಿಯ ಕಾಲದಲ್ಲಿ ಶ್ರುತಿಯ ಅನುಪಲಂಭವನ್ನೇ, ಎಂದರೆ ಪ್ರತ್ಯಕ್ಷವಾಗಿ ಗೋಚರಿಸದಿರುವುದನ್ನೇ ಮುಂದಿಟ್ಟುಕೊಂಡು ಸ್ವರಶ್ರುತಿಗಳಲ್ಲಿ ಕಾರ್ಯಕಾರಣಭಾವವನ್ನು ನಿರಾಕರಿಸುತ್ತಾನೆ.

ಯದ್ಯಪಿ ಸ್ಫುಟಪೌರ್ವಾಪರ್ಯೇಣ ಕಾರ್ಯಕಾರಣಭಾವಪ್ರತೀತಿರಸ್ತಿ, ತಥಾಽಪ್ಯುಪಾದಾನಸ್ಯ ಮೃತ್ಪಿಂಡಾದೇ-ರ್ಯಥಾ ಘಟಾದಿಕಾರ್ಯನಿಷ್ಪತ್ತೌ ಭೇದೇನಾನುಪಲಬ್ಧಿರ್ನ, ತಥೇಹ ಸ್ವರನಿಷ್ಪತ್ತೌ ಶ್ರುತೀನಾಮನುಪಲಂಭ ಇತಿ ತಾಸಾಮಕಾರಣತ್ವಾತ್ । 361

## 5. ಅಭಿವ್ಯಂಗ್ಯ—ಅಭಿವ್ಯಂಜಕ ಸಂಬಂಧ

ಐದನೆಯದಾಗಿ, ಮತಂಗನು ಸ್ವರಶ್ರುತಿಗಳಲ್ಲಿ ಅಭಿವ್ಯಂಗ್ಯ–ಅಭಿವ್ಯಂಜಕ ಸಂಬಂಧವನ್ನು ಹೇಳಿ ಇದನ್ನೂ ಪರಿಣಾಮವಾದವನ್ನೂ ಅಂಗೀಕರಿಸುತ್ತಾನೆ.

ಈ ಮತದಲ್ಲಿ, ದ್ರವ್ಯದಲ್ಲಿ ಗುಣವಿದ್ದರೂ ಅದು ತನಗೆ ತಾನೇ ಗೋಚರಕ್ಕೆ ಬರುವುದಿಲ್ಲ; ಮತ್ತೊಂದು ಪದಾರ್ಥದ ಸಂಯೋಗದಿಂದ ಈ ಗುಣವು ಅಭಿವ್ಯಕ್ತವಾಗುತ್ತದೆ. ಹೀಗೆ 'ಮಧುರವತ್ತ್ವಂ ಜಲಸ್ಯ ಲಕ್ಷಣಂ', ಎಂದರೆ ಸಿಹಿಯಾಗಿರುವುದು ನೀರಿನ ಗುಣ. ಆದರೆ ನೀರಿನ ಈ ಮಾಧುರ್ಯವು ಸದಾ ಗೋಚರವಲ್ಲ. ನೆಲ್ಲಿಯಕಾಯನ್ನು ತಿಂದು ಆಮೇಲೆ ನೀರು ಕುಡಿದರೆ ನೀರಿನ ಸಿಹಿಯು ಗೋಚರವಾಗುತ್ತದೆ. ಉಪ್ಪುನೀರಿನ ಭಾವಿಗಳಲ್ಲಿ ನೀರನ್ನು ಸಿಹಿಮಾಡಲು ನೆಲ್ಲಿಗಿಡದ ತುಂಡುಗಳನ್ನು ಕಡಿದುಹಾಕಿದ್ದರೆ ಕಾಲಾನಂತರದಲ್ಲಿ ಅದು ಸಿಹಿನೀರಾಗುವುದೆಂಬುದು ಲೋಕಪ್ರಸಿದ್ಧವೇ ಆಗಿದೆ. ಆಮಲಕವು ಸಿಹಿಯಾದ ವಸ್ತುವಲ್ಲ; ಆದುದರಿಂದ ನೀರಿಗೆ ಅದು ಸಿಹಿಯನ್ನು ಸೇರಿಸಿತು ಎಂದು ತಿಳಿಯಲು ಅವಕಾಶವಿಲ್ಲ. ಸಿಹಿಯು ನೀರಿನ ಗುಣವೇ; ಅದನ್ನು ಆಮಲಕವು ಅಭಿವ್ಯಕ್ತಿಗೊಳಿಸಿತು, ಎನ್ನುವುದು ಈ ವಾದದ ಸಾರಾಂಶ. ಇಲ್ಲಿ ನೀರಿನ ಸಿಹಿಯು ಅಭಿವ್ಯಂಗ್ಯ; ಆಮಲಕವು ಅಭಿವ್ಯಂಜಕ.

ಇದೇ ರೀತಿಯಲ್ಲಿ ಸ್ಫಟಿಕ ಶಿಲೆಯಲ್ಲಿ ರಕ್ತವರ್ಣವೆಂಬ ಗುಣವಿದೆ ಎಂಬ ಇನ್ನೂ ಒಂದು ಪ್ರೌಢ ಪ್ರಾಚೀನವಾದ ದೃಷ್ಟಾಂತವನ್ನಿಲ್ಲಿ ಕೊಡಬಹುದು. ಇದನ್ನು ಅಭಿನವಗುಪ್ತಪಾದನು ಸೂಚಿಸುತ್ತಾನೆ. ಈ ಕೆಂಪು ಬಣ್ಣವು ಅಭಿವ್ಯಕ್ತವಾಗಬೇಕಾದರೆ ಜಪಾಕುಸುಮ ಪುಷ್ಪದ (ಕೆಂಪು ದಾಸವಾಳದ ಹೂವಿನ) ಸಾನ್ನಿಧ್ಯವು ಬೇಕು. ಹೀಗೆ ಜಪಾಕುಸುಮವು ಅಭಿವ್ಯಂಜಕ, ಸ್ಫಟಿಕ ಮಣಿಯಲ್ಲಿ ರಕ್ತವರ್ಣವು ಅಭಿವ್ಯಂಗ್ಯ.

ಈ ಉದಾಹರಣೆಗಳಲ್ಲಿ ಅಭಿವ್ಯಂಗ್ಯ ಪದಾರ್ಥವು ಒಂದು ಗುಣವೆಂದೂ, ಅದರ ಅಭಿವ್ಯಕ್ತಿಯು ಅಭಿವ್ಯಂಜಕದ ಸನ್ನಿಕರ್ಷವನ್ನು ಅವಲಂಬಿಸುತ್ತದೆಂದೂ, ಅಭಿವ್ಯಂಜಕವು ಇರುವಷ್ಟು ಕಾಲದಲ್ಲಿ ಮಾತ್ರ ಆಯಾ ಗುಣವು ಅಭಿವ್ಯಂಗ್ಯವಾಗಿರುತ್ತದೆಂದೂ ಸ್ಪಷ್ಟವಾಗುತ್ತದೆ.

ಹೀಗೆ ಸ್ವರವು ಅಭಿವ್ಯಂಗ್ಯವೆಂದೂ ಶ್ರುತಿಯು ಅಭಿವ್ಯಂಜಕವೆಂದೂ ಮತಂಗನ ಅಭಿಮತ. ಅದನ್ನು ಅವನು ಈ ಮಾತುಗಳಲ್ಲಿ ಹೇಳುತ್ತಾನೆ :

3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಷಡ್ಜಾದಯಃ ಸ್ವರಾಃ ಸಪ್ತ ವ್ಯಜ್ಯಂತೇ ಶ್ರುತಿಭಿಃ ಸದಾ ।
ಅಂಧಕಾರಸ್ಥಿತಾ ಯದ್ವತ್ ಪ್ರದೀಪೇನ ಘಟಾದಯಃ ॥ 374

ಕತ್ತಲಲ್ಲಿರುವ ಘಟವು ಇದ್ದರೂ ಗೋಚರಕ್ಕೆ ಬರುವುದಿಲ್ಲ; ದೀಪಸಂಬಂಧದಿಂದ, ಎಂದರೆ ಅದರಮೇಲೆ ಬೆಳಕು ಬಿದ್ದರೆ ಅದು ಗೋಚರಿಸುತ್ತದೆ. ಹೀಗೆ ಪ್ರದೀಪವು ಅಭಿವ್ಯಂಜಕ, ಘಟವು ಅಭಿವ್ಯಂಗ್ಯ. ಹೀಗೆ ಅಭಿವ್ಯಂಗ್ಯವು ದ್ರವ್ಯವೂ ಆಗಬಹುದು. ದೀಪದ ಅಸ್ತಿತ್ವ ಅಥವಾ ಅಭಾವದಿಂದ ಘಟದ ಅಸ್ತಿತ್ವಕ್ಕೆ ಬಾಧೆಯಿಲ್ಲ; ದೀಪವಿರುವವರೆಗೆ ಮಾತ್ರ ಘಟವು ಗೋಚರಿಸುತ್ತದೆ, ಎಂಬ ಎರಡು ಇಂಗಿತಗಳನ್ನು ಇಲ್ಲಿ ಅವಧಾನದಿಂದ ಅಭ್ಯಾಸ ಮಾಡಬೇಕು. ಈ ದೃಷ್ಟಾಂತದಿಂದ ಶ್ರುತಿಗಳು ಸ್ವರಗಳಿಗೆ ಅಭಿವ್ಯಂಜಕಗಳೆಂದು ಹೇಳಬೇಕು. ಶ್ರುತಿಯಿರಲಿ, ಇಲ್ಲದಿರಲಿ, ಸ್ವರದ ಅಸ್ತಿತ್ವಕ್ಕೆ ಬಾಧೆಯಿಲ್ಲ; ಆದುದರಿಂದಲೇ ಸ್ವರವು 'ಸ್ವತೋ ರಂಜಯತಿ' ಎಂಬ ಲಕ್ಷಣವನ್ನು ಪಡೆದಿದೆ ಎಂಬುದು ಈ ಪಕ್ಷದ ವಾದ.

ಆದರೆ ಶ್ರುತಿಯಿರಲಿ, ಇಲ್ಲದಿರಲಿ, ಸ್ವರದ ಅಸ್ತಿತ್ವಕ್ಕೆ ಬಾಧೆಯಿಲ್ಲವೆಂದು ಹೇಳುವುದು ಕಷ್ಟ; ಏಕೆಂದರೆ ಶ್ರುತಿಯ ಸ್ವತಂತ್ರ ಅಸ್ತಿತ್ವವನ್ನು ಶ್ರುತಿನಿದರ್ಶನ ಪ್ರಯೋಗದಲ್ಲಿ ಸಾಧಿಸಲಾಗಿದೆ. ಶ್ರುತಿಯು ಇದೆಯೆಂದ ಮೇಲೆ ಅದಕ್ಕೂ ಸ್ವರಕ್ಕೂ ಯಾವುದಾದರೊಂದು ಸಂಬಂಧವನ್ನು ಹೇಳಲೇಬೇಕಾಗುತ್ತದೆ; ಹೀಗೆ ಸ್ವರವನ್ನು ನಿರಾಲಂಬವೆಂದು ಹೇಳಲಾಗುವುದಿಲ್ಲ. ಶ್ರುತಿಯಿದ್ದಷ್ಟು ಕಾಲವೂ ಸ್ವರದ ಅಭಿವ್ಯಕ್ತಿಯಿರುತ್ತದೆ, ಎಂಬ ಮಾತಿನಲ್ಲಿ ಶ್ರುತಿಯಿದ್ದಾಗಲೆಲ್ಲ ಸ್ವರವಿರುತ್ತದೆ ಎಂಬ ಅರ್ಥವನ್ನು ಹೊರಡಿಸಬಾರದು; ಏಕೆಂದರೆ ದೀಪವಿದ್ದರೂ ಘಟವು ಇಲ್ಲದಿರಬಹುದಷ್ಟೆ; ಹಾಗೆಯೇ ಶ್ರುತಿಯಿದ್ದೂ ಸ್ವರವಿಲ್ಲದೆ ಇರಬಹುದು. ಇದು ಅಂತರಗತ ಶ್ರುತಿಗಳಲ್ಲಿ ಕಾಣುತ್ತದೆ. ಆದರೆ ಘಟವಿದ್ದು ದೀಪವಿಲ್ಲದಿದ್ದರೆ ಘಟದ ಪ್ರತ್ಯಕ್ಷ ಗೋಚರವೇ, ಉಪಾಲಂಭವೇ ಸಿದ್ಧಿಸದು. ಹಾಗೆಯೇ ಸ್ವರವಿದ್ದರೂ, ಶ್ರುತಿಯಿಲ್ಲದಿದ್ದರೆ, ಸ್ವರದ ಗೋಚರ (ಉಪಾಲಂಭ) ವಿಲ್ಲದಿರಬಹುದು. ಈ ಪಕ್ಷದಲ್ಲಿ ಅಭಿವ್ಯಂಜಕ-ಅಭಿವ್ಯಂಗ್ಯಗಳೆರಡೂ ಪ್ರತ್ಯಕ್ಷ ಗೋಚರಗಳಾಗಿರಬೇಕೆಂಬ ನಿಯಮವನ್ನು ವ್ಯಾವಹಾರಿಕ ನಿದರ್ಶನಗಳಲ್ಲಿ ಹೇಳುತ್ತಾರೆ. ಅಂತರಗತ ಶ್ರುತಿಯು ಸ್ವರೋತ್ಪತ್ತಿಯ ಕಾಲದಲ್ಲಿ ಅಗೋಚರವಾದುದರಿಂದ ಈ ಪಕ್ಷವೂ ದೋಷಯುಕ್ತವೇ ಆಗಿದೆಯೆನ್ನಬಹುದು. ಮತಂಗನು ಈ ಪಕ್ಷವನ್ನೂ ಸ್ವೀಕರಿಸುತ್ತಾನೆ.

## ಮತಂಗಮುನಿಯ ಜಿಜ್ಞಾಸೆ

ಹೀಗೆ ಐದು ವಿಧವಾದ ಶ್ರುತಿವಿಕಲ್ಪಗಳನ್ನು ಮತಂಗಮುನಿಯು ಮಂಡಿಸಿ ಅವುಗಳನ್ನು ಖಂಡಿಸಿದಮೇಲೆ, ತಾನು ಒಪ್ಪಿದ ಏಕಶ್ರುತಿವಾದವನ್ನೂ ದ್ವಾವಿಂಶತಿಶ್ರುತಿಪಕ್ಷವನ್ನೂ ತೀಕ್ಷ್ಣವಾದ ಜಿಜ್ಞಾಸೆಗೆ ಒಳಪಡಿಸುತ್ತಾನೆ. ಗ್ರಂಥವಿಸ್ತರಭೀತಿಯಿಂದ ಇದರ ಸಾರಾಂಶವನ್ನು ಮಾತ್ರ ಇಲ್ಲಿ ಸಂಕ್ಷೇಪವಾಗಿ ಸಂಗ್ರಹಿಸಲಾಗುವುದು :

ಶ್ರುತಿಗಳು ಇಪ್ಪತ್ತೆರಡು ಎಂದರೆ ಅನೇಕ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ; ಶ್ರುತಿಯು ಅನೇಕವಾಗಿದೆ ಎಂದಾದರೆ ಸ್ವರವು ಅವಯವೀ ಎಂದು ಅರ್ಥ. ಅನೇಕತ್ವವಿರುವೆಡೆಯಲ್ಲೆಲ್ಲಾ ಬಹುತ್ವವೂ ಅವಯವತ್ವವೂ ಇರಬೇಕು. ಎಂದರೆ, ಸ್ವರವು ಅವಯವೀ, ಶ್ರುತಿಯು ಅವಯವ ಎಂದಾಗುತ್ತದೆ. ಶ್ರುತಿಯೂ ಪ್ರತ್ಯಕ್ಷ ಗೋಚರವಲ್ಲ; ಶ್ರುತಿಯು ಅವಯವವಾಗಿರುವುದಂತೂ ಪ್ರತ್ಯಕ್ಷವಲ್ಲವೆಂಬುದು ಸ್ಪಷ್ಟವೇ ಆಗಿದೆ. ಶರೀರವು ಅವಯವೀ, ಎಂದರೆ ಅನೇಕ ಅವಯವಗಳಿಂದಾದುದು; ಇಲ್ಲದಿದ್ದರೆ ಅದಕ್ಕೆ ಶರೀರವೆಂಬ ವ್ಯಪದೇಶವೇ ಬರುವುದಿಲ್ಲ. ಅವಯವೀ – ಅವಯವಸಂಬಂಧದಲ್ಲಿ ಅವಯವಗಳು ಬಹುವಾಗಿಯೂ ಪ್ರತ್ಯಕ್ಷವಾಗಿಯೂ ಇರಬೇಕು. ಸ್ವರವು ಅವಯವೀ ಎಂದು ಭಾವಿಸಿ ಶ್ರುತಿಯನ್ನು ಅವಯವ ಎಂದರೆ ಶ್ರುತಿಯ ಪ್ರತ್ಯಕ್ಷವೂ, ಅನೇಕತ್ವವೂ ಅನುಭವದಲ್ಲಿಲ್ಲ. ಹಾಗಾದರೆ

374 ಅದೇ ಗ್ರಂಥ, 36, ಪು. 8.

ಶ್ರುತಿಗಳಿಗೆ ಪ್ರತೀತಿ ಹೇಗೆ ಉಂಟಾಗುತ್ತದೆ? ಅವಯವವಿದ್ದರೆ ಅವಯವಿಯನ್ನು ಅದರಿಂದ ಗುರುತಿಸಬಹುದು. ಅವಯವವಾದ ಶ್ರುತಿಯೇ ಪ್ರತ್ಯಕ್ಷವಲ್ಲದಿದ್ದಾಗ ಅವಯವಿಯಾದ ಸ್ವರವು ಗೋಚರಿಸುವುದು ಹೇಗೆ? ನಾದವು (ಶ್ರುತಿಯೆಂಬುದು) ಕೇವಲ ಆಕಾಶವನ್ನು ಕೂಡಿದ ಗುಣ; ಅದರಲ್ಲಿ ಮೊದಲು (ರಣನ ಕಾಲದಲ್ಲಿ) ಪ್ರತೀತಿಯಿಲ್ಲ; ಅನುರಣನವು ಕೂಡಿಕೊಂಡು ಸ್ವರವಾದಾಗ ಪ್ರತೀತಿಯುಂಟಾಗುತ್ತದೆ. ಹೀಗೆ ಅವಯವವೇ ಅಲಕ್ಷ್ಯ (ಅಗೋಚರ)ವಾಗಿರುವಾಗ ಅವಯವಿಯನ್ನು ಹೇಳಲಾಗದು.

ಅಷ್ಟೇ ಅಲ್ಲದೆ, ಯಾವುದೇ ಪದಾರ್ಥದ ಅಸ್ತಿತ್ವಕ್ಕೆ ಮಾತ್ರೆಗಳು (ಕಾಲಾವಕಾಶವು) ಇರಬೇಕಷ್ಟೆ; ಶ್ರುತಿಗಳಿಗೆ ಮಾತ್ರೆಗಳು ಎಷ್ಟು ಬೇಕು? ಇಪ್ಪತ್ತೆರಡು ಶ್ರುತಿಗಳಿಗೆ ಇಪ್ಪತ್ತೆರಡೇ ಮಾತ್ರೆಗಳೆನ್ನುವುದಾದರೆ, ಈ ಇಪ್ಪತ್ತೆರಡು ಮಾತ್ರೆಗಳಿಗೂ ಸಂಬಂಧಿಸಿದ ವ್ಯಾಪಾರಗಳೇನು? ಏಕೆಂದರೆ ಉಪಾದಾನ ಕಾರಣವು ವ್ಯಾಪಾರ ಸಹಿತವಾದರೆ ಮಾತ್ರ ಕಾರ್ಯದ ನಿಷ್ಪತ್ತಿ. ಶ್ರುತಿಯಿಂದ ಸ್ವರವೆನ್ನುವುದಾದರೆ ಶ್ರುತಿಯ ವ್ಯಾಪಾರಗಳೇನು? ವ್ಯಾಪಾರವೆನ್ನುವುದು ಘಟಕವಷ್ಟೆ. ಇಪ್ಪತ್ತೆರಡು ಶ್ರುತಿಗಳೂ ಇಪ್ಪತ್ತೆರಡು ವ್ಯಾಪಾರಗಳನ್ನು ಕೂಡಿಕೊಂಡು ಇಪ್ಪತ್ತೆರಡು ಕಾರ್ಯಗಳಾದರೆ (ಶ್ರುತಿಯು ಬಹುವಾದುದೇ ಇಲ್ಲಿ ಕಾರ್ಯವೆನ್ನಬೇಕು) ಇದಕ್ಕೆ ಕಾಲವೆಷ್ಟು ಬೇಕು? ಈ ಬಹುತ್ವಕ್ಕೆ ಘಟಕವಾದ ವ್ಯಾಪಾರಗಳು ಯಾವುವು? ಹಾಗಲ್ಲದೆ ಇಪ್ಪತ್ತೆರಡು ಶ್ರುತಿಗಳಲ್ಲಿ ಪ್ರತಿಯೊಂದಕ್ಕೂ ಒಂದೊಂದು ಪ್ರಯತ್ನವೂ ವ್ಯಾಪಾರವೂ ಇದ್ದರೆ, ಇಪ್ಪತ್ತೆರಡು ಎಂದೇ ನಿಯಮವೇನು? 23, 24, 25 ಎಂದು ಮುಂತಾಗಿ ಮುಂದಕ್ಕೂ ಹೇಳಲು ಅಡ್ಡಿಯೇನು? ಹೀಗೆ ಮಾಡಿದರೆ ಶ್ರುತಿಗಳ ಅನಂತ್ಯವು ಅನಿವಾರ್ಯವಾಗುತ್ತದೆ.

ಇವನ್ನೆಲ್ಲಾ ತಪ್ಪಿಸಿಕೊಳ್ಳಲು ಶ್ರುತಿಗೆ ಏಕತ್ವವನ್ನೇ ಹೇಳಿಬಿಡೋಣ ಎನ್ನಬಹುದು ಆಗ ಅದಕ್ಕೆ ಮಾತ್ರೆ, ವ್ಯಾಪಾರ ಮುಂತಾದ ಯಾವುದರ ಅವಶ್ಯಕತೆಯೂ ಇಲ್ಲ. ಅದೇನೋ ಸರಿ; ಆದರೆ ಅವುಗಳ ವಿಕಲ್ಪಕ್ಕೆ, ಎಂದರೆ ಬಹುವೆಂಬ ಗೋಚರಕ್ಕೆ, ಆಸ್ಪದವೆಲ್ಲಿ? ಏಕೆಂದರೆ ಧರ್ಮಿ (ಧರ್ಮವನ್ನುಳ್ಳ ವಸ್ತು) ಇದ್ದರೆ ಮಾತ್ರ ಧರ್ಮವೂ ಇರುವುದಷ್ಟೆ. ಜಾತಿಯು ವ್ಯಕ್ತಿಯನ್ನಂತೆ, ಗುಣವು ಗುಣಿಯನ್ನಂತೆ, ಧರ್ಮವು ಧರ್ಮಿಯನ್ನು ಆಶ್ರಯಿಸಿಕೊಂಡಿರುವಂತಹುದು. ಶ್ರುತಿಯನ್ನು ಧರ್ಮಿಯೆಂದಿಟ್ಟುಕೊಂಡರೆ ಸಂಖ್ಯೆ (ಇಪ್ಪತ್ತೆರಡು ಎಂಬ ಸಂಖ್ಯೆ)ಯ ಧರ್ಮವು ಅದನ್ನು ತನಗೆ ತಾನೇ ಸೇರಿಕೊಳ್ಳುತ್ತದೆ. ಅಥವಾ ಧರ್ಮವೆಂಬುದು ಇದ್ದರೆ ಅದು ಧರ್ಮಿಯನ್ನು ತನಗೆ ತಾನೇ ಉಂಟುಮಾಡುತ್ತದೆ; ಏಕೆಂದರೆ ಧರ್ಮ-ಧರ್ಮಿಗಳಲ್ಲಿ ಅವಿನಾಭಾವವೇ ಇದೆ; ಆದುದರಿಂದ ಇಪ್ಪತ್ತೆರಡು ಎಂಬುದೇ ಧರ್ಮ; ಇದು ಶ್ರುತಿಯನ್ನು ಕಲ್ಪಿಸಿಕೊಂಡಿದೆ, ಎನ್ನಬೇಕಾಗುತ್ತದೆ.

ಹೀಗೂ ಬೇಡ; 'ಕಾರಣಂ ವಿನ್ಯೈವ ತಾಸ್ತಾಃ ಶ್ರುತಯಃ ಸ್ವರಾಣಾಂ ಕಾರಣಂ ಯದಿ'–ಆಯಾಯಾ ಶ್ರುತಿಗಳು ಆಯಾಯಾ ಸ್ವರಗಳಿಗೆ ಕಾರಣಗಳು ಎಂದಿಟ್ಟುಕೊಳ್ಳೋಣ, ಎನ್ನಬಹುದು. ಎಲ್ಲ ಪದಾರ್ಥಗಳಿಗೂ ಸತ್ತ್ವ (ಗುಣ), ಅಸತ್ತ್ವ (ದೋಷ)ಗಳು ಇದ್ದೇ ಇರುತ್ತವೆ. ಆಗ ಸತ್ತ್ವದಿಂದ, ಎಂದರೆ ಶ್ರುತಿಯಲ್ಲಿ ಗುಣ ವಿರುವಾಗ ಸ್ವರತ್ವವಿದೆಯೆಂದೂ, ದೋಷವಿರುವಾಗ ಸ್ವರತ್ವವಿಲ್ಲವೆಂದೂ ಸಿದ್ಧವಾಗುತ್ತದೆ; ಆಗ ಶ್ರುತಿಗೆ, ವ್ಯಾಪಾರ, ಮಾತ್ರೆ ಮುಂತಾದ ಯಾವುದೂ ಬೇಡ. ಆದರೆ ಶ್ರುತಿಗೂ ಮಾತ್ರೆಗೂ ಪ್ರಮೆಯನ್ನು ಹುಟ್ಟಿಸುವುದ ರಲ್ಲಿ ಸಮಾನತೆಯೇ ಇದ್ದರೂ, ಮಾತ್ರೆಯ ಅಸ್ತಿತ್ವವನ್ನೇ ಮುಚ್ಚಿಬಿಟ್ಟರೆ ಶ್ರುತಿಯ ಅಸ್ತಿತ್ವಕ್ಕೆ ರಕ್ಷಣೆಯೇ ಉಳಿಯುವುದಿಲ್ಲ. ಮಾತ್ರೆಯು (ಕಾಲವು) ಇದ್ದರೆ ಮಾತ್ರ ಶ್ರುತಿಯ ಪ್ರಮಾಣಗಮ್ಯತೆಯು ಇರಲಾಗಿ, ಕಾಲವೇ ಇಲ್ಲದಿದ್ದರೆ ಶ್ರುತಿಯೂ ದುರ್ಲಭವಾಗಿ ಬಿಡುತ್ತದೆ.[375]

375 ಅದೇ ಗ್ರಂಥ, 46-52, ಪು. 9; ಇದು ಅಕ್ಷರಶಃ ಅನುವಾದವಲ್ಲ. ಈ ಗ್ರಂಥಭಾಗವು ಲೋಪದೋಷಗಳಿಂದ ತುಂಬಿದೆ; ಆದುದರಿಂದ ಮುಖ್ಯವಾದ ಭಾವವನ್ನು ಅಭ್ಯಾಸಿಗಳ ಸೌಕರ್ಯಕ್ಕೆಂದು ಇಲ್ಲಿ ಸಂಗ್ರಹಿಸಲಾಗಿದೆ.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

ಇದನ್ನೆಲ್ಲಾ ಪರಿಶೀಲಿಸಿದ ಮೇಲೆ ಮತಂಗಮುನಿಯು ಶ್ರುತಿಸ್ವರಗಳ ಸಂಬಂಧವನ್ನು ಸಾರಾಂಶ ರೂಪದ ನಿರ್ಣಯದಲ್ಲಿ ಹೇಳಿಬಿಡುತ್ತಾನೆ: ಶ್ರುತಿಗಳನ್ನು ಪ್ರತ್ಯಕ್ಷಜ್ಞಾನದಿಂದಲೋ, ಅನುಮಾನದಿಂದಲೋ, ಅರ್ಥಾಪತ್ತಿಯಿಂದಲೋ ಸ್ವರದ ಅಭಿವ್ಯಕ್ತಿಗೆ ಹೇತುಗಳೆಂದು ತಿಳಿದರೆ ಸರಿ:

ಅರ್ಥಾಪತ್ತ್ಯಾನುಮಾನೇನ ಪ್ರತ್ಯಕ್ಷಜ್ಞಾನತೋಽಪಿ ವಾ।
ಗೃಹ್ಯಂತೇ ಶ್ರುತಯಸ್ತಾವತ್ ಸ್ವರಾಭಿವ್ಯಕ್ತಿಹೇತವಃ ||[376]

## 6. ರಣನ-ಅನುರಣನ ಮತ್ತು ಪೌರ್ವಾಪರ್ಯ ಸಂಬಂಧಗಳು

ಈ ಮೇಲೆ ಹೇಳಿರುವ ಮತಗಳಲ್ಲಿ ಧ್ವನಿತವಾದ ಇನ್ನೆರಡನ್ನು ಇಲ್ಲಿ ಸೂಚಿಸಬಹುದು. ಇವುಗಳನ್ನು ಅಭಿನವಗುಪ್ತನೂ ಕಲ್ಲಿನಾಥನೂ ಸ್ವತಂತ್ರವಾಗಿಯೇ ಹೇಳಿದ್ದಾರೆ. ಇವುಗಳಲ್ಲಿ ಒಂದು ಶ್ರುತಿ-ಸ್ವರಗಳಲ್ಲಿ ಪೌರ್ವಾಪರ್ಯ ಸಂಬಂಧವನ್ನೂ ಇನ್ನೊಂದು ರಣನ-ಅನುರಣನ ಸಂಬಂಧವನ್ನೂ ವಿವಕ್ಷಿಸುತ್ತವೆ. ಅಭಿನವಗುಪ್ತನು ಈ ಸಂದರ್ಭದಲ್ಲಿ ಈ ಮಾತುಗಳನ್ನಾಡಿದ್ದಾನೆ:

ಯದಿ ಶ್ರುತಿಶಬ್ದೇನ ಸಮೀರಣಸಂಯೋಗೀ ಸ್ಥಾನವಿಶೇಷೋ ವಿವಕ್ಷಿತೋ, "ವ್ಯಸ್ತಾನಿ ತಾನಿ ಷಟ್‌ಷಷ್ಟಿಂ ವಿದ್ಯಾತ್" ಇತಿ ನೀತ್ಯಾ ತತ್ಸರ್ವಮೇತ . . . [112] ನಮೇವ। ಕಶ್ಚಿತ್ ಸ್ಥಾನಂ ಸ್ವರಂ ಮನ್ಯತೇ। ನ ಚಾಸ್ಯ ರೂಕ್ಷತಾ ವಾ ಸ್ನಿಗ್ಧತಾ ವಾ ಧರ್ಮಃ ಸಮೀರಣಃ ತದಭಿಘಾತಯೋರೇಷ ಏವ ನ್ಯಾಯಃ। ಅಥ ಶ್ರುತಿಭಿರಿತಿ ನ ಸ್ಥಾನವಿಶೇಷಸಮೀರಣಸಂಯೋಗೀ ಪ್ರಭವೋ ವಿವಕ್ಷಿತಃ, ತದ್ಗತಶ್ಚ ರಕ್ತ್ಯಾಖ್ಯೋ ಧರ್ಮಃ ಸ್ವರ ಇತಿ। [377]

ಕೆಲವರು ನಾಸಾಕಂಠ ಮೊದಲಾದ ಸ್ಥಾನಗಳಲ್ಲಿ ಮಾರುತಾಹತಿಯಿಂದ ಹುಟ್ಟುವ ರಣನವೇ ಶ್ರುತಿಯೆಂದು ತಿಳಿಯುತ್ತಾರೆ; ಮತ್ತೆ ಕೆಲವರು ಆಯಾ ಸ್ಥಾನವನ್ನೇ ಶ್ರುತಿಯೆಂದು ತಿಳಿಯುತ್ತಾರೆ: (ಈ ಸ್ಥಾನವನ್ನು ಹೃದಯ, ಕಂಠ, ಶಿರಸ್ಸುಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತೆರಡು ನಾಡೀಸ್ಥಾನವೆಂದೂ ತಿಳಿಯಬಹುದು.) ಹೀಗಾದರೆ ರೂಕ್ಷತೆ, ಸ್ನಿಗ್ಧತೆ ಮುಂತಾದವುಗಳು ಅದರ ಧರ್ಮವೂ ಅಲ್ಲ; ಸ್ವರದಲ್ಲಿರುವ ಈ ಗುಣಗಳಿಗೆ ಹೇತುವೂ ಅಲ್ಲ. ಶ್ರುತಿಯೆಂದರೆ ಸಮೀರಣ ಸಂಯೋಗ ಸ್ಥಾನದಲ್ಲಿ ಹುಟ್ಟಿದುದೆಂದೂ ಸ್ವರವೆಂದರೆ ಅದರಲ್ಲಿರುವ ಧರ್ಮವೆಂದೂ ಇಲ್ಲಿನ ಅಭಿಸಂಧಿ. ಅಭಿನವಗುಪ್ತನು ಶ್ರುತಿ-ಸ್ವರಗಳಲ್ಲಿ ಸ್ಪಷ್ಟವಾಗಿಯೇ ಪೌರ್ವಾಪರ್ಯವನ್ನು ಹೀಗೆ ಹೇಳುತ್ತಾನೆ:

ಅಭಿಘಾತಜಾತ್ ಶಬ್ದಾದನಂತರಂ ಯೋಽನುರಣನಲಕ್ಷಣೋಽನ್ಯಃ ಶಬ್ದಃ ಉಪಜಾಯತೇ ಸತಾವನ್ನಿಸರ್ಗಸ್ನಿಗ್ಧಮಧುರಾಕಾರಃ। [226]

### ಸ್ವರಲಕ್ಷಣ: ಅನಂತರಭಾವೀ

ವಸ್ತು ಸಂಘಾತದಿಂದ ಎಂದರೆ ಅಭಿಘಾತದಿಂದ ಹುಟ್ಟಿದ ಶಬ್ದವಾದ ಮೇಲೆ ಬೇರೆಯದೊಂದು ಶಬ್ದವು ನೈಸರ್ಗಿಕವಾಗಿಯೇ ಸ್ನಿಗ್ಧವಾಗಿಯೂ ಮಧುರ ರೂಪಿಯಾಗಿಯೂ ಇರುತ್ತದೆ; ಇದು ಅನುರಣನವೆಂಬ ಲಕ್ಷಣವನ್ನು ಹೊಂದಿರುತ್ತದೆ. ಇದೇ ಸ್ವರ. ಆದುದರಿಂದ ಶ್ರುತಿಯು ಮೊದಲು, ಸ್ವರವು ಆಮೇಲೆ. ಕಲ್ಲು - ಘಂಟೆ, ಹಗ್ಗ - ತಂತಿಗಳ ಉದಾಹರಣೆಯಿಂದ ಶ್ರುತಿ ಸ್ವರಗಳಿಗಿರುವ ರಣನ-ಅನುರಣನ ಸಂಬಂಧವನ್ನು ಹೇಳಿರುವುದನ್ನು ಮೇಲೆ (ಪು. 356-357) ಪ್ರಸ್ತಾಪಿಸಲಾಗಿದೆ. ಕಲ್ಲಿನಾಥನೂ ಪೌರ್ವಾಪರ್ಯ, ರಣನಾನುರಣನ ಸಂಬಂಧಗಳನ್ನು ಸ್ಪಷ್ಟವಾಗಿ ಹೇಳುತ್ತಾನೆ:

---

376 ಅದೇ ಗ್ರಂಥ, 53, ಪು. 9. 377 ಅಭಿನವಗುಪ್ತ, ಉ.ಗ್ರಂ., ಪು. 12.

ಯದ್ಯಪಿ ಶ್ರವಣಯೋಗ್ಯತ್ವಮನುರಣನಾತ್ಮನಃ ಸ್ವರತಾನಾದಿರೂಪೇಣ ದೀರ್ಘದೀರ್ಘಸ್ಯಾಪಿ ಧ್ವನೇರ್ವಿ-ದ್ಯತೇ, ತಥಾಽಪ್ಯತ್ರ ಮಾರುತಾದ್ಯಾಹತ್ಯನಂತರೋತ್ಪನ್ನಪ್ರಥಮಕ್ಷಣವರ್ತಿಶ್ರವಣಮಾತ್ರಯೋಗ್ಯಧ್ವನೇರೇವ ಶ್ರುತಿತ್ವಮಿತಿ । [227]

ಕಲ್ಲಿನಾಥನು ಇಲ್ಲಿ ತಾರ್ಕಿಕರ ಮತವನ್ನು ಅನುಸರಿಸಿ ವ್ಯಾಖ್ಯಾನಮಾಡುತ್ತಿದ್ದಾನೆ. ಮಾರುತಾಹತಿಯ ಪ್ರಥಮಕ್ಷಣದಲ್ಲಿ ಉತ್ಪತ್ತಿಯಾದ ಶಬ್ದವು ಗುಣವಿಹೀನವಾಗಿರುತ್ತದೆ; ಇದು ಶ್ರವಣಯೋಗ್ಯತೆಯು ಮಾತ್ರ ಇರುವ ಧ್ವನಿ. ಇದಕ್ಕೇ ಶ್ರುತಿಯೆಂದು ಹೆಸರು. ರಕ್ತಿ, ಅನುರಣನ ಮುಂತಾದ ಗುಣಗಳನ್ನು ಕೂಡಿಕೊಂಡು ದ್ವಿತೀಯಕ್ಷಣದಿಂದ ಮುಂದಕ್ಕೆ ಅಭಿವ್ಯಕ್ತವಾಗುವ ಧ್ವನಿಗೆ ಸ್ವರವೆಂದು ಸಂಜ್ಞೆ. ಆದುದರಿಂದ ಕೇವಲ ರಣನ ಮಾತ್ರವಾದುದು ಶ್ರುತಿ ; ಅನುರಣನವಾದುದು ಸ್ವರ ; ಶ್ರುತಿಯು ಮೊದಲು, ಸ್ವರವು ಆಮೇಲೆ ಎಂಬ ಇಂಗಿತವು ಇಲ್ಲಿದೆ. ಈ ಮಾತನ್ನು ಕಲ್ಲಿನಾಥನು ಸ್ಪಷ್ಟವಾಗಿಯೇ ಹೇಳಿದ್ದಾನೆ:

•ಅತ ಏವ ಮತಂಗಾದಿ ದರ್ಶಿತೇಷು ನವಸು ಪಕ್ಷೇಷು ದ್ವಾವಿಂಶತಿಶ್ರುತಿಪಕ್ಷಮೇವ ರಣನಾನುರಣನಾತ್ಮನಾ ಸಾಕ್ಷಾದನುಭೂಯಮಾನಶ್ರುತಿಸ್ವರಭೇದಾನಪಹ್ನವೇನಾವೃತ್ತ್ಯ ಸಪ್ತಾನಾಮೇವ ಸ್ವರಾಣಾಂ . . . . [199]

'ಅಯಂ ಸ್ವರೋ ರಣನ ಪೂರ್ವಕೋ ಽಅನುರಣನಾತ್ಮಕತ್ವಾದ್ ದಂಡಾಹತಜಯಘಂಟಾ ಽನುರಣನ-ಶಬ್ದವತ್' [361]

'ಸ್ವರಸ್ಯ ಹಿ ಶ್ರೂಯಮಾಣಮನುರಣನಾತ್ಮಕತ್ವಂ ರಣನಮಂತರೇಣ ನೋಪಪದ್ಯತೇ' [361]

ಕಲ್ಲಿನಾಥನ ಈ ಮಾತುಗಳಿಗೆ ಶ್ರೀ ಶಾರ್ಙ್ಗದೇವನು ಕೊಡುವ

ಶ್ರುತ್ಯನಂತರಭಾವೀ ಯಃ ಸ್ನಿಗ್ಧೋ ಅನುರಣನಾತ್ಮಕಃ ।
ಸ್ವತೋ ರಂಜಯತಿ ಶ್ರೋತೃಚಿತ್ತಂ ಸ ಸ್ವರ ಉಚ್ಯತೇ ॥ [378]

ಎಂಬ ಸ್ವರಲಕ್ಷಣದಲ್ಲಿರುವ ಅನಂತರಭಾವೀ, ಅನುರಣನಾತ್ಮಕಃ ಎಂಬ ಎರಡು ಮಾತುಗಳೇ ಆಧಾರವಾಗಿದೆ. ಸಿಂಹಭೂಪಾಲನೂ ಇದನ್ನು ಇದೇ ಅರ್ಥದಲ್ಲಿ ವಿಸ್ತರಿಸುತ್ತಾನೆ :

ಶ್ರುತೇರನಂತರಭವತೀತಿ ಶ್ರುತ್ಯನಂತರಭಾವೀ । ಪ್ರಥಮತಂತ್ರ್ಯಾಮಾಹತಾಯಾಂ ಯೋ ಧ್ವನಿರನುರಣನ ಶೂನ್ಯ ಉತ್ಪದ್ಯತೇ ಸ ಶ್ರುತಿಃ, ಯಸ್ತು ತತೋಽನಂತರಮನುರಣನರೂಪಃ ಶ್ರೂಯತೇ ಸ ಸ್ವರಃ । [379]

ಈ ಎಲ್ಲ ಮಾತುಗಳಲ್ಲಿಯೂ ಅವರು 'ಅನು' ಎಂಬ ಉಪಸರ್ಗಕ್ಕೆ ಕಾಲಾನುಕ್ರಮವನ್ನು ಅನುಸರಣ, ಅನುಕ್ರಮ ಎಂಬ ಅರ್ಥಗಳಲ್ಲಿ ವ್ಯಾಖ್ಯಾನ ಮಾಡಿರುವುದು ಕಂಡುಬರುತ್ತದೆ. ಪ್ರಥಮಕ್ಷಣದಲ್ಲಿ ಆವರ್ತಕರಹಿತ ವಾಗಿ, ಅನುಸ್ವಾನವಿಲ್ಲದೆ, ಒಂದೇ ಕಂಪನ ಸಂಖ್ಯೆಯಿರುವ ಶಬ್ದಕ್ಕೆ ಶ್ರುತಿ ಎಂದೂ, ನಂತರ ಆವರ್ತಕಗಳು ಕೂಡಿ ಕೊಂಡು ಕೇಳಿಸುವುದಕ್ಕೆ ಸ್ವರವೆಂದೂ ಇಬ್ಬರೂ ಅರ್ಥಮಾಡಿದ್ದಾರೆ. ಈ ಅರ್ಥವು ನಾದವಿಜ್ಞಾನದ ಪ್ರಯೋಗ ಫಲಿತಾಂಶಗಳ ದೃಷ್ಟಿಯಿಂದ ಅಷ್ಟೇನೂ ಸರಿಯಾಗಿ ಕಾಣುವುದಿಲ್ಲ. ಏಕೆಂದರೆ ಒಂದೇ ಕಂಪನಸಂಖ್ಯೆಯಿರುವ ಶಬ್ದವು ಪ್ರಕೃತಿಯಲ್ಲಿ ಹುಟ್ಟುವುದು ಅತ್ಯಂತ ಅಪರೂಪ. ವಸ್ತುಸಂಘಾತದಿಂದ ಜನಿಸಿದ ಕಂಪನಸಂಖ್ಯೆಯು ಕೂಡಲೇ ಸಹೋದ್ಭವಗಳಾದ ಆವರ್ತಕಗಳನ್ನು ಕೂಡಿಕೊಂಡೇ ಶ್ರವಣಗೋಚರವಾಗುತ್ತದೆ. ಇಲ್ಲಿ ಕಾಲಾನು ಕ್ರಮದ ಅನುಭವವು ಸಾಮಾನ್ಯ ವ್ಯವಹಾರದಲ್ಲಿಯೂ ಪ್ರಯೋಗಶಾಲೆಯಲ್ಲಿಯೂ ಕಂಡುಬರುವುದಿಲ್ಲ. ಟ್ಯೂನಿಂಗ್ ಫೋರ್ಕ್ ಮುಂತಾದ ಕೃತಕಸಾಧನಗಳಿಂದ ಉತ್ಪನ್ನವಾದ ಕಂಪನಸಂಖ್ಯೆಯು ಅನುರಣನವನ್ನು ಉಂಟುಮಾಡುವ ಬೇರೆ ಕುಹರವಿದ್ದ ಹೊರತು ಶ್ರವಣಗೋಚರವಾಗುವುದಿಲವೆಂಬುದು ವಿಜ್ಞಾನವಿದ್ಯಾರ್ಥಿಗಳಿಗೆಲ್ಲ

378 ಶಾರ್ಙ್ಗದೇವ, ಉ.ಗ್ರಂ., I, 3, 24-25.  379 ಸಿಂಹಭೂಪಾಲ, ಉ.ಗ್ರಂ., ಪು. 82.

ತಿಳಿದ ವಿಷಯವೇ ಆಗಿದೆ. ಹೀಗೆ 'ಶ್ರೂಯತ ಇತಿ ಶ್ರುತಿಃ' ಎಂಬ ಲಕ್ಷಣವು ಸಂಪೂರ್ಣವಾಗಿ ನಿರರ್ಥಕವಾಗುತ್ತದೆ.

ಆದುದರಿಂದ ಶಾರ್ಙ್ಗದೇವನ 'ಅನಂತರ' ಎಂಬ ಮಾತಿಗೆ ಅಂತರವಿಲ್ಲದಿರುವ, ಅವಿಚ್ಛಿನ್ನವಾದ, ಸಹೋದ್ಭವವಾದ ಎಂಬ ಅರ್ಥವನ್ನೂ, ಅನುರಣನ ಎಂಬಲ್ಲಿ 'ಅನು' ಎಂಬ ಉಪಸರ್ಗವನ್ನು ಅಲ್ಪಾರ್ಥಕ ಪ್ರತ್ಯಯನೆಂದು ತಿಳಿದು ಜೊತೆಯಲ್ಲಿಯೇ ಅಲ್ಪವಾಗಿ ಸ್ಪಂದಿಸಿ, ಅಲ್ಪನಾದವನ್ನು ಉಂಟುಮಾಡುವ ಆವರ್ತಕಗಳು ಎಂಬ ಅರ್ಥವನ್ನೂ ಹೊರಡಿಸಬೇಕು. ಹೀಗೆ ಮಾಡಿದರೆ ವೈಜ್ಞಾನಿಕ ದೃಷ್ಟಿಯಲ್ಲಿಯೂ ಅನುಭವದಲ್ಲಿಯೂ ಪರಸ್ಪರತೆ ದೊರೆಯುತ್ತದೆ. ಒಂದೇ ಕಂಪನ ಸಂಖ್ಯೆಯು ಒಂದುವೇಳೆ ಉಂಟಾದರೂ, ಇದು ಕೂಡಲೇ ಸಂಕಲನಾವರ್ತಕಗಳು, ವ್ಯವಕಲನಾವರ್ತಗಳು ಇವುಗಳನ್ನು ಸೇರಿಕೊಳ್ಳುತ್ತದೆ. ತಂತಿ, ಚರ್ಮ, ವಾಯುಕುಹರ, ಘನವಸ್ತು ಇವುಗಳ ಸಂಘಾತವಿಲ್ಲದೆ ಯಾವ ಸ್ವರವೂ ಹುಟ್ಟದು; ಇವೆಲ್ಲ ಸಂಘಾತ ಕ್ಷಣದಿಂದಲೇ 1, 2, 3, 4, 5, ಮುಂತಾದ ಭಾಗಗಳಲ್ಲಿ ಸಹಸ್ಪಂದಿಸುವುದನ್ನು ಪ್ರಯೋಗದ ಮೂಲಕ ತೋರಿಸಬಹುದು. ಗೋಚರಕ್ಕೆ ಬೇಕಾಗುವ ಶ್ರುತಿಯ ಕಾಲ ಅಥವಾ ಆಯಸ್ಸು ಎಂಬುದನ್ನು ಪೌರ್ವಾಪರ್ಯವೆಂದು ಭ್ರಮಿಸಲಾಗದು; ಅನುರಣನಾತ್ಮಕವಾದ, ಎಂದರೆ ಆವರ್ತಕ ಸಹಿತವಾದ ರಣನದ ಗೋಚರಕ್ಕೇ ಈ ಕಾಲವು ಬೇಕಾಗುತ್ತದೆ. ಈ ರಣನ-ಅನುರಣನ ಪಕ್ಷವನ್ನು ಸ್ವೀಕರಿಸಿದರೆ ಅಂತರಗತ ಶ್ರುತಿಗಳು ರಣನ ಮಾತ್ರಗಳೆಂದೂ ಸ್ವರಗತಶ್ರುತಿಗಳು ಮಾತ್ರ ಅನುರಣನಾತ್ಮಕಗಳೆಂದೂ ಹೇಳಬೇಕಾಗುತ್ತದೆ. ಆದರೆ ಅಂತರಗತ ಶ್ರುತಿಗಳೂ ಶ್ರುತಿನಿದರ್ಶನ ಪ್ರಯೋಗದಲ್ಲಿ ಸ್ವತಂತ್ರ ಶ್ರವಣಯೋಗ್ಯತೆಯನ್ನು ಪಡೆದಿರುವುದನ್ನು ಇಲ್ಲಿ ಸ್ಮರಿಸಬೇಕು.

ಅಲ್ಲದೆ, ಯಾವುದೇ ಧ್ವನಿಯಲ್ಲಿಯೂ ಅನುರಣನವಿಲ್ಲದೆ ಇರುವುದಿಲ್ಲ; ಹೀಗೆಂದು ಪ್ರತಿಯೊಂದು ಧ್ವನಿಯನ್ನೂ ಸ್ವರವೆಂದು ಹೇಳಿದರೆ ಸ್ವರಗಳು ಅನಂತವಾಗಿ ಇವೆ ಎನ್ನಬೇಕಾಗುತ್ತದೆ; ಪ್ರತಿಯೊಂದು ಧ್ವನಿವೈಲಕ್ಷಣ್ಯವೂ ನೈರಂತರ್ಯ, ಧ್ವನ್ಯಂತರಾಶ್ರುತಿ ಎಂಬ ಲಕ್ಷಣಗಳಿಂದ ಕೂಡಿದ್ದರೂ ಪ್ರಥಮಕ್ಷಣದಲ್ಲಿ ಶ್ರುತಿ, ನಂತರ ಸ್ವರ ಎಂಬ ವ್ಯಪದೇಶವನ್ನು ಪಡೆಯಬೇಕಾಗಿತ್ತು. ಆದರೆ ಇದು ನಿಜವಲ್ಲವೆಂಬುದು ಅನುಭವಸಿದ್ಧವಾಗಿಯೇ ಇದೆ. ಈ ಅರ್ಥವನ್ನು ಸ್ವೀಕರಿಸಿದರೆ ಪ್ರತಿಯೊಂದು ಶ್ರುತಿಯೂ ಸ್ವರವೇ; ಆದುದರಿಂದ ಶ್ರುತಿಸ್ವರಗಳಿಗೆ ವ್ಯತ್ಯಾಸವು ಕೇವಲ ಗೌಣವಾಗಿ ಸಂಗೀತಶಾಸ್ತ್ರಕ್ಕೆ ಅಪ್ರಯೋಜಕವೇ ಆಗುತ್ತದೆ. ಏಕರೂಪವಾದ ಕಂಪನಸಂಖ್ಯೆಯನ್ನು ಶ್ರುತಿಯೆಂದೂ ಅನುರಣನವನ್ನು ಸ್ವರವೆಂದೂ ಹೇಳಿದರೆ ಅನುರಣನವನ್ನು ರಣನದಿಂದ ಪ್ರತ್ಯೇಕಿಸಿ ಪ್ರತ್ಯೇಕ ವ್ಯಪದೇಶವನ್ನು ಕೊಟ್ಟಂತಾಯಿತು; ಎಂದರೆ ಆವರ್ತಕ ಸಮುಚ್ಚಯಕ್ಕೆ ಮಾತ್ರ ಸ್ವರವೆಂದೂ ಆಧಾರ ಕಂಪನಸಂಖ್ಯೆಗೆ ಶ್ರುತಿಯೆಂದೂ ಹೆಸರಿಟ್ಟಂತಾಗುತ್ತದೆ. ಏಕೆಂದರೆ ಆಧಾರಸ್ವರವನ್ನು ಅದರ ಆವರ್ತಕಗಳಿಂದ ಪ್ರತ್ಯೇಕಿಸಿ ಅಡಗಿಸಿಬಿಡಬಹುದೆಂದೂ, ಆಧಾರಸ್ವರವಿಲ್ಲದೆಯೇ ಕೇವಲ ಅದರ ಆವರ್ತಕ ಸಮುಚ್ಚಯವು ಮಾತ್ರ ಇರುವಾಗಲೂ ಅದನ್ನು ಕಿವಿಯು ಭಾವಿಸಿಕೊಳ್ಳಬಲ್ಲುದೆಂದೂ ಆಧುನಿಕ ನಾದಶಾಸ್ತ್ರಪ್ರಯೋಗಗಳು ತೋರಿಸಿಕೊಟ್ಟಿವೆ. ಆದರೆ ರಣನ ಅನುರಣನಗಳೆರಡರಲ್ಲಿಯೂ ಇತರೇತರಾಶ್ರಯವಿದೆಯೆಂಬುದು ಪ್ರಯೋಗಸಿದ್ಧವಾಗಿದೆ. ಒಂದುವೇಳೆ ಸ್ವರದಲ್ಲಿ ಆಧಾರ ಕಂಪನ ಸಂಖ್ಯೆಯನ್ನು ಕಳೆದುಬಿಟ್ಟರೂ ಆವರ್ತಕಗಳು ಅದನ್ನು ಸೃಷ್ಟಿಸಿಕೊಳ್ಳುತ್ತವೆಂಬುದನ್ನು ಪ್ರಯೋಗದಿಂದ ತೋರಿಸಬಹುದು. ಆದುದರಿಂದ ಇವುಗಳಿಗೆ ಶಾಸ್ತ್ರದಲ್ಲಿ ಪೃಥಗ್ವ್ಯಪದೇಶವನ್ನು ಹೇಳುವಂತಿಲ್ಲ. ಆದರೂ ಕಾರ್ಯಕಾರಣಸಂಬಂಧದಿಂದಾಗಲೀ, ಪರಿಣಾಮಸಂಬಂಧದಿಂದಾಗಲೀ ಪೌರ್ವಾಪರ್ಯವನ್ನು ಶ್ರುತಿ-ಸ್ವರಗಳಲ್ಲಿ ತಾತ್ತ್ವಿಕವಾಗಿ ಹೇಳಲೇಬೇಕಾಗುತ್ತದಷ್ಟೆ; ಸ್ನಿಗ್ಧತಾ, ಸ್ವತಃ ರಂಜನಾಶಕ್ತಿ, ಮುಂತಾದ ಲಕ್ಷಣಗಳಿಂದ ಕೂಡಿದ ಶ್ರುತಿಗೆ ಸ್ವರವೆಂದೂ, ಈ ಗುಣಗಳು ಸ್ವರಕ್ಕೆ ಸ್ವಸಂವೇದ್ಯತೆಯನ್ನುಂಟುಮಾಡುವ ಅಂತಿಮವಾದ ಸ್ವರಗತ ಶ್ರುತಿಯಲ್ಲಿರುತ್ತದೆಂದೂ, ಈ ಗುಣಗಳಿಲ್ಲದಿದ್ದರೆ ಶ್ರುತಿಮಾತ್ರವೆಂದೂ, ಇದು ಅಂತರಗತ ಶ್ರುತಿಗಳಲ್ಲಿ ಮಾತ್ರ ಕಾಣುತ್ತ

ದೆಂದೂ ತಿಳಿಯಬೇಕು. ಆದುದರಿಂದ ಉತ್ತರೋತ್ತರ ಸಂಸ್ಕಾರಪ್ರದಾನಾದಿ ವ್ಯಾಪಾರಗಳಿಂದ ಶ್ರುತಿಗಳಿಗೆ ಮೊದಲನ್ನೂ ಸ್ವರಗಳಿಗೆ ಅಪರತ್ವವನ್ನೂ ಹೇಳುವುದೇ ಸರಿಯೆಂದು ತೋರುತ್ತದೆ.

### ಆಚಾರ್ಯ ಅಭಿನವಗುಪ್ತನ ಮತ

ಹಗ್ಗ, ಕಲ್ಲು ಮುಂತಾದ ಉದಾಹರಣೆಗಳಲ್ಲಿ ಹೇಳಿರುವ ರಣನವನ್ನು ಶ್ರುತಿಯೆಂದಿಟ್ಟುಕೊಂಡರೆ, ಶ್ರುತಿಗೆ ಸ್ವರತ್ವವು ತನಗೆ ತಾನೇ ಸಿದ್ಧಿಸಲಾರದು; ಅದಕ್ಕೆ ಮತ್ತೇನೋ ಸೇರಿಕೊಂಡು ಸ್ವರವಾಗಬೇಕಾಗುತ್ತದೆ. ಮತಂಗನು ಪರಿಣಾಮವಾದವನ್ನು ಒಪ್ಪಿ ಶ್ರುತಿಯೇ ರೂಪಾಂತರ, ಅವಸ್ಥಾಂತರಗಳಿಂದ ಸ್ವರವಾಗಿ ಪರಿಣಮಿಸುತ್ತದೆಂದೂ, ಅಭಿವ್ಯಕ್ತಿವಾದವನ್ನು ಒಪ್ಪಿ ಶ್ರುತಿಯು ಸ್ವರದ ಸ್ನಿಗ್ಧತೆ ಅನುರಣನ ಮುಂತಾದ ಗುಣಗಳಿಗೆ ಅಭಿವ್ಯಂಜಕವೆಂದೂ, ಎಂದರೆ ಶ್ರುತಿಗಳಿದ್ದರೆ ಮಾತ್ರ ಸ್ವರದ ಈ ಗುಣಗಳು ಗೋಚರಿಸುತ್ತವೆಂದೂ, ಹೇಳುವುದನ್ನು ಸ್ಮರಿಸಿಕೊಂಡರೆ, ಅಭಿನವಗುಪ್ತನು ಕೊಡುವ ದೃಷ್ಟಾಂತದಿಂದ ಈ ಎರಡು ವಾದಗಳೂ ಅನುಪಪನ್ನವಾಗುತ್ತವೆ. ಅಂತರಗತ ಶ್ರುತಿಗಳೂ ಕೇವಲ ರಣನಮಾತ್ರಗಳಲ್ಲ; ಅವೂ ಧ್ವನಿವೈಲಕ್ಷಣ್ಯಗಳೇ. ಇವುಗಳಲ್ಲಿಯೂ ಆವರ್ತಕಗಳು ಹುಟ್ಟಿಯೇತೀರುತ್ತವೆ. ಹಾಗಾದರೆ ಸ್ವರಗತಶ್ರುತಿಗಳಿಗೂ ಅಂತರಗತಶ್ರುತಿಗಳಿಗೂ ಏನು ವ್ಯತ್ಯಾಸ? ಏನು ವ್ಯತ್ಯಾಸವೆಂದರೆ ಸ್ವರಗತಶ್ರುತಿಗಳಲ್ಲಿ ಹುಟ್ಟುವ ಆವರ್ತಕಗಳ ವಿತರಣವು ಸ್ನಿಗ್ಧತೆ, ರಕ್ತಿ, ದೂರಶ್ರಾವ್ಯತೆ ಮುಂತಾದವುಗಳಿಗೆ ಪ್ರಯೋಜಕವಾಗಿರುತ್ತದೆ; ಅಂತರಗತ ಶ್ರುತಿಗಳಲ್ಲಿ ಈ ಪ್ರಯೋಜನವಿರುವುದಿಲ್ಲ. ಹಾಗಾದರೆ ಅಂತರಗತ ಶ್ರುತಿಗಳನ್ನು ಮಾತ್ರ ಶ್ರುತಿಗಳೆಂದು ತಿಳಿದು ಸ್ವರಗತ ಶ್ರುತಿಗಳನ್ನು ಸ್ವರಗಳೆಂದು ಏಕೆ ತಿಳಿಯಬಾರದು? ಏಕೆಂದರೆ ಶ್ರುತಿಯಿಲ್ಲದೆ ಸ್ವರವಿಲ್ಲ ಎಂಬ ವ್ಯತಿರೇಕವ್ಯಾಪ್ತಿಯು ಲೋಕಸಿದ್ಧವಾಗಿಯೂ ಶಾಸ್ತ್ರಸಿದ್ಧವಾಗಿಯೂ ಇದೆ. ಆದುದರಿಂದ ಸ್ವರಾಭಿವ್ಯಕ್ತಿಸ್ಥಾನಕ್ಕೂ ಶ್ರುತಿಯೆಂಬ ವ್ಯವಹಾರವು ಅನಿವಾರ್ಯವಾಗುತ್ತದೆ.

ಹೀಗೆ ಶ್ರುತಿಸ್ವರಸಂಬಂಧಗಳನ್ನು ವಿವೇಚಿಸಿ ಶ್ರೀಮದ್ ಅಭಿನವಗುಪ್ತಪಾದಾಚಾರ್ಯನು ಸಾರರೂಪದಲ್ಲಿ ಸ್ವರವು ಶ್ರುತಿಸಮುಚ್ಚಯವಲ್ಲ, ಏಕೆಂದರೆ ಯೌಗಪದ್ಯವಿಲ್ಲ, ಷಡ್ಜವು ಒಂದು ಶ್ರುತಿಯಲ್ಲಿ ಮಾತ್ರ ಇರುವಂತಹುದಲ್ಲ, ಸ್ವರವು ಶ್ರುತಿಗಳೆಂಬ ಅವಯವಗಳಿಂದಾದುದಲ್ಲ, ಶ್ರುತಿಗಳ ಸಂಚಯವಲ್ಲ, ಆದರೆ ಶ್ರುತಿಸ್ಥಾನದಲ್ಲಿ ಅಭಿಘಾತದಿಂದ (ಸಂಘಾತದಿಂದ ಅಥವಾ ಮಾರುತಾಹತಿಯಿಂದ) ಹುಟ್ಟಿದ ಶಬ್ದದಿಂದ ಪ್ರಭಾವಿತವಾಗಿ ಅನುರಣನವನ್ನು ಉಳ್ಳ, ಸ್ನಿಗ್ಧವಾಗಿ ಎಂದರೆ ನುಣುಪಾಗಿ (ಒರಟಾಗಿಲ್ಲದೆ, ಕರ್ಕಶವಾಗಿಲ್ಲದೆ), ಮಧುರವಾಗಿರುವುದೇ ಸ್ವರ, ಎನ್ನುತ್ತಾನೆ.

ತತ್ರಾಂತರಾಲಶ್ರುತಿಷು ನಿಯತಸಂಖ್ಯಕಾಸು ಈಷದ್ಯೋ ವಾಯುನಾ ಸ್ಪರ್ಶಸ್ತನ್ಮಹಿಮ್ನಾ ಯಃ ಸ್ವರಃ ಶ್ರುತಿಸ್ಥಾನೇ ಸ್ನಿಗ್ಧತ್ವರಕ್ತತ್ವಲಕ್ಷಣೋ ಧರ್ಮಃ ತಸ್ಯಾಶ್ರಯಭೂತಾಯಾಃ ಶ್ರುತೇರುಪರಂಜಕಃ ಸ ಏವ ಸ್ವರ ಇತಿ ಕೇಚಿತ್ । ಷಡ್ಜಶ್ರುತಿರೇವೇ (–ರೇಕೇ)ತ್ಯಪರೇ, ಸಮೂಹ ಇತ್ಯೇಕೇ । ವಯಂ ತು ಶ್ರುತಿಸ್ಥಾನಾಭಿಘಾತಪ್ರಭವಶಬ್ದಪ್ರಭಾವಿತೋ ಽನುರಣನಾತ್ಮಾ ಸ್ನಿಗ್ಧಮಧುರಃ ಶಬ್ದ ಏವ ಸ್ವರ ಇತಿ ವಕ್ಷ್ಯಾಮಃ । [380]

ಮತಂಗನು ಅವಯವೀ–ಅವಯವ ಭಾವವನ್ನು ಸ್ವರಶ್ರುತಿಗಳಲ್ಲಿ ವಿವೇಚಿಸಿ ನಿರಾಕರಿಸಿರುವುದನ್ನು ಅಭಿನವಗುಪ್ತನು ಒಂದೇ ಮಾತಿನಲ್ಲಿ ನಿರಾಕರಿಸಿದ್ದಾನೆ:

ನ ಚಾವಯವೈಃ ಸ್ವರಃ, ನಾಪಿ ಸಂಚಯಃ ಯೌಗಪದ್ಯಾಭಾವಾತ್ । ಕ್ರಮಿಕತ್ವೇ ಽಪಿ ಹಿ ನೈರಂತರ್ಯಾತ್, ನಾಶುಭವಿಕೃತಾದ್ಯೌಗಪದ್ಯಾಭಿಮಾನಃ, ಕ್ರಮಿಕಶ್ರುತಿಜನಿತಸಂಸ್ಕಾರವಿಶೇಷೇ ಚಾನ್ಯೇ ಶ್ರುತಿಸ್ಥಾನೇ ಸ್ವರಸಮುದಾಯ ಇತ್ಯಾಸ್ತಾಂ ತಾವತ್ । [381]

---

380 ಅಭಿನವಗುಪ್ತ, ಉ.ಗ್ರಂ., ಪು. 11. 381 ಅದೇ ಗ್ರಂಥ, ಪು. 17.

## 3. ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣ

## 7. ಶ್ರುತಿ : ಹ್ರಸ್ವತಮಶ್ರವಣ

ಕಾಲಪರವಾದ ಒಂದು ಅರ್ಥವನ್ನು ಶ್ರುತಿಗೆ ಈಗಾಗಲೇ ಹೇಳಿದೆ (ಪು. 356-361). ಇದೇ ಅರ್ಥವನ್ನು ವಿಸ್ತರಿಸಿ ಕೇವಲ ಜೀವಿತಕಾಲದ ಎಂದರೆ ಆಯುಸ್ಸಿನ ಪರಿಮಾಣವನ್ನು ಅವಲಂಬಿಸಿಯೇ ಸ್ವರಶ್ರುತಿಗಳಿಗೆ ಸಂಬಂಧವನ್ನು ಹೇಳುವವರೂ ಇದ್ದಾರೆ. ಮುಮ್ಮಡಿ ಚಿಕ್ಕಭೂಪಾಲನು ಇಂತಹುದೊಂದು ಅಭಿಪ್ರಾಯವನ್ನು ಮತಾಂತರವೆಂಬ ಹೆಸರಿನಲ್ಲಿ ತನ್ನ ಅಭಿನವಭರತಸಾರಸಂಗ್ರಹದಲ್ಲಿ ಉದ್ಧರಿಸಿಕೊಂಡಿದ್ದಾನೆ (ಪು. 258) :

ಪ್ರಥಮಂ ಶ್ರವಣಾಚ್ಛಬ್ದಃ ಶ್ರೂಯತೇ ಹ್ರಸ್ವಮಾತ್ರಕಃ ।
ಸಾ ಶ್ರುತಿಃ ಸುಪರಿಜ್ಞೇಯಾ ಸ್ವರಾಗಮನಲಕ್ಷಣಾ ॥[126]

ಹೀಗೆ ಇಲ್ಲಿಯೂ ಪೌರ್ವಾಪರ್ಯ ಸಂಬಂಧವು ವಿವಕ್ಷಿತವೇ. ಆದರೆ ಇಲ್ಲಿಂದ ಮುಂದಕ್ಕೆ ಒಂದು ವಿಶೇಷಾರ್ಥವು ಕಂಡುಬರುತ್ತದೆ. ಪ್ರಥಮಕ್ಷಣದಲ್ಲಿ ಹ್ರಸ್ವಮಾತ್ರವಾಗಿ ಕೇಳಿಸಿ ಸ್ವರದ ಆಗಮನವನ್ನೇ ಲಕ್ಷಣವಾಗಿ ಪಡೆದಿರುವುದಕ್ಕೆ ಶ್ರುತಿ ಎಂಬ ಈ ನಿರೂಪಣೆಯು ಅನ್ಯತ್ರ ಉಪಲಬ್ಧವಿಲ್ಲ. ಸ್ವರದ ಬರುವಿಕೆಗೆ ಶ್ರುತಿಯು ಪೂರ್ವಭಾವೀ ಅಸ್ತಿತ್ವವನ್ನು ಪಡೆದಿರುತ್ತದೆ, ಸ್ವತಂತ್ರವಾಗಿರುತ್ತದೆ; ಎಂದರೆ ಸ್ವರದ ಉತ್ಪತ್ತಿಯಲ್ಲಿ ಪ್ರಪ್ರಥಮ ಕ್ಷಣದಲ್ಲಿ ಕೇಳಿದ ಹ್ರಸ್ವವಾದ ಶಬ್ದವು ಶ್ರುತಿ. ಇದು ಮುಂದುವರೆದು ಅವಿಚ್ಛಿನ್ನವಾದ ಚಿತ್ತವೃತ್ತಿಯನ್ನೂ ಅನುಭವವನ್ನೂ ತಂದುಕೊಟ್ಟರೆ ಅದು ಸ್ವರ. ಎಂದರೆ ಶ್ರುತಿಯನ್ನು ಕಾಲದಲ್ಲಿ ಮುಂದುವರೆಸಿದರೆ ಸ್ವರವಾಗುತ್ತದೆ. ಎಂದರೆ ಶ್ರುತಿಯೆನ್ನುವುದು ಮಿಂಚಿ ಮಾಯವಾಗುವ ಶಬ್ದ ; ಬಿಂದುವಿನ ಸರಣಿಯಿಂದ ರೇಖೆಯಾದಂತೆ, ಶ್ರುತಿಯ ಸರಣಿಯಿಂದ ಸ್ವರ. ಹೀಗೆ ಶ್ರುತಿಯ ಆನಂತ್ಯವೇ ಸಿದ್ಧಿಸುತ್ತದೆ. ಇದರಲ್ಲಿ ಶ್ರುತಿಯು ಹ್ರಸ್ವ ; ಸ್ವರವು ದೀರ್ಘ. ಇದರಲ್ಲಿ ಕಾಲವೊಂದರ ಹೊರತು, ಸ್ನಿಗ್ಧತೆ, ಮಾಧುರ್ಯ, ರಕ್ತಿ ಮೊದಲಾದ ಗುಣಗಳಲ್ಲಿ ಶ್ರುತಿಗೂ ಸ್ವರಕ್ಕೂ ವ್ಯತ್ಯಾಸವಿಲ್ಲ. ಅಥವಾ ಸ್ವರವು ಪ್ರಥಮ ಕ್ಷಣದಲ್ಲಿ ಅನುರಣನ, ರಕ್ತಿ, ಸ್ನಿಗ್ಧತೆ, ಮಾಧುರ್ಯ, ಮೊದಲಾದ ಯಾವ ಗುಣಗಳನ್ನೂ ಪಡೆಯದೆ ಹುಟ್ಟುತ್ತದೆ. ಸ್ವರದ ಈ ಅವಸ್ಥೆಗೆ ಶ್ರುತಿಯೆಂದು ಹೆಸರು. ಎರಡನೆಯ ಕ್ಷಣದಲ್ಲಿಯೇ ಈ ಗುಣಗಳನ್ನು ಅದು ಕೂಡಿಕೊಳ್ಳುತ್ತದೆ. ಎಂದರೆ ಸ್ವರದ ಬೇರೆ ಬೇರೆ ಅವಸ್ಥೆಗಳಿಗೆ ಶ್ರುತಿ, ಸ್ವರ ಎಂಬ ವ್ಯಪದೇಶವಿದೆ; ಅಥವಾ ಶ್ರುತಿಯ ವಿವಿಧ ಅವಸ್ಥೆಗಳಿಗೇ ಶ್ರುತಿ, ಸ್ವರ ಎಂಬ ಅರ್ಥವಿದೆ. ತಾರ್ಕಿಕರು ದ್ರವ್ಯಕ್ಕೆ ಪ್ರಥಮಕ್ಷಣದಲ್ಲಿ ಗುಣವಿಹೀನತೆಯೂ ದ್ವಿತೀಯಕ್ಷಣದಲ್ಲಿ ಗುಣಸಾಹಿತ್ಯವೂ ಇದೆಯೆನ್ನುತ್ತಾರೆ. ಗುಣವಿಹೀನವಾದುದಕ್ಕೆ ಶ್ರುತಿಯೆಂದೂ ಗುಣಸಹಿತವಾದುದು ಸ್ವರವೆಂದೂ ಇಲ್ಲಿ ಇಂಗಿತ. ಹೀಗಾದರೆ ಸ್ವರವು ಅಭಿವ್ಯಕ್ತಿಯಲ್ಲಿ ಕೇವಲ ಗುಣಸ್ವರೂಪವಾಗಿರುತ್ತದೆ. ಸ್ನಿಗ್ಧತೆ ಮುಂತಾದವು ಸ್ವರದ ಗುಣಗಳೇ ಹೊರತು ಅದೇ ಸ್ವರವಲ್ಲ. ಧರ್ಮ-ಧರ್ಮಿ, ಗುಣ-ಗುಣಿ ಮೊದಲಾದವುಗಳಲ್ಲಿ ತಾದಾತ್ಮ್ಯವನ್ನು ಹೇಳಬಹುದೇ ಹೊರತು ಅಭೇದವನ್ನಲ್ಲ. ಒಟ್ಟಿನಲ್ಲಿ ಇದು ಪರಿಣಾಮವಾದದ ಒಂದು ಪ್ರಭೇದವಿರುವ ಹಾಗೆ ಕಾಣುತ್ತದೆ.

ಸ್ವರಲಕ್ಷಣ

**ತೇಷಾಂ ಸಂಜ್ಞಾಃ ಸರಿಗಮಪಧನೀತ್ಯಪರಾ ಮತಾಃ ।**
**ಶ್ರುತ್ಯನಂತರಭಾವೀ ಯಃ ಸ್ನಿಗ್ಧೋಽನುರಣನಾತ್ಮಕಃ ॥ 24 ॥** 240

ಅವುಗಳ ಬೇರೆ ಸಂಜ್ಞೆಗಳು ಸ,ರಿ,ಗ,ಮ,ಪ,ಧ,ನಿ ಎಂದು ಅಭಿಪ್ರಾಯಪಡಲಾಗಿದೆ. ಯಾವುದು [ತನ್ನ ಅಭಿವ್ಯಕ್ತಿ ಸ್ಥಾನವಾದ] ಶ್ರುತಿಗೂ ತನಗೂ ನಡುವೆ [ಕಾಲದ] ಅಂತರವಿಲ್ಲದೆ ಇರುತ್ತದೋ, ನಯವಾಗಿರುತ್ತದೋ, ಅನುರಣನವನ್ನು ಸ್ವಭಾವವಾಗಿ ಪಡೆದಿರುತ್ತದೋ,—

**ಸ್ವತೋ ರಂಜಯತಿ ಶ್ರೋತೃಚಿತ್ತಂ ಸ ಸ್ವರ ಉಚ್ಯತೇ ।**
**ನನು ಶ್ರುತಿಶ್ಚತುರ್ಥ್ಯಾದಿರಸ್ತ್ವೇವಂ ಸ್ವರಕಾರಣಮ್ ॥ 25 ॥** 241

—ತನ್ನನ್ನು ಮಾತ್ರ ಅವಲಂಬಿಸಿಕೊಂಡು (ಪರಾವಲಂಬನೆಯಿಲ್ಲದೆ) <ಸ್ವತಃ> ಕೇಳು ವವರ ಮನಸ್ಸನ್ನು ರಂಜಿಸುತ್ತದೋ, ಅದು ಸ್ವರವೆಂದು ಹೇಳಲ್ಪಡುತ್ತದೆ. ಈ ರೀತಿಯಲ್ಲಿ ನಾಲ್ಕನೆಯ ಶ್ರುತಿಯೇ ಮೊದಲಾದುದು ಸ್ವರಕ್ಕೆ ಕಾರಣವೆಂದು ಹೇಳಲಾಯಿತಷ್ಟೆ ;

**ತ್ರ್ಯಾದೀನಾಂ ತತ್ರ ಪೂರ್ವಾಸಾಂ ಶ್ರುತೀನಾಂ ಹೇತುತಾ ಕಥಮ್ ।**
**ಬ್ರೂಮಸ್ತುರ್ಯಾ[5] ತೃತೀಯಾ ಽಽದಿಃ ಶ್ರುತಿಃ ಪೂರ್ವಾಭಿಕಾಂಕ್ಷಯಾ** ॥ 26 ॥ 242

[ಹಾಗಾದರೆ] ಅಲ್ಲಿ ಮೂರನೆಯದೇ ಮೊದಲಾದ ಮುಂಚಿನ ಶ್ರುತಿಗಳ [ಸ್ವರ-] ಕಾರಣತ್ವವು ಹೇಗೆ [ಉಂಟಾಗುತ್ತದೆ] ? ಹೇಳುತ್ತೇವೆ : ನಾಲ್ಕನೆಯ, ಮೂರನೆಯ ಮೊದಲಾದ ಶ್ರುತಿಯು ತನ್ನ ಹಿಂದಿನದರ ಅಪೇಕ್ಷೆಯಿಂದ (ಸಂಬಂಧದಿಂದ)—

ಶ್ರುತಿಜಾತಿಗಳು

**ನಿರ್ಧಾರ್ಯತೇ ಽತಃ ಶ್ರುತಯಃ ಪೂರ್ವಾ ಅಪ್ಯತ್ರ ಹೇತವಃ ।**
**ದೀಪ್ತಾ ಽಽಯತಾ ಚ ಕರುಣಾ ಮೃದುರ್ಮಧ್ಯೇತಿ ಜಾತಯಃ** ॥ 27 ॥ 243

—ನಿರ್ಧರಿಸಲ್ಪಡುತ್ತದೆ. ಆದುದರಿಂದ ಹಿಂದಿನ ಶ್ರುತಿಗಳೂ ಸಹ [ಆಯಾ ಸ್ವರದ ಅಭಿವ್ಯಕ್ತಿಗೆ] ಕಾರಣಗಳೇ. ದೀಪ್ತಾ ಮತ್ತು ಆಯತಾ, ಕರುಣಾ, ಮೃದು, ಮಧ್ಯಾ ಎಂದು—

ಸ್ವರಗಳಲ್ಲಿ ಅವುಗಳ ವಿನಿಯೋಗ

**ಶ್ರುತೀನಾಂ ಪಂಚ ತಾಸಾಂ ಚ ಸ್ವರೇಷ್ವೇವಂ ವ್ಯವಸ್ಥಿತಿಃ ।**
**ದೀಪ್ತಾ ಽಽಯತಾ ಮೃದುರ್ಮಧ್ಯಾ ಷಡ್ಜೇ ಸ್ಯಾದೃಷಭೇ ಪುನಃ** ॥ 28 ॥ 244

—ಶ್ರುತಿಗಳ ಜಾತಿಗಳು ಐದು. ಮತ್ತು ಸ್ವರಗಳಲ್ಲಿ ಅವುಗಳ ವ್ಯವಸ್ಥೆಯು ಹೀಗೆ: ಷಡ್ಜದಲ್ಲಿ ದೀಪ್ತಾ, ಆಯತಾ, ಮೃದು, ಮಧ್ಯಾ [ಎಂಬ ಜಾತಿಗಳ ವ್ಯವಸ್ಥೆಯು ಇದೆ]. ಪುನಃ, ರಿಷಭದಲ್ಲಾದರೋ,—

**ಸಂಸ್ಥಿತಾ ಕರುಣಾ ಮಧ್ಯಾ ಮೃದುರ್ಗಾಂಧಾರಕೇ ಪುನಃ ।**
**ದೀಪ್ತಾಽಽಯತೇ ಮಧ್ಯಮೇ ತೇ ಮೃದುರ್ಮಧ್ಯೇ ಚ ಸಂಸ್ಥಿತೇ** ॥ 29 ॥ 245

ಕರುಣಾ, ಮಧ್ಯಾ, ಮೃದು [ಜಾತಿ] ಗಳು ಇರುತ್ತವೆ. ಅಲ್ಲದೆ ಗಾಂಧಾರದಲ್ಲಿ ದೀಪ್ತಾ, ಆಯತಾಗಳೆರಡು ; ಮಧ್ಯಮದಲ್ಲಿ ಅವುಗಳೆರಡು ಮತ್ತು ಮೃದು, ಮಧ್ಯಾಗಳೆರಡು ನೆಲೆಸಿವೆ.

**ಮೃದುರ್ಮಧ್ಯಾ ಽಽಯತಾ ಽಽಖ್ಯಾ ಚ[6] ಕರುಣಾ ಪಂಚಮೇ ಸ್ಥಿತಾ ।**
**ಕರುಣಾ ಚಾಯತಾ ಮಧ್ಯಾ ಧೈವತೇ ಸಪ್ತಮೇ ಪುನಃ** ॥30॥ 246

ಮೃದು, ಮಧ್ಯಾ ಮತ್ತು ಆಯತವೆಂಬುದು, ಕರುಣಾ (ಇವುಗಳು) ಪಂಚಮದಲ್ಲಿ ನೆಲೆಸಿವೆ. ಕರುಣಾ ಮತ್ತು ಆಯತಾ, ಮಧ್ಯಾ[-ಗಳು] ಧೈವತದಲ್ಲಿ (ಇವೆ). ಅಲ್ಲದೆ ನಿಷಾದದಲ್ಲಿ—

**ದೀಪ್ತಾ ಮಧ್ಯೇತಿ ತಾಸಾಂ ಚ ಜಾತೀನಾಂ ಬ್ರೂಮಹೇ ಭಿದಾಃ[7] ।**
**ತೀವ್ರಾ ರೌದ್ರೀ ವಜ್ರಿಕೋಗ್ರೇತ್ಯುಕ್ತಾ ದೀಪ್ತಾ ಚತುರ್ವಿಧಾ** ॥ 31 ॥ 247

5 ಕ : ತುರ್ಯ. 6 ಗ : ಽತ್ರ. 7 ಕ : ಭಿದಾನ್.

—ದೀಪ್ತಾ, ಮಧ್ಯಾ, ಹೀಗೆ (ಜಾತಿಗಳಿರುತ್ತವೆ). ಮತ್ತು ಆ ಜಾತಿಗಳ ಭೇದಗಳನ್ನು ಹೇಳುತ್ತೇವೆ : ತೀವ್ರಾ, ರೌದ್ರೀ, ವಜ್ರಿಕಾ, ಉಗ್ರಾ ಎಂದು ದೀಪ್ತಾ (ಜಾತಿಯು) ನಾಲ್ಕು ವಿಧಗಳೆಂದು ಹೇಳಲ್ಪಡುತ್ತದೆ.

**ಕುಮುದ್ವತ್ಯಾಯತಾಯಾಃ ಸ್ಯಾತ್[8] ಕ್ರೋಧಾ ಚಾಥ ಪ್ರಸಾರಿಣೀ ।**
**ಸಂದೀಪನೀ ರೋಹಿಣೀ ಚ ಭೇದಾಃ ಪಂಚೇತಿ ಕೀರ್ತಿತಾಃ ॥ 32 ॥** 248

ಈ (ಮೇಲೆ ಹೇಳಿದ) ಆಯತಾದಲ್ಲಿ ಕುಮುದ್ವತೀ, ಮತ್ತು ಕ್ರೋಧಾ, ಆಮೇಲೆ ಪ್ರಸಾರಿಣೀ, ಸಂದೀಪನೀ ಮತ್ತು ರೋಹಿಣೀ, ಹೀಗೆ ಐದು ಭೇದಗಳು ಹೇಳಲ್ಪಡುತ್ತವೆ.

**ದಯಾವತೀ ತಥಾಽಽಲಾಪಿನ್ಯಥ ಪ್ರೋಕ್ತಾ ಮದಂತಿಕಾ ।**
**ತ್ರಯಸ್ತ್ರೀ ಕರುಣಾಭೇದಾ ಮೃದೋರ್ಭೇದಚತುಷ್ಟಯಮ್ ॥ 33 ॥** 249

ದಯಾವತೀ, ಹಾಗೆಯೇ ಆಲಾಪಿನೀ, ಆಮೇಲೆ ಮದಂತಿಕಾ (ಎಂಬ) ಈ ಮೂರು ಕರುಣಾ (ಜಾತಿಯ) ಭೇದಗಳು. ಮೃದುವಿನಲ್ಲಿ ನಾಲ್ಕು ಭೇದಗಳು (ಇವೆ) :

**ಮಂದಾ ಚ ರತಿಕಾ ಪ್ರೀತಿಃ ಕ್ಷಿ[9]ತಿರ್ಮಧ್ಯಾ ತು ಷಡ್ವಿಧಾ[10] ।**
**ಛಂದೋವತೀ ರಂಜನೀ ಚ ಮಾರ್ಜನೀ ರಕ್ತಿಕಾ ತಥಾ ॥ 34 ॥** 250

ಹಾಗೂ, ಮಂದಾ, ರತಿಕಾ, ಪ್ರೀತಿ, (ಮತ್ತು) ಕ್ಷಿತಿ. ಮಧ್ಯಾ (ಜಾತಿ) ಆದರೋ, ಆರು ವಿಧವುಳ್ಳದುದು : ಛಂದೋವತೀ, ಮತ್ತು ರಂಜನೀ, ಮಾರ್ಜನೀ, ಹಾಗೆಯೇ ರಕ್ತಿಕಾ,—

**ರಮ್ಯಾ ಚ ಕ್ಷೋಭಿಣೀತ್ಯಾಸಾಮಥ ಬ್ರೂಮಃ ಸ್ವರಸ್ಥಿತಿಮ್ ।**
**ತೀವ್ರಾಕುಮುದ್ವತೀ ಮಂದಾ ಛಂದೋವತ್ಯಸ್ತು ಷಡ್ಜಗಾಃ ॥ 35 ॥** 251

—ಮತ್ತು ರಮ್ಯಾ, ಕ್ಷೋಭಿಣೀ ಎಂದು ; ಆಮೇಲೆ ಅವುಗಳು ಸ್ವರಗಳಲ್ಲಿರುವ ರೀತಿಯನ್ನು ಹೇಳುತ್ತೇವೆ : ತೀವ್ರಾ, ಕುಮುದ್ವತೀ, ಮಂದಾ, ಛಂದೋವತಿಗಳಾದರೋ ಷಡ್ಜದಲ್ಲಿ ಇರುವಂತಹವು.

**ದಯಾವತೀ ರಂಜನೀ ಚ ರಕ್ತಿಕಾ ಚರ್ಷಭೇ ಸ್ಥಿತಾಃ ।**
**ರೌದ್ರೀ ಕ್ರೋಧಾ ಚ ಗಾಂಧಾರೇ ವಜ್ರಿಕಾಽಥ ಪ್ರಸಾರಿಣೀ ॥ 36 ॥** 252

ದಯಾವತೀ ಮತ್ತು ರಂಜನೀ ಮತ್ತು ರಕ್ತಿಕಾಗಳು ರಿಷಭದಲ್ಲಿ ಇವೆ. ರೌದ್ರೀ ಮತ್ತು ಕ್ರೋಧಾ ಗಾಂಧಾರದಲ್ಲಿ ; ವಜ್ರಿಕಾ, ಆಮೇಲೆ ಪ್ರಸಾರಿಣೀ—

**ಪ್ರೀತಿಶ್ಚ ಮಾರ್ಜನೀತ್ಯೇತಾಃ ಶ್ರುತಯೋ ಮಧ್ಯಮಾ[11]ಶ್ರಿತಾಃ ।**
**ಕ್ಷಿತೀ ರಕ್ತಾ ಚ ಸಂದೀಪನ್ಯಾಲಾಪಿನ್ಯಪಿ ಪಂಚಮೇ ॥ 37 ॥** 253

—ಮತ್ತು ಪ್ರೀತಿ, ಮಾರ್ಜನೀ ಎಂಬ ಈ ಶ್ರುತಿಗಳು ಮಧ್ಯಮವನ್ನು ಆಶ್ರಯಿಸಿವೆ. ಕ್ಷಿತಿ ಮತ್ತು ರಕ್ತಾ, ಸಂದೀಪನೀ ಹಾಗೂ ಆಲಾಪಿನೀಗಳಾದರೋ, ಪಂಚಮದಲ್ಲಿ ( ನೆಲೆಸಿವೆ ).

---

8 ಅ, ಕ : ಕುಮುದ್ವತ್ಯಾಯತಾಯಾಃ ಸ್ಯಾತ್. 9 ಅ : ಕ್ಷೇ. 10 ಗ, ಆದರೆ ಅ : ಷಡ್ವಿದಾ. 11 ಅ : ಮಧ್ಯಮ.

**ಮದಂತೀ ರೋಹಿಣೀ ರಮ್ಯೇತ್ಯೇತಾಸ್ತಿಸ್ರಸ್ತು ಧೈವತೇ ।**
**ಉಗ್ರಾ ಚ ಕ್ಷೋಭಿಣೀತಿ ದ್ವೇ ನಿಷಾದೇ ವಸತಃ ಶ್ರುತೀ ॥ 38 ॥** 254

ಮದಂತೀ, ರೋಹಿಣೀ, ರಮ್ಯಾ ಎಂಬ ಈ ಮೂರಾದರೋ ಧೈವತದಲ್ಲಿ; ಮತ್ತು ಉಗ್ರಾ, ಕ್ಷೋಭಿಣೀ ಎಂಬ ಎರಡು ಶ್ರುತಿಗಳು ನಿಷಾದದಲ್ಲಿ ನೆಲೆಸಿವೆ.

ವಿಕೃತಸ್ವರಗಳು

**ತೇ ಮಂದ್ರಮಧ್ಯತಾರಾಖ್ಯಸ್ಥಾನಭೇದಾತ್ ತ್ರಿಧಾ ಮತಾಃ ।**
**ತ ಏವ ವಿಕೃತಾವಸ್ಥಾ ದ್ವಾದಶ ಪ್ರತಿಪಾದಿತಾಃ ॥ 39 ॥** 255

ಅವು ಮಂದ್ರ, ಮಧ್ಯ, ತಾರ ಎಂಬ ಸ್ಥಾನಗಳ ಭೇದದಿಂದ ಮೂರು ಬಗೆಯೆಂದು ಸಮ್ಮತಿಸಿದೆ. ಅವೇ (ಅದೇ ಏಳು ಸ್ವರಗಳೇ) ವಿಕೃತವಾದ ಅವಸ್ಥೆಯಲ್ಲಿ ಹನ್ನೆರಡು [ ಎಂದು ] ನಿರೂಪಿಸಲ್ಪಡುತ್ತವೆ <ಪ್ರತಿಪಾದಿತಾಃ>.

**ಚ್ಯುತೋಽಚ್ಯುತೋ ದ್ವಿಧಾ ಷಡ್ಜೋ ದ್ವಿಶ್ರುತಿರ್ವಿಕೃತೋ ಭವೇತ್ ।**
**ಸಾಧಾರಣೇ ಕಾಕಲೀತ್ವೇ ನಿಷಾದಸ್ಯ ಚ ದೃಶ್ಯತೇ ॥ 40 ॥** 256

ಎರಡು ಶ್ರುತಿಗಳನ್ನುಳ್ಳ ಷಡ್ಜವು ಚ್ಯುತ, ಅಚ್ಯುತವೆಂದು ಎರಡು ವಿಧದಲ್ಲಿ ವಿಕೃತವಾಗುತ್ತದೆ; ಮತ್ತು (ಅದು ಹೀಗೆ ಕ್ರಮವಾಗಿ) ನಿಷಾದದ ಸಾಧಾರಣದಲ್ಲಿಯೂ ಕಾಕಲೀತ್ವದಲ್ಲಿಯೂ ಕಂಡುಬರುತ್ತದೆ.

**ಸಾಧಾರಣೇ ಶ್ರುತಿಂ ಷಾಡ್ಜೀಮೃಷಭಃ ಸಂಶ್ರಿತೋ ಯದಾ ।**
**ಚತುಃಶ್ರುತಿತ್ವಮಾಯಾತಿ ತದೈಕೋ ವಿಕೃತೋ ಭವೇತ್ ॥ 41 ॥** 257

ರಿಷಭವು ಯಾವಾಗ [ ಷಡ್ಜ- ]ಸಾಧಾರಣದಲ್ಲಿ ಷಡ್ಜದ ಶ್ರುತಿಯನ್ನು ಕೂಡಿಕೊಂಡು ನಾಲ್ಕು ಶ್ರುತಿಗಳನ್ನುಳ್ಳ ಸ್ಥಿತಿಯನ್ನು ಪಡೆಯುತ್ತದೋ, ಆಗ ಒಂದು ವಿಕೃತ [ಸ್ವರ]ವಾಗುತ್ತದೆ.

**ಸಾಧಾರಣೇ ತ್ರಿಶ್ರುತಿಃ ಸ್ಯಾದಂತರತ್ವೇ ಚತುಃಶ್ರುತಿಃ ।**
**ಗಾಂಧಾರ ಇತಿ ತದ್ಭೇದೌ ದ್ವೌ ನಿಃಶಂಕೇನ ಕೀರ್ತಿತೌ ॥ 42 ॥** 258

ಗಾಂಧಾರವು ಸಾಧಾರಣದಲ್ಲಿ ಮೂರು ಶ್ರುತಿಗಳನ್ನು ಉಳ್ಳದುದು; ಅಂತರವೆಂಬ ಸ್ಥಿತಿಯಲ್ಲಿ ನಾಲ್ಕು ಶ್ರುತಿಗಳನ್ನುಳ್ಳದುದು; ಹೀಗೆ ಅದರ ಎರಡು ಭೇದಗಳು ನಿಃಶಂಕ (ಶಾರ್ಙ್ಗದೇವ)ನಿಂದ ಹೇಳಲ್ಪಡುತ್ತವೆ.

**ಮಧ್ಯಮಃ ಷಡ್ಜವದ್ ದ್ವೇಧಾಽಂತರಸಾಧಾರಣಾಶ್ರಯಾತ್ ।**
**ಪಂಚಮೋ ಮಧ್ಯಮಗ್ರಾಮೇ ತ್ರಿಶ್ರುತಿಃ ಕೈಶಿಕೇ ಪುನಃ ॥ 43 ॥** 259

ಅಂತರತ್ವ (ಮತ್ತು) ಸಾಧಾರಣ (ಸ್ಥಿತಿ)ಗಳನ್ನು ಆಶ್ರಯಿಸುವುದರಿಂದ ಮಧ್ಯಮವು ಷಡ್ಜದ ಹಾಗೆಯೇ ಎರಡು ವಿಧ. ಪಂಚಮವು ಮಧ್ಯಮಗ್ರಾಮದಲ್ಲಿ ಮೂರು ಶ್ರುತಿಗಳನ್ನು ಉಳ್ಳದುದು; ಮತ್ತು ಕೈಶಿಕ[ವೆಂಬ ಸ್ಥಿತಿಯಲ್ಲಿ]—

**ಮಧ್ಯಮಸ್ಯ ಶ್ರುತಿಂ ಪ್ರಾಪ್ಯ ಚತುಃಶ್ರುತಿರಿತಿ ದ್ವಿಧಾ ।**
**ಧೈವತೋ ಮಧ್ಯಗ್ರಾಮೇ ವಿಕೃತಃ ಸ್ಯಾಚ್ಚತುಃಶ್ರುತಿಃ ॥ 44 ॥** 260

ಮಧ್ಯಮದ ಶ್ರುತಿಯನ್ನು ಪಡೆದುಕೊಂಡು ನಾಲ್ಕು ಶ್ರುತಿಗಳನ್ನುಳ್ಳದುದು, ಹೀಗೆ (ಪಂಚಮವು) ಎರಡು ವಿಧ. ಧೈವತವು ಮಧ್ಯಮಗ್ರಾಮದಲ್ಲಿ ನಾಲ್ಕು ಶ್ರುತಿಗಳನ್ನುಳ್ಳದುದು ; [ಆದುದರಿಂದ] ವಿಕೃತವಾಗುತ್ತದೆ.

**ಕೈಶಿಕೇ ಕಾಕಲೀತ್ವೇ ಚ ನಿಷಾದಸ್ತ್ರಿಚತುಃಶ್ರುತೀಃ ।**
**ಪ್ರಾಪ್ನೋತಿ ವಿಕೃತೌ ಭೇದೌ ದ್ವಾವಿತಿ ದ್ವಾದಶ ಸ್ಮೃತಾಃ ॥ 45 ॥** 261

ಕೈಶಿಕದಲ್ಲಿ ಮತ್ತು ಕಾಕಲೀ ಎಂಬ ಸ್ಥಿತಿಯಲ್ಲಿ ನಿಷಾದವು [ಕ್ರಮವಾಗಿ] ಮೂರು [ಮತ್ತು] ನಾಲ್ಕು ಶ್ರುತಿಗಳನ್ನು ಪಡೆಯುತ್ತದೆ ; (ಹೀಗೆ) ಅದರ ವಿಕೃತ ಭೇದಗಳು ಎರಡು ; ಹೀಗೆ ಹನ್ನೆರಡು (ವಿಕೃತಸ್ವರಗಳು) ಎಂದು ಸಮ್ಮತಿಸಿದೆ.

ಸ್ವರವಕ್ತೃ ಪ್ರಾಣಿಗಳು

**ತೇ[12] ಶುದ್ಧೈಃ ಸಪ್ತಭಿಃ ಸಾರ್ಧಂ ಭವಂತ್ಯೇಕೋನವಿಂಶತಿಃ ।**
**ಮಯೂರಚಾತಕಚ್ಛಾಗಕ್ರೌಂಚಕೋಕಿಲದರ್ದುರಾಃ ॥ 46 ॥** 262

ಅವು ಶುದ್ಧವಾದ ಏಳನ್ನು (ಏಳು ಶುದ್ಧಸ್ವರಗಳನ್ನು ) ಕೂಡಿಕೊಂಡು ಹತ್ತೊಂಬತ್ತು ಆಗುತ್ತವೆ. ನವಿಲು, ಚಾತಕ, ಆಡು, ಕ್ರೌಂಚ, ಕೋಗಿಲೆ, ಕಪ್ಪೆ—

ಸ್ವರಚಾತುರ್ವಿಧ್ಯ

**ಗಜಶ್ಚ ಸಪ್ತ ಷಡ್ಜಾದೀನ್ ಕ್ರಮಾದುಚ್ಚಾರಯಂತ್ಯಮೀ ।**
**ಚತುರ್ವಿಧಾಃ ಸ್ವರಾ ವಾದೀ ಸಂವಾದೀ ಚ ವಿವಾದ್ಯಪಿ ॥ 47 ॥** 263

—ಮತ್ತು ಆನೆ [ಈ] ಏಳು (ಪ್ರಾಣಿಗಳು) ಷಡ್ಜವೇ ಮೊದಲಾದ ಏಳು ಸ್ವರಗಳನ್ನು ಉಚ್ಚಾರಿಸುತ್ತವೆ. ಈ ಸ್ವರಗಳು ನಾಲ್ಕು ವಿಧ : ವಾದಿ ಮತ್ತು ಸಂವಾದಿ, ಹಾಗೂ ವಿವಾದಿ,—

**ಅನುವಾದೀ ಚ[13] ವಾದೀ ತು ಪ್ರಯೋಗೇ ಬಹುಲಃ ಸ್ವರಃ ।**
**ಶ್ರುತಯೋ ದ್ವಾದಶಾಷ್ಟೌ ವಾ ಯಯೋರಂತರಗೋಚರಾಃ ॥ 48 ॥** 264

ಮತ್ತು ಅನುವಾದಿ. ವಾದಿಯಾದರೋ [ರಾಗವು] ಪ್ರಯೋಗವಾಗುವಲ್ಲಿ ಬಹಳವಾಗಿರುವ ಸ್ವರ. ಯಾವ[ಸ್ವರ]ಗಳಲ್ಲಿ ಹನ್ನೆರಡು ಅಥವಾ ಎಂಟು ಶ್ರುತಿಗಳು ನಡುವೆ ಗೋಚರಿಸುತ್ತವೆಯೋ—

**ಮಿಥಃ ಸಂವಾದಿನೌ ತೌ ಸ್ತೋ ನಿಗಾವನ್ಯವಿವಾದಿನೌ ।**
**ರಿಧಯೋರೇವ ಸ್ಯಾತಾಂ ತೌ ತಯೋರ್ವಾ ರಿಧಾವಪಿ ॥ 49 ॥** 265

—ಅವೆರಡೂ ಪರಸ್ಪರವಾಗಿ ಸಂವಾದಿಗಳಾಗಿರುತ್ತವೆ. ನಿಷಾದಗಾಂಧಾರಗಳು ಉಳಿದವುಗಳಿಗೆ ವಿವಾದಿಗಳು ; ಅಥವಾ ಇವುಗಳು ರಿಷಭಧೈವತಗಳಿಗೆ ಮಾತ್ರ ವಿವಾದಿಗಳು ; ಅಥವಾ ಅವುಗಳಿಗೆ ರಿಷಭಧೈವತಗಳು ವಿವಾದಿಗಳು.

**ಶೇಷಾಣಾಮನುವಾದಿತ್ವಂ ವಾದೀ ರಾಜಾಽತ್ರ ಗೀಯತೇ ।**
**ಸಂವಾದೀ ತ್ವನುಸಾರಿತ್ವಾದಸ್ಯಾಮಾತ್ಯೋಽಭಿಧೀಯತೇ ॥ 50 ॥** 266

12 ಅ, ಸಿಂಹಭೂಪಾಲೀಯ ಪಾಠ : ತ್ರೈಃ. 13 ಕ : ದೀತಿ.

ಉಳಿದವುಗಳಿಗೆ ಅನುವಾದಿತ್ವವು [ಇರುತ್ತದೆ]. ಅವುಗಳಲ್ಲಿ ವಾದಿಯು ರಾಜನಂತೆ ಹಾಡಲ್ಪಡುತ್ತದೆ. ಸಂವಾದಿಯಾದರೋ [ ಅದನ್ನು ] ಅನುಸರಿಸುವುದರಿಂದ ಅದರ ಮಂತ್ರಿಯೆಂದು <ಅಮಾತ್ಯ> ಕರೆಯಲ್ಪಡುತ್ತದೆ.

**ವಿವಾದೀ ವಿಪರೀತತ್ವಾದ್ ಧೀರೈರುಕ್ತೋ ರಿಪೂಪಮಃ ।**
**ನೃಪಾಮಾತ್ಯಾನುಸಾರಿತ್ವಾದನುವಾದೀ ತು ಭೃತ್ಯವತ್ ॥ 51 ॥** 267

ವಿವಾದಿಯು (ಇವುಗಳಿಗೆ) ವಿರುದ್ಧವಾದುದರಿಂದ ಶತ್ರುವಿನ ಹಾಗೆ [ಇದೆ ಎಂದು] ವಿದ್ವಾಂಸರಿಂದ ಹೇಳಲ್ಪಡುತ್ತದೆ; ದೊರೆ, ಮಂತ್ರಿಗಳನ್ನು ಅನುಸರಿಸುವುದರಿಂದ ಅನುವಾದಿಯಾದರೋ ಸೇವಕನ ಹಾಗೆ.

ವಂಶ

**ಗೀರ್ವಾಣಕುಲಸಂಭೂತಾಃ ಷಡ್ಜಗಾಂಧಾರಮಧ್ಯಮಾಃ ।**
**ಪಂಚಮಃ ಪಿತೃವಂಶೋತ್ಥೋ ರಿಧಾವೃಷಿಕುಲೋದ್ಭವೌ ॥ 52 ॥** 268

ಷಡ್ಜ, ಗಾಂಧಾರ (ಮತ್ತು) ಮಧ್ಯಮಗಳು ದೇವಕುಲದಲ್ಲಿ ಹುಟ್ಟಿದವುಗಳು; ಪಂಚಮವು ಪಿತೃವಂಶದಲ್ಲಿ ಉದಯಿಸಿದುದು ; ರಿಷಭಧೈವತಗಳು ಋಷಿಕುಲದಲ್ಲಿ ಹುಟ್ಟಿದವುಗಳು.

ಜಾತಿ

**ನಿಷಾದೋ ऽಸುರವಂಶೋತ್ಥೋ ಬ್ರಾಹ್ಮಣಾಃ ಸಮಪಂಚಮಾಃ ।**
**ರಿಧೌ ತು ಕ್ಷತ್ರಿಯೌ ಜ್ಞೇಯೌ ವೈಶ್ಯಜಾತೀ ನಿಗೌ ಮತೌ ॥ 53 ॥** 269

ನಿಷಾದವು ಅಸುರಕುಲದಲ್ಲಿ ಉದಯಿಸಿದುದು ; ಷಡ್ಜಮಧ್ಯಮಪಂಚಮಗಳು ಬ್ರಾಹ್ಮಣ ಜಾತಿಯವು ; ರಿಷಭಧೈವತಗಳಾದರೋ ಕ್ಷತ್ರಿಯ(ಜಾತಿಯವು)ಗಳೆಂದು ತಿಳಿಯಲ್ಪಡುತ್ತವೆ ; ನಿಷಾದಗಾಂಧಾರಗಳೆರಡೂ ವೈಶ್ಯಜಾತಿಯವುಗಳೆಂದು ಸಮ್ಮತಿಸಿದೆ.

ಬಣ್ಣ

**ಶೂದ್ರಾವಂತರಕಾಕಲ್ಯೌ ಸ್ವರೌ[14] ವರ್ಣಾಸ್ತ್ವಮೀ ಕ್ರಮಾತ್ ।**
**ಪದ್ಮಾಭಃ ಪಿಂಜರಃ ಸ್ವರ್ಣವರ್ಣಃ ಕುಂದಪ್ರಭೋ ऽಸಿತಃ ॥ 54 ॥** 270

ಅಂತರ (ಗಾಂಧಾರ), ಕಾಕಲೀ(ನಿಷಾದ)ಗಳು ಎರಡೂ ಶೂದ್ರಜಾತಿಯ ಸ್ವರಗಳು. ಇವುಗಳ (ಸಪ್ತಸ್ವರಗಳ) ಬಣ್ಣಗಳು ಕ್ರಮವಾಗಿ ಕೆಂದಾವರೆಯಂತಹದು, ಕೆಂಪು ಮಿಶ್ರಿತ ಹಳದಿ, ಚಿನ್ನದಂತಹ ಹಳದಿ, ಜಾಜಿಯಂತಹ ಬಿಳುಪು, ಕಪ್ಪು (ಬಿಳುಪಲ್ಲದುದು), <ಅಸಿತಃ> —

ಜನ್ಮಭೂಮಿ

**ಪೀತಃ ಕರ್ಬುರ[15] ಇತ್ಯೇಷಾಂ ಜನ್ಮಭೂಮೀರಥ[16] ಬ್ರುವೇ ।**
**ಜಂಬೂಶಾಕಕುಶಕ್ರೌಂಚಶಾಲ್ಮಲೀಶ್ವೇತನಾಮಸು ॥ 55 ॥** 271

—ಹಳದಿ, ವಿವಿಧವರ್ಣ, ಹೀಗೆ [ಇರುತ್ತವೆ]. ಆಮೇಲೆ ಇವುಗಳ ಹುಟ್ಟಿದ ಸ್ಥಳಗಳನ್ನು ಹೇಳುತ್ತೇನೆ : ಜಂಬೂದ್ವೀಪ, ಶಾಕದ್ವೀಪ, ಕುಶದ್ವೀಪ, ಕ್ರೌಂಚದ್ವೀಪ, ಶಾಲ್ಮಲೀದ್ವೀಪ, ಶ್ವೇತದ್ವೀಪವೆಂಬುದು,—

---

14 ಕ : ಸ್ವರ. 15 ಕ : ಕರ್ಬೂರ. 16 ಕ :_ಭೂಮಿಮಥ.

ಋಷಿ

ದ್ವೀಪೇಷು ಪುಷ್ಕರೇ ಚೈತೇ[17] ಜಾತಾಃ ಷಡ್ಜಾದಯಃ ಕ್ರಮಾತ್ ।
ವಹ್ನಿರ್ವೇಧಾಃ ಶಶಾಂಕಶ್ಚ ಲಕ್ಷ್ಮೀಕಾಂತಶ್ಚ ನಾರದಃ ॥ 56 ॥ 272

—ಮತ್ತು ಪುಷ್ಕರದ್ವೀಪದಲ್ಲಿ ಈ ಷಡ್ಜವೇ ಮೊದಲಾದವುಗಳು ಕ್ರಮವಾಗಿ ಹುಟ್ಟಿದವುಗಳು. ಅಗ್ನಿ, ಬ್ರಹ್ಮ, ಮತ್ತು ಚಂದ್ರ, ಹಾಗೂ ಲಕ್ಷ್ಮೀಕಾಂತ (ವಿಷ್ಣು), ನಾರದ —

ದೇವತೆ

ಋಷಯೋ ದದೃಶುಃ ಪಂಚ ಷಡ್ಜಾದೀಂಸ್ತುಂಬುರುರ್ಧನೀ ।
ವಹ್ನಿಬ್ರಹ್ಮ[18]ಸರಸ್ವತ್ಯಃ ಶರ್ವಶ್ರೀಶ ಗಣೇಶ್ವರಃ ॥ 57 ॥ 273

—[ಈ] ಋಷಿಗಳು ಷಡ್ಜವೇ ಮೊದಲಾದ ಐದು ಸ್ವರಗಳನ್ನು ಕಂಡವರು ; ತುಂಬುರುವು ಧೈವತನಿಷಾದಗಳನ್ನು [ಕಂಡವನು]. ಅಗ್ನಿ, ಬ್ರಹ್ಮ, ಸರಸ್ವತೀ, ಶಿವ, ವಿಷ್ಣು, ಮತ್ತು ಗಣೇಶ್ವರ, —

ಛಂದಸ್ಸು

ಸಹಸ್ರಾಂಶುರಿತಿಪ್ರೋಕ್ತಾಃ ಕ್ರಮಾತ್ ಷಡ್ಜಾದಿದೇವತಾಃ ।
ಕ್ರಮಾದನುಷ್ಟುಬ್ ಗಾಯತ್ರೀ ತ್ರಿಷ್ಟುಪ್ ಚ ಬೃಹತೀ ತತಃ ॥ 58 ॥ 274

— ಸೂರ್ಯ ಇವರು ಕ್ರಮವಾಗಿ ಷಡ್ಜವೇ ಮೊದಲಾದ ಸ್ವರಗಳ ದೇವತೆಗಳು [ಎಂದು] ಹೇಳಲ್ಪಡುತ್ತಾರೆ. ಕ್ರಮವಾಗಿ, ಅನುಷ್ಟುಬ್, ಗಾಯತ್ರೀ, ಮತ್ತು ತ್ರಿಷ್ಟುಪ್, ಆಮೇಲೆ ಬೃಹತೀ—

ರಸ

ಪಙ್ಕ್ತಿರುಷ್ಣಿಕ್ ಚ ಜಗತೀತ್ಯಾಹುಶ್ಛಂದಾಂಸಿ ಸಾದಿಷು ।
ಸರೀ ವೀರೇಽದ್ಭುತೇ ರೌದ್ರೇ ಧೋ ಬೀಭತ್ಸೇ ಭಯಾನಕೇ ॥ 59 ॥ 275
ಕಾರ್ಯೌ ಗನೀ ತು ಕರುಣೇ ಹಾಸ್ಯಶೃಂಗಾರಯೋರ್ಮಪೌ ॥ 276[19]

— ಪಙ್ಕ್ತಿ ಮತ್ತು ಉಷ್ಣಿಕ್, ಜಗತಿ ಎಂಬುದಾಗಿ ಷಡ್ಜವೇ ಮೊದಲಾದ ಸ್ವರಗಳಲ್ಲಿ ಛಂದಸ್ಸುಗಳೆಂದು ಹೇಳುತ್ತಾರೆ. ಷಡ್ಜ ರಿಷಭಗಳು ವೀರ, ರೌದ್ರ, ಅದ್ಭುತ ರಸಗಳಲ್ಲಿಯೂ ಧೈವತವು ಬೀಭತ್ಸ, ಭಯಾನಕರಸಗಳಲ್ಲಿಯೂ, ಗಾಂಧಾರನಿಷಾದಗಳಾದರೋ ಕರುಣಾರಸದಲ್ಲಿಯೂ, ಹಾಸ್ಯಶೃಂಗಾರ ರಸಗಳಲ್ಲಿ ಮಧ್ಯಮ ಪಂಚಮಗಳೂ [ ಪ್ರಯೋಗ ] ಮಾಡಲ್ಪಡುವಂತಹವುಗಳು.

ನಾದಸ್ಥಾನಶ್ರುತಿಸ್ವರಜಾತಿಕುಲದೈವತರ್ಷಿಚ್ಛಂದೋರಸ ಪ್ರಕರಣವು ಮುಗಿಯಿತು.

---

17 ಅ : ವೈ ತೇ. 18 ಕ : ವಹ್ನಿರ್ಬ್ರಹ್ಮ.

19 ಎರಡನೆಯ ಪ್ರಕರಣದ ಕೊನೆಯಲ್ಲಿ ಇರುವ ಶ್ಲೋಕಾರ್ಧವನ್ನೂ ಎಣಿಸಿಕೊಂಡು ಇಲ್ಲಿ ಶ್ಲೋಕಸಂಖ್ಯೆಯನ್ನು ಪೂರ್ತಿಮಾಡಿದೆ.

# ಅನುಬಂಧ I

## ಶ್ಲೋಕಾರ್ಧಾನುಕ್ರಮಣೀ

ಹ

# ಅನುಬಂಧ II

## ಹೆಸರುಗಳ ಅನುಕ್ರಮಣೀ

ಸ



ಹ

# ಅನುಬಂಧ III

## ಉದ್ಧೃತ ಗ್ರಂಥಗಳ ಅನುಕ್ರಮಣೀ

## ಅನುಬಂಧ IV
## ಹಸ್ತಪ್ರತಿಗಳು

**ಶ್ರೀ ವರಲಕ್ಷ್ಮೀ ಅಕಾಡಮಿ ಗ್ರಂಥಭಂಡಾರ, ಮೈಸೂರು :**

ಕೋಹಲ : ಕೋಹಲಮತಮ್
ಜಗದೇಕಮಲ್ಲ : ಸಂಗೀತಚೂಡಾಮಣಿ
ದೇವಣಾಚಾರ್ಯ : ಸಂಗೀತಮುಕ್ತಾವಲೀ
ನಾನ್ಯದೇವ : ಸರಸ್ವತೀಹೃದಯಾಲಂಕಾರಹಾರ (ಭರತಭಾಷ್ಯ)
ಲಕ್ಷ್ಮೀನಾರಾಯಣ : ಸಂಗೀತಸೂರ್ಯೋದಯ

**ಪ್ರಾಚ್ಯಸಂಶೋಧನಾಸಂಸ್ಥೆ, ಮೈಸೂರು :**

ಪಾರ್ಶ್ವದೇವ : ಸಂಗೀತಸಮಯಸಾರ

## APPENDIX V

### Index to works in Non-Indian Languages

Row, Nagoji, C., On the 22 Srutis 429
Russel, Bertrand, Our Knowledge of the External World 15
Sahasrabuddhi, Hindu Music and the Gayana Samaj 429
Sambamoorthy, P., South Indian Music, Book IV 366
Sastri, Subrahmanya, on the 22 Srutis 429
Sathyanarayana, R., a) The Kudimiyamalai Inscription on Music 12
b) Karnataka Music, Studies in Education and Culture
c) 'Gondala—A Ritual Dance' in Soul of Indian Dance 14, 27
d) Bharatanatya: A Critical Study 338
Scheinfeld, Amram, 74
Seal, Brajendranath, The Positive Sciences of the Hindus 131
Seashore, Carl, E., Psychology of Music 359
Shower, E. G., Differential Pitch Sensitivity of the Ear 480
Sproul, Edith, The Science Book of the Human Body 132
Srinivasa Iyengar, T. R., Introduction to Govinda, Sangraha-chudamani 352
Stein, M.A., Catalogue of the Skt. Mss. etc. 114
Stumpf, Karl, a) Tonpsychologie 194
b) Uber neuere Untersuchungen zur Tonlehre 194
Tagore, S. M., a) The Universal History of Music 304
b) Hindu Music 304
Troland, Leonard, T., J. Acoust. Soc. Amer (1930), 1, 301 470
Vorontzoff-Velyaminov, A., Gaseous Nebulae and New Stars 56
Watson, James, The Chemical Basis of Heredity 90
Whitehead, A. N., Symbolism, Its Meaning and Effect 15
Wilkins, M. H. F., Biochemical Society Symposia 90
Wood, Alexander, The Physics of Music 185
Woodworth, Robert S., Experimental Psychology 360
.... The Readers Digest of the Human Body 116

# ಅನುಬಂಧ VI
## ಶೋಧನಪತ್ರಿಕೆ

| ಪುಟ | ಪಙ್ಕ್ತಿ | ಶುದ್ಧ ಪಾಠ |
|---|---|---|
| 9 | 30 | ಸಂಗೀತಸುಧಾಕರ |
| 11 | 16 | ಸಂಗೀತಶಾಸ್ತ್ರ- |
| 18 | 19 | ಕಾಲಲಯ |
| 19 | 14 | ಗಂಧರ್ವರು |
| 24 | 2 | ಕಾಂಡವೀಣಾ |
| 32 | 13 | ಸ್ವರಗತಾಧ್ಯಾಯ |
| 39 | 2 | **ತದ್ ದ್ವಯೋನುಗತಂ** |
| 42 | 27 | ಸಂಗೀತಸುಧಾಕರ |
| 44 | 12 | ಸರ್ವಾಣಾಂ |
| 46 | 23 | 3 ಕೆ : ವಿಭುವ್ |
| 53 | 25 | ಅದರಿಂದ |
| 56 | 8 | ಶಾರ್ಙ್ಗದೇವನದು |
| 59 | 24 | ವಾಗ್ಭಟ,ಅಷ್ಟಾಂಗಹೃದಯಸಂಹಿತಾ, ಶಾರೀರಸ್ಥಾನ (II), I, 1, ಪು. 1 |
| 60 | 30 | ವಾಗ್ಭಟ, ಉ.ಗ್ರಂ. I, 5, ಪು. 3 |
| 67 | 18 | **ಪಾಲ್ಯಂತರಿತ-** |
| 77 | 24 | **ಸಾತ್ಮ್ಯಗೋಚರಾಃ** |
| 80 | 28 | ಜನನಾಂಗ |
| 83 | 14 | **ಆಸ್ತಿಕ್ಯಶುದ್ಧ-** |
| 86 | 28 | ನ್ಯೂಕ್ಲಿಯಸ್ |
| 87 | 26 | ಇಬ್ಭಾಗ |
| 88 | 33 | ಸ್ವಾರಸ್ಯ |
| 97 | 12 | **ಭೂಮೇರ್ಘ್ರಾಣೇಂದ್ರಿಯಂ** |
| 114 | 11 | ಭಾವಪ್ರಕಾಶನ |
| 114 | 35 | Tulaja |
| 126 | 5 | ಉನ್ನತಮಟ್ಟದ |
| 126 | 10 | ಆಯುರ್ವೇದ |
| 141 | 5 | vertebrae |
| 142 | 25 | ಆವರಣದ |
| 154 | 16 | ಇವುಗಳನ್ನು |
| 156 | 7 | ಬರುತ್ತಿದ್ದ |
| 157 | 18 | ಮಧ್ಯದಲ್ಲಿ |
| 168 | 15 | ಮೋಕ್ಷಮಾರ್ಗಗಳನ್ನು |
| 168 | 27 | ಪಿಂಡಾಂಡದಲ್ಲಿ |
| 168 | 30 | ಬಾಹ್ಯೇಂದ್ರಿಯ |
| 169 | 23 | ಅಷ್ಟಸಿದ್ಧಿಗಳೂ |
| 173 | 9 | ಜಪಕೋಟ್ಯಾ |
| 174 | 4 | ಸಗುಣಬ್ರಹ್ಮ |
| 174 | 7 | -ಕಾಮಮೋಕ್ಷಾಣಾಮಿದ- |
| 175 | 3 | ಉಳ್ಳದ್ದೂ |
| 183 | 5 | **ಜಾತಃ ಪ್ರಾಣಾಗ್ನಿ-** |
| 194 | 25 | ಸರಳಪೂರ್ಣಾಂಕ |
| 209 | 18 | ನಾಶವಾಗುವುದರಿಂದ |
| 211 | 27 | ಧೈವತರ್ಷಭೌ |
| 212 | 30 | ಅಭಿನವಭಾರತೀ |
| 215 | 19 | ಅರ್ಥ |
| 217 | 18 | ಸ್ವರಗಳಲ್ಲಿ |
| 218 | 13 | ಬಾಹುಳ್ಯ |
| 222 | 7 | ಪರಮಾರ್ಥತಃ |
| 230 | 7 | ಶಾಸ್ತ್ರದಲ್ಲೂ |
| 230 | 15 | ಮಾಡಬಹುದು |
| 234 | 6 | ಸಮಾನತೆಯನ್ನು |
| 235 | 27 | ಪಧನಿ |
| 237 | 2 | ಮಧ್ಯಮಗಳಲ್ಲಿ |
| 237 | 25 | ತೌರ್ಯತ್ರಿಕಸೂತ್ರಕಾರ- |
| 238 | 22 | ಅರ್ಥವನ್ನು |
| 238 | 23 | ಷಡ್ಜಗ್ರಾಮಿಕಃ |
| 240 | 3 | ಸ್ವರಿತ, ಪ್ರಚಯ |

| ಪುಟ | ಪಙ್ಕ್ತಿ | ಶುದ್ಧಪಾಠ |
|---|---|---|
| 241 | 24 | ಕಾಣುತ್ತವೆಯೋ |
| 248 | 6 | ಹುಟ್ಟವೆ |
| 255 | 19 | ಹತ್ತೊಂಬತ್ತನೆಯದಕ್ಕೆ |
| 256 | 22 | ಕುದುರೆಯ |
| 260 | 29 | ವಾಸ್ತವವಾಗಿ |
| 262 | 16 | ಮತ್ತು |
| 262 | 21 | -ಸದೃಶವಾದುದೇ |
| 263 | 22 | ಸಿದ್ಧಪಡಿಸಬೇಕೆಂಬುದು |
| 264 | 9 | ತಾಸ್ವಾದ್ಯಾ |
| 267 | 18 | ಕಂಪಮಾನದವರೆಗೆ |
| 275 | 14 | ವಿಮರ್ಶೆಮಾಡಲಾಯಿತು |
| 291 | 7 | ಪಡೆಯಬಹುದಷ್ಟೆ |
| 295 | 11 | -ಗೊಳಿಸುತ್ತದೆ |
| 297 | 10 | ಶ್ರೋತ್ರೇಂದ್ರಿಯ- |
| 299 | 23 | ಅಪರೂಪ |
| 304 | 2 | ಆ ದೇಶದ |
| 308 | 19 | ಸ್ವಸಂವೇದ್ಯಾ |
| 316 | 28 | 190 |
| 316 | 30 | ವಿಮತಿ ಮುಂತಾದ ರೂಪ- |
| 328 | 18 | ಆವೃತ್ತಿತನವಲ್ಲದೆ |
| 338 | 4 | ಸಹಸ್ರಪಾತ್ |
| 340 | 18 | ಮೊದಲಾದವುಗಳನ್ನೂ |
| 345 | 22 | ಅನುಮಿತಿಯಿಂದ |
| 346 | 9 | ಅನ್ವಯಿಸಬಹುದು |
| 346 | 14 | ಪ್ರಥಮಷಣ್ಮೃತಗಳನ್ನು |
| 354 | 25 | ಸಂಗೀತವು |
| 364 | 11 | ಸಂಗೀತಸುಧಾಕರದಲ್ಲಿ |
| 366 | 14 | ಬಳಸಿರುವ |
| 373 | 6 | ಹದಿನೇಳನೆಯ |
| 375 | 13 | ಗ್ರಂಥಪಾತವೋ |
| 383 | 16 | ವಿಪರ್ಯಾಸವಾಗಿ |
| 384 | 8 | ಕಲಾಕಾಲಪ್ರಮಾಣ |
| 387 | 20 | ಭೇದಗಳಾಗುತ್ತವೆ |
| 388 | 6 | ಷಡ್ಜದಿಂದ ಸಂಗ್ರಹಿಸಿದುದನ್ನು |
| 388 | 32 | ಉ·ಗ್ರಂ., I, 3, 39 |
| 390 | 1 | **ಮಾತೃಗುಪ್ತಾಚಾರ್ಯ-** |
| 393 | 14 | ಲಕ್ಷ್ಯಪ್ರಸಿದ್ಧ- |
| 401 | 9 | ಹೇಗೆ ಅನುಸರಿಸಿದೆ |
| 402 | 6 | ಸ್ವರಕ್ಕೆ ರಕ್ತಿಲಕ್ಷಣವನ್ನು |
| 404 | 2 | ಶ್ರುತಿಗಳನ್ನೂ |
| 404 | 25 | ಅಗತ್ಯ |
| 408 | 1 | ಅನುಮಿತಿ |
| 409 | 32 | ವಿವಕ್ಷೆಯನ್ನು |
| 411 | 16 | ಸಮಪಾಲುಗಳಲ್ಲಿ |
| 411 | 29 | ಧ್ವನ್ಯಂತರಾಶ್ರುತಿ |
| 412 | 29 | ವೈಶಿಷ್ಟ್ಯವು |
| 415 | 5 | ಸ್ಥಾನಕ್ಕಿಂತ |
| 422 | 16 | ಪ್ರಮಾಣವು |
| 427 | 23 | ಶ್ರುತಿಪ್ರಮಾಣಗಳ |
| 429 | 26 | conformity |
| 429 | 27 | delivered |
| 439 | 25 | ಬಾಧೆಯುಂಟಾಗುತ್ತದೆ |
| 446 | 16 | ವರಾಲಿಮಧ್ಯಮ |
| 447 | 5 | ವೈಶಿಷ್ಟ್ಯವೇ |
| 464 | 27 | respectively |
| 468 | 2 | ಸ್ಫುರಿಸದಿರುವುದು |
| 473 | 8 | ಶಾರೀರಕ |
| 476 | 28 | highness |
| 477 | 1 | ಅನುಕ್ರಮದಿಂದ ಅವಿಚ್ಛಿನ್ನತೆಯನ್ನೂ |
| 477 | 8 | ನಾಲ್ಕು ಸಂಗತಿಗಳನ್ನು |
| 493 | 22 | ಪೂರ್ವಾಚಾರ್ಯರು |
| 506 | 11 | ಅನುಪಲಬ್ಧಿಯೆಂಬ |
| 512 | 25 | ಶ್ರುತಿಯು ಅನೇಕವಾಗಿದೆ |
| 521 | 30 | **ಮಧ್ಯಮಗ್ರಾಮೇ** |
| 522 | 22 | **-ರೇವ ವಾ ಸ್ಯಾತಾಂ** |
| | | **ಪರಿಶಿಷ್ಟ** |
| ii | 27 | 524 |
| xvi | 5 | ಔ |